# ಶ್ರೀಮದ್ಭಾಗವತ

## ಷಷ್ಠಸ್ಕಂಧ



ಅನುವಾದ ಹಾಗೂ ಸಂಪಾದನೆ : ಪಂ. ಪೂ. ಗುತ್ತಲ ರಂಗಾಚಾರ್ಯರು

ಪ್ರಕಾಶನ : ವಿಶ್ವಮಧ್ವಮಹಾಪರಿಷತ್ ಉತ್ತರಾದಿಮಠ

ವಿಶ್ವಮಧ್ವಮಹಾಪರಿಷತ್ ಗ್ರಂಥಮಾಲಾ -೧೨೩

# ಶ್ರೀಮದ್ಭಾಗವತ

## ಷಷ್ಠಸ್ಕಂಧ

*ಅನುವಾದ ಹಾಗೂ ಸಂಪಾದನೆ*
ಪಂ.ಪೂ.ಗುತ್ತಲ ರಂಗಾಚಾರ್ಯರು
ಕುಲಪತಿಗಳು, ಶ್ರೀಜಯತೀರ್ಥವಿದ್ಯಾಪೀಠ

ಸಹ ಸಂಪಾದನೆ :
ಪಂ. ವಾದಿರಾಜಾಚಾರ್ಯ ಕರಣಂ

ಪ್ರಕಾಶನ :
ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ
ಶ್ರೀಉತ್ತರಾದಿಮಠ
ವಿಶ್ವಮಧ್ವಮಹಾಪರಿಷತ್, ಬೆಂಗಳೂರು - ೪

**Srimad Bhagavata Shastha Skandha**
A highly scholarly yet simple translation in Kannada with word by word meaning, summary and detailed in-depth notes based on Bhavata Tatparya of Sri Madhwacharya a deptly summarizing all available commentaries on the subject by Sudha Visharada Pandita Poojya **Rangacharya Guttal**, Kulapati of Sri Jayateertha Vidyapitha.


Published by : **Vishva Madhwa Maha Parishat**

Copies : **1000**

First Edition : **23rd May 2013**

No.of Pages : **16+768**





**Price.** : [In India] **Rs. 300**

**Copies can be had from :**

**Vishva Madhwa Maha Parishat**
Research Center, #11, 2nd Floor,
Uttaradimath Building. Uttaradi Math Road,
Shankarpuram, Basavanagudi
BANGALORE - 4,Ph : 080 26603692, mail:vmmp05@gmail.com

Type Setting : V.M.M.P Research wing.

Cover Design : **Gopalakrishna**

Printed by : **Vagartha, 149, 8th Cross, N.R.Colony, Bng - 4**



ಶ್ರೀಮಜ್ಜಗದ್ಗುರುಮಧ್ವಾಚಾರ್ಯಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠಾಧೀಶರಾದ, ಶ್ರೀಜಯತೀರ್ಥವಿದ್ಯಾಪೀಠದ
ಸಂಸ್ಥಾಪಕರಾದ ಶ್ರೀ 1008 ಶ್ರೀ ಸತ್ಯಪ್ರಮೋದತೀರ್ಥಶ್ರೀಪಾದಂಗಳವರ
ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಸಮರ್ಪಣೆ



ಶ್ರೀಮಜ್ಜಗದ್ಗುರುಮಧ್ವಾಚಾರ್ಯಮೂಲಮಹಾಸಂಸ್ಥಾನಶ್ರೀಮದುತ್ತರಾದಿಮಠಾಧೀಶರಾದ,
ಶ್ರೀ 1008 ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರ ಅಡಿದಾವರೆಗಳಲ್ಲಿ
ಭಕ್ತಿಪೂರ್ವಕ ಸಮರ್ಪಣೆ

॥ ಶ್ರೀದಿಗ್ವಿಜಯರಾಮೋ ವಿಜಯತೇ ॥

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠಾಧೀಶರಾದ
ಶ್ರೀ ಶ್ರೀ ೧೦೦೮ ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರ

# ''ಅನುಗ್ರಹ ಸಂದೇಶ''

ಶ್ರೀಮದ್ಭಾಗವತ ಪ್ರತಿಯೊಂದು ಅಕ್ಷರವೂ ಅಕ್ಷರನಾದ ಪರಮಾತ್ಮನ ಪ್ರತಿಮೆಯಾಗಿದೆ. ಅಧ್ಯಯನ ಮಾಡುವ ಮೂಲಕ ಈ ಪ್ರತಿಮೆಗಳ ಆರಾಧನೆಯನ್ನು ಮಾಡಿದರೆ ಮುಕ್ತಿಯು ಸಿಗುವಲ್ಲಿ ಯಾವುದೇ ರೀತಿಯಾದ ಸಂದೇಹವಿಲ್ಲ.

'ವಿದ್ಯಾವತಾಂ ಭಾಗವತೇ ಪರೀಕ್ಷಾ' ಎಂದಂತೆ ವಿದ್ವಾಂಸರಿಗೂ ಗಹನವಾದ ಗ್ರಂಥರಾಜ ಶ್ರೀಮದ್ಭಾಗವತ. ಇಲ್ಲಿ ವಿಹರಿಸುತ್ತಾ ವಿದ್ವಾಂಸರೆಲ್ಲ ಪರಿಶ್ರಾಂತರಾಗುತ್ತಾರೆ. ಆದರೆ ಆ ಪರಿಶ್ರಮದಲ್ಲಿಯೂ ಆನಂದವು ಅನುಭೂತವಾಗುತ್ತದೆ. ಇದು ನಿತ್ಯ ಸತ್ಯ.

ಶ್ರೀಮದಾಚಾರ್ಯರ ತಾತ್ಪರ್ಯದ ಸಹಾಯವಿಲ್ಲದೇ ಇಂತಹ ಶ್ರೀಮದ್ಭಾಗವತವನ್ನು ಅಧ್ಯಯನಮಾಡುವುದು ಅಸಾಧ್ಯವೇ ಆಗಿದೆ. ಅತಿಗಂಭೀರವಾದ ಆಚಾರ್ಯರ ವಾಣಿಯನ್ನು ಆಸ್ವಾದಿಸಬೇಕಾದರೆ ಟೀಕಾ-ಟಿಪ್ಪಣಿಗಳ ಅಧ್ಯಯನಗಳಿಂದಲೇ ಸಾಧ್ಯವಾಗುತ್ತದೆ.

ಶ್ರೀವಿಜಯಧ್ವಜತೀರ್ಥರು, ಶ್ರೀಯಾದವಾರ್ಯರು, ಶ್ರೀಶ್ರೀನಿವಾಸತೀರ್ಥರು, ಚೆಟ್ಟಿ ಆಚಾರ್ಯರು ಹೀಗೆ ಅನೇಕ ಮಹಾನುಭಾವರು ಈ ಭಾಗವತಕ್ಕೆ, ಭಾಗವತತಾತ್ಪರ್ಯಕ್ಕೆ ಅನುಕೂಲವಾದ ವ್ಯಾಖ್ಯಾನಗಳನ್ನು ಮಾಡಿದ್ದಾರೆ. ಆ ಎಲ್ಲ ವ್ಯಾಖ್ಯಾನಗಳನ್ನು ಆರೂಢ ಮಾಡಿಕೊಂಡು ಭಾಗವತವನ್ನು ಓದುವ ಆನಂದ ಅಪರಿಮಿತ. ಅವರ್ಣನೀಯ.

ಆದರೆ ಸಾಮಾನ್ಯಜನರಿಗೆ ಈ ಆನಂದವು ಕೈಗೆಟುಕುವುದು ಸಾಧ್ಯವೇ ಇಲ್ಲ. ಇದರ ಸ್ವಾದವನ್ನು ಬೋಧಿಸಲು ನಮ್ಮ ಸ್ವರೂಪೋದ್ಧಾರಕ ಗುರುಗಳಾದ ಶ್ರೀ ಶ್ರೀ ೧೦೦೮ ಶ್ರೀಸತ್ಯಪ್ರಮೋದತೀರ್ಥಶ್ರೀಪಾದ ಒಡೆಯರ ಪ್ರಿಯಶಿಷ್ಯರಾದ, ಜಯತೀರ್ಥವಿದ್ಯಾಪೀಠದ ಕುಲಪತಿಗಳಾದ, ನಿರಂತರ ಸುಧಾ-ವ್ಯಾಸತ್ರಯ-ದ್ವೈತದ್ಯುಮಣ್ಯಾದಿಗಳ ಪಾಠ-ಪ್ರವಚನಗಳಲ್ಲಿ ಆಸಕ್ತರಾದ ಪಂಡಿತವರೇಣ್ಯ **ಶ್ರೀಗುತ್ತಲ ಆಚಾರ್ಯರವರು** (ಪಂ.ರಂಗಾಚಾರ್ಯರು) ಸಕಲ ವ್ಯಾಖ್ಯಾನಗಳಿಂದ

ಸಹಿತವಾದ ಶ್ರೀಮದ್ಭಾಗವತ ಅನುವಾದ ಕಾರ್ಯವನ್ನು ಮಾಡುತ್ತಾ ಬಂದಿದ್ದಾರೆ. ಈಗಾಗಲೇ ಸಮಗ್ರವಾದ ಭಾಗವತದ ಅನುವಾದಕಾರ್ಯವು ಸಂಪನ್ನವಾಗಿದೆ.

ಪ್ರಕೃತ ಎಷ್ಟೋ ವ್ಯಾಖ್ಯಾನಗಳು ಮುದ್ರಿತವೇ ಆಗಿಲ್ಲ. ಮುದ್ರಿತವಾದ ವ್ಯಾಖ್ಯಾನಗಳಲ್ಲಿ ಮುದ್ರಣದೋಷಗಳು ಸಾಕಷ್ಟು ಇರುತ್ತವೆ. ಇವುಗಳೆಲ್ಲವನ್ನು ಸರಿಪಡಿಸಿಕೊಂಡು ಓದುವಷ್ಟು ಅವಧಾನ-ಅನುಕೂಲತೆಗಳು ಯಾರಿಗೂ ಇರುವುದಿಲ್ಲ. ಇಂತಹ ಸಂದರ್ಭಗಳಲ್ಲಿ ಬಹಳ ಪರಿಶ್ರಮಪೂರ್ವಕವಾಗಿ ಆ ಎಲ್ಲ ವ್ಯಾಖ್ಯಾನಗಳನ್ನು ಶೋಧಿಸಿ ಏಕತ್ರ ಸಂಗ್ರಹಿಸಿ ಮಾಡಿದ ಈ ಅನುವಾದಕಾರ್ಯವು ನಿಜಕ್ಕೂ ಲಾಭದಾಯಕವಾಗುವಲ್ಲಿ ಸಂದೇಹವಿಲ್ಲ. ಉಪವಾಸ, ಸಭೆ-ಸಮಾರಂಭ ಯಾವುದೇ ಪ್ರಸಂಗವಿರಲಿ ಹಗಲಿರುಳೆನ್ನದೇ ಈ ಅನುವಾದ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇದೊಂದು ಭಗವಂತನಿಗೆ ಅತ್ಯಂತ ಪ್ರೀತಿಕರವಾದ ತಪಸ್ಸು ಎನ್ನುವುದರಲ್ಲಿ ಸಂದೇಹವಿಲ್ಲ.

ಪ್ರಕೃತ ಭಾಗವತ-ತಾತ್ಪರ್ಯ-ವ್ಯಾಖ್ಯಾನಗಳಿಂದ ಸಹಿತವಾದ ಷಷ್ಠಸ್ಕಂಧದ ಅನುವಾದರೂಪವಾದ ಈ ಕೃತಿಯನ್ನು ವಿಶ್ವಮಧ್ವಮಹಾಪರಿಷತ್ತಿನ ವತಿಯಿಂದ ಪ್ರಕಾಶನ ಮಾಡಲಾಗುತ್ತಿದೆ. ಇಂತಹ ಮಹತ್ ಕಾರ್ಯವನ್ನು ಮಾಡಿದ ಆಚಾರ್ಯರವರಿಗೆ ಜ್ಞಾನ-ಭಕ್ತಿ-ವೈರಾಗ್ಯಾದಿಗಳನ್ನು ಕೊಟ್ಟು ನಿರಂತರ ಸುಧಾದಿಗ್ರಂಥಗಳ ಪಾಠಪ್ರವಚನದ ಕಾರ್ಯವು, ಗ್ರಂಥಲೇಖನಾದಿಗಳು ಇವರಿಂದ ನಡೆಸಲಿ ಎಂದು ನಮ್ಮ ಉಪಾಸ್ಯಮೂರ್ತಿಗಳಾದ ಶ್ರೀಮೂಲರಾಮ-ದಿಗ್ವಿಜಯರಾಮ ವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

ಈ ಸಂಪುಟದ ಸಹ ಸಂಪಾದನಾಕಾರ್ಯವನ್ನು ನಮ್ಮ ಶಿಷ್ಯನಾದ ಪಂ. ವಾದಿರಾಜಾಚಾರ್ಯನು ವಿಶೇಷ ಶ್ರದ್ಧೆಯಿಂದ ಮಾಡಿದ್ದಾನೆ. ಅವನಿಗೂ ಭಗವಂತ ವಿಶೇಷ ಜ್ಞಾನ-ಭಕ್ತಿ-ವೈರಾಗ್ಯಗಳನ್ನು ನೀಡಿ ಇದೇ ತರಹದ ವೇದವ್ಯಾಸದೇವರ ಸೇವೆ ಅವನಿಂದ ನಡೆಯುವಂತೆ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ.

ಶ್ರೀ 1008 ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು
ಉತ್ತರಾದಿಮಠ

**ವಿಜಯ ವೈಶಾಖ ಶುದ್ಧ ದಶಮೀ**
೨೦-೦೫-೨೦೧೩

# ಮುನ್ನುಡಿ

''ಜ'' ಎಂಬ ಅಕ್ಷರದಿಂದ ಪ್ರಾರಂಭವಾಗುವ ಶ್ರೀಮದ್ಭಾಗವತ ''ಯ'' ಎಂಬ ಅಕ್ಷರಕ್ಕೆ ಸಮಾಪ್ತವಾಗುತ್ತದೆ. ಅಂತೆಯೇ ಸಂಸಾರವೆಂಬ ದುರ್ಜಯವಾದ ಸಂಗ್ರಾಮದಲ್ಲಿ ಜಯವನ್ನು ತಂದುಕೊಡುವ ದಿಟ್ಟವಾದ ಗ್ರಂಥವಿದಾಗಿದೆ.

ಅನಾದಿಕಾಲದಿಂದ ಅಂಟಿಕೊಂಡ ಸಂಸಾರರೋಗವನ್ನು ಸಮೂಲ ನಾಶಮಾಡುವ ಭೇಷಜ ಶ್ರೀಮದ್ಭಾಗವತ. ಶುಕಾಚಾರ್ಯರ ಮುಖದಿಂದ ಸುಖವಾಗಿ ಹರಿದು ಬಂದ ಸುಧಾಸಾಗರ ಶ್ರೀಮದ್ಭಾಗವತ.

ಜೀವಕೋಟಿಯ ಸೌಭಾಗ್ಯ ಶ್ರೀಮದ್ಭಾಗವತ. ಶ್ರೀಹರಿಯಲ್ಲಿ ನಿರ್ವ್ಯಾಜವಾದ ಭಕ್ತಿಯನ್ನು ಅಭಿವೃದ್ಧಗೊಳಿಸುವುದು ಶ್ರೀಮದ್ಭಾಗವತ. ಅವ್ಯಾಹತವಾದ ಐಶ್ವರ್ಯ, ಅಳಿಯಲಾಗದ ಜ್ಞಾನ ತುಂಬಿದ ಗಣಿ ಶ್ರೀಮದ್ಭಾಗವತ.

ಅಜ್ಞಾನ, ಭಯ, ಶೋಕ, ಅಸಮಾಧಾನ, ರೋಗ, ದ್ವೇಷ, ದುರ್ಮತಿ, ದುರಾಚಾರ, ದುರ್ಗತಿ, ದುರ್ಮರಣ, ದುರ್ಜನರ ಸಂಸರ್ಗ ಇತ್ಯಾದಿ ದುರವಸ್ಥೆಗಳನ್ನು ಪರಿಹರಿಸುವ ಪವಿತ್ರ ಗ್ರಂಥ ಶ್ರೀಮದ್ಭಾಗವತ.

ತತ್ತ್ವಜ್ಞಾನ, ಅಭಯ, ಸಂತೋಷ, ಸಮಾಧಾನ, ಸಂಪ್ರೀತಿ, ಸದಾಚಾರ, ಸದ್ಗತಿ, ಸಜ್ಜನರ ಸಹವಾಸ, ಇತ್ಯಾದಿಗಳನ್ನು ಅನುಗ್ರಹಿಸುವ ಗ್ರಂಥ ಶ್ರೀಮದ್ಭಾಗವತ. ಶುದ್ಧವಾದ ತತ್ತ್ವಜ್ಞಾನದ ಮೂಲಕ ಮುಕ್ತಿಯನ್ನು ಪ್ರಸಾದಿಸುವ ಗ್ರಂಥ ಶ್ರೀಮದ್ಭಾಗವತ. ಭಗವದ್ಭಕ್ತರ ಕಥೆಗಳನ್ನು ತಿಳಿಸುವ ಮೂಲಕ ಶ್ರೀಹರಿ ಭಕ್ತರನ್ನು ಹೇಗೆ ಸಲಹುತ್ತಾನೆಂದು ರೋಮಾಂಚನಕಾರಿಯಾಗಿ ತಿಳಿಸುವ ಗ್ರಂಥವೇ ಶ್ರೀಮದ್ಭಾಗವತ.

ಸಂಪದ್ಭರಿತವಾದ ಪದಗಳಿಂದ ಕಂಗೊಳಿಸುವ ಕೋಶಾಗಾರ ಶ್ರೀಮದ್ಭಾಗವತ. ಭಾಗವತದಲ್ಲಿಯ ವಾಕ್ಯ, ಪದ, ಅಕ್ಷರವೂ ವ್ಯರ್ಥವಲ್ಲ. ಅನೇಕಾರ್ಥಗಳಿಂದ ತುಂಬಿದೆ. ಸಾವಿರಾರು ಜನ ಇದಕ್ಕೆ ವ್ಯಾಖ್ಯಾನ ಮಾಡಿದರೂ ಇದರ ಸವಿ ಇನ್ನೂ ಮುಗಿಯದಿರುವುದು ಅತ್ಯಾಶ್ಚರ್ಯವೆನಿಸುತ್ತದೆ. ಅದ್ವೈತ-ವಿಶಿಷ್ಟಾದ್ವೈತ-ದ್ವೈತ ಹೀಗೆ ಎಲ್ಲ ಮತದವರೂ ಈ ಗ್ರಂಥಕ್ಕೆ ವ್ಯಾಖ್ಯಾನವನ್ನು ರಚಿಸಿದ್ದಾರೆ. ಅದರಲ್ಲೂ ಶ್ರೀಮದಾಚಾರ್ಯರ ವ್ಯಾಖ್ಯಾನವಂತೂ ಅತ್ಯಂತ ಅಪೂರ್ವ. ಆಮೂಲಾಗ್ರ ಅತ್ಯಂತ ಸಂಗತ.

ಇಂತಹ ಭಾಗವತವನ್ನು ವ್ಯಾಖ್ಯಾನ ಮಾಡುವಲ್ಲಿಯೇ ತಮ್ಮ ಜೀವನವನ್ನು ಸಾರ್ಥಕಮಾಡಿಕೊಂಡವರು ಶ್ರೀವಿಜಯಧ್ವಜತೀರ್ಥರು, ಶ್ರೀಯಾದವಾರ್ಯರು, ಶ್ರೀಸತ್ಯಧರ್ಮತೀರ್ಥರು, ಚೆಟ್ಟಿಆಚಾರ್ಯರು, ಶ್ರೀಶ್ರೀನಿವಾಸತೀರ್ಥರು ಮುಂತಾದವರು. ಈ ಮಹಾನುಭಾವರೆಲ್ಲರೂ ವ್ಯಾಖ್ಯಾನಮಾಡಿದ ಶ್ರೀಮದ್ಭಾಗವತವನ್ನು ಕನ್ನಡದಲ್ಲಿ ಅನುವಾದ ಮಾಡಲು ಪ್ರೇರಿಸಿದ ಲಕ್ಷ್ಮೀನಾರಾಯಣನಿಗೆ ನನ್ನ ಅನಂತ ನಮನಗಳು. ಬಹುಜನ್ಮಗಳ ಸುಕೃತದ ಪರಿಪಾಕದಿಂದಲೇ ಈ ಅನುವಾದ ಸೌಭಾಗ್ಯ ನನಗೆ ಒದಗಿ ಬಂದಿದೆ.

ಪ್ರಾತಃಸ್ಮರಣೀಯರಾದ ಗುರುಗಳಾದ ಶ್ರೀ೧೦೦೮ಶ್ರೀಸತ್ಯಪ್ರಮೋದ ತೀರ್ಥರ ಅನುಗ್ರಹ ಸಾಮರ್ಥ್ಯದಿಂದಲೇ ಈ ಭಾಗವತದ ಅನುವಾದ ಕಾರ್ಯ ಸಮಗ್ರವಾಗಿ ಮುಕ್ತಾಯವಾಗಿದೆ. ಶ್ರೀಪಾದಂಗಳವರ ಅಡಿದಾವರೆಗಳಲ್ಲಿ ಅನಂತಸಾಷ್ಟಾಂಗ ಪ್ರಣಾಮಗಳನ್ನು ಸಮರ್ಪಿಸುತ್ತೇನೆ. ಮತ್ತು ಗುರುಗಳಾದ ಉತ್ತರಾದಿ ಮಠಾಧೀಶ್ವರರಾದ ಶ್ರೀ೧೦೦೮ಶ್ರೀಸತ್ಯಾತ್ಮತೀರ್ಥರ ಅನುಗ್ರಹವಚನಗಳು ನಮ್ಮ ಸಂರಕ್ಷಣಾಕವಚವಾಗಿವೆ. ಅಂತಹ ಶ್ರೀಪಾದಂಗಳವರಿಗೆ ಅನಂತ ನಮನಗಳನ್ನು ಸಮರ್ಪಿಸುತ್ತೇನೆ.

ಪ್ರಕೃತ ಶ್ರೀಮದ್ಭಾಗವತದ ಆರನೆಯ ಸ್ಕಂಧವನ್ನು ಹರಿಭಕ್ತರಾದ ಓದುಗರ ಮುಂದಿಡಲು ಸಂತೋಷವಾಗುತ್ತಿದೆ.

ಈ ಗ್ರಂಥದ ಸಂಪಾದನಾ ಕಾರ್ಯದಲ್ಲಿ ವಿಶೇಷ ಪರಿಶ್ರಮ ವಹಿಸಿದ ಪಂ. ವಾದಿರಾಜಾಚಾರ್ಯ ಕರಣಂ ಇವನಿಗೆ ಕುಲಸ್ವಾಮಿ ತೊರವೆಯ ನಾರಸಿಂಹ ಆಯುರಾರೋಗ್ಯಗಳನ್ನು ನೀಡಿ ಅನುಗ್ರಹಿಸಲಿ ಎಂದು ಪ್ರಾರ್ಥಿಸುವೆ.

ಅದರಂತೆ ಈ ಗ್ರಂಥಕ್ಕೆ ಸುಂದರವಾದ ರೂಪವನ್ನು ನೀಡಿರುವ ಪಂ. ಮಹಿದಾಸಾಚಾರ್ಯ ಜೋಷಿ ಇವನಿಗೆ, ಟೈಪ್ ಮಾಡಿರುವ ಶ್ರೀ ವೇಣುಗೋಪಾಲ ಇವನಿಗೆ, ಸುಂದರವಾದ ಮುಖಪುಟವನ್ನು ಒದಗಿಸಿದ ಶ್ರೀ ಗೋಪಾಲಕೃಷ್ಣ ಇವನಿಗೆ ಭಗವಂತ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಇನ್ನು ಮುಂದೆ ನನ್ನಿಂದ ಇದೇ ರೀತಿಯಾಗಿ ಸತ್ಕರ್ಮಗಳನ್ನು ಮಾಡಿಸಲಿ ಎಂದು ಗುರ್ವಂತರ್ಯಾಮಿಯಾದ ಭಾರತೀರಮಣ ಮುಖ್ಯಪ್ರಾಣಾಂತರ್ಯಾಮಿಯಾದ ಕುಲದೈವ ತೊರವಿಲಕ್ಷ್ಮೀನರಸಿಂಹನಲ್ಲಿ ಪ್ರಾರ್ಥಿಸುತ್ತೇನೆ.

ವಿಜಯ ವೈಶಾಖ ಶುದ್ಧ ದಶಮಿ
೨೦-೦೫-೨೦೧೩

ಭಾಗವತ ಜನಸೇವಕ
ಪಂ.ರಂಗಾಚಾರ್ಯ ಗುತ್ತಲ
ಕುಲಪತಿಗಳು ಶ್ರೀಜಯತೀರ್ಥವಿದ್ಯಾಪೀಠ

## ಪ್ರಕಾಶಕರ ನುಡಿ

ಶ್ರೀ ೧೦೦೮ ಶ್ರೀ ಸತ್ಯಪ್ರಮೋದತೀರ್ಥಶ್ರೀಪಾದಂಗಳವರ ಮಹದಪೇಕ್ಷೆಯಂತೆ ಪ್ರಾಚೀನಗ್ರಂಥಗಳ ಸಂರಕ್ಷಣೆ ಹಾಗೂ ಅವುಗಳ ಸಂಶೋಧನ, ಪ್ರಕಾಶನ ಮೊದಲಾದ ಅನೇಕ ಉನ್ನತಮಟ್ಟದ ಉದ್ದೇಶಗಳಿಂದ ಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರಿಂದ ಸಂಸ್ಥಾಪಿತವಾದ ಸಂಸ್ಥೆ ''ವಿಶ್ವಮಧ್ವಮಹಾಪರಿಷತ್''

ನಮ್ಮ ಸಂಸ್ಥೆಯು ಪ್ರಾಚೀನವಾದ, ಅಪ್ರಕಟಿತವಾದ ಗ್ರಂಥಗಳನ್ನು ವಿದ್ವಾಂಸರಿಂದ ಸಂಶೋಧನೆ ಮಾಡಿಸಿ ಅವುಗಳನ್ನು ಪ್ರಕಾಶಿಸುವ ಮಹತ್ತರ ಧ್ಯೇಯವನ್ನು ಹೊಂದಿದೆ. ಈ ದೃಷ್ಟಿಯಲ್ಲಿ ವಿದ್ವಾಂಸರಿಗೆ, ವಿದ್ಯಾರ್ಥಿಗಳಿಗೆ ಉಪಯುಕ್ತವಾದ ಅನೇಕ ಮಹತ್ವದ ಗ್ರಂಥಗಳನ್ನು ಅನೇಕ ಟೀಕಾ-ಟಿಪ್ಪಣಿಗಳೊಂದಿಗೆ ಪ್ರಕಾಶಿಸಿದೆ. ಇದಲ್ಲದೇ ಜನರಲ್ಲಿ ಧರ್ಮಜಾಗೃತಿಗಾಗಿ ಪ್ರಶ್ನೋತ್ತರರೂಪದಲ್ಲಿ ಹಾಗೂ ಪ್ರವಚನರೂಪದಲ್ಲಿ ಅನೇಕ ಉಪಯುಕ್ತ ಪುಸ್ತಕಗಳನ್ನು ಈಗಾಗಲೇ ಹೊರತರಲಾಗಿದೆ. ಸಂಸ್ಕೃತ-ಕನ್ನಡ-ತೆಲುಗು-ತಮಿಳು ಹಾಗೂ ಆಂಗ್ಲ ಮೊದಲಾದ ಭಾಷೆಗಳಲ್ಲಿ ಸಂಸ್ಥೆಯಿಂದ ಅನೇಕ ಗ್ರಂಥಗಳು ಪ್ರಕಾಶಿತವಾಗಿವೆ.

ಪ್ರಕೃತ ಪಂ.ಪೂಜ್ಯ ಗುತ್ತಲಾಚಾರ್ಯರವರು ಸಮಗ್ರ ಶ್ರೀಮದ್ಭಾಗವತದ ಕನ್ನಡ ಅನುವಾದವನ್ನು ಅನೇಕ ವ್ಯಾಖ್ಯಾನಗಳ ವಿಶೇಷ ಅಂಶಗಳೊಂದಿಗೆ ಮಾಡಿದ್ದಾರೆ. ಈಗಾಗಲೇ 1, 2, 3, 4, 9, 10, 11, 12 ಈ ಸ್ಕಂಧಗಳ ಪ್ರಕಾಶನವನ್ನು ಮಾಡಿ ಪರಿಷತ್ತು ಸಜ್ಜನರ ಮುಂದಿಟ್ಟಿದೆ. ಈಗ **''ಶ್ರೀಮದ್ಭಾಗವತ ಷಷ್ಠಸ್ಕಂಧ''**ವನ್ನು ಜಿಜ್ಞಾಸುಗಳ ಮುಂದಿಡುತ್ತಿದ್ದೇವೆ. ಎಲ್ಲ ಪುಸ್ತಕಗಳಂತೆ ಇದನ್ನೂ ತಾವು ಸ್ವಾಗತಿಸುತ್ತೀರಿ ಎಂದು ನಂಬಿದ್ದೇವೆ.

ಪ್ರಧಾನ ಕಾರ್ಯದರ್ಶಿಗಳು
ವಿಶ್ವಮಧ್ವಮಹಾಪರಿಷತ್ ಉತ್ತರಾದಿಮಠ
ಬಸವನಗುಡಿ ಬೆಂಗಳೂರು - 4

# ವಿಷಯಾನುಕ್ರಮಣಿಕಾ

# ಅಥ ಶ್ರೀಮದ್ಭಾಗವತೇ - ಷಷ್ಠಸ್ಕಂಧೇ

# ಪ್ರಥಮೋಽಧ್ಯಾಯಃ

**ಅಧ್ಯಾಯ ಸಾರ**

ಪರೀಕ್ಷಿತಮಹಾರಾಜ ಪ್ರಶ್ನಿಸಿದ. ಭಗವನ್ ಶುಕಾಚಾರ್ಯರೇ ದ್ವಿತೀಯಸ್ಕಂಧದ ಪ್ರಾರಂಭದಲ್ಲಿ 'ವರೀಯಾನೇಷ ತೇ ಪ್ರಶ್ನಃ' ಇತ್ಯಾದಿಯಾಗಿ ಸ್ವರೂಪಾನಂದಾ-ವಿರ್ಭಾವರೂಪವಾದ ಮೋಕ್ಷದ ಸ್ವರೂಪವನ್ನು ಸುಂದರವಾಗಿ ತಾವು ತಿಳಿಸಿರುವಿರಿ. ಸತ್ತ್ವಾದಿಗುಣಗಳಿಗೆ ಅನುಗುಣವಾಗಿ ಜೀವನು ನಾನಾದೇಹಗಳನ್ನು ಪಡೆಯುವ, ಆ ದೇಹಗಳನ್ನು ತೊರೆಯುವ ಬಗೆಯನ್ನು ತೃತೀಯಸ್ಕಂಧದಲ್ಲಿ ಪ್ರತಿಪಾದಿಸಿರುವಿರಿ. ಮನ್ವಂತರದ ವಿಚಾರಗಳನ್ನು ಚತುರ್ಥಸ್ಕಂಧದಲ್ಲಿ ತಿಳಿಸಿರುವಿರಿ. ಪಂಚಮದಲ್ಲಿ ನರಕದ ವರ್ಣನೆ ಭೂಗೋಲದ ವರ್ಣನೆ ಮಾಡಿದ್ದೀರಿ.

ಪ್ರಕೃತ ತಿಳಿಯಬೇಕಾದ ವಿಷಯವಿದಾಗಿದೆ. ಜೀವನು ದುಷ್ಕರ್ಮಗಳನ್ನು ಮಾಡುತ್ತಲೇ ಇರುತ್ತಾನೆ. ತಿಳಿದು ತಿಳಿಯದೇ ಅಸತ್ಕರ್ಮಗಳನ್ನು ಅವನು ಮಾಡುತ್ತಾನೆ. ತಾನು ಮಾಡಿದ ದುಷ್ಕರ್ಮಗಳಿಗೆ ಮಹಾನರಕಗಳೇ ಆಗಬೇಕು. ಆ ಮಹಾನರಕಗಳನ್ನು ಅನುಭವಿಸದೇ ಸ್ವಲ್ಪದರಲ್ಲಿಯೇ ಆ ಕರ್ಮಗಳನ್ನು ತಪ್ಪಿಸಿಕೊಳ್ಳಲು ಇರುವ ಉಪಾಯ ಯಾವುದಾದರೂ ಇದೆಯೇ ? ಇದ್ದರೇ ಆ ಉಪಾಯವನ್ನು ತಾವು ಕರುಣೆಯಿಂದ ತಿಳಿಸಬೇಕು.

ಪರೀಕ್ಷಿತನ ಪ್ರಶ್ನೆಯಲ್ಲಿ ಕೇವಲ ಭೂತದಯೆಯೇ ವಿರಾಜಿಸುತ್ತಿತ್ತು. ಅವನು ಈಗಲೇ ಮುಕ್ತ. ಅವನಿಗೆ ಈ ದೇಹವೇ ಕಡೆಯದ್ದು. ಹೀಗಾಗಿ ಅವನು ಮಾಡಿದ ಪ್ರಶ್ನೆ ನಿಶ್ಚಿತವಾಗಿಯೂ ಭೂತದಯೆಗಾಗಿಯೇ ಮಾಡಿದ್ದು ಎಂದು ತಿಳಿದು ಬರುತ್ತದೆ.

ಅದಕ್ಕಾಗಿಯೇ ಪ್ರಾರ್ಥಿಸುತ್ತಿದ್ದಾನೆ. ಇದನ್ನು ಕಂಡು ಶುಕಾಚಾರ್ಯರಿಗೆ ಸಂತೋಷವಾಯಿತು. ಹೇಳಲು ಪ್ರಾರಂಭಿಸದರು.

ರಾಜಾ ಕೇಳು. ಪಾಪಗಳನ್ನು ಮಾಡದವರು ಯಾರೂ ಇಲ್ಲ. ಆದರೆ ಮಾಡಿದ ಪಾಪಗಳಿಗೆ ಪ್ರಾಯಶ್ಚಿತ್ತಗಳನ್ನು ಮಾಡಿಕೊಳ್ಳಲೇ ಬೇಕು. ಅದೂ ಇದೇ ಜನ್ಮದಲ್ಲಿಯೇ ಆಗಬೇಕು. ಆ ಪ್ರಾಯಶ್ಚಿತ್ತವೂ ಹರಿಸ್ಮರಣಪೂರ್ವಕವಾಗಿರಬೇಕು. ಇಲ್ಲವಾದರೇ ಅವನಿಗೆ ಮಹಾನರಕಗಳು ತಪ್ಪುವುದಿಲ್ಲ. ರೋಗಿಯಾದವನು ವೈದ್ಯನು ಹೇಳಿದ ಔಷಧಗಳನ್ನು ತೆಗೆದುಕೊಳ್ಳಬೇಕು. ಜೊತೆಗೆ ಅವನು ಸೂಚಿಸಿದ ಪಥ್ಯವನ್ನೂ ಮಾಡಬೇಕು. ಅಂದಾಗಲೇ ಮಹಾ ಅನರ್ಥದಿಂದ ಪಾರಾಗುತ್ತಾನೆ. ಇಲ್ಲದೇ ಹೋದರೆ ದೈಹಿಕವಾದ ಕ್ಲೇಶಗಳನ್ನು ಅನುಭವಿಸುತ್ತಾನೆ. ಹಾಗೆಯೇ ಪಾಪಗಳನ್ನು ಮಾಡಿದವರು ಧರ್ಮಜ್ಞಾನಿಗಳು ಹೇಳಿದ ಪ್ರಾಯಶ್ಚಿತ್ತಗಳನ್ನು ಭಕ್ತಿಪೂರ್ವಕವಾಗಿ ಅನುಷ್ಠಾನ ಮಾಡಬೇಕು. ಆವಾಗಲೇ ಅವನಿಗೆ ಅತಿಶಯವಾದ ದುಃಖಪ್ರದವಾದ ನರಕಗಳು ಆಗುವುದಿಲ್ಲ. ಆದ್ದರಿಂದ ಪ್ರಾಯಶ್ಚಿತ್ತಗಳನ್ನು ಅನುಷ್ಠಾನ ಮಾಡಬೇಕು.

ರಾಜ ಮತ್ತೆ ಪ್ರಶ್ನಿಸಿದ. ಭಗವನ್ ಪಾಪವಿದು ತನ್ನ ದುಃಖಕ್ಕೆ ಕಾರಣವಾಗಿದೆ. ಇದು ಗೊತ್ತಿದ್ದರೂ ಸ್ವಕರ್ಮಾಧೀನನಾದ ಪುರುಷ ಮತ್ತೆ ಮತ್ತೆ ಪಾಪ ಮಾಡುತ್ತಲೇ ಇರುತ್ತಾನೆ. ಇಂಥವನು ತಾನು ಹೇಗೆ ಪರಿಶುದ್ಧನಾಗುತ್ತಾನೆ. ಆನೆಯು ಕೆಸರಿನಲ್ಲಿ ಆಟವಾಡುತ್ತದೆ. ಸ್ನಾನಮಾಡುತ್ತದೆ. ಮತ್ತೆ ಹಾಗೆಯೇ ಮತ್ತೆ ಕೆಸರಿನಲ್ಲಿ ಆಟವಾಡುತ್ತದೆ. ಅಂತಹ ಆನೆಗೆ ಸ್ನಾನದಿಂದ ಯಾವುದೇ ರೀತಿಯಾದ ಪ್ರಯೋಜನವಿರುವುದಿಲ್ಲ. ಹೀಗೆಯೇ ಪಾಪ ಮಾಡಿ ಪ್ರಾಯಶ್ಚಿತ್ತಮಾಡಿಕೊಳ್ಳುವವನ ಪರಿಸ್ಥಿತಿಯಾಗುತ್ತದೆ. ಅಂಥವನ ವಿಷಯದಲ್ಲಿ ಪ್ರಾಯಶ್ಚಿತ್ತವು ವ್ಯರ್ಥವೆಂದೇ ನಾನು ತಿಳಿಯುತ್ತೇನೆ. ನಿಮ್ಮ ಅಭಿಪ್ರಾಯವೇನೆಂದು ತಿಳಿಸಬೇಕು.

ಶುಕಾಚಾರ್ಯರು ಹೇಳಿದರು. ರಾಜಾ ನೀನು ಹೇಳುವ ಮಾತು ಸತ್ಯವೇ. ಇದನ್ನು ಮೊದಲು ತಿಳಿ. ಪ್ರಾಯಶ್ಚಿತ್ತಕ್ಕೆ ಇಬ್ಬರು ಅಧಿಕಾರಿಗಳು. ವಿದ್ವಾಸಂರು ಮತ್ತು ಅಜ್ಞಾನಿಗಳು. ಅಜ್ಞಾನಿಯು ಮಾಡಿದ ಪ್ರಾಯಶ್ಚಿತ್ತದಿಂದ ದುರಿತದ ನಾಶವು ಪೂರ್ಣವಾಗಿ ಆಗುವುದಿಲ್ಲ. ಜ್ಞಾನಿಗಳು ಆಚರಿಸಿದ ಪ್ರಾಯಶ್ಚಿತ್ತವು ದುರಿತನಿವಾರಕವಾಗುತ್ತದೆ. ಆದ್ದರಿಂದ ಪ್ರಾಯಶ್ಚಿತ್ತವು ಸಾರ್ಥಕವೇ ಆಗಿದೆ. ಅಂದ ಮಾತ್ರಕ್ಕೆ ಅಜ್ಞಾನಿಯು ಮಾಡಿದ ಪ್ರಾಯಶ್ಚಿತ್ತವು ಸರ್ವಥಾ ವ್ಯರ್ಥವೆಂದು

ಭಾವಿಸಬಾರದು. ಪಥ್ಯವಾದ ಪದಾರ್ಥಗಳನ್ನೇ ಸ್ವೀಕರಿಸುವವನಿಗೆ ವ್ಯಾಧಿಗಳು ಪೀಡಾಕಾರಕವಾಗುವುದಿಲ್ಲ. ಹಾಗೆಯೇ ನಿಯಮೇನ ಪ್ರಾಯಶ್ಚಿತ್ತಗಳನ್ನು ಮಾಡುವವನು ನಿಷಿದ್ಧವನ್ನು ಪರಿತ್ಯಾಗ ಮಾಡಿ ಸ್ವವಿಹಿತವಾದ ಕರ್ಮಗಳನ್ನು ಮಾಡುತ್ತಿದ್ದರೆ ಅವನು ಕೂಡಾ ಸಾವಕಾಶವಾಗಿ ಕ್ಷೇಮವನ್ನು ಪಡೆಯುತ್ತಾನೆ. ಆದ್ದರಿಂದ ಅವನ ವಿಷಯದಲ್ಲಿಯೂ ಕೂಡಾ ಪ್ರಾಯಶ್ಚಿತ್ತವು ಯುಕ್ತವೇ ಆಗಿದೆ. ಅಜ್ಞಾನಿಯಾಗಿದ್ದರೂ ಕೂಡಾ ಪ್ರತಿದಿವಸದಲ್ಲಿ ಮಾಡುತ್ತಿರುವ ಪಂಚಮಹಾಯಜ್ಞಾದಿ-ಕರ್ಮಗಳಿಂದ ದುರಿತಾನುರೂಪವಾದ ಪ್ರಾಯಶ್ಚಿತ್ತಗಳನ್ನು ಆಚರಿಸುವುದರಿಂದ ಸಾವಕಾಶವಾಗಿ ಪಾಪದ ಉಪಮರ್ದವು ಆಗುತ್ತದೆ.

ಯಮಾದಿಯೋಗಪ್ರಚುರರಾದವರು ಮತ್ತು ಭಕ್ತಿಪ್ರಚುರರಾದವರು ಎಂದು ಜ್ಞಾನಿಗಳು ಎರಡು ವಿಧರಾಗಿದ್ದಾರೆ. ಇಂತಹ ಜ್ಞಾನಿಗಳು ಪಾಪಗಳನ್ನು ಮಾಡಿದಾಗ ಮನ್ವಾದಿಗಳು ಹೇಳಿದ ಪ್ರಾಯಶ್ಚಿತ್ತಕ್ಕಾಗಿ ಹುಡುಕಾಡುವುದಿಲ್ಲ. ಸ್ವಭಾವಸಿದ್ಧವಾದ ಯೋಗ ಮತ್ತು ಭಕ್ತಿಗಳಿಂದಲೇ ಎಲ್ಲವಿಧವಾದ ಪಾಪಗಳನ್ನು ಕಳೆದುಕೊಳ್ಳುತ್ತಾರೆ. ಈ ವಿಷಯದಲ್ಲಿ ಎರಡು ಮಾತಿಲ್ಲ. ಇವರಿಬ್ಬರಲ್ಲಿಯೂ ಭಕ್ತಿಪ್ರಚುರರಾದವರು ಶ್ರೋತ್ರಾದಿ ಎಲ್ಲ ಇಂದ್ರಿಯಗಳನ್ನು ಭಗವಂತನಲ್ಲೇ ತೊಡಗಿಸಿಕೊಳ್ಳುವುದರಿಂದ ತಮ್ಮ ಪಾಪಗಳನ್ನೆಲ್ಲ ಕಳೆದುಕೊಂಡು ಸುಲಭವಾಗಿ ಪೂರ್ಣವಾಗಿ ಶುದ್ಧರಾಗುತ್ತಾರೆ. ಇವರ ಅಪೇಕ್ಷಯಾ ಯಮಾದಿಯೋಗಪ್ರಚುರರಾದವರು ಶುದ್ಧಿಯನ್ನು ಸಂಪಾದಿಸಿಕೊಳ್ಳಲು ಆಗುವುದಿಲ್ಲ.

ರಾಜನ್ ! ಮತ್ತೊಂದು ವಿಷಯವನ್ನು ಎಚ್ಚರಿಕೆಯಿಂದ ತಿಳಿದುಕೊ. ನಾರಾಯಣವಿಮುಖನಾದವನು ಎಷ್ಟೇ ಪ್ರಾಯಶ್ಚಿತ್ತಗಳನ್ನು ಮಾಡಿದರೂ ಅವನು ಪಾಪದಿಂದ ಮುಕ್ತನಾಗುವುದಿಲ್ಲ. ಸುರೆಯ ಕುಂಭವನ್ನು ಎಷ್ಟುಬಾರಿ ನದಿಯ ನೀರಿನಿಂದ ತೊಳೆದರೂ ಅದು ಉಪಯೋಗಕ್ಕೆ ಬಾರದು. ಅದು ತ್ಯಾಜ್ಯವೇ ಆಗುತ್ತದೆ. ಹಾಗೆ ಹರಿವಿಮುಖನು ತ್ಯಾಜ್ಯನೇ ಆಗಿದ್ದಾನೆ.

ದೇವರ ಗುಣಗಳಲ್ಲಿ ಅನುರಕ್ತನಾಗಿ ಒಂದು ಬಾರಿ ಶ್ರೀಕೃಷ್ಣನ ಪಾದಾರವಿಂದಗಳಲ್ಲಿ ಮನಸ್ಸನ್ನು ನೆಲೆಗೊಳಿಸಿದರೆ ಸಾಕು. ಅವನಿಗೆ ಯಮನ ದರ್ಶನವಾಗುವುದಿಲ್ಲ. ಅಂದರೆ ಯಮನು ಪಾಪಿಗಳಿಗೆ ಕಾಣುವ ಹಾಗೆ ಭಯಂಕರವಾಗಿ ತೊರುವುದಿಲ್ಲ. ಪಾಪಮಾಡಿದವರನ್ನು ದಂಡಿಸುವುದಕ್ಕಾಗಿ ಪಾಶಾದ್ಯಾಯುಧಗಳನ್ನು ಧರಿಸಿದ ಯಮಭಟರ ದರ್ಶನವೂ ಅವರಿಗೆ ಸ್ವಪ್ನದಲ್ಲಿಯೂ ಆಗುವುದಿಲ್ಲ.

ಈ ವಿಷಯದಲ್ಲಿ ನಿನಗೊಂದು ಇತಿಹಾಸವನ್ನು ಹೇಳುತ್ತೇನೆ. ಶ್ರದ್ಧೆಯಿಂದ ಅದನ್ನು ಆಲಿಸು.

ಗಂಗಾಯಮುನೆಯ ಮಧ್ಯದಲ್ಲಿರುವ ಒಂದು ದೇಶ. ಅದು ಕಾನ್ಯಕುಬ್ಜ. ದಾಸಿಯ ಸಂಸರ್ಗವನ್ನು ಮಾಡುತ್ತಿರುವ ವ್ಯಕ್ತಿ ಒಬ್ಬನಿದ್ದ. ಅವನ ಹೆಸರು ಅಜಾಮಿಳ. ಎಲ್ಲ ಸದಾಚಾರಗಳನ್ನು ಗಾಳಿಗೆ ತೂರಿಹಾಕಿದ್ದ. ನಿಷಿದ್ಧವಾದ ಕರ್ಮಗಳನೆಲ್ಲ ಮಾಡಿದ್ದ. ಸುಳ್ಳುಮಾತನಾಡುವುದು, ಲೆತ್ತವಾಡುವುದು ಇಂತಹ ಅಸತ್ಕರ್ಮದಿಂದಲೇ ತನ್ನ ಉಪಜೀವನ ಸಾಗಿಸುತ್ತಿದ್ದ. ನರಕಕ್ಕೆ ಮುಖಮಾಡಿಯೇ ನಿಂತಿದ್ದ.

ದಾಸಿಯಲ್ಲಿ ಹತ್ತು ಜನ ಮಕ್ಕಳನ್ನು ಪಡೆದ. ಮಕ್ಕಳ ಲಾಲನೆ-ಪೋಷಣೆಯಲ್ಲಿಯೇ ಜೀವನವೆಲ್ಲ ಕಳೆಯಿತು. ಎಂಭತ್ತೆಂಟು ವರ್ಷಗಳು ಹೀಗೆ ಕಳೆದವು. ವೃದನಾದ. ಕಡೆಯ ಮಗನ ಹೆಸರು ನಾರಾಯಣ. ಸಣ್ಣ ಮಗ. ಅವನಾಡುವ ಆಟಗಳಿಂದ, ಅವನ ಕಲಭಾಷಣಗಳಿಂದ ಮುಗ್ಧನಾಗಿ ಅವನ ಪೋಷಣೆಯಲ್ಲಿಯೇ ತನ್ನನ್ನು ತೊಡಗಿಸಿಕೊಂಡ. ಅವನಿಗೆ ಹೊತ್ತುಹೊತ್ತಿಗೆ ಉಣ್ಣಿಸುತ್ತಿದ್ದ. ಕುಡಿಸುತ್ತಿದ್ದ. ಬೇಕಾದವುಗಳನ್ನೆಲ್ಲ ತಂದು ಕೊಡುತ್ತಿದ್ದ. ಕಾಲ ಕಳೆದದ್ದೇ ಗೊತ್ತಾಗಲಿಲ್ಲ. ಮರಣವು ಅತಿ ಸನಿಹವಾಗಿತ್ತು. ಅದು ಕೂಡಾ ಅವನಿಗೆ ತಿಳಿಯಲಿಲ್ಲ.

ನಾರಾಯಣ ಅಜಾಮಿಲನಿಗೆ ಪರಮಪ್ರಿಯನಾಗಿದ್ದ. ಮೃತ್ಯುಕಾಲದಲ್ಲಿಯೂ ಅವನನ್ನು ನೋಡಬೇಕೆಂದು ಬಯಸಿದ. ಆ ಸಮಯದಲ್ಲಿಯೇ ಪಾಶಗಳನ್ನು ಧರಿಸಿ ತನ್ನ ಪ್ರಾಣಗಳನ್ನು ತೆಗೆಯಲು ಬರುತ್ತಿರುವ ಯಮಭಟರು ಕಾಣಿಸಿಕೊಂಡರು. ಅವರು ಅತಿ ದಾರುಣರಾಗಿದ್ದರು. ಮುಖಗಳೆಲ್ಲ ವಕ್ರವಾಗಿದ್ದವು. ಅಂಥವರನ್ನು ನೋಡಿ ಭಯಗೊಂಡಿದ್ದ. ಮಗ ಬಹಳ ದೂರದಲ್ಲಿದ್ದ. ಆಟವಾಡುತ್ತಲಿದ್ದ. ಅವನಿಗೆ ಕೇಳಿಸಬೇಕೆಂದು ಜೋರಾಗಿಯೇ ಕೂಗಿದ. ಆವಾಗಲೇ ಅಜಾಮಿಳನಿಗೆ ದೇವರ ಸ್ಮರಣೆಯಾಯಿತು. ಸ್ವಷ್ಟ್ಯಾದಿಕ್ರೀಡೆಗಳನ್ನು ಮಾಡುತ್ತಲಿರುವ ದೇವರ ನೆನಪಾಯಿತು. ಧ್ವನಿಯಲ್ಲಿ ಮತ್ತಿಷ್ಟು ಭಾವನೆ ಬೀಡು ಬಿಟ್ಟಿತು. ಭಕ್ತಿಯು ಮನಸ್ಸಿನಲ್ಲಿ ಗೂಡು ಮಾಡಿತು. ತಾನು ಮಾಡಿದ ಪಾಪಗಳಿಂದ ಪರಿತಪ್ತನಾದ. ಜೋರಾಗಿ ನಾರಾಯಣ ಎಂದು ಕೂಗಿದ. ಅಜಾಮಿಳನು ಭಕ್ತಿಯಿಂದ ಉಚ್ಚರಿಸಿದ ದೇವರ ನಾಮವನ್ನು ಕೇಳಿದ ಕೂಡಲೇ ಹರಿಪಾರ್ಷದರು ಬಂದರು. ಅವರು ಬರುವಷ್ಟರಲ್ಲಿ ಯಮದೂತರು ಅಜಾಮಿಳನನ್ನು ಎಳೆಯುತ್ತಿದ್ದರು. ಹರಿದೂತರು ಬರುತ್ತಲೇ ಯಮದೂತರನ್ನು ತಡೆದರು. ಅಷ್ಟು ಸಾಮರ್ಥ್ಯ ದೇವದೂತರಿಗೆ ಇದೆ.

ಯಮದೂತರು ಹೇಳಿದರು. ಧರ್ಮರಾಜನ ಶಾಸನವನ್ನು ಪಾಲಿಸುತ್ತಿರುವ ಯಮದೂತರು ನಾವು. ಅವನ ಶಾಸನದಿಂದಲೇ ಪಾಪಿಯಾದ ಇವನನ್ನು ಎಳೆದೊಯ್ಯುತ್ತಿದ್ದೇವೆ. ನಮ್ಮನ್ನು ತಡೆಯಲು ನೀವಾರು. ಎಲ್ಲಿಂದ ಬಂದಿರುವಿರಿ. ಯಾತಕ್ಕಾಗಿ ನಮ್ಮನ್ನು ನಿಷೇಧಿಸುತ್ತಿದ್ದೀರಿ. ನೀವು ದೇವತೆಗಳೊ, ಉಪದೇವತೆಗಳೊ, ಸಿದ್ಧರೋ ಯಾರು ನೀವು ಎಂದು ಕೇಳಿದರು.

ಯಮದೂತರು ಹೀಗೆ ಕೇಳಿದಾಗ ದೇವದೂತರು ಹೇಳಿದರು. ನೀವು ಧರ್ಮದೂತರು ಎಂದು ಹೇಳುತ್ತಿರುವಿರಲ್ಲಾ. ಈ ವಿಷಯವನ್ನು ಈಗ ತಿಳಿಸಿರಿ. ಧರ್ಮ ಎಂದರೇ ಏನು. ಅದರ ಲಕ್ಷಣವೇನು. ಅಧರ್ಮದ ಲಕ್ಷಣವನ್ನೂ ತಿಳಿಸಿ.

ಯಮದೂತರು ಹೇಳಿದರು. ವೇದವಿಹಿತವಾದದ್ದು ಧರ್ಮ. ವೇದವಿರುದ್ಧವಾದದ್ದು ಅಧರ್ಮ. ವೇದಗಳನ್ನು ಪ್ರಥಮವಾಗಿ ಉಚ್ಚರಿಸಿದವನು ನಾರಾಯಣ. ಸೂರ್ಯ-ಅಗ್ನಿ-ಆಕಾಶ-ವಾಯು-ಆಕಳು-ಚಂದ್ರ-ಸಂಧ್ಯ-ಹಗಲು-ದಿಕ್ಕುಗಳು-ಕಾಲ ಸ್ವಯಂ ಧರ್ಮ ಇವುಗಳು ಧರ್ಮಸಾಕ್ಷಿಗಳು.

ಪ್ರಕೃತ ಈ ಅಜಾಮಿಳ ಬ್ರಾಹ್ಮಣ. ಶಾಸ್ತ್ರಸಂಪನ್ನ. ಸತ್ಯವಂತ. ಪಂಚಮಹಾಯಜ್ಞತತ್ಪರ. ಅಹಂಕಾರರಹಿತ. ಇವನು ತಂದೆಯ ಮಾತನ್ನು ಕೇಳಿ ಒಂದು ಬಾರಿ ವನಕ್ಕೆ ಹೋದ. ಫಲ-ಪುಷ್ಪ-ಕುಶಗಳನ್ನು ತೆಗೆದುಕೊಂಡು ಬರುತ್ತಿದ್ದ. ಇಂತಹ ಸಂದರ್ಭದಲ್ಲಿ ಒಬ್ಬ ಶೂದ್ರನನ್ನು ನೋಡಿದ. ತನ್ನ ಸೇವಕಿಯ ಜೊತೆ ಕಾಮಕೇಳಿಯಲ್ಲಿ ತೊಡಗಿದ್ದ. ಆ ಕಾಮಿನಿಯನ್ನು ನೋಡಿ ಮೋಹಿತನಾದ ಅಜಾಮಿಳ. ಅವಳನ್ನು ಬಯಸಿದ. ಅವಳಿಗಾಗಿ ತನ್ನ ಧರ್ಮಗಳನ್ನೆಲ್ಲ ಪರಿತ್ಯಜಿಸಿದ. ಸಾಧ್ವಿಯಾದ ಹೆಂಡತಿಯನ್ನು ತೊರೆದ. ದಾಸಿಯಲ್ಲಿಯೇ ಅನುರಕ್ತನಾದ. ದಾಸಿಯನ್ನು ಪೋಷಿಸಲು ಅನ್ಯಾಯದಿಂದ ಹಣವನ್ನು ಸಂಪಾದಿಸಿದ.

ಶಾಸ್ತ್ರಕ್ಕೆ ವಿರುದ್ಧವಾಗಿ ನಡೆದುಕೊಂಡ. ಅತಿದೀರ್ಘಕಾಲದ ವರೆಗೆ ಹಾಗೆಯೇ ಇದ್ದ. ಇವನ ಪಾಪದ ಕೊಡವೀಗ ತುಂಬಿದೆ. ಪ್ರಾಯಶ್ಚಿತ್ತವನ್ನೂ ಇವನು ಮಾಡಿಲ್ಲ. ಹೀಗಾಗಿ ಯಮನ ಹತ್ತಿರ ಇವನನ್ನು ಕರೆದೊಯ್ಯುತ್ತಿದ್ದೇವೆ. ಅಲ್ಲಿ ಅವನಿಗೆ ಪ್ರಾಯಶ್ಚಿತ್ತವಾಗುತ್ತದೆ. ಇಷ್ಟು ಹೇಳಿದರು ಯಮದೂತರು. ಸುಮ್ಮನಾದರು.

★★★★★

**ವಿಜಯಧ್ವಜೀಯ ಅವತಾರಿಕಾ**

ಭಾಗವತವನ್ನು ಅಧ್ಯಯನ ಮಾಡುವವರಿಗೂ ಹೇಳುವವರಿಗೂ ಕೇಳುವವರಿಗೂ ಅಧಿಕವಾದ ಫಲವು ಬರುವುದೆಂದು ತಿಳಿಸಲು ಹಿಂದಿನ ಸ್ಕಂಧಗಳಲ್ಲಿ ಹೇಳಿದ ವಿಷಯಗಳನ್ನು ಈ ಸ್ಕಂಧದಲ್ಲಿ ಸಂಕ್ಷೇಪವಾಗಿ ತಿಳಿಸುತ್ತಾರೆ.

ಶ್ರೀಹರಿನಾಮಸಂಕೀರ್ತನೆಯನ್ನು ಮುಕ್ತಿಯೋಗ್ಯರಾದ ಎಲ್ಲ ಅಧಿಕಾರಿಗಳೂ ಸುಲಭವಾಗಿ ಅನುಷ್ಠಾನ ಮಾಡಬಹುದು. ಇದು ಶ್ರೀಹರಿಯ ಪ್ರಸಾದವನ್ನು ತಂದುಕೊಡುವ ಜ್ಞಾನಕ್ಕೆ ಸಾಧನವಾಗಿದೆ. ಭಕ್ತಿಯುಕ್ತವಾದ ಹರಿನಾಮಸಂಕೀರ್ತನವು ಪಾಪವನ್ನು ಕಳೆಯುವ ಮೂಲಕ ಮುಕ್ತಿಗೆ ಸಾಧನವಾಗಿದೆ ಎಂಬುದನ್ನು ಈ ಅಧ್ಯಾಯದಲ್ಲಿ ನಿರೂಪಿಸುತ್ತಾರೆ.

ಪರೀಕ್ಷಿದ್ರಾಜರು ಈ ವಿಷಯಗಳನ್ನೆಲ್ಲ ತಿಳಿದಿದ್ದಾರೆ. ಆದರೂ ಅಜ್ಞಾನಿಗಳಾದ ಜನರಲ್ಲಿಯ ಕೃಪೆಯಿಂದ ಪ್ರಶ್ನೆಯನ್ನು ಕೇಳುತ್ತಿದ್ದಾರೆ. ಯಾವ ಉಪಾಯವಿಲ್ಲದಿದ್ದರೆ ಪಾಪವು ನಾಶವಾಗುವುದಿಲ್ಲವೋ ಪಾಪನಾಶವಾಗದಿದ್ದರೆ ಜ್ಞಾನವೇ ಹುಟ್ಟುವುದಿಲ್ಲವೋ ಪಾಪವಿದ್ದರೆ ಮೋಕ್ಷಸಾಮಾನ್ಯವೂ ಆಗುವುದಿಲ್ಲವೋ ಆ ಕಾರಣದಿಂದ ತಾವು ಆ ಪಾಪನಾಶಕ್ಕೆ ಉಪಾಯವನ್ನು ಶುಕಾಚಾರ್ಯರ ಬಾಯಿಯಿಂದ ಹೇಳಿಸುವುದಕ್ಕಾಗಿ ದ್ವಿತೀಯಸ್ಕಂಧದಲ್ಲಿ ಹೇಳಿದ ವಿಷಯವನ್ನು ಅನುವಾದ ಮಾಡುತ್ತಾರೆ.

**ಶ್ರೀಸತ್ಯಧರ್ಮರ ಅವತಾರಿಕಾ**

ಸಂಸಾರವು ಅಸಾರ. ಇದೊಂದು ನಿಬಿಡವಾದ ಕಾಡು. ಕಗ್ಗತ್ತಲಿನಿಂದ ತುಂಬಿದೆ. ಜೀವರು ಯಾವಾಗಲೂ ಈ ಸಂಸಾರದಲ್ಲಿಯೇ ತಿರುಗುತ್ತಿದ್ದಾರೆ. ಅಧಿಕಾರಿಗಳಾದ ಜೀವರು ಈ ಸಂಸಾರವನ್ನು ದಾಟುವುದಕ್ಕಾಗಿ ಅನೇಕ ಉಪಾಯಗಳನ್ನು ಅನುಷ್ಠಾನ ಮಾಡುತ್ತಿದ್ದಾರೆ. ಆ ಉಪಾಯಗಳ ಅನುಷ್ಠಾನದಿಂದ ದಣಿದಿದ್ದಾರೆ. ಆದರೂ ಸಂಸಾರವನ್ನು ದಾಟಲು ಸಾಧ್ಯವಾಗುತ್ತಿಲ್ಲ. ಹೀಗಾಗಿ ದುಃಖಿತರಾಗಿದ್ದಾರೆ. ಅವರ ದುಃಖವನ್ನು ನೋಡಿ ದಯಾಪರವಶರಾಗಿದ್ದಾರೆ ಭಗವಾನ್ ವ್ಯಾಸರು. ತಾಯಿಯಂತೆ ಅಧಿಕಾರಿಗಳನ್ನು ಸಲಹಲು ಸನ್ನದ್ಧರಾಗಿದ್ದಾರೆ.

ಬಂಜರುಭೂಮಿಯಲ್ಲಿ ಎಷ್ಟು ಬೀಜಗಳನ್ನು ತಂದು ಹಾಕಿದರೂ ಅದು ಅಂಕುರಿಸುವುದಿಲ್ಲ. ಹಾಗೆಯೇ ಪಾಪಭೂಯಿಷ್ಠವಾದ ಮನಸ್ಸಿನಲ್ಲಿ ತತ್ತ್ವಜ್ಞಾನವು

ಅಂಕುರಿಸುವುದಿಲ್ಲ. ಆ ಜ್ಞಾನ ಯಾವ ಉಪಯೋಗಕ್ಕೂ ಬರುವುದಿಲ್ಲ. ಹಿಂದೆ ಮಾಡಿದ ಪಾಪಗಳಿಂದಾಗಿ ಇಷ್ಟಸಾಧನವಾದ ಕರ್ಮಗಳನ್ನು ಮಾಡುವ ಚಾತುರ್ಯವಿಲ್ಲದ ಅಧಿಕಾರಿಗಳಿಗೆ ಪಂಚಜನದೀಕ್ಷೆಯನ್ನು ಇಲ್ಲಿ ಉಪದೇಶಿಸುತ್ತಿದ್ದಾರೆ.

ಶ್ರೀಹರಿಸ್ಮರಣೆ ಇದು ಸರ್ವಾಧಿಕಾರಿಸಾಧಾರಣ. ಅಗ್ನಿಕಣವು ಹತ್ತಿಯ ರಾಶಿಯನ್ನು ಭಸ್ಮಮಾಡುವಂತೆ ಭಕ್ತಿಪೂರ್ವಕವಾಗಿ ಮಾಡಿದ ಸ್ಮರಣೆಯು ಪಾಪಸಮೂಹವನ್ನೆಲ್ಲ ಭಸ್ಮಮಾಡುತ್ತದೆ. ಪಾಪವಿಲ್ಲದ ಮನಸ್ಸಿನಲ್ಲಿ ಜ್ಞಾನವು ಅಂಕುರಿಸುತ್ತದೆ. ಅದು ಹೆಮ್ಮರವಾಗಿ ಬೆಳೆಯುತ್ತದೆ. ಅಭಿವೃದ್ಧವಾದ ಜ್ಞಾನವು ಭಗವತ್ಪ್ರಸಾದದ್ವಾರಾ ಮುಕ್ತಿಗೆ ಕಾರಣವಾಗುತ್ತದೆ. ಹೀಗೆ ಮಾಧವನ ಮಂದಿರವನ್ನು ಆ ಅಧಿಕಾರಿಗಳು ಪಡೆಯಬಹುದು ಎಂಬುದನ್ನು ಶ್ರೀಶುಕಾಚಾರ್ಯರು ಈ ಅಧ್ಯಾಯದಲ್ಲಿ ನಿರೂಪಿಸುತ್ತಿದ್ದಾರೆ.

ಪ್ರಕೃತ ರಾಜನ ಪ್ರಶ್ನೆಗಳನ್ನು ಕೇಳಿದ ಓದುಗರಿಗೆ ರಾಜನ ಜ್ಞಾನದ ಬಗ್ಗೆ ಸಂಶಯವು ಬರಬಹುದು. ಆದರೆ ಇದು ಸರಿಯಲ್ಲ. ಯಾಕೆಂದರೆ ಇಲ್ಲಿ ನಾವು ಒಂದು ವಿಷಯವನ್ನು ಗಮನಿಸಬೇಕು. ಶ್ರೀಶುಕಾಚಾರ್ಯರು ಸಾಕ್ಷಾತ್ ರುದ್ರಾವತಾರಿಗಳು. ಮನೋನಿಯಾಮಕರಾದ ದೇವತೆಗಳು. ಶುಕಾಚಾರ್ಯರಿಗೆ ಪರೀಕ್ಷಿತನ ಸ್ವರೂಪಯೋಗ್ಯತೆ ತಿಳಿದಿದೆ. ಶಿಷ್ಯನ ಯೋಗ್ಯತೆ ತಿಳಿಯದಿದ್ದಾಗ ಉಪದೇಶ ಮಾಡಲು ಶುಕಾಚಾರ್ಯರಂತಹ ಗುರುಗಳು ಪ್ರವೃತ್ತರಾಗಲು ಸಾಧ್ಯವೇ ಇಲ್ಲ. ಹೀಗಾಗಿ ಶುಕಾಚಾರ್ಯರಿಂದ ಉಪದೇಶವನ್ನು ಪಡೆಯುತ್ತಿರುವ ಪರೀಕ್ಷಿತ ಸಾಮಾನ್ಯನಲ್ಲ ಎಂಬುದು ತಿಳಿದು ಬರುತ್ತದೆ.

ಅಲ್ಲದೆ ಪ್ರಕೃತ ಎರಡನೆಯ ಸ್ಕಂಧದಿಂದ ಪ್ರಾರಂಭಿಸಿ ಐದನೆಯ ಸ್ಕಂಧದ ತನಕ ಶ್ರೀಶುಕಾಚಾರ್ಯರು ಹೇಳಿದ ವಿಷಯಗಳನ್ನು ಸಂಕ್ಷಿಪ್ತವಾಗಿ ಪರೀಕ್ಷಿತರು ಅನುವಾದ ಮಾಡುತ್ತಿದ್ದಾರೆ. ಸಮಗ್ರ ಭಾಗವತಕ್ಕೆ ಪಾದಪೀಠದಂತಿರುವ ಪ್ರಥಮಸ್ಕಂಧವು ರಾಜನ ಪ್ರಶ್ನೆಯೊಂದಿಗೆ ಮುಕ್ತಾಯವಾಗಿದೆ. ಅಲ್ಲಿ ಶುಕಾಚಾರ್ಯರು ರಾಜನಿಗೆ ಹೇಳಿದ ಉತ್ತರ ಯಾವುದೂ ಇಲ್ಲ. ಆದ್ದರಿಂದ ಪ್ರಥಮಸ್ಕಂಧವನ್ನು ಇಲ್ಲಿ ಪರೀಕ್ಷಿತರು ಅನುವಾದ ಮಾಡಿಲ್ಲವೆಂದು ತಿಳಿಯಬೇಕು. ಪಂಚಮಸ್ಕಂಧದ ಕೊನೆಯಲ್ಲಿ ನರಕವಿಷಯಕವಾದ ಉಪದೇಶವಿದೆ. ಅತಿ ಸಂತಾಪದಾಯಕವಾದ ನರಕಗಳನ್ನು ಪರಿಹರಿಸಿಕೊಳ್ಳಲು ಅನುಷ್ಠಾನ ಮಾಡಬೇಕಾದ ಉಪಾಯ ಯಾವುದು ಹೇಳಿರಿ ಎಂದು ಪಾಪಿಗಳ ಉದ್ಧಾರಕ್ಕಾಗಿ ರಾಜನಾದ ಪರೀಕ್ಷಿತ ಪ್ರಶ್ನಿಸುತ್ತಿದ್ದಾನೆ-

**ರಾಜೋವಾಚ -**

**ನಿವೃತ್ತಿಮಾರ್ಗಃ ಕಥಿತ ಆದೌ ಭಗವತಾ ಯಥಾ ।**
**ಕ್ರಮಯೋಗೋಪಲಬ್ಧೇನ ಬ್ರಹ್ಮಣಾ ಯದಸಂಸೃತಿಃ ॥೧॥**

**ಭಗವತಾ** ಪೂಜ್ಯರಾದ ತಮ್ಮಿಂದ **ಆದೌ** ದ್ವಿತೀಯಸ್ಕಂಧದ ಪ್ರಾರಂಭದಲ್ಲಿ (ವರೀಯಾನೇಷ ತೇ ಪ್ರಶ್ನಃ) ಮುಂತಾದ ವಾಕ್ಯಗಳಿಂದ (ಗೃಹಾತ್ ಪ್ರವ್ರಜಿತೋ ಧೀರಃ) **ಯತ್** ಯಾವ ನಿವೃತ್ತಿಮಾರ್ಗದ ಅನುಷ್ಠಾನದಿಂದ ವೈರಾಗ್ಯ-ಭಕ್ತಿ-ನಿರಂತರಧ್ಯಾನ ಎಂಬ ಉಪಾಯದಿಂದ ಸಾಕ್ಷಾತ್ಕೃತನಾದ ಮೊದಲು ಸ್ಮರಣ ಅನಂತರ ಒಂದೊಂದೇ ಅವಯವಗಳ ಧ್ಯಾನ ಅನಂತರ ಎಲ್ಲ ಅವಯವಗಳ ಧ್ಯಾನ ಎಂಬೀ ಕ್ರಮದಿಂದ ಅಪರೋಕ್ಷೀಕೃತನಾದ **ಬ್ರಹ್ಮಣಾ** ಸರ್ವಗುಣಪೂರ್ಣನಾದ ನಾರಾಯಣನಿಂದ **(ಜೀವಸ್ಯ)** ಜೀವರಿಗೆ **ಅಸಂಸೃತಿಃ** ಮೋಕ್ಷವು ಆಗುವುದೋ ಸಂಸಾರವಿಲ್ಲದಿರುವುದೆಂಬ **ಸಃ ನಿವೃತ್ತಿಮಾರ್ಗಃ** ಸ್ವಸ್ವರೂಪಾನಂದಾವಿರ್ಭಾವವೆಂಬ ಮೋಕ್ಷಸಾಧನವಿಶೇಷವು **ಯಥಾ** ಯಥಾವತ್ತಾಗಿ ಅವ್ಯಾಪ್ತಿ-ಅತಿವ್ಯಾಪ್ತಿ- ಅಸಂಭವಗಳೆಂಬ ಮೂರು ದೋಷಗಳಿಲ್ಲದ ಸೃಷ್ಟಿ ಮೊದಲಾದ ಲಕ್ಷಣಗಳಿಂದ ಕೂಡಿದ ನಾರಾಯಣನ ಸ್ವರೂಪವು ಮೋಕ್ಷರೂಪವಾದ ಪುರುಷಾರ್ಥಕ್ಕೆ ಮುಖ್ಯೋಪಾಯವಾಗಿದೆ ಎಂದು **ಕಥಿತಃ** ಹೇಳಲ್ಪಟ್ಟಿದೆ.

ನಿವೃತ್ತಿಮಾರ್ಗವೆಂಬ ಸಾಧನವಿಶೇಷವನ್ನು ವಿವರ ಮಾಡುವುದನ್ನು ಬಿಟ್ಟು ಸೃಷ್ಟ್ಯಾದಿಗಳನ್ನು ಹೇಳುವುದರ ಉಪಯೋಗವೇನು ಎಂಬ ಪ್ರಶ್ನೆಗೆ **ಯಥಾ** ಎಂಬ ಪದವು ಉತ್ತರವಾಗಿದೆ. ಉತ್ತರಾರ್ಧದಿಂದ ಅದರ ಫಲವನ್ನೇ ಹೇಳಿರುವರು. **ಬ್ರಹ್ಮಣಾ** ಎಂದು ತೃತೀಯಾವಿಭಕ್ತಿಯನ್ನು ಪ್ರಯೋಗಿಸಿರುವುದರಿಂದ ಕರ್ತೃವಾಗಿಯೂ ಕರಣವಾಗಿಯೂ ಶ್ರೀಹರಿಯು ಮುಖ್ಯನೆಂದು ಪ್ರಕಟಪಡಿಸಿರುವರು. ಬ್ರಹ್ಮಪದವನ್ನು ಪ್ರಯೋಗಿಸಿರುವುದರಿಂದ 'ಅಥ ಕಸ್ಮಾದುಚ್ಯತೇ ಬ್ರಹ್ಮೇತಿ ಬೃಹಂತೋ ಹ್ಯಸ್ಮಿನ್ ಗುಣಾಃ' ಎಂಬ ಶ್ರುತಿಯಂತೆ ಗುಣಪೂರ್ಣನೆಂದು ತಿಳಿದರೇನೇ ಶ್ರೀಹರಿಯು ಮೋಕ್ಷಪ್ರದನು. ಗುಣರಹಿತನೆಂದು ತಿಳಿದರೆ ಅಲ್ಲವೆಂದೂ ತಿಳಿಸಿರುವರು. ಚಟ್ಟಿ ವೇಂಕಟಾದ್ರಿ ಆಚಾರ್ಯರು ತಮ್ಮ ಟಿಪ್ಪಣಿಯಲ್ಲಿ ಈ ರೀತಿ ವ್ಯಾಖ್ಯಾನ ಮಾಡಿರುವರು. (**ನಿವೃತ್ತಿಮಾರ್ಗಃ** ಭಗವಂತನ ಪ್ರೀತಿಯನ್ನು ಮಾತ್ರ ಇಚ್ಛಿಸಿ ಮಾಡುವ ಕರ್ಮ ನಿವೃತ್ತಿಧರ್ಮದಿಂದ ಹೊಂದಬಹುದಾದ ಅರ್ಚಿರಾದಿಮಾರ್ಗವು 'ವೈಶ್ವಾನರಂ ಯಾತಿ' ಇತ್ಯಾದಿ ವಾಕ್ಯಗಳಿಂದ **ಯಥಾ ಕಥಿತಃ** ಯಥಾವತ್ತಾಗಿ ಹೇಳಲ್ಪಟ್ಟಿತು)

**ಯತ್** ಯಾವ ಮಾರ್ಗದಿಂದ ಹೋದವರಿಗೆ **ಕ್ರಮಯೋಗೋಪಲಬ್ಧೇನ** ಅರ್ಚಿರಾದಿಮಾರ್ಗದಿಂದ ಹೊಂದಲ್ಪಟ್ಟ **ಬ್ರಹ್ಮಣಾ (ಸಹ)** ಚತುರ್ಮುಖ ಬ್ರಹ್ಮದೇವರೊಂದಿಗೆ **ಅಸಂಸೃತಿಃ** ಭಗವತ್ಪ್ರಾಪ್ತಿರೂಪವಾದ ಮೋಕ್ಷವಾಗುವುದೋ ಅಂತಹ ನಿವೃತ್ತಿಮಾರ್ಗ ಎಂದನ್ವಯ ಮಾಡಿ 'ಬ್ರಹ್ಮಣಾ ಸಹ ತೇ ಸರ್ವೇ ಸಂಪ್ರಾಪ್ತೇ ಪ್ರತಿಸಂಚರೇ । ಪರಸ್ಯಾಂತೇ ಕೃತಾತ್ಮಾನಃ ಪ್ರವಿಶಂತಿ ಪರಂ ಪದಮ್' ಪ್ರಳಯವು ಪ್ರಾಪ್ತವಾದಾಗ ಬ್ರಹ್ಮಕಲ್ಪದ ಕೊನೆಯಲ್ಲಿ ಸಾಧನೆ ಮುಗಿದು ಧನ್ಯರಾದವರೆಲ್ಲರೂ ಬ್ರಹ್ಮದೇವರೊಂದಿಗೆ ಶ್ರೀಹರಿಯನ್ನು ಪ್ರವೇಶಿಸುವರು ಎಂದರ್ಥ.

### ಶ್ರೀ ಸತ್ಯಧರ್ಮರು ಮಾಡಿದ ವಿಶೇಷ ವಿಚಾರ

ಈ ಸ್ಕಂಧದಲ್ಲಿ ತಿಳಿಸುವ ವಿಷಯವನ್ನು 'ದಕ್ಷಜನ್ಮ ಪ್ರಚೇತೋಭ್ಯಸ್ತತ್ಪುತ್ರೀಣಾಂ ಚ ಸಂತತಿಃ । ಯತೋ ದೇವಾಸುರನರಾಸ್ತಿರ್ಯಙ್‌ನಗಖಗಾದಯಃ ।। ತ್ವಾಷ್ಟ್ರಸ್ಯ ಜನ್ಮ ನಿಧನಂ ಪುತ್ರಯೋಶ್ಚ ದಿತೇಃ ದ್ವಿಜಾಃ' ಎಂಬ ಅನುಕ್ರಮಣಿಕೆಯಿಂದ ತಿಳಿಯಬೇಕು. ಇಲ್ಲಿ ಪ್ರಚೇತಸರಿಂದ ದಕ್ಷಪ್ರಜಾಪತಿ ಜನಿಸಿದ್ದು ಅವನ ಹೆಣ್ಣು ಮಕ್ಕಳ ಸಂತತಿ (ಯಾರಿಂದ ದೇವತೆಗಳೇ ಮೊದಲಾದ ಎಲ್ಲರ ಜನ್ಮವಾಯಿತೋ) ತ್ವಾಷ್ಟ್ರನ ಉತ್ಪತ್ತಿ-ನಾಶಗಳು ಮತ್ತು ದಿತಿಯ ಮಕ್ಕಳ ಜನ್ಮ-ನಿಧನ ಹೇಳಲ್ಪಟ್ಟಿದೆ ಎಂದು ವರ್ಣಿಸಿದೆ.

ವ್ಯಾಸರು ಈ ಅನುಕ್ರಮಣಿಕೆಯಲ್ಲಿ ಸಂಗ್ರಾಹ್ಯವಾದ ಅಜಾಮಿಲನ ಕಥೆಯನ್ನು ಏಕೆ ಸಂಗ್ರಹಿಸಲಿಲ್ಲ ಎಂದರೆ ಈ ಶಂಕೆ ಸರಿಯಲ್ಲ. ಏಕೆಂದರೆ ಭಗವಂತನ ನಾಮಸ್ಮರಣ-ಸಂಕೀರ್ತನ ಮೊದಲಾದವುಗಳು ಮೋಕ್ಷಕ್ಕೆ ನಿಷ್ಕಂಟಕ ಮಾರ್ಗಗಳಾಗಿವೆ ಎಂಬುದನ್ನು ಅಜಾಮಿಲನ ದೃಷ್ಟಾಂತದಿಂದ ಈ ಸ್ಕಂಧದಲ್ಲಿ ಪ್ರತಿಪಾದಿಸಿದ್ದಾರೆ. ಅಜಾಮಿಲನಂತೆ ನಾಮೋಚ್ಚಾರಣವೇ ಮೊದಲಾದ ಸಾಧನಗಳಿಂದ ಮಹಾಜ್ಞಾನಿಗಳಾಗಿ ಮುಕ್ತಿಯನ್ನು ಪಡೆದ ಅನೇಕ ಜ್ಞಾನಿಗಳ ಪರಿಚಯವನ್ನು ಪ್ರತಿಯೊಂದು ಸ್ಕಂಧವೂ ಮಾಡಿಕೊಡುತ್ತದೆ. ಹೀಗಾಗಿ ಈ ವಿಷಯ ಈ ಸ್ಕಂಧದ ಅಸಾಧಾರಣವಿಷಯವೆಂದು ಆಗುವುದಿಲ್ಲ. ಪ್ರತಿಯೊಂದು ಸ್ಕಂಧದ ಸಾಧಾರಣವಾದ ವಿಷಯವಿದಾಯಿತು. ಹೀಗಾಗಿ ಈ ವಿಷಯವನ್ನು ಈ ಸ್ಕಂಧದಲ್ಲಿ ಮಾತ್ರ ಉಕ್ತವಾದ ಅನುಕ್ರಮಣಿಕೆಯಲ್ಲಿ ಹೇಳದಿರುವುದು ಬಾಧಕವೇನಲ್ಲ. ಕಿಂತು ಸೂಕ್ತವೇ ಆಗಿದೆ. ಈ ಸ್ಕಂಧದಲ್ಲಿ ಮಾತ್ರವಲ್ಲದೆ ಪ್ರತಿಯೊಂದು ಸ್ಕಂಧದಲ್ಲಿಯೂ ಈ ವಿಷಯವನ್ನು ಪ್ರತಿಪಾದಿಸಿದ್ದಾರೆ.

'ಆಪನ್ನಃ ಸಂಸೃತಿಂ ಘೋರಾಂ ಯನ್ನಾಮ ವಿವಶೋ ಗೃಣನ್' 'ನಾಮಾನ್ಯನಂತಸ್ಯ ಯಶೋಽಂಕಿತಾನಿ' ಎಂದು ಪ್ರಥಮಸ್ಕಂಧದಲ್ಲಿ 'ಯೋಗಿನಾಂ ನೃಪ ನಿರ್ಣೀತಂ ಹರೇರ್ನಾಮಾನುಕೀರ್ತನಮ್' 'ಯದ್ಗೃಹ್ಯಮಾಣೈರ್ಹರಿನಾಮ-ಧೇಯೈಃ' ಎಂದು ದ್ವಿತೀಯಸ್ಕಂಧದಲ್ಲಿ 'ಯನ್ನಾಮಧೇಯಶ್ರವಣಾನುಕೀರ್ತನಾತ್' 'ಯಜ್ಜಿಹ್ವಾಗ್ರೇ ವರ್ತತೇ ನಾಮ ತುಭ್ಯಮ್' 'ಬ್ರಹ್ಮಾನೂಚುರ್ನಾಮ ಗೃಣಂತಿ ಏತೇ' ಎಂದು ಮೂರನೇ ಸ್ಕಂಧದಲ್ಲಿ 'ಯನ್ಮಖ ಇಜ್ಯನಾಮಭಿಃ' 'ಯನ್ನಾಮಧೇಯ-ಮಭಿಧಾಯ' ಎಂದು ನಾಲ್ಕನೇ ಸ್ಕಂಧದಲ್ಲಿ 'ಸಕೃದಾದದೀತ ಯನ್ನಾಮಧೇಯ-ಮಧುನಾ ಸ ಜಹಾತಿ ಬಂಧಮ್' 'ಕಶ್ಮಲನಿರಸನಾನಿ ತವ ಗುಣಕೃತನಾಮಧೇಯಾನಿ ವಚನಗೋಚರಾಣಿ ಭವಂತು' ಎಂದು ಐದನೇ ಸ್ಕಂಧದಲ್ಲಿ 'ಯದ್ವ್ಯಾಜಹಾರ ವಿವಶೋ ನಾಮ ಸ್ವಸ್ತ್ಯಯನಂ ಹರೇಃ' ನಾಮವ್ಯಾಹರಣಂ ವಿಷ್ಣೋಃ' ಎಂದು ಆರನೇ ಸ್ಕಂಧದಲ್ಲಿ 'ಹರೇರ್ನಾಮ- ಪದೈರುದಾಹೃತೈಃ' 'ವೈಕುಂಠನಾಮಗ್ರಹಣಮ್' 'ಉತ್ತಮಶ್ಲೋಕನಾಮ ಯತ್' 'ಭಗವನ್ನಾಮ ಮಂಗಲಮ್' ಭಗವನ್ನಾಮ ಗೃಣನ್' 'ತೀರ್ಥಪದಾನುಕೀರ್ತನಾತ್' 'ಹರೇರ್ನಾಮ ಗೃಣನ್ ಪುತ್ರೋಪಚಾರಿತಮ್' 'ಸಂಕೀರ್ತನಂ ಭಗವತೋ ಗುಣಕರ್ಮನಾಮ್ನಾಮ್' 'ನಾರಾಯಣೇತಿ ಯನ್ನಾಮ ಸಕೃಚ್ಛ್ರವಣಾದಿಪ್ರಸ್ತುತೇ' 'ಮುಹುಃ ಶ್ವಸನ್ ವಕ್ತಿ ಹರೇರ್ಜಗತ್ಪತೇ ನಾರಾಯಣ' ಎಂದು ಏಳನೇ ಸ್ಕಂಧದಲ್ಲಿ 'ಶ್ರವಣಮಂಗಲನಾಮಧೇಯ' ಮುಂತಾಗಿ ಎಂಟನೇ ಸ್ಕಂಧದಲ್ಲಿ 'ಯನ್ನಾಮ ಸ್ಮೃತಿಮಾತ್ರ' ಎಂದು ನವಮಸ್ಕಂಧದಲ್ಲಿ 'ಯನ್ನಾಮ ಗೃಹ್ಣನ್ನಖಿಲಾನ್ ಶ್ರೋತೃನ್' 'ನಾಮಾನಿ ರೂಪಾಣಿ ಚ ಮಂಗಲಾನಿ ತೇ' ಮುಂತಾಗಿ ಹತ್ತನೇ ಸ್ಕಂಧದಲ್ಲಿ 'ಶೃಣ್ವನ್ ಸುಭದ್ರಾಣಿ ರಥಾಂಗಪಾಣೇರ್ಗೀತಾನಿ ನಾಮಾನಿ ತದರ್ಥಕಾನಿ' ಎಂದು ಹನ್ನೊಂದನೇ ಸ್ಕಂಧದಲ್ಲಿ 'ಯನ್ನಾಮಧೇಯಮ್' 'ವಿಮುಕ್ತಕರ್ಮಾರ್ಗಲಃ' ಎಂದು ಹನ್ನೆರಡನೇ ಸ್ಕಂಧದಲ್ಲಿ ಹೀಗೆ ಪ್ರತಿಯೊಂದು ಸ್ಕಂಧದಲ್ಲಿಯೂ ಈ ಪ್ರಮೇಯವು ಉಕ್ತವಾಗಿದೆ. ಆದ್ದರಿಂದ ಷಷ್ಠಸ್ಕಂಧದ ಮುಖ್ಯವಿಷಯವೆಂದಾಗುವುದಿಲ್ಲ. ಈ ಕಾರಣದಿಂದಾಗಿ ಪ್ರಕೃತ ಅನುಕ್ರಮಣಿಕಾದಲ್ಲಿ ಈ ವಿಷಯವನ್ನು ತ್ಯಜಿಸಿರುವ ಸಂಭವವಿದೆ.

ಭಗವತಾ ಎಂದರೆ ಪೂಜ್ಯರಾದ ತಮ್ಮಿಂದ ಎಂದು ಅರ್ಥ. ತತ್ತ್ವವಿವೇಕಟೀಕೆಯಲ್ಲಿ 'ಭಗವಾನ್ ಇತಿ ಪೂಜಾರ್ಥಂ' ಎಂದು ಹೇಳಿದೆ. ಯೋಗ್ಯವಾದ

ಐಶ್ವರ್ಯಾದಿಗಳುಳ್ಳ ಎಂದೂ ಅರ್ಥ. ಇದರಿಂದ ಶುಕಾಚಾರ್ಯರು ಮಾಡುವ ಉಪದೇಶ ಧನದ ಆಸೆಯಿಂದಲ್ಲವೆಂದು ಸೂಚಿತವಾಗುವುದು.

'ನಿವೃತ್ತಿಮಾರ್ಗಃ' ನಿತರಾಂ ವೃತ್ತಿಃ ಅಂದರೆ ಯಾವಾಗಲೂ ಅಲ್ಲೇ ಇರುವುದು ಅಂದರೆ ಎಂದಿಗೂ ತಿರುಗಿ ಬರದಿರುವುದು ಆದ್ದರಿಂದ ನಿವೃತ್ತಿ ಎಂದರೆ ಮೋಕ್ಷ ಎಂದು ಅರ್ಥ. ನಿವೃತ್ತಿಮಾರ್ಗ ಎಂದರೆ ಮೋಕ್ಷದ ಮಾರ್ಗ ಎಂದು ಅರ್ಥ.

'ಮುಕ್ತಿರ್ಹಿತ್ವಾನ್ಯಥಾರೂಪಂ ಸ್ವರೂಪೇಣ ವ್ಯವಸ್ಥಿತಿಃ' ಎಂದು ಪ್ರಮಾಣವಿರುವುದರಿಂದ ಅನ್ಯಥಾರೂಪನಿವೃತ್ತಿ ಎಂದರೆ ಮೋಕ್ಷ ಎಂದು ಅರ್ಥ. ಅಂತಹ ಮೋಕ್ಷದ ಮಾರ್ಗ ಎಂದಾದರೂ ಅರ್ಥಮಾಡಿಕೊಳ್ಳಬಹುದು.

ಭಾಗವತದಲ್ಲಿ ಸೃಷ್ಟ್ಯಾದಿಗಳನ್ನು ಸ್ಪಷ್ಟವಾಗಿ ನಿರೂಪಿಸಿದ್ದಾರೆ. ಆ ಸೃಷ್ಟ್ಯಾದಿಗಳು ಮುಕ್ತಿಗೆ ಅನುಪಯುಕ್ತವಾಗಿವೆ. ಆದ್ದರಿಂದ ನಿವೃತ್ತಿಮಾರ್ಗವು ಭಾಗವತದಲ್ಲಿ ಕಥಿತವಾಗಿದೆ ಎಂದು ಹೇಳಿದ್ದು ಅಸದನುವಾದವಾಗುತ್ತದಲ್ಲ ? ಎಂಬ ಶಂಕೆಯು ಬರುತ್ತದೆ.

ಆದ್ದರಿಂದ ಯಥಾ ಎಂಬ ಭಾಗವತವು ಪ್ರವೃತ್ತವಾಗಿದೆ. ಯಥಾ ಎಂದರೆ ಸಮ್ಯಕ್ ಎಂದರ್ಥ. ಇಲ್ಲಿಯ ಸೃಷ್ಟ್ಯಾದಿಕಥನವು ಸಮ್ಯಕ್ ಆಗಿದೆ ಎಂದರೆ ಮುಕ್ತಿಗೆ ಉಪಯುಕ್ತವಾಗಿದೆ ಎಂತಲೇ ಅರ್ಥ. ಇದರ ಹೊರತು ಮತ್ತೊಂದಲ್ಲ. 'ಅಥಾತೋ ಬ್ರಹ್ಮಜಿಜ್ಞಾಸಾ' 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರಗಳಿಂದ ಜನ್ಮಾದಿಕಾರಣತ್ವೇನ ಇತರವ್ಯಾವೃತ್ತನಾದ ಭಗವಂತನ ಜಿಜ್ಞಾಸೆಯನ್ನು ಮಾಡಬೇಕೆಂದು ವ್ಯಾಸರೇ ಹೇಳಿದ್ದಾರೆ. ಆದ್ದರಿಂದ ಮೋಕ್ಷೋಪಯುಕ್ತತೆಯು ಪಾಮರರಿಂದ ಹಿಡಿದು ಅಮರರವರೆಗೆ ದೃಢವಾಗಿ ಅನುಭವಾರೂಢವಾಗಿದೆ ಎಂದು ತಿಳಿಯಬೇಕು.

ಮತ್ತೊಂದು ಶಂಕೆ. **ಯಥಾ** ಹೇಗೆ **ಭಗವತಾ** ನಿಮ್ಮ ತಂದೆಯಾದ ವ್ಯಾಸರಿಂದ ನಿಮಗೆ ಹೇಳಲ್ಪಟ್ಟಿತ್ತೋ **ಯಥಾ** ಹೇಗೆ ನಿಮ್ಮಿಂದ ನನಗೆ ಹೇಳಲ್ಪಟ್ಟಿತ್ತೋ ಎಂದು ಅರ್ಥಮಾಡಬೇಕು. 'ಯೋಗ್ಯತಾವಿಪ್ಸಾನತಿವೃತ್ತಿಸಾದೃಶ್ಯಾನಿ ಯಥಾರ್ಥಾಃ' ಎಂದು ಹೇಳಿದೆ. 'ಯಥಾऽಸಾದೃಶ್ಯೇ' ಎಂದು ನಿಷೇಧಿಸಿದ ಸಮಾಸತ್ವಕ್ಕೆ ಅನುಕೂಲವಾದ ಸಾದೃಶ್ಯ ಎಂಬ ಅರ್ಥವನ್ನು ಹೇಳಲು ಬರುವಾಗ ಅನುಶಿಷ್ಟವಾಗದಿರುವ ಸಮ್ಯಕ್ ಎಂಬ ಅರ್ಥವನ್ನು ಹೇಳುವುದು ಯಾಕೆ ? ಎಂಬ ಪ್ರಶ್ನೆಗೆ ಸಮಾಧಾನ ಹೀಗೆ ತಿಳಿಯಬೇಕು. ಸದಾಶಿವನ ಸಾಕ್ಷಾತ್ ಅವತಾರನಾದ ತನಗೆ ತನ್ನ ತಂದೆಗಳಾದ

ಬಾದರಾಯಣರು ಹೇಗೆ ಉಪದೇಶ ಮಾಡಿರುವರೋ ಹಾಗೆ ತಾವು ಪರೀಕ್ಷಿತನಿಗೆ ಉಪದೇಶ ಮಾಡಿಲ್ಲ. ಅಲ್ಲಿಯೂ ತಾರತಮ್ಯವಿದೆ. ಆದ್ದರಿಂದ ಸಾದೃಶ್ಯ ಎಂಬ ಅರ್ಥವನ್ನು ಹೇಳಲು ಬರುವುದಿಲ್ಲ. ಹೀಗಾಗಿ ಸಮ್ಯಕ್ ಅಂದರೆ ಸರಿಯಾಗಿ ಎಂದು ಅರ್ಥ. ಅಂದರೆ ಯೋಗ್ಯತೆಗೆ ಅನುಗುಣವಾಗಿ ಎಂದು ಅರ್ಥ.

ಉಪಾಸನಾಪಾದದಲ್ಲಿಯ 'ಅತೋ ಯಥಾತ್ಮಶಕ್ತ್ಯೈವ' ಎಂಬ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನ ಮಾಡುವಾಗ 'ಆತ್ಮಶಕ್ತಿಮನತಿಕ್ರಮ್ಯ ಯಥಾತ್ಮಶಕ್ತಿ' ಎಂದು ಮಾಡಿದ ಮೇಲೆ 'ಅವ್ಯಯಾದಾಪ್ಸುಪಃ' ಎಂಬುದರ ಪ್ರಕಾರ ತೃತೀಯಾಕ್ಕೆ ಲೋಪ ಬರಬೇಕಾಗುವುದು. ಕಾರಣ ಯಥಾತ್ಮಶಕ್ತ್ಯಾ ಎಂದು ಹೇಗಾಯಿತು ಎಂದು ಶಂಕಿಸಿ

ಉಚ್ಯತೇ ಯಥಾ ಇತಿ ಭಿನ್ನಂ ಪದಂ ಸಮ್ಯಗ್ವಾಚಿ 'ನಿವೃತ್ತಿಮಾರ್ಗಃ ಕಥಿತ ಆದೌ ಭಗವತಾ ಯಥಾ' ಇತಿ ಯಥಾ ಎಂದು ಉತ್ತರ ಕೊಟ್ಟಿದ್ದಾರೆ. ಇಲ್ಲಿ ಯಥಾತ್ಮಶಕ್ತ್ಯಾ ಎಂಬುದು ಒಂದೇ ಪದವಲ್ಲ ಯಥಾ ಆತ್ಮಶಕ್ತ್ಯಾ ಎಂದು ಪದಗಳು ಭಿನ್ನವೇ ಆಗಿವೆ. ಇಲ್ಲಿ ಯಥಾ ಎಂದರೇ ಸಮ್ಯಕ್ ಎಂದು ಅರ್ಥ. ಹೀಗೆ ಭಿನ್ನ-ಭಿನ್ನಪದಗಳಾದುದ-ರಿಂದ ಯಥಾತ್ಮಶಕ್ತ್ಯಾ ಎಂಬ ಪ್ರಯೋಗವು ಯುಕ್ತವೇ ಆಗಿದೆ.

ಟೀಕಾಚಾರ್ಯರಾದರೂ ಯಥಾ ಎಂಬ ಶಬ್ದಕ್ಕೆ ಮೇಲೆ ಹೇಳಿದ ನಾಲ್ಕು ಅರ್ಥಗಳನ್ನು ಬಿಟ್ಟು ಮೂಲಕಾರರು ಹೇಳದಿರುವ ಸಮ್ಯಕ್ ಎಂಬ ಅರ್ಥವನ್ನು ಹೇಗೆ ಹೇಳಿದರು. ಅದನ್ನು ಪ್ರಕೃತ ದೃಷ್ಟಾಂತವಾಗಿ ಹೇಗೆ ಕೊಡುವುದು ಎಂದು ಶಂಕೆಯು ಬರುತ್ತದೆ. ಅನ್ಯಥಾನುಪಪತ್ತಿಯಂತೆ ಅವ್ಯಯತ್ವವೂ ಇದಕ್ಕೆ ಗಮಕವಾಗಿದೆ ಆದ್ದರಿಂದ ಯುಕ್ತವಾಗುತ್ತದೆ. ಅವ್ಯಯವಾಗದಿದ್ದಲ್ಲಿ ಕರ್ಮನಿರ್ಣಯಟೀಕೆಯಲ್ಲಿ ಯುಕ್ತ ಎಂಬ ಪದಕ್ಕೆ ಶೋಭನವೆಂದರ್ಥ ಮಾಡಿ 'ಯದಾಹ ಭಿಕ್ಷುಃ ಬಾಲಕ್ರೀಡಾ ವಾಸುದೇವಸ್ಯ ಯುಕ್ತಾ' ಇತ್ಯುಕ್ತಿಃ ಅತ್ರ ಕೈಮುತ್ಯಂ ಸೂಚಯತಿ ಎಂದು ಹೇಳಿದ್ದಕ್ಕೆ ಕೈಮುತ್ಯ ಸೂಚಿಸುವರು. ಟೀಕಾಚಾರ್ಯರು ಹೀಗೆ ವಿವರಿಸಲು ಆಚಾರ್ಯರ ವಚನವೇ ಮೂಲವಾಗಿದೆ. 'ಯೋಗ ಉಪಾಯೋ ವಯುನಂ ಜ್ಞಾನಂ' 'ದೃಷ್ಟಾ ಯೋಗಾಃ ಪ್ರಯುಕ್ತಾಶ್ಚ ಪುಂಸಾಂ ಶ್ರೇಯಃಪ್ರಸಿದ್ಧಯೇ' 'ತ್ವದ್ದತ್ತಯಾ ವಯುನಯೇದಮಚಷ್ಟ ವಿಶ್ವಂ' ಎಂಬ ಗೀತಾಭಾಷ್ಯ-ಈಶಾವಾಸ್ಯಭಾಷ್ಯಗಳು ಇದಕ್ಕೆ ಸಜಾತೀಯವೆಂದು ತಿಳಿಯಬೇಕು.

ನಾಮಕೀರ್ತನದಿಂದ ನಾಶವಾಯಿತು ಎಂದು ಹೇಳಿದರೆ ಜ್ಞಾನವಿಲ್ಲದೆ ಸಾಕ್ಷಾತ್ ಆಗಿ ನಾಶವಾಯಿತೇ ಎಂಬ ಶಂಕೆಯನ್ನು 'ಕ್ರಮಯೋಗೋಪಲಬ್ಧೇನ' ಎಂಬ ಮಾತಿನಿಂದ ನಿವಾರಿಸುವರು. ಕ್ರಮಸ್ಯ ತರತಮಭಾವದ ಯೋಗ ಸಂಬಂಧ ಉಳ್ಳ ಯಾವ ವೈರಾಗ್ಯಾದಿಗಳುಂಟೋ ಅದರಿಂದ ಅಥವಾ ವೈರಾಗ್ಯ-ಭಕ್ತಿ-ಉಪಾಸನಾ-ಜ್ಞಾನ ಎಂಬ ಕ್ರಮದ ಸಂಬಂಧವುಳ್ಳ ಅಥವಾ ಕ್ರಮವಾಗಿ ಇರುವ ಸಮಾಧ್ಯಾದಿ-ಸಾಧನದಿಂದ ಎಂದರ್ಥ. ಜ್ಞಾತನಾದ ಪೂರ್ಣನಾದ ಭಗವಂತನಿಂದ **ಯತ್** ಯಾವ ನಿವೃತ್ತಿಮಾರ್ಗದಿಂದ **ಅಸಂಸೃತಿಃ** ಸಂಸಾರಾಭಾವವು. ಅಸಂಸೃತಿ ಎಂಬಲ್ಲಿ ಸುಲೋಪವಾಗದಿರುವುದು 'ರಕ್ಷೋಹಾಗಮಲಘ್ವಸಂದೇಹಾಃ' ಎಂಬ ಮಹಾಭಾಷ್ಯಾನುಸಾರ ತಿಳಿಯಬೇಕು. ಇದನ್ನು ಅವಿರೋಧೋಽತ್ರ ಎಂಬ ಅನುವ್ಯಾಖ್ಯಾನದ ವ್ಯಾಖ್ಯಾನವಾದ ಶ್ರೀಮನ್ನ್ಯಾಯಸುಧಾದಲ್ಲಿ 'ಅವಿರೋಧೋ ವಿರೋಧಾಭಾವಃ' ಎಂಬ ಸುಧಾವಾಕ್ಯಾರ್ಥಚಂದ್ರಿಕಾದಲ್ಲಿ ತಿಳಿಯಬೇಕು.

**ಕ್ರಮಸ್ಯ** ಅಂದರೆ ನಿಯತೈಕಪ್ರಕಾರತೆಯ 'ತೈಃ ಕ್ರಮೇಣೈವ ತೈರ್ವರ್ಣೈಃ' ಮುಂತಾಗಿ ಹೇಳಿದೆ. **ಯೋಗೇನ ಸಹ** ಯೋಗಸಾಮರ್ಥ್ಯದಿಂದ ವಸಿಷ್ಠಾದಿಗಳಿಂದ ದೃಷ್ಟವಾದ **ಬ್ರಹ್ಮಣಾ** ವೇದದಿಂದ **ಅಸಂಸೃತಿಃ ಕಥಿತಾ** ಎಂದು ವಿಭಕ್ತಿವಿಪರಿಣಾಮವನ್ನು ಮಾಡಿಕೊಂಡು ಅನ್ವಯ ಮಾಡಿಕೊಳ್ಳಬೇಕು.

'ಬ್ರಹ್ಮ ಪ್ರೋಕ್ತಂ ತಪೋಽಧ್ಯಾತ್ಮವೇದಜ್ಞಾನೇಷು ಸೂರಿಭಿಃ' ಎಂದು ವಿಶ್ವಕೋಶವಿದೆ. ಆದ್ದರಿಂದ ಬ್ರಹ್ಮಣಾ ಎಂದರೆ ಜ್ಞಾನದಿಂದ ಎಂದು ಅರ್ಥ. ಕ್ರಮಯೋಗಾತ್ ಉತ್ತರೋತ್ತರಪ್ರವೇಶ ಕ್ರಮದಿಂದ ಉಪಾಯದಿಂದ ಭಗವದಂತರಂಗದ್ವಾರರಾದ ಬ್ರಹ್ಮದೇವರ ಜೊತೆಗೆ ಎಂದೂ ಅರ್ಥ.

ಜೊತೆಗೆ ಎಂದು ಅರ್ಥಹೇಳುವ ಸಹ ಇತ್ಯಾದಿ ಪದಗಳು ಇಲ್ಲದೇ ಇದ್ದುದರಿಂದ ಹೇಗೆ ಅನ್ವಯ ಮಾಡಿಕೊಳ್ಳುವುದು ಎಂದು ಶಂಕಾ ಬಂದರೆ

'ವೃದ್ಧೋ ಯೂನಾ' ಎಂದು ಪ್ರಯೋಗವು ಪ್ರಸಿದ್ಧವಾಗಿದೆ. ಇಲ್ಲಿ ಸಹ ಎಂಬ ಶಬ್ದವಿಲ್ಲ. ಆದರೂ ಸಹ ಎಂಬ ಪದವನ್ನು ಇಟ್ಟುಕೊಂಡು ಅನ್ವಯವನ್ನು ಮಾಡಿಕೊಳ್ಳಬೇಕು. ಹಾಗೆಯೇ ಪ್ರಕೃತದಲ್ಲಿಯೂ ಬ್ರಹ್ಮಣಾ ಸಹ ಎಂದು ಅನ್ವಯವನ್ನು ತಿಳಿಯಬೇಕು. 'ಬ್ರಹ್ಮಲೋಕಾತ್ಸಹಾಮುನಾ'

**ಬ್ರಹ್ಮಣಾ ಸಹ ತೇ ಸರ್ವೇ ಸಂಪ್ರಾಪ್ತೇ ಪ್ರತಿಸಂಚರೇ ।
ಪರಸ್ಯಾಂತೇ ಪರಾತ್ಮಾನಃ ಪ್ರವಿಶಂತಿ ಪರಂ ಪದಮ್ ॥**

ಅಣುಭಾಷ್ಯ-ಭಾಷ್ಯಗಳಲ್ಲಿ ಸಹ ಶಬ್ದವು ಇದೆ. ॥೧॥

**ಪ್ರವೃತ್ತಿಲಕ್ಷಣಶ್ಚೈವ ತ್ರೈಗುಣ್ಯವಿಷಯೋ ಮುನೇ ।
ಯೋಽಸಾವಲೀನಪ್ರಕೃತೇರ್ಗುಣಸರ್ಗಃ ಪುನಃ ಪುನಃ ॥೨॥**

**ಮುನೇ** ಮನನಶೀಲರಾದ ಶುಕಾಚಾರ್ಯರೇ **ಯಃ** ಪ್ರವೃತ್ತಿಧರ್ಮಾಚರಣೆ ಎಂಬ ಯಾವ ಮಾರ್ಗವು **ಅಲೀನಪ್ರಕೃತೇಃ** ಕಾಮ-ಕರ್ಮಗಳಿಂದ ದೂಷಿತವಾದ ಮನಸ್ಸಿನ ದೋಷವನ್ನು ಕಳೆಯುವ ಸಾಮರ್ಥ್ಯವಿಲ್ಲದ್ದರಿಂದ ಪ್ರಕೃತಿ (ಲಿಂಗಶರೀರ) ಶಕ್ತಿಯು ನಷ್ಟವಾಗದಿರುವ ಜೀವನಿಗೆ **ಪುನಃ ಪುನಃ** ಮತ್ತೆ ಮತ್ತೆ **ಗುಣಸರ್ಗಃ** ಗುಣಕಾರ್ಯವಾದ ದೇಹದ ಉತ್ಪತ್ತಿಗೆ ಕಾರಣವೋ ಸತ್ತ್ವಾದಿಗುಣಗಳಿಂದ ಸೃಷ್ಟಿಗೆ ಕಾರಣವೋ **ಅಸೌ** ಆ **ತ್ರೈಗುಣ್ಯವಿಷಯಃ** ಪ್ರಾಕೃತಗಳಾದ ಇಂದ್ರ ಮೊದಲಾದ ದೇವತಾಸ್ಥಾನಗಳನ್ನು ತಂದು ಕೊಡುವ ಸ್ವರ್ಗಾದಿಗಳನ್ನು ಕೊಡುವ **ಪ್ರವೃತ್ತಿಲಕ್ಷಣ ಏವ** ಪ್ರವೃತ್ತಿಧರ್ಮಾಚರಣ ಎಂಬ ಮಾರ್ಗವೂ **ಚ** ಹೇಳಲ್ಪಟ್ಟಿತು.

'ಬ್ರಹ್ಮವರ್ಚಸಕಾಮಸ್ತು ಯಜೇತ ಬ್ರಹ್ಮಣಸ್ಪತಿಂ' ಇತ್ಯಾದಿವಚನದಿಂದ ಪ್ರವೃತ್ತಿಕರ್ಮಗಳನ್ನು ಕಾಮ್ಯಕರ್ಮಗಳನ್ನು ಹೇಳಿದ್ದಾರೆ. ಈ ಕಾಮ್ಯಕರ್ಮಗಳಿಗೆ ಅನಿತ್ಯವಾದ ಸ್ವರ್ಗಾದಿಗಳೇ ಫಲವಾಗಿವೆ ಎಂದು 'ತ್ರೈಗುಣ್ಯ...' ಎಂಬ ವಚನದಿಂದ ಹೇಳುತ್ತಿದ್ದಾರೆ. ಪ್ರವೃತ್ತಿರೂಪವಾದ ಧರ್ಮವು ನಿತ್ಯಸುಖಸಾಧನವಾದ ನಿವೃತ್ತಿಮಾರ್ಗಕ್ಕಿಂತಲೂ ವಿಲಕ್ಷಣವಾಗಿದೆ ಎಂಬುದನ್ನು 'ಯೋಽಸೌ...' ಎಂಬ ವಚನದಿಂದ ಹೇಳುತ್ತಿದ್ದಾರೆ. 'ಅಲೀನಪ್ರಕೃತೇಃ' ಎಂಬುದರಿಂದ ಆ ಫಲವೂ ಅನಿತ್ಯವೆಂದು ಹೇಳಿದಂತಾಯಿತು. 'ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ' ಎಂದಿದೆಯಷ್ಟೇ.

ಅಥವಾ ಪೂರ್ವಾರ್ಧ ಬೇರೆ ವಾಕ್ಯ. ಉತ್ತರಾರ್ಧ ಬೇರೆ ವಾಕ್ಯ. ಪ್ರಕೃತಿಶಕ್ತಿಯು ಕುಗ್ಗದಿರುವ ಜೀವನ ಸತ್ವಾದಿಗುಣನಿಮಿತ್ತಕ ಉತ್ಪತ್ತಿಯನ್ನು ಮೂರನೇ ಸ್ಕಂಧದಲ್ಲಿ ಹೇಳಿದರು ಎಂದನ್ವಯ. ಅಥವಾ **ಪ್ರವೃತ್ತಿಲಕ್ಷಣಃ** ಪ್ರವೃತ್ತಿಧರ್ಮಫಲವಾದ ಪಿತೃಯಾನವೆಂಬ ಮಾರ್ಗವು 'ದಕ್ಷಿಣೇನ ಪಥಾರ್ಯಮ್ಣಃ ಪಿತೃಲೋಕಂ ವ್ರಜಂತಿ ತೇ' ಇತ್ಯಾದಿ ವಾಕ್ಯದಿಂದ ಮೂರನೇ ಸ್ಕಂಧದಲ್ಲಿ ಹೇಳಲ್ಪಟ್ಟಿತು ಎಂದೂ ಅರ್ಥ. ॥೨॥

ಪ್ರವೃತ್ತಿಲಕ್ಷಣಃ ಕಾಮ್ಯಕರ್ಮಪ್ರವೃತ್ತಿರಿತಿ ಲಕ್ಷಣಂ ನಾಮ ಯಸ್ಯ ಎಂದು ಪ್ರವೃತ್ತಿ ಎಂಬ ಹೆಸರಿನ ಎಂದೂ ಅರ್ಥ. 'ಲಕ್ಷಣಂ ನಾಮ್ನಿ..' ಎಂದು ವಿಶ್ವವಿದೆ. 'ಆಲೀನಪ್ರಕೃತೇಃ' ಎಂಬಲ್ಲಿ ಪಂಚಮೀವಿಭಕ್ತಿಯು ಲ್ಯಬ್ಲೋಪನಿಮಿತ್ತವಾಗಿದೆ. **ತಾಂ ಉಪಾದಾನೀಕೃತ್ಯ** ಅನಷ್ಟವಾದ ಪ್ರಕೃತಿಯನ್ನು ಉಪಾದಾನ ಮಾಡಿ ಪುನಃ ಉತ್ಪತ್ತಿಯಾಗುವುದು ಎಂದರ್ಥ. ||೨||

**ಅಧರ್ಮಲಕ್ಷಣಾ ನಾನಾನರಕಾಶ್ಚೋಪವರ್ಣಿತಾಃ |**
**ಮನ್ವಂತರಶ್ಚ ವ್ಯಾಖ್ಯಾತ ಆದ್ಯಃ ಸ್ವಾಯಂಭುವೋ ಯತಃ ||೩||**

**ಅಧರ್ಮಲಕ್ಷಣಾಃ** ಪಾಪದಿಂದ ತಿಳಿದು ಬರುವ ಅನುಭವಿಸಲ್ಪಡುವ ಬೇರೆ ಬೇರೆ ಹೆಸರಿನಿಂದ ಕರೆಯಲ್ಪಡುವ ಅಥವಾ ಅಧರ್ಮವನ್ನು ತಿಳಿಸಿಕೊಡುವ **ನಾನಾನರಕಾಃ ಚ** ಅನೇಕ ಬಗೆಯ ನರಕಗಳು **ಉಪವರ್ಣಿತಾಃ** ಪಂಚಮಸ್ಕಂಧದ ಕೊನೆಯಲ್ಲಿ ತಮ್ಮಿಂದ ವಿವರಿಸಲ್ಪಟ್ಟಿತು. **ಯತಃ** ಯಾವ ಮನ್ವಂತರದಲ್ಲಿ **ಸ್ವಾಯಂಭುವಃ** ಬ್ರಹ್ಮ ಪುತ್ರರಾದ ಸ್ವಾಯಂಭುವ ಮನುರಾಜರಿದ್ದರೋ ಅಂತಹ **ಸ್ವಾಯಂಭುವಃ** ಬ್ರಹ್ಮದೇವರಿಂದ ಸೃಷ್ಟವಾದ **ಆದ್ಯಃ ಮನ್ವಂತರಃ** ಮೊದಲನೆಯ ಮನ್ವಂತರದ ವಿಚಾರವು **ವ್ಯಾಖ್ಯಾತಃ** ಚತುರ್ಥಸ್ಕಂಧದಲ್ಲಿ ವಿವರಿಸಲ್ಪಟ್ಟಿತು.

ಅಥವಾ **ಸ್ವಾಯಂಭುವಃ** ಬ್ರಹ್ಮಸೃಷ್ಟ ಮನುರಾಜರು **ಆದ್ಯಃ** ಹದಿನಾಲ್ಕು ಮನುಗಳಲ್ಲಿ ಮೊದಲಿಗರಾದರೂ ಆ ಮನ್ವಂತರ ಎಂದಾದರೂ ಅರ್ಥ. ಸ್ಕಂಧದ ಕ್ರಮ ತಪ್ಪಿಸಿ ಅನುವಾದ ಮಾಡಿದ್ದರಿಂದ ಎಲ್ಲ ಪ್ರಮೇಯಗಳೂ ಎಲ್ಲ ಸ್ಕಂಧಗಳಲ್ಲಿಯೂ ಯಥಾಯೋಗ್ಯವಾಗಿ ಸಂಕ್ಷೇಪ-ವಿಸ್ತಾರಗಳಿಂದ ಉಕ್ತವಾಗಿವೆ ಎಂದು ತಿಳಿಸಿದಂತಾಯಿತು ಎಂದು ಚೆಟ್ಟಿ ಅಭಿಪ್ರಾಯ.

**ಸತ್ಯಧರ್ಮರು**

ನರಕವೆಂಬ ಅಪಾಯದ ಪರಿಹಾರೋಪಾಯ ಪ್ರಶ್ನವೂ ಮನಸ್ಸಿನಲ್ಲಿ ದೃಢ ನಿರೂಢವಾದುದರಿಂದ ಮೊದಲು ಪ್ರತಿಪಾದನೀಯವಾದ ಕ್ರಮಪ್ರಾಪ್ತವಾದ ಚತುರ್ಥಸ್ಕಂಧದ ಮನ್ವಂತರ ಚರಿತ್ರೆ ಹೇಳುವುದನ್ನು ಒಂದು ಕ್ಷಣ ಉಪೇಕ್ಷಣವನ್ನು ಸಹನೆ ಮಾಡಿ ಅಧರ್ಮಲಕ್ಷಣಾಃ ಎಂಬ ಅರ್ಧಶ್ಲೋಕದಿಂದ ಪಂಚಮಸ್ಕಂಧದ ಅರ್ಥವನ್ನು ಅನುವಾದ ಮಾಡಿದ್ದಾರೆ ಎಂದು ಸತ್ಯಧರ್ಮರು ಹೇಳುತ್ತಾರೆ. ಹಾಗಾದರೆ ಅದನ್ನೇ ಪೂರ್ಣವಾಗಿ ಹೇಳಬಹುದಲ್ಲ ಎಂದರೆ ನರಕಗಳನ್ನೇ ಒಂದೇ ಸಾಲಾಗಿ

ಹೇಳಿದರೆ 'ಶ್ರವಣಾದೇವ ಮೂರ್ಛಾದೇಃ' ಎಂದಿರುವುದರಿಂದ ಮಹಾನರಕದ ವಿಷಯವನ್ನು ಕೇಳಿದರೆ ಮೂರ್ಛೆ ಬರುವುದು ಕಾರಣ ಮಧ್ಯದಲ್ಲಿ ನಾಲ್ಕನೇ ಸ್ಕಂಧದ ವಿಷಯ ವ್ಯವಧಾನ ರಾಜನಿಗೆ ಇಷ್ಟ ಎಂಬ ಅಭಿಪ್ರಾಯ ವ್ಯಾಸರಿಗೆ ಇದೆ ಆದ್ದರಿಂದ ವ್ಯತ್ಯಾಸದೋಷವಿಲ್ಲವೆಂದು ಭಾವ.

ವ್ಯಾಸರ ವಚನ ಯಾದೃಚ್ಛಿಕ ಎನ್ನಲಾಗುವುದಿಲ್ಲ 'ದ್ವೀಪವರ್ಷ' ಮುಂತಾದ ಒಂದೂವರಿ ಶ್ಲೋಕ (೪-ಅರ್ಧ ೫ಪೂರ್ಣ) ವ್ಯವಧಾನದಿಂದ ಮತ್ತೆ 'ಅಧುನೇಹ' ಮುಂತಾಗಿ (೬) ನರಕನಿವಾರಕವಾದ ಪ್ರಶ್ನೆ ಕೇಳಿರುವನು ಕಾರಣ ಯಾದೃಚ್ಛಿಕ ಕಲ್ಪಕವಾಗಲಾರದು. ಅಲ್ಲಿದೇ ಶ್ಲೋಕ ರಚಿಸಿದ ದ್ವೈಪಾಯನರಿಗೆ ಅಸರ್ವಜ್ಞತ್ವ ಬರಬೇಕಾಗುವುದು. 'ಅಧರ್ಮಲಕ್ಷಣಾಃ' ಎಂಬುದಕ್ಕೆ ಅಧರ್ಮಂ ಧರ್ಮರೂಪವಲ್ಲದ ಯಮರೂಪವನ್ನು ಲಕ್ಷಯಂತಿ ತಮ್ಮ ಪ್ರವೇಶಕ್ಕಿಂತ ಪೂರ್ವದಲ್ಲಿ ತೋರಿಸುವವು. ಆದ್ದರಿಂದ ಅಧರ್ಮಲಕ್ಷಣಾ ಎನಿಸುವವು. ಯಮರೂಪವೇ ಪಾಪಿಶಿಕ್ಷಕವಾದುದು. ಅದನ್ನೇ ಮುಂದೆ ಇಲ್ಲಿಯೇ 'ನ ತೇ ಯಮಂ ಪಾಶಭೃತಶ್ಚ ತದ್ಭಟಾನ್ ಸ್ವಪ್ನೇಽಪಿ ಪಶ್ಯಂತಿ ಹಿ ಚೀರ್ಣನಿಷ್ಕೃತಾಃ' ಎಂದು ಹೇಳಿದೆ. ।।೩।।

ನ ಅಸ್ತಿ ರತಿಃ ಕ್ವಚ ಇತಿ ನರಕಃ ಯಾವ ಸುಖವೂ ಇಲ್ಲದ ಲೋಕ ಎಂದರ್ಥ.

**ಪ್ರಿಯವತೋತ್ತಾನಪದೋರ್ವಂಶಸ್ತಚ್ಚರಿತಾನಿ ಚ ।**
**ದ್ವೀಪವರ್ಷಸಮುದ್ರಾದ್ರಿನದೀನದವನಾನಿ ಚ ।।೪।।**

ಹಿಂದಿನ ಶ್ಲೋಕದಿಂದ **ಯತಃ** ಎಂಬುದನ್ನು ಇಲ್ಲಿ ಅನ್ವಯಿಸಿಕೊಳ್ಳಬೇಕು. **ಯತಃ** ಯಾವ ಸ್ವಾಯಂಭುವಮನುವಿನಿಂದ ಹುಟ್ಟಿದ **ಪ್ರಿಯವ್ರತೋತ್ತಾನಪದೋಃ** ಪ್ರಿಯವ್ರತರಾಜ ಮತ್ತು ಉತ್ತಾನಪಾದರಾಜನ **ವಂಶಃ** ಸಂತತಿಯು **ತಚ್ಚರಿತಾನಿ ಚ** ಅವರ ಚರಿತ್ರೆಯೂ **ಉಪವರ್ಣಿತಾನಿ** ಚತುರ್ಥ ಪಂಚಮ ಸ್ಕಂಧಗಳಲ್ಲಿ ತಮ್ಮಿಂದ ವರ್ಣಿಸಲ್ಪಟ್ಟಿತು. **ದ್ವೀಪವರ್ಷಸಮುದ್ರಾದ್ರಿನದೀನದವನಾನಿ ಚ** ದ್ವೀಪ ವರ್ಷ ಸಮುದ್ರ ಪರ್ವತ ನದೀ ನದ ಮತ್ತು ವನಗಳನ್ನು ಪಂಚಮಸ್ಕಂಧದಲ್ಲಿ ವರ್ಣಿಸಿದ್ದೀರಿ.

ಸ್ವಾಯಂಭುವಶಬ್ದವು ಬ್ರಹ್ಮದೇವರ ಮಕ್ಕಳೆಲ್ಲರಿಗೂ ಸಾಧಾರಣವಾದುದರಿಂದ ಆ ಒಬ್ಬ ಮನುರಾಜರನ್ನೇ ಹೇಗೆ ಹೇಳುವುದೆಂಬ ಶಂಕೆ ಬರುತ್ತಿತ್ತು. ಸ್ವಾಯಂಭುವಶಬ್ದವೇ ರೂಢಿಯಿಂದ ಆ ಮನುರಾಜನನ್ನು ಹೇಳುವದು ಎನ್ನುವ ಹಾಗಿಲ್ಲ. ವಿಶೇಷ ಗಮಕವಿಲ್ಲದೇ ರೂಢಿಯನ್ನು ಇಟ್ಟುಕೊಳ್ಳುವಂತಿಲ್ಲ. ಅದೂ ಅಲ್ಲದೇ 'ಸ್ವಾಯಂಭುವ

ಕಯಾ ವೃತ್ತ್ಯಾ' ಎಂಬಲ್ಲಿ ನಾರದರನ್ನು ಸ್ವಾಯಂಭುವ ಶಬ್ದದಿಂದ ಕರೆದಿರುವುದರಿಂದ ಆ ಶಬ್ದವು ಮನುವಿನಲ್ಲಿ ರೂಢವೆಂದು ಹೇಳುವಂತಿಲ್ಲ. ಆದ್ದರಿಂದ ಶಂಕೆ ಹಾಗೆಯೇ ಉಳಿಯುತ್ತಿತ್ತು. ಪ್ರಿಯವ್ರತ-ಉತ್ತಾನಪಾದರ ವಂಶಕ್ಕೆ ಕಾರಣರೆಂದು ಹೇಳಿದ್ದರಿಂದ ಆ ಶಂಕೆಗೆ ಅವಕಾಶವಿಲ್ಲ ಎನ್ನುತ್ತಾರೆ ವಿಜಯಧ್ವಜರು.

ಯೋಗರೂಢವಾದುದರಿಂದ ಅತಿಪ್ರಸಕ್ತಿ ಇಲ್ಲವೆನ್ನುತ್ತಾರೆ ಸತ್ಯಧರ್ಮರು.

೩ನೇ ಶ್ಲೋಕದಲ್ಲಿಯ 'ಉಪವರ್ಣಿತಾಃ' ಎಂಬ ಪದವನ್ನು ಉಪವರ್ಣಿತಾನಿ ಎಂದು ಲಿಂಗವಿಪರಿಣಾಮ ಮಾಡಿ ಪ್ರಕೃತ ನಾಲ್ಕನೆಯ ಶ್ಲೋಕದಲ್ಲಿ ಅನ್ವಯಿಸಬೇಕು. ಯದ್ಯಪಿ ಸಮೀಪದಲ್ಲಿಯ ವ್ಯಾಖ್ಯಾತ ಎಂಬ ಪದವನ್ನೇ ವಿಪರಿಣಾಮ ಮಾಡುವುದು ನ್ಯಾಯ. ಆದರೂ ವ್ಯಾಖ್ಯಾತಃ ಎಂಬಲ್ಲಿಯ ಪುಲ್ಲಿಂಗವನ್ನು ನಪುಂಸಕಲಿಂಗವನ್ನಾಗಿಯೂ ಏಕವಚನವನ್ನು ಬಹುವಚನವನ್ನಾಗಿಯೂ ವಿಪರಿಣಾಮ ಮಾಡಬೇಕಾಗುವುದು ಕಾರಣ ಗೌರವ ಭಯದಿಂದ ಬಿಟ್ಟಿದೆ ಎನ್ನುವರು. ।।೪।।

**ಧರಾಮಂಡಲಸಂಸ್ಥಾನಂ ಭಾಗಲಕ್ಷಣಮಾನತಃ ।**
**ಜ್ಯೋತಿಷಾಂ ವಿವರಾಣಾಂ ಚ ಯಥೇದಮಸೃಜದ್ ವಿಭುಃ ।।೫।।**

**ಭಾಗಲಕ್ಷಣಮಾನತಃ** ವಿಭಾಗ-ಲಕ್ಷಣ-ಪರಿಮಾಣಗಳಿಂದ **ಧರಾಮಂಡಲಸಂಸ್ಥಾನಂ** ಭೂಮಂಡಲಸನ್ನಿವೇಶವೂ **ಜ್ಯೋತಿಷಾಂ (ಸ್ವರೂಪಂ)** ಸೂರ್ಯ ಮೊದಲಾದ ಜ್ಯೋತಿರ್ಗಣಗಳ ಸ್ವರೂಪವೂ **ವಿವರಾಣಾಂ (ಸಂಸ್ಥಾನಂ ಚ)** ಕೆಳಗಿನ ಲೋಕಗಳ ಸನ್ನಿವೇಶವೂ ಹೆಚ್ಚೇನು **ವಿಭುಃ** ಶ್ರೀಹರಿಯು **ಇದಂ** ಈ ಜಗತ್ತನ್ನು **ಯಥಾ ಅಸೃಜತ್** ಹೇಗೆ ಸೃಷ್ಟಿಸಿದನೋ (ಅದನ್ನೂ ದ್ವಿತೀಯ-ತೃತೀಯ-ಪಂಚಮ ಸ್ಕಂಧಗಳಲ್ಲಿ ಹೇಳಿದಿರಿ.) ।।೫।।

ಧರಾ ಭೂಮಿಯು ವ್ಯಾಖ್ಯಾತಾ ಹೇಳಲ್ಪಟ್ಟಿತು. ಮಂಡಲಂ ಸಂಸ್ಥಾನಂ ರಾಹು ಮುಂತಾದ ಮಂಡಲಸ್ಥಿತಿಯು ಹೀಗೂ ಅನ್ವಯಮಾಡಿ ಅರ್ಥವನ್ನು ಹೇಳಬಹುದು.

'ವಿಭುಪ್ರಭು ಪ್ರಥಮಂ ಮೋಹನಾವತಃ ಇತಿ ಸ ಹ್ಯೇವ ಪ್ರಾಭವತ್ ವಿವಿಧೋऽಭವತ್' ಎಂಬ ವಾರುಣಶಾಖೆಗೆ ಅನುಗುಣವಾಗಿ ಮತ್ತು 'ಸೋऽಕಾಮಯತ ಬಹು ಸ್ಯಾಂ ಪ್ರಜಾಯೇಯ' ಮುಂತಾಗಿ ಗೀತಾಭಾಷ್ಯೋಕ್ತ ಪ್ರಕಾರವಾಗಿ ವಿವಿಧಂ ಆಸೀತ್ ಇತಿ ಎಂಬ ವ್ಯುತ್ಪತ್ತಿಯನ್ನು ಮಾಡಿ ವಿಭುಃ ಎಂಬ ಪದಕ್ಕೆ ವಿವಿಧವಾಗಿ ಇದ್ದವನು ಎಂಬ ಅರ್ಥವನ್ನು ಮಾಡಿಕೊಳ್ಳಬೇಕು. ।।೫।।

ಹೇಳುವವರು ವಿವರಿಸಬೇಕಾದರೆ ಹೆಚ್ಚು ಸಂತೋಷದಿಂದ ಇರಬೇಕು. ಆದಕ್ಕಾಗಿ ತಮಗೆ ಹೇಳಿದ್ದನ್ನು ಗ್ರಹಿಸುವ ಸಾಮರ್ಥ್ಯವನ್ನು ಅನುವಾದದಿಂದ ಪ್ರಕಟಿಸಿ ಮುಂದೆ ಮುಖ್ಯವಾಗಿ ಹೇಳಲು ಇಚ್ಛಿಸಿದ್ದನ್ನು ಪರೀಕ್ಷಿತರು ಪ್ರಶ್ನಿಸುತ್ತಾರೆ-

**ಅಧುನೇಹ ಮಹಭಾಗ ಯಥೈವ ನರಕಾನ್ನರಃ ।**
**ನಾನೋಗ್ರಯಾತನಾನ್ನೇಯಾತ್ತನ್ಮೇ ವ್ಯಾಖ್ಯಾತುಮರ್ಹಸಿ ॥೬॥**

**ಮಹಾಭಾಗ** ಮಹನೀಯರೇ (**ಮಹಾಭಾಗ** ಪ್ರಕಾಶ ಮತ್ತು ಜ್ಞಾನ ಉಳ್ಳವರೇ) (ಮಾಹಾಭಾಂ ಪ್ರಕಾಶಂ ಜ್ಞಾನಂ ವಾ ಗಚ್ಛತಿ ಇತಿ ಮಹಾಭಾಗಃ ತತ್ಸಂಬುದ್ಧಿಃ) **ಇಹ** ಈ ಜೀವಲೋಕದಲ್ಲಿ **ನರಃ** ದುಷ್ಕರ್ಮ ಮಾಡಿದ ಜೀವನು **ಯಥಾ** ಯಾವ ಸಾಧನದಿಂದ **ನಾನೋಗ್ರಯಾತನಾನ್** ಅನೇಕ ಬಗೆಯ ತೀವ್ರ ದುಃಖವನ್ನನು ಭವಿಸಬೇಕಾದ **ನರಕಾನ್** ನರಕಗಳನ್ನು **ನೇಯಾತ್** ಹೊಂದುವುದಿಲ್ಲವೊ **ತತ್** ಅಂತಹ ಪಾಪನಾಶಕವಾದ ಸಮರ್ಥವಾದ ಉಪಾಯವನ್ನು **ಮೇ** ನನಗೋಸ್ಕರ **ಅಧುನಾ ಏವ** ಈಗಲೇ **ವ್ಯಾಖ್ಯಾತುಂ ಅರ್ಹಸಿ** ವಿವರಿಸಲು ಸಮರ್ಥರಾಗಿರುವಿರಿ.

**ಇಹ** ಪಾಪಿಗಳಲ್ಲಿ **ನರಃ ಚ** ಪಶ್ಚಾತ್ತಾಪವುಳ್ಳ ಮನುಷ್ಯನು ಎಂದರ್ಥ ಮಾಡಬಹುದು. **ಅರ್ಹಸಿ** ಎಂದು ಮಧ್ಯಮಪುರುಷ ಪ್ರಯೋಗದಿಂದ **ತ್ವಂ** ಎಂಬ ಪದ ದೊರೆಯುವುದು. ಇದರಿಂದ **ತ್ವಂ ಅರ್ಹಸಿ** ಎಂದಂತಾಯಿತು. ನರಕಕ್ಕೆ ಹೋಗುವವರು ಹೋಗುತ್ತಾರೆ. ನೀನ್ಯಾಕೆ ಇಷ್ಟು ಆಯಾಸ ಪಡುತ್ತಿರುವಿ ಎಂದರೆ ಮರಣ ಸನ್ನಿಹಿತನಾದ ನನಗೂ ನಿನ್ನಂತೆಯೇ ಲೋಕೋಪಕಾರ ಮಾಡಬೇಕೆಂಬ ಭಾವನೆ ಇದೆ. ಲೋಕೋಪಕಾರವಿದು ಭಗವಂತನ ಕರುಣೆಗೆ ಕಾರಣವಾಗಿದೆ ಈ ಅಭಿಪ್ರಾಯವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಪ್ರಶ್ನಿಸುತ್ತಿದ್ದಾನೆ ಎಂದು ಭಾವ. ನರಕಗಳನ್ನು ತಪ್ಪಿಸಿಕೊಳ್ಳಬೇಕೆಂಬ ಅಪೇಕ್ಷೆ ಯಾಕೆ ಎಂದರೆ ಹೇಳುವರು. **ನಾನೋಗ್ರಯಾತನಾನ್** ಅನೇಕವಾದ ಅತಿತೀವ್ರವಾದ ವೇದನೆಯುಳ್ಳ **ನಾನೋಗ್ರಯಾತನಾನ್** ಎಂಬುದು ಒಂದೇ ಪದ. ನಾನಾ ವಿಧ ಉಗ್ರಯಾತನೆಯುಳ್ಳ ಎಂದರ್ಥ. ಅಥವಾ ನಾನಾವಿಧ ವಿಕಾರ ಉಳ್ಳ ಕ್ರೂರರಾದ ಯಮದೂತರಿಂದ **ಯಾತನಾಃ** ತೀವ್ರ ವೇದನೆಯುಳ್ಳ ಎಂದೂ ಅರ್ಥ. **ತತ್** ಪರಿಹಾರಸಾಧನವನ್ನು **ನಾನಾ** ನಾನಾವಿಧವಾಗಿ **ವ್ಯಾಖ್ಯಾತುಂ ಅರ್ಹಸಿ** ಎಂದು ಅನ್ವಯ. ಅಧಿಕಾರಿಗಳು ಬಹಳ ರೀತಿಯವರಿರುವುದರಿಂದ ಸಾಧನವು ಬಹುವಿಧವಾಗಿ ಹೇಳಿದ್ದೇ ಇಷ್ಟಸಾಧಕವಾಗುವುದು ಎಂದು ಭಾವ.

ಅನಿಷ್ಟನಿವೃತ್ತಿಸಾಧನವನ್ನು ಮಾತ್ರ ಕೇಳಿದರೆ ಹೇಗೆ ? ಇಷ್ಟಪ್ರಾಪ್ತಿ ಎಂಬ ಪುರುಷಾರ್ಥದ ಇನ್ನೊಂದು ದಲವನ್ನು ಪ್ರಾರ್ಥಿಸಬೇಡವೇ ? ಇಷ್ಟರಿಂದ ನೀನು ಹೇಗೆ ಕೃತಾರ್ಥನಾದೆ ಎಂದರೆ **ನರಃ** ಎಂದು ಹೇಳುವರು. 'ಸುಪಾಂ ಸುಲುಕ್' ಎಂಬ ಸೂತ್ರದಿಂದ ಶಸ್ ಗೆ ಸು ಆದೇಶ ನರಾನ್ ಅನಶ್ವರಾನ್ ನಾಶರಹಿತವಾದ ಈಶ್ವರಲೋಕಗಳನ್ನು ಈಶ್ವರರೂಪವಿಶೇಷಗಳನ್ನು ಆಗಲಿ **ಇಯಾತ್** ಹೊಂದುವನೋ **ತತ್** ಅದನ್ನು **ವ್ಯಾಖ್ಯಾತುಮರ್ಹಸಿ** ಎಂದು ಆವೃತ್ತಿ ಮಾಡಿ ಅನ್ವಯ ಮಾಡಬೇಕು. ಅಜಾಮಿಲಾದಿ ಮುಕ್ತಿ ಭಗವದ್ದರ್ಶನಾದಿಗಳನ್ನು ಮುಂದೆ ಹೇಳುವುದರಿಂದ ಅದರ ಯುಕ್ತತೆಗಾಗಿ ಆವೃತ್ತಿಯು ಸಹ್ಯ. 'ನರೌ ತಾವವಿನಾಶಿತ್ವಾತ್' ಎಂದು ಋಗ್ಭಾಷ್ಯದಲ್ಲಿದೆ.

'ನಚೇದಿಹಾವೇದೀನ್ಮಹತೀ ವಿನಷ್ಟಿಃ' ಇಹ ಪಾಪಮಾಡಿದ ಜನ್ಮದಲ್ಲಿಯೇ ನ ಅವೇದೀತ್ ಚೇತ್ ಪಾಪದ ಪ್ರಾಯಶ್ಚಿತ್ತವನ್ನು ತಿಳಿಯದೇ ಹೋದಲ್ಲಿ ಮಹತೀ ವಿನಷ್ಟಿಃ ಅತಿಶಯ ಹಾನಿಯು ಎಂಬ ಶ್ರುತ್ಯರ್ಥವನ್ನು ಮನಸ್ಸಿನಲ್ಲಿಟ್ಟುಕೊಂಡು ಪ್ರಾಯಶ್ಚಿತ್ತಗಳಿಲ್ಲದೆ ನರಕಗಳನ್ನು ತಪ್ಪಿಸಿಕೊಳ್ಳಲಾಗುವುದಿಲ್ಲವೆಂದು ಹೇಳುತ್ತಾರೆ.

ವ್ಯರ್ಥವಾದ ಕಥೆಗಳಿಂದ ನಿನಗೇನು ಪ್ರಯೋಜನ ಅತಿ ಉಪಯುಕ್ತವಾದುದನ್ನು ಕೇಳು ಎಂದು ಶುಕಾಚಾರ್ಯರು ಸುಮ್ಮನೇ ಕೂಡಲಿಲ್ಲ. ಅವರಿಗೂ ಪರೀಕ್ಷಿತನ ದ್ವಾರಾ ಜನರನ್ನು ಉದ್ಧಾರಮಾಡಬೇಕು ಎಂಬ ಇಚ್ಛೆಯಿಂದ ಉತ್ತರಿಸುವರೆಂದು ಹೇಳುವರು-

**ಶ್ರೀಶುಕ ಉವಾಚ -**

**ನಚೇದಿಹೈವಾಪಚಿತಿಂ ಯಥಾಂಹಸಃ**
**ಕೃತಸ್ಯ ಕುರ್ಯಾನ್ಮನಉಕ್ತಿಪಾಣಿಭಿಃ ।**
**ಧ್ರುವಂ ಸ ವೈ ಪ್ರೇತ್ಯ ನರಕಾನುಪೈತಿ**
**ಯೇ ಕೀರ್ತಿತಾ ಮೇ ಭವತಸ್ತಿಗ್ಮಯಾತನಾಃ ॥೭॥**

**ಯಃ** ಯಾವನು **ಮನಉಕ್ತಿಪಾಣಿಭಿಃ** ಮನಸ್ಸು ಮಾತು ಮತ್ತು ಹಸ್ತಗಳಿಂದ ಉಪಲಕ್ಷಿತವಾದ ಎಲ್ಲ ಅವಯವಗಳಿಂದ **ಕೃತಸ್ಯ** ಮಾಡಿದ **ಅಂಹಸಃ** ಪಾಪಕ್ಕೆ **ಯಥಾ** ತಕ್ಕಂತೆ ಅಂದರೆ ಹೆಚ್ಚು ಪಾಪಕ್ಕೆ ಹೆಚ್ಚು ಸ್ವಲ್ಪ ಪಾಪಕ್ಕೆ ಸ್ವಲ್ಪ **ಅಪಚಿತಿಂ** ಪ್ರಾಯಶ್ಚಿತ್ತವನ್ನು **ಇಹೈವ** ಪಾಪ ಮಾಡಿದ ಈ ದೇಹದಿಂದಲೇ **ನ ಕುರ್ಯಾತ್ ಚೇತ್** ಮಾಡದಿದ್ದರೆ

(ಮಾಡದಿರುವನೋ) **ಸಃ** ಅವನು **ಪ್ರೇತ್ಯ** ಮೃತನಾದ ನಂತರ **ಮೇ** ನನ್ನಿಂದ **ಭವತಃ ಪ್ರತಿ** ನಿನ್ನನ್ನು ಕುರಿತು **ಕೀರ್ತಿತಾಃ** ಹೇಳಲ್ಪಟ್ಟ **ಯೇ** ಯಾವ **ತಿಗ್ಮಯಾತನಾಃ** ತೀವ್ರದುಃಖ ಕೊಡುವ **ನರಕಾನ್** ನರಕಗಳನ್ನು **ಧ್ರುವಂ** ನಿಶ್ಚಯವಾಗಿ **ಉಪೈತಿ** ಹೊಂದುವನು. ಇದು ಗಾಳಿಮಾತಲ್ಲ ಔಪಚಾರಿಕವಲ್ಲ **ವೈ** ಪರಂಪರೆಯಿಂದ **ಏವ** ಎಂದು ಹೇಳಿದ್ದರಿಂದ ಪಾಪಮಾಡಿದ ಜನ್ಮದಲ್ಲಿಯೇ ಮಾಡಿಕೊಂಡು ಪ್ರಾಯಶ್ಚಿತ್ತ ಸ್ವಲ್ಪವಾದರೂ ಜಾಗ್ರತೆಯಾಗಿ ದೊಡ್ಡ ಪಾಪವನ್ನು ಕಳೆಯುವುದು ಎಂದು ಫಲವನ್ನು ಸೂಚಿಸಿರುವರು. ಯಥಾ ಎಂಬುದರಿಂದ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತ ಆವಶ್ಯಕವೆಂದು ತಿಳಿಸಿದಂತಾಯಿತು. ವೈ ಪ್ರಸಿದ್ಧ. ಉಚ್ಯತೇ ಅರ್ಥಾ ಆಭಿಃ ಇತಿ ಉಕ್ತಯಃ ಎಂದರೆ ವಾಗಿಂದ್ರಿಯ ಅದರಿಂದ ಸಹಿತವಾದ ಪಾಣಿ ಹಸ್ತೋಪಲಕ್ಷಿತವಾದ ಅವಯವಗಳು ಎಂದು ಅರ್ಥ ಮಾಡಿರುವರು. ವೇದದ ಸಮ್ಮತಿ ಇದಕ್ಕೆ ಇರುತ್ತದೆ. 'ಹಿರಣ್ಯಪಾಣಿಮೂತಯೇ ಹಿರಣ್ಯಹಸ್ತೋ ಅಸುರಃ' ಮುಂತಾದ ಋಗ್ಭಾಷ್ಯ ಟೀಕಾಗಳಲ್ಲಿ '...ಹಿರಣ್ಯಂ ವರ್ಣತೋಽಪಿ ಚ । ರೂಪಂ ನಾರಾಯಣಸ್ಯೈವ ಪಾಣಿಶಬ್ದೋಪಲಕ್ಷಿತಮ್ । (ಭಾಷ್ಯ) ಸ್ವರ್ಣಪಾಣಿಃ ಸ್ವರ್ಣವರ್ಣಃ ಸ್ವರ್ಣಪಾಣಿಃ ಸ ಉಕ್ತಃ । ತಥಾಪಿ ಪಾಣ್ಯೋರೇವ ಹಿರಣ್ಯವರ್ಣತ್ವಂ ಲಭ್ಯತೇ ನ ಸರ್ವಾವಯವಿನಃ ಇತಿ ನ ವಾಚ್ಯಂ ಉಪಲಕ್ಷಣತ್ವಾತ್ಪಾಣಿಶಬ್ದಸ್ಯ ಇತ್ಯುಕ್ತಮ್ । ಪೃಥಕ್ ಪೃಥಕ್ ಸರ್ವೇಷಾಮಿತಿ ಯಾವತ್ ಪಾಣಿಪೂರ್ವಾಣಾಂ ಅಂಗಾನಾಂ ಹಿರಣ್ಯತ್ವವಿತ್ಯೈ ಇತ್ಯಾದ್ಯುಕ್ತಮ್ ॥

**ಸಾರಾಂಶ**

ಹಿರಣ್ಯಪಾಣಿಂ ಎಂಬ ವೇದದ ಅರ್ಥ ಬರೆಯುವಾಗ ಆಚಾರ್ಯರು ನಾರಾಯಣನ ಸಮಗ್ರವಾದ ಸ್ವರೂಪವೇ (ದೇಹವೇ) ಪಾಣಿ ಶಬ್ದದಿಂದಲೇ ಹೇಳಲ್ಪಟ್ಟ ಹಾಗಾದರೆ ಹೀಗೆ ಏಕೆ ಹೇಳಿದ್ದು ಎಂದು ಪ್ರತ್ಯೇಕ ಎಲ್ಲ ಅಂಗಗಳಿಗೂ ಸ್ವರ್ಣವರ್ಣ ಸ್ವರ್ಣಪಾಣಿ ಎಂದು ಹೇಳಿದೆ ಎಂದಿದ್ದಾರೆ. ಅವತಾರಿಕೆಯಲ್ಲಿ ಕೈಗಳಿಗೆ ಮಾತ್ರ ಹಿರಣ್ಯವರ್ಣತೆ ಬಂತಲ್ಲವೆಂದರೆ ಎಲ್ಲ ಅವಯವಿಗೆ ಬರಲಿಲ್ಲ ಎನ್ನಬೇಕಿಲ್ಲ. ಪಾಣಿ ಶಬ್ದ ಉಪಲಕ್ಷಣ ಎಂದಿದ್ದಾರೆ ಆಚಾರ್ಯರು ಟೀಕಾಕಾರರು. ಅದರಂತೆ ಇಲ್ಲಿಯೂ ಪಾಣಿ ಶಬ್ದ ದೇಹೋಪಲಕ್ಷಕವೆಂದು ಭಾವ ॥೭॥

ನಶ್ವರವಾದರೂ ಈ ಶರೀರ ಶಾಶ್ವತನಾದ ಈಶ್ವರನಿಗೆ ಯಾವಾಗಲೂ ಅಧೀನ-ವಾಗಿದೆ. ಅದರಲ್ಲಿಯೂ ಆಯುಷ್ಯ ಇಷ್ಟೇ ಎಂದು ಸರ್ವಸಾಧಾರಣವಾಗಿ

ತಿಳಿಯಲಾರದು. ಕಾರಣ ಮೊದಲೇ ಜಾಗ್ರತರಾಗಿರಬೇಕು ಎಂದು ಹೇಳಲು ಉತ್ಸುಕ ಮನಸ್ಸುಳ್ಳ ಶುಕರು **ಯಥಾ** ಎಂದು ಸೂಚಿಸಿದ್ದನ್ನೇ ವಿವರಿಸುವರು-

> **ತಸ್ಮಾತ್ಪುರೈವಾಶ್ವಿಹ ಪಾಪನಿಷ್ಕೃತೌ**
> **ಯತೇತ ಮೃತ್ಯೋರವಿಪದ್ಯದಾತ್ಮನಃ ।**
> **ದೋಷಸ್ಯ ದೃಷ್ಟ್ವಾ ಗುರುಲಾಘವಂ ಯಥಾ**
> **ಭಿಷಕ್ ಚಿಕಿತ್ಸೇತ ರುಜಾಂ ನಿದಾನವಿತ್ ॥೮॥**

**ತಸ್ಮಾತ್** ಮೇಲೆ ಹೇಳಿದಂತೆ ಅನರ್ಥವಾಗುವುದರಿಂದ **ಮೃತ್ಯೋಃ** ದೇಹ ವಿಯೋಗಕ್ಕೆ **ಪುರಾ ಏವ** ಮೊದಲೇ **ಆಶು** ತಡ ಮಾಡದೇ **ರುಜಾಂ** ರೋಗಗಳ **ನಿದಾನವಿತ್** ಆದಿಕಾರಣವನ್ನು ಮೂಲಕಾರಣವನ್ನು ತಿಳಿದ **ಭಿಷಕ್** ವೈದ್ಯನು **ಯಥಾ** ಹೇಗೆ **ದೋಷಸ್ಯ** ವಾತ ಮೊದಲಾದ ದೋಷದ **ಗುರುಲಾಘವಂ** ಆಧಿಕ್ಯ ಮತ್ತು ಅಲ್ಪತ್ವವನ್ನು **ದೃಷ್ಟ್ವಾ** ತಿಳಿದು **ಚಿಕಿತ್ಸೇತ** ರೋಗಕ್ಕೆ ಚಿಕಿತ್ಸೆ ಮಾಡುವನೋ **ತಥಾ** ಹಾಗೆ **ಆತ್ಮನಃ** ದೇಹಕ್ಕೆ ತನಗೆ **ಯದಾ** ಯಾವಾಗ **ಮೃತ್ಯೋಃ** ಅಂತಕನಿಂದ **ಅವಿಪತ್** ವಿಪತ್ತು-ರೋಗಾದಿಗಳು ಬರುವುದಿಲ್ಲವೋ **ತದಾ ಏವ** ಆಗಲೇ ಅಂದರೆ ಮಧ್ಯ ವಯಸ್ಸಿನಲ್ಲಿಯೇ (ಇದು ಪ್ರಾಯಿಕವಾಗಿ ಹೇಳಿದ್ದು ಪ್ರಾಥಮಿಕ ವಯಸ್ಸಿನಲ್ಲಿಯೂ ಪ್ರಮಾದವಾಗುವದುಂಟು ಆದಕ್ಕೂ ಮೊದಲೇ ಎಂದೂ ಅರ್ಥ) **ಆತ್ಮನಃ** ತನ್ನ **ದೋಷಸ್ಯ** ಪಾಪದ **ಗುರುಲಾಘವಂ** ಮಹತ್ವ ಅಲ್ಪತ್ವಗಳನ್ನು **ದೃಷ್ಟ್ವಾ** ವಿಚಾರ ಮಾಡಿ **ಯಥಾ** ಆದಕ್ಕೆ ತಕ್ಕಂತೆ **ಪಾಪನಿಷ್ಕೃತೌ** ಪಾಪದ ಪ್ರಾಯಶ್ಚಿತ್ತದಲ್ಲಿ (ಪರಿಹಾರದಲ್ಲಿ) **ಯತೇತ** ಪ್ರಯತ್ನಿಸಬೇಕು.

ಬಾಲ್ಯದಲ್ಲಿಯೂ ವೃದ್ಧಾಪ್ಯದಲ್ಲಿಯೂ ದುರ್ಬಲತೆ ಎಂಬ ವಿಪತ್ತು ಸಂಭವಿಸುವುದರಿಂದ ಯೌವನದಲ್ಲಿ ಸಮರ್ಥನಾಗಿರುವುದರಿಂದ ಆಗಲೇ ದ್ರವ್ಯ ಮೊದಲಾದುವನ್ನು ಸಂಪಾದಿಸಿ ಪಾಪ ಪರಿಹಾರ ಮಾಡಿಕೊಳ್ಳಬೇಕು ಎಂದು ಅಭಿಪ್ರಾಯ. ವೈದ್ಯನ ದೃಷ್ಟಾಂತದಿಂದ ತನಗೆ ದೋಷದ ಗುರುಲಾಘವ ಜ್ಞಾನ ಇಲ್ಲದೇ ಹೋದಲ್ಲಿ ದೊಡ್ಡವರಿಂದ ತಿಳಿದುಕೊಳ್ಳಬೇಕು. ಗುರೋಃ ಲಾಘವಂ ಎಂದು ವಿಗ್ರಹವನ್ನು ಮಾಡಿದಾಗ ಗುರುಗಳ ಮುಖದಿಂದ ಲಾಘವಾದಿಗಳನ್ನು ತಿಳಿದು ಎಂಬ ಅರ್ಥವು ಸೂಚಿತವಾಗುತ್ತದೆ. ಆಶು ಎಂದು ಹೇಳಿದ್ದರಿಂದ ಕಾಲಾತೀತವಾದ ಮೇಲೆ 'ದ್ವಿಗುಣಂ ವ್ರತಮರ್ಹತಿ' ಎಂಬ ವಾಕ್ಯದಂತೆ ಎರಡರಷ್ಟು ಪ್ರಾಯಶ್ಚಿತ್ತ

ಮಾಡಬೇಕಾಗುವುದು ಎಂಬುದನ್ನು ನೆನಪಿಸಿರುವರು. ಲಾಘವಂ ಎಂದರೆ ಸಣ್ಣ ಪ್ರಾಯಶ್ಚಿತ್ತ ಮಾಡಿದರೂ ದೊಡ್ಡ ಪಾಪ ಪರಿಹಾರವಾಗುವುದು. ಸ್ವಲ್ಪೇ ಹಣ ಖರ್ಚು ಮಾಡಿ ಸ್ವಲ್ಪಕಾಲ ಸ್ವಲ್ಪಾಯಾಸ ಸಾಧ್ಯತೆಯನ್ನು ಗುರುವಿನಿಂದ ತಿಳಿದು ಎಂದರ್ಥ. 'ಯದ್ಗುರುಃ ಸುಪ್ರಸನ್ನಸ್ಸನ್ ದದ್ಯಾತ್' 'ಆಚಾರ್ಯಃ ಪೂರ್ವರೂಪಮ್' 'ಆಚಾರ್ಯೋಽಪಾಸನಮ್' 'ಆಚಾರ್ಯಾದ್ಧ್ಯೇವ' ಮುಂತಾಗಿ ವಾಕ್ಯಗಳು ಇವೆ.

ಹಿಂದಿನ ಶ್ಲೋಕದಲ್ಲಿ **ಕುರ್ಯಾತ್** ಎಂದು ಹೇಳಿದ್ದನ್ನು ತಾವೇ **ಯತೇತ** ಎಂದು ವ್ಯಾಖ್ಯಾನ ಮಾಡಿದ ಶುಕಾಚಾರ್ಯರು ಮಧ್ಯದಲ್ಲಿ ವಿಘ್ನ ಬಂದರೂ 'ಪ್ರಾರಂಭ ಮಾತ್ರ ಮಿಚ್ಛಾ ವಾ ವಿಷ್ಣುಧರ್ಮೇ ನ ನಿಷ್ಫಲಾ' ಎಂದಿರುವುದರಿಂದ ಪ್ರಯತ್ನ ಮಾತ್ರದಿಂದಲೂ ಪಾಪ ಹೋಗುವುದೆಂಬುದನ್ನು ತಿಳಿಸಿರುವರು. 'ಅವಿಪದ್ಯತಾತ್ಮನಾ' ಎಂಬ ಪಾಠವೂ ಸುಂದರವೇ. ಅವಿಪತ್ ಯತಾತ್ಮನಾ ಎಂದು ಪದವಿಭಾಗವನ್ನೂ ಮಾಡಿಕೊಳ್ಳಬಹುದು. ಅಥವಾ ಅವಿಪದ್ಯತಾತ್ಮನಾ ಎಂದು ಒಂದೇ ಪದವೆಂದೂ ಗ್ರಹಣ ಮಾಡಬಹುದು. **ಯತಾತ್ಮನಾ** ಎಂದರೆ ಏಕಾಗ್ರಮನಸ್ಸಿನಿಂದ ಎಂದರ್ಥ. ಅಂದರೆ ಪ್ರಾಯಶ್ಚಿತ್ತ ಮಾಡುವಾಗಲೂ ಮತ್ತೆ ಪಾಪಸಂಪಾದಕ ಕರ್ಮ ಹುಟ್ಟದಂತೆ ಮನೋನಿಯಮನದಿಂದ ಎಂದು ಭಾವ. ಅವಿಪದ್ಯತಾತ್ಮನಾ ಮನಸ್ಸಿನಿಂದ ವಿಪತ್ತಿಯನ್ನು ಹೊಂದದಿರುವ ದೇಹದಿಂದ ತನ್ನಿಂದ ಮನಸ್ಸಿನಿಂದ ಎಂದು ಅರ್ಥ. **ರುಜಾನಿದಾನವಿತ್** ಎಂಬ ಪಾಠವೂ ಇದೆ. ಆಗ 'ಟಾಪಂ ಚೈವ ಹಲಂತಾನಾಮ್' ಎಂಬ ಪ್ರಕಾರ ಟಾಬಂತ ರುಜಾ ಶಬ್ದ ಎಂದು ತಿಳಿಯಬೇಕು. ।।೮।।

ರಾಜನು ತಾನು ಪ್ರಾಯಶ್ಚಿತ್ತ ಮಾಡುವುದು ಅವಶ್ಯವೆಂದು ತಿಳಿದಿದ್ದರೂ 'ರಥಸ್ಥಂ ಕೇಶವಂ ದೃಷ್ಟ್ವಾ ಸರ್ವಪಾಪೈಃ ಪ್ರಮುಚ್ಯತೇ' 'ಮಹಾತ್ಮವಚನಾತ್ ಶುದ್ಧೋ ಭವತಿ' 'ರಥಾರೂಢನಾದ ಶ್ರೀಹರಿಯನ್ನು ನೋಡಿದರೆ ಎಲ್ಲ ಪಾಪಗಳು ಹೋಗುವವು' 'ಮಹಾತ್ಮರ ಮಾತಿನಿಂದ ಶುದ್ಧಿಯಾಗುವುದು' ಎಂದು ವಾಕ್ಯಗಳಿರುವುದರಿಂದ ನೀವು ಹೇಳಿದ ಪ್ರಾಯಶ್ಚಿತ್ತ ಮಾಡದಿದ್ದರೂ ಪಾಪನಿವೃತ್ತಿ ಕೇಳಿ ಬರುವುದು. ಮತ್ತು 'ಮೃತೋ ನರಕಮಭ್ಯೇತಿ ಹ್ಯಗಮ್ಯಾಗಮನಾನ್ನರಃ । ನರಕೇ ಪತಂತಿ' ಎಂದು ಐದನೇ ಸ್ಕಂಧದಲ್ಲಿ ವಿವರಿಸಿದ್ದನ್ನು ಕೇಳುವುದರಿಂದ ಸಂದೇಹ ಪಡುವ ಮಂದ ಜನರ ಸಂದೋಹ (ಸಮೂಹ) ವನ್ನು ಆನಂದ ಪಡಿಸಲು ಅವರ ಸಂಶಯವಿಷಯವಾದ ಪ್ರಾಯಶ್ಚಿತ್ತ ವ್ಯರ್ಥವೆಂದು ಶಂಕಿಸುತ್ತಿದ್ದಾರೆ-

**ರಾಜೋವಾಚ -**

**ದೃಷ್ಟಶ್ರುತಾಭ್ಯಾಂ ಯತ್ಪಾಪಂ ಜಾನನ್ನಪ್ಯಾತ್ಮನೋಽಹಿತಮ್ ।**
**ಕರೋತಿ ಭೂಯೋ ವಿವಶಃ ಪ್ರಾಯಶ್ಚಿತ್ತಮಥೋ ಕಥಮ್ ॥೯॥**

**ಯತ್** ಯಾವ ಕಾರಣ **ದೃಷ್ಟಶ್ರುತಾಭ್ಯಾಂ** ಕಳ್ಳತನ ಮೊದಲಾದ ಅಪರಾಧ ಮಾಡಿದವರಿಗೆ ರಾಜರು ಮಾಡುವ ಶಿಕ್ಷೆಯನ್ನು ನೋಡಿಯೂ 'ಮೃತೋ ನರಕಮಭ್ಯೇತಿ ಹ್ಯಗಮ್ಯಾಗಮನಾನ್ನರಃ' ಎಂಬ ಶ್ರುತಿಯಿಂದ ನರಕವಾಗುವುದೆಂದು ಕೇಳಿಯೂ **ಪಾಪಂ** ಪಾಪವು **ಆತ್ಮನಃ** ತನಗೆ **ಅಹಿತಂ** ಇಹ-ಪರಗಳಲ್ಲಿ ಅನರ್ಥಕಾರಣವೆಂದು **ಜಾನನ್ನಪಿ** ತಿಳಿದೂ ಮನುಷ್ಯನು **ವಿವಶಃ ಸನ್** ಹಿಂದಿನ ಕರ್ಮಕ್ಕೆ ಮತ್ತು ಶ್ರೀಹರಿಗೆ ವಶನಾಗಿ **ಭೂಯಃ** ಮತ್ತೆ ಮತ್ತೆ **ಪಾಪಂ ಕರೋತಿ** ಪಾಪವನ್ನು ಮಾಡುವನು **ಅಥೋ** ಆ ಕಾರಣದಿಂದ **ಪ್ರಾಯಶ್ಚಿತ್ತಂ ಕಥಂ** ಪ್ರಾಯಶ್ಚಿತ್ತವು ಪಾಪಾಪರಿಹಾರಕ ಹೇಗಾಗುವುದು?

**ವಿಶೇಷಾರ್ಥ-** 'ಸ ಕಾರಯೇತ್ಪುಣ್ಯಮಥಾಽಪಿ ಪಾಪಮ್' ಎಂಬ ಶ್ರುತಿಯು ಶ್ರೀಹರಿಯು ಕರ್ಮಾನುಗುಣವಾಗಿ ಪುಣ್ಯ-ಪಾಪಗಳನ್ನು ಮಾಡಿಸುವನೆಂದು ತಿಳಿಸುತ್ತದೆ.

'ಅಥ ಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷಃ । ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ ।' ಎಂಬ ಅರ್ಜುನನ ಪ್ರಶ್ನೆಗೆ ಉತ್ತರವಾಗಿ ಭಗವಂತನು 'ಕಾಮ ಏಷಃ ಕ್ರೋಧ ಏಷಃ...' ಎಂದು ಗೀತೆಯಲ್ಲಿ ಹೇಳಿರುವನು. ಆದ್ದರಿಂದ **ವಿವಶಃ** ಎಂಬ ಶಬ್ದಕ್ಕೆ ರಾಗಾದಿವಶನಾಗಿ ಎಂದಾದರೂ ಅರ್ಥ ಮಾಡಬಹುದು.

ಇಲ್ಲಿ ಶಂಕಿಸುವ ಪರೀಕ್ಷಿದ್ರಾಜರ ಅಭಿಪ್ರಾಯವು ಹೀಗಿದೆ. ಅನುಷ್ಠಾನ ಮಾಡಿದ ಪ್ರಾಯಶ್ಚಿತ್ತವು ಸಮೂಲವಾಗಿ ಪಾಪವನ್ನು ಪರಿಹರಿಸುತ್ತದೆ ಎನ್ನುವುದಾದರೆ ಅಂತಹ ಪ್ರಾಯಶ್ಚಿತ್ತವು ನರಕನಿವಾರಕವೆನ್ನಬಹುದಾಗಿತ್ತು. ಹಾಗೆ ಹೇಳುವುದು ಸರಿಯಾಗುವುದಿಲ್ಲ. ಪ್ರಾಯಶ್ಚಿತ್ತವನ್ನು ಮಾಡಿಕೊಂಡರೂ ನರಕವು ತಪ್ಪುವುದಿಲ್ಲ. ಪ್ರಾಯಶ್ಚಿತ್ತಗಳಿಂದ ಎಲ್ಲ ಪಾಪಗಳೂ ನಷ್ಟವಾಗುತ್ತವೆ ಎಂದಾದರೆ ಪಾಪಗಳಿಗೆ ಕಾರಣವಾದ ದುರಿತವಾಸನಾ ಕೂಡಾ ಹೋಗುವುದರಿಂದ ಕಾರಣವಿಲ್ಲದ್ದರಿಂದ ಮುಂದೆ ಪಾಪವೇ ಹುಟ್ಟದೇ ಹೋಗಬೇಕಾಗುವುದು. ಆದರೆ ಲೋಕದಲ್ಲಿ

ಪ್ರಾಯಶ್ಚಿತ್ತ ಮಾಡಿಕೊಂಡಮೇಲೂ ನೂರಾರು ಸಲ ಪಾಪ ಮಾಡುವುದು ಕಂಡು ಬರುತ್ತದೆ. ಆದ್ದರಿಂದ ಪಾಪವನ್ನು ತಡೆಯುವಂತಿಲ್ಲ ನರಕ ತಪ್ಪುವಂತಿಲ್ಲ. ಹೀಗೆ ಪ್ರಾಯಶ್ಚಿತ್ತಗಳಿಗೆ ಅಧಿಕಾರಿಗಳೇ ಇಲ್ಲವಾದ್ದರಿಂದ ಧರ್ಮಶಾಸ್ತ್ರಗಳಲ್ಲಿ ಹೇಳಿರುವ ಪ್ರಾಯಶ್ಚಿತ್ತ ಪ್ರಕರಣವು ವ್ಯರ್ಥವಾಗಿದೆ. 'ಪುನರ್ದರಿದ್ರಃ ಪುನರೇವ ಪಾಪೀ' ಎಂಬ ವಚನಗಳು ಇದನ್ನೇ ತಿಳಿಸುತ್ತವೆ. ।।೯।।

ಪ್ರಾಯಶ್ಚಿತ್ತವು ಅಯುಕ್ತವಾಗಿದೆ ಎಂಬುದನ್ನೇ ಮತ್ತೆ ಈ ಶ್ಲೋಕದಲ್ಲಿ ಹೇಳುತ್ತಿದ್ದಾರೆ.

**ಕ್ವಚಿನ್ನಿವರ್ತತೇಽಭದ್ರಾತ್ ಕ್ವಚಿಚ್ಚರತಿ ತತ್ಪುನಃ ।**
**ಪ್ರಾಯಶ್ಚಿತ್ತಮಥೋಽಪಾರ್ಥಂ ಮನ್ಯೇ ಕುಂಜರಶೌಚವತ್ ।।೧೦।।**

**ಕ್ವಚಿತ್** ಒಂದು ಕಡೆ **ಅಭದ್ರಾತ್ ನಿವರ್ತತೇ** ಪ್ರಾಯಶ್ಚಿತ್ತಗಳನ್ನು ಮಾಡಿಕೊಳ್ಳುವ ಮೂಲಕ ಪಾಪದಿಂದ ದೂರ ಸರಿಯುವನು **ಕ್ವಚಿತ್** ಮತ್ತೊಂದು ಕಡೆ **ಪುನಃ** ಮತ್ತೆ **ತತ್** ಅಂತಹ ಪಾಪವನ್ನು **ಚರತಿ** ಮಾಡುವನು **ಅಥೋ** ಆದ್ದರಿಂದ **ಕುಂಜರಶೌಚವತ್** ಆನೆಯ ಸ್ನಾನದಂತೆ (ಆನೆಯು ಸ್ನಾನ ಮಾಡಿದ ಮೇಲೆ ಮತ್ತೆ ಮಣ್ಣು ಹಾಕಿಕೊಳ್ಳುತ್ತದೆ ಕಾರಣ ದೇಹವು ಮತ್ತೆ ಕೊಳೆಯಾಗುವುದು) **ಪ್ರಾಯಶ್ಚಿತ್ತಂ** ಪ್ರಾಯಶ್ಚಿತ್ತವು **ಅಪಾರ್ಥಂ** ನಿಷ್ಪ್ರಯೋಜನವೆಂದು **ಮನ್ಯೇ** ತಿಳಿಯುವೆನು ಶೌಚಶಬ್ದದಿಂದ ಇಲ್ಲಿ ಸ್ನಾನವನ್ನೇ ಇಟ್ಟುಕೊಳ್ಳಬೇಕು. ।।೧೦।।

**ಅಥೋ** ಈ ಸಂಶಯವು **ಕ್ವ ನಿವರ್ತತೇ** ನಿಮ್ಮನ್ನು ಬಿಟ್ಟು ಇದರ ಪರಿಹಾರ ಎಲ್ಲಿಯೂ ಸಿಗಲಾರದು ಎಂದೂ ಅರ್ಥ. 'ಅಥೋಽಥ ಚ ಸಂಶಯೇ ಚ ಪ್ರಕೀರ್ತಿತೌ' ಎಂದು ವಿಶ್ವಕೋಶವಿದೆ. ಯದ್ಯಪಿ ಓತ್ ಎಂಬುದರಿಂದ ಪ್ರಗೃಹ್ಯ ಸಂಜ್ಞೆ ಬಂದಾಗ 'ಪ್ಲುತಪ್ರಗೃಹ್ಯಾ ಅಚಿ ನಿತ್ಯಮ್' ಎಂಬ ಸೂತ್ರದಿಂದ ಪ್ರಕೃತಿಭಾವವಾಗಿ ಅಥೋ ಅಪಾರ್ಥಂ ಎಂದಾಗಬೇಕು. ಆದರೂ ರಾಜನ ಅಭಿಸಂಧಿಯು ಇತರರ ಅಭಿಸಂಧಿಯಿಂದ ಹೇಳಲ್ಪಟ್ಟಿದ್ದು ಶುಕಾಚಾರ್ಯರಿಂದಲ್ಲದೆ ಬೇರೆಯವರಿಂದ ಅಪರಿಹಾರ್ಯವೆಂದು ಸೂಚಿಸುವುದು.

ಪ್ರಾಯಶ್ಚಿತ್ತಮಥಃ ಅಪಾರ್ಥಂ ಎಂದು ಪದವಿಭಾಗ ಮಾಡಬೇಕು. ಪ್ರಾಯಶ್ಚಿತ್ತಮಥಃ ಎಂಬುದು ಅಭದ್ರಕ್ಕೆ ವಿಶೇಷಣವಾಗಿದೆ. ಪ್ರಾಯಶ್ಚಿತ್ತಂ ಮಥ್ನಾತೀತಿ ಮಥಕಂ ವಿಶೇಷಣ ಪರನಿಪಾತ. ಪ್ರಾಯಶ್ಚಿತ್ತಂ ಮಥಕಂ ಯಸ್ಯ ತತ್ ತಾದೃಶಾತ್

ಅಭದ್ರಾತ್ ಎಂದನ್ವಯ. ಅಂದರೆ ಪ್ರಾಯಶ್ಚಿತ್ತವೇ ನಾಶಕವಾಗಿವುಳ್ಳ ಪಾಪದಿಂದ ಎಂದರ್ಥ. ಅಥವಾ ಪ್ರಾಯಶ್ಚಿತ್ತಮೇವ ಮಥ್ನಾತಿ ಸ್ವಫಲೋಪಲಂಭಕತ್ವೇನ ಇತಿ ಪ್ರಾಯಶ್ಚಿತ್ತಮಥಃ ಅಂದರೆ ತನ್ನ ಫಲಕೊಡುವ ಮೂಲಕ ಪ್ರಾಯಶ್ಚಿತ್ತವನ್ನೇ ಕೆಡಿಸುವ ಪಾಪದಿಂದ ಎಂದರ್ಥ. 'ಮಥೇ ವಿಲೋಡನೇ' ಧಾತುವಿಗೆ ಕರ್ತಾ ಎಂಬ ಅರ್ಥದಲ್ಲಿ ಕ್ವಿಪ್ ಪ್ರತ್ಯಯವು ಬರುತ್ತದೆ. ಜಸ್ತ್ವ ಚರ್ತ್ವವಾದಾಗ ಪ್ರಾಯಶ್ಚಿತ್ತಮತ್ ಎಂದು ಅಗ್ನಿಮತ್ ಶಬ್ದದಂತೆ ಆಗುವುದು.

ಪ್ರಾಸಂಗಿಕವಾಗಿ ಒಂದು ಚರ್ಚೆ ಮಾಡುವೆವು ಎನ್ನುತ್ತಾರೆ ಸತ್ಯಧರ್ಮರು. 'ಯೇ ವಿದ್ವಾಂಸೋಽಬುಧೋ ಜನಾಃ' ಎಂಬ ಬೃಹದಾರಣ್ಯಕಭಾಷ್ಯ ಆರನೇ ಅಧ್ಯಾಯದಲ್ಲಿ 'ಬೋಧಕೇ ವಿದ್ಯಮಾನೇಽಪಿ ಯೇ ವಿದುರ್ನ ಪರಂ ಹರಿಂ । ಬುಧಃ ಸಕಾಶೇಽಪ್ಯವಿದ್ವಾಂಸಃ ಇತ್ಯರ್ಥಃ ಬೋಧವಾನ್ ಜ್ಞಾನವಾನ್ ಭುತ್ಸ್ಯಾತ್ ತತ್ಸಕಾಶಾಚ್ಚ ಯೇ ಹರಿಂ' ಎಂದು ಕರ್ತರಿ ಕ್ವಿಪ್ ಅಂಗೀಕರಿಸಿದ್ದಾರೆ. ಈಕ್ಷತ್ಯಧಿಕರಣ ಸುಧೆಯಲ್ಲಿ ಬೋಧನಾತ್ ಭುತ್ ವೇದಃ ಎಂದು ಕರಣವನ್ನು ಅಂಗೀಕರಿಸಿದ್ದಾರೆ. ಆದ್ದರಿಂದ ವಿರೋಧಶಂಕಾ ಬರುತ್ತದೆ. ಈ ವಿರೋಧವು ಸರಿಯಲ್ಲ. ಯಾಕೆಂದರೆ 'ಮಿಥ್ಯಾಶಬ್ದೋ ಅನಿರ್ವಚನೀಯಂ ವದತಿ' ಎಂಬ ತತ್ತ್ವೋದ್ಯೋತದಲ್ಲಿಯಂತೆ ಕರಣದಲ್ಲಿ ಕರ್ತೃತ್ವವು ಔಪಚಾರಿಕವೆಂದು ಅಂಗೀಕರಿಸಿ ಬೃಹದಾರಣ್ಯಕದ ಐಕಕಂಠ್ಯವನ್ನು ಸಂಪಾದಿಸಬಹುದಾಗಿದೆ. ಇಲ್ಲವಾದರೆ 'ಇತ್ಯಾದಿ ಶ್ರುತಯೋ ಮಾನಂ ಶತಶೋಽತ್ರ ಸಮಂತತಃ' ಎಂಬ ಭೂಮಿಕಾನುವ್ಯಾಖ್ಯಾ ಕರಣೇ ಕರ್ತೃತ್ವವು ಔಪಚಾರಿಕವಾದದ್ದು ಸ್ವಾರಸ್ಯವಾಗಬೇಕಾದೀತು ಎಂದು ತಿಳಿಯಬೇಕು. ।।೧೦।।

ಹೇ ರಾಜನೇ ! ಪ್ರಾಯಶ್ಚಿತ್ತ ವ್ಯರ್ಥವೆನ್ನುವ ನಿನ್ನ ಅಭಿಪ್ರಾಯವೇನು? ಸಂಪೂರ್ಣ ಅಜ್ಞಾನಿಯೇ ಮಾಡಿದ ಪ್ರಾಯಶ್ಚಿತ್ತ ಅಪಾರ್ಥವೆನ್ನುತ್ತೀಯಾ? ಸ್ವಲ್ಪ ಜ್ಞಾನವುಳ್ಳ ಅಜ್ಞಾನಿಯು ಆಚರಿಸಿದ ಪ್ರಾಯಶ್ಚಿತ್ತ ವ್ಯರ್ಥವೆನ್ನುತ್ತೀಯಾ? ಅಥವಾ ಜ್ಞಾನಿಯು ಮಾಡಿದ ಪ್ರಾಯಶ್ಚಿತ್ತ ವ್ಯರ್ಥವೆನ್ನುತ್ತೀಯಾ ? ಇವುಗಳಲ್ಲಿ ಯಾವುದು ವ್ಯರ್ಥವೆಂದು ನೀನು ಹೇಳುತ್ತಿ ? ಮೊದಲನೇ ಎರಡನೇ ಪಕ್ಷಕ್ಕೆ

೧ ಜ್ಞಾನವಿಲ್ಲದೇ ಮಾಡಿದ್ದು

೨ ಜ್ಞಾನಿಗಳು ವಿಮರ್ಶಿಸಿ ಹೇಳಿದ್ದು

೩ ಜ್ಞಾನ ಪೂರ್ವಕವಾಗಿ ಮಾಡಿದ್ದು ಸಾಧುವಲ್ಲ ಎಂದೇ ಒಪ್ಪಿಗೆ ಕೊನೆಯದು ಮಾತ್ರ ತಪ್ಪಿಗೆ ಇಲ್ಲವೆಂದು ಉತ್ತರಿಸುವದು.

**ಶ್ರೀಶುಕ ಉವಾಚ -**

**ಕರ್ಮಣಾ ಕರ್ಮನಿರ್ಹಾರೋ ನ ಹ್ಯಾತ್ಯಂತಿಕ ಇಷ್ಯತೇ ।**
**ಅವಿದ್ವದಧಿಕಾರಿತ್ವಾತ್ ಪ್ರಾಯಶ್ಚಿತ್ತವಿಮರ್ಶನಮ್ ॥೧೧॥**

**ಅವಿದ್ವದಧಿಕಾರಿತ್ವಾತ್** ಅಜ್ಞಾನಿಯು ಮಾಡಿದ್ದಾದ್ದರಿಂದ **ಕರ್ಮಣಾ** ಪ್ರಾಯಶ್ಚಿತ್ತರೂಪವಾದ ಕರ್ಮದಿಂದ **ಕರ್ಮನಿರ್ಹಾರಃ** ಪಾಪಕರ್ಮದ ನಾಶವು **ಆತ್ಯಂತಿಕಃ** ಸಂಪೂರ್ಣವಾಗಿ (ಸಮೂಲನಾಶವು) **ನ ಇಷ್ಯತೇ** ಅಂಗೀಕೃತವಲ್ಲ. ಅಂದರೆ ವ್ಯರ್ಥವೆಂಬುದು ಸರಿ ಎಂದರ್ಥ. ಎರಡನೇ ಪಕ್ಷದಲ್ಲಿ ವ್ಯರ್ಥವೆಂದು ಒಪ್ಪಲಾಗದು ಎಂದು ಹೇಳುತ್ತಾರೆ. ವಿದ್ವಾಂಸರಿಂದ **ಅವಿದ್ವದಧಿಕಾರಿತ್ವಾತ್** ಅಜ್ಞಾನಿಗಳನ್ನು ಉದ್ದೇಶಿಸಿ **ವಿಮರ್ಶನಂ** ವಿಮರ್ಶಾ ಪೂರ್ವಕ ವಿಹಿತವಾದ **ಪ್ರಾಯಶ್ಚಿತ್ತಂ ನ ಅಪಾರ್ಥಂ ಇಷ್ಯತೇ** ಪ್ರಾಯಶ್ಚಿತ್ತ ವ್ಯರ್ಥವೆಂದು ಒಪ್ಪಲಾಗುವುದಿಲ್ಲ ಎಂದನ್ವಯ.

**ಸತ್ಯಧರ್ಮರ ಪ್ರಕಾರ**

ಎರಡೂ ಪಕ್ಷಕ್ಕೆ ಅಂದರೆ ಏನೂ ಜ್ಞಾನವಿಲ್ಲದ ಅಥವಾ ಸ್ವಲ್ಪಜ್ಞಾನವಿದ್ದ ಅಜ್ಞಾನಿಯು ಮಾಡಿದ ಎಂಬುದಕ್ಕೆ ಉತ್ತರ **ಅವಿದ್ವದಧಿಕಾರಿತ್ವಾತ್** ಎಂಬುದು. ಅಜ್ಞಾನಿ ಮಾಡಿದ್ದಾದ್ದರಿಂದ ಸ್ವಲ್ಪಜ್ಞಾನ ಇದ್ದವನು ಮಾಡಿದ್ದಾದ್ದರಿಂದ ಎಂದರ್ಥ. ಅ ಎಂದರೆ ಈಷತ್ ಸ್ವಲ್ಪ ಎಂದು ಅರ್ಥ. 'ಅನುದರಾ ಕನ್ಯಾ' (ಅಲ್ಪ ಉದರ ಉಳ್ಳ ಕನ್ಯೆ) 'ಅತೋಯಾ ಗಂಗಾ' (ಅಲ್ಪತೋಯ ಉಳ್ಳ ಗಂಗಾ) ಎಂಬ ಪ್ರಯೋಗಗಳೂ ಈ ವಿಷಯದಲ್ಲಿ ಇವೆ. ಮತ್ತು 'ಅಃ ಸ್ಯಾದಭಾವೇ ಸ್ವಲ್ಪಾರ್ಥೇ' ಎಂಬ ವಿಶ್ವಕೋಶದಿಂದ ಈ ಅರ್ಥವು ತಿಳಿದುಬರುತ್ತದೆ.

ಇವರಿಬ್ಬರಿಗೂ ಸಂಪೂರ್ಣ ಪಾಪದ ಭಯವಿಲ್ಲವೆಂದು ಭಾವ. ಮೂರನೇ ಪಕ್ಷಕ್ಕೆ 'ಪ್ರಾಯಶ್ಚಿತ್ತವಿಮರ್ಶನಂ' ಎಂದು ಉತ್ತರ. ಅಂದರೆ ಭಗವಂತನನ್ನು ತಿಳಿಸಿ ಕೊಡುವ ಗುರೋಪದೇಶದಿಂದ ಭಗವಂತನ ಸಮರ್ಪಣವು ಅಪಾರ್ಥಂ ನ ಇಷ್ಯತೇ ವ್ಯರ್ಥವಲ್ಲ. ವಿದ್ವಾಂಸರು ಅವಿದ್ವಾಂಸನಂತೆ ಅಲ್ಲವೆಂದು ಹೇಳುವರು. ಅವಿದ್ವತ್ ಅಜ್ಞನಂತೆ ಎಂದರ್ಥ. 'ತತ್ರ ತಸ್ಯೈವ' ಎಂದು ಸಪ್ತಮಿ ಷಷ್ಠೀ ವಿಭಕ್ತಿಯ ಮೇಲೆ ವತಿ ಪ್ರತ್ಯಯ ವಿಹಿತವಾಗಿದ್ದರೂ ಪ್ರಥಮಾ ವಿಭಕ್ತಿ ಮೇಲೆ ವತಿ ಪ್ರತ್ಯಯವು ಧರ್ಮತ್ವಾತ್ ರೂಪರಸವತ್ ಮುಂತಾದ ಪ್ರೇಕ್ಷಾವಂತರ ಪ್ರಯೋಗಗಳು ಬಹಳ

ಕಂಡು ಬರುವುದರಿಂದ ಬೇರೆ ವಿಭಕ್ತಿಯಲ್ಲಿ ವತಿ ಪ್ರತ್ಯಯ ಆಗುವದು. ಸುಧಾದಲ್ಲಿಯೂ ಇದನ್ನು ವಿವರಿಸುವರು. **ಕರ್ಮಣಾ** ಭಗವದರ್ಪಣರೂಪ ಕರ್ಮದಿಂದ **ಕರ್ಮನಿರ್ಹಾರಃ** ಕರ್ಮಗಳ ಸಮೂಲ ನಾಶವು **ಪ್ರಾಯಃ** ಬಹಳವಾಗಿ (ಸಮಯಜ್ಞಸಮ್ಮತ್ಯಾ) ಶಾಸ್ತ್ರಜ್ಞರ ಸಮ್ಮತಿಯಿಂದ **ನೇಷ್ಯತೇ** ಅಜ್ಞರಂತೆ ಅಂಗೀಕರಿಸಿಲ್ಲ. ಅಂದರೆ ಪ್ರೇಕ್ಷಾವಂತರಿಂದ ವಿದ್ವಾಂಸನು ವಿಲಕ್ಷಣನೆಂದು ತಿಳಿಯಲ್ಪಟ್ಟಿರುವನು. ಏಕೆಂದರೆ **ಹಿ** ಯಾವ ಕಾರಣ **ಚಿತ್ತವಿಮರ್ಶನಂ** ಜ್ಞಾನದಿಂದ ವಿಮರ್ಶ ಮಾಡಿದವನು. ಅದಾದರೂ ಏಕೆ ಎಂದರೆ ಅಧಿಕಾರಿತ್ವಾತ್ ಚೆನ್ನಾಗಿ ತಿಳಿದ ಅಧಿಕಾರಿಯಾದ್ದರಿಂದ ಅಥವಾ **ಪ್ರಾಯಃ** ಕರ್ಮ ಜೀವಸಮೂಹವು **ಹಿ** ಯಾವ ಕಾರಣ **ಚಿತ್ತವಿಮರ್ಶನಂ** ಚಿತ್ತದ ವಿಮರ್ಶ ಉಳ್ಳದ್ದು. ಆದ್ದರಿಂದ **ಅವಿದ್ವಾನ್** ಅಲ್ಲಿ. **ಕರ್ಮಣಿ** ಜೀವನಲ್ಲಿ ಅಸ್ವಾತಂತ್ರ್ಯವಿರುವುದರಿಂದ 'ಕರೋಽಸ್ಮಿನ್ ಮೀಯತ ಇತಿ ಕರ್ಮ ಜೀವ ಉದಾಹೃತಃ' ಎಂದು ನಾರದೀಯಪುರಾಣವಿದೆ. ಕರ ಎಂಬ ಶಬ್ದ ಸಕಾರಾಂತವಾದುದರಿಂದ ಅದೃಷ್ಟವಾಚಕ ಅಥವಾ ಕ್ರಿಯಾವಾಚಕ ಅದೃಷ್ಟದ ಕ್ರಿಯೆಯ ಅಧೀನನಾದ್ದರಿಂದ ಜೀವನಲ್ಲಿ ಕರ್ಮಶಬ್ದವು ಪಂಚರಾತ್ರದಲ್ಲಿ ಪ್ರಸಿದ್ಧವಾಗಿದೆ. ಕರ ಎಂದರೆ ಯಾರು ಎಂದರೆ ಹೇಳುವರು. ಕರ ಇತಿ ಎಂದು ಅವತಾರಿಕಾ. ಕರಶಬ್ದವು ಹಸ್ತವಾಚಕವಾಗಿ ಕಂಡಿದೆ. ಅದೃಷ್ಟವಾಚಕವಾಗಿ ಕರಶಬ್ದವು ಕಂಡಿಲ್ಲ ಎಂಬುದಕ್ಕೆ ಉತ್ತರ ಸಕಾರಾಂತ ಎಂದು. ಅಂದರೆ ಹಸ್ತವಾಚಕ ಅಕಾರಾಂತ ಕರ ಶಬ್ದದಿಂದ ಭಿನ್ನವಾದ ಅದೃಷ್ಟವಾಚಕ ಸಕಾರಾಂತ ಶಬ್ದವಿದು ಎಂದು ಭಾವ.

ಕರ್ಮಶಬ್ದಕ್ಕೆ ಜೀವನಲ್ಲಿ ವಿದ್ವದ್ರೂಢಿಯನ್ನು ತಿಳಿಸುವರು 'ಪ್ರಸಿದ್ಧೇಷ್ಟ...' ಮುಂತಾದ ನಾಲ್ಕನೇ ಅಧ್ಯಾಯ ಗೀತಾತಾತ್ಪರ್ಯ-ನ್ಯಾಯದೀಪಿಕಾಗಳಲ್ಲಿ ಕರ್ಮ ಶಬ್ದ ಜೀವವಾಚಕವೆಂದು ಹೇಳಿದ್ದರಿಂದ ನಾವು ಹೇಳಿದ್ದು ಯುಕ್ತ. ಅಥವಾ ಕರ್ಮಣಾ ಮುಂದೆ ಬಂಧಕ್ಕೆ ಸಾಧನವಾದ ಕರ್ಮದಿಂದ ಎಂದರ್ಥ. **ಅವಿದ್ವತ್** ಎಂಬಲ್ಲಿ **ಅ** ಎಂದರೆ ಭಗವಂತ ಅಂ ವೇತ್ತೀತಿ ಅವಿತ್ ತದ್ವತ್ ಅವಿದ್ವತ್ ಜ್ಞಾನಿಯಂತೆ. 'ನಹ್ಯಾತ್ಯಂತಿಕಃ' ನಹ್ಯ ನಹನೀಯ ಬಂಧಯೋಗ್ಯವಾದ ಮತ್ತು ಆತ್ಯಂತಿಕವೂ ಆದ 'ಣಹ ಬಂಧನೇ' ಅರ್ಹಾರ್ಥೇ ಯತ್ ಣ್ಯತಿವಾಹಶ್ಚ ಛಾಂದಸಃ' ಸನ್ನಿಧಾನಾತ್ ಆತ್ಯಂತಿಕತ್ವವು ವಿಶೇಷ್ಯದಲ್ಲಿ ಅನ್ವಯವನ್ನು ಹೊಂದದೇ ವಿಶೇಷಣದಲ್ಲಿ ಅನ್ವಯವನ್ನು ಹೊಂದುತ್ತದೆ.

ಈ ರೀತಿಯಾದ ಪ್ರಮೇಯವು ಬೇರೆ ಸ್ಥಳದಲ್ಲಿ ಟೀಕಾಕಾರರಿಗೆ ಸಮ್ಮತವಾದ ಕಾರಣ ಆಶ್ಚರ್ಯ ಪಡಬೇಕಿಲ್ಲ. 'ಸ್ವರ್ಗೀ ಧ್ವಸ್ತಃ' 'ಸಪ್ತಘಟಿಕಾಭೋಜನಂ' 'ಪರಮಾಖ್ಯವಿದ್ಯಾವ್ಯಾಖ್ಯಾಂ' ಇತ್ಯಾದಿಯಾದ ಅನುವ್ಯಾಖ್ಯಾನವನ್ನು ವ್ಯಾಖ್ಯಾನ ಮಾಡುವಾಗ 'ತಸ್ಯ ಪರಮತ್ವಂ ನಾಮ ಅನ್ಯತ್ ನ ಭವತೀತ್ಯನುತ್ತಮತ್ವಮೇವ ತದಪಿ ಸನ್ನಿಧಾನಾತ್ ಪ್ರಮಾಣತ್ವೇನೈವ । ತದ್ಯಥಾ ಪರಮಧಾರ್ಮಿಕ ಇತ್ಯುಕ್ತೇ ಪರಮತ್ವಂ ಧರ್ಮೀಣ ಇತಿ ಜ್ಞಾಯತೇ' ಎಂದು ಸುಧೆಯಲ್ಲಿ 'ದಿಪ್ತಾನಲಾರ್ಕದ್ಯುತಿಮ-ಪ್ರಮೇಯಂ' ಎಂಬ ಗೀತಾಭಾಷ್ಯದಲ್ಲಿ ಅನಲಾರ್ಕದ್ಯುತಿಮಿತ್ಯುಕ್ತೇ ಮಿತತ್ವಶಂಕಾಂ ಅಪಾಕರೋತಿ ಅಪ್ರಮೇಯಂ ಇತಿ ( ಉಕ್ತೇ ಹೇಳಿದಾಗ ಜಾತಾಂ ದ್ಯುತೇಃ ಮಿತತ್ವಶಂಕಾಂ) ಏತಚ್ಚ ಸವಿಶೇಷಣವಿಶೇಷಣತ್ವಾತ್ ದ್ಯುತ್ಯಾ ಸಂಬಧ್ಯತೇ ಇತಿ । ಇದರಂತೆ ಪ್ರಮೇಯ ದೀಪಿಕಾದಲ್ಲಿ ಆದರ ಟಿಪ್ಪಣಿಗಳಲ್ಲಿ 'ಅಮೇಯತ್ವ ವಿಶೇಷಣವು' ಅನಲಾರ್ಕದ್ಯುತಿರೂಪ ವಿಶೇಷಣವಿಶಿಷ್ಟನಾದ ಭಗವಂತನ ವಿಶೇಷಣವಾಗಿ ವಿಶೇಷ್ಯದಲ್ಲಿ ವ್ಯರ್ಥವಾದ್ದರಿಂದ (ಬಾಧ) ದ್ಯುತಿಗೆ ಸಂಬಂಧಿಸುವುದು ಆದರಿಂದ ಶಂಕಾ ಪರಿಹಾರ.

ಅಜ್ಞಾನಿಯು ಮಾಡಿದ ಕರ್ಮ ಶ್ರೇಷ್ಠವೆಂದು ಸಜ್ಜನರಿಗೆ ಸಮ್ಮತವಲ್ಲವೆಂದೂ ಹೇಳುವರು ಅಧಿಕಾರಿತ್ವಾತ್ ಎಂದು. ಮಹಾವೈರಿರೂಪವಾದುದರಿಂದ ಎಂದರ್ಥ. ಏಕೆ ಅಜ್ಞಾನಿಗಳ ದಶೆ ಈ ವಿಧವಾದುದು ಎಂದರೆ ಹೇಳುವರು. ಆತ್ಯಂತಿಕ ಎಂದು. ಅತ್ಯಂತಿಕೇ ಭವಃ ಆತ್ಯಂತಿಕಃ ವಿದ್ವತ್ಸಮೀಪವರ್ತಿ. ನ ಹಿ ಜ್ಞಾನಿಯ ಸಮೀಪ ಇಲ್ಲದ ಕಾರಣ. ತಸ್ಯ ಕರ್ಮನಿರ್ಹಾರಃ ಕರ್ಮಣಃ ಮಾಡಿದ ಪಾಪದ ಹಾರಃ ಅಪಹಾರದ ನಿಃ ನಿಷೇಧವು ಅಭಾವವೆಂದರ್ಥ. ಅಜ್ಞಾನಿ ಮಾಡಿದ ಪ್ರಾಯಶ್ಚಿತ್ತ ಕರ್ಮ ಪಾಪ ಪರಿಹಾರಕವಲ್ಲವೆಂದು ಭಾವ. ಉಪಸರ್ಗಗಳು ಧಾತುವಿನಲ್ಲಿ ಅಡಗಿರುವ ಅರ್ಥಗಳಿಗೆ ದ್ಯೋತಕವಾದ್ದರಿಂದ ಹಾರ ಎಂದರೆ ಅಪಹಾರ ಎಂದರ್ಥ. ಆತ್ಯಂತಿಕವೆಂದರೆ ಬಲವಾದ ಅನಿಷ್ಟಾನನುಬಂಧಿಯು. ಯಾವ ಕರ್ಮನಿರ್ಹಾರ-ವಿದೆಯೋ ಸಃ ಅದು ಪ್ರಾಯಃ ಪ್ರಕೃಷ್ಟ ಭಗವಂತನ ಜ್ಞಾನಿಯ ಲಾಭವುಳ್ಳದ್ದು. ಪ್ರ ಪ್ರಕೃಷ್ಟವಾದ ಅಯಃ ಶುಭಾವಹ ಭಾಗಧೇಯ ಉಳ್ಳದ್ದು. ಹಿ ಯಾವ ಕಾರಣ ಚಿತ್ತವಿಮರ್ಶನಂ ಇಷ್ಯತೇ 'ಪ್ರಾಯಶ್ಚಾನಶನೇ ಮೃತ್ಯೌ ತುಲ್ಯಬಾಹಲ್ಯಯೋರಪಿ' ಎಂದು ವಿಶ್ವ. 'ಆಯೋ ಲಾಭಃ ನಿಃ ನಿಷೇಧಃ' ಇತಿ ಚ ವಿಶ್ವ. 'ಅಯಃ ಶುಭವಹೋ ವಿಧಿಃ' ಎಂದು ಅಮರ. ಪ್ರಾಯಶ್ಚಿತ್ತಾಃ ಎಂದರೆ ಬಹುಜ್ಞರು. ಅವರಿಂದ ವಿ ವಿವಿಧ

ಮರ್ಶನ ವಿಚಾರವುಳ್ಳ ಕರ್ಮ ಜೀವ ಹೀಗೂ ಮಾಡಬಹುದು. ವಿದ್ವಾಂಸರ ಸ್ವರೂಪವನ್ನು ಇದರಿಂದ ಹೇಳುವರು. ಅವಿದ್ವದಧಿಕಾರಿತ್ವಾತ್ ಅವಿದ್ವಾಂಸಃ ದಡ್ಡರಾದ ಮಕ್ಕಳು ಅಥವಾ ಶಿಷ್ಯರು. ಅವರು ಅಧಿಕವಾಗಿ ಅರಯಃ ಶತ್ರು ಆಗಿರುವ 'ಪುತ್ರಃ ಶತ್ರುರಪಂಡಿತಃ' ಎಂದಿದೆ. ಅಥವಾ ಅವಿದ್ವತ್ಸು ದಡ್ಡರ ವಿಷಯದಲ್ಲಿ ಅಧಿಕಾರಿತ್ವಾತ್ ಅವರು ಶಿಕ್ಷಾಧಿಕಾರ ಉಳ್ಳವರು ಮುಂತಾಗಿ ಅರ್ಥ ಮಾಡಬೇಕು.

ಸತ್ಪೂತ್ರಗುರುಮಾರ್ಗೇಣ ರಟಂತೀ ಧೀರ್ನಟೀವ ನಃ ।
ವಿಸ್ತರಂ ಸ್ವಬಹಿಷ್ಕಾರಂ ದೃಷ್ಟ್ವಾಂತಃ ದ್ರವತಿ ದ್ರುತಮ್ ॥

ಜ್ಞಾನಪೂರ್ವಕ ಮಾಡುವುದೆಂಬ ಮೂರನೇ ವಿಕಲ್ಪದಲ್ಲಿಯೂ ಇದು ಪಾಪವೆಂದು ತಿಳಿದು ಅದಕ್ಕೆ ಪ್ರಾಯಶ್ಚಿತ್ತವೆಂದು ತಿಳಿಯದೇ ವಿಹಿತವನ್ನು ಮಾಡುವದೇ ಅಥವಾ ತಾನು ಪಾಪ ಮಾಡಿದ್ದನ್ನು ತಿಳಿದು ಅದಕ್ಕೆ ಇದು ಪ್ರಾಯಶ್ಚಿತ್ತವೆಂದು ತಿಳಿದು ವಿಹಿತವನ್ನು ಮಾಡುವುದೇ ಎಂದು ವಿಕಲ್ಪಿಸಿ ಈ ಎರಡು ಪಕ್ಷದಲ್ಲಿಯೂ ಕರ್ಮ ವ್ಯರ್ಥವಲ್ಲ ಸಾರ್ಥಕವೇ ಸರಿ ಎಂಬ ಅಭಿಪ್ರಾಯದಿಂದ ಹೇಳುತ್ತಾರೆ. ಮುಂದೆ ಏವಂ ಎಂದಿರುವುದರಿಂದ ಯಥಾ ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು.

ಸಂಕುಚಿತವಾಗಿ ಹೇಳಿದ್ದನ್ನೇ ದೃಷ್ಟಾಂತ ಕೊಡುವ ಮೂಲಕ ವಿವರಿಸುವರು-

**ನಾಽಶ್ನತಃ ಪಥ್ಯಮೇವಾನ್ನಂ ವ್ಯಾಧಯೋಽಭಿಭವಂತಿ ಹಿ ।**
**ಏವಂ ನಿಯಮಕೃದ್ರಾಜನ್ ಶನೈಃ ಕ್ಷೇಮಾಯ ಕಲ್ಪತೇ ॥೧೨॥**

**ರಾಜನ್** ಪರೀಕ್ಷಿತನೇ **ಪಥ್ಯಂ** ಏವ ಆರೋಗ್ಯಕ್ಕೆ ಅನುಕೂಲವಾದ **ಅನ್ನಂ** ಆಹಾರವನ್ನು **ಅಶ್ನತಃ** ಉಣ್ಣುವ **ಪುಂಸಃ** ಮನುಷ್ಯನ **ದೇಹಂ** ಶರೀರವನ್ನು **ವ್ಯಾಧಯಃ** ರೋಗಗಳು **ಯಥಾ** ಹೇಗೆ **ನ ಅಭಿಭವಂತಿ** ಹಾಳು ಮಾಡುವುದಿಲ್ಲವೋ **ಏವಂ** ಅದೇ ರೀತಿ **ನಿಯಮಕೃತ್** ಪಾಪಕರ್ಮವನ್ನು ಮಾಡದೇ ವಿಹಿತಕರ್ಮವನ್ನೇ ಮಾಡುವ ಅಧಿಕಾರಿಯು **ಶನೈಃ** ಅನೇಕಜನ್ಮಗಳನ್ನು ಕಳೆದು ಪುಣ್ಯವನ್ನು ಹೆಚ್ಚಿಸಿಕೊಂಡು ಜ್ಞಾನವನ್ನು ತಂದುಕೊಂಡು **ಕ್ಷೇಮಾಯ** ಮೋಕ್ಷಕ್ಕೆ **ಕಲ್ಪತೇ** ಸಮರ್ಥನಾಗುವನು **ಹಿ** ಪ್ರಸಿದ್ಧವು.

ಅತ್ಯಂಬುಪಾನಾಚ್ಚ ನ ಜೀರ್ಯತೇಽನ್ನಂ ಅನಂಬುಪಾನಾಚ್ಚ ಸ ಏವ ದೋಷಃ ।
ತಸ್ಮಾನ್ನರೋ ವಹ್ನಿವಿವರ್ಧನಾಯ ಮುಹುರ್ಮುಹುರ್ವಾರಿ ಪಿಬೇದಭೂರಿ ॥

ಹೆಚ್ಚಿಗೆ ನೀರು ಕುಡಿದರೆ ಆಹಾರ ಜೀರ್ಣವಾಗುವುದಿಲ್ಲ. ನೀರು ಕುಡಿಯದಿದ್ದರೂ ಅದೇ ದೋಷ. ಆದ್ದರಿಂದ ಜೀರ್ಣಶಕ್ತಿ ಹೆಚ್ಚಿಸಲು ಮನುಷ್ಯನು ಆಗಾಗ ಸ್ವಲ್ಪ ಸ್ವಲ್ಪ

ನೀರು ಕುಡಿಯಬೇಕು. ಏವಂ ವೈದ್ಯಶಾಸ್ತ್ರಪ್ರಸಿದ್ಧಿ. ಅಪಥ್ಯದಿಂದ ಧಾತು ವಿಕಾರವಾಗುವದು.

**ಶ್ರೀ ಸತ್ಯಧರ್ಮರ ಪ್ರಕಾರ ವಿಶೇಷಾರ್ಥ**

ರಾಜನೇ ವಿಹಿತಾಚರಣ-ವಿಹಿತಾನಾಚರಣವೆಂಬ ನಿಯಮ ಉಳ್ಳವನು. ನಿಧಾನವಾಗಿ ಸಾಧನಸಂಪೂರ್ತಿ ಮಾಡಿಕೊಂಡು 'ಕ್ಷೇಮಾಯ' ಸ್ಥಿತಸ್ಯ ಪರಿಪಾಲನಾಯ ಇದ್ದದ್ದನ್ನು ಉಳಿಸಿಕೊಳ್ಳುವುದು. 'ಅಸಾಧಾರಣ್ಯೇನ ವ್ಯಪದೇಶಾ ಭವಂತಿ' ಎಂದು ಹೇಳಿದಂತೆ. ಮುಖ್ಯ ಕ್ಷೇಮವೆಂದರೆ ಮೋಕ್ಷ ಅದನ್ನು ಪಡೆಯಲು ಸಮರ್ಥನಾಗುವನು ಎಂದರ್ಥ.

**ಅಶ್ನತಃ** ಎಂಬುದು ಷಷ್ಠೀವಿಭಕ್ತಿ. ಪುಂಸಃ ಶರೀರಂ ಎಂದು ಶೇಷ ಮಾಡಿಕೊಳ್ಳಬೇಕು ಎಂದು ಹಿಂದಿನವರು ಮಾಡಿರುವರು. **ಪಥ್ಯಂ** ಹಿತವಾದುದನ್ನು **ಅಶ್ನತಃ ಪುಂಸಃ ಅಭಿ** ಅಭಿಮುಖವಾಗಿ **ವ್ಯಾಧಯಃ ನ ಭವಂತಿ** ಸತ್ತ್ವವನ್ನು ಹೊಂದುವುದಿಲ್ಲ ನಿಲ್ಲಲಾರವೆಂದರ್ಥ. **ನಾಶ್ನತಃ** ಪಥ್ಯವಾದ ಅನ್ನವನ್ನೇ ಐದಾರು ದಿನ ಉಣ್ಣದಿರುವವನಿಗೆ **ವ್ಯಾಧಯಃ ಅಭಿಭವಂತಿ** ರೋಗಗಳು ಬರುವವು. (ನಸಮಾಸವಿದು) 'ನ ಚೈಕಾಂತಮನಶ್ನತಃ' ಎಂದು ಗೀತೆಯಿದೆಯಷ್ಟೇ. **ನ ಅಶ್ನತಃ ಪಥಿ ಅಮಾ ಇವ** ಎಂದು ಪದವಿಭಾಗವನ್ನು ಮಾಡಬಹುದು. ನ ಪಥಿ 'ತೈರ್ದತ್ತಾ ನ ಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ । ಭುಂಜತೇ ತೇ ತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್' ದೇವತೆಗಳು ಕೊಟ್ಟದ್ದನ್ನು ವೈಶ್ವದೇವ ಯಜ್ಞಗಳ ಮೂಲಕವಾಗಿ ದೇವತೆಗಳಿಗೆ ಕೊಡದೆ ತಿನ್ನುವವನು ಕಳ್ಳನೆನಿಸುತ್ತಾನೆ. ತಮಗಾಗಿಯೇ ಯಾರು ಅಡಿಗೆ ಮಾಡಿ ಉಣ್ಣುವರೋ ಅವರು ಪಾಪವನ್ನೇ ತಿನ್ನುವರು. ಮುಂತಾಗಿ ನಿರಾಕರಿಸಲ್ಪಟ್ಟ ಶಾಸ್ತ್ರವಿರುದ್ಧವಾದ ದೇವರಿಗೆ ಅನಿವೇದಿತವಾದ ಜೊತೆಗೆ ಯಾರೂ ಇಲ್ಲದ ಏಕಾಂತಭೋಜನರೂಪವಾದ ಮಾರ್ಗದಲ್ಲಿ ಶನೈಃ ಸ್ವರೈಃ ಅಮಾಃ ಅಶ್ನತಃ ನಿಧಾನವಾದ ಸ್ವರದಿಂದ ಕೂಡಿಕೊಂಡು ಉಣ್ಣುವವನನ್ನು ಕುರಿತು ವ್ಯಾಧಯಃ ಅಭಿಭವಂತ್ಯೇವ ರೋಗಗಳು ಬಂದೇ ಬರುವವು. ನಿಯಮಕೃತ್ ಹಿಂದೆ ಹೇಳಿದ್ದಕ್ಕೆ ವಿಪರೀತವಾಗಿ ಹರಿಸಮರ್ಪಣ ನಿಯಮ ಮಾಡುವವನು ಕ್ಷೇಮಾಯ ಇಹದಲ್ಲಿ ತಾನು ಆರೋಗ್ಯದಿಂದ ಇರಲು ಪರದಲ್ಲಿ ಮೋಕ್ಷಕ್ಕೆ ಸಮರ್ಥನಾಗುತ್ತಾನೆ ಎಂದು ಭಾವ.

ಪಥಿ 'ನಾನ್ಯಃ ಪಂಥಾ' ಎಂದು ಹೇಳಿದ ಜ್ಞಾನವೆಂಬಲ್ಲಿ ನಿಯಮಕೃತ್ ಜ್ಞಾನ ಸಂಪಾದನ ನಿಯಮವುಳ್ಳವನು ಅಂ ನಾರಾಯಣನನ್ನು ಅನ್ನಂ 'ಅದ್ಯತೇऽತ್ತಿ ಚ' ಎಂಬ ವ್ಯುತ್ಪತ್ತಿಯಿಂದ ಅನ್ನ ಶಬ್ದವಾಚ್ಯನಾದವನನ್ನು 'ಅವಿಷ್ಣಾವೇಷ ತ್ವನವ್ಯಯಃ' ಎಂದು ವಿಶ್ವ. ಉಪಜೀವ್ಯತ್ವದಿಂದ ಅತ್ತೃತ್ವದಿಂದ ಅನ್ನ ಶಬ್ದವಾಚ್ಯನಾದವನನ್ನು ಅಶ್ನತಃ ಉಪ ಜೀವಿಸುವ ಎಂದರ್ಥ. 'ಪಪುರ್ನಿತಾಂತಂ ಸರಸಾಕ್ಷಿಭೃಂಗೈಃ' ಎಂಬಲ್ಲಿಯಂತೆ ಗೌಣವಾದ ಅಶನವೆಂದು ತಿಳಿಯಬೇಕು. **ವ್ಯಾಧಯಃ** ರೋಗಗಳು ವಿವಿಧ ಆಧಿಗಳು ಮನೋವ್ಯಥೆಗಳು **ನ ಅಭಿಭವಂತಿ** ತೊಂದರೆ ಕೊಡುವದಿಲ್ಲ. **ಹಿ** ಶಬ್ದವು 'ಅನ್ನಂ ಬ್ರಹ್ಮೇತ್ಯುಪಾಸೀತ' ಮುಂತಾದ ಪ್ರಮಾಣಪ್ರಸಿದ್ಧಿ ದ್ಯೋತಕವು. ಅಂ ಅನ್ನಂ ಉದ್ದಿಶ್ಯ ನಿಯಮಕೃತ್ ಎಂದಾದರೂ ಅನ್ವಯ ಮಾಡಬಹುದು. ಭಗವಂತನ ಉದ್ದೇಶಕವಾಗಿ ನಿಯಮ ಮಾಡುವವನಿಗೆ ಎಂದರ್ಥ. 'ಕ್ಷೇಮಾಯ ಕಲ್ಪತೇ' ಎಂಬುದು ಹಿಂದಿನಂತೆ ಅರ್ಥ. । ಶನೈಃ ಅನ್ನಂ ಅಶ್ನತಃ ಬಹುಕಾಲ ಉಣ್ಣುವವನಿಗೆ ಎಂದರ್ಥ. ಅದಕ್ಕೆ ಸಂಪತ್ಪ್ರಾಪಕತ್ವವು 'ಚಿರಸ್ನಾಯೀ ಧೀರ್ಘಭೋಜೀ ತೇನ ಮೇ ರಾವಣಃ ಪ್ರಿಯಃ' ಮುಂತಾದುದರಿಂದ ತಿಳಿಯುವದು. 'ತ್ವರಿತಂ ನಾನ್ನಮಶ್ನೀಯಾತ್' ಎಂಬ ವಚನವು ಕರ್ಮ ಲೋಪ ಮಾಡಿ ಬೇಗನೆ ಉಣ್ಣಬಾರದು ಎಂಬ ಅರ್ಥವನ್ನು ಹೇಳುವುದಾದ್ದರಿಂದ ಅದರ ವಿರೋಧವಿಲ್ಲ. ಅಥವಾ **ಪಥ್ಯಂ** ಶಾಶ್ವತ ಹಿತರೂಪ ಅನ್ನವನ್ನು ತಿನ್ನುವವಗೆ **ವ್ಯಾಧಯಃ** ವಿಶಿಷ್ಟ ಅಥವಾ ವಿವಿಧ ಆಧಿಗಳು ಯಾರಿಂದ ಬರುವವೋ ಅವರು ದೈತೇಯರು **ಅಭಿಭವಂತಿ** ನಾಶವಾಗುವರು ಎಂದು ನಿಯಮ ಮಾಡುವ ಜನರು **ಅಶ್ನತಃ** ದುಃಖ ಅನುಭವಿಸುವವರನ್ನು ಅನಾದರಿಸಿ **ಕಲ್ಪತೇ** ಸಮರ್ಥರಾಗುವರು. 'ಷಷ್ಠೀ ಚ ಅನಾದರೇ' ಎಂದಿರುವದರಿಂದ. ಏಕೆಂದರೆ ಹೇಳುವರು. **ಕ್ಷೇಮಾಯ** ಎಂದು. 'ಶನೈಃ ಶನೈಶ್ಚರೇ ಸ್ವೈರೇ' ಎಂದು ವಿಶ್ವವಿದೆ. 'ಅಮಾ ಸಹಾರ್ಥಾಂತಿ' ಎಂದು ವಿಶ್ವವಿದೆ.

**ಏವಂ** ಹಿಂದೆ ಹೇಳಿದಂತೆ **ನಿಯಮಕೃತ್** ತನಗೆ ಶಿಕ್ಷಕನಾದ ಯಮಕೃತ್ ಯಮ ಸಂಪಾದಕನು ನಿ ನ ಭವತಿ । ಯಮನು ಇವನನ್ನು ಶಿಕ್ಷಿಸುವದಿಲ್ಲವೆಂದರ್ಥ. 'ನಿರ್ನಿಶ್ಚಯೇ ನಿಷೇಧೇ ಚ' ಎಂದು ವಿಶ್ವವಿದೆ. 'ನಿರಾಮಿಣಃ ನಿಖಿಲಂ' ಮುಂತಾದ ಪ್ರಯೋಗಗಳಿವೆ. ಕೃಂತತಿ ಕರ್ತಯತಿ ಇತಿ ಕೃತ್ ಸ್ವಯಂ ದೂತಾದಿತೋ ವಾ 'ಕೃತೀ ಛೇದನೇ' ಧಾತು. ಯಮಶ್ಚಾಸೌ ಕೃಚ್ಚ ಯಮಕೃತ್. ಯಮನೆಂಬ ಕತ್ತರಿಸುವವನು **ನಿ** ಇರಲಾರನು ಯಾವನಿಗೋ ಅವನು ನಿಯಮಕೃತ್ ವಿಶೇಷಣವಿಶೇಷ್ಯಭಾವ.

ಕಾಮಚಾರಿ ಎಂಬುದನ್ನು ವೈಯ್ಯಾಕರಣಿಗಳು ಬಹಳವಾಗಿ ಅಂಗೀಕರಿಸಿದ್ದರಿಂದ. ಇದೇ ಮೊದಲಾದ ಅರ್ಥಕ್ಕೆ ಪದ್ಯದ ಪದಗಳ ಶಾಬಲ್ಯವೇ ಅನುಕೂಲ ಮಾಡಿಕೊಡುವದು. ಆದ್ದರಿಂದ ನಮಗೇನೂ ಪ್ರಯಾಸವಿಲ್ಲ ಎನ್ನುವರು ಸ್ವಾಮಿಗಳು.

ಮೇಲಿನ ಎರಡು ಶ್ಲೋಕಕ್ಕೆ ಶ್ರೀ ಸತ್ಯಾಭಿನವರ ವ್ಯಾಖ್ಯಾನ ಕೆಳಗಿನಂತೆ ಇದೆ. **ಕರ್ಮಣಾ** ಪ್ರಾಯಶ್ಚಿತ್ತ ಕರ್ಮದಿಂದ **ಆತ್ಯಂತಿಕಃ ಕರ್ಮನಿರ್ಹಾರಃ ನ ಹಿ** ಅವಧಾರಣೆ. ಇಷ್ಯತೇ ಪ್ರಾಮಾಣಿಕರಿಂದ ಪಾಪಕರ್ಮನಾಶವು ಅಂಗೀಕೃತವಲ್ಲವೇ ಅಲ್ಲ. ಏಕೆಂದರೆ **ಅವಿದ್ವದಧಿಕಾರಿತ್ವಾತ್** ಇಲ್ಲಿಯ ಅಕಾರ ಬ್ರಹ್ಮವಾಚಕ. ಅಂದರೆ ಆತ್ಯಂತಿಕಕರ್ಮೋಚ್ಛೇದ ಬ್ರಹ್ಮಾಪರೋಕ್ಷಜ್ಞಾನ್ಯಧಿಕಾರಿಕವಾಗಿದ್ದರಿಂದ. ಅಂದರೆ ಅಪರೋಕ್ಷಜ್ಞಾನಿಗೆ ಮಾತ್ರ ಸಂಪೂರ್ಣ ಪಾಪನಾಶಕವಾಗುವದು ಎಂದು ಭಾವ. ಹಾಗಾದರೆ ಪ್ರಾಯಶ್ಚಿತ್ತ ಮಾಡುವದು ವ್ಯರ್ಥವೇ ಎಂದರೆ ಹೇಳುವರು. ಪ್ರಾಯಶ್ಚಿತ್ತ ವಿಮರ್ಶನಂ ಎಂದು. ಪ್ರಾಯಶ್ಚಿತ್ತದಿಂದ ಭಗವದಪರೋಕ್ಷಜ್ಞಾನವಾಗುವದು. ಇದನ್ನೇ ವಿವರಿಸುವರು. **ನಾಶ್ನತಃ** ಎಂದು. **ಹೇ ರಾಜನ್** ಪರೀಕ್ಷಿತನೇ **ಯಥಾ** ಹೇಗೆ **ಪಥ್ಯಮೇವ ಅನ್ನಂ ಅಶ್ನತಃ** ಹಿತವಾದ ಆಹಾರ ತಿನ್ನುವವನಿಗೆ **ವ್ಯಾಧಯಃ** ರೋಗಗಳು **ನ ಅಭಿಭವಂತಿ** ಉಂಟಾಗಲಾರವು. ಕಿಂತು **ಕ್ಷೇಮಾಯ ಕಲ್ಪತೇ** ಸುಖವಾಗಿರಲು ಕಾರಣವಾಗುವದು. **ಏವಂ** ಅದರಂತೆ **ನಿಯಮಕೃತ್** ಪ್ರಾಯಶ್ಚಿತ್ತ ಮಾಡಿದವನು **ಶನೈಃ ಕ್ಷೇಮಾಯ ಕಲ್ಪತೇ** ಸಾವಕಾಶವಾಗಿ ಭಗವಂತನ ಅಪರೋಕ್ಷ ಜ್ಞಾನವನ್ನು ಹೊಂದಿ ನೈಮಿತ್ತಿಕ ಆತ್ಯಂತಿಕ ಕರ್ಮೋಚ್ಛೇದವನ್ನು ಹೊಂದಿ ಮೋಕ್ಷ ಹೊಂದಿ ಸಮರ್ಥನಾಗುವನು ಎಂಬುದು **ಹಿ** 'ಕರ್ಮಣಾ ಜ್ಞಾನಮಾತನೋತಿ' ಎಂಬ ಪ್ರಮಾಣದಿಂದ ಸಿದ್ಧವಾದುದು.

ಇದರಿಂದ 'ಅವಿದ್ವದಧಿಕಾರಿತ್ವಾತ್' ಎಂಬುದು ವ್ಯರ್ಥ ಎಂಬ ದೂಷಣ ನಿರಾಕೃತವಾಯಿತು. ಪ್ರಾಯಶ್ಚಿತ್ತ ರೂಪ ಕರ್ಮದಿಂದ ಆತ್ಯಂತಿಕ ಕರ್ಮೋಚ್ಛೇದ. ಇಲ್ಲಿ ಬ್ರಹ್ಮಜ್ಞಾನದಿಂದಲೇ ಆತ್ಯಂತಿಕ ಕರ್ಮೋಚ್ಛೇದ. ಕರ್ಮದಿಂದಲ್ಲ ಎಂಬುದನ್ನು ಉಪಪಾದನ ಮಾಡಲು ಅವಿದ್ವದಧಿಕಾರಿತ್ವಾತ್ ಎಂದಿರುವರು ಎಂದು ಅಂಗೀಕರಿಸಿದೆ. ಇದರಿಂದಲೇ ಪ್ರಾಯಶ್ಚಿತ್ತವಿಮರ್ಶನಂ ಎಂಬುದು ವ್ಯರ್ಥ ಎಂಬ ದೂಷಣವು ನಿರಾಕೃತವಾಯಿತು. ಪ್ರಾಯಶ್ಚಿತ್ತದಿಂದ ಭಗವದಪರೋಕ್ಷಜ್ಞಾನದಿಂದ ಆತ್ಯಂತಿಕ ಕರ್ಮೋಚ್ಛೇದವಾಗುವದು. ಆದ್ದರಿಂದ ಪ್ರಾಯಶ್ಚಿತ್ತ ವ್ಯರ್ಥವಲ್ಲ ಎಂದು ಹೇಳಲು 'ಪ್ರಾಯಶ್ಚಿತ್ತವಿಮರ್ಶನಂ' ಎಂದು ಹೇಳಿದೆ ಎಂದು ಅಂಗೀಕರಿಸಿದೆ.

ಇದರಿಂದಲೇ ನಾಽಶ್ನತಃ ಎಂಬುದು ವ್ಯರ್ಥ ಎಂಬ ದೂಷಣವು ಪರಿಹೃತವಾಯಿತು. ದೃಷ್ಟಾಂತಪೂರ್ವಕವಾಗಿ ಪ್ರಾಯಶ್ಚಿತ್ತದಿಂದ ಅಪರೋಕ್ಷಜ್ಞಾನವು ಆದಕ್ಕೆ ಆತ್ಯಂತಿಕ ಕರ್ಮೋಚ್ಛೇದ ಅವಾಂತರಫಲ ಮೋಕ್ಷವು ಮುಖ್ಯಫಲವೆಂದು ಹೇಳಲು **ನಾಶ್ನತಃ** ಎಂಬ ಶ್ಲೋಕ ಪ್ರವೃತ್ತವಾಗಿದೆ ಎಂದು ಅಂಗೀಕರಿಸಿದೆ. ॥೧೨॥

ಉತ್ತಮ ಅನುತ್ತಮ ಅಧಿಕಾರಿಗಳನ್ನು ಕುರಿತು ಮಾಡಬೇಕಾದ ಮಾಡಬಾರದ ಸಾಧನಗಳ ರೀತಿಯನ್ನು ಕೆಲವು ಶ್ಲೋಕಗಳಿಂದ ಹೇಳುವರು-

**ತಪಸಾ ಬ್ರಹ್ಮಚರ್ಯೇಣ ಶಮೇನ ಚ ದಮೇನ ಚ ।**
**ತ್ಯಾಗೇನ ಸತ್ಯಶೌಚಾಭ್ಯಾಂ ನಿಯಮೇನ ಯಮೇನ ಚ ॥೧೩॥**

**ದೇಹವಾಗ್ಬುದ್ಧಿಜಂ ಧೀರಾ ಧರ್ಮಜ್ಞಾಃ ಶ್ರದ್ಧಯಾನ್ವಿತಾಃ ।**
**ಕ್ಷಪಂತ್ಯಘಂ ಮಹದಪಿ ವೇಣುಗುಲ್ಮಮಿವಾನಲಃ ॥೧೪॥**

**ಧರ್ಮಜ್ಞಾಃ** ತಾವು ಮಾಡಿದ ಪಾಪಕ್ಕೆ ಇದು ಪ್ರಾಯಶ್ಚಿತ್ತವೆಂದು ತಿಳಿದ **ಶ್ರದ್ಧಯಾ** ಆಸ್ತಿಕ್ಯಬುದ್ಧಿಯಿಂದ **ಅನ್ವಿತಾಃ** ಕೂಡಿದ (ಕೇಚಿತ್) **ಧೀರಾಃ** ಕೆಲವರು ಜ್ಞಾನಿಗಳು **ತಪಸಾ** ಕೃಚ್ಛ್ರ-ಚಾಂದ್ರಾಯಣಾದಿ ತಪಸ್ಸಿನಿಂದಲೂ ಸಚ್ಛಾಸ್ತ್ರಾಲೋಚನದಿಂದಲೂ 'ತಪ ಆಲೋಚನಂ ಪ್ರೋಕ್ತಂ' 'ದೇವದ್ವಿಜಗುರುಪ್ರಾಜ್ಞಪೂಜನಂ' ಎಂದಾರಂಭಿಸಿ ಗೀತೆಯಲ್ಲಿ ಹೇಳಿದ ಕಾಯಕ್ಲೇಶ-ಅನಶನಾದಿರೂಪ ತಪಸ್ಸಿನಿಂದಲೂ **ಬ್ರಹ್ಮಚರ್ಯೇಣ** ಏಕಪತ್ನೀತ್ವ ವಿಹಿತ ಕಾಲಗಾಮಿತ್ವ ಎಂಬ ಬ್ರಹ್ಮಚರ್ಯದಿಂದ ಅಥವಾ ಅಷ್ಟವಿಧ ಬ್ರಹ್ಮಚರ್ಯದಿಂದ 'ಸ್ಮರಣಂ ಕೀರ್ತನಂ ಕೇಲಿಃ ಪ್ರೇಕ್ಷಣಂ ಗುಹ್ಯಭಾಷಣಂ । ಸಂಕಲ್ಪೋಽಧ್ಯವಸಾಯಶ್ಚ ಕ್ರಿಯಾನಿರ್ವೃತಿರೇವ ಚ । ಏತನ್ಮೈಥುನಮಷ್ಟಾಂಗಂ ಪ್ರವದಂತಿ ಮನೀಷಿಣಃ । ವಿಪರೀತಂ ಬ್ರಹ್ಮಚರ್ಯಮೇತದೇವಾಷ್ಟಲಕ್ಷಣಮ್' **ಶಮೇನ** ಶ್ರೀಹರಿಯಲ್ಲಿ ನಿಷ್ಠೆಯಿಂದಲೂ ಶತ್ರು-ಮಿತ್ರ ಮುಂತಾದ ಬುದ್ಧಿಯನ್ನು ಬಿಡುವುದರಿಂದ **ದಮೇನ** ಇಂದ್ರಿಯನಿಗ್ರಹದಿಂದಲೂ 'ಶಮೋ ಮನ್ನಿಷ್ಠತಾ ಬುದ್ಧೇರ್ದಮ ಇಂದ್ರಿಯನಿಗ್ರಹಃ' ಎಂದಿದೆ. ಮತ್ತು 'ಶಮಃ ಪ್ರಿಯಾದಿವೈಧುರ್ಯೇ' ಎಂದೂ ಇದೆ. **ತ್ಯಾಗೇನ** ೧. ಅಹಂಕಾರ ಮಮಕಾರಗಳ ತ್ಯಾಗದಿಂದ 'ಮಿಥ್ಯಾಭಿಮಾನವಿರತಿಸ್ತ್ಯಾಗ ಇತ್ಯಭಿಧೀಯತೇ' ೨. ಕಾಮ್ಯಕರ್ಮ ತ್ಯಾಗದಿಂದಲೂ 'ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ' ೩. ಸತ್ಪಾತ್ರರಲ್ಲಿ ದ್ರವ್ಯಸಮರ್ಪಿಸುವುದರಿಂದಲೂ **ಸತ್ಯ...** ಭೂತಹಿತದಿಂದ 'ಸತ್ಯಂ ಭೂತಹಿತಂ

ಕಾಮಚಾರಿ ಎಂಬುದನ್ನು ವೈಯ್ಯಾಕರಣಿಗಳು ಬಹಳವಾಗಿ ಅಂಗೀಕರಿಸಿದ್ದರಿಂದ. ಇದೇ ಮೊದಲಾದ ಅರ್ಥಕ್ಕೆ ಪದ್ಯದ ಪದಗಳ ಶಾಬಲ್ಯವೇ ಅನುಕೂಲ ಮಾಡಿಕೊಡುವದು. ಆದ್ದರಿಂದ ನಮಗೇನೂ ಪ್ರಯಾಸವಿಲ್ಲ ಎನ್ನುವರು ಸ್ವಾಮಿಗಳು.

ಮೇಲಿನ ಎರಡು ಶ್ಲೋಕಕ್ಕೆ ಶ್ರೀ ಸತ್ಯಾಭಿನವರ ವ್ಯಾಖ್ಯಾನ ಕೆಳಗಿನಂತೆ ಇದೆ. **ಕರ್ಮಣಾ** ಪ್ರಾಯಶ್ಚಿತ್ತ ಕರ್ಮದಿಂದ **ಆತ್ಯಂತಿಕಃ ಕರ್ಮನಿರ್ಹಾರಃ ನ ಹಿ** ಅವಧಾರಣೆ. ಇಷ್ಟತೇ ಪ್ರಾಮಾಣಿಕರಿಂದ ಪಾಪಕರ್ಮನಾಶವು ಅಂಗೀಕೃತವಲ್ಲವೇ ಅಲ್ಲ. ಏಕೆಂದರೆ **ಅವಿದ್ವದಧಿಕಾರಿತ್ವಾತ್** ಇಲ್ಲಿಯ ಅಕಾರ ಬ್ರಹ್ಮವಾಚಕ. ಅಂದರೆ ಆತ್ಯಂತಿಕಕರ್ಮೋಚ್ಛೇದ ಬ್ರಹ್ಮಾಪರೋಕ್ಷಜ್ಞಾನ್ಯಧಿಕಾರಿಕವಾಗಿದ್ದರಿಂದ. ಅಂದರೆ ಅಪರೋಕ್ಷಜ್ಞಾನಿಗೆ ಮಾತ್ರ ಸಂಪೂರ್ಣ ಪಾಪನಾಶಕವಾಗುವದು ಎಂದು ಭಾವ. ಹಾಗಾದರೆ ಪ್ರಾಯಶ್ಚಿತ್ತ ಮಾಡುವದು ವ್ಯರ್ಥವೇ ಎಂದರೆ ಹೇಳುವರು. ಪ್ರಾಯಶ್ಚಿತ್ತ ವಿಮರ್ಶನಂ ಎಂದು. ಪ್ರಾಯಶ್ಚಿತ್ತದಿಂದ ಭಗವದಪರೋಕ್ಷಜ್ಞಾನವಾಗುವದು. ಇದನ್ನೇ ವಿವರಿಸುವರು. **ನಾಶ್ನತಃ** ಎಂದು. **ಹೇ ರಾಜನ್** ಪರೀಕ್ಷಿತನೇ **ಯಥಾ** ಹೇಗೆ **ಪಥ್ಯಮೇವ ಅನ್ನಂ ಅಶ್ನತಃ** ಹಿತವಾದ ಆಹಾರ ತಿನ್ನುವವನಿಗೆ **ವ್ಯಾಧಯಃ** ರೋಗಗಳು **ನ ಅಭಿಭವಂತಿ** ಉಂಟಾಗಲಾರವು. ಕಿಂತು **ಕ್ಷೇಮಾಯ ಕಲ್ಪತೇ** ಸುಖವಾಗಿರಲು ಕಾರಣವಾಗುವದು. **ಏವಂ** ಅದರಂತೆ **ನಿಯಮಕೃತ್** ಪ್ರಾಯಶ್ಚಿತ್ತ ಮಾಡಿದವನು **ಶನೈಃ ಕ್ಷೇಮಾಯ ಕಲ್ಪತೇ** ಸಾವಕಾಶವಾಗಿ ಭಗವಂತನ ಅಪರೋಕ್ಷ ಜ್ಞಾನವನ್ನು ಹೊಂದಿ ನೈಮಿತ್ತಿಕ ಆತ್ಯಂತಿಕ ಕರ್ಮೋಚ್ಛೇದವನ್ನು ಹೊಂದಿ ಮೋಕ್ಷ ಹೊಂದಿ ಸಮರ್ಥನಾಗುವನು ಎಂಬುದು ಹಿ 'ಕರ್ಮಣಾ ಜ್ಞಾನಮಾತನೋತಿ' ಎಂಬ ಪ್ರಮಾಣದಿಂದ ಸಿದ್ಧವಾದುದು.

ಇದರಿಂದ 'ಅವಿದ್ವದಧಿಕಾರಿತ್ವಾತ್' ಎಂಬುದು ವ್ಯರ್ಥ ಎಂಬ ದೂಷಣ ನಿರಾಕೃತವಾಯಿತು. ಪ್ರಾಯಶ್ಚಿತ್ತ ರೂಪ ಕರ್ಮದಿಂದ ಆತ್ಯಂತಿಕ ಕರ್ಮೋಚ್ಛೇದ. ಇಲ್ಲಿ ಬ್ರಹ್ಮಜ್ಞಾನದಿಂದಲೇ ಆತ್ಯಂತಿಕ ಕರ್ಮೋಚ್ಛೇದ. ಕರ್ಮದಿಂದಲ್ಲ ಎಂಬುದನ್ನು ಉಪಪಾದನ ಮಾಡಲು ಅವಿದ್ವದಧಿಕಾರಿತ್ವಾತ್ ಎಂದಿರುವರು ಎಂದು ಅಂಗೀಕರಿಸಿದೆ. ಇದರಿಂದಲೇ ಪ್ರಾಯಶ್ಚಿತ್ತವಿಮರ್ಶನಂ ಎಂಬುದು ವ್ಯರ್ಥ ಎಂಬ ದೂಷಣವು ನಿರಾಕೃತವಾಯಿತು. ಪ್ರಾಯಶ್ಚಿತ್ತದಿಂದ ಭಗವದಪರೋಕ್ಷಜ್ಞಾನದಿಂದ ಆತ್ಯಂತಿಕ ಕರ್ಮೋಚ್ಛೇದವಾಗುವದು. ಆದ್ದರಿಂದ ಪ್ರಾಯಶ್ಚಿತ್ತ ವ್ಯರ್ಥವಲ್ಲ ಎಂದು ಹೇಳಲು 'ಪ್ರಾಯಶ್ಚಿತ್ತವಿಮರ್ಶನಂ' ಎಂದು ಹೇಳಿದೆ ಎಂದು ಅಂಗೀಕರಿಸಿದೆ.

ಇದರಿಂದಲೇ ನಾಽಶ್ನತಃ ಎಂಬುದು ವ್ಯರ್ಥ ಎಂಬ ದೂಷಣವು ಪರಿಹೃತವಾಯಿತು. ದೃಷ್ಟಾಂತಪೂರ್ವಕವಾಗಿ ಪ್ರಾಯಶ್ಚಿತ್ತದಿಂದ ಅಪರೋಕ್ಷಜ್ಞಾನವು ಅದಕ್ಕೆ ಆತ್ಯಂತಿಕ ಕರ್ಮೋಚ್ಛೇದ ಅವಾಂತರಫಲ ಮೋಕ್ಷವು ಮುಖ್ಯಫಲವೆಂದು ಹೇಳಲು **ನಾಶ್ನತಃ** ಎಂಬ ಶ್ಲೋಕ ಪ್ರವೃತ್ತವಾಗಿದೆ ಎಂದು ಅಂಗೀಕರಿಸಿದೆ. ॥೧೨॥

ಉತ್ತಮ ಅನುತ್ತಮ ಅಧಿಕಾರಿಗಳನ್ನು ಕುರಿತು ಮಾಡಬೇಕಾದ ಮಾಡಬಾರದ ಸಾಧನಗಳ ರೀತಿಯನ್ನು ಕೆಲವು ಶ್ಲೋಕಗಳಿಂದ ಹೇಳುವರು-

**ತಪಸಾ ಬ್ರಹ್ಮಚರ್ಯೇಣ ಶಮೇನ ಚ ದಮೇನ ಚ ।**
**ತ್ಯಾಗೇನ ಸತ್ಯಶೌಚಾಭ್ಯಾಂ ನಿಯಮೇನ ಯಮೇನ ಚ ॥೧೩॥**

**ದೇಹವಾಗ್ಬುದ್ಧಿಜಂ ಧೀರಾ ಧರ್ಮಜ್ಞಾಃ ಶ್ರದ್ಧಯಾನ್ವಿತಾಃ ।**
**ಕ್ಷಪಂತ್ಯಘಂ ಮಹದಪಿ ವೇಣುಗುಲ್ಮಮಿವಾನಲಃ ॥೧೪॥**

**ಧರ್ಮಜ್ಞಾಃ** ತಾವು ಮಾಡಿದ ಪಾಪಕ್ಕೆ ಇದು ಪ್ರಾಯಶ್ಚಿತ್ತವೆಂದು ತಿಳಿದ **ಶ್ರದ್ಧಯಾ** ಆಸ್ತಿಕ್ಯಬುದ್ಧಿಯಿಂದ **ಅನ್ವಿತಾಃ** ಕೂಡಿದ (ಕೇಚಿತ್) **ಧೀರಾಃ** ಕೆಲವರು ಜ್ಞಾನಿಗಳು **ತಪಸಾ** ಕೃಚ್ಛ್ರ-ಚಾಂದ್ರಾಯಣಾದಿ ತಪಸ್ಸಿನಿಂದಲೂ ಸಚ್ಛಾಸ್ತ್ರಾಲೋಚನದಿಂದಲೂ 'ತಪ ಆಲೋಚನಂ ಪ್ರೋಕ್ತಂ' 'ದೇವದ್ವಿಜಗುರುಪ್ರಾಜ್ಞಪೂಜನಂ' ಎಂದಾರಂಭಿಸಿ ಗೀತೆಯಲ್ಲಿ ಹೇಳಿದ ಕಾಯಕ್ಲೇಶ-ಅನಶನಾದಿರೂಪ ತಪಸ್ಸಿನಿಂದಲೂ **ಬ್ರಹ್ಮಚರ್ಯೇಣ** ಏಕಪತ್ನೀತ್ವ ವಿಹಿತ ಕಾಲಗಾಮಿತ್ವ ಎಂಬ ಬ್ರಹ್ಮಚರ್ಯದಿಂದ ಅಥವಾ ಅಷ್ಟವಿಧ ಬ್ರಹ್ಮಚರ್ಯದಿಂದ 'ಸ್ಮರಣಂ ಕೀರ್ತನಂ ಕೇಲಿಃ ಪ್ರೇಕ್ಷಣಂ ಗುಹ್ಯಭಾಷಣಂ । ಸಂಕಲ್ಪೋಽಧ್ಯವಸಾಯಶ್ಚ ಕ್ರಿಯಾನಿರ್ವೃತಿರೇವ ಚ । ಏತನ್ಮೈಥುನಮಷ್ಟಾಂಗಂ ಪ್ರವದಂತಿ ಮನೀಷಿಣಃ । ವಿಪರೀತಂ ಬ್ರಹ್ಮಚರ್ಯಮೇತದೇವಾಷ್ಟಲಕ್ಷಣಮ್' **ಶಮೇನ** ಶ್ರೀಹರಿಯಲ್ಲಿ ನಿಷ್ಠೆಯಿಂದಲೂ ಶತ್ರು-ಮಿತ್ರ ಮುಂತಾದ ಬುದ್ಧಿಯನ್ನು ಬಿಡುವುದರಿಂದ **ದಮೇನ** ಇಂದ್ರಿಯನಿಗ್ರಹದಿಂದಲೂ 'ಶಮೋ ಮನ್ನಿಷ್ಠತಾ ಬುದ್ಧೇರ್ದಮ ಇಂದ್ರಿಯನಿಗ್ರಹಃ' ಎಂದಿದೆ. ಮತ್ತು 'ಶಮಃ ಪ್ರಿಯಾದಿವೈಧುರ್ಯೇ' ಎಂದೂ ಇದೆ. **ತ್ಯಾಗೇನ** ೧. ಅಹಂಕಾರ ಮಮಕಾರಗಳ ತ್ಯಾಗದಿಂದ 'ಮಿಥ್ಯಾಭಿಮಾನವಿರತಿಸ್ತ್ಯಾಗ ಇತ್ಯಭಿಧೀಯತೇ' ೨. ಕಾಮ್ಯಕರ್ಮ ತ್ಯಾಗದಿಂದಲೂ 'ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ' ೩. ಸತ್ಪಾತ್ರರಲ್ಲಿ ದ್ರವ್ಯಸಮರ್ಪಿಸುವುದರಿಂದಲೂ **ಸತ್ಯ...** ಭೂತಹಿತದಿಂದ 'ಸತ್ಯಂ ಭೂತಹಿತಂ

ಪ್ರೋಕ್ತಂ' 'ಯತ್ಸತಾಂ ಹಿತಮತ್ಯಂತಂ ತತ್ಸತ್ಯಮಿತಿ ಕಥ್ಯತೇ' ...**ಶೌಚಾಭ್ಯಾಂ** ಶರೀರಶುದ್ಧಿಯಿಂದ ಸದಾಚಾರದಿಂದ 'ಅಭಕ್ಷ್ಯಪರಿಹಾರಶ್ಚ ಸಂಸರ್ಗಶ್ಚಾಪ್ಯನಿಂದಿತೈಃ । ಸ್ವಧರ್ಮೇ ಚ ವ್ಯವಸ್ಥಾನಂ ಶೌಚಮೇತದುದಾಹೃತಮ್' ಎಂದು ಹೇಳಿದ ಶುಚಿತ್ವದಿಂದಲೂ **ಯಮೇನ** ವಿಷಯಾನಾಸಕ್ತಿಯಿಂದ **ನಿಯಮೇನ** ವಿಹಿತಕಲ್ಪಗಳ ಅತಿಕ್ರಮ ಮಾಡದಿರುವುದು ಎಂಬ ನಿಯಮದಿಂದ ಅಥವಾ 'ಅಹಿಂಸಾ ಸತ್ಯಮಸ್ತೇಯಮಸಂಗೋ ಹ್ರೀರಸಂಚಯಃ । ಆಸ್ತಿಕ್ಯಂ ಬ್ರಹ್ಮಚರ್ಯಂ ಚ ಮೌನಂ ಸ್ಥೈರ್ಯಂ ಕ್ಷಮಾಽಭಯಮ್ । ಶೌಚಂ ಜಪಸ್ತಪೋ ಹೋಮಃ ಶ್ರದ್ಧಾಽಽತಿಥ್ಯಂ ಮದರ್ಚನಮ್ । ತೀರ್ಥಾಟನಂ ಪರಾರ್ಥೇಹಾ ತುಷ್ಟಿರಾಚಾರ್ಯಸೇವನಮ್ । ಏತೇ ಯಮಾಸ್ಸನ್ನಿಯಮಾ ಉಭಯೋಃ ದ್ವಾದಶ ಸ್ಮೃತಾಃ । ಎಂದು ಏಕಾದಶಸ್ಕಂಧದಲ್ಲಿ ಭಗವಂತ ಹೇಳಿದ ಯಮ-ನಿಯಮಗಳಿಂದಲೂ ಇತ್ಯಾದಿ ಪ್ರಾಯಶ್ಚಿತ್ತದಿಂದ **ದೇಹವಾಗ್ಬುದ್ಧಿಜಂ** ಶರೀರ-ಮಾತು-ಮನಸ್ಸಿನಿಂದ ಮಾಡಿದ **ಮಹದಪಿ ಅಘಂ** ಅತಿಶಯವಾದ ಪಾಪವನ್ನು **ಅನಲಃ ಚ** ಕಾಡುಗಿಚ್ಚು **ವೇಣುಗುಲ್ಮಂ** ಇವ ಬಿದುರಿನ ಪೊದೆಯನ್ನು ಸುಡುವಂತೆ **ಕ್ಷಪಂತಿ** ನಾಶ ಮಾಡಿಕೊಳ್ಳುವರು.

**ವಿಶೇಷ ಅರ್ಥ**

**ಧರ್ಮಜ್ಞಾಃ** ಪುಣ್ಯಕರ್ಮವನ್ನು ಶ್ರೇಯಸ್ಸನ್ನು ತಿಳಿದವರು ಎಂದರ್ಥ. 'ಧರ್ಮಂ ಪುಣ್ಯಕರ್ಮ ಸ್ಯಾದ್ಧರ್ಮಮಸ್ತ್ರಿಯಾಂ ಪುಣ್ಯೇ ಶ್ರೇಯಸಿ' ಎಂದು ಅಮರ. ಅಥವಾ ಜಗದ್ಧಾರಕನಾದ್ದರಿಂದ ಧರ್ಮನೆನಿಸುವ ಪರಮಾತ್ಮನನ್ನು ತಿಳಿದವನೆಂದೂ ಅರ್ಥ. 'ಪೃಥಿವೀ ಧರ್ಮಮೂರ್ಧನಿ' ಎಂದು ಮೋಕ್ಷಧರ್ಮದಲ್ಲಿ ಪ್ರಯೋಗವಿರುವದರಿಂದ ಎಂದು ಗೀತಾಭಾಷ್ಯದಲ್ಲಿ ಹೇಳಿದೆ. **ಶ್ರದ್ಧಯಾನ್ವಿತಾಃ** ಶ್ರತ್ ಎಂಬ ಅವ್ಯಯ ಆಸ್ತಿಕ್ಯವಾಚಕ. ತದ್ಧತ್ತೇ ಇತಿ ಶ್ರದ್ಧಾ. ಪರಲೋಕಾದಿಗಳಿವೆ ಎಂಬ ನಿಷ್ಠೆ. 'ಶ್ರನ್ನಾಮಾಸ್ತಿಕ್ಯಮುಚ್ಯತೇ' ಎಂದು ಗೀತಾಭಾಷ್ಯದಲ್ಲಿದೆ. ಚೆಟ್ಟಿಯಲ್ಲಿ ೧೧ ರಿಂದ ೧೪ ರವರೆಗಿನ ಶ್ಲೋಕಗಳಿಗೆ ಮತ್ತೊಂದು ರೀತಿಯಿಂದ ಅರ್ಥ ಮಾಡಿರುವರು.

೧೧. ಪ್ರಾಯಶ್ಚಿತ್ತ ಮಾಡಿಕೊಳ್ಳುವವರು ಜ್ಞಾನಿಗಳೆಂದು ಅಜ್ಞಾನಿಗಳೆಂದೂ ಎರಡು ಬಗೆ. ಅಜ್ಞಾನಿಯು ಮಾಡಿದ ಪ್ರಾಯಶ್ಚಿತ್ತವು ಸಂಪೂರ್ಣವಾಗಿ ಪಾಪವನ್ನು ಹೋಗಲಾಡಿಸದಿದ್ದರೂ ಜ್ಞಾನಿಯು ಮಾಡಿದ ಪ್ರಾಯಶ್ಚಿತ್ತವು ಹೋಗಲಾಡಿಸುವದು. ಆದ್ದರಿಂದ ಪ್ರಾಯಶ್ಚಿತ್ತ ವಿಮರ್ಶನವು ಸಫಲ ಅಜ್ಞಾನಿಯು ಅಧಿಕಾರಿಯಾದ್ದರಿಂದಲೇ ಹನ್ನೆರಡು ವರ್ಷ ಯಾಗ ಮೊದಲಾದ ಪ್ರಾಯಶ್ಚಿತ್ತದಿಂದ ಪಾಪದ ಸಮೂಲನಾಶ

ಅಂಗೀಕೃತವಲ್ಲ. ಜ್ಞಾನಿಯು ಅಧಿಕಾರಿಯಾದಲ್ಲಿ ಸಮೂಲನಾಶ ಅಂಗೀಕೃತ. 'ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ತದೇವ ವೀರ್ಯವತ್ತರಂ ಭವತಿ' ಎಂಬ ಶ್ರುತಿಯು ಇದನ್ನು ತಿಳಿಸುವದು.

೧೨. ಹಾಗಾದರೆ ಅಜ್ಞಾನಿಯು ಮಾಡಿದ ಪ್ರಾಯಶ್ಚಿತ್ತವು ವ್ಯರ್ಥವೇ ಎಂದರೆ ಅಲ್ಲವೆನ್ನುತ್ತಾರೆ. ಪಥ್ಯವಾದ ಆಹಾರವನ್ನೇ ಸೇವಿಸುವವನಿಗೆ ರೋಗಗಳು ತೊಂದರೆ ಮಾಡದಿರುವಂತೆ ನಿಯತ ಪ್ರಾಯಶ್ಚಿತ್ತ ಮಾಡಿಕೊಂಡವನು ನಿಷಿದ್ಧವನ್ನು ಬಿಟ್ಟು ವಿಹಿತವನ್ನೇ ಮಾಡುವನು. ಅಜ್ಞಾನಿಯಾದರೂ ನಿಧಾನವಾಗಿ ಶ್ರೇಯಸ್ಸಿಗೆ ಸಮರ್ಥನಾಗುವನು. ಅಜ್ಞಾನಿಗೂ ಸಾವಕಾಶವಾಗಿ ಪಾಪ ಹೋಗುವದು ಎಂದು ಅರ್ಥ. ಇದಕ್ಕೆ 'ಅಹನ್ಯಹನ್ಯನುಷ್ಠಾನಂ ಯಜ್ಞಾನಾಂ ಮುನಿಸತ್ತಮ । ಉಪಕಾರಕರಂ ಪುಂಸಾಂ ಕ್ರಿಯಮಾಣಾಘಶಾಂತಿದಮ್' ಎಂಬ ವಿಷ್ಣುಪುರಾಣ ವಚನವು ಪ್ರಮಾಣ. (೧೩-೧೪)

ಜ್ಞಾನಿಗಳಿಗೆ ಪ್ರಾಯಶ್ಚಿತ್ತಾನುಷ್ಠಾನದಿಂದ ಪಾಪವು ಸಮೂಲವಾಗಿ ಹೋಗುವುದೆಂದು ಹೇಳಿತಲ್ಲವೇ? ಆದರೆ ಅವರ ಸ್ವಭಾವಸಿದ್ಧ ತಪಸ್ಸು ಮೊದಲಾದವುಗಳಿಂದಲೇ ಪಾಪ ಪರಿಹಾರವಾಗುವದರಿಂದ ಪ್ರಾಯಶ್ಚಿತ್ತದ ಅಗತ್ಯವೇ ಇಲ್ಲ ಎಂದು ಹೇಳುತ್ತಾರೆ. ಕೆಲವರು ಜ್ಞಾನಿಗಳು ಶ್ರದ್ಧೆಯಿಂದ ಅಂದರೆ ಪ್ರಾಯಶ್ಚಿತ್ತ ಏಕೆ? ಸ್ವಭಾವಸಿದ್ಧ ಶಮಾದಿಗಳಿಂದಲೇ ಎಲ್ಲ ಪಾಪಗಳ ಸಮೂಲ ನಾಶವಾಗುವದು ಎಂಬ ಆಸ್ತಿಕ್ಯ ಬುದ್ಧಿಯಿಂದ ಕೂಡಿದವರಾಗಿ ತಪಸ್ಸು ಮೊದಲಾದವುಗಳಿಂದ ತ್ರಿಕರಣಜನ್ಯ ಪಾಪವನ್ನು ಕಳೆದುಕೊಳ್ಳುವದು.

೧೫. ಮೇಲೆ ಹೇಳಿದ್ದು ಯೋಗಪ್ರಚುರ ಜ್ಞಾನಿಗಳ ವಿಷಯ. ಭಕ್ತಿಪ್ರಚುರ ಜ್ಞಾನಿಗಳು ಭಕ್ತಿಯಿಂದಲೇ ಎಲ್ಲ ಪಾಪಗಳನ್ನು ಕಳೆದುಕೊಳ್ಳುವರು. 'ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇಽರ್ಜುನ' ಎಂದಿದೆ. ॥೧೫॥

ಅಶಕ್ತಶರೀರವುಳ್ಳವರಾಗಿ ತಪಸ್ಸು ಮೊದಲಾದವನ್ನು ಮಾಡಲಾಗದವರಿಗೆ ಯಾವುದರಿಂದ ಪಾಪನಾಶವಾಗುವದು ಎಂದರೆ ಹೇಳುವರು-

**ಕೇಚಿತ್ಕೇವಲಯಾ ಭಕ್ತ್ಯಾ ವಾಸುದೇವಪರಾಯಣಾಃ ।**
**ಅಘಂ ಧುನ್ವಂತಿ ಕಾರ್ತ್ಸ್ನ್ಯೇನ ನೀಹಾರಮಿವ ಭಾಸ್ಕರಃ ॥೧೫॥**

**ಕೇಚಿತ್** ಕೆಲವರು ಜ್ಞಾನಿಗಳು **ವಾಸುದೇವಪರಾಯಣಾಃ ಸಂತಃ** ಶ್ರೀಹರಿಯೇ ಮುಖ್ಯಶರಣೆಂದು ತಿಳಿದವರಾಗಿ **ಕೇವಲಯಾ** ತಪಸ್ಸು ಮುಂತಾದ ಸಹಾಯಾಂತರವನ್ನು ಅಪೇಕ್ಷಿಸದೇ **ಭಕ್ತ್ಯಾ** ಶ್ರೀಹರಿಯಲ್ಲಿ ಮಾಡುವ ನಿರತಿಶಯ ಭಕ್ತಿಯಿಂದ **ಭಾಸ್ಕರಃ** ಸೂರ್ಯನು **ನೀಹಾರಂ ಇವ** ಮಂಜನ್ನು ಪೂರ್ಣ ನಾಶ ಮಾಡುವಂತೆ **ಅಘಂ** ಪಾಪವನ್ನು **ಕಾರ್ತ್ಸ್ನ್ಯೇನ** ಸಮೂಲವಾಗಿ **ಧುನ್ವಂತಿ** ಕಳೆದುಕೊಳ್ಳುವರು.

**ತಾತ್ಪರ್ಯ- ವಾಸುದೇವಪರಾಯಣಾಃ** ವಾಸುದೇವನೇ ಮುಖ್ಯಾಶ್ರಯನಾದವರು ಅಂದರೆ ಬೇರೆ ಫಲಕ್ಕಾಗಿ ಅವನಲ್ಲಿ ಆಸಕ್ತರಲ್ಲ ಎಂದರ್ಥ. ಅಂಥ ಭಾಗವತರು 'ಯೂಯಂ ಭಕ್ತ್ಯಾ ವಯಂ ಪ್ರಭೋ' ಎಂದು ನಾರದರು ಧರ್ಮನಿಗೆ ಹೇಳಿದ್ದರಿಂದ ಅವರೇ ಅಂಥ ಭಾಗವತರು. **ಕೇವಲಯಾ ಭಕ್ತ್ಯಾ** ತಪ ಆದಿಗಳಿಲ್ಲದೇ ಮುಖ್ಯಭಕ್ತಿಯಿಂದ 'ಯಾದೃಶೀ ಮಯಿ ಭಕ್ತಿಃ ಸ್ಯಾತ್ತಾದೃಶ್ಯನತ್ರ ನೈವ ಚೇತ್ । ಅನನ್ಯಭಕ್ತಿರ್ವಿಜ್ಞೇಯಾ...' ಎಂದು ಅರ್ಥ ಇಟ್ಟುಕೊಂಡಾಗ ವಾಸುದೇವಪರಾಯಣಾಃ ಎಂಬುದು ಹೆಚ್ಚಾಗುವುದು ಕಾರಣ ಹೀಗೆ ವ್ಯಾಖ್ಯಾನಿಸುವರು. ವಾ ಎಂದು. ಅಸುದೇವಪರಾಯಣಾಃ ಮುಖ್ಯಪ್ರಾಣನಲ್ಲಿ ಪರಾಯಣರಾದವರು ಎಂದು ಅರ್ಥ. 'ವಾ ವಿಕಲ್ಪೇ' ಎಂದು ವಿಶ್ವವಿದೆ. 'ದೇಹೇऽಪಿ ಯತ್ರ ಪವನಃ' 'ವಿಷ್ಣುರ್ಹಿ ದಾತಾ ಮೋಕ್ಷಸ್ಯ ವಾಯುಶ್ಚ ತದನುಜ್ಞಯಾ' 'ವಾಯುರನಿಲಮಮೃತಂ' 'ವಾಯುರಪ್ಯಮೃತಃ ಸ್ಮೃತಃ' ಮುಂತಾಗಿ ಇರುವುದರಿಂದ ಮುಖ್ಯಪ್ರಾಣಪರಾಯಣತೆಯು ಭಗವತ್ಪರಾಯಣತ್ವಕ್ಕೆ ಅನುಸಾರಿಯಾದುದು ಅವಶ್ಯಕವೇ. ಆದ್ದರಿಂದ ಹೆಚ್ಚೇನಿಲ್ಲ. ಈ ಆಧಿಕ್ಯದಿಂದ ಹೆದರಿದ ಕೆಲವರು ಇದು ಅಧಿಕಾರಿ ವಿಶೇಷಣವಲ್ಲ. ಬೇರೆಯವರು ಅಶ್ರದ್ಧೆಯಿಂದ ಅವನಲ್ಲಿ ಪ್ರವೃತ್ತರಾಗಿದ್ದರಿಂದ ಅರ್ಥಾತ್ ಅವರಲ್ಲಿ ಪರ್ಯವಸಾನವಾಗುವದರಿಂದ ಅನುವಾದ ಮಾತ್ರ ಎಂದು ವ್ಯಾಖ್ಯಾನಿಸಿದ್ದು ನಿರಾಕೃತವಾಯಿತು.

ಅಥವಾ **ಕೇ** ಕೆಲವರು **ಚಿತ್ಕೇ** ಚಿತಃ ಜ್ಞಾನಸ್ಯ ಕಂ ಸುಖಂ ಚಿತ್ಕಂ ಷಷ್ಠಿಗೆ ತಪಸ್ಸಾಧ್ಯತ್ವ ಸಂಬಂಧ. ಅಂದರೆ ಜ್ಞಾನಮಾತ್ರಸಾಧ್ಯವಾದ ಮೋಕ್ಷ. ಸುಖದಲ್ಲಿ ವಿಷಯಸಪ್ತಮೀ ಎಂದಾದರೂ ತಿಳಿಯಬಹುದು. ವಿಷಯದಲ್ಲಿ 'ಯದಘಂ ತದಪಿ ಧುನ್ವಂತಿ ಎಂದನ್ವಯ. 'ಏಕಾಂತಾನಾಂ ನ ಕಸ್ಯಚಿತ್' ತ್ವತ್ಪಾದಪದ್ಮಾನ್ನ ಪರಂ ವೃಣೋಮ್ಯಹಂ' ಎಂದಿರುವದರಿಂದ ಮೋಕ್ಷಾಪೇಕ್ಷೆಯನ್ನು ಮಹಾಂತರು ಮಾಡುವದಿಲ್ಲ. ತಾನಾಗಿಯೇ ಮಧ್ಯದಲ್ಲಿ ಅದು ಬರುವದು. ಭಕ್ತಿಯು ಫಲಕಾಮನೆಯಿಂದ ಶಕ್ತಿ ಕಳೆದುಕೊಳ್ಳುವದು

ಎಂದು ಹೇಳುವರು **ವಲಯಾ** ಎಂದು. 'ವಬಯೋರಭೇದಾತ್' **ಬಲಯಾ** ಭಗವತ್ಭಕ್ತಿ ಮಾತ್ರ ಸಾಧನವಾದದ್ದೇ ಸಮರ್ಥವಾಗುವದು. ತಂ ಅಘಂ ಕೇ ಧುನ್ವಂತಿ ನ ಕೇऽಪಿ ಎಂದೂ ಅರ್ಥ.

ಅಥವಾ 'ವಲ ಸಂಚರಣೇ' ಎಂದು ಧಾತುವ್ಯಾಖ್ಯಾನವಿರುವದರಿಂದ ಮೋಕ್ಷಾದಿ ವಿಷಯದಲ್ಲಿ ಸಂಚರಿಸುವ ಭಕ್ತಿವಲತಯಾ ಭಕ್ತ್ಯಾ ಅಂದರೆ ಸಕಾಮ ಭಕ್ತಿಯಿಂದ ಯಾರೂ ಪಾಪನಾಶ ಮಾಡಿಕೊಳ್ಳಲಾರರೆಂದರ್ಥ. ಹಾಗಾದರೆ ಮೋಕ್ಷಾಪೇಕ್ಷೆ ಇಲ್ಲದವರು ಹೇಗಿರುವರು ಎಂದರೆ 'ವಾಸುದೇವಪರಾಯಣಾಃ ಅರ್ಥೇ ನಾರಾಯಣೋ ದೇವಃ ಸರ್ವಮನ್ಯತ್ತದರ್ಥಕಂ' ಎಂದಿರುವದರಿಂದ ಭಗವಂತನನ್ನು ಮಾತ್ರ ಇಚ್ಛಿಸುವವರು ಎಂದರ್ಥ. ಸೂರ್ಯನು ಹಿಮವನ್ನು ಸಂಪೂರ್ಣನಾಶ-ಮಾಡುವಂತೆ 'ತದಧಿಗಮೇ' ಎಂದು ಹೇಳಿದಂತೆ ಎಲ್ಲ ಪಾಪ ಕಳೆಯುವದು. ಪಾಪಗಳು ಅನೇಕವಿದ್ದರೂ ಅಘಾನಿ ಎನ್ನದೇ ಅಘಂ ಎಂದದ್ದರಿಂದ ಎಷ್ಟಾದರೂ ಅವು ಇರಲಿ ವಾಸುದೇವ ಪರಾಯಣರಿಗೆ ಅವು ಸ್ವಲ್ಪವೇ ಎಂದು ಧ್ವನಿತ ಪಡಿಸಿರುವರು ಎಂದು ತಿಳಿಯಬೇಕು. ।।೧೫।।

ಇದು ಅಶಕ್ತರು ಮಾಡುವುದು ಎಂದಾದರೆ ನಿಕೃಷ್ಟವೆಂದಾಯಿತಲ್ಲವೇ ? ಎಂದರೆ ಅಲ್ಲ, ಅದಕ್ಕಿಂತಲೂ ಶ್ರೇಷ್ಠವೆಂಬ ಅಭಿಪ್ರಾಯದಿಂದ ಹೇಳುವರು-

**ನ ತಥಾ ಹ್ಯಘವಾನ್ ರಾಜನ್ ಪೂಯೇತ ತಪಆದಿಭಿಃ ।**
**ಯಥಾ ಕೃಷ್ಣಾರ್ಪಿತಪ್ರಾಣಸ್ತತ್ಪೂರುಷನಿಷೇವಯಾ ।।೧೬।।**

**ರಾಜನ್** ಪರೀಕ್ಷಿತನೇ **ತತ್ಪೂರುಷನಿಷೇವಯಾ** ಶ್ರೀಹರಿಯ ಭಕ್ತರ ಭಕ್ತಿಪೂರ್ವಕವಾದ ಸೇವೆಯಿಂದ **ಕೃಷ್ಣಾರ್ಪಿತಪ್ರಾಣಃ** ಶ್ರೀಹರಿಗೆ ಸಮರ್ಪಿಸಿದ ಇಂದ್ರಿಯಗಳುಳ್ಳ ಭಕ್ತನು **ಯಥಾ** ಹೇಗೆ ಎಷ್ಟು **ಪೂಯೇತ** ಶುದ್ಧನಾಗುವನೋ **ತಥಾ** ಅಷ್ಟು **ತಪಆದಿಭಿಃ** ಭಕ್ತಿಯಿಲ್ಲದ ಹಿಂದೆ ಹೇಳಿದ ತಪಸ್ಸು ಮೊದಲಾದವುಗಳಿಂದ **ಅಘವಾನ್** ಪಾಪಿಯು **ನ ಪೂಯೇತ** ಶುದ್ಧನಾಗುವದಿಲ್ಲ. ಆದ್ದರಿಂದಲೇ ಹಿಂದಿನ ಶ್ಲೋಕದಲ್ಲಿ 'ಕಾರ್ತ್ಸ್ನ್ಯೇನ' ಎಂದು ಹೇಳಿದ್ದಾರೆ. **ನಿಷೇವಯಾ** ಎಂದದ್ದರಿಂದ ಶ್ರೀಹರಿಯಲ್ಲಿ ಭಕ್ತಿಯುಂಟಾಗಬೇಕಾದರೆ ಅವನ ಭಕ್ತರನ್ನು ಸೇವಿಸಬೇಕೆಂದು ಹೇಳಿದಂತಾಯಿತು. **ಹಿ** ಇದು ಶಾಸ್ತ್ರಸಿದ್ಧವಾಗಿದೆ.

'ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ । ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ' ಎಂಬಲ್ಲಿ ಸಿದ್ಧವಾಗಿದೆ ಎಂದು ಭಾವ. 'ಪುರುಷಾಃ ಪೂರುಷಾ ನರಾಃ' ಎಂದು ಅಮರವಿದೆ. ಆ ಭಕ್ತರು ಮೋಕ್ಷಕ್ಕಾಗಿ ಪ್ರಯತ್ನಿಸುವುದಿಲ್ಲ ಎಂದೂ ಹೇಳುವರು. ತತ್ಪೂರುಷಾ ಎಂದು. ತತ್ಪೂಃ ಭಗವಂತನ ಪಟ್ಟಣ ವೈಕುಂಠಾದಿಗಳು ಅಲ್ಲಿ **ರುಷಾ** ಕೋಪವು ಯಾರಿಗೆ ಉಂಟೋ ಅವರು ಪೂರುಷರು ತೇ ಚ ತೇ ಪೂರುಷಾಶ್ಚ ತಸ್ಯ ನಿಷೇವಯಾ ಮೋಕ್ಷವನ್ನು ಇಚ್ಛಿಸದ ಭಕ್ತರ ಸೇವೆಯಿಂದ ಎಂದರ್ಥ. ॥೧೬॥

ಪಾಪಪರಿಹಾರಕಗಳಾದ ಮೇಲೆ ಹೇಳಿದ ಮೂರು ಮಾರ್ಗಗಳಲ್ಲಿ ಭಕ್ತಿಮಾರ್ಗವೇ ಪ್ರಧಾನವೆಂದು ಅನ್ವಯ-ವ್ಯತಿರೇಕಗಳಿಂದ ದೃಢಪಡಿಸುವರು. ಭಕ್ತಿಯೇ ಶೋಧಕವೆನ್ನಲು ಮುಂದಿನ ಶ್ಲೋಕದಲ್ಲಿ ಕಾರಣ ಹೇಳುವರು-

**ಸಧ್ರೀಚೀನೋ ಹ್ಯಯಂ ಲೋಕೇ ಪಂಥಾಃ ಕ್ಷೇಮೋಽಕುತೋಽಭಯಃ ।**
**ಸುಶೀಲಾಃ ಸಾಧವೋ ಯತ್ರ ನಾರಾಯಣಪರಾಯಣಾಃ ॥೧೭॥**

೧.**ಲೋಕೇ** ಪ್ರಾಯಶ್ಚಿತ್ತವೆಂಬ ಸಾಧನಸಮೂಹದಲ್ಲಿ ೨. ಆಲೋಚಿಸಿ ನೋಡಿದರೆ ೩. ಭುವನದಲ್ಲಿ 'ಲೋಕಸ್ತು ಭುವನೇ ಜನೇ' ಎಂದು ಅಮರ. **ಯತ್ರ** ಯಾವ ಭಕ್ತಿ ಮಾರ್ಗದಲ್ಲಿ **ಸುಶೀಲಾಃ** ಪೂಜ್ಯವಾದ ಸ್ವಭಾವವುಳ್ಳ ಅತ್ಯಂತ ಒಳ್ಳೆಯ ನಡೆತೆಯುಳ್ಳ **ಸಾಧವಃ** ಸಜ್ಜನರಾದ **ನಾರಾಯಣಪರಾಯಣಾಃ** ಶ್ರೀಹರಿಯೇ ಮುಖ್ಯಾಶ್ರಯನೆಂದು ತಿಳಿದಿರುವ ಭಕ್ತರು **ಪ್ರವರ್ತಂತೇ** ಪ್ರವರ್ತಿಸುವರೋ **ಅಯಂ** ಅಂತಹ (ಅವ್ಯವಹಿತವೆಂದು ಅಭಿಮತವಾದ) ಈ **ಕ್ಷೇಮಃ** ಮೋಕ್ಷಕ್ಕೆ ಸಾಧನವಾದ ಆನಂದರೂಪವಾದ ಇಲ್ಲಿರುವಾಗಲೂ ಕ್ಷೇಮಕರವಾದ **ಅಕುತೋಭಯಃ** ವಿಘ್ನಾದಿಭಯಗಳಿಲ್ಲದ ಯಾರಿಂದಲೂ ಭಯವಿಲ್ಲದ **ಪಂಥಾಃ** ಭಕ್ತಿಮಾರ್ಗವು **ಸಧ್ರೀಚೀನಃ** ಸಮೀಚೀನವಾದುದು. ಸುಶೀಲರೇ ಭಕ್ತಿಮಾರ್ಗಕ್ಕೆ ಅಧಿಕಾರಿಗಳು ಎಂದು ಭಾವ.

'ಶೀಲಂ ಸ್ವಭಾವಃ ಸದ್ವೃತ್ತೇ' 'ಸು ಪೂಜಾಯಾಂ ಭೃಶಾರ್ಥೇ ಚ' ಎಂದು ವಿಶ್ವಕೋಶವಿದೆ.

ಭಕ್ತ್ಯಾದಿಗಳಿಂದ ಸಹಿತವಾದ ಬಲಿಷ್ಠವಾದ ತಪಸ್ಸು ಮೊದಲಾದವುಗಳು ಪಾಪ ಪರಿಹಾರಕವಾಗಿವೆ. ಭಕ್ತಿರಹಿತವಾದ ತಪಸ್ಸು ಮೊದಲಾದವುಗಳು ಪಾಪಪರಿಹಾರಕ ವಾಗುವುದಿಲ್ಲ. ಆದ್ದರಿಂದ ಭಕ್ತಿಯು ಪ್ರಧಾನವಾಗಿದೆ ಎಂದು ತಿಳಿಸುತ್ತಿದ್ದಾರೆ-

**ಪ್ರಾಯಶ್ಚಿತ್ತಾನಿ ಚೀರ್ಣಾನಿ ನಾರಾಯಣಪರಾಙ್ಮುಖೈಃ ।**
**ನ ವೈ ಪುನಂತಿ ರಾಜೇಂದ್ರ ಸುರಾಕುಂಭಮಿವಾಪಗಾಃ ॥೧೮॥**

**ರಾಜೇಂದ್ರ** ರಾಜಶ್ರೇಷ್ಠನೇ **ನಾರಾಯಣಪರಾಙ್ಮುಖೈಃ** ಶ್ರೀಹರಿಗೆ ಬೆನ್ನು ಮಾಡಿದ ಅಂದರೆ ಭಕ್ತರಲ್ಲದ ಜನರು **ಚೀರ್ಣಾನಿ** ಆಚರಿಸಿದ **ಪ್ರಾಯಶ್ಚಿತ್ತಾನಿ** ಪ್ರಾಯಶ್ಚಿತ್ತಗಳು **ಆಪಗಾಃ** ಗಂಗಾದಿನದಿಗಳು **ಸುರಾಕುಂಭಂ ಇವ** ಮದ್ಯದ ಗಡಿಗೆಯನ್ನು ಹೇಗೆ ಶುದ್ಧ ಮಾಡುವುದಿಲ್ಲವೋ ಹಾಗೆ **ನ ಪುನಂತಿ ವೈ** ಪಾಪಿಯನ್ನು ಶುದ್ಧಗೊಳಿಸಲಾರವು. ಸ್ವಯಂ ಪವಿತ್ರಕರವಾಗಿದ್ದರೂ ಪವಿತ್ರಗೊಳಿಸಲಾರವು ಎನ್ನಲು ಈ ದೃಷ್ಟಾಂತವನ್ನು ಕೊಟ್ಟಿರುವರು.

'ಸುರೋ ದೇವೇ ಸುರಾ ಮದ್ಯೇ' 'ಕುಂಭಃ ಸ್ಯಾದ್ ಘಟಃ' ಎಂದು ವಿಶ್ವಕೋಶವಿದೆ. 'ಆಪಗಾತ್ವಪಗಾಽಪಿ ಚ' ಎಂದು ದ್ವಿರೂಪಕೋಶವಿದೆ. ॥೧೮॥

ಬಹುಕಾಲ ಮಾಡಿದ ತಪಸ್ಸು ಮೊದಲಾದವುಗಳು ಶ್ರೀಹರಿಯ ಕೃಪೆಗೆ ಸಾಧನವಾಗುತ್ತವೆ. ಭಕ್ತಿಯು ಹಾಗಲ್ಲ, ಕ್ಷಿಪ್ರಫಲಕಾರಿಯಾಗಿದೆ. ಸರ್ವಾಧಿಕಾರಿ ಸಾಧಾರಣವಾಗಿದೆ. ಆದ್ದರಿಂದ ಭಕ್ತಿರೂಪವಾದ ಸಾಧನವು ಪ್ರಧಾನವಾಗಿದೆ ಎಂದು ಇಲ್ಲಿ ಹೇಳುತ್ತಿದ್ದಾರೆ-

**ಸಕೃನ್ಮನಃ ಕೃಷ್ಣಪದಾರವಿಂದಯೋ-**
**ರ್ನಿವೇಶಿತಂ ತದ್ಗುಣರಾಗಿ ಯೈರಿಹ ।**
**ನ ತೇ ಯಮಂ ಪಾಶಭೃತಶ್ಚ ತದ್ಭಟಾನ್**
**ಸ್ವಪ್ನೇಽಪಿ ಪಶ್ಯಂತಿ ಹಿ ಚೀರ್ಣನಿಷ್ಕೃತಾಃ ॥೧೯॥**

**ಇಹ** ಜೀವಸಮೂಹದಲ್ಲಿ **ಯೈಃ** ಯಾರಿಂದ **ತದ್ಗುಣರಾಗಿ** ಶ್ರೀಹರಿಯ ಗುಣಗಳಲ್ಲಿ ಅನುರಾಗ ಉಳ್ಳ **ಮನಃ** ಮನಸ್ಸು **ಕೃಷ್ಣಪದಾರವಿಂದಯೋಃ** ಶ್ರೀಕೃಷ್ಣನ ಪಾದಾರವಿಂದಗಳಲ್ಲಿ **ಸಕೃತ್** ಒಂದು ಸಲ **ನಿವೇಶಿತಂ** ಇಡಲ್ಪಟ್ಟಿತೋ **ಚೀರ್ಣನಿಷ್ಕೃತಾಃ** ತಾವು ಮಾಡಿದ ಪಾಪದಲ್ಲಿ ಪಶ್ಚಾತ್ತಾಪಪೂರ್ವಕ ಶ್ರೀಹರಿಯಲ್ಲಿ ಮನಸ್ಸಿಡುವುದೆಂಬ ಪ್ರಾಯಶ್ಚಿತ್ತ ಮಾಡಿಕೊಂಡ **ತೇ** ಅವರು **ಸ್ವಪ್ನೇಽಪಿ** ಕನಸಿನಲ್ಲಿಯೂ **ಯಮಂ** ಯಮನನ್ನು **ಪಾಶಭೃತಃ** ಪಾಶಧಾರಿಗಳಾದ **ತದ್ಭಟಾನ್ ಚ** ಯಮದೂತರನ್ನಾಗಲಿ **ನ ಪಶ್ಯಂತಿ ಹಿ** ನೋಡುವುದಿಲ್ಲ.

**ಸತ್ಯಧರ್ಮರ ವಿಶೇಷಾರ್ಥಗಳು**

**ಕೃಷ್ಣಪದಾರವಿಂದಯೋಃ** ಮೂಲರೂಪೀ ನಾರಾಯಣನೇ ಅಥವಾ ಸನ್ನಿಹಿತನಾದ್ದರಿಂದ ವಾಸುದೇವ ಪುತ್ರನೇ ಎಂದಾದರೂ ಅರ್ಥ. ತತ್ತ್ವ ಪ್ರಕಾಶಿಕೆಯಲ್ಲಿ 'ಕೃಷ್ಣ' ಮೂಲರೂಪಿ ನಾರಾಯಣ 'ಕೃಷ್ಣೋ ಮುಕ್ತೈರಿಜ್ಯತೇ ವೀತಮೋಹೈಃ' ಎಂದು ಹೇಳಿರುವರು. (ಮುಕ್ತರಿಂದ ಪೂಜಿಸಲ್ಪಡುವ ಕೃಷ್ಣನು ಮೂಲರೂಪಿಯೇ ಆಗಬೇಕಲ್ಲವೇ) ಅಥವಾ ನಿಯಮನಾದಿಗಳಿಂದ ಸಕಲಲೋಕಗಳನ್ನು ಕರ್ಷಣ ಮಾಡುವದರಿಂದ ಕೃಷ್ಣ 'ಯತಃ ಕರ್ಷಸಿ ದೇವೇಶ ನಿಯಮ್ಯ ಸಕಲಂ ಜಗತ್ ಅತೋ ವದಂತಿ ಮುನಯಃ ಕೃಷ್ಣಂ ತ್ವಾಂ ಬ್ರಹ್ಮವಾದಿನಃ' ಎಂದು ಮಹಾಕೂರ್ಮವಚನವನ್ನು ಗೀತಾಭಾಷ್ಯದಲ್ಲಿ ಹೇಳಿರುವರು. ದೇವನಿಯಾಮಕನೇ ನಿಯಮನ ಮಾಡಿ ಎಲ್ಲ ಜಗತ್ತನ್ನು ಸೆಳೆಯುವಿ ಆದುದರಿಂದ ನಿನ್ನನ್ನು ಜ್ಞಾನಿಗಳು ಕೃಷ್ಣನೆಂದು ಕರೆಯುವರು ಎಂದು ಕೂರ್ಮವಾಕ್ಯದ ಅರ್ಥ.

'ಕೃಷಿರ್ಭೂವಾಚಕಃ ಶಬ್ದಃ ಣಶ್ಚ ನಿರ್ವೃತಿವಾಚಕಃ ತಯೋರೈಕ್ಯಂ ಪರಂ ಬ್ರಹ್ಮ ಕೃಷ್ಣ ಇತ್ಯಭಿಧೀಯತೇ' ಎಂದೂ ಇದೆ. ಪೂರ್ಣಸುಖನಾದ್ದರಿಂದ ಕೃಷ್ಣನೆಂದರ್ಥ.

**ಪದಾರವಿಂದಯೋಃ** ಪಾದಗಳೆಂಬ ಕಮಲಗಳಲ್ಲಿ ಎಂದು ಹೇಳಿದ್ದರಿಂದ ಮನಸ್ಸಿಗೆ ಭ್ರಮರರೂಪತೆಯನ್ನು ಸೂಚಿಸಿರುವರು. 'ಸರಸಾಕ್ಷಿಭೃಂಗೈರ್ವರಾನನಾಬ್ಜಂ' ಮುಂತಾಗಿ ಪ್ರಯೋಗವಿದೆ. ಮುಖ ಕಮಲವಾದ್ದರಿಂದ ಕಣ್ಣುಗಳು ಭ್ರಮರವಾದಂತೆ. ದ್ವಿವಚನದಿಂದ ವಿಶೇಷಬಲದಿಂದ ವಿಲಕ್ಷಣ ಫಲ ಕೊಡುವದರಿಂದ ಎರಡನ್ನೂ ಹೇಳುವ ಆವಶ್ಯಕತೆ ಇದೆ ಎಂದು ತಿಳಿಸಿರುವರು.

'ಸುವರಿತಿ ಪ್ರತಿಷ್ಠೇ ದ್ವೇ ಏತೇ ಅಕ್ಷರೇ' ಎಂಬ ಬೃಹದಾರಣ್ಯದ ಭಾಷ್ಯದಲ್ಲಿ 'ಸ್ವಿತ್ಯಾನಂದಃ ಸಮುದ್ದಿಷ್ಟೋ ವರಿತಿ ಜ್ಞಾನಮುಚ್ಯತೇ । ಮೋಕ್ಷದಾನೇನ ತದ್ದಾನಾತ್ ಸುವರಸ್ಯ ಪದದ್ವಯಂ । ದಕ್ಷಿಣಶ್ಚೈವ ಸವ್ಯಶ್ಚ' ಮುಂತಾಗಿ ಹೇಳಿದೆ. ಸು ಎಂದರೆ ಆನಂದ ವರ್ ಎಂದರೆ ಜ್ಞಾನ. ಮೋಕ್ಷವನ್ನಿತ್ತು ಆನಂದ-ಜ್ಞಾನ ಕೊಡುವದರಿಂದ ಭಗವಂತನ ಬಲ ಎಡ ಪಾದಗಳು ಸುವರ ಎನಿಸುತ್ತವೆ ಎಂದರ್ಥ.

**ನಿವೇಶಿತಂ** ಸ್ಥಿರವಾಗಿ ಸ್ಥಾಪಿಸಿದ ಎಂದರ್ಥ. ಮನಸ್ಸು ಚಂಚಲವಲ್ಲವೇ? 'ಮನಸಶ್ಚಂಚಲತ್ವಾದ್ಧಿ ಸ್ಥಿತಿರ್ಯೋಗಸ್ಯ ವೈ ಸ್ಥಿರಾ । ವಿನಾಭ್ಯಾಸಾನ್ನ ಶಕ್ಯಾ ಸ್ಯಾದ್ವೈರಾಗ್ಯಾದ್ವಾ ನ ಸಂಶಯಃ । ಎಂದು ಆರನೇ ಅಧ್ಯಾಯ ಗೀತಾಭಾಷ್ಯದಲ್ಲಿದೆ.

ಮನಸ್ಸು ಚಂಚಲವಾದ್ದರಿಂದ ಅಭ್ಯಾಸವಿಲ್ಲದೇ ವೈರಾಗ್ಯವಿಲ್ಲದೇ ಯೋಗದ ಧ್ಯಾನದ ಸ್ಥಿರವಾದ ಸ್ಥಿತಿಯು ಅಶಕ್ಯ. ಇದಕ್ಕೆ ಸಂಶಯವಿಲ್ಲ ಎಂದರ್ಥ. ಇದು ಅಸಾಧ್ಯವೆಂದರೆ ಹೇಳುವರು 'ತದ್ಗುಣರಾಗಿ ಯೈರಿಹ' ಭಗವಂತನ ಗುಣಗಳಲ್ಲಿ ಆಸಕ್ತಿಯುಳ್ಳ ಮನಸ್ಸು ಎಂದರ್ಥ. ಈ ಮಾತನ್ನೇ ಶ್ರೀಮದಾಚಾರ್ಯರು ಏಳನೇ ಅಧ್ಯಾಯ ಗೀತಾಭಾಷ್ಯದಲ್ಲಿ 'ಆಸಕ್ತಮನಾಃ ಅತೀವ ಸ್ನೇಹಯುಕ್ತಮನಾಃ' ಎಂದಿದ್ದಾರೆ. 'ನ ಬಹುವ್ರೀಹಿಲಭ್ಯೇಽರ್ಥೇ ಭವಂತಿ ಮತುಬಾದಯಃ' ಎಂದಿರುವದರಿಂದ 'ತದ್ಗುಣ ರಾಗಂ' ಎಂದರೆ ಸಾಕಾಗುವಾಗ ರಾಗಿ ಅಂದದ್ದು ಹೇಗೆ ಎಂದರೆ ಈ ನಿಯಮ ಪ್ರಾಯಿಕ. 'ಏಕದೇಶೇನೈಕಾಧಿಕರಣ ಇತ್ಯತ ಏಕದೇಶಿನಃ' ಎಂದು ನಿರ್ದೇಶವಿದೆ. **ತದ್ಗುಣರಾಗಿ** ಶ್ರೀಹರಿಗಿಂತ ಅಪ್ರಧಾನವಾಗಿ ಬ್ರಹ್ಮಾದಿಗಳ ಭಕ್ತಿಯು ಭಗವಂತನ ಪ್ರಸಾದಕ್ಕೆ ಸಾಧನವೆಂದು 'ಉಪಾಸನಾಂಗದೇವಾನಾಂ ಪರಮಾಂಗತಯಾ ಭವೇತ್ । ತದ್ಭಕ್ತಭಕ್ತೇಷ್ವಪಿ ಯೋ ನ ಕುರ್ಯಾತ್ಪ್ರೀತಿಮಂಜಸಾ । ವಿಷ್ಣುರ್ಜಹಾತಿ ತಂ ಪಾಪಮಿಹ ಚಾಽಮುತ್ರ ಚ ಪ್ರಭುಃ । ಎಂದು ಭಾಷ್ಯ ಮತ್ತು ಭಾರತದಲ್ಲಿ ಹೇಳಿದೆ. 'ಶುಕ್ಲೆ ಸಂಧ್ಯಾದಿಕೇ ಗುಣಃ' ಎಂಬ ಅಮರವ್ಯಾಖ್ಯಾನವಾದ ಅಮರಸುಧೆಯಲ್ಲಿ 'ಗುಣೋ ಮೌರ್ವ್ಯಾಮಪ್ರಧಾನೇ ರೂಪಾದೌ' ಎಂದು ಹೇಳಿದ್ದಾನೆ. 'ಗುಣ ಸಮ್ಮೂಢಾಃ' ಎಂಬುದನ್ನು ವ್ಯಾಖ್ಯಾನಿಸುವಾಗ ಗೀತಾಭಾಷ್ಯದಲ್ಲಿ 'ಶಬ್ದಾದ್ಯಾ ಇಂದ್ರಿಯಾದ್ಯಾಶ್ಚ ಸತ್ವಾದ್ಯಾಶ್ಚ ಶುಭಾನಿ ಚ । ಅಪ್ರಧಾನಾನಿ ಚ ಗುಣಾ ನಿಗದ್ಯಂತೇ ನಿರುಕ್ತಿಗೈಃ' ಎಂದು ಅಭಿಧಾನ ಹೇಳಿರುವರು.

ನಮಂತ್ಯಸ್ಮಿನ್ ಗುಣಾಃ ಎಂಬ ಅನುವ್ಯಾಖ್ಯಾನ ವ್ಯಾಖ್ಯಾನ ಸುಧೆಯಲ್ಲಿ ಗುಣಾಃ ಉಪಸರ್ಜನಭೂತಾಃ ಬ್ರಹ್ಮಾದ್ಯಾಃ ಎಂದು ವ್ಯಾಖ್ಯಾನಿಸಿದ್ದಾರೆ. ಅಥವಾ ನಿವೇಶಿತ ಎಂಬಲ್ಲಿ ನಿ ಎಂಬ ಉಪಸರ್ಗದಿಂದ ಮಾಡಿದ ಪಾಪಕ್ಕೆ ಪಶ್ಚಾತ್ತಾಪ ದ್ಯೋತಿತವಾಗುವದು ತತ್ಪೂರ್ವಕವಾಗಿ ಇಟ್ಟ ಎಂದರ್ಥ. ಯಮ-ಯಮಭಟರ ಬಾಧೆ ಇಲ್ಲವೆಂದು ಭಾವ. ಎಚ್ಚರವಿರುವಾಗ ಅವರು ಎದುರಿಗೆ ಕಾಣದಿದ್ದರೂ ಕನಸಿನಲ್ಲಿ ಕಾಣಿಸಿದ ಅವರಿಂದ ಭಯವಾಗಬಹುದಲ್ಲ ಎಂದರೆ ಆಗುವದಿಲ್ಲ ಎನ್ನುವರು. ಸ್ವಪ್ನೇಽಪಿ ಎಂದು. ಅದಕ್ಕೆ ಕಾರಣ ಹೇಳುವರು. **ಹಿ ಚೀರ್ಣನಿಷ್ಕೃತಾಃ** ಎಂದು. ಮನೋನಿವೇಶದಿಂದಲೇ ಪ್ರಾಯಶ್ಚಿತ್ತ ಮಾಡಿದಂತಾಯಿತೆಂದು ಭಾವ.

ಯಮ-ಯಮಭಟರನ್ನು ನೋಡದಿರುವ ಮಾತ್ರದಿಂದ ಹೇಗೆ ಕೃತಾರ್ಥರಾದೇವು ಎಂದರೆ ಭಗವದ್ದೂತರ ದರ್ಶನವಾಗುವದು ಎಂದು ಹೇಳುವರು. 'ನತೇ ಯಮಂ' ಎಂದು. ಈಂ ರಮಾಂ ಯಮಯತಿ ನಿಯಮಯತಿ ಇತಿ ಈಯಮಃ ರಮಾಪತಿಃ

ನತಃ ಸರ್ವನತಶ್ಶ್ರಾಸೌ ಈಯಮಶ್ಚ ನತೇಯಮಃ ತಂ ತದ್ಭಟಾಂಶ್ಚ ಪಶ್ಯಂತಿ ಎಲ್ಲರಿಂದಲೂ ನಮಸ್ಕೃತನಾದ ಲಕ್ಷ್ಮೀಪತಿಯನ್ನು ಅವರ ಭಟರನ್ನು ನೋಡುವರೆಂದರ್ಥ. 'ಲಕ್ಷ್ಮ್ಯಾಮೀಸ್ಯಾದನವ್ಯಯಮಿತಿ ವಿಶ್ವಃ' ನತಾ ಪ್ರಣತಾ ಯಾ ಈ ತಾಂ । ಬ್ರಹ್ಮಾದಿನಮಸ್ಕೃತಳಾದ ರಮೆಯನ್ನು ನಿಯಮಿಸುವ ಎಂದೂ ಅರ್ಥ ಮಾಡಬಹುದು. 'ಪಾಶಃ ಪಕ್ಷ್ಯಾದಿಬಂಧನೇ ಕರ್ಮಾಂತೇ ಶೋಭನಾರ್ಥಕೇ' ಇತಿ ವಿಶ್ವೌ । ಪಾಶಭೃತಃ ಕಿವಿಗೆ ಶೋಭೆ ಕೊಡುವ ಕುಂಡಲ ಧರಿಸಿದ ಹರಿಭಟರೆಂದರ್ಥ. ಸ್ವಪ್ನೇಽಪಿ ಎಂದದ್ದರಿಂದ ಪಾರವಶ್ಯವಿದ್ದಾಗಲೇ ಹೀಗಿರುವಾಗ ಜಾಗ್ರದ್ದಶೆಯಲ್ಲಿ ಏನು ಹೇಳುವದು ಎಂದು ಸೂಚಿಸುವರು. ಅರ್ಥ ವಿಶೇಷ ಲಾಭದ ಲೋಭದಿಂದ ಆ ಶಬ್ದದ ಅಧ್ಯಾಹಾರ ಸಹಿಸಬೇಕು. ಹಾಗಾದರೆ ಯಾರು ಯಮಭಟರನ್ನು ನೋಡುವರು ಎಂದರೆ ಹೇಳುವರು.

**ಯೈಃ** ಯಾರಿಂದ **ಸಕೃತ್** ಒಮ್ಮೆಯಾದರೂ **ಕೃಷ್ಣಪದಾರವಿಂದಯೋಃ** ಪರಮಾತ್ಮನ ಪಾದಕಮಲಗಳಲ್ಲಿ ತದ್ಗುಣರಾಗಿ ತೇ ಚ ತೇ ಗುಣಾಶ್ಚ ತದ್ಗುಣಾಃ ಪ್ರಸಿದ್ಧವಾದ ವಿಷಯಗಳಲ್ಲಿ ರಾಗ ಅಶೋಭನವಾದವುಗಳನ್ನು ಶೋಭನವೆಂದು ತಿಳಿದು ಆಸಕ್ತನಾಗಿ **ಮನಃ** ಮನಸ್ಸು **ನ ನಿವೇಶಿತಂ** ಇಡಲ್ಪಟ್ಟಿಲ್ಲವೋ **ಹಿ** ಯಾವ ಕಾರಣ **ಮನಃ ವಶಿತಂ ನ** ಮನಸ್ಸು ವಶವಾಗಿಲ್ಲವೋ ಆದ್ದರಿಂದಲೇ **ನ ಚೀರ್ಣ ನಿಷ್ಕೃತಾಃ** ಪ್ರಾಯಶ್ಚಿತ್ತ ಮಾಡಿಲ್ಲವೋ **ತೇ** ಅವರು **ಯಮಂ ತದ್ಭಟಾನ್ ಪಶ್ಯಂತಿ** ಯಮನನ್ನು ಯಮಭಟರನ್ನು ನೋಡುವರು. ಅಪಶಬ್ದ ಜಾಗ್ರದವಸ್ಥಾ ಸಮುಚ್ಚಾಯಕ. ಸ್ವಪ್ನದಲ್ಲಿ ಎಚ್ಚತ್ತಾಗ ಸರ್ವದಾ ನೋಡುವರು. ಆದ್ದರಿಂದ ವಿಷಯಗಳಲ್ಲಿ ಮನಸ್ಸಿಡಬಾರದು. ಗೀತಾಭಾಷ್ಯದಲ್ಲಿ ಶೋಭನಾಧ್ಯಾಸಃ ರಾಗೇ 'ರಸೋ ರಾಗಸ್ತಥಾ ಸಕ್ತಿಃ ಶೋಭನಾಧ್ಯಾಸ ಉಚ್ಯತೇ' ಇತ್ಯಭಿಧಾನಾತ್ ಎಂದು ಹೇಳಿರುವರು. ।।೧೯।।

ಯಾವುದೋ ಒಂದು ನೆಪದಿಂದ ಶ್ರೀಹರಿಯ ನಾಮೋಚ್ಚಾರಣವು ದುರಿತದೂರೀಕರಣಕಾರಣಧುರೀಣವಾಗಿದೆ ಎಂದ ಮೇಲೆ ಅವನಲ್ಲಿಯೇ ಏಕಾಗ್ರಮನಸ್ಸಿನಿಂದ ಸದಾ ಅವನ ಆರಾಧನ ಮೊದಲಾದ ಸಾಧನ ಮಾಡುವ ಮಹಾನುಭಾವರ ಪಾಪ ನಾಶವಾಗುವುದೆಂದು ಬೇರೆ ಹೇಳಬೇಕೇ. ಈ ವಿಷಯದಲ್ಲಿ ನಿದರ್ಶನವನ್ನು ಪ್ರದರ್ಶಿಸಿ ಈ ವಿಷಯದಲ್ಲಿ ವಿಮುಖರಾದವರನ್ನು ಸಮ್ಮುಖಗೊಳಿಸುತ್ತಾ ಒಂದು ಆಖ್ಯಾಯಿಕೆಯನ್ನು ಹೇಳುವರು. ವೇದಾನಧಿಕಾರಿಗಳಿಗೆ ಹರಿನಾಮಕೀರ್ತನದಿಂದ ಪ್ರಾಯಶ್ಚಿತ್ತವಾಗುವುದೆಂದು ಹೇಳುವರು-

**ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಮ್ ।**
**ದೂತಾನಾಂ ವಿಷ್ಣುಯಮಯೋಃ ಸಂವಾದಂ ತಂ ನಿಬೋಧ ಮೇ॥೨೦॥**

**ಅತ್ರ** ಏವ ಭಗವಂತನ ನಾಮಸಂಕೀರ್ತನದಿಂದ ಪಾಪನಾಶವಾಗುವುದೆಂಬ ವಿಷಯದಲ್ಲಿ **ಇಮಂ** ಈ ಮುಂದೆ ಹೇಳುವ **ಪುರಾತನಂ** ಪ್ರಾಚೀನಕಾಲದ **ವಿಷ್ಣು-ಯಮಯೋಃ ದೂತಾನಾಂ ಸಂವಾದಂ** ವಿಷ್ಣು ಮತ್ತು ಯಮನ ದೂತರ ಪ್ರಶ್ನೋತ್ತರರೂಪವಾದ ಸಂಭಾಷಣೆ ಎಂಬ **ಇತಿಹಾಸಂ** ವೃತ್ತಾಂತವನ್ನು **ಸಂತಃ** ಜ್ಞಾನಿಗಳು **ಉದಾಹರಂತಿ** ಹೇಳುವರು. **ಮೇ** ನನ್ನಿಂದ **ತಂ** ಅದನ್ನು **ನಿಬೋಧ** ತಿಳಿ.

ಇಲ್ಲಿ ಏವ ಶಬ್ದದಿಂದ ಸಂಕೀರ್ತನದಿಂದ ಪಾಪನಾಶ ಆಗೇ ಆಗುವದು ಎಂದು ಆಯೋಗವ್ಯವಚ್ಛೇದ ಅರ್ಥವೇ ಹೊರತು ಇದರಿಂದಲೇ ಪಾಪಕ್ಷಯ ಮತ್ತೊಂದರಿಂದ ಆಗಲಾರದು ಎಂದು ಅನ್ಯಯೋಗವ್ಯವಚ್ಛೇದ ಅರ್ಥವಲ್ಲ. ಹಾಗೆ ಅರ್ಥ ಮಾಡಿದರೆ ಹಿಂದೆ ಹೇಳಿದ ತಪಸ್ಸು ಮೊದಲಾದವು ವ್ಯರ್ಥವಾಗಬೇಕಾಗುವದು. ಇಲ್ಲಿ ಹೇಳುತ್ತಾರೆ ಎಂದು ಪರೋಕ್ಷವಾಗಿ ಬಹುವಚನದಿಂದ ಸಂಪ್ರದಾಯಾಗತ ಸಮ್ಮತಿ ಸೂಚಿಸುವರು. ಪುರಾತನ ಶಬ್ದ ಬೇರೆ ಇರುವದರಿಂದ 'ಸಕೀಚಕೈರ್ಮಾರುತಪೂರ್ಣ-ರಂಧ್ರೈಃ ಎಂಬಲ್ಲಿಯಂತೆ ಇತಿಹಾಸ ಶಬ್ದ ಕೇವಲ ವೃತ್ತವೆಂಬ ಅರ್ಥದಲ್ಲಿ ಪರ್ಯವಸಿತವಾಗುವದು. ಆದ್ದರಿಂದ ಪುರಾತನ ವೃತ್ತವೆಂದರ್ಥವಾಗುವದು. ಏವಕಾರದಿಂದ ಮುಂದೆ ಹೇಳುವ ಕಾರ್ಯ-ಕಾರಣ ಭಾವ ಎಲ್ಲಿಯೂ ವ್ಯಭಿಚರಿತವಲ್ಲ ಎಂದು ನಿಯಮ ತಿಳಿಸುವದು.

ಅಜಾಮಿಲನು ಯಮಪಟ್ಟಣಕ್ಕೆ ಹೋಗಬೇಕೆ ಅಥವಾ ವಿಷ್ಣುಪಟ್ಟಣಕ್ಕೆ ಹೋಗಬೇಕೆ ಎಂಬ ವಿಷಯದಲ್ಲಿ ನಡೆದ ಸಂವಾದವನ್ನು ಎಂದು ಅರ್ಥಮಾಡಬಹುದು. ಆಗ ವಿಷ್ಣು-ಯಮಯೋಃ ಪುರಯೋಃ ಅತನಂ ಗಮನಂ ಉದ್ದಿಶ್ಯ ಸಂವಾದಂ ಎಂದು ಅನ್ವಯ ಮಾಡಬೇಕು. ಮೇ ನಿಬೋಧ ಎಂದದ್ದರಿಂದ ನನಗೆ ಹೇಳುವ ಇಚ್ಛೆಯಿದೆ ಎಂದು ಸೂಚಿಸಿರುವರು. ಇಲ್ಲಿ ಅತ ಧಾತು ಸಂತತ ಗಮನಾರ್ಥವಾಗಿದೆ 'ಅತ ಸಾತತ್ಯಗಮನೇ' ಗಮನಸಾಮಾನ್ಯಾರ್ಥ ಹೇಗೆ ಹೇಳುವದು ಎಂದು ಶಂಕಿಸಬೇಕಿಲ್ಲ. ಕಾಮಾತ್ ಪೌತ್ರಾಯಣಃ ಶೋಕಾದಂಗನಾ ಭಾಮಿನೀ ಇತ್ಯಾದಿ ಶಬ್ದಗಳಿಗೆ ಅಂಗಾತ್ ಕಲ್ಯಾಣ್ಯಾಂ ಮುಂತಾದ ಅರ್ಥವಿಶೇಷದಲ್ಲಿ ನಿಯಮಿತವಾದ ಅಮಿತವಾದ ಸಾಮಾನ್ಯಕಾಮಿನ್ಯಾದಿಪರವಾದವು

ಬಹಳ ಕಂಡಿದೆ. ಕಾ ಕಂಥತಾ ಇಲ್ಲಿ. ಇದರಿಂದ ಇತಿಹಾಸಪದಕ್ಕೆ ದೌರ್ಮುಖ್ಯ ಪರಿಹಾರವಾಯಿತು ಅಂದರೆ ಮುಖ್ಯಾರ್ಥ ಹೇಳಬಹುದು ಎಂದರ್ಥ.

ಶೃಣುಷ್ವ ಎನ್ನದೇ ನಿಬೋಧ ಎಂದು ಹೇಳಿದ್ದರಿಂದ ನಿತರಾಂ ಬೋಧೋ ಯಸ್ಯ ಸಃ ತತ್ಸಂಬುದ್ಧಿ ನಿಬೋಧ ಬಹಳ ಜ್ಞಾನವುಳ್ಳವನೇ ಎಂದು ಕರೆದದ್ದರಿಂದ ವಸ್ತು ನೀತಿ ಸೂಚಕವಾದುದರಿಂದ ರಾಜನ ಸೌಮನಸ್ಯಸಂಪಾದನ ಮಾಡುವದರ ಜೊತೆಗೆ ಲೋಕಹಿತ ಮುಂತಾಗಿ ತಾವು ಹೇಳಿದ್ದರೆ ಸುಮುಖತೆಯನ್ನೂ ಧ್ವನಿತಗೊಳಿಸಿರುವರು ಎಂಬುದು ಆಂತರಂಗಿಕ ಭಾವವನ್ನು ಅರಿಯಬೇಕು. ದೂತರು ಬಂದ ಕ್ರಮಾನುಸಾರ ಯಮವಿಷ್ಣ್ವೋಃ ಎನ್ನಬೇಕು ಆದರೂ ಮೊದಲು ಬಂದದ್ದು ಕಾರ್ಯಕಾರಿ ಆಗಿದ್ದರಿಂದಲೇ ಮೊದಲು ಬಂದವರನ್ನು ಕೊನೆಗೆ ಮತ್ತು ಶ್ರೇಷ್ಠನಾದ್ದರಿಂದಲೂ ವಿಷ್ಣುವನ್ನು ಮೊದಲು ಹೇಳಿರುವರು. ।।೨೦।।

**ಕಾನ್ಯಕುಬ್ಜೇ ದ್ವಿಜಃ ಕಶ್ಚಿದ್ ದಾಸೀಪತಿರಜಾಮಿಲಃ ।**
**ನಾಮ್ನಾ ನಷ್ಟಸದಾಚಾರಃ ದಾಸ್ಯಾಃ ಸಂಸರ್ಗದೂಷಿತಃ ।।೨೧।।**

**ಕಾನ್ಯಕುಬ್ಜೇ** (ಗಂಗಾ-ಯಮುನಾ ಮಧ್ಯಸ್ಥ ದೇಶವಿಶೇಷ) ಕನ್ಯಾಕುಬ್ಜವೆಂಬ ಊರಿನಲ್ಲಿ **ನಾಮ್ನಾ ಅಜಾಮಿಲಃ** ಅಜಾಮಿಳನೆಂಬ **ದಾಸ್ಯಾಃ ಸಂಸರ್ಗದೂಷಿತಃ** ದಾಸಿಯ ಸಂಪರ್ಕದಿಂದ ಪತಿತನಾದ **ನಷ್ಟಸದಾಚಾರಃ** ಸಜ್ಜನರ ಆಚಾರದಿಂದ ಭ್ರಷ್ಟನಾದ **ದಾಸೀಪತಿಃ** ದಾಸಿಯ ಉಪಪತಿಯಾದ **ಕಶ್ಚಿತ್ ದ್ವಿಜಃ** ಒಬ್ಬ ಬ್ರಾಹ್ಮಣನು **ಆಸೀತ್** ಇದ್ದನು.

**ನಷ್ಟಸದಾಚಾರಃ** ಕಾಣದಿರುವ ಸದಾಚಾರವುಳ್ಳವನೆಂದರ್ಥ. ಸಂಪೂರ್ಣ ನಾಶವೆಂದರ್ಥ ಮಾಡುವದು ಮುಂದಿನ ಅವನ ಕಾರ್ಯಗಳಿಗೆ ಅನನುಗುಣವಾಗುವದು. ನಷ್ಟ ಶಬ್ದಕ್ಕೆ ಅದರ್ಶನ ಎಂದು ಅರ್ಥ. 'ನಷ್ಟ ಧರ್ಮಜ್ಞಾನಲೋಕಕೃಪಾಲುಭಿಃ' ಎಂಬ ಗೀತಾಭಾಷ್ಯದಲ್ಲಿ 'ನಶ ಅದರ್ಶನೇ' ಎಂಬ ಧಾತುವ್ಯಾಖ್ಯಾನದಿಂದಲೂ ಸಿದ್ಧ. 'ದಾಸ್ಯಾಃ ಸಂಸರ್ಗದೂಷಿತಃ' ಎಂಬುದರಿಂದಲೇ ಪತಿ ಶಬ್ದ ಉಪಪತಿ ಎಂಬ ಅರ್ಥವುಳ್ಳದ್ದು ಎಂದು ತಿಳಿಯುವದು. ನಾಮ್ನಾ ಅಜಾಮಿಲಃ ಎಂದು ಹೇಳುವ ವ್ಯಾಸರಿಗೆ ಈ ಹೆಸರೂ ರೂಢ ಎಂಬಲ್ಲಿ ನೈರ್ಭರ್ಯವಿಲ್ಲ. ಬೇಡ ಎಂದಿಷ್ಟೇ. ಯೌಗಿಕಾರ್ಥ ವಿಚಾರ ಮಾಡುವದರಿಂದ ಚಿತ್ತಕ್ಲೇಶವೇನಿಲ್ಲ. ಆದರೂ ಮೊದಲು ೧. ಅಜಯಾ ಪ್ರಕೃತಿಯಿಂದ ಮಿಲಃ ಅಜ್ಞಾನದ

ತಿರೋಭಾವವುಳ್ಳವನು. ನಂತರ ಅಜಾತ್ ಶ್ರೀಹರಿಯಿಂದ ಪೂರ್ವಪುಣ್ಯದಿಂದ ಬಂದ ಜ್ಞಾನದ ಮೀಲ ಉನ್ಮೀಲನ (ವ್ಯಕ್ತಿ) ಯುಳ್ಳವನು. ಎರಡು ರೀತಿಯಿಂದ ಅಜಾಮಿಲತ್ವವು ಯುಕ್ತವೇ. ಹ್ರಸ್ವವು ಛಾಂದಸ ಅಥವಾ ಹ್ರಸ್ವಕ್ಕೆ ಛಾಂದಸತ್ವವು ಹೇಳದೇ ವಿಗ್ರಹ ಮಾಡುವ ಆಗ್ರಹವಿದ್ದರೆ ಹೀಗೂ ಮಾಡಬಹುದು. 'ಮಿಲ ಶ್ಲೇಷಣೇ' ಎಂದು ಧಾತುವ್ಯಾಖ್ಯಾನವಿರುವದರಿಂದ ಅಜಾ ಪ್ರಕೃತಿಯು ಯಂ ಯಾವಾತನನ್ನು ಮಿಲತಿ ತನ್ನ ಕಾರ್ಯದಿಂದ ಸಂಬಂಧಿಸುವದು ಅವನು ಅಜಾಮಿಲಃ ಅಜಃ ವಿಷ್ಣುವು ಆ ಚೆನ್ನಾಗಿ ತನ್ನ ಕಾರ್ಯದೊಡನೆ ಯಾವನು ಮಿಲತಿ ಎಂದು ನಿರ್ವಚನ ಮಾಡಿದರೆ ಆರ್ಥಿಕವಾಗಿ ಅಭಿಪ್ರೇತಾರ್ಥ ಸಿದ್ಧವಾಗುವದು. ಚೈತ್ರಸ್ಯ ದಾಸಭಾರ್ಯಾ ಎಂಬಂತೆ ನಿತ್ಯಸಾಪೇಕ್ಷವಾದ್ದರಿಂದ ಸಂಸರ್ಗದೂಷಿತಃ ಎಂದು ಸಮಾಸವಾಗಿದೆ. 'ಷಷ್ಠ್ಯಾ ಆಕ್ರೋಶೇ' ಎಂದು ಅಲುಕ್ ಸಮಾಸ. ದಾಸ್ಯಾಃ ಸಂಸರ್ಗದೂಷಿತಃ ಎಂಬುದು ಕಾನ್ಯಕುಬ್ಜದೇಶವನ್ನು 'ಯತ್ರ ಚ ಬ್ರಾಹ್ಮಣಾಭಾಸಾ ಮಾನವಾ ಮತ್ಸ್ಯಹಾರಿಣಃ ತಮಬ್ಧೇರ್ನಿಕಟಂ ದೇಶಂ ಕಾನ್ಯಕುಬ್ಜಂ ವದಂತಿ ಹಿ ॥ ಮತ್ಸ್ಯಾಹಾರಿಗಳಾದ ಬ್ರಾಹ್ಮಣಾಭಾಸರಿರುವ ಸಮುದ್ರತೀರದ ದೇಶ ಕಾನ್ಯಕುಬ್ಜವೆಂದು ವರ್ಣಿಸಿದ್ದಾರೆ. ॥೨೧॥

**ಬಂಧ್ಯಕ್ಷೈಃ ಕೈತವೈಃ ಚೌರ್ಯೈಃ ಗರ್ಹಿತಾಂ ವೃತ್ತಿಮಾಶ್ರಿತಃ ।**
**ಬಿಭ್ರತ್ಕುಟುಂಬಮಶುಚಿರ್ಯಾತಯಾಮಾಸ ದೇಹಿನಮ್ ॥೨೨॥**

**ಬಂಧ್ಯಕ್ಷೈಃ** ಜನರನ್ನು ಸೆರೆಹಿಡಿಯುವ ಜೂಜಾಡುವ ಕಾರ್ಯಗಳಿಂದ **ಕೈತವೈಃ** ಸುಳ್ಳು ಹೇಳುವುದರಿಂದ **ಚೌರ್ಯೈಃ** ಕಳ್ಳತನ ಮಾಡುವುದರಿಂದ **ಗರ್ಹಿತಾಂ** ನಿಂದಿತವಾದ **ವೃತ್ತಿಂ** ಜೀವನೋಪಾಯವನ್ನು **ಆಶ್ರಿತಃ ಸನ್** ಆಶ್ರಯಿಸಿದವನಾಗಿ **ಕುಟುಂಬಂ ಬಿಭ್ರತ್** ಕುಟುಂಬವನ್ನು ರಕ್ಷಿಸುತ್ತಾ **ಅಶುಚಿಃ ಸನ್** ಅಶುದ್ಧನಾಗಿ **ದೇಹಿನಂ** ಆ ದೇಹವನ್ನು ಹೊಂದಿದ ಜೀವನನ್ನು (ತನ್ನನ್ನು) **ಯಾತಯಾಮಾಸ** ನರಕಕ್ಕೆ ಹೋಗಲು ಸಿದ್ಧಮಾಡಿದನು. ॥೨೨॥

**ಏವಂ ನಿವಸತಸ್ತಸ್ಯ ಲಾಲಯಾನಸ್ಯ ತತ್ಸುತಾನ್ ।**
**ಕಾಲೋಽತ್ಯಗಾನ್ ಮಹಾನ್ ರಾಜನ್ನಷ್ಟಾಶೀತ್ಯಾಯುಷಃ ಸಮಾಃ॥೨೩॥**

**ಏವಂ** ಹೀಗೆ **ನಿವಸತಃ** ವಾಸಿಸುತ್ತಿದ್ದ **ತತ್ಸುತಾನ್** ಆ ದಾಸಿಯ ಮಕ್ಕಳನ್ನು **ಲಾಲಯಾನಸ್ಯ** ಆಡಿಸುವ **ತಸ್ಯ** ಆ ಅಜಾಮಿಳನಿಗೆ **ಅಷ್ಟಾಶೀತ್ಯಾಯುಷಃ ಸಮಾಃ**

ಆಯುಷ್ಯದಲ್ಲಿಯ ಎಂಬಂತ್ತೆಂಟು ವರ್ಷಗಳಷ್ಟು **ಮಹಾನ್ ಕಾಲಃ** ದೀರ್ಘವಾದ ಕಾಲವು **ಅತ್ಯಗಾತ್** ಕಳೆಯಿತು.

ಮಹಾರಾಜನ್ ಎಂಬ ಪಾಠದಲ್ಲಿ 'ಜಾನಂತಿ ಪೂರ್ವರಾಜಾನಃ ಆದಿರಾಜ್ಞಾಂ' ಎಂಬಲ್ಲಿಯಂತೆ ರಾಜಾಹಃಸಖಿಭ್ಯಃ' ಎಂಬ ಸೂತ್ರದಿಂದ ಟಚ್ ಬಾರದಿರುವಾಗಿನ ರೂಪ. ಮಹಾನ್ ಎಂಬ ಪಾಠದಲ್ಲಿ ಕಾಲಕ್ಕೆ ವಿಶೇಷಣ. ಕಾಲಕ್ಕೆ ಮಹತ್ವ ಅವನ ದೌರ್ಜನ್ಯದಿಂದ ಎಂಬ ಭಾವ. ।।೨೩।।

ಅಕ್ಷೀತಿ ಶಬ್ದದಂತೆ ಅಶೀತಿ ಶಬ್ದವು ಸಂಖ್ಯಾವಿಶೇಷವಾಚಕವಾಗಿದೆ. 'ವಿಂಶತ್ಯಾದ್ಯಾ ಸದೈಕತ್ವೇ' ಎಂದಿರುವದರಿಂದ ಅಶೀತಿಸಮಾಃ ಎನ್ನಬಹುದು.

**ತಸ್ಯ ಪ್ರವಯಸಃ ಪುತ್ರಾ ದಶ ತೇಷಾಂ ತು ಯೋಽವಮಃ ।**
**ಬಾಲೋ ನಾರಾಯಣೋ ನಾಮ್ನಾ ಪಿತ್ರೋಶ್ಚ ದಯಿತೋ ಭೃಶಮ್ ।।೨೪।।**

**ಪ್ರವಯಸಃ** ವೃದ್ಧನಾದ **ತಸ್ಯ** ಅವನಿಗೆ **ದಶ ಪುತ್ರಾಃ** ಹತ್ತು ಮಕ್ಕಳು **ಆಸನ್** ಇದ್ದರು **ತೇಷಾಂ** ಅವರಲ್ಲಿ **ಯಃ** ಯಾವನು **ಅವಮಃ** ಕೊನೆಯವನೋ **ನಾಮ್ನಾ ನಾರಾಯಣಃ** ನಾರಾಯಣನೆಂಬ ಹೆಸರುಳ್ಳ **ಸಃ** ಅವನು **ಪಿತ್ರೋಃ** ತಾಯಿ (ದಾಸಿ) ತಂದೆಗಳಿಗೆ **ಭೃಶಂ** ಬಹಳವಾಗಿ **ದಯಿತಃ** ಪ್ರಿಯನಾಗಿದ್ದನು. ಮುಂದೆ ಮಕ್ಕಳಾಗದ ಕಾರಣ ಇವನು ಪ್ರಿಯನಾಗಿದ್ದನೆಂದು ಭಾವ. ।।೨೪।।

**ಸ ಬದ್ಧಹೃದಯಸ್ತಸ್ಮಿನ್ನರ್ಭಕೇ ಕಲಭಾಷಿಣಿ ।**
**ನಿರೀಕ್ಷಮಾಣಸ್ತಲ್ಲೀಲಾಂ ಮುಮುದೇ ಜರಠೋ ಭೃಶಮ್ ।।೨೫।।**

**ಕಲಭಾಷಿಣಿ** ಅವ್ಯಕ್ತವಾಗಿ ಮಧುರವಾಗಿ ಮಾತಾಡುವ **ತಸ್ಮಿನ್ ಅರ್ಭಕೇ** ಆ ಮಗುವಿನಲ್ಲಿ **ಬದ್ಧಹೃದಯಃ** ಆಸಕ್ತವಾದ ಅಥವಾ ಸ್ನೇಹಯುತವಾದ ಮನಸುಳ್ಳ **ಸಃ ಜರಠಃ** ಆ ಮುದುಕನು **ತಲ್ಲೀಲಾಂ** ಆ ಹುಡುಗನ ಆಟ-ಪಾಟಗಳನ್ನು **ನಿರೀಕ್ಷಮಾಣಃ** ನೋಡುವವನಾಗಿ **ಭೃಶಂ ಮುಮುದೇ** ಬಹಳ ಆನಂದಿಸಿದನು.

**ಭೃಶಂ** ಎಂಬುದನ್ನು **ಬದ್ಧಹೃದಯಃ** ಎಂಬಲ್ಲಿ **ನಿರೀಕ್ಷಮಾಣಃ** ಎಂಬಲ್ಲಿಯೂ ಅನ್ವಯಿಸಬಹುದು. 'ಅನುಬಂಧೋ ಹಿ ಭಕ್ತಿಃ ಸ್ಯಾತ್ ಬಂಧಃ ಸ್ನೇಹ ಉದಾಹೃತಃ' ಎಂದು ಏಳನೇ ಸ್ಕಂಧ ತಾತ್ಪರ್ಯದಲ್ಲಿ ಹೇಳಿದೆ. ।।೨೫।।

**ಭುಂಜಾನಃ ಪ್ರಪಿಬನ್ ಖಾದನ್ ಬಾಲಕಸ್ನೇಹಯಂತ್ರಿತಃ ।**
**ಭೋಜಯನ್ ಪಾಯಯನ್ ಮೂಢೋ ನ ವೇದಾಗತಮಂತಕಮ್॥೨೬॥**

**ಬಾಲಕಸ್ನೇಹಯಂತ್ರಿತಃ** ಹುಡುಗನ ಮೇಲಿನ ಪ್ರೀತಿಗೆ ಅಧೀನನಾದ **ಮೂಢಃ** ಆ ಮೂಢನು **ಭುಂಜಾನಃ** ಊಟಮಾಡುತ್ತಾ **ಪ್ರಪಿಬನ್** ಕುಡಿಯುತ್ತ **ಖಾದನ್** ತಿನ್ನುತ್ತ **ಭೋಜಯನ್** ಮಗುವಿಗೆ ಉಣಿಸುತ್ತ **ಪಾಯಯನ್** ಕುಡಿಸುತ್ತ (**ಖಾದಯನ್**) ತಿನ್ನಿಸುತ್ತಾ **ಆಗತಂ ಅಂತಕಂ ನ ವೇದ** ಸಮೀಪಿಸಿದ ಮೃತ್ಯುವನ್ನು ತಿಳಿಯಲಿಲ್ಲ. ॥೨೬॥

**ಸ ಏವಂ ವರ್ತಮಾನೋಽಜ್ಞೋ ಮೃತ್ಯುಕಾಲ ಉಪಸ್ಥಿತೇ ।**
**ಮತಿಶ್ಚಕಾರ ತನಯೇ ಬಾಲೇ ನಾರಾಯಣಾಹ್ವಯೇ ॥೨೭॥**

**ಏವಂ ವರ್ತಮಾನಃ** ಈ ರೀತಿ ಕಾಲ ಕಳೆಯುತ್ತಿದ್ದ **ಸಃ ಅಜ್ಞಃ** ಆ ಅಜ್ಞಾನಿಯು **ಮೃತ್ಯುಕಾಲೇ ಉಪಸ್ಥಿತೇ** ಮರಣಕಾಲ ಸಮೀಪಿಸಿದಾಗ **ನಾರಾಯಣಾಹ್ವಯೇ ಬಾಲೇ** ನಾರಾಯಣನೆಂಬ ಹೆಸರಿನ ಚಿಕ್ಕ ಮಗನಲ್ಲಿ **ಮತಿಂ ಚಕಾರ** ಮನಸ್ಸನ್ನಿಟ್ಟನು. ನೋಡಬೇಕೆಂದು ಇಚ್ಛಿಸಿದನು.

ಮುಂದಿನ ಅಧ್ಯಾಯದ ೧೪ನೇ ಪದ್ಯದ 'ಅಶೇಷಾಘಹರಂ ವಿದುಃ' ಎಂಬ ಶ್ಲೋಕದಲ್ಲಿ ಆಚಾರ್ಯರು ಉದಾಹರಿಸಿದ 'ಅಜಾಮಿಲೋಽಪಿ ಸ್ಮರಣಾದ್ಭಕ್ತ್ಯಾ ಮೃತ್ಯೋರಮುಚ್ಯತ' ಪ್ರಮಾಣ ವಚನಾನುಸಾರ ಹೀಗೆ ಈ ಶ್ಲೋಕದ ಅಂತರಾರ್ಥ. **ಏವಂ ವರ್ತಮಾನಃ ಸಃ ಅಜ್ಞಃ** ಹೀಗೆ ಇದ್ದ ಆ ಅಕಾರವಾಚ್ಯ ಪರಮಾತ್ಮ ಜ್ಞಾನಿಯು **ಮೃತ್ಯುಕಾಲೇ** ಮರಣೋಪಲಕ್ಷಿತ ಎಲ್ಲ ದೋಷಗಳನ್ನೂ ಅಪಹರಿಸುವ ಶ್ರೀಹರಿಯ ಅನುಗ್ರಹದಿಂದ ಜ್ಞಾನ ಉಂಟಾಗಿರಲು **ಉಪಸ್ಥಿತೇ** ಹೃದಯದಲ್ಲಿ ಪ್ರಕಾಶಿತನಾದ **ತನಯೇ** ಜ್ಞಾನಪೂರ್ಣನಾದ 'ತನು ವಿಸ್ತಾರೇ' **ಬಾಲೇ** ಐದು ವರ್ಷದವನಂತೆ ಸಣ್ಣ ಪ್ರಾದೇಶ ಮಾತ್ರವಿರುವ **ನಾರಾಯಣಾಹ್ವಯೇ** ನಾರಾಯಣನೆಂಬ ಮೂರ್ತಿ ವಿಶೇಷದಲ್ಲಿ **ಮತಿಂ ಚಕಾರ** ಸ್ಮರಣ ಸಾಮರ್ಥ್ಯವುಳ್ಳ ಮನಸ್ಸನ್ನು ಮಾಡಿದನು. ಭಕ್ತಿಯಿಂದ ಸ್ಮರಿಸಿದನೆಂದು ಭಾವ. ॥೨೭॥

ಹೀಗೆ ನಾವು ಮಾಡುವ ಪ್ರವೃತ್ತಕರ್ಮವು (ಸಕಾಮಕರ್ಮ) ಕ್ರಮವಾಗಿ ಭಕ್ತಿಗೂ ನಿವೃತ್ತಕರ್ಮಕ್ಕೂ ಪ್ರಯೋಜಕವಾಗಿ ಮುಕ್ತಿಗೆ ಉಪಯೋಗಿಯಾಗುವದೋ ಹಾಗೆ ಮಗನಿಗಿಟ್ಟ ನಾರಾಯಣನಾಮವೂ ಹಿಂದೆ ಮಾಡಿದ ಪುಣ್ಯವಿಶೇಷದಿಂದ

ಭಗವತ್ಸ್ಮರಣೆಗೆ ಸಾಧನವಾಗಿ ಭಕ್ತಿ-ಮುಕ್ತಿಗಳಿಗೆ ಉಪಯೋಗವಾಗುವುದು ಎಂದು ಎರಡು ಶ್ಲೋಕಗಳಿಗೆ ಒಂದೇ ಆನ್ವಯದಿಂದ ತಿಳಿಯುವುದು.

**ಸ ಪಾಶಹಸ್ತಾನ್ ತ್ರೀನ್ ದೃಷ್ಟ್ವಾ ಪುರುಷಾನ್ ಭೃಶದಾರುಣಾನ್ ।**
**ವಕ್ರತುಂಡಾನೂರ್ಧ್ವರೊಮ್ಣ ಆತ್ಮಾನಂ ನೇತುಮಾಗತಾನ್ ॥೨೮॥**

**ಸಃ** ಅಜಾಮಿಲನು **ಆತ್ಮಾನಂ** ತನ್ನನ್ನು **ನೇತುಂ** ಯಮಲೋಕಕ್ಕೆ ಕರೆದೊಯ್ಯಲು **ಆಗತಾನ್** ಬಂದಿರುವ **ವಕ್ರತುಂಡಾನ್** ಸೊಟ್ಟ ಮುಖದ **ಊರ್ಧ್ವರೋಮ್ಣಃ** ಒಳಗೆ ತುಂಬಿದ ಕೋಪದಿಂದ ನಿಮಿರಿನಿಂತ ಕೂದಲಿನ **ಪಾಶಹಸ್ತಾನ್** ಕೈಯಲ್ಲಿ ಯಮಪಾಶ ಹಿಡಿದಿರುವ **ಭೃಶದಾರುಣಾನ್** ಬಹಳ ಕ್ರೂರರಾದ **ತ್ರೀನ್ ಪುರುಷಾನ್** ಮೂವರು ಭಟರನ್ನು **ದೃಷ್ಟ್ವಾ** ನೋಡಿ (ನಾಲ್ಕು ವಿಶೇಷಣಗಳಿಂದ ಅವರ ಕ್ರೂರತೆ ಸೂಚಿತವಾಗುವದು) ತಮ್ಮಷ್ಟಕ್ಕೆ ಸಂಚರಿಸುವ ಅವರಿಂದ ನಿನಗೇನು ಹಾನಿ ಎಂಬುದನ್ನು ಆತ್ಮಾನಂ ನೇತುಂ ಎಂಬುದರಿಂದ ಪರಿಹರಿಸುವರು. ॥೨೮॥

**ದೂರೇ ಕ್ರೀಡನಕಾಸಕ್ತಂ ಪುತ್ರಂ ನಾರಾಯಣಾಹ್ವಯಮ್ ।**
**ಪ್ಲಾವಿತೇನ ಸ್ವರೇಣೋಚ್ಚೈರಾಜುಹಾವಾಕುಲೇಂದ್ರಿಯಃ ॥೨೯॥**

**ಆಕುಲೇಂದ್ರಿಯಃ** ಯಮದೂತರ ವಿಕಾರವಾದ ಆಕಾರವನ್ನು ಕಂಡು ದುರ್ಬಲವಾದ ಇಂದ್ರಿಯಗಳುಳ್ಳವನಾಗಿ **ಪ್ಲಾವಿತೇನ** ನಾಲ್ಕು ಮಾತ್ರಾ ಉಚ್ಚಾರಣಕ್ಕೆ ಬೇಕಾಗುವ ದೀರ್ಘವಾದ **ಉಚ್ಚೈಃ ಸ್ವರೇಣ** ಜೋರಾದ ಧ್ವನಿಯಿಂದ **ದೂರೇ** ದೂರದಲ್ಲಿ **ಕ್ರೀಡನಕಾಸಕ್ತಂ** ಆಟದಲ್ಲಿ ಮಗ್ನನಾದ (ಕ್ರೀಡನಮೇವ ಕ್ರೀಡನಕಂ) **ನಾರಾಯಣಾಹ್ವಯಂ** ನಾರಾಯಣನೆಂಬ **ಪುತ್ರಂ** ಮಗನನ್ನು **ಆಜುಹಾವ** ನಾರಾಯಣಾ ಎಂದು ಕರೆದನು.

ಅಜಾಮಿಲನು ಹೀಗೆ ಜೋರಾಗಿ ನಾರಾಯಣಾ ಎಂದು ಮಗನನ್ನು ಕರೆಯುವಾಗ ಆ ಹೆಸರಿನ ಮುಖ್ಯಸ್ವಾಮಿಯಾದ ಶ್ರೀಮನ್ನಾರಾಯಣನ ಸ್ಮರಣೆಯಾಯಿತು. ತಾನು ಹಿಂದೆ ಮಾಡಿದ ಪುಣ್ಯಕರ್ಮಗಳ ಪ್ರಭಾವದಿಂದ ಹುಟ್ಟಿದ ನಿರತಿಶಯವಾದ ಭಕ್ತಿಯಿಂದ **ಆಕುಲೇಂದ್ರಿಯಃ** ಶ್ರೀಹರಿಯಲ್ಲಿ ಆಸಕ್ತವಾದ ಇಂದ್ರಿಯಗಳುಳ್ಳವನಾಗಿ **ಪ್ಲುತೇನ ಉಚ್ಚೈಃ ಸ್ವರೈಃ** ಪ್ಲುತವಾದ ಘಟ್ಟಿ ಧ್ವನಿಯಿಂದ **ದೂರೇ** ಬ್ರಹ್ಮಾಂಡದ ಹೊರಗೂ ಇರುವ **ಕ್ರೀಡನಕಾಸಕ್ತಂ** ಜಗತ್ಸೃಷ್ಟ್ಯಾದಿ ಲೀಲಾದಿಂದ ಕೂಡಿದ **ಪುತ್ರಂ** ಪುತ್ ಎಂಬ ನರಕದಿಂದ ರಕ್ಷಿಸುವ **ನಾರಾಯಣಾಹ್ವಯಂ**

ನಾರಾಯಣನೆಂಬ ಹೆಸರುಳ್ಳ ಶ್ರೀಹರಿಯನ್ನು (ವಿಶೇಷ ರೂಪವನ್ನು) **ಆಜುಹಾವ** ಕರೆದನು. ನಾರಾಯಣ ಶಬ್ದದ ಅವಯವಾರ್ಥಾನುಸಂಧಾನ ಮಾಡುತ್ತ ಧ್ಯಾನಿಸಿದನು. ದೂರೇ ಎಂಬುದರಿಂದ ಪ್ಲುತಸ್ವರದಿಂದ ಕರೆಯುವುದಕ್ಕೆ ಕಾರಣ ಕೊಟ್ಟಂತಾಯಿತು. 'ಬಾಲಃ ಕ್ರೀಡನಕೈರ್ಯದ್ವತ್ ಕ್ರೀಡತೇಽಸ್ಮಾಭಿರಚ್ಯುತಃ' ಎಂಬ ಪ್ರಮಾಣಾನುಸಾರ ಸೃಷ್ಟ್ಯಾದಿಗಳು ಶ್ರೀಹರಿಗೆ ಆಟ 'ತ್ರಾತಾ ಪುತ್ರಸ್ತ್ವಮೇವ ಮೇ' ಎಂಬುದರಿಂದ ಮುಖ್ಯವಾಗಿ ಪುತ್ರಶಬ್ದದಿಂದ ವಾಚ್ಯನಾದವನು ಶ್ರೀಹರಿಯೇ ಆಗಿದ್ದಾನೆ. 'ಯತ್ತಸ್ಯ ವ್ಯಾಪಕಂ ರೂಪಂ ಪರಂ ನಾರಾಯಣಾಭಿಧಮ್' ಎಂಬ ಪ್ರಮಾಣಾನುಸಾರ ವ್ಯಾಪಕಮೂರ್ತಿವಿಶೇಷಕ್ಕೆ ನಾರಾಯಣನೆಂದು ಹೆಸರು. ಆ ಮೂರ್ತಿವಿಶೇಷವನ್ನು ಸ್ಮರಿಸಿಕೊಂಡನು. 'ನಾಮಸ್ವಾಮಿತಯಾ ತಸ್ಯ ಸ್ಮರಣಂ ಜಾಯತೇ ಯತಃ । ಅಜಾಮಿಳೋಽಪಿ ಸ್ಮರಣಾದ್ಭಕ್ತ್ಯಾ ಮೃತ್ಯೋರಮುಚ್ಯತ' ಎಂಬ ಪ್ರಮಾಣಾನುಸಾರ ಈ ಅರ್ಥವನ್ನು ತಿಳಿಯಬೇಕು. (ಇದು ಚೆಟ್ಟಿ ವ್ಯಾಖ್ಯಾನ) ।।೨೯।।

**ನಿಶಮ್ಯ ಮ್ರಿಯಮಾಣಸ್ಯ ಮುಖತೋ ಹರಿಕೀರ್ತನಮ್ ।**
**ಭರ್ತುರ್ನಾಮ ಮಹಾರಾಜ ಪಾರ್ಷದಾಃ ಸಹಸಾಽಪತನ್ ।।೩೦।।**

**ಹೇ ಮಹಾರಾಜ** ಪರೀಕ್ಷಿತನೇ **ಮ್ರಿಯಮಾಣಸ್ಯ ಮುಖತಃ** ಸಾಯಲಿದ್ದ ಅಜಾಮಿಲನ ಬಾಯಿಯಿಂದ **ಹರಿಕೀರ್ತನಂ** ಶ್ರೀಹರಿಯ ಕೀರ್ತನೆಯಾದ ದೋಷಹರಣ ಮಾಡುವ ಕೀರ್ತನೆಯುಳ್ಳ **ಭರ್ತುಃ ನಾಮ** ತಮ್ಮ ಸ್ವಾಮಿಯಾದ ಶ್ರೀಮನ್ನಾರಾಯಣನ ಹೆಸರನ್ನು (ಭಕ್ತಿಪೂರ್ವಕ ಉಚ್ಚಾರಣವನ್ನು) **ನಿಶಮ್ಯ** ಕೇಳಿ **ಪಾರ್ಷದಾಃ** ಶ್ರೀಹರಿಯ ದ್ವಾರಪಾಲಕರು (ವಿಷ್ಣುದೂತರು) **ಸಹಸಾ** ಕೂಡಲೇ **ಆಪತನ್** ಬಂದಿಳಿದರು. ಅಥವಾ ಸ್ವಾಮಿಯ ನಾರಾಯಣನೆಂಬ ರೂಪದ ಹರಿಸ್ಮರಣೆಯನ್ನು ಎಂದಾದರೂ ಅರ್ಥ. ಹರಿ ಎಂಬುದು ಎರಡಕ್ಷರ ನಾರಾಯಣನೆಂಬುದು ನಾಲ್ಕಕ್ಷರ ಅಜಾಮಿಳ ಹೇಳಿದ್ದು ಎಂದು ತಿಳಿಸಲು ಅನನ್ವಿತವಾಗಿ ಪ್ರಯೋಗಿಸಿರುವರು. ಇದರಿಂದ ಮಗನ ಮೇಲೆ ಪ್ರೀತಿಯಿಲ್ಲದೇ ಹಿಂದಿನ ಪುಣ್ಯಫಲವಾಗಿ ಶ್ರೀಹರಿಯು ಅನುಗ್ರಹಿಸಿದ ಭಕ್ತಿವಿಶೇಷದಿಂದ ಭಗವನ್ನಾಮ ಸಂಕೀರ್ತನೆಯನ್ನು ಮಾಡಿದನೆಂದು ತಿಳಿದು ಬರುವದು. ಆದ್ದರಿಂದ ಹರಿಕೀರ್ತನವೇ ಪ್ರಧಾನವಾಗಿತ್ತು ಎಂದು ತಾತ್ಪರ್ಯ. ಈ ರಹಸ್ಯವನ್ನು ತಿಳಿಯದವರಿಗೆ ಮಾತ್ರ ಅದು ಮಗನ ಕರೆಯಾಗಿತ್ತು.

**ಸತ್ಯಧರ್ಮರ ವಿಶೇಷಾರ್ಥ**

**ಮ್ರಿಯಮಾಣಸ್ಯ** ಮರಣೋನ್ಮುಖನಾದ **ಭರ್ತುಃ** ಮಗನನ್ನು ನೋಡುವ ಇಚ್ಛೆಯ ಭಾರವನ್ನು ಹೊತ್ತ ಅಜಾಮಿಲನ **ಮುಖತಃ** ಬಾಯಿಂದ **ಹರಿಕೀರ್ತನಂ** ನಾರಾಯಣ ನಾಮೋಚ್ಚಾರಣವನ್ನು **ನಿಶಮ್ಯ** ಕೇಳಿ **ಪಾರ್ಷದಾಃ** ಹರಿದೂತರು **ಸಹಸಾ** ಬೇಗನೇ ಸಹಸಾ ಎಂಬುದರಿಂದ ಅವರ ಗಮನ ಬೇರೆಯವರಿಗೆ ಊಹಿಸಲಾಗದ್ದೆಂದು ತಿಳಿಸಿರುವರು. ಇದು ಅವಿಶ್ವಾಸನೀಯವಲ್ಲವೆಂದು ತಿಳಿಸುವರು. **ನಾಮ** ಪ್ರಸಿದ್ಧವೆಂದರ್ಥ. **ಮುಖತೋಽಹರಿಕೀರ್ತನಂ** ಎಂದು ಇಟ್ಟುಕೊಳ್ಳಬೇಕು. ಯಾವುದು ಮೊದಲು **ಅಹರಿಕೀರ್ತನಂ** ಹರಿಸ್ಮರಣರಹಿತವಾಗಿತ್ತೋ **ಮುಖತಃ** ಅಂತಹ ಮುಖದಿಂದ **ಭರ್ತುಃ** ತಮ್ಮ ಒಡೆಯನ ಸರ್ವಸ್ವಾಮಿಯ **ನಾಮ** ಹೆಸರನ್ನು **ನಿಶಮ್ಯ** ಕೇಳಿ ಎಂದರ್ಥ. **ಮುಖತಃ** ಆರಂಭದಶೆಯಲ್ಲಿ **ಮ್ರಿಯಮಾಣಸ್ಯ** ಅತ್ಯುತ್ಕಟಪಾಪದಿಂದ ಸಾಯುವೆನೆಂದು ತಿಳಿದವನ **ಅಹರಿಕೀರ್ತನಂ** ಕೀರ್ತನೆ ಮಾಡದಿರುವವನ ಮುಖದಿಂದ ಭರ್ತೃವಿನ ನಾಮವನ್ನು ಕೇಳಿ ಎಂದರ್ಥ.

**ಮುಖತಃ** ಮುಖದಲ್ಲಿ ಮೊದಲಿಗೆ **ಅಹರಿಕೀರ್ತನಂ** ಅಸ್ಯ ಅಪತ್ಯಂ ಪುಮಾನ್ ಇಃ ಕಾಮಃ ತಸ್ಯ ಏಃ ಕೀರ್ತನಂ ಇಕೀರ್ತನಂ ಅಹ್ನಿ ಇಕೀರ್ತನಂ ಅಹರಿಕೀರ್ತನಂ ಎಂಬ ವಿಗ್ರಹವನ್ನು ಮಾಡಿ ಅರ್ಥವನ್ನು ಹೀಗೆ ಹೇಳಬೇಕು. ಅ ಎಂದರೆ ಪರಮಾತ್ಮ. ಅವನ ಮಗ ಆದ್ದರಿಂದ ಕಾಮನಿಗೆ ಇ ಎಂದು ಕರೆಯುತ್ತಾರೆ. ಇಕೀರ್ತನ ಎಂದರೆ ಕಾಮನ ಕೀರ್ತನೆ ಎಂದು ಅರ್ಥ. ಕಾಮನ ಕೀರ್ತನೆ ಎಂದರೆ ಹಗಲಿನಲ್ಲಿ ಮಾಡುವ ಕಾಮಕೇಳಿಯಲ್ಲಿಯ ಸುರತಸಂಬಂಧಿಯಾದ ಸರಸಸಲ್ಲಾಪವನ್ನು ಎಂದು ಅರ್ಥ. 'ಪ್ರಾಣಂ ವಾ ಏತೇ ಪ್ರಸ್ಕಂದಂತಿ ಯೇ ದಿವಾ ರತ್ಯಾ ಸಂಯುಜ್ಯಂತೇ ಬ್ರಹ್ಮಚರ್ಯಮೇವ ತದ್ಯದ್ರಾತ್ರೌ ರತ್ಯಾ ಸಂಯುಜ್ಯಂತೇ' ಎಂದು ಷಟ್‌ಪ್ರಶ್ನೋಪನಿಷತ್ತಿನ ಮೊದಲನೇ ಪ್ರಶ್ನದಲ್ಲಿ ರಾತ್ರಿಕಾಲದಲ್ಲಿ ಸ್ತ್ರೀಸಂಗ ವಿಹಿತವಾದುದು. ಹಗಲಿನಲ್ಲಿ ವಿಹಿತವಲ್ಲ. ಆ ರೀತಿ ನಿಷಿದ್ಧವಾದ ಕಾಲದಲ್ಲಿಯೂ ಸುರತರತನಾಗಿರುವ ಅಜಾಮಿಲನ ಮುಖದಿಂದ ತಮ್ಮ ಒಡೆಯನ ನಾಮ ಬಂದದ್ದನ್ನು ಕೇಳಿ ಎಂದರ್ಥ.

**ಯಸ್ಯ** ಯಾವನ ಮುಖದಲ್ಲಿ **ಕೀರ್ತನಂ** ಶಬ್ದಗಳು **ಅಹರಿ** ಹರಿರಹಿತವಾಗಿವೆಯೋ ಅಂಥವನ ಬಾಯಿಂದ ಎಂದೂ ಅರ್ಥ ಮಾಡಬಹುದು. 'ಸಾರ್ವವಿಭಕ್ತಿಕಸ್ತಸಿಃ' ಎಂದು ಇದ್ದದ್ದರಿಂದ **ಮುಖತಃ** ಎಂದರೆ ಮುಖೇ ಎಂದರ್ಥ.

'ಇ ಕಾಮದೇವೇ ತ್ವನವ್ಯಯಂ' ಎಂದು ವಿಶ್ವವಿದೆ. 'ಮುಖಂ ನಿಃಸರಣೇ ವಕ್ತ್ರೇ ಪ್ರಾರಂಭೋಪಾಯಯೋಃ' ಎಂದು ವಿಶ್ವವಿರುವದರಿಂದ ಹಿಂದೆ ಪ್ರಾರಂಭ ದಶೆಯಲ್ಲಿ ಎಂದರ್ಥ ಮಾಡಿದೆ.

ನಿಶಮ್ಯಮ್ರಿಯಮಾಣಸ್ಯ ಎಂಬುದು ಒಂದೇ ಪದವೆಂದು ತಿಳಿಯಬೇಕು. ಶಮೀ ಎಂದರೆ ಭಗವನ್ನಿಷ್ಠನಾದವನು. ನಿಶಮೀ ಭಗವನ್ನಿಷ್ಠನಾಗದವನು. ನಿಶಮೀ ಚಾಸೌ ಅಮ್ರಿಯಮಾಣಶ್ಚ ನಿಶಮ್ಯಮ್ರಿಯಮಾಣಃ ತಸ್ಯ ಭಗವನ್ನಿಷ್ಠೆಯಿಲ್ಲದ ಮಗನನ್ನು ನೋಡುವ ಆಸೆಯಿಂದ ಸಾಯದಿರುವವನ ಎಂದರ್ಥ.

**ನಾಮ** 'ಪ್ರಥಮಾ ಷಷ್ಠ್ಯರ್ಥೇ' ನಾಮದ **ಹರಿ** ಪಾಪನಾಶಕವಾದ್ದರಿಂದ ಹರಿ ಎನಿಸುವ **ಕೀರ್ತನಂ** ಉಚ್ಚಾರಣವನ್ನು **ಭರ್ತುಃ** ಧರಿಸಿರುವ ಎಂದರೆ ಮಾಡುವವನ **ಮುಖತಃ** ಅಭಿಮುಖೇ ಎದುರಿನಲ್ಲಿ **ಮಹಾರಾಜಪಾರ್ಷದಾಃ** (ಸಮಸ್ತಪದ) ರಾಜರಿಗೆಲ್ಲ ರಾಜನಾದ ಶ್ರೀಹರಿಯ ದೂತರು ಎಂದರ್ಥ. **ಹೇ ಮಹಾರಾಜ** ಎಂದು ಪರೀಕ್ಷಿತ ಸಂಬೋಧನವೆಂದೂ ಇಟ್ಟಕೊಳ್ಳಬಹುದು. **ಭರ್ತುಃ ನಾಮ** ಎಂದು ವ್ಯಸ್ತವಾದ ಪದಗಳು ಬೇರೆ ಬೇರೆ ಪದಗಳು. ಸಮಸ್ತಪದವೆಂದಾದರೇ ಭರ್ತುಃ ನಾಮ ಭರ್ತೃಣಾಂ ನಾಮ ಮುಂತಾದ ವಿಗ್ರಹಕ್ಕೆ ಅವಕಾಶವಾಗುವುದು. ಅದು ನಮಗೆ ಅನಿಷ್ಟ. ವಿಷ್ಣು ಒಬ್ಬನೇ ಶ್ರೇಷ್ಠ ಎಂಬುದಕ್ಕೆ ವಿರುದ್ಧವಾದುದು. ಕಾರಣ 'ನ ತೇ ವಿಷ್ಣೋ' ಎಂದು ಪ್ರಮಾಣದಲ್ಲಿ ಹೇಳಿದ ವಿಷ್ಣ್ವೇಕಶ್ರೇಷ್ಠತೆಯನ್ನು ತಿಳಿಸಲು ವ್ಯಾಸರು ವ್ಯಸ್ತವಾಗಿ ಹೇಳಿರುವರು ಎಂದು ತಿಳಿಯಬೇಕು. ಇಲ್ಲಿ ಒಂದು ಶಂಕೆ. 'ಓಂ ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ ಓಂ' ಎಂಬ ಸೂತ್ರವ್ಯಾಖ್ಯಾನದ ಸುಧೆಗೆ ಅನುಸಾರವಾಗಿ ಸಮಸ್ತವಾಗಿಟ್ಟರೂ ವ್ಯಪದೇಶಃ ಎಂದು ಏಕವಚನವಿರುವುದರಿಂದ ಅಭಿಮಾನಿನಃ ವ್ಯಪದೇಶಃ ಎಂದು ವಿಗ್ರಹ ಮಾಡುವಂತೆ ಇಲ್ಲಿಯೂ ನಾಮ ಎಂಬುದು ಏಕವಚನವಾದ್ದರಿಂದ ಭರ್ತುಃ ನಾಮ ಭರ್ತೃನಾಮ ಎಂದೇ ವಿಗ್ರಹ ಮಾಡಿ ವಿಷ್ಣು ಒಬ್ಬನೇ ಸ್ವಾಮಿ ಎಂಬರ್ಥ ತಿಳಿಯಬಹುದಲ್ಲ ಎಂದರೆ ಹಾಗಲ್ಲ. ಅಲ್ಲಿಗೂ ಇಲ್ಲಿಗೂ ವೈಷಮ್ಯವಿದೆ. ವ್ಯಪದೇಶಃ ಎಂಬ ಏಕವಚನವು ಅಂತರಂಗವಾದ ಜ್ಞಾಪಕ. ಅದರಂತೆ ಮುಂದೆ 'ಓಂ ದೃಶ್ಯತೇ ತು ಓಂ' ಎಂಬ ಸೂತ್ರದಲ್ಲಿಯ ಏಕವನಚವೂ ಏಕವಚನಾಂತ ವಿಗ್ರಹಕ್ಕೆ ಸುಗ್ರಾಹಕವಾಗಿದೆ. ಆದ್ದರಿಂದಲೇ ಭಾಷ್ಯದಲ್ಲಿ 'ದೇವತಾಽತ್ರ ವ್ಯಪದಿಶ್ಯತೇ' ಎಂದು ಒಂದು ಕಡೆಗೆ ಹೇಳಿ ಬೇರೆಡೆಯಲ್ಲಿ 'ದೃಶ್ಯಂತೇ ಮುನಿಭಿಶ್ಚ ತಾಃ' ಎಂಬ ಪ್ರಮಾಣಾನುಸಾರ ತಾಸಾಂ

ಎಂದೂ ಹೇಳಿದ್ದಾರೆ. (ತಾಸಾಂ ಅತಿಮಹಾಸಾಮರ್ಥ್ಯಂ ದೃಶ್ಯತೇ ಎಂಬಲ್ಲಿ) ಆದಕಾರಣ ಸುಧೆಯಲ್ಲಿ ಇದನ್ನನುಸರಿಸಲು ವ್ಯಪದೇಶಃ ದೃಶ್ಯತೇ ಇವೆರಡರಂತೆ ಏಕವಚನಾಂತವಿಗ್ರಹ ತೋರಿಸಿ 'ನ ಹಿ' ಮುಂತಾಗಿ ಅದಕ್ಕೆ ಯುಕ್ತಿಯನ್ನು ಹೇಳಿ (ಅಂದರೆ ಅನೇಕರಿಗೆ ಒಂದೇ ನಾಮವಿರಲಾರದು ಎಂದು ಹೇಳಿ) ತಾಃ ತಾಸಾಂ ಎಂಬುದಕ್ಕೆ ಅನುಗುಣವಾಗಿ ಜಾತ್ಯೇಕವಚನವೆಂದೂ ಹೇಳಿರುವರು. ಅಲ್ಲಿಯಂತೆ ಇಲ್ಲಿ ಅಂತರಂಗ ಬಹಿರಂಗ ನಿಮಿತ್ತಗಳಿಲ್ಲ. ನಾಮ ಎಂಬ ಏಕವಚನವಾದರೋ 'ವಿಪ್ರಾಣಾಂ ಭೋಜನಂ ಯಥಾ' ಎಂಬುದರ ಈ ಸುಧಾನುಸಾರ ಸಾವಕಾಶ ಮತ್ತು ಒಂದು ಆದಕಾರಣ ನಿರ್ಧಾರಕವಲ್ಲ. 'ಪರೋ ಮಾತ್ರಯಾ' 'ನ ತೇ ವಿಷ್ಣೋ' 'ಏಷ ಸರ್ವೇಶ್ವರಃ' ಮುಂತಾದ ಪ್ರಮಾಣಾನುಸಾರ ವಿವರಣಶರಣಾದರೇ ಸಮಸ್ತ ಹೇಳಿದರೂ ಭರ್ತುಃ ನಾಮ ಭರ್ತೃನಾಮ ಎಂಬ ವಿಗ್ರಹ. ವಿಶಿಷ್ಟಾ ಆಖ್ಯಾ ವ್ಯಾಖ್ಯಾ ಎಂಬಲ್ಲಿಯಂತೆ ತಿಳಿಯಬಹುದಲ್ಲ ಎನ್ನಬಾರದು. 'ವ್ಯಾಖ್ಯಾನತಃ ಅಧಿಕಾಂಶೋ ಜ್ಞಾಯತೇ ಇತಿ ಪೃಥಕ್ಕರಣಂ ವ್ಯರ್ಥಂ ಇತಿ ನಚ ವಾಚ್ಯಂ ಅಂತರಂಗ ಜ್ಞಾಪಕಭಾವೇ ಬಹಿರಂಗಸ್ಯ ಅನ್ವೇಷಣೀಯತ್ವಾತ್' ಎಂದು ಹೇಳಿದೆ. ನಮ್ಮ ಮಾತಿನಲ್ಲಿ ತಿಳಿಸಲು ಬರುವಾಗ ವ್ಯಾಖ್ಯಾನದಿಂದ ತಿಳಿಯುವಂತೆ ಹೇಳಬಾರದು. ಕಾರಣ ಮೊದಲೇ ಜಾಗ್ರತೆಯಿಂದಿರಬೇಕೆಂದು ವ್ಯಾಸರು ವ್ಯಾಸನಿರ್ದೇಶವನ್ನು ತಾವೊಬ್ಬರೇ ಅಧಿಕರೆಂದು ತಿಳಿಸಲು ಮಾಡಿರುವರು ಎಂದು ತಿಳಿಯಬೇಕು. ।।೩೦।।

**ವಿಕರ್ಷತೋಽಂತರ್ಹೃದಯಾದ್ದಾಸೀಪತಿಮಜಾಮಿಲಮ್ ।**
**ಯಮಪ್ರೇಷ್ಯಾನ್ ವಿಷ್ಣುದೂತಾ ವಾರಯಾಮಾಸುರೋಜಸಾ ।।೩೧।।**

**ದಾಸೀಪತಿಂ** ದಾಸಿಯ ಪತಿಯಾದ **ಅಜಾಮಿಳಂ** ಅಜಾಮಿಳನನ್ನು **ಅಂತರ್ಹೃದಯಾತ್** ಹೃದಯದ ಒಳಭಾಗದಿಂದ **ವಿಕರ್ಷತಃ** ಎಳೆಯುತ್ತಿದ್ದ **ಯಮಪ್ರೇಷ್ಯಾನ್** ಯಮದೂತರನ್ನು **ವಿಷ್ಣುದೂತಾಃ** ವಿಷ್ಣುದೂತರು **ಓಜಸಾ** ತಮ್ಮ ಅವಷ್ಟಂಭ ಶಕ್ತಿಯಿಂದ **ವಾರಯಾಮಾಸುಃ** ತಡೆದರು.

**ವಿಷ್ಣುದೂತಾಃ** ವ್ಯಾಪ್ತನಾದ ಭಗವಂತನ ಭೃತ್ಯರು ಸದಾ ಅವನ ಮೇಲೆ ಸುತ್ತುವವರು ಎಂದರ್ಥ. ಇದರಿಂದ ಅವರೆಲ್ಲಿ ಇವನೆಲ್ಲಿ ಹೇಗೆ ಸಹಸಾ ಬಂದಿಳಿದರು ಎಂಬ ಶಂಕೆ ಪರಿಹೃತವಾಯಿತು. **ಹೃದಯಾತ್** ಹೃದಯಕರ್ಣಿಕಾದಿಂದ **ಅಂತಃ** ನರಕದೊಳಗೆ **ಅಜಾಮಿಲಂ** ಜೀವನನ್ನು ಎಳೆಯುವ ದೂತರನ್ನು

'ನಿಯೋಜ್ಯಕಿಂಕರಪ್ರೇಷ್ಯಭುಜಿಷ್ಯಪರಿಚಾರಕಾಃ' ಎಂದು ಅಮರ. ಹೃದಯಾತ್ ಎಂಬಲ್ಲಿ ಪಂಚಮಿಯು ಲ್ಯಬ್ ಲೋಪ ನಿಮಿತ್ತಕವಾಗಿದೆ. ಹೀಗಾಗಿ ಹೃದಯಾತ್ ಎಂದರೆ ಹೃದಯಂ ವಿಧಾಯ ಮನಸ್ಸು ಮಾಡಿ ಎಂದು ಅರ್ಥ. **ಅಂತಃ** ಮನೆಯ ಮಧ್ಯದಲ್ಲಿ **ನ್ಯವಾರಯನ್** ನಿವಾರಿಸಿದರು. ಇಂತಹ ಪಾಪಿಯನ್ನು ಎಳೆದರೇ ಅವರಿಗೆ ಅಸಹನೆ ಎಂದರೆ **ಯಂ** ಎಂದು ಹೇಳುವರು. ಯಾವ ನಾಮೋಚ್ಚಾರಣ ಮಾಡಿದವರನ್ನು ಕುರಿತು **ಅಪ್ರೇಷ್ಯಾನ್** ತಮ್ಮ ಒಡೆಯನಿಂದ ಕಳಿಸಲು ಯೋಗ್ಯರಾಗದ ಎಂದರ್ಥ. ಓಜಃ ಎಂದರೆ ಅವಷ್ಟಂಭಶಕ್ತಿ ಅಥವಾ ಬಲ ಎಂದು ಅರ್ಥ. 'ಓಜೋಽವಷ್ಟಂಭಬಲಯೋಃ' ಎಂದು ವಿಶ್ವವಿದೆ. ।।೩೧।।

**ಊಚುರ್ನಿಷೇಧಿತಾಸ್ತಾಂಸ್ತೇ ವೈವಸ್ವತಪುರಃಸರಾಃ ।**
**ಕೇ ಯೂಯಂ ಪ್ರತಿಷೇದ್ಧಾರೋ ಧರ್ಮರಾಜಸ್ಯ ಶಾಸನಮ್ ।।೩೨।।**

**ನಿಷೇಧಿತಾಃ** ವಿಷ್ಣುದೂತರಿಂದ ತಡೆಯಲ್ಪಟ್ಟ **ತೇ ವೈವಸ್ವತಪುರಃಸರಾಃ** ಆ ಯಮಭಟರು **ತಾನ್** ಆ ವಿಷ್ಣುದೂತರನ್ನು ಕುರಿತು **ಧರ್ಮರಾಜಸ್ಯ ಶಾಸನಂ** ಯಮನ ಅಪ್ಪಣೆಯನ್ನು **ಪ್ರತಿಷೇದ್ಧಾರಃ** ತಡೆಯುವ **ಯೂಯಂ** ನೀವು **ಕೇ** ಯಾರು ? ಎಂದು **ಊಚುಃ** ಹೇಳಿದರು.

**ಕಸ್ಯ ವಾ ಕುತ ಆಯಾತಾ ಕಸ್ಮಾದಸ್ಯ ನಿಷೇಧಥ ।**
**ಕಿಂ ದೇವಾ ಉಪದೇವಾ ವಾ ಯೂಯಂ ಕಿಂ ಸಿದ್ಧಸತ್ತಮಾಃ ।।೩೩।।**

**ಯೂಯಂ** ನೀವು **ಕಸ್ಯ** ವಾ ಯಾರ ಸಂಬಂಧಿಗಳು **ಕುತ ಆಯಾತಾಃ ಚ** ಎಲ್ಲಿಂದ ಬಂದಿರುವಿರಿ **ಅಸ್ಯ** ಈ ಅಜಾಮಿಳನ **ನಯನಂ** ಕರೆದೊಯ್ಯುವುದನ್ನು **ಕಸ್ಮಾತ್ ನಿಷೇಧಥ** ಏಕೆ ತಡೆಯುವಿರಿ **ದೇವಾಃ ಕಿಂ** ನೀವು ದೇವತೆಗಳೋ ? **ಉಪದೇವಾ ವಾ** ಗಂಧರ್ವರೋ? **ಸಿದ್ಧಸತ್ತಮಾಃ** ಸಿದ್ಧರೋ?

ಯಮನಿಗಿಂತ ಉತ್ತಮರಾದ ದೇವತೆಗಳು ಯಮನ ಶಾಸನವನ್ನು ತಡೆಯಲು ಸಮರ್ಥರಾಗಿದ್ದಾರೆ. ಗಂಧರ್ವರು ಯಮನಿಗಿಂತ ಉತ್ತಮರಲ್ಲದಿದ್ದರೂ ಉತ್ತಮರ ಆಜ್ಞಾದಿಂದ ಯಮನ ಶಾಸನವನ್ನು ತಡೆಯಲು ಸಮರ್ಥರಾಗುತ್ತಾರೆ. ಸಿದ್ಧರಾದ ನಾರದಾದಿಗಳು ತತ್ಕಾಲದಲ್ಲಿ ಅಭಿವೃದ್ಧವಾದ ಭಕ್ತಿಯಿಂದ ಯಮನ ಶಾಸನವನ್ನು ತಡೆಯಲು ಸಮರ್ಥರಾಗುತ್ತಾರೆ. ಆದ್ದರಿಂದ ಈ ಮೂರು ವಿಕಲ್ಪಗಳನ್ನು ಮಾಡಿದ್ದಾರೆ. ।।೩೩।।

ದೇವತೆಗಳೋ ಗಂಧರ್ವರೋ ಸಿದ್ಧರೋ ಎಂಬುದಾಗಿ ದೇವಾದ್ಯುತ್ತಮಜಾತಿ ವಿಷಯಕವಾದ ಸಂದೇಹವು ಹೇಗೆ ಬಂದಿತು ? ಎಂದರೆ ಅಲೌಕಿಕವಾದ ರೂಪ ಅವರಲ್ಲಿ ಕಂಡಿದ್ದರಿಂದ ಎಂದು ಎರಡೂವರಿ ಶ್ಲೋಕದಿಂದ ಹೇಳುವರು-

**ಸರ್ವೇ ಪದ್ಮಪಲಾಶಾಕ್ಷಾಃ ಪೀತಕೌಶೇಯವಾಸಸಃ ।**
**ಕಿರೀಟಿನಃ ಕುಂಡಲಿನೋ ಲಸತ್ಪುಷ್ಕರಮಾಲಿನಃ ॥೩೪॥**

**ಸರ್ವೇ** ನೀವೆಲ್ಲರೂ **ಪದ್ಮಪಲಾಶಾಕ್ಷಾಃ** ಕಮಲದಳದಂತೆ ಕಣ್ಣುಳ್ಳವರು **ಪೀತಕೌಶೇಯವಾಸಸಃ** ಹಳದಿಯ ರೇಷ್ಮೆಯ ವಸ್ತ್ರ ಉಟ್ಟವರು **ಕಿರೀಟಿನಃ** ಕೀರಿಟ ಧಾರಿಗಳು **ಕುಂಡಲಿನಃ** ಕುಂಡಲವಿಟ್ಟವರು **ಲಸತ್ಪುಷ್ಕರಮಾಲಿನಃ** ಶೋಭಿಸುವ ಕಮಲದ ಹಾರವನ್ನು ಹಾಕಿಕೊಂಡವರು. ॥೩೪॥

**ಸರ್ವೇ ಚ ನೂತ್ನವಯಸಃ ಸರ್ವೇ ಚಾರುಚತುರ್ಭುಜಾಃ ।**
**ಧನುರ್ನಿಷಂಗಾಸಿಗದಾಶಂಖಚಕ್ರಾಂಬುಜಶ್ರಿಯಃ ॥೩೫॥**

**ಸರ್ವೇ** ಎಲ್ಲರೂ **ನೂತ್ನವಯಸಃ** ತರುಣರು **ಸರ್ವೇ** ಎಲ್ಲರೂ **ಚಾರು ಚತುರ್ಭುಜಾಃ** ಸುಂದರವಾದ ನಾಲ್ಕು ಕೈಗಳುಳ್ಳವರು **ಧನುಃ** ಬಿಲ್ಲು **ನಿಷಂಗ** ಬಾಣ ಬತ್ತಳಿಕೆ **ಅಸಿ** ಖಡ್ಗ **ಗದಾ** ಗದಾ **ಶಂಖ** ಶಂಖ **ಚಕ್ರ** ಚಕ್ರ **ಅಂಬುಜ** ಕಮಲಗಳ **ಶ್ರಿಯಃ** ಕಾಂತಿ ಉಳ್ಳವರು.

**ದಿಶೋ ವಿತಿಮಿರಾ ಲೋಕಾಃ ಕುರ್ವಂತಃ ಸ್ವೇನ ರೋಚಿಷಾ ।**
**ಕಿಮರ್ಥಂ ಧರ್ಮಪಾಲಸ್ಯ ಕಿಂಕರಾನ್ ನೋ ನಿಷೇಧಥ ॥೩೬॥**

**ಸರ್ವೇ** ನೀವೆಲ್ಲರೂ **ಸ್ವೇನ ರೂಚಿಷಾ** ನಿಮ್ಮ ನಿಮ್ಮ ಕಾಂತಿಯಿಂದ **ದಿಶಃ** ದಿಕ್ಕುಗಳನ್ನು **ವಿತಿಮಿರಾಲೋಕಾಃ (ವಿತಿಮಿರಾಃ)** ಕತ್ತಲೆ ಇಲ್ಲದವುಗಳನ್ನಾಗಿ **(ವಿಲೋಕಾಃ)** ಮತ್ತೊಂದರ ಪ್ರಕಾಶ ಇಲ್ಲದವುಗಳನ್ನಾಗಿಯೂ **ಕುರ್ವಂತಃ ಸಂತಃ** ಮಾಡುವವರಾಗಿ **ಧರ್ಮಪಾಲಸ್ಯ** ಧರ್ಮರಕ್ಷಕನಾದ ಯಮರಾಜನ **ಕಿಂಕರಾನ್** ದೂತರಾದ **ನಃ** ನಮ್ಮನ್ನು **ಕಿಮರ್ಥಂ ನಿಷೇಧಥ** ಏಕೆ ತಡೆಯುತ್ತೀರಿ. ಇದು ನಿಮಗೆ ಅನುಚಿತವಾಗಿದೆ.

ವಿತಿಮಿರಾಲೋಕಾಃ ತಿಮಿರೇಣ ಕತ್ತಲೆ ನಿಮಿತ್ತದಿಂದ ಆಲೋಕ ಜ್ಞಾನಾಭಾವವು ವಿ ಯಾರಿಗೆ ವಿಗತವಾಗಿದೆಯೋ ಅಥವಾ ತಿಮಿರಸ್ಯ ಕತ್ತಲೆಯ ಆಲೋಕಃ ನೋಟವು

ಯಾರಿಗೆ ವಿಗತವಾಗಿದೆಯೋ ವಿಗತಂ ತಿಮಿರಂ ಆಲೋಕಶ್ಚ ಅನ್ಯಪ್ರಕಾಶಶ್ಚ ಯಾಭ್ಯಃ ತಾಃ ವಿತಿಮಿರಾಲೋಕಾಃ ಮೊದಲು ಹೇಳಿದ ಅರ್ಥಕ್ಕೆ ಈ ವಿಗ್ರಹ.

**ವಿತಿಮಿರಾಃ** ಕತ್ತಲು ಅಜ್ಞಾನಾದಿಗಳಿಲ್ಲದ **ಹೇ ಲೋಕಾಃ** ವಿಷ್ಣುದೂತರೇ ಎಂದು ಸಂಬೋಧನ ಎಂದೂ ತಿಳಿಯಬಹುದು.

'ತಮಿಸ್ರಂ ತಿಮಿರಂ ತಮಃ' 'ರೋಚಿಃ ಶೋಚಿಃ' ಎಂದು ಅಮರವಿದೆ. ಮೂರುವರಿ ಶ್ಲೋಕಗಳಿಗೆ ಏಕಾನ್ವಯ ಇರುವುದರಿಂದ ಇದನ್ನು ಕಲಾಪಕ ವಿಶೇಷಕ ಎಂದಾದರೂ ಅನ್ನಬಹುದು.

**ದ್ವಾಭ್ಯಾಂ ಯುಗ್ಮಮಿತಿ ಪ್ರೋಕ್ತಂ ತ್ರಿಭಿಃ ಪ್ರೋಕ್ತಂ ವಿಶೇಷಕಮ್ ।**
**ಕಲಾಪಕಂ ಚತುರ್ಭಿಶ್ಚ ತದೂರ್ಧ್ವಂ ಕುಲಕಂ ಸ್ಮೃತಮ್ ॥**

ಎಂದು ವಚನವಿದೆ. ಎರಡು ಶ್ಲೋಕಗಳಿಗೆ ಏಕಾನ್ವಯವಿದ್ದರೆ ಯುಗ್ಮ ಮೂರಕ್ಕೆ ಇದ್ದರೆ ವಿಶೇಷಕ ನಾಲ್ಕಕ್ಕಾದರೇ ಕಲಾಪಕ ಅದಕ್ಕೂ ಹೆಚ್ಚು ಶ್ಲೋಕಗಳಿಗಾದರೆ ಕುಲಕ ಹೀಗಿದೆ. ಈಗ ಮೂರಾದ್ದರಿಂದ ವಿಶೇಷಕವೆಂದು ನಾಲ್ಕನೇ ಅರ್ಧ ಸೇರಿದ್ದರಿಂದ ಕಲಾಪಕ ಎಂದೂ ಅನ್ನಬಹುದು. ॥೩೬॥

ಯಾರು ದಂಡ್ಯರು ಯಾರು ಅದಂಡ್ಯರು ಎಂದು ಜ್ಞಾನವಿಲ್ಲದ ಇವರು ಕಳ್ಳರು ನಮ್ಮ ಹೆದರಿಕೆಗೆ ಧರ್ಮರಾಜನ ಕಿಂಕರರು ಎಂದು ಸುಳ್ಳು ಹೇಳುವರು ಇಷ್ಟೂ ಜ್ಞಾನವಿಲ್ಲವೇ ಇವರಿಗೆ ಎಂದು ಆಶ್ಚರ್ಯದಿಂದ ನಕ್ಕು ಮೂರುಶ್ಲೋಕಗಳಿಂದ ಅವರಿಗೆ ಈ ರೀತಿಯಾಗಿ ವಿಷ್ಣುದೂತರು ಹೇಳುತ್ತಾರೆ- (ಇದು ಚಟ್ಟೀ ಅವತರಣಿಕಾ)

ಯಮಧರ್ಮನ ಸೇವಕರು ಎಂದು ಹೇಳಿಕೊಳ್ಳುತ್ತಿದ್ದಾರೆ. ಇವರಿಗೆ ಯಾರು ದಂಡ್ಯರು ಯಾರು ಅದಂಡ್ಯರು ಎಂಬ ಜ್ಞಾನವೇ ಇಲ್ಲವಲ್ಲ ಎಂಬ ಆಶ್ಚರ್ಯದಿಂದ ನಕ್ಕು ಅವರಿಗೆ ಈ ರೀತಿಯಾಗಿ ಹೇಳುತ್ತಿದ್ದಾರೆ-

**ಶ್ರೀಶುಕ ಉವಾಚ -**

**ಇತ್ಯುಕ್ತೇ ಯಮದೂತೈಸ್ತೇ ವಾಸುದೇವೋಕ್ತಕಾರಿಣಃ ।**
**ತಾನ್ ಪ್ರತ್ಯೂಚುಃ ಪ್ರಹಸ್ಯೇದಂ ಮೇಘನಿರ್ಹ್ರಾದಯಾ ಗಿರಾ ॥೩೭॥**

**ಯಮದೂತೈಃ** ಯಮಭಟರಿಂದ **ಇತಿ** ಮೇಲೆ ಹೇಳಿದಂತೆ **ಉಕ್ತೇ** ಹೇಳುತ್ತಿರಲು **ವಾಸುದೇವೋಕ್ತಕಾರಿಣಃ** ಶ್ರೀಹರಿಯ ಕಿಂಕರರಾದ **ತೇ** ಅವರು **ಪ್ರಹಸ್ಯ** ಗಹಗಹಿಸಿ

ನಕ್ಕು **ಮೇಘನಿರ್ಹ್ರಾದಯಾ** ಮೋಡದ ಗುಡುಗಿನಂತೆ ಗಂಭೀರವಾದ **ಗಿರಾ** ಮಾತಿನಿಂದ **ತಾನ್ ಪ್ರತಿ** ಅವರನ್ನು ಕುರಿತು **ಇದಂ ಊಚುಃ** ಮುಂದೆ ಹೇಳುವ ಮಾತುಗಳನ್ನಾಡಿದರು. ।।೩೭।।

**ವಿಷ್ಣುದೂತಾ ಊಚುಃ -**

**ಯೂಯಂ ವೈ ಧರ್ಮರಾಜಸ್ಯ ಯದಿ ನಿರ್ದೇಶಕಾರಿಣಃ ।**
**ಬ್ರೂತ ಧರ್ಮಸ್ಯ ನಸ್ತತ್ತ್ವಂ ಯಚ್ಚಾಧರ್ಮಸ್ಯ ಲಕ್ಷಣಮ್ ।।೩೮।।**

**ಯೂಯಂ** ನೀವು **ಧರ್ಮರಾಜಸ್ಯ ನಿರ್ದೇಶಕಾರಿಣಃ ಯದಿ** ಯಮಧರ್ಮ ರಾಜನ ದೂತರಾಗಿದ್ದರೇ **ನಃ** ನಮಗೆ **ಧರ್ಮಸ್ಯ** ಧರ್ಮದ **ಚ** ಮತ್ತು **ಅಧರ್ಮಸ್ಯ** ಅಧರ್ಮದ **ತತ್ತ್ವಂ** ನಿಜವಾದ ಸ್ವರೂಪವನ್ನು **ಯಚ್ಚ** ಯಾವುದು **ಲಕ್ಷಣಂ** ಅಸಾಧರಣ (ವ್ಯಾವರ್ತಕ) ಧರ್ಮವೋ ಪ್ರಮಾಣವೋ **ತಚ್ಚ** ಅದನ್ನು **ಬ್ರೂತ** ಹೇಳಿರಿ. **ವೈ** ನೋಡೋಣ. ।।೩೮।।

**ಕಥಂಸ್ವಿದ್ ಧ್ರಿಯತೇ ದಂಡಃ ಕಿಂವಾಸ್ಯ ಸ್ಥಾನಮೀಪ್ಸಿತಮ್ ।**
**ದಂಡ್ಯಾಃ ಕಿಂ ಕಾರಿಣಃ ಸರ್ವೇ ಆಹೋಸ್ವಿತ್ಕತಿಚಿನ್ನೃಣಾಮ್ ।।೩೯।।**

**ಕಥಂಸ್ವಿತ್** ಯಾವ ರೀತಿಯಿಂದ **ದಂಡಃ** ಶಿಕ್ಷೆಯು **ಧ್ರಿಯತೇ** ವಿಧಿಸಲಾಗುವುದು **ಅಸ್ಯ** ಈ ಶಿಕ್ಷೆಗೆ **ಈಪ್ಸಿತಂ** ಇಷ್ಟವಾದ **ಸ್ಥಾನಂ** ಪ್ರದೇಶವಾಗಲಿ ವಿಷಯವಾಗಲಿ **ಕಿಂ** ಯಾವುದು. **ನೃಣಾಂ** ಮನುಷ್ಯರಲ್ಲಿ **ಕಾರಿಣಃ** ಕರ್ಮಮಾಡುವ **ಸರ್ವೇ** ಎಲ್ಲರೂ **ದಂಡ್ಯಾಃ ಕಿಂ** ಶಿಕ್ಷೆಗೆ ಅರ್ಹರೇ ? **ಆಹೋಸ್ವಿತ್** ಅಥವಾ **ಕತಿಚಿತ್** ಕೆಲವರೇ ? ಅವರಲ್ಲಿಯೂ **ಕಿಂ ಕಾರಿಣಃ ವಾ** ಮಾಡಿದವರು ಮಾತ್ರವೇ ? ಅಥವಾ **ಅಕಾರಿಣಃ ವಾ** ಮಾಡದೇ ಇದ್ದವರೇ ? **ಬ್ರೂತ** ಹೇಳಿರಿ. ।।೩೯।।

ಧರ್ಮಾಧರ್ಮಗಳ ಲಕ್ಷಣವೇನೆಂಬುದಕ್ಕೆ ಉತ್ತರಿಸುವರು-

**ಯಮದೂತಾ ಊಚುಃ -**

**ವೇದಪ್ರಣಿಹಿತೋ ಧರ್ಮೋ ಹ್ಯಧರ್ಮಸ್ತದ್ವಿಪರ್ಯಯಃ ।**
**ವೇದೋ ನಾರಾಯಣಃ ಸಾಕ್ಷಾತ್ಸ್ವಯಂಭೂರಿತಿ ಶುಶ್ರುಮ ।।೪೦।।**

**ಯಃ** ಯಾವುದು **ವೇದಪ್ರಣಿಹಿತಃ** ವೇದದಲ್ಲಿ ಕರ್ತವ್ಯವೆಂದು ಹೇಳಿದೆಯೋ ಅದು **ಧರ್ಮಃ** ಧರ್ಮವು (ಇದರಿಂದ ಧರ್ಮದ ಸ್ವರೂಪ ಹೇಳಿದಂತಾಯಿತು) **ಯಃ**

ಧರ್ಮಃ ಸಃ ವೇದಪ್ರಣಿಹಿತಃ ಎಂದು ಅನ್ವಯ ಮಾಡಿದಾಗ ಧರ್ಮದ ವಿಷಯದಲ್ಲಿ ಪ್ರಮಾಣ ಹೇಳಿದಂತಾಯಿತು. ಯಃ ಅಧರ್ಮಃ ಸಃ ವೇದೇನ ನಿಷಿದ್ಧಃ ಇದರಿಂದ ಪ್ರಮಾಣ ಹೇಳಿದಂತಾಯಿತು. ಧರ್ಮದ ತತ್ತ್ವ ಹೇಳಿರಿ ಎಂಬುದಕ್ಕೆ ಉತ್ತರಿಸುವರು **ಸಾಕ್ಷಾತ್** ಔಪಚಾರಿಕವಲ್ಲದೇ **ಸ್ವಯಂಭೂಃ** ಅನಾದಿಯಿಂದ ತಾನೇ ಸಿದ್ಧವಾಗಿರುವ **ವೇದಃ** ವೇದವು **ಸಾಕ್ಷಾತ್** ತಪಶ್ಶಕ್ತಿಯಿಂದಲ್ಲದೇ ಸ್ವಾಭಾವಿಕವಾಗಿಯೇ ಕಂಡ **ಸ್ವಯಂಭೂಃ** ಬೇರೆಯವರಿಂದ ದೇಹಾದಿಗಳನ್ನು ಪಡೆಯದೇ ಸ್ವತಃ ಜ್ಞಾನಾನಂದಾದಿ ದೇಹವುಳ್ಳ **ನಾರಾಯಣಃ** ನಾರಾಯಣನೇ ಪ್ರಥಮವಕ್ತೃವಾಗಿ ಉಳ್ಳದ್ದು **ಇತಿ** ಎಂದು **ಶುಶ್ರುಮ** ಕೇಳಿದ್ದೇವೆ.

ಇದುವರೆಗೆ ಭಾಗವತ ಸ್ವಷ್ಟಾಭಿಪ್ರಾಯದ್ದಾಗಿತ್ತು. ಕೆಲವು ಕಡೆ ಅನುಚಿತಾರ್ಥದಂತೆ ಕಂಡರೂ ಸಮಾನಸಮ್ಮತಿ ಉತ್ತರವಿವರಣದಿಂದ ಯೋಗ್ಯಾರ್ಥ ಮಾಡಲು ಯೋಗ್ಯವಾಗಿತ್ತು ಎಂದು ಶ್ರೀಮದಾಚಾರ್ಯರು ಮತ್ತಾರಿಗಿಲ್ಲದ ಸೌಭಾಗ್ಯ ಉಳ್ಳ ರಮಾರಮಣನಾದ ವಿಶಿಷ್ಟ ಚೇತನನಿಗೆ ಅಚೇತನ ಭೇದಾಭೇದ ತಿಳಿಸಿ (ಆಪಾತತಃ) ವೇದಪ್ರಣಿಹಿತಃ ಎಂಬ ಶ್ಲೋಕವ್ಯಾಖ್ಯಾನ ಪ್ರಯತ್ನ ಗೌರವ ಸಹಿಸದೆ ಪ್ರಮಾಣ ಉದಾಹರಿಸುವರು.

**ವೇದಾನಾಂ ಪ್ರಥಮೋ ವಕ್ತಾ ಹರಿರೇವ ಯತೋ ವಿಭುಃ ।**
**ಅತೋ ವಿಷ್ಣ್ವಾತ್ಮಕಾ ವೇದಾ ಇತ್ಯಾಹುರ್ವೇದವಾದಿನಃ ॥ -ಇತಿ ಶಬ್ದನಿರ್ಣಯೇ**

ವೇದೋ ನಾರಾಯಣಃ ಸಾಕ್ಷಾತ್ ಎಂದದ್ದರಿಂದ ವೇದವೂ ನಾರಾಯಣನೂ ಒಂದೇ ಎಂದು ಹೇಳಿದೆಯೆಂದು ತಿಳಿಯಬಾರದು. ಮೇಲಿನ ಪ್ರಮಾಣವು ನಾರಾಯಣನೇ ಮೊದಲು ವಕ್ತೃವಾದ್ದರಿಂದ ಹಾಗೆ ವ್ಯವಹಾರ ಮಾಡುವರೆಂದು ತಿಳಿಸಿದೆ. ಸಾಕ್ಷಾತ್ ಸ್ವಯಂಭೂಃ ಈ ಪದಗಳನ್ನು ವೇದಕ್ಕೆ ವಿಶೇಷಣ ಮಾಡಿದ್ದರಿಂದ 'ಋಚಃ ಸಾಮಾನಿ ಜಜ್ಞಿರೇ' ಇತ್ಯಾದಿ ವೇದಕ್ಕೆ ಉತ್ಪತ್ತಿ ಹೇಳುವ ವಾಕ್ಯವಿರುವುದರಿಂದ ವೇದವು ಪೌರುಷೇಯ ತನ್ನಿಮಿತ್ತ ದೋಷಶಂಕೆಯಿಂದ ಪ್ರಾಮಾಣ್ಯ ಶಂಕೆ ಬರುವುದರಿಂದ ಧರ್ಮಾಧರ್ಮಗಳಲ್ಲಿ ಅದು ಪ್ರಮಾಣವಾಗದು ಎಂಬ ಶಂಕೆ ಪರಿಹೃತವಾಯಿತು. ಈ ಶಬ್ದಗಳನ್ನು ಶ್ರೀಹರಿಗೆ ವಿಶೇಷಣ ಮಾಡಿದ್ದರಿಂದ ಶ್ರೀಹರಿಯು ಮಿಕ್ಕ ಋಷಿಗಳಂತೆ ತಪಸ್ಸಿನಿಂದ ವೇದಗಳ ಕೆಲವು ಭಾಗ ಮಾತ್ರ ಕಂಡಿರುವವನಲ್ಲ. ದೇವದತ್ತಾದಿಗಳಂತೆ ಮತ್ತೊಬ್ಬರಿಂದ ದೇಹ ಪಡೆದವನಲ್ಲ ಎಂದು ತಿಳಿಸಿರುವರು. ನಾರಾಯಣವಕ್ತೃಕವೆಂದು ಅರ್ಥ ಮಾಡಿದ್ದರಿಂದ ವೇದಗಳ ಉತ್ಪತ್ತಿ

ಎಂದರೆ ಅಭಿವ್ಯಕ್ತಿಯೇ ಹೊರತು ಹೊಸ ರಚನೆಯಲ್ಲ ಪುರಾಣಗಳಂತೆ ಅನ್ಯಥಾ ರಚನೆಯಲ್ಲ ಎಂದು ತಿಳಿಸಿದಂತಾಯಿತು.'ಯಾವದ್ ಬ್ರಹ್ಮ ವಿಷ್ಠಿತಂ ತಾವತೀ ವಾಕ್' 'ವಾಚಾ ವಿರೂಪ ನಿತ್ಯಯಾ' ಮುಂತಾದ ಶ್ರುತಿಗಳೇ ವೇದನಿತ್ಯತೆಯಲ್ಲಿ ಪ್ರಮಾಣವಾಗಿವೆ. ಸಾಕ್ಷಾತ್ ಎಂಬುದರಿಂದ ಈ ನಿತ್ಯತ್ವವು ವಾಕ್ಯಗಳಿಗೆ ಔಪಚಾರಿಕ ಬಹುಕಾಲವಿರುವದು ಇತ್ಯಾದಿ ಅರ್ಥವಲ್ಲ ಎಂದು ತಿಳಿಸಿರುವರು. ಅಂತು ವೇದವು ಅಪೌರುಷೇಯವಾದ್ದರಿಂದ ಪುರುಷದೋಷ ನಿಮಿತ್ತವಿಲ್ಲದ ಕಾರಣ ಧರ್ಮಾಧರ್ಮಗಳಲ್ಲಿ ಪ್ರಮಾಣವಾಗುವವು ಎಂದು ಭಾವ. ।।೪೦।।

'ವೇದೋ ನಾರಾಯಣಃ' ಎಂದು ಹೇಳಿದರಷ್ಟೇ. ಆ ನಾರಾಯಣನನ್ನು ಇತರ-ಪದಾರ್ಥಗಳಿಂದ ಭಿನ್ನನೆಂದು ಹೇಗೆ ತಿಳಿಯುವುದು ? ಎಂದರೆ ಅದಕ್ಕಾಗಿ ಲಕ್ಷಣ ಹೇಳುವರು-

**ಯೇನ ಸ್ವಧಾಮ್ನ್ಯಮೀ ಭಾವಾ ರಜಸ್ಸತ್ತ್ವತಮೋಮಯಾಃ ।**
**ಗುಣನಾಮಕ್ರಿಯಾರೂಪೈಃ ವಿಭಾವ್ಯಂತೇ ಯಥಾತಥಮ್ ।।೪೧।।**

**ಯೇನ** ಯಾವ ನಾರಾಯಣನಿಂದ **ಸ್ವಧಾಮ್ನಿ** ತಾನೇ ಆಧಾರ ಉಳ್ಳವುಗಳಾಗಿ **ರಜಸ್ಸತ್ತ್ವತಮೋಮಯೈಃ** ರಜಸ್ಸು-ಸತ್ವ-ತಮೋಗುಣಗಳ ವಿಕಾರಗಳಾದ ಈ ಗುಣತ್ರಯಗಳ ಪ್ರಾಚುರ್ಯ ಉಳ್ಳ **ಅಮೀ** ಪ್ರತ್ಯಕ್ಷ ಮೊದಲಾದ ಪ್ರಮಾಣಗಳಿಂದ ತಿಳಿದುಬರುವ **ಭಾವಾಃ** ಚೇತನಾಚೇತನ ಪದಾರ್ಥಗಳು **ಗುಣನಾಮಕ್ರಿಯಾರೂಪೈಃ ಗುಣ**-ಶಬ್ದಾದಿ ವಿಷಯಗಳು ಬಿಳಿ-ಹಳದಿ ಮುಂತಾದ ಬಣ್ಣಗಳು ಅಥವಾ ಶಮದಮಾದಿ ಗುಣಗಳು **ನಾಮ** ಬ್ರಾಹ್ಮಣ-ಕುದುರೆ-ದೇವದತ್ತ- ಘಟ ಮುಂತಾದ ಹೆಸರುಗಳು **ಕ್ರಿಯಾ** ಪಚನ-ಪಠನ ಉತ್‌ಕ್ಷೇಪಣ-ಅಪಕ್ಷೇಪಣ-ಆಕುಂಚನ-ಪ್ರಸಾರಣ-ಗಮನ ಮುಂತಾದ ಕ್ರಿಯೆಗಳು **ರೂಪೈಃ** ಎರಡು ಕಾಲು ನಾಲ್ಕು ಕಾಲು ಮುಂತಾದ ಅವಯವ-ಆಕಾರಗಳಿಂದ ಕೂಡಿದವುಗಳಾಗಿ **ಯಥಾತಥಂ** ಸಂಕರವಿಲ್ಲದಂತೆ ಯಥಾಯೋಗ್ಯವಾಗಿ ವ್ಯಸ್ತ-ಸಮಸ್ತ ಸೃಷ್ಟಿ-ಸ್ಥಿತಿ-ಸಂಹಾರಾದಿಗಳಿಂದ **ವಿಭಾವ್ಯಂತೇ** ವಿವಿಧರೀತಿಯಲ್ಲಿ ಹುಟ್ಟುವವೋ ರಕ್ಷಿತವಾಗುವವೋ ಸಂಹೃತವಾಗುವವೋ ಅವನೇ ನಾರಾಯಣನು.

'ಸೃಷ್ಟಿಃ ಸ್ಥಿತಿಶ್ಚ ಸಂಹಾರೋ ಭವನಂ ಸಮುದಾಹೃತಮ್' ಎಂದು ಹೇಳಿದ್ದರಿಂದ ಈ ಅರ್ಥವನ್ನು ಹೇಳಬೇಕು.

ಮುಂದೆ ಉತ್ಪತ್ತಿಯನ್ನು ಮೊದಲಿಗೆ ಹೇಳುವುದಕ್ಕನುಗುಣವಾಗಿ ರಜೋಗುಣವನ್ನು ಮೊದಲು ಹೇಳಿರುವರು. ಅದಕ್ಕನುಸಾರವಾಗಿ ಗುಣ ಎಂದರೆ ರಕ್ತಾದಿಗಳು. ವಿಶೇಷ ಅನುಸರಿಸದೇ ಇದ್ದಾಗ ಶಬ್ದಾದಿಗಳನ್ನು ಸ್ವೀಕರಿಸಬಹುದು. 'ಯಸ್ಯ ಬ್ರಹ್ಮಾದಯೋ ದೇವಾ ವೇದಾ ಲೋಕಾಶ್ಚರಾಚರಾಃ ನಾಮರೂಪವಿಭೇದೇನ' ಎಂದು ಪ್ರಮಾಣವಿದೆ.

ನಾರಾಯಣನೂ ಹೀಗೇ ಏನು ಎಂದರೆ ಅಲ್ಲವೆಂದು ಹೇಳುವರು. ನ ಎಂದು. **ಯೇ ಭಾವಾಃ** ಮುಂದೆ ಹೇಳುವ **ಅಮೀ** ಈ ಪದಾರ್ಥಗಳು **ಸ್ವಧಾಮ್ನಿ** ತನಗೆ ತಾನೇ ಆಶ್ರಯನಾದ 'ಸ್ವೇ ಮಹಿಮ್ನಿ ಪ್ರತಿಷ್ಠಿತಃ' ಎಂದು ಈ ವಿಷಯದಲ್ಲಿ ಶ್ರುತಿಯಿದೆ. **ಸು** ಅತ್ಯಂತವಾಗಿ **ಅಧಾಮ್ನಿ** ಭಿನ್ನಾಶ್ರಯರಹಿತನಾದ ಎಂದರ್ಥ. ಇದರಿಂದ ಅವನು ನಮ್ಮಂತೆ ಅಲ್ಲವೆಂದು ಭಾವ. ಇದು ಈ ಲಕ್ಷಣದಿಂದ ಕೂಡಿದ್ದು ಯಾವ ಪ್ರಮಾಣದಿಂದ ತಿಳಿಯಬೇಕು ಅಂದರೆ ಅದನ್ನು ಇಲ್ಲಿ ಹೇಳಿದೆ. **ಯಥಾತಥಂ** ಯಥಾಸ್ಥಿತವಾಗಿ **ಯೇನ** ಯಾವ ವೇದದಿಂದ **ವಿಭಾವ್ಯಂತೇ** ವಿವಿಚ್ಯ ಭಗವಂತನ ಅಧೀನವೆಂದು ತಿಳಿಸುವುದೋ **ಸಃ** ಅದು **ವೇದಃ** ಎಂದು ಅನ್ವಯ. ||೪೧||

'ಕಿಂ ವಾऽಸ್ಯ ಸ್ಥಾನಂ' ಎಂಬ ಪ್ರಶ್ನೆಗೆ ಅಧರ್ಮಿಗಳೇ ದಂಡಕ್ಕೆ ಸ್ಥಾನವೆಂದು ಉತ್ತರ ಕೊಡುವವರಾಗಿ ಜೀವರು ಅನಂತರಾದ್ದರಿಂದ ಅವರು ಮಾಡಿದ ಧರ್ಮಾಧರ್ಮಗಳನ್ನು ತಿಳಿಯುವುದು ಅಶಕ್ಯವಾದ್ದರಿಂದ ಇವರು ಪಾಪಿಗಳು ಎಂದು ಪ್ರತ್ಯೇಕಿಸಿ ಜ್ಞಾನವಾಗುವುದು ಅಸಂಭಾವಿತವಾದ್ದರಿಂದ ಶಿಕ್ಷೆಗೆ ಪಾತ್ರರಾಗುವುದು ಹೇಗೆ ಎಂಬ ಶಂಕೆಯನ್ನು ಪರಿಹರಿಸಲು ಎಲ್ಲರಿಂದ ಅನುಭೂತವಾದ ಧರ್ಮಾಧರ್ಮಸಾಕ್ಷಿಗಳನ್ನು ಹೇಳುವರು-

**ಸೂರ್ಯೋऽಗ್ನಿಃ ಖಂ ಮರುದ್ಗಾವಃ ಸೋಮಃ ಸಂಧ್ಯಾಹನೀ ದಿಶಃ ।**
**ಕಾಲಃ ಸ್ವಯಂ ಧರ್ಮ ಇತಿ ಹ್ಯೇತೇ ಧರ್ಮಸ್ಯ ಸಾಕ್ಷಿಣಃ ||೪೨||**

**ಸೂರ್ಯಃ** ಸೂರ್ಯನು **ಅಗ್ನಿಃ** ಅಗ್ನಿಯು **ಖಂ** ಆಕಾಶ **ಮರುತ್** ವಾಯು **ಗಾವಃ** ನೀರು **ಸೋಮಃ** ಚಂದ್ರನು **ಸಂಧ್ಯಾಹನೀ** ಸಂಜೆ-ಹಗಲುಗಳು **ದಿಶಃ** ದಿಕ್ಕುಗಳು **ಕಾಲಃ** ಕಾಲವು ಕಾಲನಿಯಾಮಕ ಶ್ರೀಹರಿಯು **ಸ್ವಯಂ** ಪಾಪ-ಪುಣ್ಯ ಮಾಡುವ ಜೀವನು **ಧರ್ಮಃ** ಯಮಧರ್ಮರಾಜನು **ಧರ್ಮಸ್ಯ** ಧರ್ಮಕ್ಕೆ ಉಪಲಕ್ಷಣಯಾ ಅಧರ್ಮಕ್ಕೆ **ಸಾಕ್ಷಿಣಃ** ಸಾಕ್ಷಿಗಳು.

**ಗಾವಃ** ಎಂಬುದರಿಂದ ಸ್ವರ್ಗ-ಭೂಮಿಗಳನ್ನು **ಅಹನೀ** ಎಂಬುದರಿಂದ ರಾತ್ರಿಗಳನ್ನು **ಕಾಲ** ಶಬ್ದದಿಂದ ಕಲ ಎಂದು ಕರೆಯಲ್ಪಡುವ ದೇವತೆಗಳನ್ನೂ ಸ್ವಯಂ ದಂಡಧಾರಿಯಾದ ಯಮನನ್ನೂ ಹೇಳಬಹುದು.

**ಹರಿಶ್ಚ ಪ್ರಕೃತಿಶ್ಚೈವ ಬ್ರಹ್ಮಾ ವಾಯುಸ್ತಥೈವ ಚ ।**
**ಸುಪರ್ಣಶೇಷರುದ್ರಾಶ್ಚ ಶಕ್ರಸೂರ್ಯಯಮಾವಪಿ ।**
**ಅಗ್ನಿರ್ಯಮಾನುಜಶ್ಚೈವ ಕಾಲಶಬ್ದೋದಿತಾಃ ಕ್ರಮಾತ್ ॥**

ಜಡಗಳನ್ನು ಹೇಳಿದ ಸ್ಥಳದಲ್ಲಿ ಅದರ ಅಭಿಮಾನಿಗಳನ್ನು ಇಟ್ಟುಕೊಳ್ಳಬೇಕು. ಸ್ವಯಂ ಎಂಬುದರಿಂದ ಹೃದಯವನ್ನು ಮನಸ್ಸನ್ನೂ ಹೇಳಿರುವರು.

**ಆದಿತ್ಯಚಂದ್ರಾವನಿಲೋಽನಲಶ್ಚ ದ್ಯೌರ್ಭೂಮಿರಾಪೋ ಹೃದಯಂ ಮನಶ್ಚ ।**
**ಅಹಶ್ಚ ರಾತ್ರಿಶ್ಚ ಉಭೇ ಚ ಸಂಧ್ಯೇ ಧರ್ಮಶ್ಚ ಜಾನಾತಿ ನರಸ್ಯ ವೃತ್ತಮ್ ॥**

ಎಂಬ ಪ್ರಮಾಣ ಇದೇ ವಿಷಯವನ್ನೇ ತಿಳಿಸುತ್ತದೆ.

ಇಲ್ಲಿ ಸೂರ್ಯನನ್ನು ಮೊದಲು ಹೇಳಲು ಕಾರಣವನ್ನು ಶ್ರೀಸತ್ಯಧರ್ಮರು ಹೀಗೆ ಹೇಳುವರು. 'ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ ನಾರಾಯಣಃ' ಎಂದೂ 'ವೇದೋ ನಾರಾಯಣಃ' ಎಂದೂ ಹೇಳಿದ್ದರಿಂದ ನಾರಾಯಣಾಧಿಷ್ಠಾನವಾಗಿ ರವಿಯನ್ನು ಮೊದಲು ಹೇಳಿದ್ದು. ಅಥವಾ ತಮ್ಮ ಸ್ವಾಮಿಯಾದ ಯಮನಿಗೆ ಜನಕನಾದ್ದರಿಂದ ಸೂರ್ಯನನ್ನು ಮೊದಲು ಹೇಳಿದ್ದು ಎಂದು ತಿಳಿಯಬೇಕು. **ಗಾವಃ** ನೀರು ಅಥವಾ ಚಂದ್ರ 'ವಾಗ್ವಾರಿಷು ಗೌರ್ಮತಾ' 'ಗೌಃ... ಚಂದ್ರಮಸಿ ಸ್ಮೃತಃ' ಎಂದು ವಿಶ್ವಗಳಿವೆ. **ಸೋಮಃ** ವೃತ್ತಿಭೇದದಿಂದ ಭಿನ್ನವಾದ ಮನಸ್ಸು-ಹೃದಯ ಉಮಯಾ ಸಹಿತಃ ಸೋಮಃ ಎಂದರೆ ರುದ್ರದೇವರು ಮತ್ತು ಚಂದ್ರ ಇಬ್ಬರೂ ಮನೋಽಭಿಮಾನಿಗಳಾದ್ದರಿಂದ ಅವರನ್ನು ಹೇಳಿಕೊಡುವ ಶಬ್ದವನ್ನು ಮನಸ್ಸಿನಲ್ಲಿ ಉಪಯೋಗಿಸಬಹುದು. ಅಭಿಮನ್ಯಮಾನ-ಅಭಿಮಾನಿಗಳಿಗೆ ಏಕಶಬ್ದವಾಚ್ಯತ್ವವು 'ಮಹತಃ ಚತುರ್ಮುಖಾತ್' ಮುಂತಾದ ಸ್ಥಳದಲ್ಲಿ ಕಂಡಿದೆ. ಅಲ್ಲದೇ 'ಚಂದ್ರಮಾ ಮನಸೋ ಜಾತಃ' ಎಂದಿರುವುದರಿಂದ ಮನಸ್ಸಿನಿಂದ ಹುಟ್ಟಿದವನು ಚಂದ್ರನಾದ್ದರಿಂದ ಜನ್ಯ-ಜನಕವಾಚಕವಾದ ಶಬ್ದಗಳಿಗೆ ಸಾಂಕರ್ಯವು 'ಯಥಾ ಬ್ರಹ್ಮಾದಿಕಂ ಮುಖಂ' ಮುಖವೇ ಬ್ರಾಹ್ಮಣ ಬ್ರಾಹ್ಮಣನೇ ಮುಖ ಮುಂತಾದ ಸ್ಥಳದಲ್ಲಿ ಕಂಡಿದೆ. ಉದ್ದೇಶ್ಯವಿಧೇಯಶಾಬಲ್ಯದಿಂದ 'ಪಿತಾಮಹಾದ್ಯಾಸ್ತು ಪಿತರೋ ನಾಮ ಕೀರ್ತಿತಾಃ' ಎಂದು ಸೂತ್ರಭಾಷ್ಯ-ಐತರೇಯಭಾಷ್ಯ ಮುಂತಾದವುಗಳಲ್ಲಿ ಸ್ಪಷ್ಟವಾಗಿ

ಕಂಡಿರುವುದರಿಂದ ಎರಡನ್ನೂ ಸ್ವೀಕರಿಸಬಹುದು. **ಸಂಧ್ಯಾ** ಸಂಜೆ-ಹಗಲು ಅವುಗಳ ಅಭಿಮಾನಿ ದೇವತೆ **ದಿಶಃ** ದಿಗ್ದೇವತೆಗಳು **ಕಾಲಃ** ಸಂಜೆ-ಹಗಲು ಬಿಟ್ಟು ಮಿಕ್ಕ ಕಾಲ ಅದಕ್ಕೆ ಅಭಿಮಾನಿಗಳಾದ ದೇವತೆಗಳು ಅಥವಾ ನಾರಾಯಣ 'ಕಾಲೋಽಸ್ಮಿ ಲೋಕಕ್ಷಯಕೃತ್' ಎಂದು ಗೀತೆಯಲ್ಲಿದೆ. 'ಸೋಽಹಂ ಕಾಲೋಽವತೀರ್ಣೋಽಸ್ಮಿ' ಎಂದು ಅನಂತವ್ರತಕಥೆಯಲ್ಲಿದೆ. **ಸ್ವಯಂ** ಕರ್ತೃವಾದ ಜೀವ **ಧರ್ಮಃ** ಯಮನು **ಧರ್ಮಸ್ಯ** ಧರ್ಮದ ಅಕಾರ ಪ್ರಶ್ಲೇಷದಿಂದ **ಅಧರ್ಮಸ್ಯ** ಎಂದು ಪದವಿಭಾಗದಿಂದ **ಅಧರ್ಮಸ್ಯ** ಎಂದರೆ ಅಧರ್ಮಕ್ಕೆ ಎಂದರ್ಥ. **ಸಾಕ್ಷಿಣಃ** ಪ್ರತ್ಯಕ್ಷವಾಗಿ ನೋಡುವವರು. 'ಸಾಕ್ಷಾದ್ ದ್ರಷ್ಟರಿ ಸಂಜ್ಞಾಯಾಂ' ಎಂದು ಪಾಣಿನಿಗಳು ಹೇಳಿರುವರು. ಇದರಿಂದ ಎಲ್ಲಿ ಸಾಕ್ಷಾದ್ ದ್ರಷ್ಟೃತ್ವವು ಅನುಪಪನ್ನವಾಗಿದೆಯೋ ಅಲ್ಲಿ ದೇವತೆಯೇ ಗ್ರಾಹ್ಯವೆಂದು ಸೂಚಿತವಾಯಿತು. **ಸಾಕ್ಷಿಣಃ** ಎಂಬ ಪದದಿಂದ ತಮಗೆ ಅಧ್ಯಕ್ಷನಾದವನನ್ನು ಹೇಳಿಕೊಡುವ ಧರ್ಮಪದಕ್ಕೆ ಸಾಕ್ಷಾದನ್ವಯ ತಿಳಿಸಲು ಸ್ವಯಂ ಧರ್ಮಃ ಎಂದು ಕೊನೆಗೆ ನಿಬಂಧ ಮಾಡಿರುವರು.

**ಕಾಲಃ** ನಾರಾಯಣನು **ತಸ್ಮಾತ್ ಕಾಲಾತ್ ಸಾಕ್ಷಿಣಃ** ಎಂದು ಪಂಚಮ್ಯಂತವಾಗಿ ಅನುವರ್ತಿಸುವುದು. **ಏತೇ** ಮೇಲೆ ಹೇಳಿದವರೆಲ್ಲ ಕಾಲನಿಂದಲೇ ಸಾಕ್ಷಿಗಳಾಗಿರುವರು. ಅಂದರೆ ನಾರಾಯಣನೇ ಇವರೆಲ್ಲರನ್ನು ಧರ್ಮಸಾಕ್ಷಿಗಳನ್ನಾಗಿ ಸ್ಥಾಪಿಸಿರುವನೆಂದು ಭಾವ. ಇದನ್ನು 'ಪರಿಸ್ಪಶೋಽದಧಾತ್ ಸೂರ್ಯೇಣ' ಎಂಬ ಋಗ್ಭಾಷ್ಯ-ಟೀಕಾಗಳಲ್ಲಿ ಹೀಗೆ ಹೇಳಿರುವರು. 'ಸಹೈವ ಸೂರ್ಯೇಣ ಚ ದೇವಸಂಘಾಂಶ್ಚರಾನಜ್ಞಾತಾನಧದಾತ್ ವಾಸುದೇವಃ । ದೈತ್ಯಾನಾಂ ವಾ ತಮಸಾಂ ವೃತ್ತದೃಷ್ಟ್ಯೈ । ನನು ಈಶ್ವರಃ ತದ್ವೃತ್ತಂ ಜ್ಞಾತ್ವಾ ದಂಡಯೇತ್ ತಜ್ಜ್ಞಾನಮೇವ ತಸ್ಯ ಕಥಂ ಸರ್ವಜ್ಞತ್ವಾತ್ । ಕಿಂ ಚಂದ್ರೋ ವಾಸುದೇವೋ ಬಹಿಃ ದೈತ್ಯಾನಾಂ ಅಂತಸ್ತಮಸಾಂ ಅಜ್ಞಾನಾದೀನಾಂ ವೃತ್ತದೃಷ್ಟ್ಯೈ ವೃತ್ತದರ್ಶನಾರ್ಥಂ ಸೂರ್ಯೇಣ ಸಹೈವ ಸೂರ್ಯಸಹಿತಾನ್ ಸ್ಪಶಃ ಜ್ಞಾತಚರಾನ್ ದೇವಸಂಘಾನ್ ಪರಿತಃ ಸ್ಥಾಪಿತವಾನ್ । ತಥಾ ಚೋಕ್ತಂ- 'ಆದಿತ್ಯಚಂದ್ರಾವನಿಲೋಽನಲಶ್ಚ ದ್ಯೌರ್ಭೂಮಿರಾಪೋ ಹೃದಯಂ ಮನಶ್ಚ । ಅಹಶ್ಚ ರಾತ್ರಿಶ್ಚ ಉಭೇ ಚ ಸಂಧ್ಯೇ ಧರ್ಮಶ್ಚ ಜಾನಾತಿ ನರಸ್ಯ ವೃತ್ತಮ್' ಮತ್ತು 'ಸೂರ್ಯೋಽಗ್ನಿರ್ಮರುತೋ ಗಾವಃ ಸೋಮಸಂಧ್ಯಾಹನೀ ದಿಶಃ । ಸ್ವಯಂ ಧರ್ಮ ಇತಿ ಹ್ಯೇತೇ ಧರ್ಮಸ್ಯ ಸಾಕ್ಷಿಣಃ ॥ಇತಿ॥

'ಆದಿತ್ಯಚಂದ್ರ...' ಎಂಬಲ್ಲಿ ಮತ್ತು ಕಾಲಸಾಮಾನ್ಯ ಹೇಳದಿರುವುದರಿಂದ ' ಪ್ರಮಾಣಾಂತರ 'ಸೂರ್ಯೋಽಗ್ನಿ...' ಎಂಬುದನ್ನು ಹೇಳಿರುವರು ಎಂದು ಛಲಾರಿಯಲ್ಲಿ ಹೇಳಿದೆ. 'ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ' 'ವಾಙ್ಮನಸಿ ದರ್ಶನಾಚ್ಛಬ್ದಾಚ್ಚ' ಸೂತ್ರಭಾಷ್ಯ- 'ಮನೋ ರುದ್ರ ಉದಾಹೃತಃ' 'ರುದ್ರೋ ವೀಂದ್ರಃ ಶೇಷಕಾಮೌ ಮನಸಸ್ತ್ವೇವ ದೇವತಾಃ' 'ತಸ್ಯಾ ರುದ್ರೋ ಮನೋಽಭಿಧಃ' ಎಂದು ಷಟ್‌ಪ್ರಶ್ನದಲ್ಲಿ 'ಮನೋಽಭಿಮಾನಿನೋ ರುದ್ರ...' ಮುಂತಾಗಿ ಕಾಠಕಭಾಷ್ಯದಲ್ಲಿ ಹೇಳಿದೆ. 'ತತ್ರ ಪ್ರಾಣಾತ್ಮನಾ ವಾಯುರ್ಮನೋರೂಪೇಣ ಶಂಕರಃ । ಶೇಷಃ ಸುಪರ್ಣ ಇಂದ್ರಶ್ಚ ಮನಾಂಸ್ಯೇವ ಪೃಥಕ್ ಪೃಥಕ್' ಅಹಂಭಾವಮನೋ ರುದ್ರಃ' ಯಜ್ಞಾದಿಸಾಧನಂ ಯತ್ತು ಮನಶ್ಚಂದ್ರಃ ಪ್ರಕೀರ್ತಿತಃ' ಐತರೇಯಭಾಷ್ಯದಲ್ಲಿ ಹೇಳಿದ್ದರಿಂದ ಮನಸ್ಸು-ಚಂದ್ರ.

ದಂಡ್ಯಾದಂಡ್ಯ ನಿರ್ಣಾಯಕರಾದ ಸಾಕ್ಷಿಗಳನ್ನು ಹೇಳಿ ಈಗ ದಂಡ್ಯರನ್ನು ಹೇಳುವರು-

**ಏತೈರಧರ್ಮೋ ವಿಜ್ಞಾತಃ ಸ್ಥಾನಂ ದಂಡಸ್ಯ ಯುಜ್ಯತೇ ।**
**ಸರ್ವೇ ಕ್ರಮಾನುರೋಧೇನ ದಂಡಮರ್ಹಂತಿ ಕಾರಿಣಃ ॥೪೩॥**

**ಏತೈಃ** ಧರ್ಮಾಧರ್ಮಗಳೆಂಬ ಪುಣ್ಯಪಾಪಗಳನ್ನು ನೋಡುತ್ತಿರುವ ಈ ಸೂರ್ಯ ಮೊದಲಾದವರಿಂದ **ಅಧರ್ಮಃ ಇತಿ** ಧರ್ಮವಿಲ್ಲದವನೆಂದು ಪಾಪ ಮಾಡಿದವನೆಂದು **ವಿಜ್ಞಾತಃ** ತಿಳಿದುಬಂದವನೇ **ದಂಡ್ಯಸ್ಯ ಸ್ಥಾನಂ** ಶಿಕ್ಷೆಗೆ ಪಾತ್ರನೆಂದು **ಯುಜ್ಯತೇ** ಯುಕ್ತವಾಗಿದೆ. ಯಮಧರ್ಮರಾಜರಾದರೋ ಶಿಕ್ಷೆ ಮಾಡುವುದಕ್ಕೆ ಮಾತ್ರ ನಿಯುಕ್ತರು. 'ಕಥಂಸ್ವಿದ್ ಧ್ರಿಯತೇ ದಂಡಃ' 'ಕಿಂ ಕಾರಿಣಃ ಸರ್ವೇ ಉತ ಕತಿಚಿತ್' ಎಂಬುದಕ್ಕೆ ಉತ್ತರಿಸುವರು. **ಕಾರಿಣಃ** ಪಾಪಮಾಡಿದ **ಸರ್ವೇ** ಎಲ್ಲರೂ **ಕ್ರಮಾನುರೋಧೇನ** ಪಾಪಕರ್ಮದ ತಾರತಮ್ಯಕ್ಕೆ ತಕ್ಕಂತೆ **ದಂಡಂ ಅರ್ಹಂತಿ** ಶಿಕ್ಷೆಗೆ ಅರ್ಹರಾಗುವರು.

ಅಥವಾ **ಕ್ರಮಾನುರೋಧೇನ** ಎಂದರೆ 'ರೌರವೋಽಥ ಮಹಾಂಶ್ಚೈವ ವಹ್ನಿರ್ವೈತರಣೀ ತಥಾ । ಕುಂಭೀಪಾಕ ಇತಿ ಪ್ರೋಕ್ತಾನ್ಯನಿತ್ಯನರಕಾಣಿ ತು । ಏತಾನಿ ಕ್ರಮಶೋ ಗತ್ವಾ...' ಎಂಬ ಕ್ರಮದಂತೆ ಶಿಕ್ಷೆ ಹೊಂದಲರ್ಹರು. ಪಾಪ ಮಾಡಿದವರೆಲ್ಲ ಎಂದು ಹೇಳಿದ್ದರಿಂದ ಪಾಪಿಗಳೇ ದಂಡ್ಯರಾಗಿದ್ದಾರೆ. ಹೊರತು

ಪುಣ್ಯಕರ್ಮಿಗಳಲ್ಲವೆಂದು ತಿಳಿಯಬೇಕು. **ಸರ್ವೇ ಕ್ರಮಾನುರೋಧೇನ** ಇಷ್ಟು ಪಾಪಕ್ಕೆ ಇಷ್ಟು ಶಿಕ್ಷೆ ಏನಿದೆಯೋ ಆ ಕ್ರಮಕ್ಕನುಸರಿಸಿ ಎಂದೂ ಅರ್ಥ. ಅವರಲ್ಲಿ ಯಾರೂ ಉಳಿಯುವುದಿಲ್ಲವೆಂದು ಭಾವ. **ಸರ್ವೇ ಕಾರಿಣಃ** ಪುಣ್ಯ ಮಾಡಿದ ಎಲ್ಲರೂ **ಕ್ರಮಾನುರೋಧೇ ಸತಿ ನ ದಂಡಮರ್ಹಂತಿ** ವೇದದಲ್ಲಿ ಹೇಳಿದಂತೆ ಕರ್ಮ ಮಾಡಿದಲ್ಲಿ ಅವರು ಶಿಕ್ಷೆಗೆ ಯೋಗ್ಯರಲ್ಲ. ಅಂಥವರನ್ನು ಶಿಕ್ಷಿಸಲು ನಾವು ದಕ್ಷರಲ್ಲವೆಂದು ಭಾವ. ನ ಧರ್ಮಃ ಯಸ್ಯ ಸಃ ಎಂದು ಬಹುವ್ರೀಹಿ ಮಾಡಿದರೆ ಅನಿಚ್ ಅನಿತ್ಯವೆಂದಿಟ್ಟುಕೊಳ್ಳಬೇಕು. ಇಲ್ಲವಾದರೆ ಧರ್ಮಃ ಅಸ್ಯ ಅಸ್ತೀತಿ ಧರ್ಮಃ ನ ಧರ್ಮಃ ಅಧರ್ಮಃ ಎಂದು ನಞ ತತ್ಪುರುಷವನ್ನಾದರೂ ಮಾಡಬೇಕು. ।।೪೩।।

ಜ್ಞಾನಿಗಳಾಗಲಿ ಅಜ್ಞಾನಿಗಳಾಗಲಿ ಇಬ್ಬರಿಗೂ ಅಂದರೆ ಪುಣ್ಯ-ಪಾಪ ಮಾಡಿದವರಿಗೆ ಇಹಲೋಕದಲ್ಲಿಯೇ ಪ್ರತ್ಯಕ್ಷ-ಆಗಮಗಳಿಂದ ಸುಖ-ದುಃಖ ಕೊಡುವ ಕರ್ಮದಲ್ಲಿಯೇ ಏಕೆ ಪ್ರವೃತ್ತಿ ಪಾರತ್ರಿಕವಾದ ಸುಖಮಾತ್ರಫಲಕವಾದ ಕರ್ಮದಲ್ಲಿಯೇ ಏಕೆ ಪ್ರವೃತ್ತಿ ಇಲ್ಲ ಎಂದರೆ ಹೇಳುವರು-

**ಸಂಭವಂತಿ ಹ್ಯಭದ್ರಾಣಿ ವಿಪರೀತಾನಿ ಚಾನಘಾಃ ।**
**ಕಾರಣಂ ಗುಣಸಂಗೋಽಸ್ತಿ ದೇಹವಾನ್ನ ಹ್ಯಕರ್ಮಕೃತ್ ।।೪೪।।**

**ಹೇ ಅನಘಾಃ** ದೋಷರಹಿತರಾದ ವಿಷ್ಣುದೂತರೇ **ಹಿ** ಯಾವ ಕಾರಣ ಎಲ್ಲ ಕರ್ಮಿಗಳಿಗೂ **ಅಭದ್ರಾಣಿ** ದುಃಖಫಲಕಗಳಾದ ಪಾಪಗಳೂ **ವಿಪರೀತಾನಿ** ಅದಕ್ಕೆ ವಿರುದ್ಧವಾದ ಸುಖಫಲಕಗಳಾದ (ರಾಜ್ಯಾದಿಪ್ರಾಪ್ತಿ ನಿಮಿತ್ತ ಸುಖ ಕೊಡುವ) ಪುಣ್ಯಗಳೂ **ಸಂಭವಂತಿ** ಸಂಭವಿಸುವವೋ ಆ ಕಾರಣದಿಂದ ಎಲ್ಲರೂ ದಂಡ್ಯರೆಂದು ಹಿಂದಕ್ಕೆ ಅನ್ವಯ. **ಕಾರಣಂ** ಪುಣ್ಯ-ಪಾಪಗಳು ಸಂಭವಿಸುವುದಕ್ಕೆ ಕಾರಣವು **ಗುಣಸಂಗಃ** ಸತ್ತ್ವಾದಿ ತ್ರಿಗುಣಸಂಬಂಧವಿದೆ. ಪ್ರಾಕೃತವಾದ ಗುಣಗಳ ಸಂಬಂಧವೇ ಪುಣ್ಯ-ಪಾಪ ಮಾಡಲು ಕಾರಣವೆಂದು ಅಭಿಪ್ರಾಯ. ಕೇವಲ ಲಿಂಗಶರೀರ ಯುಕ್ತರಾದಾಗಲೂ ತ್ರಿಗುಣ ಸಂಬಂಧವಿದೆ. ಆದರೆ ಅಲ್ಲಿ ಸ್ಥೂಲಕರ್ಮಗಳ ಆಚರಣೆ ಇಲ್ಲವಲ್ಲ. ಈ ಕಾರ್ಯಕಾರಣಭಾವ ವ್ಯಭಿಚರಿತ ಎಂದರೆ ಸ್ಥೂಲದೇಹ ಸಂಬಂಧವನ್ನಿಟ್ಟುಕೊಂಡು ಹೇಳಿದ್ದು ಎಂದು ಸಮಾಧಾನ ಹೇಳುವರು. **ದೇಹವಾನ್** ಸ್ಥೂಲದೇಹ ಉಳ್ಳವರಾದರೋ **ಅಕರ್ಮಕೃತ್** ಕರ್ಮಮಾಡದಿರುವವನು **ನ ಹಿ** ಇಲ್ಲ. ಅಥವಾ ಗುಣಸಂಗವಿದ್ದರೂ ಪುಣ್ಯಶಾಲಿಯೊಬ್ಬ ಜ್ಞಾನದಿಂದ ಕರ್ಮಮಾಡದೇ

ಹೋದಾಗ ಈ ಕಾರ್ಯ-ಕಾರಣ ಭಾವಕ್ಕೆ ಭಂಗ ಬಂದಿತಲ್ಲವೇ ? ಎಂದರೆ ಹೇಳುತ್ತಾರೆ. ದೇಹೀ ಎಂದ ಮೇಲೆ ಕರ್ಮ ಮಾಡದಿರುವವನು ಇಲ್ಲವೇ ಇಲ್ಲ. ಗುಣಗಳ ಶಕ್ತಿಯೇ ಅಂತಹುದು. ಹಿ ಇದು

ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ ।
ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ॥

ಮುಂತಾದ ಪ್ರಮಾಣ ಸಿದ್ಧವು.

ಆಚತುರ್ದಶಮಾದ್ವರ್ಷಾತ್ ಕರ್ಮಾಣಿ ನಿಯಮೇನ ತು ।
ದಶಾವರಾಣಾಂ ದೇಹಾನಾಂ ಕಾರಣಾನಿ ಕರೋತ್ಯಸೌ ॥

ಎಂಬುದನ್ನು ಸಂಭವಂತಿ ಹಿ ಎಂಬಲ್ಲಿನ ಹಿ ಎಂಬುದರಿಂದ ಇಟ್ಟುಕೊಳ್ಳಬೇಕು.

**ಸತ್ಯಧರ್ಮರ ವಿಶೇಷ ವಿಚಾರ**

**ಅಭದ್ರಾಣಿ** ಸಂಸಾರಾವಸ್ಥೆಯಲ್ಲಿ ಕ್ಲೇಶಕೊಡುವ **ವಿಪರೀತಾನಿ** ಇಲ್ಲಿಯೇ ಸುಖಪ್ರದವಾದ ಕರ್ಮಗಳು **ಸಂಭವಂತಿ** ಎಂದು ಹೇಳಿದೆ. ಮೊದಲಿಗೆ ಧರ್ಮದ ಪ್ರಸ್ತಾವನೆ ಇರುವುದರಿಂದ (ವೇದಪ್ರಣಿಹಿತೋ ಧರ್ಮಃ...) **ವಿಪರೀತಾನಿ** ಎಂಬುದನ್ನು ಮೊದಲು ಪ್ರಯೋಗಿಸಬೇಕು. ಆದರೂ ಅಭದ್ರಾಚಾರಿಗಳೇ ಬಹಳವಾಗಿರುವುದರಿಂದ ಮೊದಲು ಹೇಳಿರುವರು. 'ಓಂ ಅತಸ್ತ್ವಿರಜ್ಜ್ಯಾಯೋ ಲಿಂಗಾಚ್ಚ ಓಂ' 'ಅಸುರಾ ಬಹುಲಾ ಯಸ್ಮಾತ್' ಎಂಬ ಪ್ರಮಾಣವಚನಗಳಲ್ಲಿ ಇದೇ ವಿಷಯವು ಪ್ರತಿಪಾದಿತವಾಗಿದೆ.

ಶ್ರೇಷ್ಠವಾದುದರಿಂದ ಧರ್ಮಜ್ಞಾನವಾದರೆ ತತ್ಪ್ರತಿಯೋಗಿಯಾದ ಅಧರ್ಮಜ್ಞಾನ (ವಿರುದ್ಧ) ಸುಲಭವಾಗುವದು. ಪ್ರಸ್ತುತ ಪ್ರಚ್ಯುತಿಯು ಬರುವದಿಲ್ಲ. ಕಾರಣ ಭದ್ರಾಣಿ ಎಂಬ ಪಾಠವೇ ಭದ್ರತರ ಎಂದು ತಿಳಿಯಿರಿ ಎನ್ನುತ್ತಾರೆ.

ದೇಹವಾನ್ ಎಂಬ ಮತುಪ್‌ನಿಂದ ಪುಣ್ಯಪಾಪಪ್ರಾಪ್ತಿಯುಳ್ಳ ದೇಹದ ಹೇಯತೆಯನ್ನು ತಿಳಿಸುವರು. 'ಭೂಮನಿಂದಾಪ್ರಶಂಸಾಸು ಭವಂತಿ ಮತುಬಾದಯಃ' ಎಂದಿದೆಯಷ್ಟೇ. ಅದರಲ್ಲಿಯೂ ಕರ್ಮ ಸ್ವತಂತ್ರವಲ್ಲವೆಂದೂ ಹೇಳುವರು. **ಗುಣಸಂಗಃ** ಶ್ರೀಹರಿಯು ಕಾರಣನು ಇತಿ ಎಂಬ ಜ್ಞಾನವುಳ್ಳವನು ಯಾವನೋ ಅವನೇ **ದೇಹವಾನ್** ಪ್ರಶಸ್ತ ಶರೀರವುಳ್ಳವನು. ಇವನು **ಅಕರ್ಮಕೃತ್ ನ ಹಿ ಚೇದಪಿ**

ಕರ್ಮ ಮಾಡದಿರುವವನಲ್ಲ ಅಂದರೆ ಕರ್ಮ ಮಾಡುವವನೆ ಆದರೂ ಅವನಿಂದ ಮಾಡಲ್ಪಟ್ಟ **ಅಭದ್ರಾಣಿ** ಅಮಂಗಲಕರ್ಮಗಳು **ವಿಪರೀತಾನಿ ಸಂಭವಂತಿ** ಮಂಗಲಕರಗಳಾಗುವವು ಎಂದು ಹಿ ಶಬ್ದದಿಂದ 'ಧರ್ಮೋ ಭವತ್ಯಧರ್ಮೋಽಪಿ ಯೋ ನ ಭಕ್ತ್ಯೈಃ ಕೃತೋ ಹರೇ' ಮುಂತಾದ ಪ್ರಸಿದ್ಧಿಯನ್ನು ತಿಳಿಸುವರು. ಅಕರ್ಮಕೃತ್ ನ ಅಕರ್ಮಕೃದಿವ ಕರ್ಮ ಮಾಡದಿರುವವನಂತೆ ಅಂದರೆ ಮಾಡಿದ ಕರ್ಮಗಳು ಬಂಧಕವಾಗದ್ದರಿಂದ ಎಂದು ಭಾವ. 'ಚಕ್ರಂ ನ ವೃತ್ತಂ' ಎಂಬಲ್ಲಿಯಂತೆ ನಞ ಎಂಬುದು ಇವಾರ್ಥಕವಾಗಿದೆ. ಅವನಿಗೆ ಗುಣಸಂಗೋ ನ ಹ್ಯಸ್ತಿ ದೇಹವತಃ ವಿಪರೀತಾನಿ ಭದ್ರಾಣಿ ಅಭದ್ರಾಣಿ ಸಂಭವಂತಿ ಹೀಗೂ ಯೋಜನೆ. ಪ್ರಮಾಣವು ಹಿಂದೆಯೇ ಉಕ್ತವಾಗಿದೆ. ।।೪೪।।

ಮಾಡಿದ ಪುಣ್ಯ-ಪಾಪಗಳಿಂದ ಪಾರತ್ರಿಕ ಫಲ ಮಾಡಿದವನಿಗೇ ಆಗುವದೆಂದು ಹೇಳುವರು- ಕಥಂಸ್ವಿದ್ ಧ್ರಿಯತೇ ದಂಡಃ ಎಂಬುದಕ್ಕೆ ಉತ್ತರಿಸುವರು-

**ಯೇನ ಯಾವಾನ್ ಯಥಾ ಧರ್ಮೋ ಹ್ಯಧರ್ಮೋ ವಾ ಸಮೀಹಿತಃ ।**
**ಸ ಏವ ತತ್ಫಲಂ ಭುಂಕ್ತೇ ತಥಾ ತಾವದಮುತ್ರ ವೈ ।।೪೫।।**

**ಯೇನ** ಯಾವನಿಂದ **ಯಾವಾನ್** ಎಷ್ಟು **ಯಥಾ** ಹೇಗೆ **ಧರ್ಮಃ** ಪುಣ್ಯ ಕೆಲಸವು **ಸಮೀಹಿತಃ** ಮಾಡಲ್ಪಟ್ಟಿತೋ **ತಾವತ್** ಅಷ್ಟು **ತಥಾ** ಹಾಗೆ **ಸಃ ಏವ** ಪುಣ್ಯ ಮಾಡಿದ ಜೀವನೇ **ತತ್ಫಲಂ** ಆ ಪುಣ್ಯದ ಫಲವನ್ನು ಸುಖವನ್ನು **ಅಮುತ್ರ** ಪರಲೋಕದಲ್ಲಿ **ಭುಂಕ್ತೇ** ಅನುಭವಿಸುವನೋ **ವಾ** ಅದರಂತೆ **ಯೇನ ಯಾವಾನ್ ಯಥಾ ಅಧರ್ಮಃ ಸಮೀಹಿತಃ** ಯಾವನಿಂದ ಎಷ್ಟು ಹೇಗೆ ಅಧರ್ಮ ಕೆಲಸವು ಮಾಡಲ್ಪಟ್ಟಿತೋ **ತಾವತ್ ತಥಾ** ಅಷ್ಟು ಹಾಗೆ **ತತ್ಫಲಂ** ಆ ಅಧರ್ಮದ ಫಲವನ್ನು ದಂಡವನ್ನು **ಅಮುತ್ರ** ಪರಲೋಕದಲ್ಲಿ **ಭುಂಕ್ತೇ** ಅನುಭವಿಸುವನು. **ವೈ** ಅಧರ್ಮಾನುಸಾರ ಶಿಕ್ಷೆ ಪಡೆಯುವನೆಂಬುದು ಪ್ರಸಿದ್ಧವು. **ಸ ಏವ ತತ್ಫಲಮೇವ ಭುಂಕ್ತೇ ಏವ** ಹೀಗೆ ಏವ ಶಬ್ದಾನ್ವಯ.

ವೈಕಾರವು 'ಓಂ ಕರ್ತಾ ಶಾಸ್ತ್ರಾರ್ಥವತ್ವಾತ್ ಓಂ' 'ಸ ಪಾತ್ರಂ ಬಂಧಮೋಕ್ಷಯೋಃ' ಎಂಬ ಪ್ರಮಾಣಗಳನ್ನು ಜ್ಞಾಪಿಸುವದು. **ಸ ಏವ ಧರ್ಮಃ** ಎಂಬ ಪದಗಳು ಆವರ್ತಿತವಾಗುವವು. ಭಗವಂತನೇ **ಭುಂಕ್ತೇ ಭೋಜಯತಿ** ಅನುಭವಿಸುವಂತೆ ಮಾಡುವನು. ಹಾಗಾದರೆ ಕರ್ಮಫಲ ಏಕರೂಪ ಎಂದಾದರೆ ಈ

ಜೀವನು ಅದಕ್ಕೆ ಪಾತ್ರ ಅದರಲ್ಲೂ ಶುಭಫಲವಿಲ್ಲವಾದ್ದರಿಂದ ಆ ಕರ್ಮಗಳು ವ್ಯರ್ಥವೇ ಅದಕ್ಕೆ ಪಾತ್ರತೆ ಉಂಟೇ ಎಂದರೆ ಹೇಳುವರು. **ಧರ್ಮಃ** ಭಗವಂತನು **ತತ್ಫಲಂ** ಕರ್ಮದ ಮುಖ್ಯಫಲವಾದ ಶುಭವನ್ನು **ಭುಂಕ್ತೇ** ಅನುಭವಿಸುವನು **ವೈ** ಪ್ರಮಾಣ ಸಿದ್ಧವು. 'ಓಂ ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್ ಓಂ' 'ಆತ್ಮಾಂತರಾತ್ಮೇತಿ ಹರಿರೇಕ ಏವ ದ್ವಿಧಾ ಸ್ಥಿತಃ । ನಿವಿಷ್ಟೋ ಹೃದಯೇ ನಿತ್ಯಂ ರಸಂ ಪಿಬತಿ ಕರ್ಮಜಂ' ಮುಂತಾದ ಸೂತ್ರ ಆಗಮಪ್ರಸಿದ್ಧಿಯನ್ನು ತಿಳಿಸುವುದು. ।।೪೫।।

ಮಹಾಜ್ಞಾನಿಗಳಿಗೆ ಇವರು ಹೀಗೆ ಇವರು ಹೀಗೆ ಎಂಬ ಜ್ಞಾನವಾಗಲಿ ಅಜ್ಞಾನಿಗಳಿಗೆ ಈ ವಿಧವಾದ ಜ್ಞಾನವು ಸಾಧ್ಯವಿಲ್ಲ. ಅಂಥವರಿಗೂ ಜ್ಞಾನದ ಉಪಾಯವನ್ನು ಹೇಳಿ ಆಪ್ಯಾಯನಗೊಳಿಸುವರು-

ಅಥವಾ ಕೇವಲ ಸೂರ್ಯಾದಿಗಳಿಗಿಷ್ಟೇ ಧರ್ಮಾದಿ ಜ್ಞಾನವಲ್ಲ ಲೌಕಿಕರಿಗೂ ಆನುಮಾನಿಕವಾದ ಧರ್ಮಾಧರ್ಮಜ್ಞಾನ ಉಂಟು ಎಂದು ಹೇಳುವರು-

ಅಥವಾ 'ಯಾವಜ್ಜೀವಂ ಸುಖಂ ಜೀವೇತ್' ಬದುಕಿರುವವರೆಗೆ ಸುಖವಾಗಿರಬೇಕು. ಸಾಲವಾದರೂ ಮಾಡಿ ಮೃಷ್ಟಾನ್ನ ತಿನ್ನಬೇಕು. ದೇಹವು ಭಸ್ಮವಾಗಿ ಹೋದಮೇಲೆ ಮತ್ತೆ ಬರುವುದೇ ? ಎಂಬ ಮಾತುಗಳಂತೆ ಕರ್ಮ ಮಾಡಿದವನೇ ತಾನು ಮಾಡಿದ್ದನ್ನೂ ಪರಲೋಕದಲ್ಲಿ ಅನುಭವಿಸುವನು ಎಂಬುದು ಕೂಡುವುದಿಲ್ಲವಲ್ಲವೇ ಎಂದರೆ ಉತ್ತರ ಕೊಡುತ್ತಾರೆ-

**ಯಥೇಹ ದೇವಪ್ರವರಾಸ್ತ್ರೈವಿಧ್ಯಮುಪಲಭ್ಯತೇ ।**
**ಭೂತೇಷು ಗುಣವೈಚಿತ್ರ್ಯಾತ್ತಥಾನ್ಯತ್ರಾನುಮೀಯತೇ ।।೪೬।।**

**ಹೇ ದೇವಪ್ರವರಾಃ** ದೇವಶ್ರೇಷ್ಠರೇ **ಇಹ** ಈ ಲೋಕದಲ್ಲಿ ಈ ಜನ್ಮದಲ್ಲಿ ತಾವು ಮಾಡಿದ್ದಕ್ಕೆ ಫಲಕೊಡುವವರು ಪ್ರಮಾಣದಿಂದ ಹೇಗೆ ಕಂಡುಬರುವದೋ ಮತ್ತು **ಗುಣವೈಚಿತ್ರ್ಯಾತ್** ಸತ್ತ್ವಾದಿಗುಣವೈಚಿತ್ರ್ಯದಿಂದ **ಭೂತೇಷು** ಜೀವರಲ್ಲಿ **ತ್ರೈವಿಧ್ಯಂ** ಉತ್ತಮ-ಮಧ್ಯಮ-ಅಧಮವೆಂಬ ಮೂರು ಪ್ರಕಾರದ ಕರ್ಮವು ಅದರ ಫಲ ಸುಖ ದುಃಖ ಸುಖದುಃಖ ಹೀಗೆ **ಉಪಲಭ್ಯತೇ** ಪ್ರತ್ಯಕ್ಷದಿಂದ ಹೇಗೆ ತಿಳಿದು ಬಂದಿರುವುದೋ **ತಥಾ** ಹಾಗೆ ವಾಕ್ಯವನ್ನು ಪ್ರಮಾಣವೆಂದು ಒಪ್ಪದಿದ್ದರೂ ಪ್ರತ್ಯಕ್ಷ ಕಂಡ ವ್ಯಾಪ್ತಿಯುಳ್ಳ ಅನುಮಾನದಿಂದ **ಅನ್ಯತ್ರ** ಮತ್ತೊಂದು ಜನ್ಮದಲ್ಲಿಯೂ

ಪರಲೋಕದಲ್ಲಿಯೂ ಸ್ವಕೃತಫಲ ಕೊಡುವವರು ಕರ್ಮತ್ರೈವಿಧ್ಯವು **ಅನುಮೀಯತೇ** ಲೌಕಿಕರಿಂದಲೂ ಅನುಮಾನದಿಂದ ತಿಳಿಯಲಾಗುವದು.

ತಾವು ಮಾಡಿದ್ದನ್ನು ತಾನೆ ಅನುಭವಿಸುವನೆಂಬಲ್ಲಿ ಅನುಮಾನವು ಪ್ರಮಾಣವೆಂದು ಹೇಳಿದಂತಾಯಿತು. ಇದರಿಂದ ಸೂರ್ಯಾದಿಗಳು ಸಾಕ್ಷಿಗಳಷ್ಟೇ ಅಲ್ಲ. ಲೌಕಿಕರಿಗೂ ಅನುಮಾನದಿಂದ ಧರ್ಮಾದಿ ಜ್ಞಾನ ಬರುವುದೆಂದು ತಿಳಿಸಿ ಹಿಂದೆ ಹೇಳಿದ್ದನ್ನು ಸ್ಥಿರ ಪಡಿಸಿದಂತಾಯಿತು. ಅನುಮಾನ ಪ್ರಕಾರ ಹೀಗಿದೆ.

**ಅಯಂ** ಇವನು ಪಕ್ಷ **ಪರತ್ರ ಮಹಾಸುಖಪಾತ್ರಂ** ಪರಲೋಕದಲ್ಲಿ ಮಹಾಸುಖಹೊಂದುವನು ಸಾಧ್ಯ **ಅತ್ರ ತಥಾಭೂತತ್ವಾತ್** ಇಲ್ಲಿ ಮಹಾಸುಖವುಳ್ಳವನಾದ್ದರಿಂದ ಆಗಮಿಕಗುರ್ವಾದಿಬೋಧಿತತಥಾತ್ವವತ್ ಪುರುಷಾಂತರವತ್ ಆಗಮದಲ್ಲಿ ಗುರುಹಿರಿಯರಿಂದ ತಿಳಿಸಲ್ಪಟ್ಟ ಮಹಾಸುಖ ಹೊಂದಿದ ಮತ್ತೊಬ್ಬ ಪುರುಷನ ಸ್ಥೂಲಮತಿಗಳಿಗೂ ಆಶ್ವಾಸನೆಯ ರೀತಿಯನ್ನು ತಿಳಿಸುವರೆಂದು ಹೇಳುವರು. ।।೪೬।।

ಅನುಮಾನದ ಪ್ರಾಮಾಣ್ಯವನ್ನು ತಿಳಿಸಲು ಮೇಲೆ ಹೇಳಿದುದನ್ನೇ ಉದಾಹರಣೆಯಿಂದ ಉಪಪಾದಿಸುತ್ತಾರೆ-

**ವರ್ತಮಾನೋಽನ್ಯಯೋಃ ಕಾಲೋ ಗುಣಾಭಿಜ್ಞಾಪಕೋ ಯಥಾ ।**
**ಏವಂ ಜನ್ಮಾನಯೋರೇತದ್ಧರ್ಮಾಧರ್ಮನಿ ದರ್ಶನಮ್ ।।೪೭।।**

**ಯಥಾ** ಹೇಗೆ **ವರ್ತಮಾನಃ ಕಾಲಃ** ಈಗಿರುವ ವಸಂತಋತುವೆಂಬ ಕಾಲವು **ಅನ್ಯಯೋಃ** ಕಳೆದುಹೊದ ಮತ್ತು ಮುಂಬರಲಿರುವ ವಸಂತಋತುಗಳ **ಗುಣಾಭಿಜ್ಞಾಪಕಃ** ಹಣ್ಣು ಹೂ ಮೊದಲಾದ ಕಾರ್ಯಗಳನ್ನು ತಿಳಿಸಿಕೊಡುವುದೋ **ಏವಂ** ಹಾಗೆಯೇ **ಏತತ್ ಜನ್ಮ** ಈ ಜನ್ಮವು **ಅನಯೋಃ** ಕಳೆದು ಹೋದ ಮುಂಬರಲಿರುವ ಜನ್ಮಗಳ **ಧರ್ಮಾಧರ್ಮನಿದರ್ಶನಂ** ಶ್ರೇಯಸ್ಸು ಅಶ್ರೇಯಸ್ಸುಗಳನ್ನು ಪುಣ್ಯಪಾಪಗಳನ್ನು ಚೆನ್ನಾಗಿ ತಿಳಿಸಿಕೊಡುವುದು. ।।೪೭।।

'ಸೂರ್ಯೋಽಗ್ನಿಃ...' ಮುಂತಾಗಿ ಹೇಳಿದ ಸಾಕ್ಷಿಗಳಲ್ಲಿ ಕೆಲವರನ್ನು ಸವ್ಯಾಪಾರಿಗಳೆಂದು ಹೇಳಿ ಅವರ ಪ್ರತ್ಯಕ್ಷವನ್ನು ಉಪಜೀವಿಸಿ ಹೊರಟಿರುವುದರಿಂದ ಅನುಮಾನವನ್ನು ನಿರಾಕರಿಸುವಂತಿಲ್ಲ ಎಂದು ಹೇಳುವರೆಂದು ಹೇಳುವರು-

ಧರ್ಮರಾಜರು ಮನಸ್ಸಿನಿಂದ ಎಲ್ಲವನ್ನೂ ನೋಡುವರೆಂದು ಹೇಳುವರು. ಜೀವನಲ್ಲಿರುವ ಪುಣ್ಯಪಾಪಗಳನ್ನು ಶ್ರೀಹರಿಯು ಪ್ರತ್ಯಕ್ಷ ನೋಡುವುದರಿಂದ ಅನುಮಾನ ಪ್ರಮಾಣವೆಂದೂ ಹೇಳುವರು-

**ಮನಸೈವ ಪುರೇ ದೇವಃ ಪೂರ್ವರೂಪಂ ವಿಪಶ್ಯತಿ ।**
**ಅನುಮೀಮಾಂಸತೇಽಪೂರ್ವಂ ಮನಸಾ ಭಗವಾನಜಃ ॥೪೮॥**

**ಪುರೇ** (ಸ್ಥಿತಃ) ಜೀವನ ಶರೀರದಲ್ಲಿರುವ (ಪುರಂ ದೇಹಂ ಅಣತೀತಿ ಪುರಾಣಃ ಎಂದು ಗೀತಾಭಾಷ್ಯದಲ್ಲಿದೆ) **ದೇವಃ** ಶ್ರೀಮನ್ನಾರಾಯಣನು **ಪೂರ್ವರೂಪಂ** ಜೀವನ ಹಿಂದಿನ ಸ್ಥಿತಿಯನ್ನು **ಅಪೂರ್ವಂ ರೂಪಂ** ಮುಂದಿನ ಸ್ಥಿತಿಯನ್ನು ಜೀವನಲ್ಲಿರುವ ಪುಣ್ಯಪಾಪಗಳನ್ನು **ಮನಸೈವ** ತನ್ನ ಮನಸ್ಸಿನಿಂದಲೇ **ವಿಪಶ್ಯತಿ** ಅಪರೋಕ್ಷವಾಗಿ ಕಾಣುತ್ತಿರುವನು. ಪಶ್ಯತಿ ಎಂದು ವರ್ತಮಾನ ಪ್ರಯೋಗದಿಂದ ಶ್ರೀಹರಿಯ ಪ್ರತ್ಯಕ್ಷಕ್ಕೆ ಎಂದೂ ಬಾಧವಿಲ್ಲವೆಂದು ತಿಳಿಸಿರುವರು. ಹಾಗಾದರೆ ಶ್ರೀಹರಿಯನ್ನು ಬಿಟ್ಟು ತಿಳಿದು ಬರುವದಿಲ್ಲವೇ ಎಂದರೆ ತಿಳಿಯುವದೆಂದು ಹೇಳುತ್ತಾರೆ. **ಅಜಃ ಭಗವಾನ್** ಪೂಜ್ಯರಾದ ಬ್ರಹ್ಮದೇವರು **ಮನಸಾ** ಮನಸ್ಸಿನಿಂದ **ಅನುಮೀಮಾಂಸತೇ** ಶ್ರೀಹರಿಯ ಅನುಗ್ರಹದಿಂದ ಜೀವನ ಹಿಂದಿನ ಮುಂದಿನ ಸ್ಥಿತಿಗಳನ್ನು ಪುಣ್ಯಪಾಪಗಳನ್ನು ಆಲೋಚಿಸಿ ತಿಳಿಯುವರು. ಎಲ್ಲ ಜೀವರಿಗೂ ಸಾಧಾರಣವಾದ ಅಜ ಶಬ್ದವನ್ನು ಹೇಳಿದ್ದರಿಂದ ಮಿಕ್ಕ ದೇವತೆಗಳೂ ತಮ್ಮ ತಮ್ಮ ಯೋಗ್ಯತೆಗೆ ತಕ್ಕಂತೆ ತಿಳಿಯುವರು ಎಂದು ಇಟ್ಟುಕೊಳ್ಳಬೇಕು. ಮತ್ತು ಜೀವೋತ್ತಮನಿಗೂ ಧರ್ಮಾಧರ್ಮಗಳಿಂದ ಕೂಡಿದ ಪೂರ್ವಾಪರರೂಪಗಳು ವರ್ತಮಾನ ರೂಪದಿಂದ ತಿಳಿದುಬರುವದೆಂದು ಹೇಳುತ್ತಾರೆ. **ಪುರೇ** ಸುರ ನರ ತಿರ್ಯಗ್ ಜಂತುಗಳು ದೇಹಗಳಲ್ಲಿ **ದೇವಃ** ಕ್ರೀಡಿಸುವ **ಭಗವಾನ್** ಭಾಗ್ಯಶಾಲಿಯಾದ **ಅಜಃ** ಅನಾದಿಸಿದ್ಧನಾದ ಜೀವನು **ಪೂರ್ವರೂಪಂ** ಧರ್ಮಾಧರ್ಮ ಸಮೂಹ ರೂಪದ ಹಿಂದಿನ ಸ್ಥಿತಿಯನ್ನು **ಮನಸಾ ಏವ** ಪೂರ್ವಾನುಭವಸಂಸ್ಕಾರದಿಂದ ಸಂಸ್ಕೃತವಾದ ಮನಸ್ಸಿನಿಂದಲೇ **ವಿಪಶ್ಯತಿ** ತಿಳಿಯುವನು. **ಅಪೂರ್ವಂ** ಮುಂದಿನ ಸ್ಥಿತಿಯನ್ನು **ಅನುಮೀಮಾಂಸತೇ** ಮನಸ್ಸಿನಿಂದ ವಿಚಾರ ಮಾಡಿ ಅನುಮಾನದಿಂದ ತಿಳಿಯುವನು. 'ಅಜೋ ಹ್ಯೇತೇ ಜುಷಮಾಣೋಽನುಶೇತೇ' ಎಂಬ ಶ್ರುತಿಯಲ್ಲಿ ಜೀವನಲ್ಲಿ ಅಜಶಬ್ದವು ಪ್ರಯುಕ್ತವಾಗಿದೆ.

ಯಮರಾಜರು ಮನಸ್ಸಿನಿಂದಲೇ ಎಲ್ಲವನ್ನೂ ತಿಳಿಯುವರೆಂದು ಹೇಳುತ್ತಾರೆ. **ಪುರೇ** ಸಂಯಮನೀಪಟ್ಟಣದಲ್ಲಿ ಇರುವ **ದೇವಃ** ಯಮದೇವರು **ಪೂರ್ವರೂಪಂ** ಜೀವನ ಪೂರ್ವರೂಪವನ್ನು **ಮನಸಾ** ಪ್ರತ್ಯಕ್ಷದಿಂದಲೇ ಕಾಣುವರು. **ಅನು** ಅನಂತರ **ಅಪೂರ್ವಂ** ಇದಕ್ಕೆ ತಕ್ಕದ್ದೇನೆಂದು **ಮೀಮಾಂಸತೇ** ವಿಚಾರಮಾಡುವರು. **ಭಗವಾನ್** ಜೀವಾಂತರ್ಯಾಮಿಯಾದ **ಅಜಃ** ಶ್ರೀಹರಿಯು **ಯಥಾ** ಹೇಗೆ ತಿಳಿಯುವನೋ **ತಥಾ** ಹಾಗೆ ಎಂದು ಅಧಿಕ- ದೃಷ್ಟಾಂತವಿತ್ತಿರುವರು.

ದೇಹದಲ್ಲಿ ಕ್ರೀಡಿಸುತ್ತ ಶ್ರೀಹರಿ ಇರುವುದಕ್ಕೆ ಭಗವತ್ತ್ವವು ಪ್ರಯೋಜಕವಾಗಿದೆ. ಅದಕ್ಕೂ ನಿಮಿತ್ತ ಅಜಃ ಎಂಬುದು. ಎಲ್ಲ ದೋಷಗಳು ಹುಟ್ಟನ್ನನುಸರಿಸಿ ಬರುವವು. ಅದೇ ಇಲ್ಲದಿದ್ದರೆ ಯಾವ ದೋಷವೂ ಇಲ್ಲ. ಆದ್ದರಿಂದ ಭಗವತ್ತ್ವವಿದೆ. ಅಪೂರ್ವಂ ಎಂಬಲ್ಲಿ ಪೂರ್ವರೂಪಂ ಎಂದು ಸಮಸ್ತವಾಗಿದ್ದರೂ ರೂಪ ಪದ ಇತಿ ಶಬ್ದಾನುಶಾಸನಂ ಎಂಬಲ್ಲಿ ಶಬ್ದಶಬ್ದದಂತೆ ಅನುವರ್ತಿತವಾಗಿ ಅಪೂರ್ವಪದದೊಡನೆ ಅನ್ವಿತವಾಗಿ ಅಪೂರ್ವಂ ರೂಪಂ ಎಂದಾಗುವುದು.

'ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ' ಎಂದಿರುವುದರಿಂದ ಈ ರೂಪಗಳ ಪ್ರಾಪ್ತಿ ಜೀವನಿಗೆ ಎಂದು ಭಾವ. ಇದರಿಂದ ಸ್ವಯಂ ಎಂದು ಹೇಳಿದ ಜೀವ ಮನಸ್ಸು ಎರಡೂ ಸಾಕ್ಷಿಯೆಂದು ಹೇಳಿದಂತಾಯಿತು. **ಈದೇವಃ** ಲಕ್ಷ್ಮೀನಾರಾಯಣ ಎಂದೂ ಅರ್ಥ. ಇದರಿಂದ ಲಕ್ಷ್ಮಿಯೂ ಕೂಡ **ಮನಸಾ ಏವ** ಸ್ವೇಚ್ಛೆಯಿಂದಲೇ ಆಲೋಚನೆ ಮಾಡದೇ ತಿಳಿಯುವಳು. ಈಶಾದನ್ಯತ್ರ ಅನಾಲೋಚನೇ ಸರ್ವವಿಷಯಕ ಜ್ಞಾನ ಲಕ್ಷ್ಮಿಯದು. ಆಲೋಚನೇ ಸರ್ವವಿಷಯಕವಾದದ್ದು ಬ್ರಹ್ಮಜ್ಞಾನ ಎಂದು ಹೇಳಿದೆ. **ಭಗಃ** ಸೂರ್ಯನು ಅಸ್ಯ ಅಸ್ತಿ ಜನಕತಯಾ ಇತಿ **ಭಗವಾನ್** ಯಮನು ಎಂದೂ ಅರ್ಥ. ಇದರಿಂದ ಧರ್ಮಃ ಸಾಕ್ಷೀ ಎಂದು ಹೇಳಿದ್ದು ಸಂಗೃಹೀತವಾಯಿತು.

ಭಗವಾನ್ ಎಂಬಲ್ಲಿ ಸ್ವಾರ್ಥೇ ಮತುಪ್ ಪ್ರತ್ಯಯವೆಂದು ತಿಳಿಯಬೇಕು. ಭಗ ಸೂರ್ಯನು ಎಂದೂ ಅರ್ಥ. ಅಜ ಶಬ್ದದಿಂದ ಅನಿಲನನ್ನು ತಿಳಿಸಿದಂತಾಯಿತು. ಯತ್ಪ್ರಾಪ್ತಿರ್ಯತ್ಪರಿತ್ಯಾಗ ಉತ್ಪತ್ತಿರ್ಮರಣಂ ತಥಾ ಎಂದಿರುವುದು.

ಜೀವನು ಹಿಂದಿನ ಮುಂದಿನ ತನ್ನ ಸ್ಥಿತಿಯನ್ನು ತಿಳಿಯುವನೆಂದಾದರೆ ಇಲ್ಲಿ ಹುಟ್ಟಿರುವೆ ಮುಂದೆ ಅಲ್ಲಿ ಹುಟ್ಟುವೆ ಅಲ್ಲಿ ಸತ್ತೆ ಇಲ್ಲಿ ಸಾಯುವೆ ಎಂದೇಕೆ

ತಿಳಿಯುವುದಿಲ್ಲ ಎಂದರೆ ಶ್ರೀಹರಿಯ ಅನುಗ್ರಹದಿಂದ ಕೆಲವರು ಮಾತ್ರ ಹಾಗೆ ತಿಳಿಯುವರು. ಉಳಿದವರಿಗೆ ಪ್ರಕೃತಿಬಂಧನಾಶವಾಗದಿರುವುದರಿಂದ ಆ ರೀತಿ ಜ್ಞಾನವಾಗಲಾರದು ಎಂದು ಹೇಳುವರೆಂದು ಹೇಳುವರು-

**ಯಥಾऽಜ್ಞಸ್ತಮಸಾಯುಕ್ತ ಉಪಾಸ್ತೇ ವ್ಯಕ್ತಮೇವ ಹಿ ।**
**ನ ವೇದ ಪೂರ್ವಮಪರಂ ನಷ್ಟಜನ್ಮಸ್ಮೃತಿಸ್ತಥಾ ॥೪೯॥**

**ತಮಸಾ ಯುಕ್ತಃ** ವಿಪರೀತಜ್ಞಾನವನ್ನು ಹುಟ್ಟಿಸುವ ತಮೋಗುಣದಿಂದ ಕೂಡಿದ **ಅಜ್ಞಃ** ಅವಿವೇಕಿಯು **ಅವ್ಯಕ್ತಂ ಏವ** ಪ್ರಕೃತಿಯ ವಿಕಾರವಾದ ದೇಹವನ್ನೇ **ಉಪಾಸ್ತೇ ಹಿ** ತಾನೇ ಎಂದು ತಿಳಿಯುವನು. ಅಥವಾ **ವ್ಯಕ್ತಂ ಏವ** ಕಾಣುತ್ತಿರುವ ಈಗಿನ ದೇಹವನ್ನೇ ತಿಳಿಯುವನು ಹಿಂದು-ಮುಂದಿನದನ್ನು ತಿಳಿಯಲಾರನೆಂದಾದರೂ ಅರ್ಥ. ಆದ್ದರಿಂದಲೇ **ಪೂರ್ವಂ ಅಪರಂ ಚ ನ ವೇದ ಯಥಾ ತಥಾ** ಅದರಂತೆ ಹಿಂದೆ ಮುಂದೆ ಬರುವ ದೇಹ ತಿಳಿಯದಿರುವಂತೆ **ನಷ್ಟಜನ್ಮಸ್ಮೃತಿಃ** ಇಂತಹ ಕಡೆ ಹುಟ್ಟಿದ್ದೆ ಮುಂತಾದ ಸ್ಮರಣೆ ಇಲ್ಲದವನು **ಭವತಿ** ಆಗಿರುವನು. **ತಮಸಾ ಯುಕ್ತಂ** ಎಂಬ ವಿಶೇಷಣದಿಂದ ಜೀವನಿಗೆ ಪೂರ್ವಾಪರ ಜನ್ಮಜ್ಞಾನವಿಲ್ಲದಿರಲು ತಮೋಗುಣ-ಯುಕ್ತತೆಯೇ ಕಾರಣವೆಂದು ಹೇಳಿದಂತಾಯಿತು. ಇದರಿಂದ 'ಯಾವಜ್ಜೀವಂ ಸುಖಂ ಜೀವೇತ್' ಎಂಬುದು ಚಾರ್ವಾಕಮತ. ಅದು ಅಜ್ಞಾನಿಗಳ ಪ್ರಲಾಪವೆಂದು ತಿಳಿದು ಬರುವುದೆಂದು ಅಭಿಪ್ರಾಯ. ತಮಸಾ ಯುಕ್ತಃ ಯಥಾ ಎಂಬುದನ್ನು ದೃಷ್ಟಾಂತವಾಗಿಯೂ ಅನ್ವಯ ಮಾಡಿರುವರು. ಆಗ **ತಮಸಾ ಯುಕ್ತಃ** ಅಂಧಕಾರದಿಂದ ಯುಕ್ತನಾದ ಪುರುಷನು **ವ್ಯಕ್ತಂ ಏವ** ಮುಟ್ಟಿದ್ದನ್ನೇ ತಿಳಿಯುವನು. ಎದುರಿಗೆ ಇರುವುದನ್ನು ಹಿಂದಿರುವದನ್ನು ಮುಟ್ಟದೆ ತಿಳಿಯಲಾರ ಅದರಂತೆ ಎಂದರ್ಥ.

ಅಥವಾ ನಿದ್ರೆಯಿಂದ ಯುಕ್ತನಾದವನು ಕನಸಿನಲ್ಲಿ ವ್ಯಕ್ತವಾದ ವಾಸನಾಮಯ ಪದಾರ್ಥಗಳನ್ನೇ ತಿಳಿಯುವನು. ಸ್ವಪ್ನದ ಮೊದಲು ಅಥವಾ ಅನಂತರ ಜಾಗ್ರದವಸ್ಥೆಯಲ್ಲಿರುವ ಸ್ಥೂಲಪದಾರ್ಥಗಳನ್ನು ತಿಳಿಯುವುದಿಲ್ಲ. ಹೇಗೋ ಹಾಗೆ ಎಂದರ್ಥ.

**ಸತ್ಯಧರ್ಮರ ಪ್ರಕಾರ**

**ಯಥಾ ಅಜ್ಞಃ** ಮೂಢನು **ವ್ಯಕ್ತಂ** ಮುಂದಿರುವದನ್ನು ಮಾತ್ರ **ಉಪಾಸ್ತೇ** ತಿಳಿಯುವನೋ **ತಥಾ** ಹಾಗೆ **ಜ್ಞಃ** ಜೀವನು 'ಓಂ ಜ್ಯೋಽತ ಏವ ಓಂ' ಎಂಬಲ್ಲಿಯಂತೆ **ತಮಸಾ ಯುಕ್ತಃ** ತಮೋಗುಣಸಹಿತನಾದವನು **ಅವ್ಯಕ್ತಂ** ಪ್ರಕೃತಿಯನ್ನು **ಹಿ** ಯಾವ ಕಾರಣ **ಉಪಾಸ್ತೇ** ಹೊಂದಿರುವನೋ **ತತಃ** ಆದ್ದರಿಂದ **ನಷ್ಟಜನ್ಮಸ್ಮೃತಿಃ** ತನ್ನ ಜನ್ಮದ ಸ್ಮರಣರಹಿತನಾಗುತ್ತಾನೆ ಆದ್ದರಿಂದ **ಪೂರ್ವಮಪರಂ ನ ವೇದ** ಹಿಂದು-ಮುಂದಿನದನ್ನು ತಿಳಿಯಲಾರ **ಯಥಾ** ಹೇಗೆ **ನಷ್ಟಜನ್ಮಸ್ಮೃತಿಃ** ಈ ಜನ್ಮದಲ್ಲಿ ಅನುಭವಿಸಿದ್ದನ್ನೇ ಚೆನ್ನಾಗಿ ಸ್ಮರಿಸಲು ಶಕ್ತಿ ಇಲ್ಲದ ಮೇಲೆ ಆದರಂತೆ ಹಿಂದು ಮುಂದಿನದನ್ನು ತಿಳಿಯಲಾರನೆಂದರ್ಥ. ಜ್ಞಾನಿಗೂ ಕೂಡಾ ಇದರಿಂದ ತಿಳಿಸುವುದೆಂದು ಹೇಳುವರು. **ತಮಸಾ** ಕಾರ್ಯೋನ್ಮುಖವಾದ ತಮೋಗುಣದಿಂದ **ಅಯುಕ್ತಃ** ಕೂಡದಿರುವ **ಜ್ಞಃ** ಜ್ಞಾನಿಯು **ಅವ್ಯಕ್ತಂ** ಸೂಕ್ಷ್ಮತರನಾದ ಬ್ರಹ್ಮನನ್ನೇ 'ತದವ್ಯಕ್ತಮಾಹ ಹಿ' ಎಂಬಲ್ಲಿಯಂತೆ **ವೇದಪೂರ್ವಂ** ವೇದೋಕ್ತಪ್ರಕಾರ ಪೂರ್ವಕವಾಗಿ **ಯಥಾ ಉಪಾಸ್ತೇ** ಹೇಗೆ ತಿಳಿಯುವನೋ **ತಥಾ** ಹಾಗೆ **ಅಪರಂ** ಬೇರೆ ವೇದದಲ್ಲಿ ಹೇಳದಿರುವುದನ್ನು **ನ ಉಪಾಸ್ತೇ** ತಿಳಿಯಲಾರನು **ಸಃ** ಅವನು **ನಷ್ಟಜನ್ಮಸ್ಮೃತಿಃ** ನಷ್ಟ ಎಂಬಲ್ಲಿ ಭಾವೇ ಕ್ತಪ್ರತ್ಯಯವು ಬಂದಿದೆ. ಆದ್ದರಿಂದ ನಷ್ಟ ಎಂದರೆ ನಾಶ ಎಂದು ಅರ್ಥ. ಹೀಗಾಗಿ ನಷ್ಟಜನ್ಮಸ್ಮೃತಿಃ ಎಂದರೆ ಮರಣ ಮತ್ತು ಜನ್ಮ ಇವುಗಳ ಸ್ಮರಣವುಳ್ಳವನು ಎಂದರ್ಥ. ।।೪೯।।

ಪ್ರಾಸಂಗಿಕವಾಗಿ ಜೀವನ ಸಂಸಾರದ ರೀತಿಯನ್ನು ಮುಂದಿನ ಐದು ಶ್ಲೋಕಗಳಿಂದ ತಿಳಿಸುತ್ತಾರೆ. ಸಂಸಾರಾವಸ್ಥೆಯಲ್ಲಿ ದೇಹಿಯಾದವನು ಕರ್ಮ ಮಾಡಿಯೇ ಮಾಡುವನು ಎಂದು ಹೇಳಲಾಗಿತ್ತು. ಅವನು ಕರ್ಮ ಮಾಡುವ ಪ್ರಕಾರವನ್ನು ಹೇಳುತ್ತಾರೆ-

**ಪಂಚಭಿಃ ಕುರುತೇ ಸ್ವಾರ್ಥಾನ್ ಪಂಚ ವೇದಾಽಥ ಪಂಚಭಿಃ ।**
**ಏಕಸ್ತು ಷೋಡಶೇನ ತ್ರೀನ್ ಸ್ವಯಂ ಸಪ್ತದಶೋಽಶ್ನುತೇ ।।೫೦।।**

**ಸ್ವಯಂ** ತಾನು **ಸಪ್ತದಶಃ** ಹದಿನೇಳನೆಯವನಾದ **ಏಕಃ** ಒಬ್ಬನೇ ಆದ ಜೀವನು **ಪಂಚಭಿಃ** ಕರ್ಮೇಂದ್ರಿಯಗಳಿಂದ **ಸ್ವಾರ್ಥಾನ್** ಆಯಾ ಇಂದ್ರಿಯಗಳ ಕಾರ್ಯಗಳಾದ ಮಾತನಾಡುವುದು ಶಿಲ್ಪ ಗತಿ ಮಲವಿಸರ್ಜನ ಆನಂದ ಈ

ಕಾರ್ಯಗಳನ್ನು **ಕುರುತೇ** ಮಾಡುವವನು **ಅಥ** ಮತ್ತು **ಪಂಚಭಿಃ** ಐದು ಜ್ಞಾನೇಂದ್ರಿಯಗಳಿಂದ **ಪಂಚ** ಶಬ್ದ-ಸ್ಪರ್ಶ-ರೂಪ-ರಸ-ಗಂಧಗಳೆಂಬ ಐದು ವಿಷಯಗಳನ್ನು **ವೇದ** ತಿಳಿಯುವವನು **ಷೋಡಶೇನ** ಹದಿನಾರು ಭೇದದಿಂದ ಕೂಡಿದ ಲಿಂಗಶರೀರದಿಂದ ಅಥವಾ ಮನಸ್ಸಿನಿಂದ **ತ್ರೀನ್** ಸತ್ತ್ವ ಮೊದಲಾದ ಗುಣಗಳಿಂದ ಮೂರು ರೀತಿ ವಿಭಕ್ತಗಳಾದ ಸುಖ ದುಃಖ ಸುಖ-ದುಃಖಮಿಶ್ರಿತವಾದ ಫಲಗಳನ್ನು ಜಾಗ್ರತ್-ಸ್ವಪ್ನ-ಸುಷುಪ್ತಿ ಎಂಬ ಮೂರು ಅವಸ್ಥಾಕಾಲಗಳ ವಿಷಯಗಳನ್ನು **ಅಶ್ನುತೇ** ಅನುಭವಿಸುತ್ತಾನೆ. ।।೫೦।।

(ವಾಕ್-ಪಾಣಿ-ಪಾದ-ಪಾಯು-ಉಪಸ್ಥ ಈ ಐದು ಕರ್ಮೇಂದ್ರಿಯಗಳು ಶ್ರೋತ್ರ-ಚಕ್ಷುಸ್ಸು-ತ್ವಕ್-ರಸನ-ಘ್ರಾಣ ಈ ಐದು ಜ್ಞಾನೇಂದ್ರಿಯಗಳು ೫ ಜ್ಞಾನೇಂದ್ರಿಯಗಳು ೫ ಕರ್ಮೇಂದ್ರಿಯಗಳು ೫ ಭೂತಗಳು ೧ ಮನಸ್ಸು ಹೀಗೆ ಹದಿನಾರು ಕಲೆಗಳು.) 'ಸತ್ತ್ವಂ ಸುಖೇ ಸಂಜಯತಿ' ಮುಂತಾಗಿ ಸತ್ತ್ವಾದಿಗಳು ಸುಖಾದಿ ಜ್ಞಾನಜನಕಗಳೆಂದು ತಿಳಿದು ಬರುವುದು. ಸಪ್ತದಶ ಎಂದು ಹೇಳಿದ್ದರಿಂದ ದೇಹ ಮತ್ತು ಆತ್ಮ ಭಿನ್ನವಾಗಿವೆ ಎಂದು ತಿಳಿಸಿರುವರು.

ಇಲ್ಲಿ ಬೇಕಾದ ವಿಶೇಷವನ್ನು 'ಓಂ ನಿತ್ಯೋಪಲಬ್ಧಿ...' ಸೂತ್ರದ ಸಾರಾಂಶವನ್ನು ಮತ್ತು ಮತಾಂತರಗಳನ್ನು ಉದಾಹರಿಸಿ ಸವಿಸ್ತರವಾಗಿ ಮಹಾಭಾರತತಾತ್ಪರ್ಯ ನಿರ್ಣಯ ಟೀಕಾದಲ್ಲಿ ಬರೆದಿರುವೆವು. ಅಲ್ಲಿ ನೋಡಿರಿ ವಿಸ್ತಾರ ಭಯದಿಂದ ಉಪರಮಿಸಿದ್ದೇವೆ.

ಜೀವನಿಗೆ ಇರುವ ಸಂಸಾರಕ್ಕೆ ಕಾರಣ ಯಾವುದೆಂದು ಹೇಳುವರು-

**ತದೇತತ್ಷೋಡಶಕಲಂ ಲಿಂಗಂ ಶಕ್ತಿತ್ರಯಂ ಮಹತ್ ।**
**ಧತ್ತೇऽನುಸಂಸೃತಿಂ ಪುಂಸಿ ಹರ್ಷಶೋಕಭಯಾರ್ತಿದಮ್ ।।೫೧।।**

**ತದೇತತ್** ಮೇಲೆ ಹೇಳಿದ **ಷೋಡಶಕಲಂ** ಹತ್ತು ಇಂದ್ರಿಯಗಳು ಪಂಚಭೂತಗಳು ಮನಸ್ಸು ಎಂಬ ಹದಿನಾರು ಕಲೆಗಳುಳ್ಳ **ಶಕ್ತಿತ್ರಯಂ** ಪ್ರಕಾಶ ಕ್ರಿಯಾ ಆವರಣಗಳೆಂಬ ಮೂರು ಶಕ್ತಿಗಳುಳ್ಳ (ಸತ್ತ್ವರಜಸ್ತಮೋಗುಣಗಳ ಶಕ್ತಿಗಳಿಂದ ಕೂಡಿರುವ) **ಮಹತ್** ಮಹಾಪುರುಷಾರ್ಥವಾದ ಮೋಕ್ಷಕ್ಕೆ ಪ್ರತಿಬಂಧಕವಾದ ಇರುವ ವೇದಾದಿಜ್ಞಾನಾದಿಗಳನ್ನು ತಿಳಿಯದಂತೆ ಮಾಡುವ ಅಥವಾ ಶ್ರೀಹರಿಯ ಅನುಗ್ರಹವಿಲ್ಲದೆ ಹೋಗದಿರುವ **ಹರ್ಷ-ಶೋಕ-ಭಯಾರ್ತಿದಂ** ಸಂತೋಷ ದುಃಖ

ಭಯ ಕ್ಲೇಶಗಳನ್ನು ಕೊಡುವ **ಲಿಂಗಂ** ಲಿಂಗಶರೀರವು **ಪುಂಸಿ** ಜೀವನಲ್ಲಿ (ಅಜಾಮಿಲನ ಪ್ರಸಂಗವಿರುವುದರಿಂದ ಪುಂಸಿ ಎಂದಿದ್ದಾರೆ.) **ಅನು** ಅವನವನ ಕರ್ಮಕ್ಕೆ ತಕ್ಕಂತೆ **ಸಂಸೃತಿಂ** ಸಂಸಾರವನ್ನು **ಧತ್ತೇ** ಕೊಡುವುದು. ಪುಂಸಿ ಎಂಬ ಸಪ್ತಮಿಯು ಜೀವನು ಅಧಿಕರಣವಷ್ಟೇ ಎಂದು ತಿಳಿಸುವುದು. ಆದ್ದರಿಂದ ಇದೆಲ್ಲವೂ ಅಭಿಮಾನನಿಮಿತ್ತಕವೆಂದು ಹೇಳಿದಂತಾಯಿತು. **ಪುಂಸಿ** ಪರಮಪುರುಷನಾದ ಶ್ರೀಹರಿಯು **ಅನು** ಅನುಕೂಲನಾದಾಗ **ನ ಧತ್ತೇ** ಸಂಸಾರವನ್ನು ಕೊಡಲಾರದು ಸ್ವಾಭಾವಿಕವಾಗಿ ಅನುಲ್ಲಂಘನೀಯವೆಂದು ಭಾವ ಹೀಗೂ ಅರ್ಥ. ।।೫೧।।

**ದೇಹ್ಯಜ್ಞೋಽಜಿತಷಡ್ವರ್ಗೋಽನಿಚ್ಛನ್ ಕರ್ಮಾಣಿ ಕಾರ್ಯತೇ ।**
**ಕೋಶಕಾರ ಇವಾತ್ಮಾನಂ ಕರ್ಮಣಾಚ್ಛಾದ್ಯ ಮುಹ್ಯತಿ ।।೫೨।।**

**ಅಜಿತಷಡ್ವರ್ಗಃ** ಜ್ಞಾನೇಂದ್ರಿಯಗಳೈದು ಮತ್ತು ಮನಸ್ಸು ಈ ಆರರ ಸಮೂಹವನ್ನು ಗೆಲ್ಲದ ಅಥವಾ ಕಾಮಾದಿಅರಿಷಡ್ವರ್ಗವನ್ನು ಗೆಲ್ಲದ **ದೇಹೀ** ಲಿಂಗಶರೀರ ಉಳ್ಳ **ಅಜ್ಞಃ** ಭಗವಂತನ ಜ್ಞಾನವಿಲ್ಲದ ಜೀವನ **ಅನಿಚ್ಛನ್ನಪಿ** ಇಷ್ಟಪಡದಿದ್ದರೂ **ಕರ್ಮಾಣಿ** ಕರ್ಮಗಳನ್ನು **ಕಾರ್ಯತೇ** ಗುಣಾಧೀನಗಳಾದ ಆರು ಇಂದ್ರಿಯಗಳಿಂದ ಕಾಮಾದಿಗಳಿಂದ ಮಾಡಿಸಲ್ಪಡುವನು.

ಬಲಾತ್ಕಾರದಿಂದ ಮಾಡುವುದಾದರೆ ಅದರಿಂದ ತನಗಾಗುವ ಸಂಪತ್ತು-ವಿಪತ್ತುಗಳನ್ನು ತಿಳಿಯುವುದಿಲ್ಲವೆ ಎಂದರೆ ಇಲ್ಲವೆಂದು ದೃಷ್ಟಾಂತ ಮೂಲಕ ಹೇಳುತ್ತಾರೆ.

**ಕೋಶಕಾರಃ ಇವ** ಹೇಗೆ ಗೂಡು ಕಟ್ಟಿಕೊಳ್ಳುವ ಹುಳು ತನ್ನ ಕರ್ಮದಿಂದ ಗೂಡನ್ನು ನಿರ್ಮಿಸಿ ಅದರಿಂದ ತನ್ನನ್ನು ಆವರಿಸಿಕೊಂಡು ಅದರಲ್ಲಿಯೇ ಇದ್ದುಕೊಂಡು **ಮುಹ್ಯತಿ** ಹೊರಗೆ ಬರಲು ತಿಳಿಯಲಾರದೋ ತನ್ನ ನಾಶಾನಾಶಗಳನ್ನು ತಿಳಿಯಲಾರದೋ ಅದರಂತೆ ದೇಹಿಯು **ಕರ್ಮಣಾ** ಕರ್ಮದಿಂದ **ಆತ್ಮಾನಂ** ತನ್ನನ್ನು **ಆಚ್ಛಾದ್ಯ** ಮುಚ್ಚಿಕೊಂಡು **ಮುಹ್ಯತಿ** ಸಂಪತ್ತು ವಿಪತ್ತುಗಳ ಜ್ಞಾನವಿಲ್ಲದವನಾಗಿರುವನು. ।।೫೨।।

ಜೀವನು ಮೋಹಗೊಂಡಿರುವನು ಎಂಬುದು ಹೇಗೆ ಗೊತ್ತು ಎಂದರೆ ಮತ್ತೆ ಮತ್ತೆ ಕರ್ಮ ಮಾಡುವುದರಿಂದಲೇ ಎಂಬ ಅಭಿಪ್ರಾಯವುಳ್ಳವರಾಗಿ ತಾವು ಹೇಳಿದ ವಿಷಯದಲ್ಲಿ ಪ್ರಮಾಣ ಹೇಳುತ್ತಾರೆ-

**ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ ।**
**ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ॥೫೩॥**

**ಕಶ್ಚಿತ್** ಯಾವನೊಬ್ಬನೂ **ಅಕರ್ಮಕೃತ್** ಕರ್ಮವನ್ನು ಮಾಡದೇ **ಕ್ಷಣಮಪಿ** ಒಂದು ಕ್ಷಣವಾದರೂ **ಜಾತು** ಯಾವ ಕಾಲದಲ್ಲಿಯೂ **ನ ಹಿ ತಿಷ್ಠತಿ** ಇರುವುದಿಲ್ಲ. **ಅವಶಃ** ಶ್ರೀಹರಿಯ ವಶನಾದ **ಸರ್ವಃ** ಎಲ್ಲ ಜೀವರೂ **ಪ್ರಕೃತಿಜೈಃ** ಸ್ವಭಾವಸಿದ್ಧವಾದ ಪೂರ್ವಜನ್ಮಸಂಸ್ಕಾರದಿಂದ ಬಂದ **ಗುಣೈಃ** ಸತ್ತ್ವಾದಿಗುಣಕಾರ್ಯಗಳಾದ ರಾಗಾದಿಗಳಿಂದ **ಕರ್ಮ** ಕರ್ಮವನ್ನು **ಕಾರ್ಯತೇ** ಮಾಡಿಸಲ್ಪಡುವನು ಈ ವಿಷಯದಲ್ಲಿ ಅನುಭವವೇ ಪ್ರಮಾಣವೆಂದು ತಿಳಿಸಿದಂತಾಯಿತು. ಇದನ್ನೇ ಗೀತಾಭಾಷ್ಯದಲ್ಲಿ 'ಪ್ರತಿಜನ್ಮಕೃತಾನಾಂ ಅನಂತಕರ್ಮಣಾಂ ಭಾವಾತ್' ಎಂದಿದ್ದಾರೆ.

ಇಲ್ಲಿ ಪ್ರಕೃತಿಜೈಃ ಗುಣೈಃ ಅವಶಃ ಸರ್ವಃ ಜನಃ ಕರ್ಮ ಕಾರ್ಯತೇ ಎಂದು ಅನ್ವಯ ಮಾಡಿದಾಗ ಈಶ್ವರನಿಗೆ ಪ್ರಯೋಜಕಕರ್ತೃತ್ವವನ್ನು ಜೀವರಿಗೆ ಪ್ರಯೋಜ್ಯಕರ್ತೃತ್ವವನ್ನು ಹೇಳಿದಂತಾಯಿತು. ಮತ್ತು ಪ್ರಕೃತಿಯಿಂದ ಜನ್ಯವಾದ ಗುಣಗಳಿಗೆ ಈಶ್ವರಾಧೀನ ಪ್ರಯೋಜಕಕರ್ತೃತ್ವ ಎಂಬ ಅಭಿಪ್ರಾಯದಿಂದ ಪ್ರಯೋಜಕಕರ್ತೃತ್ವವನ್ನು ಹೇಳಿದೆ ಎಂದು ತಿಳಿಯಬೇಕು. ಸರ್ವಜನರಲ್ಲಿರುವ ಪ್ರಯೋಜ್ಯಕರ್ತೃತ್ವವು ಕಾರ್ಯತೇ ಎಂಬಲ್ಲಿಯ ತಿಙ್‌ನಿಂದ ಹೇಳದಿರುವುದರಿಂದ 'ಕರ್ತೃಕರಣಯೋಃ ತೃತೀಯಾ' ಎಂಬ ಸೂತ್ರದಿಂದ ತೃತೀಯಾ ಬಂದು ಸರ್ವೇಣ ಎಂದಾಗಬೇಕು. ಸರ್ವಃ ಎಂದು ಹೇಗೆ ಪ್ರಯುಕ್ತವಾಯಿತೆಂದರೆ 'ಹೃಕ್ರೋರನ್ಯತರಸ್ಯಾಂ' ಎಂಬ ಸೂತ್ರದಿಂದ ಣಿಜಂತವಲ್ಲದ ಹೃಧಾತು ಕೃಧಾತುಗಳ ಅರ್ಥವಾದ ಹರಣ ಕರಣಗಳಲ್ಲಿ ಯಾರು ಕರ್ತಾ ಆಗಿರುವರೋ ಅವರೇ ಣಿಜಂತವಾದಾಗ ವಿಕಲ್ಪದಿಂದ ಕರ್ಮ ಸಂಜ್ಞೆ ಉಳ್ಳವರಾಗುವರು ಎಂದು ಕರ್ಮ ಸಂಜ್ಞಾವಿಧಾನ ಮಾಡಿದ್ದರಿಂದ ಕರ್ಮಸಂಜ್ಞೆಯಿಂದ ಕರ್ತೃಸಂಜ್ಞೆಗೆ ಬಾಧ ಬಂದದ್ದರಿಂದ ಕರ್ತೃಕರಣಯೋಃ ಎಂದು ಹೇಳಿದ ತೃತೀಯಾ ಬರಲಾರದು. ಕರ್ಮತ್ವವಾದರೋ ಕಾರ್ಯತೇ ಎಂಬ ತಿಙ್ ನಿಂದ ಹೇಳಲ್ಪಟ್ಟಿದೆ ಆದ್ದರಿಂದ 'ಕರ್ಮಣಿ ದ್ವಿತೀಯಾ' ಎಂಬುದರಿಂದ ದ್ವಿತೀಯಾ ಪ್ರಾಪ್ತಿಯೂ ಇಲ್ಲದ್ದರಿಂದ ಕರ್ಮ ಎಂಬ ಶಬ್ದದಂತೆ ಸರ್ವಃ ಎಂಬ ಶಬ್ದವೂ ಪ್ರಥಮಾಂತವಾಗಿರುವದೇ ಯುಕ್ತವೆನ್ನುತ್ತಾರೆ ದುರ್ಘಟಭಾವದೀಪಿಕಾಕಾರರು. ॥೫೩॥

ಜನನ-ಮರಣಗಳು ದೇಹಕ್ಕೇ ಹೊರತು ಜೀವನಿಗಲ್ಲ. ಆ ದೇಹದ ಮೇಲೆ ಜೀವನಿಗೆ ಅಭಿಮಾನವಿರುವುದರಿಂದ **ಜಾತಃ ಮೃತಃ** ಎಂದು ಔಪಚಾರಿಕವ್ಯವಹಾರ ಮಾಡುವರೆಂದು ಹೇಳುವರು-

**ಲಬ್ಧ್ವಾ ನಿಮಿತ್ತಮವ್ಯಕ್ತಂ ವ್ಯಕ್ತಾವ್ಯಕ್ತಂ ಭವತ್ಯುತ ।**
**ಯಥಾಯೋನಿ ಯಥಾಬೀಜಂ ಸ್ವಭಾವೇನ ಬಲೀಯಸಾ ॥೫೪॥**

**ನಿಮಿತ್ತಂ** ಸಂಸಾರಕ್ಕೆ ನಿಮಿತ್ತವಾದ ಅಥವಾ ನಿಮಿತ್ತಕಾರಣವಾದ **ಅವ್ಯಕ್ತಂ ಲಬ್ಧ್ವಾ** ಪ್ರಕೃತಿಕಾರ್ಯವಾದ ಶರೀರವನ್ನು ಪ್ರಕೃತಿಯನ್ನು ಅದೃಷ್ಟವನ್ನು ಹೊಂದಿ **ಯಥಾಯೋನಿ** ಪಶು ಮುಂತಾದ ಯೋನಿಗಳಿಗೆ ತಕ್ಕಂತೆ ಮಾತೃಸದೃಶವಾದ **ಬಲೀಯಸಾ** ಅತ್ಯಂತಬಲಿಷ್ಠವಾದ **ಸ್ವಭಾವೇನ** ಸತ್ತ್ವಾದಿಗುಣಸ್ವಭಾವದಿಂದ ವಾಸನೆಗೆ ಅನುಗುಣವಾಗಿ **ವ್ಯಕ್ತಾವ್ಯಕ್ತಂ ಉತ** ಜನನ-ಮರಣಗಳೂ ಜನನ-ಮರಣಾತ್ಮಕ ಶರೀರವೂ ಸ್ಥೂಲ-ಸೂಕ್ಷ್ಮಶರೀರಗಳು **ಭವತಿ** ಜೀವನಲ್ಲಿ ಉಪಚರಿತವಾಗಿರುವವು ಜೀವನಿಗೆ ಬರುವವು. 'ದೇಹಸ್ಯ ಸರ್ವಥಾ ನಾಶಾತ್ ಅನಾಶಾತ್ ಚೇತನಸ್ಯ ಚ' ಎಂದಿದೆ. ಶುಕ್ಲ-ಶೋಣಿತಗಳು ಒಂದೇ ರೀತಿಯಾಗಿದ್ದರೂ ಕರ್ಮವಾಸನೆಯಿಂದ ಮಾತಾಪಿತೃಸದೃಶ ದೇಹವನ್ನು ಹೊಂದುವನು. 'ಶರೀರಾಕೃತಿಭೇದಾಸ್ತು ಭೂಪತೇ ಕರ್ಮಯೋನಯಃ' ಎಂಬ ವಿಷ್ಣುಪುರಾಣವಚನವಿದೆ.

ಇದು ವಿಜಯಧ್ವಜ ಮತ್ತು ಚಟ್ಟಿ ಪ್ರಕಾರ ಇನ್ನು ಶ್ರೀಸತ್ಯಧರ್ಮರ ಪ್ರಕಾರ

**ಅನಿಮಿತ್ತಂ** ಉಪಾದಾನಕಾರಣವಾದ (ನಿಮಿತ್ತವಲ್ಲದ) **ಅವ್ಯಕ್ತಂ** ಪ್ರಕೃತಿಯನ್ನು ತತ್ಸಂಬದ್ಧಶರೀರವನ್ನು ಅಥವಾ **ಅವ್ಯಕ್ತಂ** ದುರ್ಜ್ಞೇಯನಾದ ಭಗವಂತನನ್ನು **ನಿಮಿತ್ತಂ ಲಬ್ಧ್ವಾ** ನಿಮಿತ್ತಕಾರಣನಾಗಿ ಪಡೆದು ನಂತರ **ವ್ಯಕ್ತಾವ್ಯಕ್ತಂ** ಸ್ಥೂಲಸೂಕ್ಷ್ಮಶರೀರವು **ಭವತಿ** ಬರುತ್ತದೆ. ವ್ಯಕ್ತೇನ ಸಹಿತಂ ಚ ತದವ್ಯಕ್ತಂ ಚ ಎಂದು ವಿಗ್ರಹ ಅಥವಾ 'ವಿಪ್ರತಿಷಿದ್ಧಂ ಚ' ಎಂಬುದರಿಂದ ಏಕವದ್ಭಾವ. ಯದ್ಯಪಿ ಅವ್ಯಕ್ತಸಂಬಂಧಾನಂತರ ವ್ಯಕ್ತ ಸಂಬಂಧವಾಗುವುದು ಕಾರಣ ಅದನ್ನೇ ಮೊದಲು ಹೇಳಬೇಕು. ಆದರೂ ವ್ಯಕ್ತದಿಂದ ಅವ್ಯಕ್ತವು ಅನುಮೇಯವಾದ್ದರಿಂದ ವ್ಯಕ್ತವನ್ನು ಮೊದಲು ಹೇಳಿದೆ ಮಿಕ್ಕದ್ದು ಮೇಲಿನಂತೆ ಅರ್ಥ ಹೇಳಬೇಕು. **ಯಥಾಯೋನಿ** ತಮ್ಮ ಜಾತಿಯನ್ನು **ಯಥಾಬೀಜಂ** ಕರ್ಮಾದಿ ಕಾರಣಗಳಿಗೆ ಅನುಸಾರವಾಗಿ **ಯಥಾಯೋನಿ** ಮಾತೃಸಮಂ **ಯಥಾಬೀಜಂ** ಪಿತೃಸದೃಶಂ ಎಂದು ವ್ಯಾಖ್ಯಾನಿಸಿ ಅಥವಾ ಯೋನಿ ಭಗವಂತನು

**ಯಥಾಯೋನಿ** ಭಗವದಿಚ್ಛಾನುಸಾರ ಎಂದರ್ಥ. 'ಯೋನಿಶ್ಚ ಹಿ ಗೀಯತೇ' ಎಂದು ಶ್ರೀಹರಿಗೆ ಯೋನಿ ಎಂದು ಕರೆದಿರುವರು) **ಯಥಾಬೀಜಂ** ಭಗವದಿಚ್ಛಾನುಸಾರ ಎಂದರ್ಥ. 'ವ್ಯಂಜನಾದ್ಬೀಜಮುಚ್ಯತೇ' ಬೀಜಂ ತದಹಮರ್ಜುನ' ಎಂದೂ ಇದೆ. ಭಗವಂತ ಮೊದಲಾದವರು ಯಾವುದನ್ನು ನಿಮಿತ್ತ ಮಾಡಿ ಮಾಡಿಸುವರು ಎಂದರೆ ಹೇಳುವರು. **ಸ್ವಭಾವೇನ** ಎಂದು. ಯೋಗ್ಯತಾನುಸಾರ ಎಂದರ್ಥ. 'ಸ್ವಭಾವಾಖ್ಯಾ ಯೋಗ್ಯತಾ ಯಾ ಹಠಾಖ್ಯಾ' ಎಂದಿದೆ. ಸ್ವಭಾವವು ಹೋಗಲಾರದ್ದರಿಂದ ಬಲೀಯಸಾ ಎಂದಿದ್ದಾರೆ. 'ಸ ನ ಶಕ್ಯಃ ಸೋಽನ್ಯಥಾ ಕರ್ತುಂ' ಎಂದಿದೆ. ಎಂದು ವ್ಯಾಖ್ಯಾನಿಸಿರುವರು.

ಇದುವರೆಗೆ ಸಂಸಾರ ಬರುವುದನ್ನು ತಿಳಿಸಿ ಇದರ ಮೋಚನೆ ಹೇಗೆ ಎಂದು ಪ್ರಶ್ನೆ ಮಾಡಿಸಿ ಕೊಂಡವರಂತೆ ಮೋಚನ ಪ್ರಕಾರ ತಿಳಿಸುವರು-

**ಏಷ ಪ್ರಕೃತಿಸಂಗೇನ ಪುರುಷಸ್ಯ ವಿಪರ್ಯಯಃ ।**
**ಆಸೀತ್ಸ ಏವ ನ ಚಿರಾದೀಶಸಂಗಾದ್ವಿಲೀಯತೇ ॥೫೫॥**

**ಪುರುಷಸ್ಯ** ಜೀವನಿಗೆ **ಪ್ರಕೃತಿಸಂಗೇನ** ಪ್ರಕೃತಿಯ (ಲಿಂಗದೇಹದ) ಸಂಬಂಧದಿಂದ **ಯಃ** ಯಾವ **ಏಷಃ** ಈ **ವಿಪರ್ಯಯಃ** ಸ್ವರೂಪಕ್ಕೆ ವಿಪರೀತವಾದ ಸಂಸಾರವು **ಆಸೀತ್** ಬಂದಿದೆಯೋ **ಸಃ** ಅದು **ಈಶಸಂಗಾತ್** ಸರ್ವನಿಯಾಮಕನಾದ ಶ್ರೀಹರಿಯ ಸಂಬಂಧದಿಂದ ಸ್ತೋತ್ತಮರನ್ನಾರಂಭಿಸಿ ಸರ್ವೋತ್ತಮನಾದ ಪರಮಾತ್ಮನ ಪರ್ಯಂತ ಸೇವೆ ಮಾಡುವುದರಿಂದ **ನಚಿರಾತ್** ವಿಲಂಬವಿಲ್ಲದೆ ಶೀಘ್ರವಾಗಿ **ವಿಲೀಯತೇ** ಸಮೂಲನಾಶವಾಗುವುದು. ಮೋಕ್ಷವಾಗುವುದೆಂದು ಅರ್ಥ. ॥೫೫॥

ಹೀಗೆ ಸಾಮಾನ್ಯವಾಗಿ ಧರ್ಮದ ನಿರ್ಣಯವನ್ನು ಹೇಳಿ ಪ್ರಕೃತ ಅಜಾಮಿಳನ ಅಧರ್ಮವನ್ನು ತಿಳಿಸಿ ಅವನು ಶಿಕ್ಷೆಗೆ ಅರ್ಹನೆಂದು ಅಧ್ಯಾಯದ ಕೊನೆಯವರೆಗೂ ಸಮರ್ಥಿಸುತ್ತಾರೆ.

ತಿಳಿಯದೇ ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತ ಇರಲಿ. ಈ ಅಜಾಮಿಲನಾದರೋ ವಿದ್ವತ್ತು ಮೊದಲಾದ ಗುಣಗಳಿಂದ ಸಂಪನ್ನನಾಗಿದ್ದಾನೆ. ಹೀಗಾಗಿ ಬುದ್ಧಿಪೂರ್ವಕವಾಗಿಯೇ ಪಾಪ ಮಾಡಿರುತ್ತಾನೆ. ಆದ್ದರಿಂದ ಪ್ರಾಯಶ್ಚಿತ್ತಕ್ಕೆ ಅಧಿ ಕಾರಿಯಲ್ಲ. ನಾಮೋಚ್ಚಾರಣೆ ಮಾತ್ರವೇ ಪ್ರಾಯಶ್ಚಿತ್ತವೆಂದಾದದಲ್ಲಿ ಎಲ್ಲರಿಗೂ ಮುಕ್ತಿಯಾಗಬೇಕಾಗುವದು. ಆಗ ದಂಡ್ಯರೇ ಇಲ್ಲದೇ ಹೋಗಿ ನಿಮ್ಮ ಸ್ವಾಮಿಯಾದ

ವಿಷ್ಣುವಿನ ಆಜ್ಞೆಯನ್ನೇ ಪಾಲಿಸುವ ಯಮದೇವರಿಗೆ ಆಜ್ಞಾ ಉಲ್ಲಂಘನೆ ದೋಷವು ಬಂದು ಅಧಿಕಾರ ಕಳೆದುಕೊಳ್ಳಬೇಕಾಗುವುದು. ಆದ್ದರಿಂದ ಇವನು ಯಮನ ಬಳಿಗೆ ಹೋಗಿ ಅಲ್ಲಿ ಶಿಕ್ಷೆಯನ್ನು ಹೊಂದಿ ಶುದ್ಧನಾಗಲಿ ಎಂದು ಹೇಳಿದರು ಎಂದು ಇಲ್ಲಿ ಹೇಳುತ್ತಿದ್ದಾರೆ-

**ಅಯಂ ಚ ಶ್ರುತಸಂಪನ್ನಃ ಶೀಲವೃತ್ತಗುಣಾಲಯಃ ।**
**ಧೃತವ್ರತೋ ಮೃದುರ್ದಾಂತಃ ಸತ್ಯವಾನ್ಮಂತ್ರವಿಚ್ಛುಚಿಃ ॥೫೬॥**

**ಅಯಂ** ಈ ಅಜಾಮಿಳನು **ಶ್ರುತಸಂಪನ್ನಃ** ಶಾಸ್ತ್ರ ಶ್ರವಣ ಮಾಡಿದವನು **ಶೀಲ** ಒಳ್ಳೆ ಸ್ವಭಾವ **ವೃತ್ತ** ಸದಾಚಾರ **ಗುಣ** ಕ್ಷಮಾ ಮುಂತಾದ ಇತರ ಗುಣಗಳಿಗೆ **ಆಲಯಃ** ಆಶ್ರಯನು **ಧೃತವ್ರತಃ** ವ್ರತಧಾರಿಯು **ಮೃದುಃ** ಮೃದುಸ್ವಭಾವದವನು **ದಾಂತಃ** ಇಂದ್ರಿಯ ನಿಗ್ರಹ ಉಳ್ಳವನು **ಸತ್ಯವಾನ್** ನಿಜವಾಗಿ ಮಾತಾಡುವವನು **ಮಂತ್ರವಿತ್** ವೇದವನ್ನು ತಿಳಿದವನು **ಶುಚಿಃ** ಶುದ್ಧನು. ॥೫೬॥

**ಗುರ್ವಗ್ನ್ಯತಿಥಿವೃದ್ಧಾನಾಂ ಶುಶ್ರೂಷುರ್ನಿರಹಂಕೃತಿಃ ।**
**ಸರ್ವಭೂತಸುಹೃತ್ ಸಾಧುರ್ಮಿತವಾಗನಸೂಯಕಃ ॥೫೭॥**

**ಗುರು** ದೊಡ್ಡವರನ್ನು **ಅಗ್ನಿ** ಅಗ್ನಿಯನ್ನು **ಅತಿಥಿ** ಅತಿಥಿಗಳನ್ನು **ವೃದ್ಧಾನಾಂ** ವೃದ್ಧರನ್ನು **ಶುಶ್ರೂಷುಃ** ಸೇವಿಸುವವನು **ನಿರಹಂಕೃತಿಃ** ಅಹಂಕಾರವಿಲ್ಲದವನು **ಸರ್ವಭೂತಸುಹೃತ್** ಎಲ್ಲ ಪ್ರಾಣಿಗಳನ್ನು ಪ್ರೀತಿಸುವವನು **ಸಾಧುಃ** ಸಾಧುವು **ಮಿತವಾಕ್** ಅಗತ್ಯವಿದ್ದಷ್ಟೇ ಮಾತಾಡುವವನು **ಅನಸೂಯಕಃ** ಅಸೂಯೆ ಇಲ್ಲದವನು. (ಇದು ಇವನ ಪೂರ್ವಸ್ಥಿತಿ. ಅವನು ಮಾಡಿದ್ದು ಅತ್ಯಂತ ಅನ್ಯಾಯವೆಂದು ತಿಳಿಸುವುದಕ್ಕಾಗಿ ಇದನ್ನು ಅನುವಾದ ಮಾಡಿದ್ದಾರೆ) ॥೫೭॥

**ಏಕದಾಽಸೌ ವನಂ ಯಾತಃ ಪಿತೃಸಂದೇಶಕೃದ್ ದ್ವಿಜಃ ।**
**ಆದಾಯ ತತ ಆವೃತ್ತಃ ಫಲಪುಷ್ಪಸಮಿತ್ಕುಶಾನ್ ॥೫೮॥**

**ಏಕದಾ** ಒಂದು ದಿನ **ಪಿತೃಸಂದೇಶಕೃತ್** ತಂದೆಯ ಆಜ್ಞೆಯನ್ನು ಪಾಲಿಸುವ **ಅಸೌ ದ್ವಿಜಃ** ಈ ಬ್ರಾಹ್ಮಣನು **ವನಂ ಯಾತಃ ಸನ್** ಅರಣ್ಯಕ್ಕೆ ಹೋಗಿ **ಫಲ-ಪುಷ್ಪ ಸಮಿತ್‌ಕುಶಾನ್** ಹಣ್ಣು ಹೂ ಸಮಿತ್ತು ದರ್ಭೆಗಳನ್ನು **ಆದಾಯ** ತೆಗೆದುಕೊಂಡು **ತತಃ** ಆ ವನದಿಂದ **ಆವೃತ್ತಃ** ಮನೆಗೆ ಹಿಂದಿರುಗುತ್ತಿರಲು ॥೫೮॥

**ಯಥಾಯೋನಿ** ಭಗವದಿಚ್ಛಾನುಸಾರ ಎಂದರ್ಥ. 'ಯೋನಿಶ್ಚ ಹಿ ಗೀಯತೇ' ಎಂದು ಶ್ರೀಹರಿಗೆ ಯೋನಿ ಎಂದು ಕರೆದಿರುವರು) **ಯಥಾಬೀಜಂ** ಭಗವದಿಚ್ಛಾನುಸಾರ ಎಂದರ್ಥ. 'ವ್ಯಂಜನಾದ್ಬೀಜಮುಚ್ಯತೇ' ಬೀಜಂ ತದಹಮರ್ಜುನ' ಎಂದೂ ಇದೆ. ಭಗವಂತ ಮೊದಲಾದವರು ಯಾವುದನ್ನು ನಿಮಿತ್ತ ಮಾಡಿ ಮಾಡಿಸುವರು ಎಂದರೆ ಹೇಳುವರು. **ಸ್ವಭಾವೇನ** ಎಂದು. ಯೋಗ್ಯತಾನುಸಾರ ಎಂದರ್ಥ. 'ಸ್ವಭಾವಾಖ್ಯಾ ಯೋಗ್ಯತಾ ಯಾ ಹಠಾಖ್ಯಾ' ಎಂದಿದೆ. ಸ್ವಭಾವವು ಹೋಗಲಾರದ್ದರಿಂದ ಬಲೀಯಸಾ ಎಂದಿದ್ದಾರೆ. 'ಸ ನ ಶಕ್ಯಃ ಸೋಽನ್ಯಥಾ ಕರ್ತುಂ' ಎಂದಿದೆ. ಎಂದು ವ್ಯಾಖ್ಯಾನಿಸಿರುವರು.

ಇದುವರೆಗೆ ಸಂಸಾರ ಬರುವುದನ್ನು ತಿಳಿಸಿ ಇದರ ಮೋಚನೆ ಹೇಗೆ ಎಂದು ಪ್ರಶ್ನೆ ಮಾಡಿಸಿ ಕೊಂಡವರಂತೆ ಮೋಚನ ಪ್ರಕಾರ ತಿಳಿಸುವರು-

**ಏಷ ಪ್ರಕೃತಿಸಂಗೇನ ಪುರುಷಸ್ಯ ವಿಪರ್ಯಯಃ ।**
**ಆಸೀತ್ಸ ಏವ ನ ಚಿರಾದೀಶಸಂಗಾದ್ವಿಲೀಯತೇ ॥೫೫॥**

**ಪುರುಷಸ್ಯ** ಜೀವನಿಗೆ **ಪ್ರಕೃತಿಸಂಗೇನ** ಪ್ರಕೃತಿಯ (ಲಿಂಗದೇಹದ) ಸಂಬಂಧದಿಂದ **ಯಃ** ಯಾವ **ಏಷಃ** ಈ **ವಿಪರ್ಯಯಃ** ಸ್ವರೂಪಕ್ಕೆ ವಿಪರೀತವಾದ ಸಂಸಾರವು **ಆಸೀತ್** ಬಂದಿದೆಯೋ **ಸಃ** ಅದು **ಈಶಸಂಗಾತ್** ಸರ್ವನಿಯಾಮಕನಾದ ಶ್ರೀಹರಿಯ ಸಂಬಂಧದಿಂದ ಸ್ವೋತ್ತಮರನ್ನಾರಂಭಿಸಿ ಸರ್ವೋತ್ತಮನಾದ ಪರಮಾತ್ಮನ ಪರ್ಯಂತ ಸೇವೆ ಮಾಡುವುದರಿಂದ **ನಚಿರಾತ್** ವಿಲಂಬವಿಲ್ಲದೆ ಶೀಘ್ರವಾಗಿ **ವಿಲೀಯತೇ** ಸಮೂಲನಾಶವಾಗುವುದು. ಮೋಕ್ಷವಾಗುವುದೆಂದು ಅರ್ಥ. ॥೫೫॥

ಹೀಗೆ ಸಾಮಾನ್ಯವಾಗಿ ಧರ್ಮದ ನಿರ್ಣಯವನ್ನು ಹೇಳಿ ಪ್ರಕೃತ ಅಜಾಮಿಳನ ಅಧರ್ಮವನ್ನು ತಿಳಿಸಿ ಅವನು ಶಿಕ್ಷೆಗೆ ಅರ್ಹನೆಂದು ಅಧ್ಯಾಯದ ಕೊನೆಯವರೆಗೂ ಸಮರ್ಥಿಸುತ್ತಾರೆ.

ತಿಳಿಯದೇ ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತ ಇರಲಿ. ಈ ಅಜಾಮಿಲನಾದರೋ ವಿದ್ವತ್ತು ಮೊದಲಾದ ಗುಣಗಳಿಂದ ಸಂಪನ್ನನಾಗಿದ್ದಾನೆ. ಹೀಗಾಗಿ ಬುದ್ಧಿಪೂರ್ವಕವಾಗಿಯೇ ಪಾಪ ಮಾಡಿರುತ್ತಾನೆ. ಆದ್ದರಿಂದ ಪ್ರಾಯಶ್ಚಿತ್ತಕ್ಕೆ ಅಧಿ ಕಾರಿಯಲ್ಲ. ನಾಮೋಚ್ಚಾರಣೆ ಮಾತ್ರವೇ ಪ್ರಾಯಶ್ಚಿತ್ತವೆಂದಾದದಲ್ಲಿ ಎಲ್ಲರಿಗೂ ಮುಕ್ತಿಯಾಗಬೇಕಾಗುವದು. ಆಗ ದಂಡ್ಯರೇ ಇಲ್ಲದೇ ಹೋಗಿ ನಿಮ್ಮ ಸ್ವಾಮಿಯಾದ

ವಿಷ್ಣುವಿನ ಆಜ್ಞೆಯನ್ನೇ ಪಾಲಿಸುವ ಯಮದೇವರಿಗೆ ಆಜ್ಞಾ ಉಲ್ಲಂಘನೆ ದೋಷವು ಬಂದು ಅಧಿಕಾರ ಕಳೆದುಕೊಳ್ಳಬೇಕಾಗುವುದು. ಆದ್ದರಿಂದ ಇವನು ಯಮನ ಬಳಿಗೆ ಹೋಗಿ ಅಲ್ಲಿ ಶಿಕ್ಷೆಯನ್ನು ಹೊಂದಿ ಶುದ್ಧನಾಗಲಿ ಎಂದು ಹೇಳಿದರು ಎಂದು ಇಲ್ಲಿ ಹೇಳುತ್ತಿದ್ದಾರೆ-

**ಅಯಂ ಚ ಶ್ರುತಸಂಪನ್ನಃ ಶೀಲವೃತ್ತಗುಣಾಲಯಃ ।**
**ಧೃತವ್ರತೋ ಮೃದುರ್ದಾಂತಃ ಸತ್ಯವಾನ್ಮಂತ್ರವಿಚ್ಛುಚಿಃ ॥೫೬॥**

**ಅಯಂ** ಈ ಅಜಾಮಿಳನು **ಶ್ರುತಸಂಪನ್ನಃ** ಶಾಸ್ತ್ರ ಶ್ರವಣ ಮಾಡಿದವನು **ಶೀಲ** ಒಳ್ಳೆ ಸ್ವಭಾವ **ವೃತ್ತ** ಸದಾಚಾರ **ಗುಣ** ಕ್ಷಮಾ ಮುಂತಾದ ಇತರ ಗುಣಗಳಿಗೆ **ಆಲಯಃ** ಆಶ್ರಯನು **ಧೃತವ್ರತಃ** ವ್ರತಧಾರಿಯು **ಮೃದುಃ** ಮೃದುಸ್ವಭಾವದವನು **ದಾಂತಃ** ಇಂದ್ರಿಯ ನಿಗ್ರಹ ಉಳ್ಳವನು **ಸತ್ಯವಾನ್** ನಿಜವಾಗಿ ಮಾತಾಡುವವನು **ಮಂತ್ರವಿತ್** ವೇದವನ್ನು ತಿಳಿದವನು **ಶುಚಿಃ** ಶುದ್ಧನು. ॥೫೬॥

**ಗುರ್ವಗ್ನ್ಯತಿಥಿವೃದ್ಧಾನಾಂ ಶೂಶ್ರೂಷುರ್ನಿರಹಂಕೃತಿಃ ।**
**ಸರ್ವಭೂತಸುಹೃತ್ ಸಾಧುರ್ಮಿತವಾಗನಸೂಯಕಃ ॥೫೭॥**

**ಗುರು** ದೊಡ್ಡವರನ್ನು **ಅಗ್ನಿ** ಅಗ್ನಿಯನ್ನು **ಅತಿಥಿ** ಅತಿಥಿಗಳನ್ನು **ವೃದ್ಧಾನಾಂ** ವೃದ್ಧರನ್ನು **ಶುಶ್ರೂಷುಃ** ಸೇವಿಸುವವನು **ನಿರಹಂಕೃತಿಃ** ಅಹಂಕಾರವಿಲ್ಲದವನು **ಸರ್ವಭೂತಸುಹೃತ್** ಎಲ್ಲ ಪ್ರಾಣಿಗಳನ್ನು ಪ್ರೀತಿಸುವವನು **ಸಾಧುಃ** ಸಾಧುವು **ಮಿತವಾಕ್** ಅಗತ್ಯವಿದ್ದಷ್ಟೇ ಮಾತಾಡುವವನು **ಅನಸೂಯಕಃ** ಅಸೂಯೆ ಇಲ್ಲದವನು. (ಇದು ಇವನ ಪೂರ್ವಸ್ಥಿತಿ. ಅವನು ಮಾಡಿದ್ದು ಅತ್ಯಂತ ಅನ್ಯಾಯವೆಂದು ತಿಳಿಸುವುದಕ್ಕಾಗಿ ಇದನ್ನು ಅನುವಾದ ಮಾಡಿದ್ದಾರೆ) ॥೫೭॥

**ಏಕದಾಽಸೌ ವನಂ ಯಾತಃ ಪಿತೃಸಂದೇಶಕೃದ್ ದ್ವಿಜಃ ।**
**ಆದಾಯ ತತ ಆವೃತ್ತಃ ಫಲಪುಷ್ಪಸಮಿತ್ಕುಶಾನ್ ॥೫೮॥**

ಏಕದಾ ಒಂದು ದಿನ **ಪಿತೃಸಂದೇಶಕೃತ್** ತಂದೆಯ ಆಜ್ಞೆಯನ್ನು ಪಾಲಿಸುವ **ಅಸೌ ದ್ವಿಜಃ** ಈ ಬ್ರಾಹ್ಮಣನು **ವನಂ ಯಾತಃ ಸನ್** ಅರಣ್ಯಕ್ಕೆ ಹೋಗಿ **ಫಲ-ಪುಷ್ಪ ಸಮಿತ್‌ಕುಶಾನ್** ಹಣ್ಣು ಹೂ ಸಮಿತ್ತು ದರ್ಭೆಗಳನ್ನು **ಆದಾಯ** ತೆಗೆದುಕೊಂಡು **ತತಃ** ಆ ವನದಿಂದ **ಆವೃತ್ತಃ** ಮನೆಗೆ ಹಿಂದಿರುಗುತ್ತಿರಲು ॥೫೮॥

**ದದರ್ಶ ಕಾಮಿನಂ ಕಂಚಿಚ್ಛೂದ್ರಂ ಸಹ ಭುಜಿಷ್ಯಯಾ ।**
**ಪೀತ್ವಾ ತು ಮಧು ಮೈರೇಯಂ ಮದಾಘೂರ್ಣಿತನೇತ್ರಯಾ ॥೫೯॥**

**ಮತ್ತಯಾ ವಿಶ್ಲಥನ್ನೀವ್ಯಾ ಹ್ಯುಪೇತಂ ನಿರಪತ್ರಪಮ್ ।**
**ಕ್ರೀಡಂತಮನುಗಾಯಂತಂ ಹಸಂತಮನಯಾಽಂತಿಕೇ ॥೬೦॥**

**ಭುಜಿಷ್ಯಯಾ ಸಹ** ದಾಸಿಯೊಂದಿಗೆ **ಮೈರೇಯಂ ಮಧು ಪೀತ್ವಾ** ಹಿಟ್ಟಿನಿಂದ ಮಾಡಿದ ಮದ್ಯವನ್ನು ಕುಡಿದು **ಮದಾಘೂರ್ಣಿತನೇತ್ರಯಾ** ಮದದಿಂದ ತುಂಬಿದ ಚಂಚಲ ಕೆಂಗಣ್ಣುಗಳುಳ್ಳ **ಮತ್ತಯಾ** ಮತ್ತಳಾದ **ವಿಶ್ಲಥನ್ನೀವ್ಯಾ** ಸೀರೆಯ ಗಂಟು ಕಳಿಚಿ ಹೋಗಿದ್ದ (ನಗ್ನಳಾದ) **ಅನಯಾ** ಇಂಥವಳೊಡನೆ **ಉಪೇತಂ** ಕೂಡಿದ್ದ **ನಿರಪತ್ರಪಂ** ನಾಚಿಕೆಯಿಲ್ಲದ **ಅಂತಿಕೇ** ಸಮೀಪದಲ್ಲಿ (ಜನರ ಸಮೀಪದಲ್ಲಿಯೇ) **ಕ್ರೀಡಂತಂ** ಕ್ರೀಡಿಸುತ್ತಿದ್ದ **ಅನುಗಾಯಂತಂ** ಅವಳೊಡನೆ ಹಾಡುತ್ತಿದ್ದ **ಹಸಂತಂ** ನಗುತ್ತಿದ್ದ **ಕಾಮಿನಂ** ಕಾಮುಕನಾದ **ಕಂಚಿತ್ ಶೂದ್ರಂ** ಒಬ್ಬ ಶೂದ್ರನನ್ನು **ದದರ್ಶ** ನೋಡಿದನು. ॥೫೯-೬೦॥

**ದೃಷ್ಟ್ವಾ ತಾಂ ಕಾಮಲಿಪ್ತೇನ ಬಾಹುನಾ ಪರಿರಂಭಿತಾಂ ।**
**ಜಗಾಮ ಹೃಚ್ಛಯವಶಂ ಸಹಸೈವ ವಿಮೋಹಿತಃ ॥೬೧॥**

**ಕಾಮಲಿಪ್ತೇನ** ಗಂಧಾದಿಗಳನ್ನು ಅತಿಯಾಗಿ ಲೇಪಿಸಿಕೊಂಡಿರುವ ಅಥವಾ **ಕಾಮಲಿಪ್ತೇನ** ಬೆವರು ನಡುಕ ಮುಂತಾದವನ್ನು ಉಂಟುಮಾಡುವ ಮನ್ಮಥನಿಂದ ವಶೀಕೃತನಾದ ಅಥವಾ ಕಾಮೋದ್ದೀಪಿತನಾದ ಶೂದ್ರನಿಂದ **ಬಾಹುನಾ** ತೋಳಿನಿಂದ **ಪರಿರಂಭಿತಾಂ** ಆಲಂಗಿತಳಾದ **ತಾಂ** ಅವಳನ್ನು **ದೃಷ್ಟ್ವಾ** ನೋಡಿ **ಸಹಸಾ ಏವ** ಕೂಡಲೇ **ವಿಮೋಹಿತಃ** ಮೋಹಿತನಾಗಿ **ಹೃಚ್ಛಯವಶಂ ಜಗಾಮ** ಮನ್ಮಥನ ಅಧೀನನಾದನು. ॥೬೧॥

**ಸ್ತಂಭಯನ್ನಾತ್ಮನಾತ್ಮಾನಂ ಯಾವತ್ಸತ್ತ್ವಂ ಯಥಾಶ್ರುತಮ್ ।**
**ನ ಶಶಾಕ ಸಮಾದಾತುಂ ಮನೋ ಮದನವೇಪಿತಮ್ ॥೬೨॥**

**ಯಾವತ್ಸತ್ತ್ವಂ** ಶಕ್ತಿಯಿದ್ದಷ್ಟು **ಯಥಾಶ್ರುತಂ** 'ನ ಶೂದ್ರ್ಯಾಂ ಪಾತಯೇದ್ರೇತಃ' ಎಂಬ ಆಗಮಶ್ರವಣವನ್ನನುಸರಿಸಿ **ಆತ್ಮನಾ** ಮನಸ್ಸಿನಿಂದ **ಆತ್ಮಾನಂ** ತನ್ನನ್ನು **ಸ್ತಂಭಯನ್ ಅಪಿ** ತಡೆಹಿಡಿದರೂ **ಮದನವೇಪಿತಂ** ಮನ್ಮಥಪೀಡಿತವಾದ (ನಡುಗಿದ)

ಅಥವಾ ಕಾಮಬೀಜವನ್ನು ಬಿತ್ತಲು ಕ್ಷೇತ್ರವಾಗಿದ್ದ **ಮನಃ** ಮನಸ್ಸನ್ನು **ಸಮಾಧಾತುಂ** ಸಮಾಧಾನ ಪಡಿಸಲು (ಹಿಂತಿರುಗಿಸಲು) **ನ ಶಶಾಕ** ಸಮರ್ಥನಾಗಲಿಲ್ಲ. ।।೬೨।।

**ತನ್ನಿಮಿತ್ತಸ್ಮರವ್ಯಾಜಗ್ರಹಗ್ರಸ್ತೋ ವಿಚೇತನಃ ।**
**ತಾಮೇವ ಮನಸಾ ಧ್ಯಾಯನ್ ಸ್ವಧರ್ಮಾದ್ವಿರರಾಮ ಹ ।।೬೩।।**

**ತನ್ನಿಮಿತ್ತಸ್ಮರವ್ಯಾಜಗ್ರಹಗ್ರಸ್ತಃ** ಅವಳ ದರ್ಶನದಿಂದ ಜನಿತವಾದ ಮನ್ಮಥನೆಂಬ ಪಿಶಾಚದಿಂದ ಹಿಡಿಯಲ್ಪಟ್ಟವನಾಗಿ **ವಿಚೇತನಃ** ಶಾಸ್ತ್ರವಿರುದ್ಧವಾದ ಜ್ಞಾನ ಉಳ್ಳವನಾಗಿ ಅಥವಾ ಶಾಸ್ತ್ರಜ್ಞಾನವನ್ನು ಕಳೆದುಕೊಂಡು **ತಾಮೇವ** ಆ ದಾಸಿಯನ್ನೇ **ಮನಸಾ ಧ್ಯಾಯನ್** ಮನಸ್ಸಿನಿಂದ ಧ್ಯಾನ ಮಾಡುತ್ತಾ **ಸ್ವಧರ್ಮಾತ್** ತನ್ನ ಧರ್ಮದಿಂದ **ವಿರರಾಮ** ವಿರತನಾದನು. **ಹ** ಇದು ಕರ್ಮವಿಪಾಕವು.

ಇಲ್ಲಿ **ವಿಚೇತನಃ** ಜ್ಞಾನಶೂನ್ಯನಾದ ಅಜಾಮಿಳನು ತನ್ನಿಮಿತ್ತ ಸ್ಮರವ್ಯಾಜಗ್ರಹಗ್ರಸ್ತಃ ಸ್ತ್ರೀ ದರ್ಶನ ನಿಮಿತ್ತ ಕಾಮನ ನೆಪದಿಂದ ಬಂದ ಯಾವ ಗ್ರಹಃ ಪಿಶಾಚ ಉಂಟೋ ಅದರಿಂದ ಗ್ರಸ್ತ ಎಂದರ್ಥವನ್ನು ಶ್ರೀಸತ್ಯಾಭಿನವರು ಮಾಡಿರುವರು. ಇದರಿಂದ ಸ್ತ್ರೀದರ್ಶನ ನಿಮಿತ್ತ ಸ್ಮರನೆಂಬ ಗ್ರಹದಿಂದ ಗ್ರಸ್ತ ಎಂಬರ್ಥವಾಗಲು ತನ್ನಿಮಿತ್ತ ಸ್ಮರಗ್ರಹಗ್ರಸ್ತಃ ಎಂದರೆ ಸಾಕು ವ್ಯಾಜ ಪದ ವ್ಯರ್ಥ ಎಂಬ ದೂಷಣ ನಿರಾಕೃತವಾಯಿತು. ಅಜಾಮಿಲನಿಗೆ ಅತಿ ಮಹತ್ತರ ಕಾಮಪೀಡೆ ಆಗಿತ್ತು ಎಂದು ತಿಳಿಸಲು ಇದು ಕಾಮವಲ್ಲ ಕಿಂತು ಕಾಮದ ನೆಪದಿಂದ ಪ್ರಸಿದ್ಧ ಪಿಶಾಚವೇ ಬಂದು ಪೀಡಿಸಿತು ಎಂಬ ಉತ್ಪ್ರೇಕ್ಷೆ ಸಿದ್ಧಿಗಾಗಿ ವ್ಯಾಜಪದವನ್ನು ಪ್ರಯೋಗಿಸಿರುವರು ಎನ್ನುತ್ತಾರೆ. ।।೬೩।।

**ತಾಮೇವ ತೋಷಯಾಮಾಸ ಪಿತ್ರ್ಯೇಣಾರ್ಥೇನ ಯಾವತಾ ।**
**ಗ್ರಾಮ್ಯೈರ್ಮನೋರಮ್ಯೈಃ ಕಾಮ್ಯೈಃ ಪ್ರಸೀದೇತ ಯಥಾ ತಥಾ ।।೬೪।।**

**ಯಥಾ** ಹೇಗೆ **ಯಾವತಾ** ಸಮಗ್ರವಾದ **ಮನೋರಮ್ಯೈಃ** ಮನಸ್ಸನ್ನು ಸಂತೋಷ ಪಡಿಸುವ **ಗ್ರಾಮ್ಯೈಃ** ಕಾಮಭೋಗಸಾಧನಗಳಾದ **ಕಾಮ್ಯೈಃ** ವಿಷಯಗಳಿಂದ **ಪ್ರಸೀದೇತ** ಮನಸ್ಸು ತೃಪ್ತವಾಗುವುದೋ **ತಥಾ** ಹಾಗೆ **ತಾಂ ಏವ** ದಾಸಿಯನ್ನೇ **ಪಿತ್ರ್ಯೇಣ ಅರ್ಥೇನ** ತಂದೆಯು ಸಂಪಾದಿಸಿದ ದ್ರವ್ಯದಿಂದ **ತೋಷಯಾಮಾಸ** ಸಂತೋಷಪಡಿಸಿದನು. **ಗ್ರಾಮ್ಯೈಃ** ಸುರತಧರ್ಮಗಳಿಂದ 'ಗ್ರಾಮ್ಯಮಶ್ಲೀಲರತ-ಬಂಧಯೋಃ' ಎಂದು ವಿಶ್ವವಿದೆ. ।।

**ವಿಪ್ರಾಂ ಸ್ವಭಾರ್ಯಾಮಪ್ರೌಢಾಂ ಕುಲೇ ಮಹತಿ ಲಂಭಿತಾಮ್ ।**
**ವಿಸಸರ್ಜಾಚಿರಾತ್ಪಾಪಃ ಸ್ವೈರಿಣ್ಯಾಪಾಂಗವಿದ್ಧಧೀಃ ॥೬೫॥**

**ಸ್ವೈರಿಣ್ಯಾಪಾಂಗವಿದ್ಧಧೀಃ** ಸ್ವೇಚ್ಛಾಚಾರಿ ಅಂದರೆ ವ್ಯಭಿಚಾರಿಣಿಯಾದ ಆ ದಾಸಿಯ ಕೊನೆಗಣ್ಣಿನ ನೋಟದಿಂದ ತಾಡಿತವಾದ ಮನಸ್ಸುಳ್ಳ **ಪಾಪಃ** ಪಾಪಿಯಾದ ಇವನು **ಅಚಿರಾತ್** ಸ್ವಲ್ಪಕಾಲದಲ್ಲಿಯೇ **ಮಹತಿ ಕುಲೇ** ದೊಡ್ಡವಂಶದಲ್ಲಿ **ಲಂಭಿತಾಂ** ಜನಿಸಿದ **ಅಪ್ರೌಢಾಂ** ತರುಣಿಯಾದ **ವಿಪ್ರಾಂ** ಬ್ರಾಹ್ಮಣಳಾದ ಸಾಧ್ವಿಯಾದ **ಸ್ವಭಾರ್ಯಾಂ** ತನ್ನ ಹೆಂಡತಿಯನ್ನು **ವಿಸಸರ್ಜ** ಸಂಪೂರ್ಣವಾಗಿ ಬಿಟ್ಟನು. '**ವಿಪ್ರಾ ಚಾವ್ಯಭಿಚಾರಿಣೀ**' ಎಂದು ವಾಕ್ಯವಿರುವುದರಿಂದ **ವಿಪ್ರಾಂ** ಎಂದರೆ ವ್ಯಭಿಚಾರಿಣಿಯಲ್ಲದ ಎಂದೂ ಅರ್ಥ. **ಅಪ್ರೌಢಾಂ** ಮೂವತ್ತು ವರ್ಷದವಳಾಗದ ಎಂದರ್ಥ. ಹದಿನಾರರಿಂದ ಮೂವತ್ತರ ವರೆಗೆ ತರುಣಿಯು. 'ಬಾಲಾ ಸ್ಯಾತ್ ಷೋಡಶಾಬ್ದಾತ್ ತದುಪರಿ ತರುಣೀ ತ್ರಿಂಶತಂ ಯಾವತ್ ಊರ್ಧ್ವಂ ಪ್ರೌಢಾ ಸ್ಯಾತ್ ಪಂಚಪಂಚಾಶತ್ ಎಂದಿದೆ. ॥೬೫॥

**ಇತಸ್ತತಶ್ಚೋಪನಿನ್ಯೇ ನ್ಯಾಯತೋಽನ್ಯಾಯತೋ ಧನಮ್ ।**
**ಬಭಾರಾಸ್ಯಾಃ ಕುಟುಂಬಿನ್ಯಾಃ ಕುಟುಂಬಂ ಮಂದಧೀರಯಮ್ ॥೬೬॥**

**ಅಯಂ ಮಂದಧೀಃ** ಈ ದಡ್ಡನು **ಇತಸ್ತತಃ** ಈ ದೇಶದಿಂದ ಆ ದೇಶದಿಂದ **ನ್ಯಾಯತಃ** ನ್ಯಾಯದಿಂದ **ಅನ್ಯಾಯತಃ** ಅನ್ಯಾಯದಿಂದ **ಧನಂ** ಹಣವನ್ನು **ಉಪನಿನ್ಯೇ** ತಂದನು. **ಚ** ಮತ್ತು **ಕುಟುಂಬಿನ್ಯಾಃ** ಮಕ್ಕಳು ಮುಂತಾದವರಿಂದ ಕೂಡಿದ **ಅಸ್ಯಾಃ** ಈ ದಾಸಿಯ **ಕುಟುಂಬಂ** ಕುಟುಂಬವನ್ನು **ಬಭಾರ** ರಕ್ಷಿಸಿದನು. ॥

'ಅನ್ಯಾಯದಿಂದಲೇ ದ್ರವ್ಯವನ್ನು ಗಳಿಸಿದ್ದಾನೆ ನ್ಯಾಯದಿಂದ ಗಳಿಸಿದ್ದೇನೆ ಎಂಬ ಭ್ರಮ ಅವನಿಗೆ' ಎನ್ನುತ್ತಾರೆ ಶ್ರೀಗಳು. ಅವನ ಆಚಾರವಿಚಾರ ನೋಡಿದರೆ ನ್ಯಾಯದಿಂದ ಎಂಬ ಕಲ್ಪ ಹೇಳಬಾರದ್ದೇ ಎಂದು ಭಾವ.

**ಯದಸೌ ಶಾಸ್ತ್ರಮುಲ್ಲಂಘ್ಯ ಸ್ವೈರಚಾರ್ಯಾರ್ಯಗರ್ಹಿತಃ ।**
**ಆವರ್ತತ ಚಿರಂಕಾಲಮಘಾಯುರಶುಚಿರ್ಮಲಾತ್ ॥೬೭॥**

**ತತ ಏನಂ ದಂಡಪಾಣೇಃ ಸಕಾಶಂ ಕೃತಕಿಲ್ಬಿಷಮ್ ।**
**ನೇಷ್ಯಾಮೋಽಕೃತನಿರ್ವೇಶಂ ಯತ್ರ ದಂಡೇನ ಶುದ್ಧ್ಯತಿ ॥೬೮॥**

॥ ಇತಿ ಶ್ರೀಮದ್ಭಾಗವತೇ ಷಷ್ಠಸ್ಕಂಧೇ ಪ್ರಥಮೋಽಧ್ಯಾಯಃ ॥

**ಸ್ವೈರಚಾರೀ** ಶಾಸ್ತ್ರವಿಧಿಯನ್ನು ಬಿಟ್ಟು ನಿರಂಕುಶನಾಗಿ ಮನ ಬಂದಂತೆ ಇದ್ದ ಆದ್ದರಿಂದಲೇ **ಆರ್ಯಗರ್ಹಿತಃ** ಜ್ಞಾನಿಗಳಿಂದ ನಿಂದಿತನಾದ **ಅಶುಚಿಃ** ಅಶುದ್ಧನಾದ ಮಲಂ ಏತದೀಯಂ ಅನ್ನಂ ಅತ್ತೀತಿ ಮಲಾತ್ ಈ ದಾಸಿಯ ಅನ್ನ ತಿನ್ನುವ ಸ್ನಾನ ಮಾಡದೆ ತಿನ್ನುವ **ಅಸೌ** ಇವನು **ಯತ್** ಯಾವಕಾರಣ **ಅಘಾಯುಃ** ಪಾಪ ಜೀವನನಾಗಿ ಪಾಪಕ್ಕಾಗಿಯೇ ಆಯುಷ್ಯವುಳ್ಳವನಾಗಿ ಅಘಾರ್ಥಂ ಆಯುಃ ಯಸ್ಯ ಎಂದು ಋಗ್ಭಾಷ್ಯ. 'ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ' ಎಂಬುದರ ಗೀತಾಭಾಷ್ಯ ಅಘನಿಮಿತ್ತಮೇವ ಆಯುಃ ಎಂದು ವ್ಯಾಖ್ಯಾನ ಮಾಡಿರುವುದರಿಂದ **ಚಿರಕಾಲಂ** ಬಹುವರ್ಷಗಳು **ಆವರ್ತತ** ಇದ್ದನೋ **ತತಃ** ಆ ಕಾರಣದಿಂದ **ಕೃತಕಿಲ್ಬಿಷಂ** ಪಾಪಮಾಡಿದ **ಅಕೃತನಿರ್ವೇಶಂ** ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತ ಮಾಡದಿರುವ **ಏನಂ** ಇವನನ್ನು **ದಂಡಪಾಣೇಃ** ಯಮರಾಜನ **ಸಕಾಶಂ** ಸಮೀಪಕ್ಕೆ **ನೇಷ್ಯಾಮಃ** ಎಳೆದೊಯ್ಯುವೆವು. **ಯತ್ರ** ಯಾವ ಯಮಪಟ್ಟಣದಲ್ಲಿ **ದಂಡೇನ** ಯಮದೂತರು ಕೊಟ್ಟ ಶಿಕ್ಷೆಯಿಂದ **ಶುದ್ಧ್ಯತಿ** ಶುದ್ಧನಾಗುವನೋ ಆದ್ದರಿಂದ ಇವನ ಹಿತಕ್ಕಾಗಿಯೇ ಕರೆದುಕೊಂಡು ಹೋಗುತ್ತೇವೆ. ಎಂದು ಅಭಿಪ್ರಾಯ.

'ಅಸ್ನಾತ್ವಾಶೀ ಮಲಂ ಭುಂಕ್ತೇ' ಎಂದಿದೆ. ಮಲಾತ್ ಕೃಪಣಾತ್ ದಾಸ್ಯಾದೇಃ ನಿಮಿತ್ತಾತ್ ಅಶುಚಿಃ ಅಶುಚಿಃ ಅನಲವಿಕಲಃ ಅಗ್ನಿಹೋತ್ರಾದಿಹೀನಃ ಅಗ್ನಿ ಇಲ್ಲದವನು ಅಗ್ನಿಹೋತ್ರಾದಿಗಳಿಲ್ಲದವನೆಂದರ್ಥ. ।।೬೭-೬೮।।

ಇಲ್ಲಿಗೆ ಪ್ರಥಮಾಧ್ಯಾಯವು ಮುಗಿಯಿತು.

★★★★★

# ಅಥ ಶ್ರೀಮದ್ಭಾಗವತೇ - ಷಷ್ಠಸ್ಕಂಧೇ

# ದ್ವಿತಿಯೋಽಧ್ಯಾಯಃ

**ಅಧ್ಯಾಯ ಸಾರಾಂಶ**

ಮತ್ತೆ ಶುಕಾಚಾರ್ಯರು ಹೇಳಿದರು. ಹೇ ರಾಜನ್ ಕೇಳು. ಅಲ್ಲಿಗೆ ಬಂದಿರುವ ದೇವದೂತರು ನ್ಯಾಯಾನ್ಯಾಯಗಳನ್ನು ವಿಚಾರಿಸುವಲ್ಲಿ ಕೋವಿದರಾಗಿದ್ದರು. ಯಮದೂತರು ಹೇಳಿರುವ ಧರ್ಮಾಧರ್ಮಗಳ ಲಕ್ಷಣವನ್ನು ಕೇಳಿದರು. ಮತ್ತೆ ಅವರನ್ನು ಕುರಿತು ಹೇಳಿದರು.

ಅಹೋ ! ಬಹಳ ವಿಪತ್ತು ಬಂದೊದಗಿತು. ಧರ್ಮವನ್ನು ಬಲ್ಲವರು ನೀವು. ಪ್ರಕೃತ ನೀವೇ ಅಧರ್ಮವನ್ನು ಮಾಡುತ್ತಿರುವಿರಿ. ಯಾವುದೇ ಪಾಪವಿಲ್ಲದ್ದರಿಂದ ಅದಂಡ್ಯನಾಗಿದ್ದಾನೆ ಅಜಾಮಿಳ. ಅಂಥವನನ್ನು ದಂಡಿಸಲು ಹೊರಟಿದ್ದೀರಿ. ಇದು ನೀವು ಮಾಡುವ ಪಾಪವೇ ಆಗಿದೆ. ಶಾಸಕರಾದವರು ಪ್ರಜೆಗಳನ್ನು ರಕ್ಷಿಸಬೇಕು. ಅವರು ಸಾಧುಗಳಾಗಿರಬೇಕು. ಸಮರಾಗಿಯೂ ಇರಬೇಕು. ವೈಷಮ್ಯವನ್ನು ಎಂದಿಗೂ ತೋರಿಸಬಾರದು. ಹಾಗೇನಾದರೂ ವೈಷಮ್ಯವನ್ನು ತೋರಿಸಿದರೆ ಪ್ರಜರು ಮತ್ತೆ ಯಾರಿಗೆ ಶರಣು ಹೋಗಬೇಕು. ಅಪಾಪಿಗಳನ್ನು ದಂಡಿಸಲು ಶಾಸಕರಾದ ನೀವು ಹೊರಟಿದ್ದೀರಿ. ನೀವು ಶಾಸಕರೆಂದಮೇಲೆ ನೀವು ಮಾಡಿದ ಈ ಕಾರ್ಯವನ್ನೇ ಆದರ್ಶವಾಗಿಟ್ಟುಕೊಂಡು ಜನರು ಕೂಡಾ ಇಂತಹ ಪ್ರಸಂಗದಲ್ಲಿ ಇದೇ ರೀತಿಯಾಗಿ ವ್ಯವಹರಿಸುತ್ತಾರೆ. ನೀವು ಆಚರಿಸಿದ್ದು ಪ್ರಮಾಣವೆಂದು ಜನರು ನಂಬುತ್ತಾರೆ. ಅದೇ ರೀತಿಯಾಗಿ ಅವರು ಕೂಡಾ ವ್ಯವಹರಿಸುತ್ತಾರೆ.




ತಾಯಿಯನ್ನು ನಂಬಿದ ಮಗು ತೊಡೆಯ ಮೇಲೆ ನಿಶ್ಶಂಕವಾಗಿ ಮಲಗುತ್ತದೆ. ಆ ತಾಯಿಯೇ ಮಗುವಿನ ಕರುಳನ್ನು ಕೊಯ್ದರೇ? ಪ್ರಕೃತ ಇಂಥದೇ ಪ್ರಸಂಗವಿದೆ. ಶಾಸಕರೆಂದು ನಂಬಿ ನಿಮ್ಮ ಮೇಲೆ ವಿಶ್ವಾಸವನ್ನಿಟ್ಟಿದ್ದಾರೆ ಜನರು. ನಿಶ್ಚಿಂತರಾಗಿದ್ದಾರೆ. ಅಂಥವರನ್ನು ಹೀಗೆ ಶಿಕ್ಷಿಸುವುದು ತರವಲ್ಲ. ಧರ್ಮಾಧರ್ಮಗಳ ಜ್ಞಾನವೇ ಇಲ್ಲದ ಪಶು ಮಾಡಬಹುದಾದ ಕಾರ್ಯವೇ ಹೊರತು ನಿಮ್ಮಂಥವರು ಮಾಡುವ ಕೆಲಸವಿದಲ್ಲ. ಈ ಅಜಾಮಿಳ ನಾರಾಯಣನನ್ನು ಭಕ್ತಿಪೂರ್ವಕವಾಗಿ ಸ್ಮರಿಸುವ ಮೂಲಕ ಕೋಟಿಕೋಟಿಜನ್ಮಗಳಲ್ಲಿ ಮಾಡಿದ ಪಾಪಗಳಿಗೆ ಪ್ರಾಯಶ್ಚಿತ್ತವನ್ನು ಮಾಡಿಕೊಂಡಿದ್ದಾನೆ. ದೇವರ ನಾಮವಿದು ಮಂಗಳಗಳಿಗೆ ಆಕರ. ಅವನ ನಾಮದ ಉಚ್ಚಾರವಾದ ಮೇಲೂ ಪಾಪ ಉಳಿಯಲು ಸಾಧ್ಯವಿಲ್ಲ. ಅವನನ್ನು ಭಕ್ತಿಪೂರ್ವಕವಾಗಿ ಸ್ಮರಿಸಿದವನು ಮೈಲಿಗೆಯಾಗಲು ಸಾಧ್ಯವಿಲ್ಲ. ಇದನ್ನು ವಿಚಾರಿಸಿ.

ಕಳ್ಳತನ ಮಾಡಿರಬಹುದು. ಸುರಾಪಾನ ಮಾಡಿರಬಹುದು. ಮಿತ್ರದ್ರೋಹ ಮಾಡಿರಬಹುದು. ಬ್ರಹ್ಮಹತ್ಯೆ ಮಾಡಿರಬಹುದು. ಗುರುದಾರಗಮನವಿರಬಹುದು. ಸ್ತ್ರೀಹತ್ಯೆ ಇರಬಹುದು. ರಾಜಹತ್ಯೆ ಮಾಡಿರಬಹುದು. ಪಿತೃಹತ್ಯೆ ಮಾಡಿರಬಹುದು. ಗೋಹತ್ಯೆ ಮಾಡಿರಬಹುದು. ಯಾವುದೇ ಪಾಪಗಳನ್ನು ಮಾಡಿರಬಹುದು. ಭಕ್ತಿಯಿಂದ ಮಾಡಿದ ಭಗವಂತನ ನಾಮಸ್ಮರಣೆಯು ಎಲ್ಲ ಪಾಪಗಳಿಗೂ ಪ್ರಾಯಶ್ಚಿತ್ತವಾಗುತ್ತದೆ. ಹೀಗೆ ಪ್ರಾಯಶ್ಚಿತ್ತವನ್ನು ಮಾಡಿಕೊಂಡ ಭಕ್ತರನ್ನು ರಕ್ಷಿಸುತ್ತೇನೆಂದು ಭಗವಂತನ ಸಂಕಲ್ಪ.

ಪಾಪಪರಿಹಾರಕವಾದ ಪ್ರಾಯಶ್ಚಿತ್ತಗಳನ್ನು ಬ್ರಹ್ಮವಾದಿಗಳು ಹೇಳಿದ್ದಾರೆ. ಆ ಎಲ್ಲ ವ್ರತೋಪವಾಸಗಳಿಗಿಂತಲೂ ಮಿಗಿಲಾದ ಪ್ರಾಯಶ್ಚಿತ್ತವೆಂದರೆ ಅನುಸಂಧಾನ-ಪೂರ್ವಕವಾದ ಹರಿನಾಮಸ್ಮರಣೆ. ಇದು ನಿಶ್ಚಿತವಾಗಿಯೂ ಮನಶ್ಶೋಧಕವಾಗಿದೆ.

ಪ್ರಕೃತ ಈ ಅಜಾಮಿಳ ಸಾಕಷ್ಟು ಪಾತಕಗಳನ್ನು ಮಾಡಿದ್ದಾನೆ. ಆದರೂ ಮರಣಸಮಯದಲ್ಲಿ ಮತ್ತಾವ ಪ್ರಾಯಶ್ಚಿತ್ತಗಳನ್ನು ಅನುಷ್ಠಾನ ಮಾಡುವ ಸಾಮರ್ಥ್ಯವಿಲ್ಲದಿದ್ದುದರಿಂದ ಅನುಸಂಧಾನಪೂರ್ವಕವಾಗಿ ಹರಿಯನ್ನು ಸ್ಮರಿಸಿದ್ದಾನೆ. ಈ ಮೂಲಕ ಎಲ್ಲ ಪಾಪಗಳಿಗೆ ಪ್ರಾಯಶ್ಚಿತ್ತಗಳನ್ನು ಮಾಡಿಕೊಂಡಿದ್ದಾನೆ. ಆದ್ದರಿಂದ ಇವನನ್ನು ನರಕಕ್ಕೆ ಕರೆದೊಯ್ಯಬೇಡಿ. ಇವನು ಪಾಪಗಳಿಂದ ಪುನೀತನಾಗಿದ್ದಾನೆ.

ಮಗನನ್ನು ಕರೆಯುವ ನಿಮಿತ್ತದಿಂದ ಶ್ರೀಹರಿಯನ್ನು ಸ್ಮರಿಸಿದ್ದಾನೆ. ಸ್ವಾಭಾವಿಕವಾಗಿ ಹರಿಸ್ಮರಣೆಯನ್ನು ಮಾಡಿಲ್ಲ. ಆದ್ದರಿಂದ ಇವನ ಈ ಸ್ಮರಣೆ ಪಾಪಶೋಧಕವಾಗಿಲ್ಲ ಎಂದು ಹೇಳುವುದು ಯುಕ್ತವೂ ಅಲ್ಲ. ಈ ಅಜಾಮಿಳ ಮಗನನ್ನು ಕರೆಯುವಾಗ ದೇವರ ಸ್ಮರಣೆಯಾಗಿದೆ. ಅದು ಕೇವಲ ಸ್ಮರಣೆಯಲ್ಲ. ನಾಮಸ್ವಾಮಿತಯಾ ಪರಮಾತ್ಮನ ಸ್ಮರಣೆಯಾಗಿದೆ. ಆ ಸಮಯದಲ್ಲಿ ಭಕ್ತಿಯ ಉದ್ರೇಕ ಅಜಾಮಿಳನಿಗಾಗಿದೆ. ಅವನು ಮಾಡಿದ ಪಾಪಗಳಿಗಾಗಿ ಪಶ್ಚಾತ್ತಾಪವೂ ಆಗಿದೆ. ಇದೆಲ್ಲ ಕಾರಣಕ್ಕಾಗಿ ಅವನು ನರಕಯಾತನೆಯನ್ನು ಅನುಭವಿಸುವಂತಿಲ್ಲ.

ಈ ವಿಷಯದಲ್ಲಿ ನಿಮಗೇನಾದರೂ ಸಂಶಯವಿದ್ದರೆ ನಿಮ್ಮ ಯಜಮಾನನಾದ ಯಮಧರ್ಮರನ್ನು ಕೇಳಿರಿ. ಆ ಯಮಧರ್ಮರಾಜರು ಧರ್ಮದ ರಹಸ್ಯವನ್ನೆಲ್ಲ ತಿಳಿದಿದ್ದಾರೆ.

ಈ ರೀತಿಯಾಗಿ ಧರ್ಮದ ವಿಚಾರವನ್ನು ದೇವದೂತರಿಂದ ತಿಳಿದುಕೊಂಡಿರುವ ಯಮದೂತರು ಅಜಾಮಿಳನನ್ನು ಬಿಟ್ಟರು. ಯಮನ ಹತ್ತಿರ ಹೋದರು. ನಡೆದ ಘಟನೆಯನ್ನೆಲ್ಲ ಯಮನ ಮುಂದೆ ಹೇಳಿದರು.

ಆಚೆ ಅಜಾಮಿಳ ವಿಚಾರಿಸಿದ. ತಾನು ಮಾಡಿದ ಪಾಪಗಳಿಗೆ ಆಗುವ ಯಾತನೆಯನ್ನು ನೆನೆದು ಭೀತನಾಗಿದ್ದ. ಇದೀಗ ವಿಷ್ಣುದೂತರ ಕೃಪೆಯಿಂದ ಪಾರಾದ. ಅವರನ್ನು ಭಕ್ತಿಯಿಂದ ನಮಸ್ಕರಿಸಿದ. ಏನೋ ಹೇಳಲು ಪ್ರವೃತ್ತನಾದ. ಅದನ್ನು ಕಂಡು ದೇವದೂತರು ಅದೃಶ್ಯರಾದರು. ಯಮದೂತರ, ದೇವದೂತರ ಸಂವಾದವನ್ನು ಕೇಳಿದ. ಧರ್ಮದ ರಹಸ್ಯವನ್ನು ತಿಳಿದುಕೊಂಡ. ತಾನು ಮಾಡಿದ ಪಾಪಗಳನ್ನು ಒಂದು ಬಾರಿ ನೆನೆಸಿಕೊಂಡ. ಭಾರೀ ಭಯ ಹುಟ್ಟಿತು. ಪಾಪಗಳ ಸ್ಮರಣೆಯಿಂದಲೇ ಇಂತಹ ಭಯವಾಗುತ್ತಿರುವಾಗ ಪಾಪಗಳನ್ನು ಮಾಡಿದವರಿಗೆ ಮತ್ತೆಂತಹ ಭಯ ಯಮಲೋಕದಲ್ಲಿ ಕಾದಿರಬಹುದು. ಆಲೋಚಿಸಿದಷ್ಟು ಭಯವೇ ಹೆಚ್ಚಾಯಿತು. ಅತಿಯಾದ ಪಶ್ಚಾತ್ತಾಪದಿಂದ ಮರುಗಿದ. ದೇವರಲ್ಲಿ ಭಕ್ತಿ ಉಳ್ಳವನಾದ. ತನ್ನನ್ನು ತಾನು ನಿಂದಿಸಿಕೊಂಡ. ಯಮದೂತರು ಬಂದು ಮೃತ್ಯುಪಾಶವನ್ನು ಹಾಕಿದ್ದು ದೇವದೂತರು ಬಂದು ಬಿಡಿಸಿದ್ದು ಇದೆಲ್ಲ ಕನಸಾಗಿರಬಹುದೇ ಎಂದು ವಿಚಾರಿಸುತ್ತಿದ್ದ. ಮೃತ್ಯುಪಾಶದಿಂದ ನನ್ನನ್ನು ಬಿಡಿಸಿದ ಆ ದೇವದೂತರು ಈಗ ಎಲ್ಲಿಗೆ ಹೋದರು. ಹೀಗೆ ವಿಚಾರಿಸಿದ. ಸರಿ. ಇನ್ನು ಮುಂದೆ ನಾನು ಮತ್ತೆ ಇಂತಹ




ಪಾಪಗಳಿಗೆ ಬಲಿಯಾಗುವುದಿಲ್ಲ. ನಿರಂತರವಾಗಿ ಶ್ರೀಹರಿಯನ್ನು ಸ್ಮರಿಸುತ್ತೇನೆ. ಎಲ್ಲವನ್ನೂ ಪರಿತ್ಯಜಿಸುತ್ತೇನೆ ಎಂದು ದೃಢವಾಗಿ ಸಂಕಲ್ಪ ಮಾಡಿದ. ಗಂಗಾದ್ವಾರಕ್ಕೆ ಹೊರಟ.

ಗಂಗಾದ್ವಾರದ ತ್ರಿವಿಕ್ರಮದೇವಾಲಯದಲ್ಲಿ ಇದ್ದುಕೊಂಡು ಶ್ರೀಹರಿಯನ್ನು ಅವ್ಯಾಹತವಾಗಿ ಚಿಂತಿಸಿದ. ಧ್ಯಾನಮಾಡಲು ತೊಡಗಿದ. ಆ ಸಂದರ್ಭದಲ್ಲಿ ಈ ಮೊದಲು ಕಾಣಿಸಿಕೊಂಡ ದೇವದೂತರು ಮತ್ತೆ ಪ್ರತ್ಯಕ್ಷರಾದರು. ಅವರನ್ನು ಕಂಡು ಮತ್ತಿಷ್ಟು ಹೆಚ್ಚಾಗಿ ಶ್ರೀಹರಿಯನ್ನು ಸ್ಮರಿಸುತ್ತಾ ಅವರನ್ನು ನಮಸ್ಕರಿಸಿದ. ಗಂಗಾದ್ವಾರದ ಆ ಕ್ಷೇತ್ರದಲ್ಲಿ ತನ್ನ ಕಲೇವರವನ್ನು ಪರಿತ್ಯಜಿಸಿದ. ದೇವದೂತರಂತಹ ನೂತನವಾದ ದೇಹ ಅವನಿಗೆ ಪ್ರಾಪ್ತವಾಯಿತು. ಆ ದೇವದೂತರಿಂದ ಸಹಿತನಾಗಿ ಶ್ರೀಹರಿ ನೆಲೆಸಿರುವ ಲೋಕಕ್ಕೆ ಹೋದ.

ಹೀಗೆ ಎಲ್ಲ ಪಾತಕಗಳನ್ನು ಮಾಡಿ ಇನ್ನೇನು ಮಹಾನರಕದಲ್ಲಿ ಬೀಳಲು ಸಿದ್ಧನಾದ ಅಜಾಮಿಳ ಭಕ್ತಿಪೂರ್ವಕವಾದ ಶ್ರೀಹರಿಯ ಸ್ಮರಣೆಯಿಂದ ಪಾಪಗಳಿಂದ ಪುನೀತನಾಗಿ ಸದ್ಗತಿಯನ್ನು ಪಡೆದ.

ಇದು ಪಾಪಪರಿಹಾರಕವಾದ ಇತಿಹಾಸ. ಅತಿ ಗುಹ್ಯವಾದುದು. ಈ ಇತಿಹಾಸವನ್ನು ಯಾರು ಭಕ್ತಿಯಿಂದ ಕೇಳುತ್ತಾರೋ ಯಾರು ಭಕ್ತಿಯಿಂದ ಹೇಳುತ್ತಾರೋ ಅವರು ನರಕಭಾಜನರಾಗುವುದಿಲ್ಲ. ತಾವು ಎಷ್ಟೇ ಪಾಪಗಳನ್ನು ಮಾಡಿದವರಾಗಿದ್ದರೂ ವಿಷ್ಣುಲೋಕದಲ್ಲಿ ಸ್ವಾವರರಿಂದ ಪೂಜ್ಯರಾಗುತ್ತಾರೆ.

ಸಾಯುವ ಸಮಯದಲ್ಲಿ ಮಗನನ್ನು ಕರೆಯುವ ನೆಪದಿಂದ ಶ್ರೀಹರಿಯ ಸ್ಮರಣೆಯಾಗಿರುವುದರಿಂದ ಅಜಾಮಿಳ ಸದ್ಗತಿಯನ್ನು ಪಡೆದ. ನಿಜವಾಗಿಯೇ ದೇವರನ್ನು ಸ್ಮರಿಸುವವ ಮತ್ತೆಷ್ಟು ಪುನೀತನಾಗುತ್ತಾನೆ.

★★★★★

ಶ್ರೀಹರಿನಾಮ ಸಂಕೀರ್ತನದ ಮಹತ್ವವನ್ನು ಈ ಅಧ್ಯಾಯದಲ್ಲಿ ಹೇಳುತ್ತಾರೆ. ಹರಿನಾಮಸ್ಮರಣ ಎಲ್ಲ ಪಾಪಗಳಿಗೆ ಪ್ರಾಯಶ್ಚಿತ್ತರೂಪವಾಗಿದೆ. ಅಶೇಷದೋಷ ವಿನಾಶಕವಾಗಿದೆ. ಆದ್ದರಿಂದ ಅದನ್ನು ಮಾಡಿದ ಈ ಅಜಾಮಿಳನು ಪ್ರಾಯಶ್ಚಿತ್ತಮಾಡಿಲ್ಲವೆಂದು ಹೇಗೆ ಹೇಳುವಿರಿ? ಎಂದು ವಿಷ್ಣುದೂತರು ಯಮದೂತರಿಗೆ ಕೇಳುತ್ತಾರೆ. ಈ ವಿಷಯವನ್ನು ಶುಕಾಚಾರ್ಯರು ಪರೀಕ್ಷಿತರಿಗೆ ಹೇಳುತ್ತಿದ್ದಾರೆ. ಹೀಗೆಂದು ವೇದವ್ಯಾಸರು ಹೇಳುತ್ತಿದ್ದಾರೆ-

**ಬಾದರಾಯಣ ಉವಾಚ -**

**ಏತತ್ತೇ ಭಗವದ್ದೂತಾ ಯಮದೂತಾಭಿಭಾಷಿತಮ್ ।**
**ಉಪಧಾರ್ಯಾಥ ತಾನ್ ರಾಜನ್ ಪ್ರತ್ಯಾಹುರ್ನಯಕೋವಿದಾಃ ॥೧॥**

**ರಾಜನ್** ಪರೀಕ್ಷಿತನೇ **ನಯಕೋವಿದಾಃ** ಪ್ರಾಯಶ್ಚಿತ್ತಶಾಸ್ತ್ರದ ರಹಸ್ಯವನ್ನು ಚೆನ್ನಾಗಿ ತಿಳಿದ 'ಇದು ಧರ್ಮ-ಇದಲ್ಲ' ಎಂಬ ನೀತಿಯಲ್ಲಿ ಕುಶಲರಾದ 'ನಯೋ ನ್ಯಾಯೇ' 'ಸನ್ ಸುಧೀಃ ಕೋವಿದೋ ಬುಧಃ' ಎಂದು ಅಮರಗಳಿವೆ. **ತೇ ಭಗವದ್ದೂತಾಃ** ಆ ವಿಷ್ಣುದೂತರು **ಏತತ್** ಈ ಯಮದೂತರ **ಅಭಿಭಾಷಿತಂ** ಮಾತನ್ನು **ಉಪಧಾರ್ಯ** ಕೇಳಿ **ಅಥ** ಅದೆಲ್ಲಕ್ಕೂ **ತಾನ್ ಪ್ರತಿ** ಅವರಿಗೆ **ಆಹುಃ** ಉತ್ತರ ಹೇಳಿದರು. ॥೧॥

**ವಿಷ್ಣುದೂತಾ ಊಚುಃ -**

**ಅಹೋ ಕಷ್ಟಂ ಧರ್ಮದೃಶಾಮಧರ್ಮಃ ಸ್ಪೃಶತೇ ಸತಾ(ಭಾ)ಮ್ ।**
**ಯತ್ರಾದಂಡೇಷ್ವಪಾಪೇಷು ದಂಡೋ ಯೈಃ ಧ್ರಿಯತೇ ವೃಥಾ ॥೨॥**

**ಯತ್ರ** ಯಾವ ಧರ್ಮಜ್ಞಾನಿಗಳ ಸಭೆಯಲ್ಲಿ **ಯೈಃ** ಯಾವ ಧರ್ಮ ಜ್ಞಾನಿಗಳಿಂದ **ಅದಂಡೇಷು** ಶಿಕ್ಷೆಗೆ ಅನರ್ಹರಾದ **ಅಪಾಪೇಷು** ಪಾಪಿಗಳಲ್ಲದವರಲ್ಲಿ **ವೃಥಾ** ನಿಷ್ಕಾರಣವಾಗಿ **ದಂಡಃ ಧ್ರಿಯತೇ** ಶಿಕ್ಷೆಯು ವಿಧಿಸಲಾಗುತ್ತಿದೆಯೋ ಆ ಕಾರಣದಿಂದ **ತೇಷಾಂ ಧರ್ಮದೃಶಾಂ** ಆ ಧರ್ಮಜ್ಞಾನಿಗಳಾದ **ಸತಾಂ** ಸಜ್ಜನರೆಂದು ತಿಳಿದವರ **ಸಭಾಂ** ಸಭೆಯನ್ನು **ಅಧರ್ಮಃ ಸ್ಪೃಶತೇ** ಅಧರ್ಮವು ಆಶ್ರಯಿಸುವುದು. **ಅಹೋ** ಆಶ್ಚರ್ಯವು **ಕಷ್ಟಂ** ಅನ್ಯಾಯ. ॥೨॥

**ಪ್ರಜಾನಾಂ ಪಿತರೋ ಯೇ ಚ ಶಾಸ್ತಾರಃ ಸಾಧವಃ ಸಮಾಃ ।**
**ಯದಿ ಸ್ಯಾತ್ ತೇಷು ವೈಷಮ್ಯಂ ಕಂ ಯಾಂತಿ ಶರಣಂ ಪ್ರಜಾಃ ॥೩॥**

**ಯೇ ಸಾಧವಃ** ಯಾವ ಸಾಧುಗಳು **ಪ್ರಜಾನಾಂ ಪಿತರಃ** ತಂದೆಯಂತೆ ಪಾಲಕರೋ **ಶಾಸ್ತಾರಃ** ಶಾಸಕರೋ **ಸಮಾಃ ಚ** ಶಿಕ್ಷಾರ್ಹರಿಗೆ ಮಾತ್ರ ಶಿಕ್ಷೆ ಕೊಡುವವರೋ **ತೇಷು** ಅವರಲ್ಲಿಯೇ **ವೈಷಮ್ಯಂ** ಶಿಕ್ಷಾನರ್ಹರಿಗೂ ಶಿಕ್ಷೆ ವಿಧಿಸುವುದೆಂಬ ವಿಷಮತೆಯು **ಯದಿ ಸ್ಯಾತ್** ಉಂಟಾದಲ್ಲಿ **ಪ್ರಜಾಃ** ಪ್ರಜೆಗಳು **ಕಂ ಶರಣಂ ಯಾಂತಿ** ಯಾರನ್ನು ಮೊರೆ ಹೋಗುವರು. (ರಕ್ಷಕರಾರು ಎಂದು ಭಾವ) ಪಿತರಃ ಪ್ರಜಾಃ ಎಂದದ್ದರಿಂದ 'ಪಿತಾ ವಿಕ್ರಯತೇ ಸುತಂ' 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಮುಂತಾಗಿ ಹೇಳಿದ್ದನ್ನು ಸೂಚಿಸುವರು. ।।೩।।

ನೀವು ಪರತಂತ್ರರು. ಇಲ್ಲಿ ನಿಮ್ಮ ಅಪರಾಧವೇನಿಲ್ಲ. ನಿಮ್ಮ ಒಡೆಯನಿಗೇ ಮೊದಲು ಇವುಗಳ ಜ್ಞಾನವಿಲ್ಲ ಎಂದು ಅನ್ಯಾಪದೇಶದಿಂದ ಉಪದೇಶಿಸುತ್ತಿದ್ದಾರೆ-

**ಯದ್ಯದಾಚರತಿ ಶ್ರೇಯಾನಿತರಸ್ತತ್ತದೀಹತೇ ।**
**ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ।।೪।।**

**ಶ್ರೇಯಾನ್** ಶ್ರೇಷ್ಠರಾದವರು **ಯದ್ಯತ್** ಏನೇನನ್ನು **ಆಚರತಿ** ಮಾಡುವರೋ **ಇತರಃ** ಕನಿಷ್ಠರಾದವರು **ತತ್ತತ್** ಅದದನ್ನೇ **ಈಹತೇ** ಮಾಡಬಯಸುವರು. **ಸಃ** ಶ್ರೇಷ್ಠರು **ಯತ್** ಯಾವ ವಾಕ್ಯವನ್ನು **ಪ್ರಮಾಣಂ ಕುರುತೇ** ಪ್ರಮಾಣವೆಂದು ಒಪ್ಪಿ ನಡೆಯುವರೋ **ಲೋಕಃ** ಜನರು **ತತ್** ಆ ವಾಕ್ಯವನ್ನೇ **ಅನುವರ್ತತೇ** ಅನುಸರಿಸುವರು. ಅಥವಾ **ಯತ್ ಕುರುತೇ** ಯಾವುದನ್ನು ಮಾಡುವರೋ **ತತ್** ಅದನ್ನು **ಪ್ರಮಾಣಂ ಇತಿ** ಪ್ರಮಾಣವೆಂದು ಅನುಸರಿಸುವರು. ಅವರು ಮಾಡಿದ್ದು ಅಧರ್ಮವಾದರೂ ಇತರರು ಅದನ್ನೇ ಧರ್ಮವೆಂದು ಭ್ರಾಂತಿಯಿಂದ ಮಾಡುವರು. ಬಹಳ ಅನ್ಯಾಯವೆಂದು ತಾತ್ಪರ್ಯ. ।।೪।।

ಇಲ್ಲಿ ಪೂರ್ವಾರ್ಧದಲ್ಲಿ ವೀಪ್ಸಾ ಇರುವುದರಿಂದ ಅಂದರೆ 'ಯತ್ ಯತ್ ತತ್ ತತ್' ಎಂದು ಎರಡಾವರ್ತಿ ಹೇಳಿದ್ದರಿಂದ ದೊಡ್ಡವರು ಏನು ಮಾಡುವರೋ ಅದನ್ನೇ ಇತರರು ಅನುಸರಿಸುವರು ಎಂಬ ವ್ಯಾಪ್ತಿಯನ್ನು ತಿಳಿದುಕೊಳ್ಳಬಹುದು. ಆದರೆ ಉತ್ತರಾರ್ಧದಲ್ಲಿ 'ಸಃ ಯತ್ ಲೋಕಃ ತತ್'ಎಂದು ಒಂದೊಂದೇ ಪದವಿರುವುದರಿಂದ ವ್ಯಾಪ್ತಿಜ್ಞಾನವಾಗುವುದು ಹೇಗೆ ಸಾಧ್ಯ? ಎಂದು ಶಂಕಿಸಬಾರದು. ಈ ರೀತಿಯ ಪ್ರಯೋಗದಿಂದಲೂ ಸಾಮಾನ್ಯಮುಖೇನ ವ್ಯಾಪ್ತಿಯನ್ನು ತಿಳಿಯಲು ಸಾಧ್ಯವಿದೆ ಎಂಬುದನ್ನು ಶ್ರೀಮನ್ನ್ಯಾಯಸುಧೆಯಲ್ಲಿ

'ಯತ್ತಚ್ಛಬ್ದಯೋರನನುಗಮಃ ಇತಿ ಚೇತ್' ಎಂದಾರಂಭಿಸಿ 'ಸಾಮಾನ್ಯ ಪರೀಕ್ಷಾಯಾಂ ವಕ್ಷ್ಯಾಮಃ' ಎನ್ನುವವರೆಗಿನ ಗ್ರಂಥದಿಂದ ಸಾಮಾನ್ಯ ಪರಿಕ್ಷೆಯಲ್ಲಿಯೂ 'ನರತ್ವಾದಿಕಮಪ್ಯೇವಂ' ಎಂಬ ವಾಕ್ಯ ವ್ಯಾಖ್ಯಾನಿಸುವಾಗ 'ಏವಂ ಸಂಯೋಗಾದಿವತ್' ಎಂದಾರಂಭಿಸಿ 'ನನು ಗತತ್ವೇಽಪಿ ಗುಣಕರ್ಮವತ್' ಎನ್ನುವವರೆಗೆ ಹೇಳಿದ್ದಾರೆ. ಈಶ್ವರವಾದದಲ್ಲಿ ಗದಾಧರಭಟ್ಟರೂ ಸಹ 'ಯನ್ನಾಮ್ನಾ ಸ್ಥಾಪಯೇತ್ಪಿಂಡಂ ತನ್ನ ಯದ್ ಬ್ರಹ್ಮ ಶಾಶ್ವತಮ್' ಎಂಬ ವಾಕ್ಯವನ್ನು ಉದಾಹರಿಸಿ ಒಂದೇ ಪದವಿದ್ದರೂ ಸಾರ್ವತ್ರಿಕ ವ್ಯವಹಾರ ಉಪಯೋಗಿಯಾಗುವುದೆಂದು ವ್ಯಾಖ್ಯಾನಿಸಿರುವರು. ಸುಧೆಯಲ್ಲಿಯೂ 'ಯೋ ಯಸ್ಯ ಸುತಃ ಸಃ ತದೀಯಂ ಧನಮರ್ಹತಿ' ಎಂಬ ಉದಾಹರಣೆ ಇತ್ತಿರುವರು. ಹಾಗಾದರೆ 'ತೇ ತೇ ಪಿಬಂತಿ' ಎಂಬ ಋಗ್ಭಾಷ್ಯದಲ್ಲಿ 'ತೇ ಷಷ್ಠ್ಯಂತೋಽನುದಾತ್ತಃ ಸ್ಯಾದುದಾತ್ತೋ ಬಹುವಾಚಕಃ । ಆವೃತಸ್ತು' ಎಂದು ಹೇಳಿದ್ದೇಕೇ ಎಂದರೆ ಅಲ್ಲಿ ಹಿಂದೆ 'ಯೇ ಯೇ' ಎಂದು ಎರಡು ಸಲ ಹೇಳಿದ್ದರಿಂದ ಮುಂದೆಯೂ 'ತೇ' ಎಂಬ ಒಂದಕ್ಕೆ ಆವೃತ್ತಿ ಮಾಡಬೇಕೆಂದು ಅಭಿಪ್ರಾಯವೇ ಹೊರತು ಒಂದೊಂದೇ ಇದ್ದರೇ ವ್ಯಾಪ್ತಿ ತಿಳಿಸಲಾರವೆಂಬ ಅಭಿಪ್ರಾಯದಿಂದಲ್ಲ ಎಂದು ಭಾವ ಹೇಳಬಹುದು. 'ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ । ತಸ್ಯ ತಸ್ಯಾಽಚಲಾಂ ಶ್ರದ್ಧಾಂ ತಾಮೇವ ವಿಧಧಾಮ್ಯಹಮ್' ಮುಂತಾದ ಸ್ಥಳದಲ್ಲಿ ಎರಡನೇ ತತ್ ಶಬ್ದವನ್ನು (ತಾಂ) ಅಧ್ಯಾಹಾರ ಮಾಡಿಯಾದರೂ ಅನ್ವಯ ಮಾಡಬೇಕು. ಆದ್ದರಿಂದ ವ್ಯಭಿಚಾರವಿಲ್ಲ ಎಂದರ್ಥ.॥೪॥

ವಿಶ್ವಾಸಘಾತವಾದ್ದರಿಂದಲೂ ಮಹಾಕಷ್ಟವೆಂದು ಹೇಳುವರು-

**ಯಸ್ಯಾಂಕೇ ಶಿರ ಆಧಾಯ ಲೋಕಃ ಸ್ವಪಿತಿ ನಿರ್ವೃತಃ ।**
**ಸ್ವಯಂ ಧರ್ಮಮಧರ್ಮಂ ವಾ ನ ಹಿ ವೇದ ಯಥಾ ಪಶುಃ ॥೫॥**

**ಸ್ವಯಂ** ಮತ್ತೊಬ್ಬರ ಉಪದೇಶವಿಲ್ಲದೇ **ಪಶುಃ ಯಥಾ** ಪೂರ್ವ-ಪಶ್ಚಿಮ ದಿಕ್ಕೆಂದು ತಿಳಿಯದಿರುವ ಪಶುವಿನಂತೆ **ಧರ್ಮಮಧರ್ಮಂ** ಧರ್ಮಾಧರ್ಮವನ್ನು **ಯಃ ಲೋಕಃ** ಯಾವ ಜನ **ನ ಹಿ ವೇದ** ತಿಳಿದಿಲ್ಲವೋ **ಸ ಲೋಕಃ** ಆ ಜನ **ಯಸ್ಯ ಅಂಕೇ** ಶ್ರೇಷ್ಠನಾದ ಯಾವನ ತೊಡೆಯಲ್ಲಿ **ಶಿರಃ** ತಲೆಯನ್ನು **ಆಧಾಯ** ಇಟ್ಟು **ನಿರ್ವೃತಃ** ನಿಶ್ಚಿಂತನಾಗಿ (ಸುಖವಾಗಿ) **ಸ್ವಪಿತಿ** ಮಲಗಿರುವನೋ

**ಸ ಕಥಂ ಹ್ಯರ್ಪಿತಾಽತ್ಮಾನಂ ಕೃತಮೈತ್ರಮಚೇತನಮ್ ।**
**ವಿಸ್ರಂಭಣೀಯೋ ಭೂತಾನಾಂ ಸಘೃಣೋ ದ್ರೋಗ್ಧುಮರ್ಹತಿ ॥೬॥**

**ಭೂತಾನಾಂ** ಪ್ರಾಣಿಗಳಿಗೆ **ವಿಸ್ರಂಭಣೀಯಃ** ವಿಶ್ವಾಸಾರ್ಹನಾದ **ಸಘೃಣಃ** ದಯಾವಂತನಾದ ಪರರ ಕ್ಲೇಶವನ್ನು ನೋಡಿ ಮನ ಕರಗುವ **ಸಃ** ಆ ಶ್ರೇಷ್ಠನು **ಅರ್ಪಿತಾಽತ್ಮಾನಾಂ** ತನ್ನಲ್ಲಿಯೇ ಎಲ್ಲವನ್ನು ಒಪ್ಪಿಸಿರುವ **ಕೃತಮೈತ್ರಂ** ತನ್ನನ್ನೇ ಸ್ನೇಹಿತನೆಂದು ನಂಬಿರುವ **ಅಚೇತನಂ** ಅಜ್ಞಾನಿಯನ್ನು **ಕಥಂ** ಹೇಗೆ ತಾನೇ **ದ್ರೋಗ್ಧುಂ** ಮೋಸಗೊಳಿಸಲು **ಅರ್ಹತಿ** ಯೋಗ್ಯನಾಗುವನು.

ಧರ್ಮದ ವಿಷಯದಲ್ಲಿ ಇವನೇ ಪ್ರಮಾಣವೆಂದು ನಂಬಿರುವ ಅಜ್ಞಾನಿಗಳಿಗೆ ತಾನು ಅಧರ್ಮ ಮಾಡಿ ಅದೇ ಧರ್ಮವೆಂದು ಮೋಸ ಮಾಡುವುದು ಮಹಾ ಅನ್ಯಾಯವೆಂದು ತಾತ್ಪರ್ಯ. ಯಾರು ನಂಬಿದವರನ್ನು ದ್ರೋಹ ಮಾಡುವರೋ ಅವರು **ಸಘೃಣಃ ಕಥಂ** ಮನ ಕರಿಗಿದವನು ಹೇಗಾದಾನು? ಎಂದು ಅನ್ವಯ.

'ತಂ ದ್ರೋಗ್ಧುಂ' ಎಂದು ಚತುರ್ಥಿ ಇಲ್ಲದೇ ಹೇಳಿದ್ದು 'ಯಂ ಪ್ರತಿ' ಎಂದು ಹೇಳಿದ ಅಭಿಪ್ರಾಯದಿಂದ. ಅನಭಿಪ್ರೇರಣೆಯಿಂದಲ್ಲ ಎಂದು ತಿಳಿಯಬೇಕು.

ಸಹಸಾ 'ಅಕೃತ ನಿರ್ವೇಶ' ಎಂದು ಹೇಳಿದ್ದಕ್ಕೆ ಉತ್ತರಿಸುವರು-

**ಅಯಂ ಹಿ ಕೃತನಿರ್ವೇಶೋ ಜನ್ಮಕೋಟ್ಯಂಹಸಾಮಪಿ ।**
**ಯದ್ವ್ಯಾಜಹಾರ ವಿವಶೋ ನಾಮ ಸ್ವಸ್ತ್ಯಯನಂ ಹರೇಃ ॥೭॥**

**ಅಯಂ** ಈ ಅಜಾಮಿಳನು **ಯತ್** ಯಾವ ಕಾರಣ **ವಿವಶಃ ಸನ್** ಭಕ್ತಿ ಪರವಶನಾಗಿ **ಸ್ವಸ್ತ್ಯಯನಂ** ಮೋಕ್ಷಕ್ಕೂ ಸಾಧನವಾದ **ಹರೇಃ ನಾಮ** ಶ್ರೀಹರಿಯ ಹೆಸರನ್ನು **ವ್ಯಾಜಹಾರ** ಉಚ್ಚರಿಸಿದನೋ **ತತ್** ಆ ಕಾರಣದಿಂದ **ಜನ್ಮಕೋಟ್ಯಂಹಸಾಮಪಿ** ಈ ಜನ್ಮ ಮಾತ್ರವಲ್ಲ ಅನೇಕ ಕೋಟಿ ಜನ್ಮಗಳಲ್ಲಿ ಸಂಪಾದಿಸಿದ ಪಾಪಗಳಿಗೂ **ಕೃತನಿರ್ವೇಶಃ** ಪ್ರಾಯಶ್ಚಿತ್ತ ಮಾಡಿಕೊಂಡಿರುವನು. **ಹಿ** ಯಮದೂತರನ್ನು ನೋಡಿ ಮಗನ ಹೆಸರಾಗಿಟ್ಟಿದ್ದ ನಾರಾಯಣ ನಾಮವನ್ನು ಸ್ಮರಿಸಿ ಈ ನಾಮಕ್ಕೆ ಶ್ರೀಹರಿಯೇ ಮುಖ್ಯಾರ್ಥವೆಂದು ಹಿಂದಿನ ಪುಣ್ಯದಿಂದ ಕೂಡಲೇ ಜ್ಞಾನ ಬಂದು ಭಕ್ತಿಯು ಉತ್ಪನ್ನವಾಗಿ ಅದಕ್ಕೆ ವಶನಾಗಿರುವನು. ಏಕೆಂದರೆ 'ಅಭಕ್ತ್ಯೋದಾಹೃತಂ ನೈವ ಫಲದಾತೃ ಭವಿಷ್ಯತಿ' ಭಕ್ತಿಯಿಲ್ಲದೇ ಉಚ್ಚರಿಸಿದ್ದು ಫಲದಾಯಕವಲ್ಲ. 'ಸ್ವಸ್ತ್ಯಯನಂ'

ಎಂದು ಹೇಳಿದ್ದರಿಂದ ಶ್ರೀಹರಿಯ ಹೆಸರು ಪ್ರಾಯಶ್ಚಿತ್ತವಷ್ಟೇ ಅಲ್ಲ ಮೋಕ್ಷಕ್ಕೂ ಕಾರಣವೆಂದು ತಿಳಿಸಿರುವರು. ಇದರಿಂದ ಇವನು ಮೋಕ್ಷಸಾಧನವನ್ನೂ ಮಾಡಿಕೊಂಡಿರುವನು ಎಂದು ಹೇಳಿದಂತಾಯಿತು.

ಆಪನ್ನಃ ಸಂಸೃತಿಂ ಘೋರಾಂ ಯನ್ನಾಮ ವಿವಶೋ ಗೃಣನ್ ।
ತತಃ ಸದ್ಯೋ ವಿಮುಚ್ಯೇತ ಯಂ ಬಿಭೇತಿ ಸ್ವಯಂ ಭವಃ' ॥

ಎಂಬ ಪ್ರಮಾಣವು ಈ ವಿಷಯವನ್ನೇ ಸಮರ್ಥಿಸುತ್ತದೆ.

ಹೇಳಿದ್ದನ್ನು ದೃಢಪಡಿಸಲು ಸ್ವಲ್ಪ ಅನುವಾದ ಮಾಡಿ ನಾಮ ಯಾವುದು? ಎಂದು ತಿಳಿಯದಿರುವ ಕಾರಣ ವಿವರಿಸುವರು.

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪೋಯಜ್ಞಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಮ್ ॥

ಎಂದು ಸ್ಕಾಂದಪುರಾಣದಲ್ಲಿ ಇರುವುದರಿಂದ ಶ್ರೀಹರಿಯ ನಾಮ-ಕರ್ಮಗಳು ಷಾಡ್ಗುಣ್ಯಕರವಾಗಿರಲಿ. ಸ್ವತಂತ್ರವಾಗಿ ಪಾಪನಿವರ್ತಕ ಹೇಗೆ? ಎಂದರೆ ಹೇಳುವರು.

**ಏತೇನೈವ ಹ್ಯಘೋ (ನಾಸ್ಯ)ನೋಽಸ್ಯ ಕೃತಂ ಸ್ಯಾದಘನಿಷ್ಕೃತಮ್ ।**
**ಯದಾ ನಾರಾಯಣ ಇತಿ ಜಗಾದ ಚತುರಕ್ಷರಮ್ ॥೮॥**

**ಅಯಂ** ಈ ಅಜಾಮಿಳನು **ಚತುರಕ್ಷರಂ** ನಾಲ್ಕು ಅಕ್ಷರಗಳುಳ್ಳ **ನಾರಾಯಣ ಇತಿ** ನಾರಾಯಣ ಎಂಬ **ಯತ್** ಯಾವ ಶ್ರೀಹರಿಯ ಹೆಸರನ್ನು **ಆಜಗಾದ** ಭಕ್ತಿಯಿಂದ ಉಚ್ಚರಿಸಿದನೋ **ಏತೇನ ಏವ** ಪ್ರಧಾನವಾದ ಭಗವನ್ನಾಮೋಚ್ಚಾರದಿಂದಲೇ **ಅಸ್ಯ** ಇವನ **ಅಘನಿಷ್ಕೃತಂ** ಪಾಪ ಪ್ರಾಯಶ್ಚಿತ್ತವು **ಕೃತಂ ಸ್ಯಾತ್** ಮಾಡಿದಂತಾಯಿತು **ಹಿ** ಆ ಕಾರಣದಿಂದ ಇವನಿಗೆ **ಅಘಃ** ಪಾಪವು **ನೋ** ಇಲ್ಲ.

ಅಘಶಬ್ದವು ಸಕಾರಾಂತ ನಪುಂಸಕಲಿಂಗ. ಮನಸ್ ಶಬ್ದದಂತೆ. ಅಥವಾ **ಅಘಃ ನಾ** ಪಾಪಿಯಾದ ಅಜಾಮಿಳನೆಂಬ ಪುರುಷನು ಶ್ರೀಹರಿಯ ನಾಮ ಉಚ್ಚರಿಸಿದನೋ ಆದ್ದರಿಂದ ಪಾಪಗಳಿಗೆ ಪ್ರಾಯಶ್ಚಿತ್ತವಾಯಿತು. ಎಂದಾದರೂ ಅರ್ಥ. ಪಾಪಿಯಲ್ಲದವನನ್ನು ದಂಡಕ್ಕೆ ಗುರಿ ಪಡಿಸುವಿರೇಕೆಂದು ನಮ್ಮ ಆಕ್ರೋಶವೆಂದು ಹೇಳಿದಂತಾಯಿತು. ॥೮॥

ಹರಿನಾಮಕೀರ್ತನೆಯು ಕೇವಲ ದಾಸೀಸಂಗದಿಂದ ಬಂದ ಪಾಪವನ್ನಷ್ಟೇ ಪರಿಹರಿಸುವುದಿಲ್ಲ ಕಿಂತು ಎಲ್ಲ ಪಾಪಗಳನ್ನು ಪರಿಹರಿಸುವುದು ಎಂದು ಹೇಳುತ್ತಾರೆ-

**ಸ್ತೇನಃ ಸುರಾಪೋ ಮಿತ್ರಧ್ರುಗ್ ಬ್ರಹ್ಮಹಾ ಗುರುತಲ್ಪಗಃ ।**
**ಸ್ತ್ರೀರಾಜಪಿತೃಗೋಹಂತಾ ಯೇ ಚ ಪಾತಕಿನೋಽಪರೇ ॥೯॥**

**ಸರ್ವೇಷಾಮಪ್ಯಘವತಾಮಿದಮೇವ ಸುನಿಷ್ಕೃತಮ್ ।**
**ನಾಮವ್ಯಾಹರಣಂ ವಿಷ್ಣೋಃ ಯತಸ್ತದ್ವಿಷಯಾ ಮತಿಃ ॥೧೦॥**

**ಸ್ತೇನಃ** ಕಳ್ಳ **ಸುರಾಪಃ** ಮದ್ಯಪಾನ ಮಾಡುವವ **ಮಿತ್ರಧ್ರುಕ್** ಸ್ನೇಹಿತನಿಗೆ ದ್ರೋಹ ಮಾಡುವವ **ಬ್ರಹ್ಮಹಾ** ಬ್ರಾಹ್ಮಣ ಹತ್ಯೆ ಮಾಡಿದವ **ಗುರುತಲ್ಪಗಃ** ಗುರುಪತ್ನೀ ಗಮನ ಮಾಡಿದವ 'ತಲ್ಪಮಟ್ಟಕಲತ್ರಯೋಃ' ಎಂದು ವಿಶ್ವ. **ಸ್ತ್ರೀರಾಜಪಿತೃಗೋಹಂತಾ** ಹೆಣ್ಣುಹಂತಕ ರಾಜಹಂತಕ ಪಿತೃಹಂತಕ ಗೋಹಂತಕ **ಅಪರೇ** ಇನ್ನಿತರ **ಯೇ ಪಾತಕಿನಃ** ಪಾಪಿಗಳುಂಟೋ **ಸರ್ವೇಷಾಂ ಅಘವತಾಂ** ಎಲ್ಲ ಪಾಪಿಗಳಿಗೂ **ಯತಃ** ಯಾವ ನಾಮದ ಉಚ್ಚಾರಣೆಯಿಂದ **ತದ್ವಿಷಯಾ ಮತಿಃ** ಶ್ರೀಹರಿವಿಷಯಕವಾದ ಬುದ್ಧಿಯು **ಭವತಿ** ಉಂಟಾಗುವುದೋ ಅಂತಹ **ವಿಷ್ಣೋಃ** ಶ್ರೀಹರಿಯ **ನಾಮವ್ಯಾಹರಣಂ** ನಾಮೋಚ್ಚಾರಣೆ ಏನಿದೆಯೋ **ಇದಂ ಏವ** ಈ ನಾಮೋಚ್ಚಾರಣವೇ **ಸುನಿಷ್ಕೃತಂ** ಎಲ್ಲ ಪಾಪಗಳನ್ನು ಪರಿಹರಿಸುವ ಪ್ರಾಯಶ್ಚಿತ್ತವಾಗಿದೆ.

**ಯತಃ** ಯಾವ ಉಚ್ಚಾರಣೆಯಿಂದ **ವಿಷ್ಣೋಃ** ಶ್ರೀಹರಿಗೆ **ತದ್ವಿಷಯಾ** 'ಇವನು ನನ್ನವನು ಇವನನ್ನು ನಾನು ರಕ್ಷಿಸಬೇಕು' ಎಂದು ನಾಮೋಚ್ಚಾರಕ ಪುರುಷವಿಷಯಕವಾದ **ಮತಿಃ** ಮನಸ್ಸು ಬರುವುದೋ ಎಂಬ ಅರ್ಥವನ್ನು ಚಟ್ಟಿ ಆಚಾರ್ಯರು ಮಾಡಿರುವರು.

**ಯತಃ** ನಾಮಸಂಕೀರ್ತನದಿಂದ **ತದ್ವಿಷಯಾ** ಭಗವದ್ಗುಣ ವಿಷಯಕವಾದ **ಮತಿಃ** ಬುದ್ಧಿಯು ವ್ಯಕ್ತವಾಗುವುದು. ಇದರಿಂದ ಇವನು ಮಾಡಿದ ನಾಮಸ್ಮರಣ ಭಕ್ತಿಯನ್ನು ವ್ಯಕ್ತಗೊಳಿಸುವ ಮೂಲಕ ಸುಖವಾಗಿ ಜ್ಞಾನಕಾರಣವಾಗಿ ಮುಕ್ತಿಗೆ ಕಾರಣವಾಗುವುದು ಎಂದು ಸೂಚಿಸುವರು. ಇದನ್ನೇ ವಿಷ್ಣುರಹಸ್ಯದಲ್ಲಿ ಹೀಗೆ ಹೇಳಿದ್ದಾರೆ-

ಸತ್ಯಮೇವೋದಿತಂ ಬ್ರಹ್ಮನ್ ಲೋಹಂ ಯಾತಿ ಸುವರ್ಣತಾಮ್ ।
ಕೇನಾಪ್ಯುಪಾಯೇನಾಽಥಾಪಿ ಖರ್ಪರಂ ಹೇಮ ನೋ ಭವೇತ್ ।
ಅಜಾಮಿಲಾದಯೋಽನ್ಯೇಽಪಿ ಪ್ರಾಯೋ ಯೇ ಪಾಪಕರ್ಮಿಣಃ ॥

ಸ್ವಭಾವೇನೈವ ತೇ ಭಕ್ತಾಃ ಪ್ರಾರಬ್ಧಾದ್ದುಷ್ಟಚೇತಸಃ ।
ಅಂತರ್ಭಕ್ತ್ಯೈವ ತನ್ನಾಮ ಜಗೃಹುರ್ನಾನ್ಯಥಾ ಕ್ವಚಿತ್ ॥

ದ್ವೇಷಿಣೋಽಪಿ ಯದಾ ಮುಕ್ತಿಸ್ತರ್ಹಿ ಭಕ್ತಿಂ ಕರೋತಿ ಕಃ ।
ರಮಾಬ್ರಹ್ಮಾದಯಃ ಕಿನ್ನು ಮೂಢಾಸ್ತದ್ಭಕ್ತಿಕಾರಿಣಃ ॥

ಹೇ ಬ್ರಹ್ಮಜ್ಞಾನಿಗಳೇ ! ನೀವು ಹೇಳಿದ್ದು ನಿಜ. ಲೋಹವೇ ಯಾವುದಾದರೂ ಉಪಾಯದಿಂದ ಚಿನ್ನವಾಗಬಲ್ಲದು. ಆದರೆ ಏನು ಮಾಡಿದರೂ ಪರಟೆ ಚಿನ್ನವಾಗಲಾರದು. ಹೇಗೋ ಹಾಗೆ ಅಜಾಮಿಲ ಮುಂತಾದ ಪಾಪ ಕರ್ಮಿಗಳೇನಿರುವರೋ ಅವರು ಸ್ವಾಭಾವಿಕವಾಗಿ ಭಕ್ತರೇ. ಪ್ರಾರಬ್ಧಕರ್ಮದಿಂದ ದುಷ್ಟಬುದ್ಧಿಯುಳ್ಳವರು. ಒಳಗಿನ ಭಕ್ತಿಯಿಂದಲೇ ಭಗವನ್ನಾಮ ಸ್ವೀಕರಿಸಿದರು. ಹೊರತು ಬೇರೆ ರೀತಿಯಿಂದಲ್ಲ. ದ್ವೇಷಿಗಳಿಗೂ ಮುಕ್ತಿಯಾಗುವುದಾದರೆ ಭಕ್ತಿಯನ್ನು ಯಾರು ಮಾಡುವರು ? ಭಗವದ್ಭಕ್ತಿ ಮಾಡುವ ರಮಾ-ಬ್ರಹ್ಮಾದಿಗಳೇನು ಮೂಢರೇ? ವಿಷ್ಣುರಹಸ್ಯದಲ್ಲಿ ಹೀಗೆ ಹೇಳಿದೆ. ಸ್ವರೂಪ ಯೋಗ್ಯತೆ ಚೆನ್ನಾಗಿದ್ದರೆ ಶುದ್ಧನಾಗುವನೆಂದು ಭಾವ. ॥೧೦॥

ಭಕ್ತಿಯಿಂದ ಮಾಡುವ ಭಗವನ್ನಾಮೋಚ್ಚಾರಣವೇ ಶ್ರೇಷ್ಠವಾದ ಪ್ರಾಯಶ್ಚಿತ್ತವೆಂದು ಉಪಪಾದಿಸುತ್ತಾರೆ. ಹಾಗಾದರೆ ನಿಂದಿತವಾದ ತಪಸ್ಸು ಮೊದಲಾದವುಗಳನ್ನು ಪೂಜ್ಯರಾದ ಮನ್ವಾದಿಗಳು ಮಾಡಬೇಕೆಂದು . ಯಾಕೆ ಹೇಳಿದರು ಎಂದರೆ ? ಅಂತತೋ ಗತ್ವಾ ಭಗವತ್ಕೀರ್ತನವೇ ದುಃಖನಾಶಕವಾದ್ದರಿಂದ ಅದನ್ನು ಮಾಡಲೇಬೇಕು. ಹೀಗಾಗಿ ತಪಸ್ಸು ಮೊದಲಾದವುಗಳಿಗಿಂತಲೂ ಶ್ರೇಷ್ಠವೆಂದು ಹೇಳುವರು-

ನ ನಿಷ್ಕೃತೈರುದಿತೈರ್ಬ್ರಹ್ಮವಾದಿಭಿಸ್ತಥಾ
ವಿಶುದ್ಧ್ಯತ್ಯಘವಾನ್ ವ್ರತಾದಿಭಿಃ ।
ಯಥಾ ಹರೇರ್ನಾಮಪದೈರುದಾಹೃತೈ-
ಸ್ತದುತ್ತಮಶ್ಲೋಕಗುಣೋಪಲಂಭಕಮ್ ॥೧೧॥

**ಅಘವಾನ್** ಪಾಪಿಯು **ಯಥಾ** ಹೇಗೆ **ಉದಾಹೃತೈಃ** ಭಕ್ತಿಯಿಂದ ಉಚ್ಚರಿಸಿದ **ಹರೇಃ** ಶ್ರೀಹರಿಯ **ನಾಮಪದೈಃ** ನಾಮಗಳಿಂದ **ವಿಶುದ್ಧ್ಯತಿ** ಸಂಪೂರ್ಣ ಶುದ್ಧನಾಗುವನೋ **ತಥಾ** ಹಾಗೆ **ಬ್ರಹ್ಮವಾದಿಭಿಃ** ವೇದವಾದಿಗಳಿಂದ **ಉದಿತೈಃ** ಹೇಳಲ್ಪಟ್ಟ **ವ್ರತಾದಿಭಿಃ** ಕೃಚ್ಛ್ರಚಾಂದ್ರಾಯಣ ಮೊದಲಾದ ವ್ರತಗಳೆಂಬ **ನಿಷ್ಕೃತೈಃ** ಪ್ರಾಯಶ್ಚಿತ್ತಗಳಿಂದ **ನ ವಿಶುದ್ಧ್ಯತಿ** ಶುದ್ಧನಾಗುವದಿಲ್ಲ.**ತತ್** ಶ್ರೀಹರಿನಾಮೋಚ್ಚಾರಣೆಯು **ಉತ್ತಮಶ್ಲೋಕ-ಗುಣೋಪಲಂಭಕಂ** ಉತ್ತಮವಾದ ಕೀರ್ತಿಯಿಂದ ಸಂಪನ್ನನಾದ ಬ್ರಹ್ಮಾದಿಗಳಿಂದ ಸ್ತುತ್ಯನಾದ ಪರಮಾತ್ಮನ ಜ್ಞಾನಾನಂದಾದಿಗುಣಗಳನ್ನು ಆವನ ಪ್ರತಿಬಿಂಬರಾದ ಜೀವರ ಸ್ಮರಣೆಗೆ ತಂದು ಕೊಡುವುದು.

ಕೃಚ್ಛ್ರಾದಿಗಳಂತೆ ಕೇವಲ ಪಾಪನಾಶಕವಷ್ಟೇ ಅಲ್ಲ ಎಂದು ಈ ಮಾತಿನಿಂದ ತಿಳಿದು ಬರುತ್ತದೆ.

**ನಾಮಭಿಃ** ಎಂದು ಹೇಳದೆ **ನಾಮಪದೈಃ** ಎಂದು ಹೇಳಿದ್ದರಿಂದ ವಾಕ್ಯವಾಗಲು ಬೇಕಾದ 'ನಮಸ್ಕರಿಸುತ್ತೇನೆ' ಮುಂತಾದ ಕ್ರಿಯಾಪದಗಳಿಲ್ಲದಿದ್ದರೂ ಎಲ್ಲ ಪಾಪ ನಿವರ್ತಕವಾದ ಶ್ರೀಹರಿ ನಾಮ ಮಹಿಮೆಯು ಅತ್ಯಾಶ್ಚರ್ಯಕರವೆಂದು ಹೇಳಿದಂತಾಯಿತು. ॥೧೧॥

ಶ್ರೀಹರಿಯ ನಾಮ ಸಂಕೀರ್ತನದಿಂದಲೇ ಪಾಪ ನಿರ್ಮೂಲನವೇ ಹೊರತು ತಪಸ್ಸು ಮೊದಲಾದವುಗಳಿಂದಲ್ಲವೆಂಬುದನ್ನು ಉಪಪಾದಿಸುತ್ತಾರೆ-

**ನೈಕಾಂತಿಕಂ ತದ್ಧಿ ಕೃತೇಽಪಿ ನಿಷ್ಕೃತೇ**
**ಮನಃ ಪುನರ್ಧಾವತಿ ಚೇದಸತ್ಪಥೇ ।**
**ತತ್ಕರ್ಮನಿರ್ಹಾರಮಭೀಪ್ಸತಾಂ ಹರೇ-**
**ರ್ಗುಣಾನುವಾದಃ ಖಲು ಸತ್ವಭಾವನಃ** ॥೧೨॥

**ಯಸ್ಮಿನ್** ಯಾವ **ನಿಷ್ಕೃತೇ** ಪ್ರಾಯಶ್ಚಿತ್ತವನ್ನು **ಕೃತೇಽಪಿ** ಮಾಡಿದರೂ **ಮನಃ** ಮನಸ್ಸು **ಪುನಃ** ಮತ್ತೆ **ಅಸತ್ಪಥೇ** ಪಾಪಮಾರ್ಗದಲ್ಲಿ **ಧಾವತಿ ಚೇತ್** ಹೋಗುವುದಾದರೆ **ತತ್** ಆ ಪ್ರಾಯಶ್ಚಿತ್ತವು **ಐಕಾಂತಿಕಂ** ತಪ್ಪದೇ ಸಂಪೂರ್ಣ ಪಾಪ ಶೋಧಕವು **ನ ಹಿ** ಅಲ್ಲ.**ತತ್** ಆದ್ದರಿಂದ **ಕರ್ಮನಿರ್ಹಾರಂ** ಕರ್ಮಗಳ ಸಂಪೂರ್ಣ ನಾಶವನ್ನು **ಅಭೀಪ್ಸತಾಂ** ಅಪೇಕ್ಷಿಸುವ ಜೀವರಿಗೆ **ಹರೇಃ ಗುಣಾನುವಾದಃ** ಶ್ರೀಹರಿಯ ನಾಮಪ್ರವೃತ್ತಿನಿಮಿತ್ತಗಳಾದ ಗುಣಗಳ ಅನುಸಂಧಾನಪೂರ್ವಕ ಉಚ್ಚಾರಣವು

ಮಾತ್ರವೇ **ಏಕಾಂತಿಕಃ** ನಿಯತವಾಗಿ ಪಾಪ ಪರಿಹಾರಕವು **ಸತ್ವಭಾವನಃ** ಅಂತಃಕರಣ ಶುದ್ಧಿಗೆ ಕಾರಣವಾಗುತ್ತದೆ.

ಹೀಗೆ ಹೇಳಿದ್ದರಿಂದ ಇದರಿಂದಲೂ ಮನಸ್ಸಿನ ದೋಷವು ನಾಶವಾಗದಿದ್ದಲ್ಲಿ ಮಿಕ್ಕ ಪ್ರಾಯಶ್ಚಿತ್ತಕ್ಕಿಂತ ಇದಕ್ಕೇನು ವೈಶಿಷ್ಟ್ಯ ಎಂಬ ಶಂಕೆಗೆ ಅವಕಾಶವಿಲ್ಲ. ಮನಸ್ಸು ಶುದ್ಧವಾಗುವುದರಿಂದ ಮತ್ತೆ ಪಾಪ ಮಾರ್ಗಕ್ಕೆ ಹೋಗಲಾರದು ಕಾರಣ ಇದೇ ಉತ್ತಮ ಪ್ರಾಯಶ್ಚಿತ್ತವೆಂದರ್ಥ. 'ಸತ್ವಭಾವನಃ' ಎಂಬಲ್ಲಿ ಸಃ ತು ಅಭಾವನಃ ಎಂದು ವಿಭಾವನಃ ಭಾವಯತಿ ಉತ್ಪಾದಯತೀತಿ ಭಾವನಃ ನ ಭಾವನಃ ಅಭಾವನಃ ಅಪುನರ್ಭವದಃ ಮತ್ತೆ ಸಂಸಾರ ಬರದಂತೆ ಮಾಡುವುದು ಎಂದರ್ಥ ಮಾಡಿರುವರು. ||೧೨||

ಭಗವನ್ನಾಮೋಚ್ಚಾರಣ ಮಾತ್ರವೇ ಪಾಪ ನಿವರ್ತಕವಲ್ಲ ಭಕ್ತಿ ಪೂರ್ವಕ ಮಾಡಿದರೆ ಅದು ಪಾಪ ನಿವರ್ತಕ ಅಜಾಮಿಳನು ಹಾಗೆ ಮಾಡಿಲ್ಲ ಎಂಬ ಶಂಕೆಯನ್ನು ಪರಿಹರಿಸುತ್ತಾರೆ-

**ಅಥೈನಂ ಮಾಽಪನಯತ ಕೃತಾಶೇಷಾಘನಿಷ್ಕೃತಮ್ ।**
**ಯದಸೌ ಭಗವನ್ನಾಮ ಮ್ರಿಯಮಾಣಃ ಸಮಗ್ರಹೀತ್ ||೧೩||**

**ಯತ್** ಯಾವ ಕಾರಣ **ಅಸೌ** ಅಜಾಮಿಳನು **ಮ್ರಿಯಮಾಣಃ** ಸಾಯಲಿದ್ದವನು **ಭಗವನ್ನಾಮ** ಶ್ರೀಹರಿಯ ನಾಮವನ್ನು **ಸಮಗ್ರಹೀತ್** ಭಕ್ತಿಯಿಂದ ಉಚ್ಚರಿಸಿದನೋ **ಅಥ** ಆ ಕಾರಣದಿಂದ **ಕೃತಾಶೇಷಾಘನಿಷ್ಕೃತಂ** ಎಲ್ಲ ಪಾಪಗಳಿಗೆ ಪ್ರಾಯಶ್ಚಿತ್ತ ಮಾಡಿಕೊಂಡಿರುವ **ಏನಂ** ಇವನನ್ನು **ಮಾ ಅಪನಯತ** ಆ ನರಕ ಮಾರ್ಗದಿಂದ ಕರೆದುಕೊಂಡು ಹೋಗಬೇಡಿರಿ.

'ಮ್ರಿಯಮಾಣಃ' ಎಂದು ಹೇಳಿದ್ದರಿಂದ ಅಂತ್ಯಕಾಲದಲ್ಲಿ ಹರಿಸ್ಮರಣೆ ಜನ್ಮದ ಪರಮಲಾಭವೆಂದು ಸೂಚಿಸಿರುವರು.

ಏತಾವಾನ್ ಸಾಂಖ್ಯಯೋಗಾಭ್ಯಾಂ ಸ್ವಧರ್ಮಪರಿನಿಷ್ಠಯಾ ।
ಜನ್ಮಲಾಭಃ ಪರಃ ಪುಂಸಾಮಂತೇ ನಾರಾಯಣಸ್ಮೃತಿಃ ||

ಎಂದಿದೆ. 'ಸಂತತಂ ಚಿಂತಯೇಽನಂತಮಂತಕಾಲೇ ವಿಶೇಷತಃ' ಎಂದೂ ಇದೆ.

 

ಸಮಗ್ರಹೀತ್ ಸ್ವೀಕರಿಸಿದನು ಇಲ್ಲಿ ಸಂ ಶಬ್ದದಿಂದ ರಮಾರಮಣನ ಭಕ್ತಿಯುಕ್ತತೆಯನ್ನು ತಿಳಿಸುವರು ಮತ್ತು ನಾಲ್ಕು ಅಕ್ಷರಗಳ ಮಧ್ಯದಲ್ಲಿ ನ್ಯೂನತೆ ಇಲ್ಲವೆಂದೂ ತಿಳಿಸುವರು. ಇದರಿಂದ ಇವನು ಮಾಡಿದ ಪಾಪಗಳಿಗೆ ನಾಮೈಕದೇಶವನ್ನು ಉಚ್ಚರಿಸಿದರೂ ಸಾಕು. ಇವನಾದರೂ ಸಮಗ್ರನಾಮವನ್ನು ಗ್ರಹಿಸಿರುವನು ಕಾರಣ ಎಲ್ಲ ಪಾಪಗಳನ್ನು ನುಂಗಿಹಾಕಿದೆ ಎಂದು ಸೂಚಿಸುವರು. ಹೇಗೆ ಸ್ವಾಮಿಯ ನಾಮ ಸ್ವೀಕರಿಸಿದನೋ ಹಾಗೆ ಬೇರೆಯವರ ನಾಮವನ್ನೂ ಸ್ವೀಕರಿಸಿರುವನು ಕಾರಣ ಇತರರಲ್ಲಿ ರತಿ ಇರುವುದು. ಆದ್ದರಿಂದ ಏಕಾಗ್ರಮಾನಸತೆ ಇವನಿಗೆಲ್ಲಿಯದು? ಹಾಗಿಲ್ಲವೆಂದೂ ಇಲ್ಲಿ ಹೇಳಿರುವರು ಎನ್ನುತ್ತಾರೆ ಸತ್ಯಧರ್ಮರು. **ಅಥ** ಶ್ರೀಮನ್ನಾರಾಯಣನ ನಾಮವನ್ನು ಉಚ್ಚರಿಸಿದ ನಂತರ **ಕೃತಾಶೇಷಾಘನಿಷ್ಕೃತಂ ಏನಂ** ಎಲ್ಲ ಪಾಪ ಪ್ರಾಯಶ್ಚಿತ್ತ ಮಾಡಿಕೊಂಡ ಅಜಾಮಿಳನನ್ನು **ಯತ್** ಯಾವಕಾರಣ **ಮಾ ಮಾನಂ** ಜ್ಞಾನವು ಅಥವಾ ಸಂಪತ್ತು **ಆಪ** ಹೊಂದಿತು. (ಅಜಾಮಿಳನಿಗೆ ಜ್ಞಾನೋದಯವಾಯಿತು) **ಮ್ರಿಯಮಾಣಃ** ಸಾಯುವ ಇವನು **ಅಸೌಭಗವತ್** ಅಮಂಗಳರಾದ ದಾಸೀ ಮುಂತಾದವರ **ನಾಮ** ಹೆಸರನ್ನು **ಸಮಗ್ರಹೀತ್** ವಿರಕ್ತಿಯಿಂದ ನಿಗ್ರಹಿಸಿದನು. **ಏನಂ ನಯತ** ಇಷ್ಟಾದರೂ ಒಯ್ಯುವದಾದರೆ ಒಯ್ಯಿರಿ ಎಂದು ಕಾಕು. **ನ ನಯತ** ಎಂದು ತಾತ್ಪರ್ಯ. **ಮಾ** ಎಂದು ಅನುವೃತ್ತಿ ಮಾಡಬಹುದು. ಸೌಭಗಂ ಸೌಭಾಗ್ಯಂ ಮಂಗಲಂ ಅಸ್ಯ ಅಸ್ತೀತಿ ಸೌಭಗವತ್ ತನ್ನ ಭವತೀತಿ ಅಸೌಭಗವತ್ ಅಮಂಗಲನಾಮವನ್ನು ಎಂದರ್ಥ. ಅಥವಾ ಅಸೌಭಗವತಾಂ ದಾಸ್ಯಾದೀನಾಂ ನಾಮ ಅಸೌಭಗವನ್ನಾಮ ಎಂದು ಸಮಸ್ತಪದವೆಂದೂ ಹೇಳಬಹುದು. ॥೧೩॥

ಇವನು ಶ್ರೀಹರಿಯ ನಾಮವನ್ನೇ ಉಚ್ಚರಿಸಿಲ್ಲ ಮಗನ ಹೆಸರನ್ನು ಉಚ್ಚರಿಸಿದ್ದು ಎಂದರೆ ಹೇಳುತ್ತಾರೆ-

**ಸಾಂಕೇತ್ಯಂ ಪಾರಿಹಾಸ್ಯಂ ವಾ ಸ್ತೋಭಂ ಹೇಲನಮೇವ ವಾ ।**
**ವೈಕುಂಠನಾಮಗ್ರಹಣಮಶೇಷಾಘಹರಂ ವಿದುಃ ॥೧೪॥**

**ಸಾಂಕೇತ್ಯಂ** ಮಕ್ಕಳು ಮೊದಲಾದವರಿಗೆ ತಂದೆ ಇಟ್ಟದ್ದನ್ನಾಗಲಿ **ಪಾರಿಹಾಸ್ಯಂ** ಪರಿಹಾಸ ಮಾಡುವುದಕ್ಕಾಗಲಿ (ದೇವ-ಸ್ತ್ರೀಸ್ವಭಾವವುಳ್ಳವರಾದ್ದರಿಂದ ನಾವೇನೋ ಭಗವತಿಯರು ನೀನು ಯಾವ ಕಾರಣದಿಂದ ಭಗವಂತ ಎಂಬ ರೀತಿಯಲ್ಲಿ) **ಸ್ತೋಭಂ**

ಗಾನ ಪೂರ್ಣಮಾಡಲು ಕೋಪ ಹುಟ್ಟಿಸಲು ನರ್ಮದಿಂದಾಗಲೀ **ಹೇಲನಂ ಏವ ವಾ** ತಿರಸ್ಕಾರ ಮಾಡುವದಕ್ಕಾಗಿಯ್ಯಾಗಲಿ (ನಾರಾಯಣ ಎಂಬ ಹೆಸರಿನ ಪುರುಷನಲ್ಲಿ ತಿರಸ್ಕಾರದಿಂದ ಸರ್ವದೋಷಾಶ್ರಯನಾದ ನೀನು ನಾರಾಯಣ ಹೇಗೆ ? ಎಂಬ ರೀತಿಯಲ್ಲಿ) **ವೈಕುಂಠನಾಮಗ್ರಹಣಂ** ಯಾವುದೇ ರೀತಿಯಾಗಿ ಉಚ್ಚರಿಸಿದ ಶ್ರೀಹರಿಯ ನಾಮವು ಮುಖ್ಯವಾಗಿ ಶ್ರೀಹರಿವಾಚಕವೆಂದು ಅವನ ಸ್ಮರಣೆಗೆ ಕಾರಣವಾಗಿ ಅವನಲ್ಲಿ ಭಕ್ತಿಯನ್ನು ಹುಟ್ಟಿಸಿ ಯೋಗ್ಯ ಅಧಿಕಾರಿಗಳಿಗೆ **ಅಶೇಷಾಘಹರಂ** ಸಮಸ್ತ ಪಾಪಗಳನ್ನು ಕಳೆಯುವುದು ಎಂದು **ವಿದುಃ** ಜ್ಞಾನಿಗಳು ತಿಳಿದಿರುವರು. ||೧೪||

'ಮ್ರಿಯಮಾಣೋ ಹರೇರ್ನಾಮ...' ಎಂಬ ಶ್ಲೋಕದಲ್ಲಿ ಮಗನ ಹೆಸರನ್ನೇ ಭಕ್ತಿಯಿಲ್ಲದೇ ಹೇಳಿದರೂ ಮುಕ್ತಿ ಕೊಡುವುದು ಎಂಬ ಭ್ರಮ ಬರುತ್ತದೆ. ಹಾಗೂ 'ಸಾಂಕೇತ್ಯ...' ಎಂಬ ಶ್ಲೋಕದಲ್ಲಿ ಗೋವಿಂದನನ್ನು ನಿಂದೆ ಮಾಡುವವನಿಗೂ ನಾಮೋಚ್ಚಾರಣ ಮಾಡಿದವಗೆ ಉಚ್ಚಲೋಕವಾಗುವುದೆಂದೂ ಭ್ರಮ ಬರುತ್ತದೆ. ಕಾರಣ ಅಪೇಕ್ಷಿತ ಪೂರಣ ಮಾಡಿ ಅನ್ವಯ ತೋರಿಸಿ ಆ ಭ್ರಮವನ್ನು ಆಚಾರ್ಯರು ನಿವಾರಣ ಮಾಡುವರು. ತಾತ್ಪರ್ಯಾರ್ಥ ಹೇಳುವರು.

ತಾತ್ಪರ್ಯ

**'ನಾರಾಯಣೋಽಯಮಿತ್ಯನ್ಯಹೇಲನವಿಷಯತ್ವೇನೋಕ್ತಂ ಅಘಹರಂ'**

ಈ ವಿಷಯದಲ್ಲಿ ಪ್ರಮಾಣ ಹೇಳುವರು-

**ಸರ್ವಥಾಽಘಹರಂ ವಿಷ್ಣೋರ್ನಾಮ ತದ್ಭಕ್ತಿಪೂರ್ವಕಮ್ ।**
**ಅಭಕ್ತ್ಯೋದಾಹೃತಂ ನೈವ ಫಲದಾತೃ ಭವಿಷ್ಯತಿ ॥**

**ನಾಮಸ್ವಾಮಿತಯಾ ತಸ್ಯ ಸ್ಮರಣಂ ಜಾಯತೇ ಯತಃ ।**
**ಭಕ್ತಸ್ಯಾತೋ ನಾಮಕೀರ್ತಿಃ ಸಂಕೇತಾದಾವಪೀರಿತಾ ।**
**ಅಜಾಮಿಲೋಽಪಿ ಸ್ಮರಣಾದ್ ಭಕ್ತ್ಯಾ ಮೃತ್ಯೋರಮುಚ್ಯತ ॥-ಇತಿ ನಾರದೀಯೇ**

ನಾರಾಯಣ ಎಂಬ ಹೆಸರಿನ ಮಗನಿದ್ದಾನೆ. ಅಥವಾ ಶಿಷ್ಯನಿದ್ದಾನೆ. ಅವನು ಸರಿಯಾಗಿ ಅಧ್ಯಯನ ಮಾಡುತ್ತಿಲ್ಲ. ದಡ್ಡ ಈ ನಾರಾಯಣ ಓದುತ್ತಿಲ್ಲ. ಎಂದು ಮತ್ತೊಬ್ಬನನ್ನು ನಿಂದಿಸುವಾಗ ಉಚ್ಚರಿಸಿದ ನಾರಾಯಣ ಎಂಬ ನಾಮವೂ ಪಾಪನಾಶಕವಾಗಿದೆ ಎಂದರ್ಥ.




ಇಲ್ಲವಾದರೆ ಸರ್ವಥಾ ಅಭಕ್ತರಾದ ಭಗವಂತನ ನಾಮವನ್ನು ನಟನೆ ಮಾಡುವ 'ಇವನು ಹರಿ ಅಲ್ಲ' ಎಂದು ವ್ಯವಹರಿಸುವ ನೀಚಬುದ್ಧಿಯ ಸಾಲ್ವ ಮುಂತಾದವರಿಗೆ ಮೋಕ್ಷ ವಾಗಬೇಕಾದೀತು. ಆಗಲಿ ತಪ್ಪೇನು? ಎಂದರೆ ಗೋವಿಂದನ ನಿಂದೆಯಿಂದ ಮಹಾ ಅನರ್ಥವಾಗುವದೆಂದು ಪ್ರತಿಪಾದಿಸುವ ಪ್ರಮಾಣಗಳು ಸುಳ್ಳಾಗಬೇಕಾಗುತ್ತವೆ.

ವಿಷ್ಣುಭಕ್ತಿಪೂರ್ವಕವಾಗಿ ವಿಷ್ಣುನಾಮವನ್ನು ಸರ್ವಥಾ ಸಂಕೇತಾದಿಗಳಿಂದ ಉದಾಹರಿಸಿದ್ದೂ ಪಾಪನಾಶಕವು. ಮೋಕ್ಷಾದಿಫಲಪ್ರದವೂ ಆಗಿದೆ. ಭಕ್ತಿಯಿಲ್ಲದೆ ಉಚ್ಚರಿಸಿದ್ದು ಪಾಪನಾಶಕವೂ ಅಲ್ಲ. ಫಲಪ್ರದವೂ ಅಲ್ಲ. ಈ ಪ್ರಮಾಣಾನುಸಾರ ಆಚಾರ್ಯರ ವಾಕ್ಯದಲ್ಲಿಯೂ 'ಅಘಹರಂ' ಎಂಬಲ್ಲಿ ಫಲದಾತೃ ಎಂದು ಶೇಷ ಮಾಡಬೇಕೆಂದು ಸೂಚಿತವಾಗುವದು. ಪ್ರಸ್ತುತವಾದುದು ಪಾಪನಾಶಕವಾದ್ದರಿಂದ ಮುಖತಃ ಹೇಳಲಿಲ್ಲ. ಕಾರಣ ಆಚಾರ್ಯರ ಆಚಾತುರ್ಯವೇನಿಲ್ಲ.

ಭಗವಂತನಲ್ಲಿ ಆಸಕ್ತನಾದವನಿಗೆ ಪರವಶನಾಗಿ ಮುಖದಿಂದ ಬಂದ ನಾಮ ಹಿಂದಿನ ಸಂಸ್ಕಾರದಿಂದ ಪಾಪಹರ ಫಲಪ್ರದವು ಆಗುವುದು ಸತ್ಯ. ಶ್ರೀಹರಿಯ ನಾಮಸ್ವಾಮಿತಯಾ ನಾಮ ಪ್ರವೃತ್ತಿನಿಮಿತ್ತವು ಸ್ವತಂತ್ರವಾಗಿ ನಿರವಧಿಕವಾಗಿ ಇದ್ದವನು ಮತ್ತು ಮತ್ತೊಬ್ಬರಲ್ಲಿರುವ ಪ್ರವೃತ್ತಿನಿಮಿತ್ತಪ್ರದನು ಎಂದು ಭಕ್ತನಿಗೆ ಸ್ಮರಣವಾಗುವುದು. ಕಾರಣ ಸಂಕೇತಾದಿಗಳಿಂದಲೂ ನಾಮಕೀರ್ತನ ಪಾಪಹರವೆಂದು ಹೇಳಿದೆ. ನಾಮಕೀರ್ತಿಃ ಉದೀರಿತಃ (ಎಂಬಲ್ಲಿ) ಉತ್ ದಲದ್ವಯಾತ್ಮಕ ಮೋಕ್ಷವಿಷಯದಲ್ಲಿ ಈರಿತಾ ಸಾಧನವೆಂದು ಹೇಳಿದೆ. 'ಉತ್ ಮೋಕ್ಷಃ' ಎಂದು ವಿಶ್ವವಿದೆ. ಅಜಾಮಿಲನು ಕೂಡ ಭಕ್ತಿಯಿಂದ ಸ್ಮರಣ ಮಾಡಿ ಯಮನಿಂದ ನರಕದ ಯಾತನೆಯಿಂದ ಮುಕ್ತನಾದನು. ಅಪಿ ಪದದಿಂದ ಲೋಕದೃಷ್ಟಿಯಿಂದ ಅನರ್ಹನಾಗಿದ್ದರೂ ಎಂದು ಸೂಚಿಸುವರು. ಅಂತರಂಗ ತರತಮಭಾವದಿಂದ ಅಥವಾ ಅಧಿಕಾರಿಗಳು ಬಹಳವಾದ್ದರಿಂದ ಸಂಕೇತಾದಿಗಳನ್ನು ಹೇಳಿರುವರು. ಅದರಲ್ಲಿಯೂ ಪ್ರಸ್ತುತ ನಾರಾಯಣ ಎಂಬುದು ಸಂಕೇತಿತಸುತನಾಮಗ್ರಹಣವಾದ್ದರಿಂದ ಅದನ್ನು ಮೊದಲು ಹೇಳಿರುವರು. ಚತುರಕ್ಷರ ಎಂದದ್ದರಿಂದ ಇದೇ ನಾಮವೆಂಬ ನಿಯಮವಿಲ್ಲವೆಂದು ತಿಳಿಸಲು ವೈಕುಂಠನಾಮ ಎಂದಿರುವರು. ಯಾವುದೇ ಶ್ರೀಹರಿಯ ನಾಮವೆಂದು ಭಾವ.

'ಸಕೃನ್ಮನಃ ಕೃಷ್ಣಪದಾರವಿಂದಯೋಃ ನಿವೇಶಿತಂ ತದ್ಗುಣರಾಗಿ ಯೈರಿಹ' ಎಂದು ಹೇಳಿದ್ದನ್ನು ಪ್ರತಿಪಾದಿಸುವುದಕ್ಕಾಗಿಯೇ ಅಜಾಮಿಳೋಪಾಖ್ಯಾನ ಹೊರಟಿದೆ ಕಾರಣ ಶ್ರೀಹರಿಯ ನಾಮ ಹೇಗಾದರೂ ಉಚ್ಚರಿತವಾದರೆ ಸಾಕು ಪಾಪಹರವೆಂದು ಹೇಳುವ ಅರ್ಥ ಸರಿಯಲ್ಲ. ಭಕ್ತಿಯ ಪೂರ್ವಕ ಭಗವನ್ನಾಮಸ್ಮರಣೆಯೇ ಸಮಸ್ತ ಪಾಪಪರಿಹಾರಕವೆಂದು ಹೇಳಿದಾಗಲೇ ಅದನ್ನು ಪ್ರತಿಪಾದಿಸಿದಂತಾಗುವುದು. ಆದ್ದರಿಂದ ಆಚಾರ್ಯರು ಭಕ್ತಿಪೂರ್ವಕ ಉಚ್ಚಾರಣವೆಂದು ಅರ್ಥ ಮಾಡಿರುವರು.

ಕೇವಲ ಸಂಕೇತವಾದಲ್ಲಿ ದೊಡ್ಡವರು ಚಿಕ್ಕವನಿಗೆ ಇಟ್ಟ ಹೆಸರಾಗುವಂತೆ ಅದು ವೈಕುಂಠನಾಮವಾಗುವದು ಸಾಧ್ಯವಿಲ್ಲ. ಪರಿಹಾಸ-ಸ್ತೋಭಗಳು ನಾರಾಯಣನಾಮ ವಾದಲ್ಲಿ ಮಹಾಪಾಪವೇ ಬರುವುದು ಪಾಪಹರಣವಾಗುವುದಿಲ್ಲ. 'ಇವನು ನಾರಾಯಣನು' ಎಂದು ಯಾವನೊ ಒಬ್ಬ ಅಧಮನನ್ನು ಹಿಯಾಳಿಸಲು ಉಕ್ತವಾದುದು ಎಂದು ಹೇಳಿದ್ದರಿಂದ ಮಿಕ್ಕ ಸಂಕೇತಾದಿಗಳನ್ನು ವಿವರಿಸಿದಂತಾಯಿತು. ಇಲ್ಲಿ ಸ್ಮರಣಪ್ರಾಚುರ್ಯವನ್ನು ತಿಳಿಸುವುದಕ್ಕಾಗಿ ಸಂಕೇತಾದಿ ಬಹುಸ್ಥಳಗಳನ್ನು ಹೇಳಿದ್ದು.

ಸಂಕೇತವು ರೂಢಿಯಿಂದ ವ್ಯವಹಾರನಿರ್ವಾಹಕವಾದ್ದರಿಂದ ಪರಿಹಾಸದಲ್ಲಿ ಅದಕ್ಕಿಂತ ಹೆಚ್ಚು ಸ್ಮರಣೆಗೆ ಅವಕಾಶ. ಅಲ್ಲಿ ಚಿತ್ತವಿಕಾಸ ಹೆಚ್ಚಾಗುವುದು._ಅದಕ್ಕಿಂತ ಸ್ತೋಭದಲ್ಲಿ ಸ್ಮರಣೆ ಹೆಚ್ಚು. ಕೋಪ ಹುಟ್ಟಿಸುವಂತೆ ಆಡುವ ಹಾಸ್ಯದ ಮಾತೇ ಸ್ತೋಭ. ಇದಕ್ಕಿಂತಲೂ ಹೇಳನದಲ್ಲಿ ಹೆಚ್ಚು ಸ್ಮರಣಾವಕಾಶ. ಮಧುಕ್ಷಿಕವನ್ನೇ (ಜೇನುಹುಳು) ಸಾಯಿಸಲು ಅಸಮರ್ಥನಾದ ನೀನು ಮಧುವನ್ನು ಕೊಂದವನೋ ಶ್ರೀಹರಿಯಾದರೂ ಮಧುನಾಮಕ ರಾಕ್ಷಸನನ್ನು ಕೊಂದದ್ದರಿಂದ ಮಧುಸೂದನನೆಂಬುದೇ ಸರಿ ಎಂದು ಹೇಳಿದಾಗ ನಾಮಸ್ವಾಮಿಯಾಗಿ ಶ್ರೀಹರಿಯ ಸ್ಮರಣೆಯು ಹೆಚ್ಚು. ಹೀಗೆಯೇ ಹರಿಯಲ್ಲದವನೊಬ್ಬನನ್ನು ಅವರ ತಂದೆಯು ಇಟ್ಟಿರುವ ನಾರಾಯಣನೆಂಬ ಹೆಸರಿನಿಂದ ಔಪಚಾರಿಕವಾಗಿ ಕರೆದು ನಿಂದಿಸಿ ಸಾಕ್ಷಾತ್ ಪಯೋಬ್ಧಿಶಾಯಿಯು ನಾರಾಯಣನಲ್ಲವೇ ! ಎನ್ನುವಾಗಲೂ ತಿಳಿಯಬೇಕು. 'ಅಭಕ್ತ್ಯಾ' ಎಂಬ ಪ್ರಮಾಣದಿಂದ ಹರಿದ್ವೇಷದಿಂದ ಹೇಳಿದ ಹರಿನಾಮಕೀರ್ತನೆಯು ಪಾಪ ಪರಿಹಾರಕವಲ್ಲವೆಂದಂತಾಯಿತು. ನಾಮಸ್ವಾಮಿಯಾದ ಶ್ರೀಹರಿಸ್ಮರಣೆ ಇಲ್ಲದಿದ್ದಲ್ಲಿ ಬೇರೆಯವರಲ್ಲಿ ಆ ನಾಮಕ್ಕೆ ಅನ್ವರ್ಥತೆ ಬರಲು ಸಾಧ್ಯವಿಲ್ಲ ಶ್ರೀಹರಿಯಲ್ಲಿಯೇ ಅನ್ವರ್ಥ. ಆದ್ದರಿಂದ ಅಜಾಮಿಳನು ಭಕ್ತಿಯಿಂದ ನಾರಾಯಣ ನಾಮದ ಮುಖ್ಯ




ಸ್ವಾಮಿಯನ್ನು ಸ್ಮರಿಸಿಕೊಂಡು ನಾರಾಯಣ ನಾಮ ಸಂಕೀರ್ತನ ಮಾಡಿದನೆಂದೇ ತಿಳಿಯಬೇಕು.

ವೈಕುಂಠನಾಮ ಎಂದು ಹೇಳಿದ್ದರಿಂದ ಶ್ರೀಹರಿಯ ಎಲ್ಲ ನಾಮಗಳು ಪಾಪ ಕಳೆಯುವವು ಎಂದು ತಿಳಿಸಿರುವರು. ಮುಂದಿನ ಶ್ಲೋಕದಲ್ಲಿ 'ಹರಿರಿತ್ಯವಶೇನಾಽಹ' ಎಂದು ಹೇಳುವುದು ಇದನ್ನೇ ತಿಳಿಸುವುದು. 'ವಿದುಃ' ಎಂದು ಜ್ಞಾನ ಪೂರ್ವಕಸ್ಮರಣೆ ಅಪೇಕ್ಷಿತವೆಂದು ತಿಳಿಸುವದೇ ಅಲ್ಲದೇ ಬಹುಜ್ಞಾನಿಗಳ ಸಮ್ಮತಿ ತಿಳಿಸಿರುವರು.

ಸಂಕೇತ ಎಂದರೆ ತಂದೆ ಇಟ್ಟ ಹೆಸರು. ತನ್ನ ತಂದೆ ಹೆಸರನ್ನು ಮಗನಿಗೆ ಇಟ್ಟಾಗ ತಂದೆ ಮಗನನ್ನು ಕರೆದಾಗ ಸ್ಮರಣ ಬರುವದು. ಸ್ತೋಭವೆಂದರೆ ತನ್ನ ಆಶಯ ತಿಳಿಸದೆ ಶ್ರೋತೃಗಳ ಚಿತ್ತಚೌರ್ಯಫಲಕವಾದುದು ಸಂಕೇತಕ್ಕಿಂತಲೂ ಶ್ರೇಷ್ಠ . ಹೇಲನವು ಹಿಂದೆ ಹೇಳಿದೆ. ||೧೪||

**ದುರ್ಘಟಭಾವದೀಪಿಕಾ**

ಯದ್ವೈಕುಂಠನಾಮ ಸಾಂಕೇತ್ಯಂ ಸಂಕೇತೇನ ಅನ್ಯತ್ರ ಪ್ರಾಪ್ತಂ ಸಂಕೇತದಿಂದ ಬೇರೆಯವರನ್ನು ಕರೆದ ಎಂದರ್ಥ. ಸಂಕೇತ ಶಬ್ದದ ಮೇಲೆ ಪ್ರಾಪ್ತ ಎಂಬರ್ಥದಲ್ಲಿ ಷ್ಯಞ್ ಪ್ರತ್ಯಯ ಮಾಡಿದರೆ ಸಾಂಕೇತ್ಯಂ ಎಂದಾಗುವದು. ಅನ್ಯತ್ರ ಎಂಬುದು ಯೋಗ್ಯತಯಾ ಸಂಬಂಧಿಸುವುದು. ಯದ್ವೈಕುಂಠನಾಮ ಪಾರಿಹಾಸ್ಯಂ ಪರಿಹಾಸಕ್ಕಾಗಿ ಅನ್ಯತ್ರ ಪ್ರಾಪ್ತಂ ವಾ ಪರಿಹಾಸ ಶಬ್ದದ ಮೇಲೆ ತದರ್ಥಂ ಪ್ರಾಪ್ತಂ ಎಂಬರ್ಥದಲ್ಲಿ ಷ್ಯಞ್ ಪ್ರತ್ಯಯ ಮಾಡಿದರೆ ಪಾರಿಹಾಸ್ಯಂ ಎಂದಾಗುವದು. ಯದ್ವೈಕುಂಠನಾಮ ಸ್ತೋಭಂ ಇಲ್ಲಿಯ ಪ್ರಥಮಾ ತಾದರ್ಥ್ಯದಲ್ಲಿದೆ. ವ್ಯರ್ಥಾಕ್ಷರ ಪ್ರಯೋಗಕ್ಕಾಗಿ ಪ್ರಯೋಗಿಸಿದ್ದು ಗಾನ ಮಾಡುವಾಗ ಗಾನ ಪರಿಪೂರ್ಣತೆಗಾಗಿ ವ್ಯರ್ಥಾಕ್ಷರ ಪ್ರಯೋಗ ಮಾಡುವಾಗ ಪ್ರಯುಕ್ತವಾದುದೆಂದರ್ಥ. ಯದ್ವೈಕುಂಠನಾಮ ಹೇಲನಂ ಇಲ್ಲಿಯೂ ಪ್ರಥಮಾ ತಾದರ್ಥ್ಯೇ ಹೇಲನಾರ್ಥಂ ಭಗವಂತನಿಂದ ಭಿನ್ನರಾದವರ ನಿಂದನೆಗಾಗಿ ಪ್ರಯುಕ್ತವಾದುದು. **ತಸ್ಯ** ವೈಕುಂಠನಾಮದ ಗ್ರಹಣವು ಉಚ್ಚಾರಣವು ಭಕ್ತನಿಗೆ ನಾಮಸ್ವಾಮಿಯೆಂದು ವಿಷ್ಣುವಿನ ಸ್ಮರಣವಾದರೆ ಅಶೇಷ ಪಾಪನಾಶಕವು. ಉಪಲಕ್ಷಣತಯಾ ಅಶೇಷಫಲಪ್ರದವೂ ಎಂದು ಜ್ಞಾನಿಗಳು ತಿಳಿಯುವರು.

ಹೀಗೆ ಯೋಜಿಸಿದ್ದರಿಂದ ಸಾಂಕೇತ್ಯ ಮೊದಲಾದವು ವೈಕುಂಠನಾಮ ಗ್ರಹಣರೂಪವಾಗದೇ ಇದ್ದದ್ದರಿಂಧ ವೈಕುಂಠನಾಮಗ್ರಹಣಂ ಎಂಬುದರಿಂದ ಅನ್ವಯ ಆಗದಿರುವುದರಿಂದ ಸಾಂಕೇತ್ಯಂ ಮೊದಲಾದವುಗಳು ಅನನ್ವಿತಗಳು ಎಂಬ ದೂಷಣ ನಿರಾಕೃತವಾಯಿತು.

ವೈಕುಂಠನಾಮಗ್ರಹಣಂ ಎಂಬಲ್ಲಿ ಎರಡು ಪದಗಳೆಂದು ಅಂಗೀಕರಿಸಿ ಯತ್ ತಸ್ಯ ಎಂಬ ಪದಗಳ ಶೇಷವನ್ನು ಅಂಗೀಕರಿಸಿ ವೈಕುಂಠನಾಮ ಎಂಬುದಕ್ಕೆ ಸಾಂಕೇತ್ಯಂ ಮುಂತಾದವುಗಳಿಗೆ ಅಧ್ಯಾಹೃತವಾದ ತಸ್ಯ ಎಂಬುದರಿಂದ ಅನ್ವಯ ಒಪ್ಪಲಾಗಿದೆ. ಇದರಿಂದ ಭಕ್ತಿಯಿಂದ ಭಗವನ್ನಾಮದ ಉಚ್ಚಾರಣೆ ಮುಂತಾದುದು ಸಮಸ್ತ ಪಾಪನಾಶಕವಾಗಿದೆ. ಆದ್ದರಿಂದ ಸಂಕೇತಾದಿಗಳಿಂದ ಅನ್ಯನಿಷ್ಠವಾದ ಭಗವನ್ನಾಮದ ಉಚ್ಚಾರಣದಿಂದ ಅಶೇಷ ಪಾಪಪರಿಹಾರವಾಗುವುದೆಂದು ಹೇಳುವುದು ಅನುಪಪನ್ನವೆಂಬ ದೂಷಣವೂ ನಿರಾಕೃತವಾಯಿತು.

ಭಕ್ತನಿಗೆ ನಾಮಸ್ವಾಮಿಯೆಂದು ವಿಷ್ಣುಸ್ಮರಣವಾದಾಗ ಎಂದು ಶೇಷಪೂರ್ತಿಮಾಡಿ ಸಾಂಕೇತ್ಯಂ ಪಾರಿಹಾಸ್ಯಂ ಎಂಬ ಶ್ಲೋಕಕ್ಕೆ ಸಂಕೇತಾದಿಗಳಿಂದ ಅನ್ಯನಿಷ್ಠ ಭಗವನ್ನಾಮೋಚ್ಚಾರಣದಿಂದ ಭಕ್ತನಿಗೆ ನಾಮಸ್ವಾಮಿತಯಾ ವಿಷ್ಣು ಸ್ಮರಣವಾಗುವುದು. ಆದ್ದರಿಂದ ಎಲ್ಲ ಪಾಪಗಳೂ ನಿವೃತ್ತವಾಗುತ್ತವೆ ಎಂಬ ಅರ್ಥ ಹೇಳುವುದೆಂದು ಅಂಗೀಕರಿಸಿದೆ.

ಅಶೇಷಾಘಹರಂ ಎಂಬುದು ಅಶೇಷಫಲದಾತೃ ಎಂಬುದಕ್ಕೆ ಉಪಲಕ್ಷಕ ಎಂದು ಅಂಗೀಕರಿಸಬೇಕು. ಆದ್ದರಿಂದ ಪಾಪಪರಿಹಾರವಿಷ್ಟೇ ಅಲ್ಲ. ಮೋಕ್ಷಾದಿಪುರುಷಾರ್ಥ-ಗಳ ಪ್ರಾಪ್ತಿಯೂ ಆಗುತ್ತದೆಂದು ತಿಳಿಯಬೇಕು.

### ತಾತ್ಪರ್ಯದ ಅರ್ಥ.

**ಯನ್ನಾಮ** ನಾರಾಯಣೋಽಯಮ್ ಎಂಬಲ್ಲಿಯ ನಾರಾಯಣ ಎಂಬ ಹೆಸರು ಹೇಲನವಿಷಯತ್ವೇನ **ಅನ್ಯಸ್ಯ** ಭಗವಂತನಿಂದ ಭಿನ್ನನಾದ ಅದ್ವೈತ ಸನ್ಯಾಸಿಯ ಹೇಲನಂ ನಿಂದಾವಿಷಯೋ ಯಸ್ಯ ತತ್ ಅನ್ಯಹೇಲನವಿಷಯಂ ತಸ್ಯ ಭಾವಃ ಅನ್ಯಹೇಲನವಿಷಯತ್ವಮ್. ತೇನ ವಿಷಯತ್ವೇನ ಉಕ್ತಂ ಅದ್ವೈತಸನ್ಯಾಸಿಯ ನಿಂದನೆಗಾಗಿ ಹೇಳಿದ್ದು ಎಂದರ್ಥ. ಆ ನಾರಾಯಣ ನಾಮ ಪಾಪಹಾರಕ. ಇದರಿಂದ ನಾರಾಯಣೋಽಯಂ ಎಂಬಲ್ಲಿ ನಿಂದಾ ಕಾಣುವುದಿಲ್ಲ. ನಾರಾಯಣೋಽಯ-

ಮಿತ್ಯನ್ಯಹೇಲನವಿಷಯತ್ವೇನ ಎಂಬುದು ಸರಿಯಲ್ಲ ಎಂಬ ದೂಷಣ ಸರಿಯಲ್ಲವೆಂದಂತಾಯಿತು.

ಅದ್ವೈತಸನ್ಯಾಸಿಯನ್ನು ಉದ್ದೇಶಿಸಿ ಇವನೇ ನಾರಾಯಣನಂತೆ ಅಂದರೆ ನಿಂದೆ ತೋರೆ ತೋರುವುದು. ಇದರಿಂದ ನಾರಾಯಣ ಎಂಬ ನಾಮಕ್ಕೆ ಅನ್ಯಹೇಲನ ವಿಷಯವೇ ಹೊರತು ಅನ್ಯಹೇಲನಕ್ಕೆ ನಾರಾಯಣನಾಮ ವಿಷಯವಲ್ಲ. ಆದ್ದರಿಂದ ಅನ್ಯಹೇಲನವಿಷಯತ್ವೇನ ಎಂಬುದು ಅಯುಕ್ತ ಎಂಬ ದೂಷಣೆಗೂ ಅವಕಾಶವಿಲ್ಲ.

ಅನ್ಯಹೇಲನವಿಷಯತ್ವೇನ ಎಂಬಲ್ಲಿ ಅನ್ಯಹೇಲನಸ್ಯ ವಿಷಯಃ ಎಂದು ಷಷ್ಠೀತತ್ಪುರುಷ ಮಾಡಬಾರದು. ಅನ್ಯಹೇಲನಂ ವಿಷಯಃ ಯಸ್ಯ ಎಂದು ಬಹುವ್ರೀಹಿ ಸಮಾಸವನ್ನು ಮಾಡಬೇಕು.

ವಿಷ್ಣುಭಕ್ತಿಪೂರ್ವಕವಾಗಿ ಉಚ್ಚರಿತವಾದ ನಾರಾಯಣನಾಮ ಸರ್ವಥಾ ಅಘಹರವಾಗಿದೆ. ಲಕ್ಷಣಯಾ ಮೋಕ್ಷಾದಿಫಲಪ್ರದಾಯಕವೂ ಆಗಿದೆ. ಭಕ್ತಿ ಇಲ್ಲದೇ ಉಚ್ಚರಿತವಾದ ನಾರಾಯಣನಾಮವು ಫಲಪ್ರದವಾಗಿಲ್ಲ. ಪಾಪಪರಿಹಾರಕವೂ ಆಗುವುದಿಲ್ಲ.

ಸಂಕೇತಾದಿಗಳಿಂದ ಅನ್ಯನಿಷ್ಠ ಸ್ಮರಣೆಗೆ ಫಲವಿಲ್ಲವೇ ಎಂದರೆ ಹೇಳುವರು 'ನಾಮ ಸ್ವಾಮಿತಯಾ' ಎಂದು. ಯಾವ ಕಾರಣ ಸಂಕೇತಾದಿಗಳಿಂದ ಅನ್ಯನಿಷ್ಠ ಭಗವನ್ನಾಮ ಉಚ್ಚಾರಣೆ ಮಾಡಿದಾಗ ನಾಮಸ್ವಾಮಿತಯಾ ವಿಷ್ಣುಸ್ಮರಣವಾಗುವುದೋ ಆ ಕಾರಣದಿಂದಾಗಿ **ಸಂಕೇತಾದೌ** ನಿಮಿತ್ತಸಪ್ತಮೀ ಸಂಕೇತಾದಿನಿಮಿತ್ತದಿಂದಲಾದರೂ ನಾಮಕೀರ್ತಿಃ ಅನ್ಯನಿಷ್ಠನಾಮೋಚ್ಚಾರಣೆಯು **ಈರಿತಾ** ಅಶೇಷ ಪಾಪನಿವೃತ್ತಿಕಾರಣ-ವೆಂದು ಅಶೇಷಫಲಸಾಧನವೆಂದು ಪ್ರಮಾಣದಿಂದ ಹೇಳಲ್ಪಟ್ಟಿದೆ.

ಅಜಾಮಿಲನೂ ಸಹ ಸಂಕೇತದಿಂದ ಪುತ್ರನಿಷ್ಠ ನಾರಾಯಣನಾಮವನ್ನು ಉಚ್ಚರಿಸಿ **ಭಕ್ತ್ಯಾ** ಭಕ್ತಿಯಿಂದ **ಸ್ಮರಣಾತ್** ಲ್ಯಬ್ಲೋಪನಿಮಿತ್ತಾ ಪಂಚಮೀ ನಾಮಸ್ವಾಮಿತಯಾ ವಿಷ್ಣೋಃ ಸ್ಮರಣಂ ಪ್ರಾಪ್ಯ ಮೃತ್ಯೋರಮುಚ್ಯತ. ನಾಮಸ್ವಾಮಿ ಎಂಬುದಾಗಿ ಶ್ರೀಹರಿಯ ಸ್ಮರಣೆಯನ್ನು ಪಡೆದು ಮುಕ್ತನಾದನು ಎಂದು ಭಾವ. ||೧೪||

ತಾವು ಹೇಳಿದ್ದನ್ನು ದೃಢಪಡಿಸಲು ಮತ್ತೆ ಏಳು ಶ್ಲೋಕಗಳಿಂದ ಪ್ರತಿಪಾದಿಸುವರೆಂದು ಹೇಳುವರು.

'ಸ್ಮರಣಂ ಸರ್ವದಾ ಯೋಗ್ಯಂ ಧ್ಯಾನೋಪಾಸನಮಾಸನೇ' ಎಂಬ ಪ್ರಮಾಣದಂತೆ ಆಸನಾದಿ ನಿಯಮವಿಲ್ಲದ ನಾಮಸ್ಮರಣೆಯು ಸುಲಭೋಪಾಯವೆಂಬ ಅಭಿಪ್ರಾಯದಿಂದ ಹೇಳುತ್ತಾರೆ-

**ಪತಿತಃ ಸ್ಖಲಿತೋ ಭಗ್ನಃ ಸಂದಷ್ಟಸ್ತಪ್ತ ಆಹತಃ ।**
**ಹರಿರಿತ್ಯವಶೇನಾಽಽಹ ಪುಮಾನ್ನಾರ್ಹತಿ ಯಾತನಾಮ್ ॥೧೫॥**

**ಪತಿತಃ** ಮಹಡಿ ಮೊದಲಾದ ಎತ್ತರ ಸ್ಥಳದಿಂದ ಬಿದ್ದ **ಸ್ಖಲಿತಃ** ದಾರಿಯಲ್ಲಿ ಎಡವಿ ಮುಗ್ಗರಿಸಿದ **ಭಗ್ನಃ** ಕೈಕಾಲುಗಳನ್ನು ಮುರಿದುಕೊಂಡ **ಸಂದಷ್ಟಃ** ಹಾವು ಮುಂತಾದ ಪ್ರಾಣಿಗಳಿಂದ ಕಚ್ಚಲ್ಪಟ್ಟ **ತಪ್ತಃ** ಜ್ವರ ಮೊದಲಾದವುಗಳಿಂದ ತಾಪಗೊಂಡ ಅಥವಾ ಮಾರ್ಗಮಧ್ಯದಲ್ಲಿ ಸೂರ್ಯನ ತಾಪದಿಂದ ತಪ್ತನಾದ **ಆಹತಃ** ದೊಣ್ಣೆ ಮೊದಲಾದವುಗಳಿಂದ ಪೆಟ್ಟು ತಿಂದ **ಯಃ ಪುಮಾನ್** ಭಕ್ತನಾದ ಯಾವ ಮನುಷ್ಯನು **ಅವಶೇನ** ಭಕ್ತಿಪರವಶನಾಗಿ **ಹರಿಃ ಇತಿ** ಹರಿ ಎಂದು **ಆಹ** ಉಚ್ಚರಿಸುವನೋ **ಸಃ** ಅವನು **ಯಾತನಾಂ** ದುಃಖವನ್ನು **ನ ಅರ್ಹತಿ** ಹೊಂದುವದಿಲ್ಲ.

**ಪುಮಾನ್** ಎಂದು ಹೇಳಿದ್ದರಿಂದ ನಾಮಸ್ಮರಣೆಗೆ ವರ್ಣಾಶ್ರಮ ನಿಯಮವಿಲ್ಲವೆಂದು ತಿಳಿಸಿರುವರು. 'ಹರಿ' ಎಂಬ ಎರಡಕ್ಷರದ ನಾಮ ಹೇಳಿದರೂ ಯಾತನೆಯನ್ನು ಹೊಂದುವುದಿಲ್ಲ. ಹೀಗಿರುವಾಗ ಅಜಾಮಿಲನಾದರೋ ನಾಲ್ಕಕ್ಷರದ ನಾರಾಯಣ ಎಂಬ ನಾಮವನ್ನು ಉಚ್ಚರಿಸಿರುವನು. ಆದ್ದರಿಂದ ಯಾತನೆಯನ್ನು ಹೊಂದುವದಿಲ್ಲವೆಂದು ಪ್ರತ್ಯೇಕ ಹೇಳಬೇಕಿಲ್ಲ, ಕೈಮುತ್ಯಸಿದ್ಧ ಎಂದು ಭಾವ. ॥೧೫॥

ಕೇವಲ ನಾಮಸಂಕೀರ್ತನದಿಂದಲೇ ಎಲ್ಲ ಪಾಪ ಹೋಗುವುದಾದರೆ ಮಹಾ ಪಾಪಗಳಿಗೆ ಮಹಾಪ್ರಾಯಶ್ಚಿತ್ತ ಚಿಕ್ಕಪಾಪಗಳಿಗೆ ಚಿಕ್ಕಪ್ರಾಯಶ್ಚಿತ್ತ ಎಂದು ಜ್ಞಾನಿಗಳು ಹಾಗು ವೇದಗಳು ಹೇಳಿದ್ದು ವ್ಯರ್ಥವಲ್ಲ ? ಎಂದು ಶಂಕಿಸಿ ಪ್ರಾಯಶ್ಚಿತ್ತದಿಂದ ಆ ಆ ಪಾಪ ಪರಿಹಾರವಾದರೂ ಸಂಸಾರಕಾರಣವಾದ ಅಂತಃಕರಣ ಕಂಸಾರಿಯ ಕರುಣೆಯಿಂದಲೇ ನಿವೃತ್ತವಾಗುವುದು. ಅದೊಂದೇ ಉಪಾಯ. ಬೇರೊಂದು ಉಪಾಯವಿಲ್ಲ, ಕಾರಣ ಅದನ್ನೇ ಸಂಪಾದಿಸಬೇಕು ಎಂದು ಹೇಳುತ್ತಾರೆ-

**ಗುರೂಣಾಂ ಚ ಲಘೂನಾಂ ಚ ಗುರೂಣಿ ಚ ಲಘೂನಿ ಚ ।**
**ಪ್ರಾಯಶ್ಚಿತ್ತಾನಿ ಪಾಪಾನಾಂ ಜ್ಞಾತ್ವೋಕ್ತಾನಿ ಮಹರ್ಷಿಭಿಃ ॥೧೬॥**

**ತೈಸ್ತಾನ್ಯಘಾನಿ ಪೂಯಂತೇ ತಪೋದಾನವ್ರತಾದಿಭಿಃ ।**
**ನಾಧರ್ಮಬೀಜಂ ಹೃದಯಂ ತದಪೀಶಾಂಘ್ರಿಸೇವಯಾ ॥೧೭॥**

**ಗುರೂಣಾಂ** ದೊಡ್ಡ ದೊಡ್ಡ **ಲಘೂನಾಂ** ಸಣ್ಣ ಸಣ್ಣ **ಪಾಪಾನಾಂ** ಪಾಪಗಳಿಗೆ **ಗುರೂಣಿ** ದೊಡ್ಡ ದೊಡ್ಡ **ಲಘೂನಿ** ಸಣ್ಣ ಸಣ್ಣ **ಪ್ರಾಯಶ್ಚಿತ್ತಾನಿ** ಪ್ರಾಯಶ್ಚಿತ್ತಗಳು **ಜ್ಞಾತ್ವಾ** ತಾರತಮ್ಯವನ್ನರಿತು **ಮಹರ್ಷಿಭಿಃ** ಜ್ಞಾನಿಗಳಾದ ಮನ್ವಾದಿಗಳಿಂದ ಸ್ಮೃತಿಗಳಲ್ಲಿ **ಉಕ್ತಾನಿ** ಹೇಳಲ್ಪಟ್ಟಿದೆ. ಅಥವಾ ಮಹಾಂತಃ ಋಷಯಃ ದ್ರಷ್ಟಾರಃ ಯೇಷಾಂ ತೈಃ **ಮಹರ್ಷಿಭಿಃ** ಎಂದರೆ ವೇದಗಳಿಂದ ಹೇಳಲ್ಪಟ್ಟಿದೆ. ಆದ್ದರಿಂದ ಮನ್ವಾದಿಗಳ ವಿಷಯದಲ್ಲಿ ಮಹಾಪಾಪಕ್ಕೆ ಮಹಾಪ್ರಾಯಶ್ಚಿತ್ತ ಚಿಕ್ಕ ಪಾಪಕ್ಕೆ ಚಿಕ್ಕ ಪ್ರಾಯಶ್ಚಿತ್ತ ಎಂತಲೇ ವ್ಯವಸ್ಥೆ. ಹರಿಸಂಕೀರ್ತನದಿಂದಾದರೂ 'ಮುಚ್ಯತೇ ಸರ್ವಪಾತಕೈಃ' ಎಂದು ಹೇಳಿರುವುದರಿಂದ ಎಲ್ಲ ಪಾಪಗಳು ಹೋಗುವವೆಂದೇ ವ್ಯವಸ್ಥೆ. ಈ ಮಾತು ಕೇವಲ ಔಪಚಾರಿಕ ಎನ್ನುವುದಾದರೆ ಮದ್ಯದ ಬಿಂದುವನ್ನು ಪಾನ ಮಾಡಿದರೂ ಮಹಾಪಾಪವೆಂದು ಹೇಳುವ ವಾಕ್ಯವೂ ಔಪಚಾರಿಕವೆಂದೇ ಹೇಳಬೇಕಾಗುವುದು. ॥೧೬॥

**ತೈಃ** ಮಹರ್ಷಿಗಳಿಂದ ಹೇಳಲ್ಪಟ್ಟ **ತಪೋದಾನವ್ರತಾದಿಭಿಃ** ತಪಸ್ಸು ದಾನ ವ್ರತಾದಿರೂಪವಾದ ಪ್ರಾಯಶ್ಚಿತ್ತಗಳಿಂದ **ತಾನಿ ಅಘಾನಿ** ಆಯಾ ಪಾಪಗಳು ಅಂದರೆ ಪಾಪ ಉಳ್ಳವರು **ಪೂಯಂತೇ** ಪಾಪ ಪರಿಹಾರವಾಗಿ ಶುದ್ಧರಾಗುವರು. ಆದರೆ **ಅಧರ್ಮಬೀಜಂ** ಪಾಪಸಂಸ್ಕಾರವನ್ನು ತೋರಿಸಿಕೊಡುವ ಪಾಪದ ಉತ್ಪತ್ತಿಗೆ ಕಾರಣವಾದ **ಹೃದಯಂ** ಲಿಂಗಶರೀರಾತ್ಮಕವಾದ ಮನಸ್ಸು **ನ ಪೂಯತೇ** ಪವಿತ್ರವಾಗುವುದಿಲ್ಲ. ಹಾಗಾದರೆ ಅದಕ್ಕೆ ಪ್ರತೀಕಾರ ಯಾವುದು? ಎಂದರೆ ಹೇಳುವರು **ತದಪಿ** ತಪ ಆದಿಗಳಿಂದ ಹೋಗದಿರುವ ಆ ಲಿಂಗದೇಹವು **ಈಶಾಂಘ್ರಿಸೇವಯಾ** ಸ್ಮರಣಾದಿರೂಪವಾದ ಶ್ರೀಹರಿಯ ಸೇವೆಯಿಂದ ನಾಶವಾಗುವದು. ॥೧೭॥

ಇದೆಲ್ಲವೂ ನೀವು ಕಲ್ಪಿಸಿದ್ದು ಮಾತ್ರ. ಯಾರೂ ಹೀಗೆ ಹೇಳಿಲ್ಲ ಎಂಬ ಶಂಕೆಯನ್ನು ಈ ಶ್ಲೋಕದಿಂದ ಪರಿಹರಿಸುತ್ತಾರೆ.

ಅಜಾಮಿಳನಿಗಾದರೂ ಈ ಒಂದು ಸಲ ಹರಿನಾಮ ಕೀರ್ತನೆಯಿಂದ ಶೂದ್ರಸ್ತ್ರೀಸಂಬಂಧದಿಂದ ಬಂದ ಪಾಪವು ಹೋಗಿ ದೇಹವಿಯೋಗರೂಪವಾದ ಮರಣವು ತಪ್ಪಿತೇ ಹೊರತು ಸಂಸಾರದಿಂದ ಮುಕ್ತಿಯಾಗಲಿಲ್ಲ. ಹಾಗೆ

ಮುಕ್ತಿಯಾಗಬೇಕಾದರೆ ಭಗವನ್ನಾಮಸಂಕೀರ್ತನೆ ಮೊದಲಾದ ಶ್ರೀಹರಿಪಾದ-ಸೇವೆಯನ್ನು ಪ್ರತಿನಿತ್ಯವೂ ಮಾಡಬೇಕೆಂದು ವಿಧಿಸುತ್ತಾರೆ.

**ಧರ್ಮೋ ಯೋಽಯಮುಪನ್ಯಸ್ತಃ ಪರಮಸ್ತು ಸನಾತನಃ ।**
**ಕ್ರಿಯತೇಽಹರಹಃ ಶುದ್ಧಿರಾತ್ಮನೋ ವಾಸಸೋ ಯಥಾ ॥೧೮॥**

**ಪರಮಃ** ಅತ್ಯುತ್ತಮವಾದ **ಸನಾತನಃ** ಎಲ್ಲ ಕಾಲದಲ್ಲಿಯೂ ಇರುವ ಪರಂಪಾರಾಗತವಾದ ಅಥವಾ 'ನಾದೇನ ಶಬ್ದೇನ ಸಹ ವರ್ತತೇ ಇತಿ ಸನಾದನಃ ಸ ಏವ ಸನಾತನಃ' ಎಂದು ಗೀತಾತಾತ್ಪರ್ಯದಲ್ಲಿ ಹೇಳಿದ ನಿರ್ವಚನದಿಂದ **ದಕಾರಕ್ಕೆ ತಕಾರವಾದಾಗ** ಸನಾತನ ಎಂದಾಗುವದು. ವೇದವೇದಿತವಾದ (ವೇದದಲ್ಲಿ ಹೇಳಿದ) ಎಂದರ್ಥವಾಗುವದು. **ಯಃ** ಯಾವ **ಧರ್ಮಃ** ಭಗವನ್ನಾಮಸಂಕೀರ್ತನೆ ಮೊದಲಾದ ಧರ್ಮವು **ಉಪನ್ಯಸ್ತಃ** ಹೇಳಲ್ಪಟ್ಟಿತ್ತೋ **ಅಯಂ** ಇದು **ಅಹರಹಃ** ಪ್ರತಿನಿತ್ಯವೂ ಸಾಧನೆ ಪೂರ್ಣವಾಗುವವರೆಗೂ **ಕ್ರಿಯತೇ ತು** ಮಾಡಿದ್ದೇ ಆದರೆ **ಯಥಾ** ಹೇಗೆ **ವಾಸಸಃ** ಬಟ್ಟೆಯನ್ನು ದಿನವು ಒಗೆಯುವುದರಿಂದ ಶುದ್ಧಿಯೋ **ತಥಾ** ಹಾಗೆ **ಆತ್ಮನಃ ಶುದ್ಧಿಃ** ಜಡಮನಸ್ಸು ನಾಶವಾಗಿ ಚಿನ್ಮನಸ್ಸಿಗೆ ಕೈವಲ್ಯರೂಪ ಶುದ್ಧಿಯು **ಭವತಿ** ಆಗುವದು. **ಕ್ರಿಯತೇ ಹ ಚೇತ್ ರಹಃ ಶುದ್ಧಿಃ ಏಕಾಂತಿಕೀ ಶುದ್ಧಿಃ** ಎಂದೂ ಅರ್ಥಮಾಡಿರುವರು.

**ವಿಶೇಷ ಅರ್ಥ**

**ಶಾರೀರಾದ್ವಾಚಿಕಾಭ್ಯಾಸೋ ವಾಚಿಕಾನ್ಮಾನಸೋ ಭವೇತ್ ।**
**ಮಾನಸಾದ್ವಿಪಶಾನ್ಮುಚ್ಯೇನ್ನಾನ್ಯಥಾ ಮುಕ್ತಿರಿಷ್ಯತೇ ॥**

ಎಂಬ ಪ್ರಮಾಣದಂತೆ ಒಂದು ಬಾರಿ ಸ್ಮರಣೆಯಿಂದಲೇ ಮೋಕ್ಷವಾಗುವುದು ಕೇವಲ ಅಧಿಕಾರಿಗಳಿಗೆ ಮಾತ್ರ. ಎಲ್ಲರಿಗೂ ಅಲ್ಲ. ಅಜಾಮಿಳನು ಆ ಬಗೆಯ ಅಧಿಕಾರಿಯಲ್ಲ. ಆದ್ದರಿಂದ ಅವನಿಗೆ ಆಗಲೇ ಮೋಕ್ಷವಾಗಲಿಲ್ಲ. ಆದ್ದರಿಂದ ಅಧಿಕಾರಿಯ ಸಾಧನ ಪರಿಪಕ್ವವಾಗುವವರೆಗೂ ಶ್ರೀಹರಿಯ ಪಾದಸೇವನೆಯನ್ನು ಆವೃತ್ತಿ ಮಾಡುತ್ತಲೇ ಇರಬೇಕು. ॥೧೮॥

ಶ್ರೀಹರಿಯ ಸೇವೆಯಿಂದ ಮನಃಶುದ್ಧಿಯಾದಂತೆ ನಿರಂತರ ಪ್ರಾಯಶ್ಚಿತ್ತ ಮಾಡುವುದರಿಂದ ಏಕಾಗಬಾರದು? ಎಂದರೆ ಹೇಳುವರು-

**ನೈಕಾಂತಶುದ್ಧಿಃ ಸ್ಯಾತ್ ಕರ್ತುಃ ಕ್ರಿಯಯಾ ಕರ್ತೃತಾ(ತಾಂ) ಯತಃ ।**
**ಅಕರ್ತುರಾತ್ಮನಸ್ತಸ್ಮಾದ್ಭಜೇತಾನೀಹಯಾ ಹರಿಮ್ ॥೧೯॥**

**ಅಕರ್ತುಃ** ಸ್ವತಂತ್ರ ಕರ್ತೃತ್ವವಿಲ್ಲದ **ಆತ್ಮನಃ** ಜೀವನಿಗೆ **ಯತಃ** ಯಾವ ಕಾರಣ **ಕರ್ತುಃ** ಪ್ರಾಯಶ್ಚಿತ್ತ ಮಾಡಿಕೊಳ್ಳುವ **ಅಕರ್ತೃತಾ** ಸ್ವತಂತ್ರಕರ್ತೃತ್ವವಿಲ್ಲವೋ **ಕ್ರಿಯಯಾ** ಪ್ರಾಯಶ್ಚಿತ್ತ ಕರ್ಮದಿಂದ **ಏಕಾಂತಶುದ್ಧಿಃ** ಮನಃಶುದ್ಧಿ ಪೂರ್ವಕವಾದ ಶುದ್ಧಿಯು **ನ ಸ್ಯಾತ್** ಆಗುವುದಿಲ್ಲ. **ತಸ್ಮಾತ್** ಆ ಕಾರಣದಿಂದ **ಅನೀಹಯಾ** ನಿಷಿದ್ಧಕರ್ಮ ಮಾಡದೇ **ಕ್ರಿಯಯಾ** ನಿರಂತರ ಹರಿನಾಮ ಕೀರ್ತನವೆಂಬ ಕ್ರಿಯೆಯಿಂದ **ಹರಿಂ** ಹರಿಯನ್ನು **ಭಜೇತ** ಸೇವಿಸಬೇಕು.

**ಕರ್ತೃತಾ ಯತಃ** ಎಂಬ ಪಾಠದಲ್ಲಿ **ಕರ್ತುಃ** ಜೀವನಿಗೆ **ಕ್ರಿಯಯಾ** ಪ್ರಾಯಶ್ಚಿತ್ತ ಮೊದಲಾದ ಕರ್ಮಗಳಿಂದ **ಏಕಾಂತಶುದ್ಧಿಃ** ಆತ್ಯಂತಿಕ ಶುದ್ಧಿಯು **ನ ಸ್ಯಾತ್** ಆಗುವುದಿಲ್ಲ. **ತಸ್ಮಾತ್** ಆ ಕಾರಣ **ಅಕರ್ತುಃ** ತನಗೊಬ್ಬ ಕರ್ತೃವಿಲ್ಲದ **ಆತ್ಮನಃ** ಪರಮಾತ್ಮನಿಗೆ **ಯತಃ** ಯಾವ ಕಾರಣದಿಂದ **ಕರ್ತೃತಾ** ಸ್ವಾತಂತ್ರ್ಯವು 'ಕರ್ತೃತ್ವಂ ತು ಸ್ವತಂತ್ರತ್ವಮ್' ಎಂದು ಹೇಳಿದೆ. **ತತಃ** ಆ ಕಾರಣದಿಂದ **ಅನೀಹಯಾ** ನಿಷ್ಕಾಮನೆಯಿಂದ **ಹರಿಂ ಭಜೇತ** ಶ್ರೀಹರಿಯನ್ನು ಸೇವಿಸಬೇಕು.

ಅಸ್ವತಂತ್ರನಾದ ಜೀವನು ಸ್ವಾತಂತ್ರ್ಯಾಭಿಮಾನದಿಂದ ಪ್ರಾಯಶ್ಚಿತ್ತಾದಿಗಳನ್ನು ಮಾಡಿದರೆ ಅದರಿಂದ ಮನಃಶುದ್ಧಿಯಾಗುವುದಿಲ್ಲ. ಶ್ರೀಹರಿಯೇ ಸ್ವತಂತ್ರನೆಂಬ ಜ್ಞಾನಪೂರ್ವಕವಾಗಿಯೇ ಪ್ರಾಯಶ್ಚಿತ್ತಗಳನ್ನು ಮಾಡಬೇಕು. ಅಂದರೆ ಹರಿನಾಮ ಕೀರ್ತನೆ ಮಾಡಿದಂತಾಗಿ ಅದರಿಂದ ಏಕಾಂತ ಶುದ್ಧಿಯಾಗುವದು.

**ಸತ್ಯಧರ್ಮೀಯ ವಿಶೇಷ ಅರ್ಥ**

**ಕ್ರಿಯಯಾ** ತಪಸ್ಸು ಮೊದಲಾದ ಪ್ರಾಯಶ್ಚಿತ್ತಕ್ರಿಯೆಯಿಂದ **ಏಕಾಂತಶುದ್ಧಿಃ** ಸಂಸಾರಬೀಜನಾಶಕ ಮನಃಶೋಧನವು **ಕರ್ತುಃ** ಜೀವನಿಗೆ **ನ ಭವತಿ** ಆಗಲಾರದು. **ಅಕರ್ತುಃ** 'ಹರಿರಕ್ಲಿಷ್ಟಕಾರಿತ್ವಾದಕರ್ತೇತ್ಯುಚ್ಯತೇ ಬುಧೈಃ' ಎಂಬ ವಚನಾನುಸಾರ ಕ್ಲೇಶವಿಲ್ಲದೆ ಕರ್ಮ ಮಾಡುವುದರಿಂದ ಭಗವಂತನಿಗೆ ಅಕರ್ತಾ ಎನ್ನುವರು. 'ಅತತ್ಫಲಭೋಕ್ತೃತ್ವಾದಕರ್ತಾ ಹರಿಃ' 'ಅನಶ್ನನ್' ಎಂದು ಶ್ರುತಿ ಇದೆ. 'ನಾಽಸೌ ದುಃಖಭುಗುಚ್ಯತೇ' ಮುಂತಾದ ಸ್ಮೃತಿಯೂ ಇದೆ. ಆದ್ದರಿಂದ ಕ್ರಿಯಾಫಲ ಅನುಭವಿಸದಿರುವುದರಿಂದ ದುಃಖ ಅನುಭವಿಸದಿರುವುದರಿಂದಲೂ ಭಗವಂತನು ಅಕರ್ತಾ ಎನಿಸಿದ್ದಾನೆ. **ಆತ್ಮನಃ** ವ್ಯಾಪ್ತನಾದುದರಿಂದ ಜ್ಞಾತೃವಾದುದರಿಂದ ಆತ್ಮಾ ಎನಿಸಿದ ಶ್ರೀಹರಿಯ ದೆಸೆಯಿಂದ **ಕ್ರಿಯಯಾ** ಕ್ರಿಯೆ ಮಾಡುವುದರಿಂದ **ಯತಃ** **ಕರ್ತೃತಾ** ಕರ್ತೃತ್ವ (ಜೀವನಿಗೆ) ಬರುವುದೋ **ತಸ್ಮಾತ್** ಆದ್ದರಿಂದ **ತಂ ಹರಿಂ** ಕ್ರಿಯೆ

ಮಾಡಿಸುವ ಶ್ರೀಹರಿಯನ್ನು **ಅನೀಹಯಾ** ಫಲೇಚ್ಛೆಯಿಲ್ಲದೇ **ಭಜೇತ** ಸ್ಮರಣಾದಿರೂಪ ಸೇವೆ ಮಾಡಬೇಕು. **ಯತಃ** ಯಾವ ಕಾರಣ **ಕ್ರಿಯಯಾ** ಪೂರ್ವದಲ್ಲಿ ಮಾಡಲಾರಂಭಿಸಿದ ಕ್ರಿಯೆಯಿಂದ ಮತ್ತೆ **ಕರ್ತೃತಾ** ದೇಹಾಂತರ ಪ್ರಾಪಕವಾದ ಕರ್ಮಕರ್ತೃತೆಯು ಬರುವದು. ಇದರಿಂದ ಕರ್ಮ ಪರಂಪರೆ ಮುಗಿಯಲಾರದು ಎಂದು ಧ್ವನಿತವಾಗುವುದು. ಅಕರ್ತುಃ ಈಷತ್ಕರ್ತೃವಾದ ಫಲ ಅನುಭವಿಸಲು ಮಾತ್ರ ಕಾರಣವಾದ ಪರತಂತ್ರ ಕರ್ತೃತ್ವ ಉಳ್ಳ **ಆತ್ಮನಃ** ಜೀವನ **ಕ್ರಿಯಯಾ** ಪ್ರಾಯಶ್ಚಿತ್ತಾದಿಗಳಿಂದ **ನ ಏಕಾಂತಶುದ್ಧಿಃ ಯತಃ ತಸ್ಮಾತ್** ಏಕಾಂತಶುದ್ಧಿ ಆಗುವುದಿಲ್ಲ. 'ಅನೀಹಯಾ' ಎಂಬಲ್ಲಿ **ಯಾ** ಕ್ರಿಯೆಯು **ಏಕಾಂತಶುದ್ಧಿಃ** ಮುಖ್ಯಶುದ್ಧಿಯು **ಸಾ ನ ಸ್ಯಾತ್** ಅದು ಆಗುವುದಿಲ್ಲ ಎಂದನ್ವಯ. **ತಸ್ಮಾತ್** ಆದ್ದರಿಂದ **ಅನೀ** ಪ್ರಾಣಿಯು **ಹರಿಂ ಭಜೇತ** ಶ್ರೀಹರಿಯನ್ನು ಸೇವಿಸಬೇಕು. ॥೧೯॥

**ಅಜ್ಞಾನಾದಥವಾ ಜ್ಞಾನಾದುತ್ತಮಶ್ಲೋಕನಾಮ ಯತ್ ।**
**ಸಂಕೀರ್ತಿತಮಘಂ ಪುಂಸೋ ದಹತ್ಯೇಧೋ ಯಥಾಽನಲಃ ॥೨೦॥**

**ಅಜ್ಞಾನಾತ್** ಅವಯವಾರ್ಥವನ್ನು ತಿಳಿಯದೇ ಪಾಪಹರವೆಂದು ತಿಳಿಯದೇ ಅಥವಾ **ಜ್ಞಾನಾತ್** ಅವಯವಾರ್ಥವನ್ನು ತಿಳಿದು ಪಾಪಹರವೆಂದು ತಿಳಿದು **ಯತ್** ಯಾವ ಶ್ರೀಹರಿಯ ನಾಮವು **ಸಂಕೀರ್ತಿತಂ** ಭಕ್ತಿಯಿಂದ ಉಚ್ಚರಿತವಾಯಿತೋ **ತತ್** ಆ **ಉತ್ತಮಶ್ಲೋಕನಾಮ** ಪವಿತ್ರವಾದ ಕೀರ್ತಿಯುಳ್ಳ ಶ್ರೀಹರಿಯ ನಾಮವು **ಅನಲಃ** ಸುಡುತ್ತದೆ ಎಂದು ತಿಳಿಯದೆ ಅಥವಾ ತಿಳಿದು ಹಾಕಿದ ಬೆಂಕಿಯು **ಯಥಾ** ಹೇಗೆ **ಏಧಃ** ಸುಡಲು ಯೋಗ್ಯವಾದ ಕಟ್ಟಿಗೆಯನ್ನು **ದಹತಿ** ಸುಡುವುದೋ **ತಥಾ** ಹಾಗೆ **ಪುಂಸಃ** ಅಧಿಕಾರಿಯಾದ ಜೀವನ **ಅಘಂ** ಪಾಪವನ್ನು **ದಹತಿ** ಸುಡುವುದು.

**ವಿಶೇಷ ಅರ್ಥ**

ಅಜ್ಞಾನಾತ್ ಎಂಬುದಕ್ಕೆ ಶ್ರೀಹರಿಯ ಜ್ಞಾನವಿಲ್ಲದೆ ಎಂದರ್ಥ ಮಾಡಬಾರದು. ಅರವಿರುದ್ಧವಾದ್ದರಿಂದ ನಾರಾ ಎಂದರೆ ಗುಣಗಳು. ಅವುಗಳಿಗೆ ಆಶ್ರಯ ನಾರಾಯಣ ಎಂಬೀ ಯೌಗಿಕಾರ್ಥವನ್ನು ತಿಳಿಯದೆ ಎಂದರ್ಥ ಮಾಡಬೇಕು. ಇಲ್ಲದಿದ್ದರೆ ಶ್ರೀಹರಿಯು ಸರ್ವಶಬ್ದವಾಚ್ಯನಾದ್ದರಿಂದ ಘಟಪಟ ಮೊದಲಾದ ಶಬ್ದಗಳೂ ಅವನ ಹೆಸರುಗಳೇ ಆಗಿರುವಾಗ ಅವುಗಳನ್ನು ಬಿಟ್ಟು ನಾರಾಯಣ ಮೊದಲಾದ ಹೆಸರುಗಳನ್ನೇ ಕೀರ್ತಿಸಬೇಕೆಂಬುದಕ್ಕೆ ಕಾರಣವೇ ಇಲ್ಲವಾಗುವುದು. ಆದ್ದರಿಂದ ಅಜ್ಞಾನಾತ್ ಎಂಬುದು ಔಪಚಾರಿಕವೆಂದು ತಿಳಿಯಬೇಕು.

ಸುಡುತ್ತದೆಂದು ತಿಳಿಯದೆ ಹಾಕಿದ ಬೆಂಕಿಯು ಕಟ್ಟಿಗೆಯನ್ನು ಸುಡುವಂತೆ ಎಂದು ಹೇಳಿದ್ದರಿಂದ ಪಾಪಹರವೆಂದು ತಿಳಿಯದೆ ಭಕ್ತಿಯಿಂದ ಉಚ್ಚರಿಸಿದ ಹರಿನಾಮವೂ ಭಕ್ತನ ಪಾಪವನ್ನು ಹೋಗಲಾಡಿಸುವುದೆಂದು ಅರ್ಥವಾಯಿತು. ಕಟ್ಟಿಗೆ ಎಂದು ಹೇಳಿದ್ದರಿಂದ ಸುಡಬಹುದಾದುದನ್ನೇ ಬೆಂಕಿಯು ಸುಡುತ್ತದೆಯೇ ಹೊರತು ಸುಡಲಾಗದ ಕಲ್ಲನ್ನು ಅಲ್ಲ. ಅದರಂತೆ ಭಕ್ತನ ಪಾಪವನ್ನು ಹರಿನಾಮವು ಕಳೆಯುವುದೇ ಹೊರತು ಭಕ್ತಿಯಿಲ್ಲದವನ ಪಾಪವನ್ನಲ್ಲವೆಂದು ತಿಳಿಯಬೇಕು.

ಅಥವಾ **ಅಜ್ಞಾನಾತ್** ಅಲ್ಪಜ್ಞಾನದಿಂದ ಇದು ಭಗವನ್ನಾಮ ಇದರ ಸ್ಮರಣವೇ ಶರಣ ಎಂಬ ಅಲ್ಪಜ್ಞಾನದಿಂದ ಎಂದರ್ಥ. **ಜ್ಞಾನಾತ್** ಮುಖ್ಯಾಮುಖ್ಯ ನ್ಯಾಯದಿಂದ ನಿರ್ವಚನದಿಂದ ಬರುವ ಅನನ್ಯಾಧೀನ ಅರ್ಥಪೌಷ್ಕಲ್ಯವತ್ವ ಜ್ಞಾನದಿಂದ ಎಂದರ್ಥ. 'ಅಜ್ಞಾನಾತ್' ಎಂದೂ ಛೇದ ಮಾಡಬಹುದು. **ಯತ್ ಉತ್ತಮಶ್ಲೋಕನಾಮ** ಉದ್ಗತಂ ತಮಃ ಅಜ್ಞಾನಂ ಯಸ್ಮಾತ್ ಸಃ ಉತ್ತಮಃ ಸಃ ಶ್ಲೋಕಃ ಯಸ್ಯ ಸಃ ತಸ್ಯ ನಾಮ ಎಂದರೆ ಅಜ್ಞಾನನಾಶಕವಾದ ಕೀರ್ತಿಯುಳ್ಳ ಶ್ರೀಹರಿಯ ನಾಮವೆಂದರ್ಥ.

ಇಲ್ಲಿ ಒಂದು ಶಕಾರ ಎರಡು ಶಕಾರ ಉಚ್ಚಾರಣ ವಿಶೇಷ ಅವಿಶೇಷ ವಿಚಾರವನ್ನು ನಾವು ಮಾಡಿದ ಭಾಷ್ಯದೀಪಿಕಾಯುಕ್ತಿವಾತ್ಯಾ ವ್ಯಾಖ್ಯಾನದಲ್ಲಿ 'ಯದ್ ದ್ವೈತಂ ನ ಪಶ್ಯತಿ' ಎಂಬ ಬೃಹದಾರಣ್ಯಕ ತತ್ವನಿರ್ಣಯ ನ್ಯಾಯಾಮೃತ ಮಹಾಭಾಷ್ಯ ಮುಂತಾದವುಗಳನ್ನು ಉದಾಹರಿಸಿ ಮಾಡಿದ್ದನ್ನು ಅನುಸಂಧಾನ ಮಾಡಬೇಕು. ತಮೋವಾಚಕವಾದ ತಮಶಬ್ದ ಎಂದಾದರೂ ತಿಳಿಯಬೇಕು. 'ತಮಂ ತು ತಮಸಾ ಸಾರ್ಧಮ್' ಎಂದು ದ್ವಿರೂಪ ಕೋಶವಿದೆ.

೨. **ಉತ್** ಉತ್ಕೃಷ್ಟಳಾದ **ತಮಃ** ದುರ್ಗಾತ್ಮಕಳಾದ ಶ್ರೀ ಅವಳಿಂದ ಶ್ಲೋಕ್ಯತೇ ಸ್ತುತಿಸಲ್ಪಡುವವನು ಉತ್ತಮಶ್ಲೋಕನು. 'ತಮೋ ಹಿ ದುರ್ಗಾ' ಎಂದು ಶ್ರುತಿಗೀತಾದಲ್ಲಿದೆ. ಮತ್ತು 'ತಮೋ ದುರ್ಗಾ ಪ್ರಕೀರ್ತಿತಾ' 'ಯತಃ ಸ ಗ್ಲಪಯೇತ್ ಸರ್ವಮ್' ಎಂದು ಬೃಹದಾರಣ್ಯಕಭಾಷ್ಯದಲ್ಲಿದೆ.

೩. ಉತ್ತಮೌ ಶ್ಲೋಕೌ ಸುಖಜ್ಞಾನೇ ಯಸ್ಯ ಸಃ ಉತ್ತಮಶ್ಲೋಕಃ ಶ ಸುಖ ಲೋಕ ಜ್ಞಾನ. ಶಂ ಲೋಕಃ ಶ್ಲೋಕಃ ಪರಮಜ್ಞಾನ ಪರಮಾನಂದ ಉಳ್ಳ ಎಂದರ್ಥ. 'ಲುಕ್ ಪ್ರಕಾಶೇ' ಎಂದು ಧಾತು.

ಅಘಂ ಪಾಪಂ. ಇಲ್ಲಿಯ ಏಕವಚನದಿಂದ ಸ್ಮರಣಾತಿರಿಕ್ತವಾದ ಯಾವ ಸಾಧನೆಯಿಂದಲೂ ಪಾಪದ ಫರಿಹಾರವಾಗುವುದಿಲ್ಲ. ಸ್ಮರಣ ಎಂಬ ಒಂದೇ ಸಾಧನದಿಂದ ಪಾಪದ ಪರಿಹಾರವಾಗುತ್ತದೆ. ದೇಹಾಂತರಾರಂಭಕವಾಗಿದೆ. ಯಾವುದನ್ನು ಸುಟ್ಟರೆ ಕೈಮುತ್ಯದಿಂದ ಇತರ ಎಲ್ಲ ಅನಿಷ್ಟಗಳ ನಿರಾಕರಣೆಯಾಗುತ್ತದೆ. ಆ ಪಾಪವನ್ನು ಸ್ವೀಕರಿಸಬೇಕು ಎಂದು ಸೂಚಿತವಾಗುತ್ತದೆ. ।।೨೦।।

ಎಲ್ಲ ಶಬ್ದಗಳೂ ಶ್ರೀಹರಿಯ ನಾಮಗಳೇ ಆಗಿವೆ. ಆದರೂ ಘಟ ಮೊದಲಾದ ಶಬ್ದಗಳ ಆವೃತ್ತಿಯಿಂದ ಫಲ ಬರುವುದಿಲ್ಲ. ನಾರಾಯಣ ಮೊದಲಾದ ಶಬ್ದಗಳ ಆವೃತ್ತಿಯಿಂದಲೇ ಫಲ ಬರುತ್ತದೆ. ಆದ್ದರಿಂದ ಇವೆರಡಕ್ಕೂ ಇರುವ ಈ ಬಗೆಯ ವಿಶೇಷಕ್ಕೆ ಕಾರಣವೇನು ? ಎಂದು ಶಂಕಿಸಿ ಮಂತ್ರೌಷಧಿಗಳ ದೃಷ್ಟಾಂತದಿಂದ ಈ ಶಂಕೆಯನ್ನು ಪರಿಹರಿಸುತ್ತಾರೆ.

**ಯಥಾऽಗದಂ ವೀರ್ಯಯುತಂ ಸೂಪಯು(ಭು)ಕ್ತಂ ಯದೃಚ್ಛಯಾ ।**
**ಅಜಾನತೋऽಪ್ಯಾತ್ಮಗುಣಂ ಕುರ್ಯಾನ್ಮಂತ್ರೋऽಪ್ಯುದಾಹೃತಃ ।।೨೧।।**

**ಯಥಾ** ಹೇಗೆ **ವೀರ್ಯಯುತಂ** ರೋಗವನ್ನು ಪರಿಹರಿಸುವ ಸಾಮರ್ಥ್ಯ ಉಳ್ಳ **ಸೂಪಯುಕ್ತಂ** ಉಪದೇಶಾದಿಗಳಿಂದ ಸರಿಯಾಗಿ ಪ್ರಯೋಗಿಸಲ್ಪಟ್ಟ **ಅಗದಂ** ಔಷಧವು **ಆತ್ಮಗುಣಂ** ತನ್ನ ರೋಗ ಪರಿಹಾರ ಗುಣವನ್ನು **ಅಜಾನತಃ ಅಪಿ** ತಿಳಿಯದಿರುವವನಿಗೂ **ಯದೃಚ್ಛಯಾ** ಶ್ರೀಹರಿಯ ಇಚ್ಛೆಯಿಂದ **ಕುರ್ಯಾತ್** ರೋಗವನ್ನು ಪರಿಹರಿಸುವುದೋ **ಯಥಾ** ಹೇಗೆ **ವೀರ್ಯಯುತಂ** ಸಾಮರ್ಥ್ಯ ಉಳ್ಳ **ಸೂಪಯುಕ್ತಂ** ಉಪದೇಶಾದಿಗಳಿಂದ ಸರಿಯಾಗಿ ಜಪಿಸಲ್ಪಟ್ಟ **ಮಂತ್ರಃ ಅಪಿ** ಮಂತ್ರವೂ ಕೂಡ **ಉದಾಹೃತಃ** ಉಚ್ಚರಿತವಾದುದು ತನ್ನ ಪಾಪಪರಿಹಾರಕ ಸಾಮರ್ಥ್ಯ ತಿಳಿಯದಿರುವವನಿಗೂ ಶ್ರೀಹರಿಯ ಇಚ್ಛೆಯಿಂದ ಪಾಪ ಹೋಗಲಾಡಿಸುವಂತೆ ನಾರಾಯಣ ಮೊದಲಾದ ನಾಮ ಸಂಕೀರ್ತನೆಯ ವಿಷಯದಲ್ಲಿಯೂ ಪಾಪಪರಿಹಾರಕವೆಂದು **ಉದಾಹೃತಃ** ಜ್ಞಾನಿಗಳಿಂದ ಹೇಳಲ್ಪಟ್ಟಿರುವುದು.

ಹೇಗೆ ಬೇರೆ ಹುಲ್ಲಿಗಿಂತ ಮೂಲಿಕೆಯು ರೋಗ ಪರಿಹಾರಕವೋ ಇತರ ಶಬ್ದಗಳಿಗಿಂತ ಮಂತ್ರವು ಪರಿಹಾರಕವೋ ಹಾಗೆ ಘಟ ಮೊದಲಾದ ಶಬ್ದಗಳಿಗಿಂತ ನಾರಾಯಣಾದಿ ಶಬ್ದಗಳು ವಿಶಿಷ್ಟ ಫಲದಾಯಕಗಳೆಂದು ಅಭಿಪ್ರಾಯ. 'ಅಜಾನತಃ' ಎಂಬಲ್ಲಿಯೂ ಉಪದೇಶ ಮೊದಲಾದವುಗಳಿಂದ ಸಾಮಾನ್ಯ ಜ್ಞಾನವು ಇದ್ದೇ

ಇರಬೇಕು. ಇಲ್ಲದಿದ್ದರೆ 'ಸೂಪಯುಕ್ತಂ' ಎಂಬುದರಿಂದ ಹೇಳಿದ ಉಪದೇಶ ಮೊದಲಾದವುಗಳ ಆವಶ್ಯಕತೆಯು ತಪ್ಪಾಗುವುದು. 'ಯದೃಚ್ಛಯಾ' ಎಂದದ್ದರಿಂದ ಎಲ್ಲವೂ ಸಮಾನವಾಗಿದ್ದರೂ ಮೂಲಿಕೆಗಳಲ್ಲಿ ಮಂತ್ರಗಳಲ್ಲಿ ಶ್ರೀಹರಿಯಿಂದ (ಇಚ್ಛೆಯಿಂದ) ಕ್ಲೃಪ್ತವಾದ ದೇವತಾಸನ್ನಿಧಾನದಿಂದ ವಿಶೇಷ ಫಲ ಬರುವಂತೆ ಘಟಾದಿ ಶಬ್ದಗಳಿಗಿಂತ ನಾರಾಯಣಾದಿ ಶಬ್ದಗಳಲ್ಲಿ ಶ್ರೀಹರಿ ತನ್ನ ಇಚ್ಛೆಯಿಂದ ದೇವತಾಸನ್ನಿಧಾನವನ್ನು ಹೆಚ್ಚಿಗೆ ಇಟ್ಟು ವಿಶೇಷ ಫಲ ಕೊಡುವಂತೆ ಮಾಡಿರುವನೆಂದು ತಾತ್ಪರ್ಯ ತೋರಿಸಿರುವರು.

ಪಾಪನಿವರ್ತನ ಸ್ವಭಾವ ಉಳ್ಳದ್ದಾಗಿದ್ದರೂ ಭಗವನ್ನಾಮವು ಜ್ಞಾನವಿಶೇಷದಿಂದ ಫಲವಿಶೇಷಪ್ರದವೆಂದು ತಿಳಿಸಲು ಔಷಧ ದೃಷ್ಟಾಂತ. ಹೀಗೆ ಹೇಳಿದೆ.

ಔಷಧಾದಿಷು ಚೈತಸ್ಮಾದ್ದೇವಾ ಏವ ವರಪ್ರದಾಃ ।
ಔಷಧಾದಿಸ್ಥಿತಾ ದೇವಾಸ್ತೇಽಜ್ಞೇ ದೃಷ್ಟಫಲಪ್ರದಾಃ ॥

ಜ್ಞಾನಿನ್ಯದೃಷ್ಟದಾಶ್ಚ ಸ್ಯುರ್ನ ದೈವಾತ್ ಕಿಂಚಿದಿಷ್ಯತೇ ।
ಯಥಾಽಜ್ಞಸ್ಯಾಪಿ ರಾಜ್ಞಸ್ತು ಭೋಜನಂ ಕ್ಲೃಪ್ತಮಿಷ್ಯತೇ ॥

ನ ತ್ವವಿಜ್ಞಾಯ ರಾಜಾನಂ ಗ್ರಾಮಪ್ರಾಪ್ತಿಸ್ತಥಾ ಭವೇತ್ ।
ಏವಂ ದೇವಾ ದೃಷ್ಟಫಲಂ ದದ್ಯುರಜ್ಞಸ್ಯ ಚಾಲ್ಪತಃ ॥

ಕಿಂಚಿದಜ್ಞಕೃತಾ ದೃಷ್ಟಾ ತಚ್ಚ ನೈವಾನ್ಯಥಾ ಭವೇತ್ ।
ಅದೃಷ್ಟಾಖ್ಯಂ ಫಲಂ ಯತ್ತು ತಜ್ಞಸ್ಯೈವ ನ ಚಾನ್ಯಗಮ್ ॥

ಔಷಧಾದಿಗಳಲ್ಲಿರುವ ದೇವತೆಗಳು ಅಜ್ಞಾನಿಗೆ ರೋಗ ಪರಿಹಾರವೆಂಬ ದೃಷ್ಟಫಲ ನೀಡುವರು. ಜ್ಞಾನಿಗಳಿಗೆ ರೋಗಪರಿಹಾರದ ಜೊತೆಗೆ ಪುಣ್ಯವನ್ನು ಕೊಡುವರು. ದೇವತೆಗಳಿಲ್ಲದೆ ಏನೊಂದೂ ಆಗಲಾರದು. ಹೇಗೆ ರಾಜನ ಜ್ಞಾನವಿಲ್ಲದಿದ್ದರೂ ಅವನ ಪ್ರಜೆಗೆ ಭೋಜನವು ಕ್ಲೃಪ್ತವಾಗಿರುವದು. ಆದರೆ ರಾಜನನ್ನು ತಿಳಿಯದೇ ಗ್ರಾಮವು ಬಹುಮಾನ ರೂಪವಾಗಿ ಸಿಗಲಾರದು. ಹೀಗೆಯೇ ದೇವತೆಗಳು ಅಜ್ಞಾನಿಗೆ ದೃಷ್ಟಫಲ ಕೊಡುವರು. ಅದೂ ಸ್ವಲ್ಪವಾಗಿ. ಅಜ್ಞಾನಿಯು ಮಾಡಿದ್ದು ಯಾವುದೂ ಪೂರ್ಣವಾಗಿ ವ್ಯರ್ಥವಲ್ಲ. ಆದರೆ ಪುಣ್ಯಮಾತ್ರ ಜ್ಞಾನಿಗೆ ಬರುವದು. ಅಜ್ಞಾನಿಗೆ ಇಲ್ಲ ಎಂದು ಪ್ರಮಾಣದ ಅರ್ಥ.

'ನಾಮಾನಿ ಸರ್ವಾಣಿ' 'ಸರ್ವನಾಮಾ ಸರ್ವಕರ್ಮಾ' ಎಂದು ವೇದ ಹೇಳಿರುವುದರಿಂದ ಘಟಾದಿಶಬ್ದಗಳು ಭಗವಂತನ ನಾಮಗಳಾಗಿವೆ. ಅವುಗಳನ್ನು ಉಚ್ಚರಿಸುತ್ತಲೇ ಇದ್ದೇವೆ. ಫಲ ಮಾತ್ರ ಕಂಡು ಬಂದಿಲ್ಲ. ನಾರಾಯಣಾದಿ ನಾಮಗಳನ್ನು ಉಚ್ಚರಿಸಿದ್ದೇವೆ. ಅದಕ್ಕೆ ಫಲವೂ ಕಂಡಿದೆ. ಇದಕ್ಕೆ ಕಾರಣವೇನು? ವಿಶೇಷವೇನು ? ಎಂದು ಪ್ರಶ್ನೆ ಬರುತ್ತದೆ. ನಿಜ. ಘಟಾದಿಶಬ್ದಗಳು ಭಗವನ್ನಾಮಗಳೇ ಆಗಿವೆ. ಆದರೆ ಅವುಗಳಲ್ಲಿ ಮಹಾತ್ಮರಾದ ಬ್ರಹ್ಮಾದಿಗಳೇ ಅಧಿಕಾರಿಗಳು. ಅವರಿಗೆ ಅವುಗಳ ಫಲ ದೊರೆತೇ ಇದೆ. ಇತರರು ನಾರಾಯಣಾದಿ ನಾಮಗಳಲ್ಲಿ ಅಧಿಕಾರಿಗಳು. ಅವರೇ ಈಗ ಪ್ರಸ್ತುತರು. ಕಾರಣ ನಾಮಗಳನ್ನು ಹೇಳಿದ್ದು. ಅವುಗಳೂ ಸಾಮಾನ್ಯ ತಿಳಿದವನಿಗೆ ಸಾಮಾನ್ಯ ಫಲವನ್ನು ನೀಡುತ್ತವೆ. ವಿಶೇಷವಾಗಿ ತಿಳಿದವನಿಗೆ ವಿಶೇಷಫಲ ಕೊಡುತ್ತವೆ. ಸ್ವಾಭಾವಿಕವಾದ ಸಾಮರ್ಥ್ಯದಿಂದ ಯುಕ್ತವಾದ ಔಷಧವನ್ನು ಸ್ವೀಕರಿಸಿದಾಗ ಅದು ಶರೀರದಲ್ಲಿ ಸೇರುತ್ತದೆ. ಈ ಔಷಧ ಈ ರೋಗಕ್ಕೆ ಪರಿಹಾರಕ ಎಂಬ ಜ್ಞಾನವಿಲ್ಲದಿದ್ದರೂ ಶ್ರೀಹರಿಯ ಇಚ್ಛೆಯಿಂದಲೇ ರೋಗಪರಿಹಾರವಾಗುತ್ತದೆ.

ಮಂತ್ರವು ಶ್ರೀಹರಿಯ ಇಚ್ಛೆಯಿಂದ ತನ್ನ ಗುಣವಾದ ಶ್ರೀ ಶ್ರೀನಿವಾಸನ ಪ್ರಸಾದಕ್ಕೆ ಸಾಧನವಾಗುತ್ತದೆ. ಶತ್ರುಪರಿಹಾರವನ್ನೂ ಮಾಡುತ್ತದೆ. ಅಲ್ಲಿ ಹೇಗೆ ಭಗವತ್ಸನ್ನಿಧಾನ ವಿಶೇಷ ಮಹಾತ್ಮ್ಯ ಪ್ರಯೋಜಕವೋ ಅದರಂತೆ ಇತರ ಶಬ್ದ ವಿಲಕ್ಷಣವೇ ನಾಮವಿಶೇಷದಲ್ಲಿದೆ. ವಿಶೇಷವಾಗಿ ಮಹಾಮಾಹಾತ್ಮ್ಯವಿದೆ. ಕಾರಣ ಅದರ ಉಚ್ಚಾರಣೆ ಉಚ್ಚತ್ವಕ್ಕೆ ಕಾರಣವೆಂದು ನಾಮ ಸಂಕೀರ್ತಿತಂ ಎಂದು ಕೀರ್ತಿತವಾಗಿದೆ. ।।೨೦।।

ತಾವು ಹೇಳಿದ ಧರ್ಮವನ್ನು ಕೇಳಿದರೂ ಸ್ವಲ್ಪ ಸಂಕುಚಿತ ಮನಸ್ಸುಳ್ಳ ಯಮದೂತರಿಗೆ ವಿಶ್ವಾಸ ಹುಟ್ಟಿಸಲು ಈ ರೀತಿ ಹೇಳಿ ವಿಶ್ವಾಸಗೊಳಿಸಿದರೆಂದು ಹೇಳುವರು.

**ಪತಿಂ ವಃ ಪೃಚ್ಛತ ಭಟಾ ಧರ್ಮೇಽಸ್ಮಿನ್ ಯದಿ ಸಂಶಯಃ ।**
**ಸ ವೇದ ಪರಮಂ ಗುಹ್ಯಂ ಧರ್ಮಸ್ಯ ಭಗವಾನ್ ಯಮಃ ।।೨೧।।**

**ಹೇ ಭಟಾಃ** ಯಮದೂತರೇ **ಅಸ್ಮಿನ್** ನಾವು ಹೇಳಿದ **ಧರ್ಮೇ** ಧರ್ಮಸೂಕ್ಷ್ಮದಲ್ಲಿ **ಯದಿ ಸಂಶಯಃ** ಒಂದು ವೇಳೆ ಸಂಶಯವಿದ್ದರೆ **ತರ್ಹಿ** ಆಗ **ವಃ ಪತಿಂ** ನಿಮ್ಮ

ಸ್ವಾಮಿಯಾದ ಯಮಧರ್ಮನನ್ನೇ **ಪೃಚ್ಛತ** ಕೇಳಿರಿ. 'ಯಥಾ ರಾಜಾ ತಥಾ ಪ್ರಜಾಃ' ಎಂದು ಹೇಳುವಂತೆ ಅವನ ಉಪದೇಶದಿಂದಲೇ ನಮಗೆ ಈ ಗತಿ. ಕಾರಣ ಅವನನ್ನು ಕೇಳುವುದು ವಿಫಲ ? ಎಂದರೆ ಹಾಗೆನಲ್ಲ ಅವನು ಎಂದು ಹೇಳುವರು. **ಸಃ ಭಗವಾನ್ ಯಮಃ** ಆ ಪೂಜ್ಯರಾದ ಯಮದೇವರು **ಧರ್ಮಸ್ಯ** ಧರ್ಮದ **ಪರಮಂ ಗುಹ್ಯಂ** ಇತರರಿಗೂ ಗೌಪ್ಯವಾದ ಸ್ವರೂಪವನ್ನು **ವೇದ** ತಿಳಿದಿರುವರು. ಕಾರಣ ನಿಮ್ಮ ಪ್ರಶ್ನೆ ಸಫಲ. ಅವರೂ ನಮ್ಮಂತೆಯೇ ಹೇಳುವರು ಎಂದು ಅಭಿಪ್ರಾಯ. **ಧರ್ಮಸ್ಯ** ಧಾರಕನಾದ್ದರಿಂದ ಧರ್ಮನೆನಿಸಿದ ಭಗವಂತನ **ವೇದಪರಮಂ** ವೇದ ಮುಖ್ಯಾರ್ಥನೆಂಬ **ಗುಹ್ಯಂ** ಸಾಕಲ್ಯೇನ ಜ್ಞಾತುಂ ಅಶಕ್ಯವಾದ್ದರಿಂದ ಗೋಪ್ಯನಾದವನನ್ನು **ವೇದ** ತಿಳಿದಿರುವನು. ।।೨೨।।

ಈ ರೀತಿ ವಿವಾದದ ನಂತರ ದೂತರು ಏನು ಮಾಡಿದರೆಂದು ಪರೀಕ್ಷಿತನ ಪ್ರಶ್ನೆಗೆ ಅವಕಾಶ ಕೊಡದೆ ಶುಕಾಚಾರ್ಯರು ಹೇಳಿದರು-

**ಶ್ರೀಶುಕ ಉವಾಚ -**

**ಏವಂ ತೇ ಸುವಿನಿರ್ಣೀಯ ಧರ್ಮಂ ಭಾಗವತಂ ನೃಪ ।**
**ತಂ ಯಾಮ್ಯಪಾಶಾನ್ನಿರ್ಮುಚ್ಯ ವಿಪ್ರಂ ಮೃತ್ಯೋರಮೂಮುಚನ್ ।।೨೩।।**

**ನೃಪ** ಪರೀಕ್ಷಿತರಾಜನೇ **ತೇ** ಆ ವಿಷ್ಣುದೂತರು **ಏವಂ** ಮೇಲೆ ಹೇಳಿದಂತೆ **ಭಾಗವತಂ** ಭಗವದ್ಭಕ್ತರ ಭಗವಂತನ **ಧರ್ಮಂ** ಕಟ್ಟಳೆಯನ್ನು **ಸುವಿನಿರ್ಣೀಯ** ಶಾಸ್ತ್ರಾಧಾರಗಳಿಂದ ನಿಶ್ಚಯಿಸಿ **ತಂ ವಿಪ್ರಂ** ಆ ಅಜಾಮಿಲಬ್ರಾಹ್ಮಣನನ್ನು **ಯಾಮ್ಯಪಾಶಾತ್** ಯಮಪಾಶದಿಂದ **ನಿರ್ಮುಚ್ಯ** ಬಿಡಿಸಿ **ಮೃತ್ಯೋಃ** ದೇಹ ವಿಯೋಗರೂಪ ಸಾವಿನಿಂದ **ಅಮೂಮುಚನ್** ಬಿಡಿಸಿದರು. ತಪ್ಪಿಸಿದರು.

ನೃಪ ! ಎಂದು ಸಂಬೋಧಿಸಿ ರಾಜರಲ್ಲಿಯೂ ದುರ್ಬಲರಾಜರ ವಿಷಯದಲ್ಲಿ ಪ್ರಬಲ ರಾಜನ ನಡವಳಿಕೆ ಈ ರೀತಿ ಇರುವುದು ಎಂಬುದು ನಿನಗೆ ಅನುಭವವಾದರೂ ಕೂಡ ಎಂದು ಧ್ವನಿತಗೊಳಿಸಿರುವರು. ತಾತ್ಕಾಲಿಕ ಮೃತ್ಯುವನ್ನು ಬಿಡಿಸಿದರು. ಭಗವಂತನಲ್ಲಿ ಭಕ್ತಿ ಹುಟ್ಟುವಂತೆ ಮಾಡಿದರು. ಉಳಿದ ಆಯುಷ್ಯದಲ್ಲಿ ಮುಕ್ತಿಗೆ ಬೇಕಾದ ಸಾಧನವನ್ನು ಮಾಡಿಕೊಳ್ಳಲಿ ಎಂದು ಅವನನ್ನು ಬಿಟ್ಟು ಹೋದರು ಎಂದು ಭಾವ. ।।೨೩।।

ಶ್ರೀಹರಿಪರಿಚಾರಕರು ಹೇಳಿದ ಮಾತಿಗೆ ಪ್ರತಿಯಾಗಿ ಉತ್ತರ ಕೊಡಲಾಗದೇ ತಮ್ಮ ಒಡೆಯನ ಮಾತನ್ನು ನಡೆಸಲೂ ಸಾಧ್ಯವಾಗದೇ ಯಮಭಟರು ಅಲ್ಲಿಯೇ ನಿಂತರೇ ? ಅಥವಾ ಬೇರೆಡೆಗೆ ಹೋದರೇ? ಹೇಳಿದ್ದನ್ನು ಮಾಡುವ ನಮಗೇನು? ಎಂದು ತಮ್ಮ ಒಡೆಯನ ಹತ್ತಿರವೇ ಹೋದರೇ ? ಎಂದರೆ ಆಸಮ್ಮತಿಯಿಂದ ಎರಡು ಪಕ್ಷಗಳನ್ನು ನಿರಾಕರಿಸಿ ಮೂರನೆಯದನ್ನೇ ಕ್ಷೇಮಕರವೆಂದು ತಿಳಿದು ಹಾಗೆ ಮಾಡಿದರೆಂದು ಹೇಳುವರು-

**ಇತಿ ಪ್ರತ್ಯುದಿತಾ ಯಾಮ್ಯಾ ದೂತಾ ಯಾತಾ ಯಮಾಂತಿಕಮ್ ।**
**ಯಮರಾಜ್ಞೇ ಯಥಾ ಸರ್ವಮಾಚಚಖ್ಯುರರಿಂದಮ ॥೨೪॥**

**ಅರಿಂದಮ** ಶತ್ರುಸಂಹಾರಕನಾದ ಪರೀಕ್ಷಿದ್ರಾಜನೇ **ಇತಿ** ಮೇಲೆ ಹೇಳಿದಂತೆ **ಪ್ರತ್ಯುದಿತಾಃ** ವಿಷ್ಣುದೂತರಿಂದ ಸರಿಯಾಗಿ ಉತ್ತರ ಕೊಡಲ್ಪಟ್ಟ ನಿರಾಕೃತರಾದ **ಯಾಮ್ಯಾಃ ದೂತಾಃ** ಯಮರಾಜನ ದೂತರು **ಯಮಾಂತಿಕಂ** ಯಮನ ಸಮೀಪಕ್ಕೆ **ಯಾತಾಃ ಸಂತಃ** ಹೋದವರಾಗಿ **ಯಮರಾಜ್ಞೇ** ಯಮರಾಜನಿಗೆ **ಸರ್ವಂ** ಎಲ್ಲವನ್ನು **ಯಥಾ** ನಡೆದ ರೀತಿಯಲ್ಲಿ **ಆಚಚಖ್ಯುಃ** ಹೇಳಿದರು.

**ಯಮರಾಜ್ಞೇ** ಇಲ್ಲಿ ಟಚ್ ಪ್ರತ್ಯಯವು ಬಂದು ಯಮರಾಜಾಯ ಎಂದು ಆಗಬೇಕಾಗಿತ್ತು. ಯಮರಾಜ್ಞೇ ಎಂದು ಹೇಗೆ ಪ್ರಯೋಗಮಾಡಿದರು. ಎಂದು ಶಂಕಿಸಬಾರದು. 'ಜಾನಂತಿ ಪೂರ್ವರಾಜಾನಃ' 'ಆದಿರಾಜ್ಞಾಂ' ಎಂದು ಪ್ರಯೋಗವಿರುವುದರಿಂದ 'ಟಚ್' ಅನಿತ್ಯವೆಂದು ತಿಳಿಯಬೇಕು.

ಅಥವಾ **ಹೇ ಯಮ** ಎಂದು ಸಂಬೋಧಿಸಿ **ರಾಜ್ಞೇ ಆಚಚಖ್ಯುಃ** ಎಂದಾದರೂ ಅನ್ವಯ ಮಾಡಬಹುದು.

**ಯಮರಾಜ್ಞೇ** ಎಂಬಲ್ಲಿ **ಯಂ ಅರಾಜ್ಞೇ** ಎಂದು ವಿಭಾಗ ಮಾಡಿ **ಯಂ ಪ್ರತಿ** ಧರ್ಮವನ್ನು ಉದ್ದೇಶಿಸಿ **ಉದಿತಾಃ** ನಾಮೋಚ್ಚಾರಣ ಮಾತ್ರ ಆಚರಿಸಿದ ಧರ್ಮವನ್ನು **ಅರಾಜ್ಞೇ ಅರಾನ್** ದೋಷಗಳನ್ನು ಆ ಚೆನ್ನಾಗಿ **ಜಾನಾತೀತಿ** ತಿಳಿಯುವುದರಿಂದ ಜ್ಞ ಎನಿಸುವ ಎಂದರೆ ದೋಷಜ್ಞನಿಗೆ ಜ್ಞಾನಿಯಲ್ಲಿ ಎಂದರ್ಥ. ದೋಷ ಅರ ಛಿದ್ರ ಶಬ್ದಗಳು ಪರ್ಯಾಯವಾಚಕವಾಗಿವೆ. 'ವಿದ್ವಾನ್ ವಿಪಶ್ಚಿತ್ ದೋಷಜ್ಞಃ' ಎಂದೂ ಇದೆ. 'ವಟೇ ಗಾವಃ' ಎಂಬಲ್ಲಿಯಂತೆ ಸಮೀಪಕಾಧಿಕರಣೇ ಸಪ್ತಮೀ. ಜ್ಞಾನಿಯ ಸಮೀಪದಲ್ಲಿ ಆಚಚಖ್ಯುಃ ಎಂದೂ ಮಾಡಬಹುದು.

ಶ್ರೀಹರಿಯ ದೂತರು ಮಾಡಿದ ಅವಮಾನದ ಭಯದಿಂದ 'ಯಮ ಯಮ' ಎಂದು ಯಾತಾಃ ಯಾಮ್ಯಾ ದೂತಾಃ ಹೋದ ಯಮಭಟರು ಎಂದು ಅರ್ಥ.

**ಅಂತಿಕಂ** ಅಂತೀಯಸುಖವನ್ನು ಎಂದರ್ಥ. ತಾವು ಕೊಡಬೇಕೆಂದು ನಿಶ್ಚಯಿಸಿದ **ಅಂತಃ** ದೇಹವಿಯೋಗವುಳ್ಳವನು **ಅಂತಿ** ಅವನ ಮೃತಪ್ರಾಯನಾದವನ **ಕಂ** ದೇಹವಿಯೋಗವಾಗದೇ ಇದ್ದದ್ದರಿಂದ ಉಂಟಾದ ಭಗವದ್ದೂತರು ನೀಡಿರುವ ಸುಖವನ್ನು ಎಂದು ಅರ್ಥ ಮಾಡಿ ಅನ್ವಯಿಸಬಹುದು. 'ಸುಖಶೀರ್ಷಜಲೇಷು ಕಮ್' ಎಂದು ವಿಶ್ವಕೋಶವಿದೆ. ।।೨೪।।

ತನ್ನ ಮೃತ್ಯುವಿನ ಮೋಚನೆಯಾದ ಮೇಲೆ ಅಜಾಮಿಲನು ಏನು ಮಾಡಿದ? ಅಥವಾ ಹರಿಭಟರು ಏನು ಮಾಡಿದರು? ಎಂದರೆ ಹೇಳುವರು.

**ದ್ವಿಜಃ ಪಾಶಾದ್ವಿನಿರ್ಮುಕ್ತೋ ಗತಭೀಃ ಪ್ರಕೃತಿಂ ಗತಃ ।**
**ವವಂದೇ ಶಿರಸಾ ವಿಷ್ಣೋಃ ಕಿಂಕರಾನ್ ದರ್ಶನೋತ್ಸುಕಃ ।।೨೫।।**

**ಪಾಶಾದ್ವಿನಿರ್ಮುಕ್ತಃ** ಯಮಪಾಶದಿಂದ ಬಿಡಲ್ಪಟ್ಟ ಆದ್ದರಿಂದಲೇ **ಗತಭೀಃ** ಭಯವನ್ನು ಕಳೆದುಕೊಂಡ **ಪ್ರಕೃತಿಂ** ಮೊದಲು 'ಅಯಂ ಶ್ರುತಸಂಪನ್ನಃ' ಎಂದು ಹೇಳಿದಂತೆ ತನ್ನ ಸ್ವಭಾವವಾದ ಸಾತ್ವಿಕಾವಸ್ಥೆಯನ್ನು **ಗತಃ ಚ** ಹೊಂದಿದ **ದ್ವಿಜಃ** ಆ ಬ್ರಾಹ್ಮಣನಾದ ಅಜಾಮಿಳನು **ದರ್ಶನೋತ್ಸುಕಃ ಸನ್** ಅವರನ್ನು ನೋಡುವ ಕುತೂಹಲದಿಂದ ಕೂಡಿದವನಾಗಿ **ವಿಷ್ಣೋಃ ಕಿಂಕರಾನ್** ವಿಷ್ಣುದೂತರನ್ನು **ಶಿರಸಾ ವವಂದೇ** ತಲೆಬಾಗಿ ನಮಸ್ಕರಿಸಿದನು. 'ದರ್ಶನೋತ್ಸುಕಾನ್' ಎಂಬ ಪಾಠದಲ್ಲಿ ತಮ್ಮ ದರ್ಶನದಿಂದ ಸಂತೋಷಕರರಾದ ಎಂದರ್ಥ. ।।೨೫।।

ಮನುಷ್ಯ ದೇಹದಲ್ಲಿರುವ ಅಜಾಮಿಳನೊಂದಿಗೆ ಮಾತನಾಡಬಾರದಾದ್ದರಿಂದ ವಿಷ್ಣುದೂತರು ಏನು ಮಾಡಿದರೆಂದು ಹೇಳುತ್ತಾರೆ-

**ತಂ ವಿವಕ್ಷುಮಭಿಪ್ರೇತ್ಯ ಮಹಾಪುರುಷಕಿಂಕರಾಃ ।**
**ಸಹಸಾ ಪಶ್ಯತಸ್ತಸ್ಯ ತತ್ರಾಂತರ್ದಧಿರೇಽನಘ ।।೨೬।।**

**ಅನಘ** ಪಾಪರಹಿತನಾದ ಪರೀಕ್ಷಿತನೇ! **ಮಹಾಪುರುಷಕಿಂಕರಾಃ** ಪುರುಷೋತ್ತಮನಾದ ಶ್ರೀಹರಿಯ ದೂತರು **ತಂ** ಆ ಅಜಾಮಿಳನನ್ನು **ವಿವಕ್ಷುಂ** ಮಾತನಾಡಬಯಸುವವನನ್ನು **ಅಭಿಪ್ರೇತ್ಯ** ತಿಳಿದು **ತಸ್ಯ** ಅವನು **ಪಶ್ಯತಃ**(ಸತಃ)

ನೋಡುತ್ತಿರುವಾಗಲೇ **ತತ್ರ** ಅಲ್ಲಿ **ಸಹಸಾ** ಇದ್ದಕ್ಕಿದ್ದಂತೆಯೇ **ಅಂತರ್ದಧಿರೇ** ಅದೃಶ್ಯರಾದರು. ಬಂದ ಕಾರ್ಯವಾಗಿತ್ತು. ಬೇರೆ ಕಾರ್ಯ ಈಗ ಇರಲಿಲ್ಲ. ಕಾರಣ ಅಂತರ್ಧಾನರಾದರೆಂದು ಭಾವ. ।।೨೬।।

**ಅಥಾಜಾಮಿಲ ಆಕರ್ಣ್ಯ ದೂತಾನಾಂ ಯಮಕೃಷ್ಣಯೋಃ ।**
**ಧರ್ಮಂ ಭಾಗವತಂ ಶುದ್ಧಂ ತ್ರೈವಿದ್ಯಂ ಚ ಗುಣಾಶ್ರಯಮ್ ।।೨೭।।**

**ಅಥ** ವಿಷ್ಣುದೂತರು ಅದೃಶ್ಯರಾದ ಮೇಲೆ **ಅಜಾಮಿಲಃ** ಅಜಾಮಿಳನು **ಯಮಕೃಷ್ಣಯೋಃ** ಯಮನ ಮತ್ತು ವಿಷ್ಣುವಿನ **ದೂತಾನಾಂ ಸಕಾಶಾತ್** ದೂತರುಗಳಿಂದ ಕ್ರಮವಾಗಿ **ಗುಣಾಶ್ರಯಂ** ಸತ್ವರಜಸ್ತಮೋಗುಣಗಳಿಂದ ಕೂಡಿದ ಸ್ವರ್ಗಾದಿಫಲಗಳುಳ್ಳ **ತ್ರೈವಿದ್ಯಂ ಧರ್ಮಂ** ಮೂರು ವೇದಗಳಲ್ಲಿ ಅಮುಖ್ಯವಾಗಿ ಹೇಳಿದ ಧರ್ಮವನ್ನು **ಶುದ್ಧಂ** ಮೋಕ್ಷಸಾಧನವಾದ ಮೂರು ವೇದಗಳಲ್ಲಿ ಮುಖ್ಯವಾಗಿ ಹೇಳಿದ **ಭಾಗವತಂ** ಭಗವತ್ ಕೀರ್ತನಾದಿ ರೂಪವಾದ **ಧರ್ಮಂ ಚ** ಧರ್ಮವನ್ನು **ಆಕರ್ಣ್ಯ** ಕೇಳಿ

ಇಲ್ಲಿ 'ಯಮಕೃಷ್ಣಯೋಃ' ಎಂಬಲ್ಲಿ ಬಂದ ಕ್ರಮದಿಂದ ಹೇಳಿರುವರು ಎಂದಾಗಲಿ ಸಿದ್ಧಾಂತವು ಪೂರ್ವಪಕ್ಷಪೂರ್ವಕವಾಗಿರುವುದು ಸಿದ್ಧವೆಂದಾಗಲಿ ಅಭ್ಯರ್ಹಿತಂ ಪೂರ್ವಂ ಎಂಬ ನಿಯಮವನ್ನು ಅನುಸರಿಸಿಲ್ಲ ಎಂದು ತಿಳಿಯಬೇಕು. ಯಮದೂತರಿಂದ ಸ್ವರ್ಗಾದಿ ಫಲಕ ಧರ್ಮಗಳನ್ನು ವಿಷ್ಣುದೂತರಿಂದ ಮೋಕ್ಷಜನಕ ಭಾಗವತಧರ್ಮವನ್ನು ಅಜಾಮಿಳ ಕೇಳಿದನು ಎಂದು ಭಾವ. ।।೨೭।।

**ಭಕ್ತಿಮಾನ್ ಭಗವತ್ಯಾಶು ಮಾಹಾತ್ಮ್ಯಶ್ರವಣಾದ್ಧರೇಃ ।**
**ಅನುತಾಪೋ ಮಹಾನಾಸೀತ್ ಸ್ಮರತೋಽಶುಭಮಾತ್ಮನಃ ।।೨೮।।**

**ಹರೇಃ** ಶ್ರೀಹರಿಯ **ಮಹಾತ್ಮ್ಯಶ್ರವಣಾತ್** ಸಮಸ್ತಪಾಪಪರಿಹಾರಕ ಮಹಿಮೆಯನ್ನು ಕೇಳಿದ್ದರಿಂದ **ಭಗವತಿ** ಭಗವಂತನಲ್ಲಿ **ಆಶು** ಕೂಡಲೇ ತಾಮಸಾಽಽವರಕವು ಹೋದುದರಿಂದ **ಭಕ್ತಿಮಾನ್ ಅಭೂತ್** ಭಕ್ತಿಯುಳ್ಳವನಾದನು. **ಆತ್ಮನಃ** ತನ್ನ **ಅಶುಭಂ** ಪಾಪವನ್ನು **ಸ್ಮರತಃ** ನೆನಪಿಸಿಕೊಂಡ ಆ ಅಜಾಮಿಳನಿಗೆ **ಮಹಾನ್ ಅನುತಾಪಃ** ಅತಿಶಯವಾದ ಪಶ್ಚಾತ್ತಾಪವು **ಆಸೀತ್** ಆಯಿತು.

**ಸ್ಮರತಃ** ಕಾಮದಿಂದ ಆದ **ಅಶುಭಂ ಸ್ಮರತಃ** ಪಾಪವನ್ನು ಸ್ಮರಿಸಿದ ಎಂದೂ ಅರ್ಥ. ।।೨೮।।

ಅನುತಾಪವನ್ನೇ ಕೆಲವು ಶ್ಲೋಕಗಳಿಂದ ನಿರೂಪಿಸುವರು-

**ಅಹೋ ಮೇ ಪರಮಂ ಕಷ್ಟಮಭೂದವಿಜಿತಾತ್ಮನಃ ।**
**ಯೇನ ವಿಪ್ಲಾವಿತಂ ಬ್ರಹ್ಮ ವೃಷಲ್ಯಾಂ ಜಾಯತಾಽಽತ್ಮನಾ ॥೨೯॥**

**ಯೇನ ಆತ್ಮನಾ** ಯಾವ ನನ್ನಿಂದ **ವೃಷಲ್ಯಾಂ** ಶೂದ್ರಸ್ತ್ರೀಯಲ್ಲಿ **ಜಾಯತಾ** ರೇತೋರೂಪದಿಂದ ಪ್ರವೇಶಿಸಿ ಮಗುವನ್ನು ಪಡೆಯುವುದರಿಂದ **ಬ್ರಹ್ಮ** ಬ್ರಾಹ್ಮಣ ಜಾತಿಯು ವೇದವು ತಪಸ್ಸು **ವಿಪ್ಲಾವಿತಂ** ನಾಶಮಾಡಲ್ಪಟ್ಟಿತೋ **ಅವಿಜಿತಾತ್ಮನಃ** ಮನಸ್ಸನ್ನು ಗೆಲ್ಲದಿರುವ **ಮೇ** ನನಗೆ **ಪರಮಂ ಕಷ್ಟಂ** ಅತ್ಯಂತ ಅಧರ್ಮವು **ಅಭೂತ್** ಆಯಿತು **ಅಹೋ** ಅಯ್ಯೋ.

ಯಸ್ಮಿನ್ ವಿಲೀಯತೇ ಧರ್ಮಸ್ತಮೇವ ವೃಷಲಂ ವಿದುಃ ।
ವೃಷೋ ಹಿ ಭಗವಾನ್ ಧರ್ಮೋ ಯಸ್ತಸ್ಯ ಕುರುತೇ ಲಯಮ್ ॥

ಎಂದು ಶಾಂತಿಪರ್ವದ ರಾಜಧರ್ಮದಲ್ಲಿ ಹೇಳಿದ್ದರಿಂದ ಧರ್ಮನಾಶಕನಾದವನು ವೃಷಲ. ಅವನ ಸ್ತ್ರೀ ವೃಷಲೀ ಎಂದು ತಿಳಿಯಬೇಕು. ಇದರಿಂದ ಸಾಧುಗಳಾದ ಶೂದ್ರರು ನಿವಾರಿಸಲ್ಪಟ್ಟರು.

ತಜ್ಜಾಯಾ ಜಾಯಾ ಭವತಿ ಯದಸ್ಯಾಂ ಜಾಯತೇ ಪುನಃ ।
ಆಭೂತಿರೇಷಾ ಭೂತಿರ್ಬೀಜಮೇತನ್ನಿಧೀಯತೇ ॥

ಎಂದು ಸಪ್ತಮಪಂಚಕೀಯ ತ್ರಯೋದಶಖಂಡದಲ್ಲಿ ಹೇಳಿದೆ. 'ಆತ್ಮಾ ವೈ ಪುತ್ರ ನಾಮಾಸಿ' ಎಂದು ಇದೆ. ॥೨೯॥

**ಧಿಙ್ಮಾಂ ವಿಗರ್ಹಿತಂ ಸದ್ಭಿರ್ದುಷ್ಕೃತಂ ಕುಲಕಜ್ಜಲಮ್ ।**
**ಹಿತ್ವಾ ಬಾಲಾಂ ಸತೀಂ ಯೋಽಹಂ ಸುರಾಪಾಮಸತೀಮಗಾಮ್॥೩೦॥**

**ಯಃ ಅಹಂ** ಯಾವ ನಾನು **ಸತೀಂ** ಪತಿವ್ರತೆಯಾದ **ಬಾಲಾಂ** ಸ್ತ್ರೀಯನ್ನು ಅಪ್ರೌಢಳಾದ ಹೆಂಡತಿಯನ್ನು **ಹಿತ್ವಾ** ಬಿಟ್ಟು **ಸುರಾಪಾಂ** ಮದ್ಯಪಾನ ಮಾಡುವ **ಅಸತೀಂ** ವ್ಯಭಿಚಾರಿಣಿಯಾದ ಈ ಶೂದ್ರಸ್ತ್ರೀಯನ್ನು **ಅಗಾಂ** ಸೇರಿದೆನೋ **ತಂ** ಅಂತಹ **ದುಷ್ಕೃತಂ** ಪಾಪಮಾಡಿದ ಆದ್ದರಿಂದಲೆ **ಸದ್ಭಿಃ** ಸಜ್ಜನರಿಂದ **ವಿಗರ್ಹಿತಂ** ನಿಂದಿತನಾದ ಆದ್ದರಿಂದಲೆ **ಕುಲಕಜ್ಜಲಂ** ಬ್ರಾಹ್ಮಣ ವಂಶಕ್ಕೆ ಕಾಡಿಗೆಯಂತೆ ಇರುವ ಕಳಂಕಕರನಾದ **ಮಾಂ** ನನಗೆ **ಧಿಕ್** ಧಿಕ್ಕಾರವು. ॥೩೦॥

**ವೃದ್ಧಾವನಾಥೌ ಪಿತರೌ ನಾನ್ಯಬಂಧೂ ತಪಸ್ವಿನೌ ।**
**ಅಹೋ ಮಯಾಽಧುನಾ ತ್ಯಕ್ತಾವಕೃತಜ್ಞೇನ ನೀಚವತ್ ॥೩೦॥**

**ಅಧುನಾ** ಈಗ **ಅನಾಥೌ** ಪಾಲಕರಿಲ್ಲದ ಐಶ್ವರ್ಯರಹಿತರಾದ **ನಾನ್ಯಬಂಧೂ** ಬೇರೆ ಮಕ್ಕಳಿಲ್ಲದ **ತಪಸ್ವಿನೌ** ತಪಸ್ವಿಗಳಾದ (ವೃದ್ಧರಾದ್ದರಿಂದ ಶೋಚನೀಯರಾದ) **ವೃದ್ಧೌ ಪಿತರೌ** ಮುದಿ ತಂದೆ ತಾಯಿಗಳು **ಅಕೃತಜ್ಞೇನ** ಉಪಕಾರವನ್ನು ಸ್ಮರಿಸದ **ಮಯಾ** ನನ್ನಿಂದ **ನೀಚವತ್** ಅಧಮನಂತೆ **ತ್ಯಕ್ತೌ** ಬಿಡಲ್ಪಟ್ಟಿದ್ದು **ಅಹೋ** ಕಷ್ಟ. 'ಅಕೃತಜ್ಞೇನ ನೀಚವತ್' ಎಂಬುದು ಒಂದೇ ಪದ. ಅಕೃತಜ್ಞರಿಗೆ ಇನಃ ಪತಿಯಾದ ಮತ್ತು ನೀಚನಾದ ಎಂದರ್ಥ. 'ಇನಃ ಸೂರ್ಯೇ ನೃಪೇ ಪತ್ಯೌ' ಎಂದು ವಿಶ್ವ. 'ನೀಚಸ್ತು ಪಾಮರಃ' ಇತ್ಯಮರಃ ॥೩೦॥

**ಸೋಽಹಂ ವ್ಯಕ್ತಂ ಪತಿಷ್ಯಾಮಿ ನರಕೇ ಭೃಶದಾರುಣೇ ।**
**ಧರ್ಮಘ್ನಾಃ ಕಾಮಿನೋ ಯತ್ರ ವಿಂದಂತಿ ಯಮಯಾತನಾಃ ॥೩೧॥**

**ಸಃ ಅಹಂ** ಹೀಗೆ ಕಾಮಾತುರತೆಯಿಂದ ಕುಲದ್ರೋಹಿ-ಪಿತೃದ್ರೋಹಿಯಾದ ನಾನು **ವ್ಯಕ್ತಂ** ನಿಶ್ಚಿತವಾಗಿಯೂ **ಯತ್ರ** ಯಾವ ನರಕದಲ್ಲಿ **ಧರ್ಮಘ್ನಾಃ** ಧರ್ಮವನ್ನು ಕೊಂದ (ಭ್ರಷ್ಟರಾದ) **ಕಾಮಿನಃ** ಕಾಮಾತುರರು **ಯಮಯಾತನಾಃ** ಯಮಭಟರು ಕೊಡುವ ಕ್ರೂರಹಿಂಸೆಗಳನ್ನು **ವಿಂದಂತಿ** ಅನುಭವಿಸುವರೋ **ತತ್ರ** ಅಂತಹ **ಭೃಶದಾರುಣೇ** ಅತ್ಯಂತ ಭಯಂಕರವಾದ **ನರಕೇ** ನರಕದಲ್ಲಿ **ಪತಿಷ್ಯಾಮಿ** ಬಿದ್ದೇ ಬೀಳುವೆನು.

ಪತಿಷ್ಯಾಮಿ ಎಂದು ಹೇಳುವುದರಿಂದ ಪಾಪದಿಂದ ನರಕವಾಗುತ್ತದೆ ಎಂಬುದಕ್ಕೆ ಯಾವುದೇ ವ್ಯಭಿಚಾರವಿಲ್ಲ ಎಂಬುದನ್ನು ತಿಳಿಸಿದಂತೆ ಆಗುತ್ತದೆ. ಕಾರಣ 'ಗತಭೀಃ ಪ್ರಕೃತಿಂ ಗತಃ' ಎಂಬುದರ ವಿರೋಧವಿಲ್ಲ. ಉತ್ಪ್ರೇಕ್ಷೆಯಿಂದ ಈ ವಿಕಲ್ಪ ಮಾಡಿರುವದಷ್ಟೇ. ಇದನ್ನು 'ಅಥಾಪಿ' ಎಂಬ ಮುಂದಿನ ವಾಕ್ಯದ ಸ್ವಾರಸ್ಯಕ್ಕಾಗಿ ಎಂದು ತಿಳಿಯಬೇಕು. ॥೩೧॥

**ಕಿಮಿದಂ ಸ್ವಪ್ನಮಾಹೋಸ್ವಿತ್ ಸಾಕ್ಷಾದ್ ದೃಷ್ಟಮಿಹಾದ್ಭುತಮ್ ।**
**ಕ್ವ ಯಾತಾ ಅದ್ಯ ತೇ ಯೇ ಮಾಂ ವ್ಯಕರ್ಷನ್ ಪಾಶಪಾಣಯಃ ॥೩೨॥**

**ಇದಂ** ನಾನು ಇದುವರೆಗೆ ನೋಡಿದ ಇದು **ಕಿಂ ಸ್ವಪ್ನಂ** ಕನಸೇ **ಆಹೋಸ್ವಿತ್** ಅಥವಾ ಇಹ ಜಾಗ್ರತ್‌ಕಾಲದಲ್ಲಿ **ಸಾಕ್ಷಾತ್** ಇಂದ್ರಿಯಸನ್ನಿಕರ್ಷದಿಂದ ಪ್ರತ್ಯಕ್ಷವಾಗಿ

**ದೃಷ್ಟಂ** ಕಂಡ **ಅದ್ಭುತಂ** ಆಶ್ಚರ್ಯಕರ ಘಟನೆಯೇ? **ಯೇ** ಯಾವ **ಪಾಶಪಾಣಯಃ** ಕೈಯಲ್ಲಿ ಯಮಪಾಶ ಹಿಡಿದ ಜನರು **ಮಾಂ** ನನ್ನನ್ನು **ವ್ಯಕರ್ಷಯನ್** ಈ ದೇಹದಿಂದ ಎಳೆದರೋ **ತೇ** ಅವರು **ಅದ್ಯ ಕ್ವ** ಈಗ ಎಲ್ಲಿ **ಯಾತಾಃ** ಹೋದರು. ।।೩೩।।

**ಅಥ ತೇ ಕ್ವ ಗತಾ ಸಿದ್ಧಾಶ್ಚತ್ವಾರಶ್ಚಾರುದರ್ಶನಾಃ ।**
**ವ್ಯಮೋಚಯನ್ ನೀಯಮಾನಂ ಬದ್ಧ್ವಾ ಪಾಶೈರಧೋ ಭುವಃ ।।೩೪।।**

**ಅಥ** ಮತ್ತು **ಚಾರುದರ್ಶನಾಃ** ನೋಡಲು ಸುಂದರವಾದ **ಯೇ ಚತ್ವಾರಃ** ಯಾವ ನಾಲ್ವರು **ಪಾಶೈಃ** ಯಮಪಾಶಗಳಿಂದ **ಬದ್ಧ್ವಾ** ಕಟ್ಟಿ ಯಮಭಟರಿಂದ **ಭುವಃ ಅಧಃ** ಭೂಮಿಯ ಕೆಳಗಿರುವ ನರಕಕ್ಕೆ **ನೀಯಮಾನಂ** ಒಯ್ಯಲ್ಪಡುತ್ತಿದ್ದ ನನ್ನನ್ನು **ವ್ಯಮೋಚಯನ್** ಬಿಡಿಸಿದರೋ **ತೇ ಸಿದ್ಧಾಃ** ಆ ಸಿದ್ಧಪುರುಷರು **ಕ್ವ ಗತಾಃ** ಈಗೆಲ್ಲಿ ಹೋದರು? ।।೩೪।।

ವಿಷ್ಣುದೂತರನ್ನು ನೋಡುವುದಕ್ಕೆ ಕಾರಣವಾದ ಪುಣ್ಯವಿದ್ದಲ್ಲಿ ಇದೂ ಆಗಲಿ ಎಂದು ಪ್ರಾರ್ಥಿಸುವರು.

**ಅಥಾಪಿ ಮೇ ದುರ್ಭಗಸ್ಯ ವಿಬುಧೋತ್ತಮದರ್ಶನೇ ।**
**ಭವಿತವ್ಯಂ ಮಂಗಲೇನ ಯೇನಾತ್ಮಾ ಮೇ ಪ್ರಸೀದತಿ ।।೩೫।।**

**ಅಥ** ಮತ್ತು **ದುರ್ಭಗಸ್ಯಾಪಿ** ಈ ಜನ್ಮದಲ್ಲಿ ಪಾಪಿಯಾದರೂ **ಮೇ** ನನಗೆ **ವಿಬುಧೋತ್ತಮದರ್ಶನೇ** ದೇವಶ್ರೇಷ್ಠರ ದರ್ಶನವಾಗಬೇಕಾದರೆ **ಮಂಗಲೇನ ಭವಿತವ್ಯಂ** ಜನ್ಮಾಂತರದ ಪುಣ್ಯವು ಇರಲೇಬೇಕು **ಯೇನ** ಆ ದರ್ಶನ ಪುಣ್ಯದಿಂದ **ಮೇ** ನನ್ನ **ಆತ್ಮಾ** ಮನಸ್ಸು **ಪ್ರಸೀದತಿ** ಪ್ರಸನ್ನವಾಗುವುದು ಅಥವಾ **ಮೇ** ನನ್ನ ವಿಷಯದಲ್ಲಿ **ಆತ್ಮಾ** ಶ್ರೀಹರಿಯು **ಪ್ರಸೀದತಿ** ಪ್ರಸನ್ನನಾಗುವನು.

ವಿಷ್ಣುದೂತರ ದರ್ಶನ ಅವರ ಮನಃಪ್ರಸಾದ ಮುಂದಾಗುವ ಮಂಗಳಗಳಿಗೆ ಸೂಚಕವೆಂದು ಊಹಿಸಿದನು. ತಾನು ಜನ್ಮಾಂತರದಲ್ಲಿ ಪುಣ್ಯವಂತನೆಂದು ಅನುಮಾನದಿಂದ ನಿಶ್ಚಯಿಸಿದಂತಾಯಿತು. ।।೩೫।।

**ಅನ್ಯಥಾ ಮ್ರಿಯಮಾಣಸ್ಯ ನಾಶುಚೇರ್ವೃಷಲೀಪತೇಃ ।**
**ವೈಕುಂಠನಾಮಗ್ರಹಣಂ ಜಿಹ್ವಾ ವಕ್ತುಮಿಹಾರ್ಹತಿ ।।೩೬।।**

**ಅನ್ಯಥಾ** ಹಿಂದಿನ ಜನ್ಮದಲ್ಲಿ ನಾನು ಮಾಡಿದ ಪುಣ್ಯವಿಲ್ಲದಿದ್ದರೆ **ಅಶುಚೇಃ** ಈ ಜನ್ಮದಲ್ಲಿ ಅಪವಿತ್ರನಾದ **ಮ್ರಿಯಮಾಣಸ್ಯ** ಸಾಯಲಿರುವ **ವೃಷಲೀಪತೇಃ** ಶೂದ್ರ ಸ್ತ್ರೀ ಗಂಡನಾದ **ಮೇ** ನನ್ನ **ಜಿಹ್ವಾ** ನಾಲಿಗೆಯು **ಇಹ** ಈ ಜನ್ಮದಲ್ಲಿ **ವೈಕುಂಠನಾಮಗ್ರಹಣಂ** ಶ್ರೀಹರಿಯ ನಾಮೋಚ್ಚಾರಣೆಯನ್ನು **ವಕ್ತುಂ ನ ಅರ್ಹತಿ** ಹೇಳಲು ಯೋಗ್ಯವಲ್ಲ.

ಗೃಹ್ಯತೇ ಇತಿ **ಗ್ರಹಣಂ** ವೈಕುಂಠನಾಮಾತ್ಮಕವಾದ ಗ್ರಾಹ್ಯವಾದ ಪದವನ್ನು **ವಕ್ತುಂ** ಹೇಳಲು **ನಾರ್ಹತಿ** ಯೋಗ್ಯವಲ್ಲ. **ಗ್ರಹಣಂ** ಹರಿದೂತರಿಂದ ಸ್ವೀಕರಣವನ್ನು **ನಾರ್ಹತಿ** ಹೊಂದಲಾರದು. ।।೩೬।।

ಮೈಮೇಲೆ ಎಚ್ಚರವಿಲ್ಲದ್ದರಿಂದ ಹೇಳಿದ್ದನ್ನೇ ರೀತ್ಯಂತರದಿಂದ ಹೇಳುವನು-

**ಕ್ವ ಚಾಽಹಂ ಕಿತವಃ ಪಾಪೋ ಬ್ರಹ್ಮೋಘ್ನೋ ನಿರಪತ್ರಪಃ ।**
**ಕ್ವಚ ನಾರಾಯಣೇತ್ಯೇತದ್ ಭಗವನ್ನಾಮ ಮಂಗಲಮ್ ।।೩೭।।**

**ಕಿತವಃ** ಧೂರ್ತನೂ **ಪಾಪಃ** ಪಾಪಿಯೂ **ಬ್ರಹ್ಮೋಘ್ನಃ** ಬ್ರಾಹ್ಮಣ್ಯವನ್ನು ಕಳೆದುಕೊಂಡವನೂ **ನಿರಪತ್ರಪಃ** ನಾಚಿಕೆ ಇಲ್ಲದವನೂ ಆದ **ಅಹಂ** ನಾನು **ಕ್ವ** ಎಲ್ಲಿ **ಮಂಗಲಂ** ಮೋಕ್ಷಾದಿ ಸಕಲಶುಭದಾಯಕವಾದ **ನಾರಾಯಣ ಇತಿ** ನಾರಾಯಣವೆಂಬ **ಭಗವನ್ನಾಮ ಕ್ವ** ಶ್ರೀಹರಿಯ ನಾಮವೆಲ್ಲಿ.

ವೃಷಲೀವೃಷಭತೆಯ ಲಜ್ಜೆ ಇಲ್ಲದವನು ಅಂದರೆ ಶೂದ್ರಸ್ತ್ರೀಗಂಡನಾದುದಕ್ಕೆ ಲಜ್ಜೆ ಇಲ್ಲದವನೆಂದರ್ಥ. ।।೩೭।।

**ಸೋಽಹಂ ತಥಾ ಯತಿಷ್ಯಾಮಿ ಯತಚಿತ್ತೇಂದ್ರಿಯಾನಿಲಃ ।**
**ಯಥಾ ನ ಭೂಯ ಆತ್ಮಾನಮಂಧೇ ತಮಸಿ ಮಜ್ಜಯೇ ।।೩೮।।**

**ಸಃ ಅಹಂ** ಹೀಗೆ ಭಕ್ತಿಯಿಂದ ಭಗವನ್ನಾಮೋಚ್ಚಾರಣೆಯ ಫಲವಾಗಿ ವಿಷ್ಣುದೂತರಿಂದ ಮೃತ್ಯುವಿನಿಂದ ರಕ್ಷಿತನಾದ ನಾನು **ಭೂಯಃ** ಮತ್ತೆ **ಯಥಾ** ಹೇಗೆ **ಅಂಧೇ ತಮಸಿ** ಅಂಧಂತಮಸ್ಸೆಂಬ ನರಕದಲ್ಲಿ **ಆತ್ಮಾನಂ** ನನ್ನ ದೇಹವನ್ನು **ನ ಮಜ್ಜಯೇ** ಮುಳುಗುವಂತೆ ಮಾಡುವುದಿಲ್ಲವೋ **ತಥಾ** ಹಾಗೆ **ಯತಚಿತ್ತೇಂದ್ರಿಯಾನಿಲಃ** ಮನಸ್ಸು ಇಂದ್ರಿಯಗಳು ಮತ್ತು ಶ್ವಾಸವಾಯುವನ್ನು ನಿಗ್ರಹ ಮಾಡಿದವನಾಗಿ **ಯತಿಷ್ಯಾಮಿ** ಪ್ರಯತ್ನಿಸುತ್ತೇನೆ. ।।೩೮।।

**ಮಜ್ಜಯೇ** ನನ್ನ ಜಯ ವಿಷಯದಲ್ಲಿ **ಯತಿಷ್ಯಾಮಿ** ಪ್ರಯತ್ನಿಸುವೆನು ಎಂದರ್ಥ. ಪತಿತಪ್ರಾಯನಾದ್ದರಿಂದ **ಭೂಯಃ** ಎಂದಿದ್ದಾನೆ. 'ಮನಃಪ್ರಸಾದಃ' ಇತ್ಯಾರಭ್ಯ 'ತಪೋ ಮಾನಸಮುಚ್ಯತೇ' ಎಂಬಲ್ಲಿಯ ವರೆಗೆ ಗೀತೆಯಲ್ಲಿ ಹೇಳಿದ ಒಂದು ತಪಸ್ಸು ನನಗೆ ಸಂಪನ್ನವಾಗಿದೆ ಎಂದು ಸೂಚಿತವಾಗುವುದು. ।।೩೮।।

**ವಿಮುಚ್ಯ ತಮಿಮಂ ಬಂಧಮವಿದ್ಯಾಕಾಮಕರ್ಮಜಮ್ ।**
**ಸರ್ವಭೂತಸುಹೃದ್ದಾಂತೋ ಮೈತ್ರಃ ಕರುಣ ಆತ್ಮವಾನ್ ।।೩೯।।**

**ಸರ್ವಭೂತಹೃತ್** ಎಲ್ಲ ಪ್ರಾಣಿಗಳಿಗೂ ಅನಿಮಿತ್ತೋಪಕಾರಕನಾದ **ದಾಂತಃ** ಇಂದ್ರಿಯಗಳನ್ನು ನಿಗ್ರಹಿಸಿದ **ಮೈತ್ರಃ** ಸಮಾನರಲ್ಲಿ ಸ್ನೇಹಪರನೂ **ಕರುಣಃ** ಕೆಳಗಿನವರಲ್ಲಿ ದಯ ಉಳ್ಳವನು **ಆತ್ಮವಾನ್** ಮನಸ್ಸನ್ನು ವಶಪಡಿಸಿಕೊಂಡವನೂ **ಭೂತ್ವಾ** ಆಗಿ **ಅವಿದ್ಯಾಕಾಮಕರ್ಮಜಂ** ಅವಿದ್ಯೆಯಿಂದಲೂ ರಾಗದಿಂದಲೂ ಕರ್ಮದಿಂದಲೂ ಬಂದಿರುವ **ಇಮಂ ಬಂಧಂ** ಸಂಸಾರಬಂಧನವನ್ನು **ವಿಮುಚ್ಯ** ಹೋಗಲಾಡಿಸಿಕೊಂಡು ।।೩೯।।

**ಮೋಚಯೇ ಗ್ರಸ್ತಮಾತ್ಮಾನಂ ಯೋಷಿನ್ಮಯ್ಯಾಽಽತ್ಮಮಾಯಯಾ ।**
**ವಿಕ್ರೀಡಿತೋ ಯಥೈವಾಹಂ ಕ್ರೀಡಾಮೃಗ ಇವಾಧಮಃ ।।೪೦।।**

**ಯೋಷಿನ್ಮಯ್ಯಾ** ಹೆಂಗಸಿನ ರೂಪದಲ್ಲಿರುವ **ಆತ್ಮಾಮಾಯಯಾ** ಶ್ರೀಹರಿಯ ಅಧೀನವಾದ ಲೋಕಮೋಹನರೂಪವಾದ ಬಂಧಕಶಕ್ತಿಯಿಂದ **ಗ್ರಸ್ತಂ** ಹಿಡಿಯಲ್ಪಟ್ಟಿರುವ **ಆತ್ಮಾನಂ** ನನ್ನನ್ನು **ಮೋಚಯೇ** ಶ್ರೀಹರಿಯ ಅನುಗ್ರಹದಿಂದ ಆ ಬಂಧಕ ಶಕ್ತಿಯಿಂದ ಬಿಡಿಸಿಕೊಳ್ಳುತ್ತೇನೆ **ಅಧಮಃ ಅಹಂ** ಶ್ರೀಹರಿಯನ್ನು ಮರೆತ ಪಾಪಿಯಾದ ನಾನು **ಯಥಾ** ಯಥಾವತ್ತಾಗಿ **ಕ್ರೀಡಾಮೃಗಃ ಇವ** ಆಟದ ಜಿಂಕೆಯಂತೆ ಮಂಗನಂತೆ **ವಿಕ್ರೀಡಿತಃ ಏವ** ಅನೇಕ ಬಗೆಯಲ್ಲಿ ಆಟ ಆಡಿಸಲ್ಪಟ್ಟಿರುವೆನು. ।।೪೦।।

**ಮಮಾಹಮಿತಿ ದೇಹಾದೌ ಹಿತ್ವಾ ಮಿಥ್ಯಾರ್ಥಧೀರ್ಮತಿಮ್ ।**
**ಧಾಸ್ಯೇ ಮನೋ ಭಗವತಿ ಶುದ್ಧಂ ತತ್ಕೀರ್ತನಾದಿಭಿಃ ।।೪೧।।**

**ಅರ್ಥಧೀಃ** ಮೋಕ್ಷವೆಂಬ ಪುರುಷಾರ್ಥದಲ್ಲಿ ಮನಸ್ಸುಳ್ಳ **ಅಹಂ** ನಾನು **ದೇಹಾದೌ** ಶರೀರ-ಹೆಂಡತಿ-ಮಕ್ಕಳು-ಮನೆ ಮೊದಲಾದವುಗಳಲ್ಲಿ **ಅಹಂ ಮಮ ಇತಿ** ನಾನು ನನ್ನದು ಎಂಬ **ಮಿಥ್ಯಾಮತಿಂ** ಸ್ವಾತಂತ್ರ್ಯಾಭಿಮಾನವನ್ನು **ಹಿತ್ವಾ** ಬಿಟ್ಟು

**ತತ್ಕೀರ್ತನಾದಿಭಿಃ** ಶ್ರೀಹರಿಯ ನಾಮಕೀರ್ತನೆಯೇ ಮೊದಲಾದ ಅವನ ದೂತರ ದರ್ಶನ ಸಂಭಾಷಣ ವಂದನಾದಿಗಳಿಂದ **ಶುದ್ಧಂ** ಪವಿತ್ರವಾದ **ಮನಃ** ಮನಸ್ಸನ್ನು **ಭಗವತಿ** ಶ್ರೀಹರಿಯಲ್ಲಿ **ಧಾಸ್ಯೇ** ಇಡುತ್ತೇನೆ.

**ಮಿಥ್ಯಾರ್ಥಧೀಃ** ಭಗವಂತನ ಜ್ಞಾನ ಮಾಡಿಕೊಳ್ಳದೇ ಅಸದ್ವಿಷಯಗಳಲ್ಲಿ ಇದರಿಂದ ನನಗೆ ಪ್ರಯೋಜನವಿದೆ ಎಂಬ ಬುದ್ಧಿಯುಳ್ಳ ಎಂದೂ ಅರ್ಥವನ್ನು ತಿಳಿಯಬಹುದು. ।।೪೧।

**ಇತಿ ಜಾತಸುನಿರ್ವೇದಃ ಕ್ಷಣಸಂಗೇನ ಸಾಧುಷು ।**
**ಗಂಗಾದ್ವಾರಮುಪೇಯಾಯ ಮುಕ್ತಸರ್ವಾನುಬಂಧನಃ ।।೪೨।।**

**ಸಾಧುಷು** ವಿಷ್ಣುಭಕ್ತರಲ್ಲಿ **ಕ್ಷಣಸಂಗೇನ** ಸ್ವಲ್ಪಕಾಲ ಸಂಬಂಧದ ಫಲವಾಗಿ **ಇತಿ** ಮೇಲೆ ಹೇಳಿದಂತೆ **ಜಾತಸುನಿರ್ವೇದಃ** ವೈರಾಗ್ಯ ಹುಟ್ಟಿದ ಆದ್ದರಿಂದಲೇ **ಮುಕ್ತಸರ್ವಾನುಬಂಧನಃ** ದಾಸಿ-ಮಕ್ಕಳು ಮೊದಲಾದವರಲ್ಲಿ ಅಭಿಮಾನವನ್ನು ಬಿಟ್ಟವನಾಗಿ **ಗಂಗಾದ್ವಾರಂ ಉಪೇಯಾಯ** ಗಂಗಾದ್ವಾರವೆಂಬ ತೀರ್ಥವಿಶೇಷಕ್ಕೆ ಬಂದನು. ಅಂದರೆ ಹರಿದ್ವಾರಕ್ಕೆ ಬಂದನೆಂದರ್ಥ.

ಕಾಶೀಖಂಡದಲ್ಲಿಯ ವಚನಗಳು ಈ ರೀತಿಯಾಗಿವೆ.

ತತೋ ಮಾಯಾಪುರೀಂ ಪ್ರಾಪ ದುಷ್ಪ್ರಾಪಾಂ ಪಾಪಕಾರಿಭಿಃ ।
ಯತ್ರ ಸಾ ವೈಷ್ಣವೀ ಮಾಯಾ ಜಂತೂನ್ ಪಾಶೈರ್ನ ಪಾಶಯೇತ್ ।

ಕೇಚಿದೂಚುರ್ಹರಿದ್ವಾರಂ ಮೋಕ್ಷದ್ವಾರಂ ಪರೇ ಜಗುಃ ।।
ಗಂಗಾದ್ವಾರಂ ಚ ಕೇऽಪ್ಯಾಹುಃ ಕೇಚಿನ್ಮಾಯಾಪುರೀಂ ಪುನಃ ।
ಯತೋ ವಿನಿರ್ಗತಾ ಗಂಗಾ ಖ್ಯಾತಾ ಭಾಗಿರಥೀ ಭುವಿ ।।

**ಕ್ಷಣಸಂಗೇನ** ಉತ್ಸವಪೂರ್ವಕವಾದ ಸಂಗದಿಂದ ಎಂದೂ ಅರ್ಥ ಮಾಡಿರುವರು. ಮುಕ್ತಸರ್ವಾನುಬಂಧನಃ ಅತಿವಿರಕ್ತನಾದ ಜಾತಸುನಿರ್ವೇದಃ **ಜಾತ** ಉಂಟಾದ **ಸು** ನಿರ್ದುಷ್ಟವಾದ **ನಿರ್ವೇದ** ಭಾಗವತರ ದರ್ಶನ-ಸ್ಪರ್ಶನರೂಪವಾದ ನಿತರಾಂ ಲಾಭ ಉಳ್ಳ ಎಂದರ್ಥ. ಗೀತಾಭಾಷ್ಯದಲ್ಲಿ 'ನಿರ್ವೇದಂ ನಿತರಾಂ ಲಾಭಮ್' ಎಂದು ಪ್ರಯೋಗ ಮಾಡಿರುವರು. 'ತಸ್ಮಾತ್ ಬ್ರಾಹ್ಮಣಃ ಪಾಂಡಿತ್ಯಂ ನಿರ್ವಿದ್ಯ' ಎಂದು ಪ್ರಯೋಗವಿದೆ. ಹೀಗಾಗಿ ನಿರ್ವಿದ್ಯ ಎಂದರೆ ಅತಿಶಯವಾಗಿ ಪಡೆದು ಎಂದರ್ಥ. ।।೪೨।।

**ಸ ತಸ್ಮಿನ್ ದೇವಸದನಂ (ನೇ) ಆಸೀನೋ ಯೋಗಮಾಸ್ಥಿತಃ ।**
**ಪ್ರತ್ಯಾಹೃತೇಂದ್ರಿಯಗ್ರಾಮೋ ಯುಯೋಜ ಮನ ಆತ್ಮನಿ ॥೪೩॥**

**ತಸ್ಮಿನ್** ಆ ಹರಿದ್ವಾರದಲ್ಲಿ **ದೇವಸದನೇ** ತ್ರಿವಿಕ್ರಮದೇವರ ಗುಡಿಯಲ್ಲಿ ಶ್ರೀಶ್ರೀನಿವಾಸನ ಆವಾಸದಲ್ಲಿ 'ಗಂಗಾದ್ವಾರೇ ತ್ರಿವಿಕ್ರಮಮ್' ಎಂದು ಸ್ಕಾಂದಪುರಾಣ. **ಆಸೀನಃ** ಇದ್ದ **ಸಃ** ಅಜಾಮಿಳನು **ಯೋಗಂ** ಪ್ರಾಣಾಯಾಮಾದಿ ಯೋಗಾಭ್ಯಾಸವನ್ನು ಶರೀರಸ್ಥೈರ್ಯರೂಪಪ್ರಯೋಗವನ್ನು ಅಥವಾ ಉಪಾಯವನ್ನು 'ಯೋಗೋ ವಪುಃಸ್ಥೈರ್ಯಪ್ರಯೋಗೇ ಚ ದ್ರವ್ಯೋಪಾಯಸನ್ನಹನೇಷ್ವಪಿ' ಎಂದು ವಿಶ್ವವಿದೆ. **ಯೋಗಃ** ಉಪಾಯಃ 'ದೃಷ್ಟಾ ಯೋಗಾಃ ಪ್ರಯುಕ್ತಾಶ್ಚ ಪುಂಸಾಂ ಶ್ರೇಯಃಪ್ರಸಿದ್ಧಯೇ' ಎಂದು ಭಾಗವತದಲ್ಲಿದೆ ಎಂದು ಗೀತಾಭಾಷ್ಯದಲ್ಲಿ ಹೇಳಿದೆ. **ಆಸ್ಥಿತಃ ಸನ್** ಹೊಂದಿದವನಾಗಿ ಅದರ ಫಲವಾಗಿ **ಪ್ರತ್ಯಾಹೃತೇಂದ್ರಿಯಗ್ರಾಮಃ** ಇತರವಿಷಯಗಳಿಂದ ಹಿಂದಿರುಗಿರುವ ಇಂದ್ರಿಯ ಸಮೂಹ ಉಳ್ಳವನಾಗಿ **ಆತ್ಮನಿ** ತನ್ನ ಅಂತರ್ಯಾಮಿ ಶ್ರೀಹರಿಯಲ್ಲಿ **ಮನಃ** ಮನಸ್ಸನ್ನು **ಯುಯೋಜ** ಸೇರಿಸಿದನು.

ಅಥವಾ **ಆತ್ಮನಿ** ತನ್ನ ಪ್ರಯತ್ನದಲ್ಲಿ ತೊಡಗಿಸಿದನು. ತನ್ನ ಯತ್ನಾನುಕೂಲ ಮಾಡಿಕೊಂಡನೆಂದರ್ಥ. 'ಆತ್ಮಾ ಪ್ರಯತ್ನೇ' ಎಂದು ವಿಶ್ವವಿದೆ. ॥೪೩॥

**ತತೋ ಗುಣೇಭ್ಯ ಆತ್ಮಾನಂ ವಿಯುಜ್ಯಾತ್ಮಸಮಾಧಿನಾ ।**
**ಯುಯೋಜ ಭಗವದ್ಧಾಮ್ನಿ ಬ್ರಹ್ಮಣ್ಯನುಭವಾತ್ಮನಿ ॥೪೪॥**

**ತತಃ** ತನ್ನ ಅಂತರ್ಯಾಮಿಯನ್ನು ಉಪಾಸಿಸಿದ ನಂತರ **ಆತ್ಮಸಮಾಧಿನಾ** ಚಿತ್ತೈಕಾಗ್ರತೆಯಿಂದ **ಆತ್ಮಾನಂ** ತನ್ನ ಸ್ವರೂಪವನ್ನು ಅಂತರ್ಯಾಮಿಯಾದ ಶ್ರೀಹರಿಯನ್ನು **ಗುಣೇಭ್ಯಃ** ಪ್ರಾಕೃತಗುಣಕಾರ್ಯಗಳಾದ ದೇಹೇಂದ್ರಿಯಾದಿಗಳಿಂದ (ವಿವಿಚ್ಯ) **ವಿಯುಜ್ಯ** ವಿಲಕ್ಷಣನೆಂದು ಸ್ಪಷ್ಟವಾಗಿ ತಿಳಿದು **ಭಗವದ್ಧಾಮ್ನಿ** ಸಮಗ್ರ ಐಶ್ವರ್ಯಾದಿಗಳಿಗೆ ಆಶ್ರಯನಾದ ಐಶ್ವರ್ಯಸ್ವರೂಪನಾದ **ಅನುಭವಾತ್ಮನಿ** ಜ್ಞಾನ-ಸ್ವರೂಪನಾದ **ಬ್ರಹ್ಮಣಿ** ಗುಣಪೂರ್ಣನಾದ ವ್ಯಾಪ್ತರೂಪದಲ್ಲಿ **ಯುಯೋಜ** ನೆಲೆಸಿದನು. ವ್ಯಾಪ್ತರೂಪವನ್ನು ಉಪಾಸಿಸಿದನು. ಅಂತರ್ಯಾಮಿಯೂ ವ್ಯಾಪ್ತನೂ ಒಂದೇ ಎಂದು ಭಗವದ್ರೂಪಗಳಿಗೆ ಐಕ್ಯಚಿಂತನೆ ಮಾಡಿದನು.

**ಸತ್ಯಧರ್ಮೀಯ ವಿಶೇಷ**

**ಅಗುಣೇಭ್ಯಃ** ವೈಷಯಿಕದೋಷಗಳಿಂದ **ಸಮಾಧಿನಾ** ನಿಯಮದಿಂದ 'ಸಮಾಧಿರ್ನಿಯಮಃ' ಎಂದು ವಿಶ್ವ. ಅಥವಾ ಸಮಾಧಿನಾ ಹಿಂದಿನ ಮನೋವ್ಯಥೆಯಿಂದ 'ಪುಂಸ್ಯಾಧಿರ್ಮಾನಸೀ ವ್ಯಥಾ' ಎಂದು ಅಮರ. **ಆತ್ಮಾನಂ** ತನ್ನ ಮನಸ್ಸನ್ನು **ವಿಯುಜ್ಯ** ಬಿಡಿಸಿ **ಭಗವದ್ಧಾಮ್ನಿ** ಭಗವಂತನ ಸ್ವರೂಪ ಉಳ್ಳ **ಬ್ರಹ್ಮಣಿ** ಗುಣಪೂರ್ಣನಾದ **ಅನುಭವಂ** ಪ್ರತಿಯೊಂದು ಜನ್ಮದಲ್ಲಿಯೂ **ಆತ್ಮನಿ** ಸ್ವಾಮಿಯಾದ ಪರಮಾತ್ಮನಲ್ಲಿ ಎಂದು ಅರ್ಥ ಮಾಡಿರುವರು. 'ಆತ್ಮಾ ಭವತಿ' ಎಂಬಲ್ಲಿ 'ಸ್ವಾಮಿ' ಎಂದು ತತ್ತ್ವನಿರ್ಣಯದಲ್ಲಿ ವ್ಯಾಖ್ಯಾನಿಸಿರುವರು. ।।೪೪।।

**ಯರ್ಹ್ಯುಪಾರತಧೀಸ್ತಸ್ಮಿನ್ನದ್ರಾಕ್ಷೀತ್ ಪುರುಷಾನ್ ಪುರಃ ।**
**ಉಪಲಭ್ಯೋಪಲಬ್ಧಾನ್ ಪ್ರಾಗ್ ವವಂದೇ ಶಿರಸಾ ದ್ವಿಜಃ ।।೪೫।।**

**ಯರ್ಹಿ** ಯಾವಾಗ **ಉಪಾರತಧೀಃ ಅಭೂತ್** ಬಾಹ್ಯವಿಷಯಗಳನ್ನು ಬಿಟ್ಟು ಶ್ರೀಹರಿಯಲ್ಲಿಯೇ ನಿರತವಾದ ಬುದ್ಧಿ ಉಳ್ಳವನಾದನೋ **ತಸ್ಮಿನ್** ಆ ಕಾಲದಲ್ಲಿ ಅಥವಾ **ತಸ್ಮಿನ್** ಆ ಶ್ರೀಹರಿಯಲ್ಲಿ **ಉಪಾರತಧೀಃ** ನಿಶ್ಚಿತವಾದ ಬುದ್ಧಿ ಉಳ್ಳವನಾದನೋ **ತರ್ಹಿ** ಆ ಕಾಲದಲ್ಲಿ **ಪುರಃ** ತನ್ನ ಎದುರಿನಲ್ಲಿ **ಪುರುಷಾನ್ ಅದ್ರಾಕ್ಷೀತ್** ಪುರಷರನ್ನು ಕಂಡನು **ಪ್ರಾಕ್** ಹಿಂದೆಯೇ **ಉಪಲಬ್ಧಾನ್** ಕಂಡಿದ್ದ ಅವರನ್ನು **ಉಪಲಭ್ಯ** ಗುರುತಿಸಿ **ದ್ವಿಜಃ** ಅಜಾಮಿಳನು **ಶಿರಸಾ ವವಂದೇ** ತಲೆಬಾಗಿ ನಮಸ್ಕರಿಸಿದನು.

**ಸತ್ಯಧರ್ಮೀಯ ವಿಶೇಷ**

**ಯರ್ಹಿ ಉಪಾರತಧೀಃ** ವಿಷಯವಿರಕ್ತಚಿತ್ತನಾದವಗೆ ಅಥವಾ **ಉಪ** ಸರ್ವಾಧಿಕನಾದ ಶ್ರೀಹರಿಯಲ್ಲಿ **ಆರತಾ** ಚೆನ್ನಾಗಿ ಆಸಕ್ತನಾದ **ಧೀಃ** ಬುದ್ಧಿ ಉಳ್ಳವನಾದನೋ 'ಉಪೋಽಧಿಕೇ ಚ' ಎಂಬ ಸೂತ್ರದಿಂದ ಮತ್ತು 'ಉತ್ಕೃಷ್ಟಾನಂದರೂಪತ್ವಾದುಪಶಬ್ದಃ ಪ್ರಕೀರ್ತಿತಃ' ಎಂದು ಮಾಂಡೂಕ್ಯದ 'ಉಪಶಮ' ಶಬ್ದದ ವ್ಯಾಖ್ಯಾನವಾದ ಭಾಷ್ಯವ್ಯಾಖ್ಯಾನದಲ್ಲಿ ಉತ್ಕೃಷ್ಟವಾಚಿಯಾದ ಉ ಶಬ್ದದ ಪರ್ಯಾಯ ಉಪಶಬ್ದವೆಂದು ವ್ಯಾಖ್ಯಾನಿಸಿರುವುದರಿಂದ ಉಪ ಎಂದರೆ ಉತ್ಕೃಷ್ಟ ಎಂದರ್ಥ. 'ಉಪಹೀನೋಽಧಿಕೇ ಪ್ರೋಕ್ತಮ್' ಎಂದು ವಿಶ್ವವಿದೆ. 'ಉಪೇ ಸರ್ವೇಶ್ವರೇ' ಎಂದು ಸಪ್ತಮ ತಾತ್ಪರ್ಯದಲ್ಲಿ ಹೇಳಿದೆ.।।೪೫।।

**ಹಿತ್ವಾ ಕಲೇವರಂ ತೀರ್ಥೇ ಗಂಗಾಯಾಂ ದರ್ಶನಾದನು ।**
**ಸದ್ಯಃ ಸ್ವರೂಪಂ ಜಗೃಹೇ ಭಗವತ್ಪಾರ್ಶ್ವವರ್ತಿನಾಮ್ ॥೪೬॥**

**ದರ್ಶನಾತ್ ಅನು** ವಿಷ್ಣುದೂತರನ್ನು ಕಂಡ ನಂತರ **ತೀರ್ಥೇ** ಆ ಹರಿದ್ವಾರದಲ್ಲಿ **ಗಂಗಾಯಾಂ** ಗಂಗಾನದಿಯಲ್ಲಿ **ಕಲೇವರಂ** ತನ್ನ ದೇಹವನ್ನು **ಹಿತ್ವಾ** ಬಿಟ್ಟು **ಸದ್ಯಃ** ಕೂಡಲೇ **ಭಗವತ್ಪಾರ್ಶ್ವವರ್ತಿನಾಂ** ಸ್ವರೂಪಮುಕ್ತರ ತಾವು ನೋಡಿದ ವಿಷ್ಣುದೂತರ ಸ್ವರೂಪದಂತಿರುವ ಸ್ವರೂಪವನ್ನು **ಜಗೃಹೇ** ಹೊಂದಿದನು.

ಭಗವಂತನ ಪಾರ್ಷದರಂತೆ ಸಾರೂಪ್ಯ ಮೋಕ್ಷವನ್ನು ಹೊಂದಿದನೆಂದು ಭಾವ. **ಸದ್ಯಃ** ಎಂದರೆ ಮೋಕ್ಷವಾದಾಗ ಎಂದರ್ಥ ಮಾಡಬೇಕು. ॥೪೬॥

**ಸಾಕಂ ವಿಹಾಯಸಾ ವಿಪ್ರೋ ಮಹಾಪುರುಷಕಿಂಕರೈಃ ।**
**ಹೈಮಂ ವಿಮಾನಮಾರುಹ್ಯ ಯಯೌ ಯತ್ರ ಶ್ರಿಯಃ ಪತಿಃ ॥೪೭॥**

**ವಿಪ್ರಃ** ಅಜಾಮಿಳನು **ಮಹಾಪುರುಷಕಿಂಕರೈಃ ಸಾಕಂ** ವಿಷ್ಣುದೂತರೊಡನೆ **ಹೈಮಂ** ಬಂಗಾರದ **ವಿಮಾನಂ** ವಿಮಾನವನ್ನು **ಆರುಹ್ಯ** ಹತ್ತಿ **ವಿಹಾಯಸಾ** ಆಕಾಶ ಮಾರ್ಗದಿಂದ **ಯತ್ರ** ಯಾವ ವೈಕುಂಠದಲ್ಲಿ **ಶ್ರಿಯಃ ಪತಿಃ** ಲಕ್ಷ್ಮೀಪತಿಯಾದ ಶ್ರೀಹರಿ ಇರುವನೋ **ತತ್ರ** ಆ ವೈಕುಂಠಲೋಕದ ಅಮುಕ್ತಸ್ಥಾನಕ್ಕೆ **ಯಯೌ** ಹೋದನು. ॥೪೭॥

ಇಲ್ಲಿಯವರೆಗೆ ಹೇಳಿದ ವಿಷಯವನ್ನು ನಾಮಕೀರ್ತನದಲ್ಲಿ ಶ್ರದ್ಧಾತಿಶಯ ಹುಟ್ಟಿಸಲು ಸೂತ್ರಪ್ರಾಯವಾಗಿ ಶ್ಲೋಕ ಮಾಡಿ ಒಂದುಗೂಡಿಸಿ ಹೇಳುವರು-

**ಏವಂ ಸ ವಿಪ್ಲಾವಿತಸರ್ವಧರ್ಮೋ**
**ದಾಸ್ಯಾಃ ಪತಿಃ ಪತಿತೋ ಗರ್ಹ್ಯಕರ್ಮಾ ।**
**ನಿಪಾತ್ಯಮಾನೋ ನಿರಯೇ ಹತವ್ರತಃ**
**ಸದ್ಯೋ ವಿಮುಕ್ತೋ ಭಗವನ್ನಾಮ ಗೃಹ್ಣನ್ ॥೪೮॥**

**ಏವಂ** ಈ ರೀತಿಯಾಗಿ **ವಿಪ್ಲಾವಿತಸರ್ವಧರ್ಮಃ** ಎಲ್ಲ ಧರ್ಮಗಳನ್ನೂ ಹಾಳು ಮಾಡಿದ **ಗರ್ಹ್ಯಕರ್ಮಾ** ಸಜ್ಜನರಿಂದ ನಿಂದ್ಯವಾದ ಕಾರ್ಯಮಾಡಿದ ಆದ್ದರಿಂದಲೇ **ಪತಿತಃ** ಜಾತಿಭ್ರಷ್ಟನಾದ **ಹತವ್ರತಃ** ಸ್ವದಾರನಿಯಮಗಳನ್ನು ಹಾಳುಮಾಡಿಕೊಂಡ **ನಿರಯೇ** ಪಾಪಫಲವಾಗಿ ನರಕದಲ್ಲಿ **ನಿಪಾತ್ಯಮಾನಃ** ತಳ್ಳಲ್ಪಡಲಿರುವ **ಸಃ ದಾಸ್ಯಾಃ**

**ಪತಿಃ** ಆ ದಾಸೀಪತಿಯಾದ ಅಜಾಮಿಳನು **ಭಗವನ್ನಾಮ ಗೃಹ್ಣನ್** ಭಗವಂತನ ನಾಮವನ್ನು ಭಕ್ತಿಯಿಂದ ಉಚ್ಚರಿಸುತ್ತ **ಸದ್ಯಃ** ತತ್‌ಕ್ಷಣದಲ್ಲಿಯೇ **ವಿಮುಕ್ತಃ** ಮೃತ್ಯುವಿನಿಂದ ಬಿಡುಗಡೆ ಹೊಂದಿದನು. 'ದಾಸ್ಯಾಃ ಪತಿಃ' ಎಂಬಲ್ಲಿ ಷಷ್ಠಿಯು ಜನರ ಆಕ್ರೋಶವನ್ನು ಸೂಚಿಸುವುದು. ಅಜಾಮಿಳನೆಂಬುದನ್ನು ಬಿಟ್ಟು 'ದಾಸೀಪತಿ' ಎಂದು ಕರೆಯುತ್ತಿದ್ದರೆಂದರ್ಥ. ।।೪೮।।

**ನಾತಃ ಪರಂ ಕರ್ಮನಿಬಂಧಕೃಂತನಂ**
**ಮುಮುಕ್ಷತಾಂ ತೀರ್ಥಪದಾನುಕೀರ್ತನಾತ್ ।**
**ನ ಯತ್ ಪುನಃ ಕರ್ಮಸು ಸಜ್ಜತೇ ಮನೋ**
**ರಜಸ್ತಮೋಭ್ಯಾಂ ಕಲಿಲಂ ನ ಚಾನ್ಯಥಾ ।।೪೯।।**

**ಮುಮುಕ್ಷತಾಂ** ಮೋಕ್ಷವನ್ನು ಅಪೇಕ್ಷಿಸುವವರಿಗೆ **ಅತಃ ತೀರ್ಥಪದಾನು-ಕೀರ್ತನಾತ್** ಪವಿತ್ರ ಪಾದಗಳುಳ್ಳ ಶ್ರೀಹರಿಯ ನಾಮವನ್ನು ಭಕ್ತಿಯಿಂದ ಉಚ್ಚರಿಸುವುದಕ್ಕಿಂತ **ಪರಂ** ಮತ್ತೊಂದು ಉತ್ತಮವಾದ **ಕರ್ಮನಿಬಂಧಕೃಂತನಂ** ಪಾಪಕರ್ಮಕ್ಕೆ ಕಾರಣವಾದ ದುಷ್ಟ ಮನಸ್ಸನ್ನು ನಾಶಮಾಡುವ ವಸ್ತುವು ನ ಇಲ್ಲ. **ಯತ್** ಯಾಕೆಂದರೆ **ರಜಸ್ತಮೋಭ್ಯಾಂ ಕಲಿಲಂ** ರಜೋಗುಣ ತಮೋಗುಣಗಳಿಂದ ದುಷ್ಟವಾದ **ಮನಃ** ಮನಸ್ಸು **ಪುನಃ** ಹರಿಯ ಸಂಕೀರ್ತನೆಯ ಬಳಿಕ **ಕರ್ಮಸು** ಪಾಪಕರ್ಮಗಳಲ್ಲಿ **ನ ಸಜ್ಜತೇ** ಆಸಕ್ತವಾಗುವುದಿಲ್ಲ **ಅನ್ಯಥಾ** ಶ್ರೀಹರಿಯನ್ನು ಕೀರ್ತಿಸದಿದ್ದರೆ **ಕರ್ಮಸು ನ ಸಜ್ಜತೇ ಇತಿ ನ ಚ** ಕರ್ಮದಲ್ಲಿ ಆಸಕ್ತವಾಗುವದಿಲ್ಲವೆಂದಿಲ್ಲ ಆಗೇ ಆಗುವದು. ಆದ್ದರಿಂದ ಬೇರೇ ಯಾವುದೂ ಉತ್ತಮವಾದುದಲ್ಲ. ।।೪೯।।

**ಯ ಏವಂ(ನಂ) ಪರಮಂ ಗುಹ್ಯಮಿತಿಹಾಸಮಘಾಪಹಮ್ ।**
**ಶೃಣುಯಾಚ್ಛ್ರದ್ಧಯಾ ಯುಕ್ತೋ ಯಶ್ಚ ಭಕ್ತ್ಯಾಽನುಕೀರ್ತಯೇತ್ ।।೫೦।।**

**ನ ವೈ ಸ ನರಕಂ ಗಚ್ಛೇನ್ನೇಕ್ಷಿತೋ ಯಮಕಿಂಕರೈಃ ।**
**ಯದ್ಯಪ್ಯಮಂಗಲೋ ಮರ್ತ್ಯೋ ವಿಷ್ಣುಲೋಕೇ ಮಹಿಯತೇ ।।೫೧।।**

**ಪರಮಂ ಗುಹ್ಯಂ** ಅತ್ಯಂತ ರಹಸ್ಯವಾದ ಧರ್ಮವನ್ನು ತಿಳಿಸುವ **ಅಘಾಪಹಂ** ಪಾಪವನ್ನು ಕಳೆಯುವ **ಏವಂ (ನಂ)** ಈ ಪ್ರಕಾರದ **ಇತಿಹಾಸಂ** ಇತಿಹಾಸವನ್ನು **ಯಃ** ಯಾವನು **ಶ್ರದ್ಧಯಾ** ಶ್ರದ್ಧೆಯಿಂದ **ಯುಕ್ತಃ** ಕೂಡಿದವನಾಗಿ **ಶೃಣುಯಾತ್**

ಕೇಳುವನೋ **ಚ** ಮತ್ತು **ಭಕ್ತ್ಯಾ ಅನುಕೀರ್ತಯೇತ್** ಭಕ್ತಿಯಿಂದ ಮತ್ತೆ ಮತ್ತೆ ಹೇಳುವನೋ **ಸಃ ಮರ್ತ್ಯಃ** ಆ ಮನುಷ್ಯನು **ಯದ್ಯಪಿ ಅಮಂಗಲಃ** ಪಾಪಿಯೇ ಆಗಿದ್ದರೂ **ನರಕಂ ನ ವೈ ಗಚ್ಛೇತ್** ನರಕಕ್ಕೆ ಹೋಗಲಾರ **ಯಮಕಿಂಕರೈಃ ಈಕ್ಷಿತಃ ನ** ಯಮದೂತರಿಂದ ನೋಡಲ್ಪಡುವುದಿಲ್ಲ ಅಷ್ಟೇ ಅಲ್ಲ. **ಅಯಮಕಿಂಕರೈಃ** ಅಸದೃಶನಾದ ಶಿಕ್ಷಕಾಂತರ ರಹಿತನಾದ ಭಗವಂತನ ದೂತರಿಂದ **ಈಕ್ಷಿತಃ** ನೋಡಲ್ಪಟ್ಟ ನಾ ಪುರುಷನು **ವಿಷ್ಣುಲೋಕೇ ಮಹೀಯತೇ** ವೈಕುಂಠಲೋಕದಲ್ಲಿ ಮುಕ್ತನಾಗಿ ತನಗಿಂತ ಚಿಕ್ಕವರಿಂದ ಪೂಜಿತನಾಗುವನು. ವಿನಾ ಗರುಡನಿಂದ ಉಪಲಕ್ಷಣಯಾ ಅವನಿಗೆ ಸಮಾನನಾದ ಶೇಷನಿಂದ ಅಂದರೆ ಗರುಡ-ಶೇಷ ಮಾರ್ಗದಿಂದ **ಷ್ಣವ್ಯತೇ** ಹೊಂದಲ್ಪಡುವನು. 'ಷ್ಣು ಪ್ರಸ್ರವಣೇ' ಎಂದು ಧಾತುವಿದೆ. ವಿಷ್ಣುವಿನಲ್ಲಿ ಎಂದೂ ಅರ್ಥ. **ಅಮರ್ತ್ಯಃ ಸನ್** ಮರಣ ರಹಿತನಾಗಿ **ಮಹೀಯತೇ** ರಾರಾಜಿಸುವನು ಎಂದರ್ಥ ।।೫೦-೫೧।।

ಕೈಮುತ್ಯನ್ಯಾಯವನ್ನು ಹೇಳುತ್ತಾರೆ-

**ಮ್ರಿಯಮಾಣೋ ಹರೇರ್ನಾಮ ಗೃಣನ್ ಪುತ್ರೋಪಚಾರಿತಮ್ ।**
**ಅಜಾಮಿಲೋಽಪ್ಯಗಾನ್ಮುಕ್ತಿಂ ಕಿಮುತ ಶ್ರದ್ಧಯಾ ಗೃಣನ್ ।।೫೨।।**

।। ಇತಿ ಶ್ರೀಮದ್ಭಾಗವತೇ ಷಷ್ಠಸ್ಕಂಧೇ ದ್ವಿತಿಯೋಽಧ್ಯಾಯಃ ।।

**ಅಜಾಮಿಲಃ ಅಪಿ** ಎಂಭತ್ತೆಂಟು ವರ್ಷಗಳ ಆಯುಷ್ಯವನ್ನು ವ್ಯರ್ಥ ಮಾಡಿಕೊಂಡ ಆದರೂ ಮರಣಕಾಲದಲ್ಲಿ ಮಾಡಿರುವ ನಾರಾಯಣನ ಸ್ಮರಣೆಯು ದಾಸೀಸಹವಾಸದಿಂದ ಬಂದ ಪಾಪವನ್ನು ಹೋಗಲಾಡಿಸುವುದೆಂದು ತಿಳಿದ ಅಜಾಮಿಳನು **ಮ್ರಿಯಮಾಣಃ** ಸಾಯಲಿದ್ದವನು **ಪುತ್ರೋಪಚಾರಿತಂ** ನಿತ್ಯಾಭ್ಯಾಸದಿಂದ ಮರಣಕಾಲದಲ್ಲಿಯೂ ನಾಮಸ್ಮರಣೆಗಾಗಿ ಮಗನ ನೆಪ ಮಾಡಿಕೊಂಡು **ಶ್ರದ್ಧಯಾ** ಪ್ರಾರಬ್ಧಕರ್ಮವು ಮುಗಿದದ್ದರಿಂದ ಬಂದ ಅನುಸಂಧಾನದಿಂದ ಅಭಿವ್ಯಕ್ತವಾದ ಶ್ರದ್ಧೆಯಿಂದ **ನಾಮ** ಶ್ರೀಹರಿಸ್ವಾಮಿಕ ನಾಮವನ್ನು **ಗೃಹ್ಣನ್** ಕೀರ್ತಿಸಿ **ಹರೇಃ ಧಾಮ** ವೈಕುಂಠವನ್ನು ಮುಕ್ತಿಯನ್ನು **ಅಗಾತ್** ಹೊಂದಿದನು **ಕಿಮುತ ಶ್ರದ್ಧಯಾ ಗೃಣನ್** ಸ್ವಾಭಾವಿಕ ಶ್ರದ್ಧೆಯಿಂದ ಕೀರ್ತಿಸುವವನು ಮುಕ್ತನಾಗುವನೆಂದು ಏನು ಹೇಳುವುದು.

**ಪತಿಃ** ಆ ದಾಸೀಪತಿಯಾದ ಅಜಾಮಿಳನು **ಭಗವನ್ನಾಮ ಗೃಹ್ಣನ್** ಭಗವಂತನ ನಾಮವನ್ನು ಭಕ್ತಿಯಿಂದ ಉಚ್ಚರಿಸುತ್ತ **ಸದ್ಯಃ** ತತ್‌ಕ್ಷಣದಲ್ಲಿಯೇ **ವಿಮುಕ್ತಃ** ಮೃತ್ಯುವಿನಿಂದ ಬಿಡುಗಡೆ ಹೊಂದಿದನು. 'ದಾಸ್ಯಾಃ ಪತಿಃ' ಎಂಬಲ್ಲಿ ಷಷ್ಠಿಯು ಜನರ ಆಕ್ರೋಶವನ್ನು ಸೂಚಿಸುವುದು. ಅಜಾಮಿಳನೆಂಬುದನ್ನು ಬಿಟ್ಟು 'ದಾಸೀಪತಿ' ಎಂದು ಕರೆಯುತ್ತಿದ್ದರೆಂದರ್ಥ. ।।೪೮।।

**ನಾತಃ ಪರಂ ಕರ್ಮನಿಬಂಧಕೃಂತನಂ**
**ಮುಮುಕ್ಷುತಾಂ ತೀರ್ಥಪದಾನುಕೀರ್ತನಾತ್ ।**
**ನ ಯತ್ ಪುನಃ ಕರ್ಮಸು ಸಜ್ಜತೇ ಮನೋ**
**ರಜಸ್ತಮೋಭ್ಯಾಂ ಕಲಿಲಂ ನ ಚಾನ್ಯಥಾ ।।೪೯।।**

**ಮುಮುಕ್ಷುತಾಂ** ಮೋಕ್ಷವನ್ನು ಅಪೇಕ್ಷಿಸುವವರಿಗೆ **ಅತಃ ತೀರ್ಥಪದಾನು-ಕೀರ್ತನಾತ್** ಪವಿತ್ರ ಪಾದಗಳುಳ್ಳ ಶ್ರೀಹರಿಯ ನಾಮವನ್ನು ಭಕ್ತಿಯಿಂದ ಉಚ್ಚರಿಸುವುದಕ್ಕಿಂತ **ಪರಂ** ಮತ್ತೊಂದು ಉತ್ತಮವಾದ **ಕರ್ಮನಿಬಂಧಕೃಂತನಂ** ಪಾಪಕರ್ಮಕ್ಕೆ ಕಾರಣವಾದ ದುಷ್ಟ ಮನಸ್ಸನ್ನು ನಾಶಮಾಡುವ ವಸ್ತುವು **ನ** ಇಲ್ಲ. **ಯತ್** ಯಾಕೆಂದರೆ **ರಜಸ್ತಮೋಭ್ಯಾಂ ಕಲಿಲಂ** ರಜೋಗುಣ ತಮೋಗುಣಗಳಿಂದ ದುಷ್ಟವಾದ **ಮನಃ** ಮನಸ್ಸು **ಪುನಃ** ಹರಿಯ ಸಂಕೀರ್ತನೆಯ ಬಳಿಕ **ಕರ್ಮಸು** ಪಾಪಕರ್ಮಗಳಲ್ಲಿ **ನ ಸಜ್ಜತೇ** ಆಸಕ್ತವಾಗುವುದಿಲ್ಲ **ಅನ್ಯಥಾ** ಶ್ರೀಹರಿಯನ್ನು ಕೀರ್ತಿಸದಿದ್ದರೆ **ಕರ್ಮಸು ನ ಸಜ್ಜತೇ ಇತಿ ನ ಚ** ಕರ್ಮದಲ್ಲಿ ಆಸಕ್ತವಾಗುವದಿಲ್ಲವೆಂದಿಲ್ಲ ಆಗೇ ಆಗುವದು. ಆದ್ದರಿಂದ ಬೇರೇ ಯಾವುದೂ ಉತ್ತಮವಾದುದಲ್ಲ. ।।೪೯।।

**ಯ ಏವಂ(ನಂ) ಪರಮಂ ಗುಹ್ಯಮಿತಿಹಾಸಮಘಾಪಹಮ್ ।**
**ಶೃಣುಯಾಚ್ಛ್ರದ್ಧಯಾ ಯುಕ್ತೋ ಯಶ್ಚ ಭಕ್ತ್ಯಾಽನುಕೀರ್ತಯೇತ್ ।।೫೦।।**

**ನ ವೈ ಸ ನರಕಂ ಗಚ್ಛೇನ್ನೇಕ್ಷಿತೋ ಯಮಕಿಂಕರೈಃ ।**
**ಯದ್ಯಪ್ಯಮಂಗಲೋ ಮರ್ತ್ಯೋ ವಿಷ್ಣುಲೋಕೇ ಮಹಿಯತೇ ।।೫೧।।**

**ಪರಮಂ ಗುಹ್ಯಂ** ಅತ್ಯಂತ ರಹಸ್ಯವಾದ ಧರ್ಮವನ್ನು ತಿಳಿಸುವ **ಅಘಾಪಹಂ** ಪಾಪವನ್ನು ಕಳೆಯುವ **ಏವಂ (ನಂ)** ಈ ಪ್ರಕಾರದ **ಇತಿಹಾಸಂ** ಇತಿಹಾಸವನ್ನು **ಯಃ** ಯಾವನು **ಶ್ರದ್ಧಯಾ** ಶ್ರದ್ಧೆಯಿಂದ **ಯುಕ್ತಃ** ಕೂಡಿದವನಾಗಿ **ಶೃಣುಯಾತ್**

ಕೇಳುವನೋ **ಚ** ಮತ್ತು **ಭಕ್ತ್ಯಾ ಅನುಕೀರ್ತಯೇತ್** ಭಕ್ತಿಯಿಂದ ಮತ್ತೆ ಮತ್ತೆ ಹೇಳುವನೋ **ಸಃ ಮರ್ತ್ಯಃ** ಆ ಮನುಷ್ಯನು **ಯದ್ಯಪಿ ಅಮಂಗಲಃ** ಪಾಪಿಯೇ ಆಗಿದ್ದರೂ **ನರಕಂ ನ ವೈ ಗಚ್ಛೇತ್** ನರಕಕ್ಕೆ ಹೋಗಲಾರ **ಯಮಕಿಂಕರೈಃ ಈಕ್ಷಿತಃ ನ** ಯಮದೂತರಿಂದ ನೋಡಲ್ಪಡುವುದಿಲ್ಲ ಅಷ್ಟೇ ಅಲ್ಲ. **ಅಯಮಕಿಂಕರೈಃ** ಅಸದೃಶನಾದ ಶಿಕ್ಷಕಾಂತರ ರಹಿತನಾದ ಭಗವಂತನ ದೂತರಿಂದ **ಈಕ್ಷಿತಃ** ನೋಡಲ್ಪಟ್ಟ**ನಾ** ಪುರುಷನು **ವಿಷ್ಣುಲೋಕೇ ಮಹೀಯತೇ** ವೈಕುಂಠಲೋಕದಲ್ಲಿ ಮುಕ್ತನಾಗಿ ತನಗಿಂತ ಚಿಕ್ಕವರಿಂದ ಪೂಜಿತನಾಗುವನು. **ವಿನಾ** ಗರುಡನಿಂದ ಉಪಲಕ್ಷಣಯಾ ಆವನಿಗೆ ಸಮಾನನಾದ ಶೇಷನಿಂದ ಅಂದರೆ ಗರುಡ-ಶೇಷ ಮಾರ್ಗದಿಂದ **ಷ್ಣವ್ಯತೇ** ಹೊಂದಲ್ಪಡುವನು. 'ಷ್ಣು ಪ್ರಸ್ರವಣೇ' ಎಂದು ಧಾತುವಿದೆ. ವಿಷ್ಣವಿನಲ್ಲಿ ಎಂದೂ ಅರ್ಥ. **ಅಮರ್ತ್ಯಃ ಸನ್** ಮರಣ ರಹಿತನಾಗಿ **ಮಹೀಯತೇ** ರಾರಾಜಿಸುವನು ಎಂದರ್ಥ ।।೫೦-೫೧।।

ಕೈಮುತ್ಯನ್ಯಾಯವನ್ನು ಹೇಳುತ್ತಾರೆ-

**ಮ್ರಿಯಮಾಣೋ ಹರೇರ್ನಾಮ ಗೃಣನ್ ಪುತ್ರೋಪಚಾರಿತಮ್ ।**
**ಅಜಾಮಿಲೋऽಪ್ಯಗಾನ್ಧಾಮ ಕಿಮುತ ಶ್ರದ್ಧಯಾ ಗೃಣನ್ ।।೫೨।।**

।। ಇತಿ ಶ್ರೀಮದ್ಭಾಗವತೇ ಷಷ್ಠಸ್ಕಂಧೇ ದ್ವಿತಿಯೋऽಧ್ಯಾಯಃ ।।

**ಅಜಾಮಿಲಃ ಅಪಿ** ಎಂಭತ್ತೆಂಟು ವರ್ಷಗಳ ಆಯುಷ್ಯವನ್ನು ವ್ಯರ್ಥ ಮಾಡಿಕೊಂಡ ಆದರೂ ಮರಣಕಾಲದಲ್ಲಿ ಮಾಡಿರುವ ನಾರಾಯಣನ ಸ್ಮರಣೆಯು ದಾಸೀಸಹವಾಸದಿಂದ ಬಂದ ಪಾಪವನ್ನು ಹೋಗಲಾಡಿಸುವುದೆಂದು ತಿಳಿದ ಅಜಾಮಿಳನು **ಮ್ರಿಯಮಾಣಃ** ಸಾಯಲಿದ್ದವನು **ಪುತ್ರೋಪಚಾರಿತಂ** ನಿತ್ಯಾಭ್ಯಾಸದಿಂದ ಮರಣಕಾಲದಲ್ಲಿಯೂ ನಾಮಸ್ಮರಣೆಗಾಗಿ ಮಗನ ನೆಪ ಮಾಡಿಕೊಂಡು **ಶ್ರದ್ಧಯಾ** ಪ್ರಾರಬ್ಧಕರ್ಮವು ಮುಗಿದದ್ದರಿಂದ ಬಂದ ಅನುಸಂಧಾನದಿಂದ ಅಭಿವ್ಯಕ್ತವಾದ ಶ್ರದ್ಧೆಯಿಂದ **ನಾಮ** ಶ್ರೀಹರಿಸ್ವಾಮಿಕ ನಾಮವನ್ನು **ಗೃಹ್ಣನ್** ಕೀರ್ತಿಸಿ **ಹರೇಃ ಧಾಮ** ವೈಕುಂಠವನ್ನು ಮುಕ್ತಿಯನ್ನು **ಅಗಾತ್** ಹೊಂದಿದನು **ಕಿಮುತ ಶ್ರದ್ಧಯಾ ಗೃಣನ್** ಸ್ವಾಭಾವಿಕ ಶ್ರದ್ಧೆಯಿಂದ ಕೀರ್ತಿಸುವವನು ಮುಕ್ತನಾಗುವನೆಂದು ಏನು ಹೇಳುವುದು.

ಮುಂದಿನ ಅಧ್ಯಾಯದ ೨೨ ನೇ ಶ್ಲೋಕದಲ್ಲಿ 'ಭಕ್ತಿಯೋಗೋ ಭಗವತಿ ತನ್ನಾಮಗ್ರಹಣಾದಿಭಿಃ' ಎಂದು ಹೇಳಿರುವುದರಿಂದ ಹೀಗೇ ಅರ್ಥ ಮಾಡುವುದು ಯುಕ್ತ. ಮಕ್ಕಳೇ ಮೊದಲಾದವರಿಗೆ ಇಟ್ಟ ಶ್ರಿಹರಿಯ ನಾಮವನ್ನು ಹೇಳಿ ಪ್ರಾರಬ್ಧಕರ್ಮ ಮುಗಿದು ಶ್ರೀಹರಿಯ ನಾಮವನ್ನು ಸ್ವಾಭಾವಿಕವಾದ ನಿರಂತರ ಭಗವಂತನ ಶ್ರದ್ಧೆಯಿಂದ ಕೀರ್ತಿಸುತ್ತ ಮುಕ್ತನಾಗುವನು ಎಂದರ್ಥ. ಅಭಕ್ತಿಯಿಂದ ಎಂದರ್ಥವಲ್ಲ.

ಇಲ್ಲಿಗೆ ಎರಡನೇ ಅಧ್ಯಾಯ ಮುಗಿಯಿತು.

★★★★★★

# ಅಥ ಶ್ರೀಮದ್ಭಾಗವತೇ - ಷಷ್ಠಸ್ಕಂಧೇ

## ತೃತೀಯೋಽಧ್ಯಾಯಃ

**ತೃತೀಯಾಧ್ಯಾಯಸಾರ**

ರಾಜ ಕೇಳಿದ. ಯಮಭಟರು ತಮ್ಮ ಒಡೆಯನಿಗೆ ನಡೆದ ವೃತ್ತಾಂತವನ್ನೆಲ್ಲ ಹೇಳಿದರು. ನಂತರ ಯಮಧರ್ಮರಾಜ ತಮ್ಮ ದೂತರಿಗೆ ಏನೆಂದು ಹೇಳಿದ. ಯಮದೇವರ ದಂಡಕ್ಕೆ ಭಂಗ ಬಂದದ್ದು ಎಲ್ಲಿಯೂ ನಾನು ಕೇಳಿಲ್ಲ. ಈ ಸಂಶಯವು ಎಲ್ಲರನ್ನು ಕಾಡುತ್ತದೆ. ನೀವು ಮಾತ್ರ ಇದಕ್ಕೆ ಉತ್ತರ ನೀಡಲು ಸಮರ್ಥರು.

ರಾಜನ ಮಾತನ್ನು ಕೇಳಿ ಶುಕಾಚಾರ್ಯರು ಹೇಳಿದರು. ದೇವದೂತರು ಯಮಭಟರನ್ನು ತಡೆದರು. ಯಮಭಟರು ತಮ್ಮ ಸ್ವಾಮಿಯ ಹತ್ತಿರ ಹೋಗಿ ಕೇಳಿಕೊಂಡರು. ಸಾತ್ತ್ವಿಕಾದಿಭೇದೇನ ಕರ್ಮಗಳನ್ನು ಮಾಡುವ ಜೀವರಿಗೆ ಕರ್ಮಫಲವನ್ನು ಕೊಡುವ ಸ್ವಾಮಿಗಳು ಎಷ್ಟು ಜನರಿದ್ದಾರೆ? ಜೀವಲೋಕವನ್ನು ಶಾಸನ ಮಾಡುವವರು ಎಷ್ಟು ಜನರಿದ್ದಾರೆ? ಕರ್ಮಫಲಪ್ರದರು ಬಹಳ ಜನರಿದ್ದಾರೆ ಎಂದಾದರೆ ಅವರೆಲ್ಲರೂ ಬಂಧ-ಮೊಕ್ಷಗಳನ್ನು ನೀಡಲು ಸಮರ್ಥರೇ? ಅಲ್ಲವೇ? ಆ ಸ್ವಾಮಿಗಳಾರಿಗೂ ಬಂಧ-ಮೋಕ್ಷಪ್ರದತ್ವ ಸಾಮರ್ಥ್ಯ ಇಲ್ಲವೆಂದಾದರೆ ಮೊಕ್ಷ ಯಾರಿಗೆ ಆಗಬೇಕು? ಕೊಡುವವರೇ ಇಲ್ಲದಿರುವಾಗ ಫಲ ಯಾರಿಗೆ ಲಭ್ಯವಾಗುತ್ತದೆ? ಇದು ಯುಕ್ತವಲ್ಲ. ಆದ್ದರಿಂದ ಎಲ್ಲರಿಗೂ ಕರ್ಮಫಲಪ್ರದನು ನೀನೊಬ್ಬನೇ ಆಗಿರುವಿ. ಎಲ್ಲರ ಶುಭಾಶುಭಕರ್ಮಗಳ ವಿವೇಕವವನ್ನು ಮಾಡುವವನು ನೀನೇ. ನೀನೇ ಅಯಾ ಕರ್ಮಗಳಿಗೆ ಅನುಗುಣವಾಗಿ ಪಲಪ್ರದನೂ ಆಗಿರುವಿ.

ಸರ್ವಶಾಸಕನಾದ ನಿನ್ನ ಆಜ್ಞೆಯನ್ನು ಭೂಲೋಕದಲ್ಲಿ ನಾಲ್ಕು ಜನ ಪುರುಷರು ಮೀರಿದ್ದಾರೆ. ನಿನ್ನ ಆಜ್ಞೆಯಿಂದ ನರಕಕ್ಕೆ ಒಯ್ಯುತ್ತಿರುವ ಪಾಪಿಯ ಪಾಶಗಳನ್ನು ಕಡಿದು ಹಾಕಿದ್ದಾರೆ. ಆ ಪಾಪಿಯನ್ನು ಮೋಚನ ಮಾಡಿದ್ದಾರೆ. ಅಲ್ಲದೇ ಆ ಪಾಪಿಯು ನಾರಾಯಣ ಎಂದು ಉಚ್ಚರಿಸಿದ. ಕೂಡಲೇ ಆ ಪುರುಷರು ಧಾವಿಸಿ ಬಂದರು. ಭಯ ಬೇಡ ಎಂದು ಸಮಾಧಾನ ಮಾಡಿದರು. ಪಾಶಮೋಚನ ಮಾಡಿ ಹೊರಟು ಹೋದರು. ಅವರಾರು? ಅದನ್ನು ತಿಳಿಯಬೇಕಾಗಿದೆ. ತಿಳಿಸಿ ಹೇಳಿರಿ.

ದೂತರ ಮಾತನ್ನು ಕೇಳಿದ ಯಮ. ಸರ್ವಸ್ವಾಮಿಯಾದ ಶ್ರೀಹರಿಯನ್ನು ಸ್ಮರಿಸುತ್ತಾ ತನ್ನ ದೂತರಿಗೆ ಉಪದೇಶ ಮಾಡಿದ.

ನಾನೇ ಸರ್ವಶಾಸಕ ಎಂದು ನೀವು ಹೇಳಿದಿರಿ. ಯಾವ ಆಲೋಚನೆಯನ್ನೂ ಮಾಡದೇ ಹೇಳಿದ ಮಾತು ಅದು. ಹೀಗಾಗಿ ಅವಾಸ್ತವ. ಸ್ಥಾವರ-ಜಂಗಮಾತ್ಮಕವಾದ ಸಮಸ್ತ ಪ್ರಪಂಚಕ್ಕೆ ಶ್ರೀಹರಿಯೇ ಸರ್ವೋತ್ತಮ ಶಾಸಕನಾಗಿದ್ದಾನೆ. ಅವನ ಆಜ್ಞೆಯನ್ನು ಪಾಲಿಸುವುದಕ್ಕಾಗಿ ನಾವು ಏಕದೇಶಕ್ಕೆ ಮಾತ್ರ ಶಾಸಕರಾಗಿದ್ದೇವೆ. ಬ್ರಹ್ಮ, ರುದ್ರ, ಇಂದ್ರ, ನಾನು ಯಾರೂ ದೇವರ ಮಹಾಮಹಿಮೆಯನ್ನು ತಿಳಿಯಲು ಶಕ್ತರಲ್ಲ.

ಅಂತಹ ಸರ್ವಶಾಸಕನಾದ ಶ್ರೀಹರಿಯ ಪಾರ್ಷದರು ಲೋಕಗಳಲ್ಲಿ ನಿರಂತರ ಸಂಚರಿಸುತ್ತಲೇ ಇರುತ್ತಾರೆ. ಶ್ರೀಹರಿಯ ಭಕ್ತರನ್ನು ಸಂರಕ್ಷಿಸುತ್ತಾರೆ. ಶ್ರೀಹರಿಯನ್ನು ನಂಬಿದವರಿಗೆ ಯಾವುದೇ ರೀತಿಯಾದ ಅನ್ಯಾಯವು ಆಗುವುದಿಲ್ಲ. ಶ್ರೀಹರಿಯಿಂದ ಪ್ರಣೀತವಾದ ಧರ್ಮವನ್ನು ತಿಳಿಯಲು ಋಷಿ-ಮುನಿಗಳೂ ಸಮರ್ಥರಾಗುವುದಿಲ್ಲ. ನಿಮಗೆಲ್ಲಿ ಆ ಧರ್ಮದ ಜ್ಞಾನವಾದೀತು? ಬ್ರಹ್ಮ-ರುದ್ರಾದಿದೇವತೆಗಳು, ನಾನು, ನಾರದ, ಕುಮಾರ, ಪ್ರಹ್ಲಾದ, ಜನಕ, ಭೀಷ್ಮ, ಬಲಿ ಇತ್ಯಾದಿ ಎಲ್ಲರೂ ಶ್ರೀಹರಿಯಿಂದ ಪ್ರಣೀತವಾದ ಧರ್ಮವನ್ನು ತಿಳಿಯುತ್ತೇವೆ.

ಮಗನನ್ನು ಕರೆಯುವ ನೆಪದಲ್ಲಿಯೇ ಭಕ್ತಿಯಿಂದ ಶ್ರೀಹರಿಯ ನಾಮವನ್ನು ಸ್ಮರಿಸಿದ್ದಕ್ಕಾಗಿ ಅಜಾಮಿಲ ಪಾಪಗಳಿಂದ ಮುಕ್ತನಾದ. ಶ್ರೀಹರಿಯ ಲೋಕಗಳನ್ನು ಪಡೆದ. ಶ್ರೀಹರಿಯ ಅತ್ಯದ್ಭುತವಾದ ಮಹಿಮೆಯೇ ಇದಾಗಿದೆ. ಇದನ್ನು ತಿಳಿಯಿರಿ.

ಯಾರು ಶ್ರೀಹರಿಯಿಂದ ಸಂರಕ್ಷಿತರಾಗಿರುವರೋ ಅವರನ್ನು ಶಾಸನ ಮಾಡಲು ನಾವು ಸಮರ್ಥರಲ್ಲ. ಆದ್ದರಿಂದ ಶ್ರೀಹರಿಯ ಭಕ್ತರ ಹತ್ತಿರ ನೀವು ಸುಳಿಯಬೇಡಿ. ಯಾರು ಶ್ರೀಹರಿ ವಿಮುಖರಾಗಿರುವರೋ ಅಂಥವರನ್ನು ಮಾತ್ರ ನಿರ್ದಯವಾಗಿ

ಎಳೆದು ತನ್ನಿರಿ. ಅಜಾಮಿಳನನ್ನು ಎಳೆಯುವ ಮೂಲಕ ನೀವು ಪಾಪವನ್ನೇ ಮಾಡಿರುವಿರಿ. ನಿಮ್ಮ ಈ ಪಾಪವನ್ನು ಶ್ರೀಹರಿಯು ಕ್ಷಮಿಸಲಿ.

ಶುಕಾಚಾರ್ಯರು ಹೇಳಿದರು. ಹೀಗೆ ತಮ್ಮ ಸ್ವಾಮಿಯಾದ ಯಮ ಹೇಳಿದ ಉಪದೇಶವನ್ನು ಯಮದೂತರು ಕೇಳಿದರು. ವಿಸ್ಮಿತರಾದರು. ಭಕ್ತರೆಂದರೆ ಅವರಿಗೆ ಭಯ ಹುಟ್ಟಿಕೊಂಡಿತು. ಅವತ್ತಿನಿಂದ ಭಕ್ತರ ಹತ್ತಿರ ಸುಳಿಯುವ ಸಾಹಸದಿಂದ ನಿವೃತ್ತರಾದರು.

ಆದ್ದರಿಂದ ಭಕ್ತಿಪೂರ್ವಕವಾದ ಭಗವನ್ನಾಮಸ್ಮರಣೆ ಎಲ್ಲ ಪಾಪಗಳಿಗೂ ಪ್ರಾಯಶ್ಚಿತ್ತವಾಗಿದೆ. ಮಲಯಪರ್ವತದಲ್ಲಿ ಶ್ರೀಹರಿಯನ್ನು ಪೂಜಿಸುತ್ತಿದ್ದ ಅಗಸ್ತ್ಯರು ಭಕ್ತಿಪರವಶರಾಗಿ ಹೇಳಿದ ಇತಿಹಾಸವಿದು.

★★★★★

ಭಕ್ತಿಯುಕ್ತವಾಗಿ ಮಾಡಿದ ನಾಮ ಸಂಕೀರ್ತನೆಯು ಮುಕ್ತಿಗೆ ಸಾಧನವೆಂದು ಹಿಂದೆ ಹೇಳಿದೆ. ಆ ವಿಷಯವನ್ನೇ ಈ ಅಧ್ಯಾಯದಲ್ಲಿ ದೃಢಪಡಿಸುವರು.

ಯಮನ ಶಾಸನವನ್ನು ಕೇಳಿದ ಪರೀಕ್ಷಿತರಾಜ ಆಶ್ಚರ್ಯ ಚಕಿತನಾದ. ತನ್ನ ದೂತರ ಮುಖದಿಂದ ನಡೆದ ವಿಚಾರವನ್ನು ತಿಳಿದು ಯಮರಾಜನು ಏನು ಮಾಡಿದನು? ಎಂಬ ಪರರ ಸಂಶಯವನ್ನು ತನ್ನಲ್ಲಿ ಆರೋಪಿಸಿಕೊಂಡು ಶುಕಾಚಾರ್ಯರನ್ನು ಈ ರೀತಿಯಾಗಿ ಪ್ರಶ್ನಿಸಿದ.

ಯಮದೇವರ ಅವರ ಭಟರ ಸಂವಾದದ ನೆಪದಲ್ಲಿ ನಿರ್ವಿವಾದವಾದ ಶ್ರೀಹರಿಯ ಸ್ವಾತಂತ್ರ್ಯವನ್ನು ಈ ಅಧ್ಯಾಯದಲ್ಲಿ ನಿರೂಪಿಸುತ್ತಾರೆ. ಭೂಲೋಕದಲ್ಲಿ ನಡೆದ ವೃತ್ತಾಂತವನ್ನು ಯಥಾವತ್ತಾಗಿ ಯಮದೂತರು ಯಮರಾಜರಿಗೆ ಹೇಳಿದರು ಎಂದು ಹಿಂದೆ ಹೇಳಲಾಗಿತ್ತು. ಇನ್ನು ಮುಂದೆ ಏನಾಯಿತೆಂದು ರಾಜನು ಇಲ್ಲಿ ಪ್ರಶ್ನಿಸುತ್ತಾನೆ.

**ರಾಜೋವಾಚ -**

**ನಿಶಮ್ಯ ದೇವಃ ಸ್ವಭಟೋಪವರ್ಣಿತಂ**
**ಪ್ರತ್ಯಾಹ ಕಿಂ ತಾನಪಿ ಧರ್ಮರಾಜಃ ।**
**ಏವಂ ಹತಾಜ್ಞೋ ವಿಹತಾನ್ ಮುರಾರೇಃ**
**ನೈದೇಶಿಕೈರ್ಯಸ್ಯ ವಶೇ ಜನೋಽಯಮ್ ॥೧॥**

**ಅಯಂ ಜನಃ** ಈ ಸಾಯುವ ಮನುಷ್ಯರೆಲ್ಲರೂ ಮತ್ತು ಯಮದೂತರೂ **ಯಸ್ಯ** ಯಾವ ಯಮರಾಜನ **ವಶೇ** ಆಧೀನದಲ್ಲಿ **(ವರ್ತತೇ)** ಇರುವರೋ **(ಸಃ) ಧರ್ಮರಾಜಃ ದೇವಃ** ಧರ್ಮಕ್ಕೆ ಅವಾಂತರ ನಿಯಾಮಕನಾದ ಯಮದೇವನು **ಏವಂ** ಮೇಲೆ ಹೇಳಿದಂತೆ **ಹತಾಜ್ಞಃ ಸನ್** ಅಜಾಮಿಳನನ್ನು ಕರೆತರಬೇಕೆಂಬ ತನ್ನ ಅಪ್ಪಣೆ ನಡೆಯದಿರುವವನಾಗಿ **ಸ್ವಭಟೋಪವರ್ಣಿತಂ** ತನ್ನ ಕಿಂಕರರು ಹೇಳಿದ್ದನ್ನು **ನಿಶಮ್ಯ** ಕೇಳಿ **ಮುರಾರೇಃ** ಶ್ರೀಹರಿಯ **ನೈದೇಶಿಕೈಃ** ಅಜ್ಞಾಕಾರಿಗಳಾದ ದೂತರಿಂದ **ವಿಹತಾನ್** ನಿವಾರಿತರಾದ ತಮ್ಮ ಯಜಮಾನನ ಅಪ್ಪಣೆ ನಡೆಸಿಲಿಕ್ಕಾಗದೆ ದುಃಖಿತರಾದ ಹತಪ್ರಾಯರಾದ **ತಾನ್ ಅಪಿ** ಆ ಭಟರನ್ನು ಕುರಿತು ಆದರೂ **ಕಿಂ ಪ್ರತ್ಯಾಹ** ಏನು ಉತ್ತರ ಕೊಟ್ಟರು.

'ಸತಾಂ ಮಾನೇ ಮ್ಲಾನೇ ಮರಣಮಥವಾ ದೂರಗಮನಮ್' 'ಆಜ್ಞಾ ಭಂಗೋ ನರೇಂದ್ರಾಣಾಂ ಅಶಸ್ತ್ರವಧಮುಚ್ಯತೇ' ಎಂಬಂತೆ ಅಲ್ಲ ತಾನೆ? ಎಂದು ಪ್ರಶ್ನಿಸುವನು. **ಯಸ್ಯ** ಯಾವ ಶ್ರೀಹರಿಯ **ವಶೇ** ಅಧೀನದಲ್ಲಿ **ಅಯಂ ಜನಃ** ಈ ಜನರಿರುವರೋ ಅಂತಹ **ಮುರಾರೇಃ** ಶ್ರೀಹರಿಯ **ನೈದೇಶಿಕೈಃ** ದೂತರಿಂದ ಎಂದು ಹೀಗೂ ಅನ್ವಯ ಮಾಡಬಹುದು.

ಸಮಾಧಾನಿಯಾಗಿದ್ದರೆ ಅನುಸಂಧಾನ ಉಳ್ಳವನಾಗಬಹುದು. ಇವನು ಹಾಗಲ್ಲ ಎಂದೂ ಹೇಳುವರು. **ನಿಶಮೀ** ಶಮೀಭಿನ್ನನಾದವನು ಕ್ರೂರನಾದವನು ಎಂದರ್ಥ. **ಅದೇವಃ** ಈ ವಿಷಯದಲ್ಲಿ ರಾಜಾಂತರ ರಹಿತನಾದ 'ದೇವಃ ಸುರೇ ಘನೇ ರಾಜ್ಞಿ' ಎಂದು ವಿಶ್ವ. ।।೧।।

ಇದು ಅತ್ಯಾಶ್ಚರ್ಯವೆನ್ನುತ್ತಾರೆ-

**ಯಮಸ್ಯ ದೇವಸ್ಯ ನ ದಂಡಭಂಗಃ**
**ಕುತಶ್ಚನರ್ಷೇ ಶ್ರುತಪೂರ್ವ ಆಸೀತ್ ।**
**ಏವಂ ಮುನೇ ವೃಶ್ಚತಿ ಲೋಕಸಂಶಯಂ**
**ನ ಹಿ ತ್ವದನ್ಯ ಇತಿ ಮೇ ವಿನಿಶ್ಚಿತಮ್ ।।೨।।**

**ಹೇ ಋಷೇ** ಪರಮಾತ್ಮನ ಅಪರೋಕ್ಷ ಜ್ಞಾನಿಗಳಾದ ಶುಕಾಚಾರ್ಯರೇ **ಕುತಶ್ಚನ** ಯಾರಿಂದಲೂ **ಯಮದೇವಸ್ಯ ದಂಡಭಂಗಃ** ಯಮದೇವರ ಶಿಕ್ಷೆಯ ಆಜ್ಞೆಯ ಭಂಗವಾದುದು **ಶ್ರುತಪೂರ್ವಃ ನ ಆಸೀತ್** ಹಿಂದೆಂದೂ ಕೇಳಿದ್ದಿಲ್ಲ. ಇದರಿಂದ

ಯಮದೇವರ ಆಜ್ಞೆಗೆ ಭಂಗವಿಲ್ಲವೆಂಬ ಸಂದೇಹಕ್ಕೆ ಬೇಕಾಗಿರುವ ಒಂದು ಕೋಟಿಯು ನಿರೂಪಿತವಾಯಿತು. ಹಿಂದೆ ನೀವೇ ಹೇಳಿದಂತೆ ಈಗ ಭಂಗವಾಗಿದೆ ಎಂಬುದರಿಂದ ಮತ್ತೊಂದು ಕೋಟಿಯು ನಿರೂಪಿತವಾಯಿತು. ಹೀಗೆ ಎರಡು ಕೋಟಿಗಳು ಕಂಡಿದ್ದರಿಂದ ಯಮದೇವರ ಆಜ್ಞೆಗೆ ಭಂಗವಿದೆಯೋ ಇಲ್ಲವೋ ಎಂಬ ಸಂಶಯಾಕಾರ ತಿಳಿಸಿದಂತಾಯಿತು. **ಹೇ ಮುನೇ** ಮನನಶೀಲರಾದ ಶುಕಾಚಾರ್ಯರೇ **ಏವಂ** ಮೇಲೆ ಹೇಳಿದ **ಲೋಕಸಂಶಯಂ** ಜನಸಾಮಾನ್ಯರ ಸಂಶಯವನ್ನು **ತ್ವದನ್ಯಃ** ನಿಮಗಿಂತ ಬೇರೆಯವರು **ನ ವೃಶ್ಚತಿ** ಪರಿಹರಿಸಲಾರರು **ಇತಿ** ಎಂದು **ವಿನಿಶ್ಚಿತಂ** ನಿಶ್ಚಿತವು **ಹಿ** ಆದ ಕಾರಣ **ಮೇ** ನನಗಾಗಿ **ಕಥಯ** ವಿಶೇಷವನ್ನು ತಿಳಿಸಿರಿ.

'ಲೋಕಸಂಶಯಂ' ಎಂದು ಹೇಳಿದ್ದರಿಂದ ಜನರಿಗೆ ವಿಶೇಷಾರ್ಥವನ್ನು ತಿಳಿಸಲು ನನ್ನ ಪ್ರಶ್ನೆಯೆಂದು ತಿಳಿಸಿರುವರು.

**ಜಾನಂತೋಽಪಿ ವಿಶೇಷಾರ್ಥಜ್ಞಾನಾಯ ಸ್ಥಾಪನಾಯ ವಾ ।**
**ಪೃಚ್ಛಂತಿ ಸಾಧವಃ.................................... ॥**

ಎಂಬ ಪ್ರಮಾಣ ಇದನ್ನೇ ತಿಳಿಸುತ್ತದೆ.

'ತ್ವದನ್ಯಃ' ಎಂಬ ಪದ ಒಂದೂ ಹೌದು ಬೇರೆಯೂ ಹೌದು. 'ತ್ವದನ್ಯಃ' ಎಂಬಲ್ಲಿ ನ್ಯಕಾರ ಗುರು ಆಗದ್ದರಿಂದ (ಅಗೌರವೇಣ) ಬೇರೆಯವರಲ್ಲಿ ಈ ಸಂಶಯ ಕಳೆಯುವ ವಿಷಯದಲ್ಲಿ ನನಗೆ ಗೌರವವಿಲ್ಲ ಎಂದು ರಾಜನ ಅಭಿಪ್ರಾಯ ಧ್ವನಿತವಾಗಿದೆ.

'ಋಷೇ' 'ಮುನೇ' ಎಂದು ಎರಡು ಸಲ ಸಂಬೋಧಿಸಿದ್ದರಿಂದ ತತ್ತ್ವಗಳನ್ನು ತಿಳಿಸುವಲ್ಲಿ ಸಂದೇಹಗಳನ್ನು ಕಳೆಯುವಲ್ಲಿ ಸಾಮರ್ಥ್ಯವಿದೆ ಎಂದು ಶಬ್ದಪ್ರವೃತ್ತಿ ನಿಮಿತ್ತದಿಂದ ತಿಳಿಯುವುದು. ॥೨॥

**ಬಾದರಾಯಣಿರುವಾಚ -**

**ಭಗವತ್ಪುರುಷೈ ರಾಜನ್ ಯಾಮ್ಯಾ ಪ್ರತಿಹತೋದ್ಯಮಾಃ ।**
**ಪತಿಂ ವಿಜ್ಞಾಪಯಾಮಾಸುಃ ಯಮಂ ಸಂಯಮನೀಪತಿಮ್ ॥೩॥**

**ರಾಜನ್** ಪರೀಕ್ಷಿತನೇ **ಭಗವತ್ಪುರುಷೈಃ** ವಿಷ್ಣುದೂತರಿಂದ **ಪ್ರತಿಹತೋದ್ಯಮಾಃ** ತಿರಸ್ಕೃತವಾದ ತಮ್ಮ ಪ್ರಯತ್ನ ಉಳ್ಳ **ಯಾಮ್ಯಾಃ** ಯಮದೂತರು **ಪತಿಂ** ತಮ್ಮ ಸ್ವಾಮಿಯಾದ **ಸಂಯಮನೀಪತಿಂ** ನರಕಮೂಲವಾದ ಸಂಯಮನಪಟ್ಟಣದ ಪಾಲಕನಾದ **ಯಮಂ** ಯಮಧರ್ಮರಾಜರಿಗೆ **ವಿಜ್ಞಾಪಯಾಮಾಸುಃ** ವಿಜ್ಞಾಪಿಸಿದರು.

ಯಮಶಬ್ದಕ್ಕೆ ಬೇರೆ ಅರ್ಥವೂ ಇರುವುದರಿಂದ ಸಂದೇಹ ಬರದಿರಲು ಸಂಯಮನೀಪತಿ ಎಂದು ವಿಶೇಷಣ ಕೊಟ್ಟಿರುವರು. ಯದ್ಯಪಿ ಈ ಪ್ರಕರಣ ನೋಡಿದ ಯಾವ ಬುದ್ಧಿವಂತನೂ ಯಮ ಶಬ್ದಕ್ಕೆ ಬೇರೆ ಅರ್ಥ ಶಂಕಿಸಲಾರನು. ಆದರೂ ಯಾರನ್ನು ಕರೆ ತರಲು ಹೋದ ಯಾರಿಗೆ ಮಾರ್ಗಮಧ್ಯದಲ್ಲಿ ಈ ವಿಧವಾದ ಗತಿಯಾಯಿತು. ಎಂಬ ಆಕ್ರೋಶದಿಂದ 'ಸಂಯಮನೀಪತಿಮ್' ಎಂದಿದ್ದಾರೆ ಎಂದು ತಿಳಿಯಿರಿ ಎನ್ನುತ್ತಾರೆ ಶ್ರೀಸತ್ಯಧರ್ಮಶ್ರೀಗಳವರು. ।।೩।।

**ಯಮದೂತಾ ಊಚುಃ -**

**ಕತಿ ಸಂತೀಹ ಶಾಸ್ತಾರೋ ಜೀವಲೋಕಸ್ಯ ವೈ ಪ್ರಭೋ ।**
**ತ್ರೈವಿದ್ಯಂ (ತ್ರೈವಿಧ್ಯಂ) ಕುರ್ವತಃ ಕರ್ಮ ಫಲಾಭಿವ್ಯಕ್ತಿಹೇತವಃ ।।೪।।**

**ಪ್ರಭೋ** ಒಡೆಯನೇ **ಇಹ** ಜಗತ್ತಿನಲ್ಲಿ **ತ್ರೈವಿದ್ಯಂ** ವೇದವಿದಿತವಾದ **ತ್ರೈವಿಧ್ಯಂ** ಎಂಬ ಪಾಠದಲ್ಲಿ ಸಾತ್ವಿಕ ರಾಜಸ ತಾಮಸವೆಂಬ ಭೇದವುಳ್ಳ **ಕರ್ಮ** ಕೆಲಸಗಳನ್ನು **ಕುರ್ವತಃ** ಮಾಡುವ **ಜೀವಲೋಕಸ್ಯ** ತ್ರಿವಿಧ ಜೀವ ಸಮುದಾಯಕ್ಕೆ 'ತ್ರೈವಿದ್ಯಂ ಕರ್ಮ ಕುರ್ವತಃ' ಎಂಬಲ್ಲಿ ವಿಶೇಷಣವಾದ ತ್ರೈವಿದ್ಯ ಕರ್ಮ ಪದವು ಯೋಗ್ಯತಯಾ ಫಲ ಪದದ ಹಿಂದೆ ಅನ್ವಯಿಸುವದು. ಆಗ **ತ್ರೈವಿಧ್ಯಂ ಕರ್ಮ ಫಲಾಭಿವ್ಯಕ್ತಿಹೇತವಃ** ತ್ರಿವಿಧ ಕರ್ಮಗಳಿಗೆ ಫಲಕೊಡುವ **ಶಾಸ್ತಾರಃ** ಶಾಸಕರು **ಕತಿ ಸಂತಿ** ಎಷ್ಟು ಮಂದಿ ಇರುವರು. ಒಬ್ಬನೇ ಶಾಸಕನೇ ಬಹುಶಾಸಕರೇ ? ಎಂದು ಪ್ರಶ್ನೆ. ಅನೇಕ ಶಾಸಕರಿರುವಂತಿಲ್ಲ ಎಂದು ಅಭಿಪ್ರಾಯ. ಪ್ರಭೋ ಎಂದು ಏಕವಚನ ಹೇಳಿ 'ಶಾಸ್ತಾರಃ ಕತಿ ಸಂತಿ' ಎಂದು ಕೇಳಿದಾಗ ಕಾಕುಸ್ವರದಿಂದ ಬಹು ಶಾಸಕರ ಆಕ್ಷೇಪ ಧ್ವನಿತವಾಗುವದು. ಬಹುಶಾಸಕರೆಂಬ ಪಕ್ಷದಲ್ಲಿ ವೈ ನಿನ್ನ ಪ್ರಭಾವ ಪ್ರಸಿದ್ಧ ಎಂದು ಕಾಕುವನ್ನೇ ಪೋಷಿಸುವರು. ।।೪।।

**ಯದಿ ಸ್ಯುರ್ಬಹವೋ ಲೋಕೇ ಶಾಸ್ತಾರೋ ದಂಡಧಾರಿಣಃ ।**
**ಕಸ್ಯ ಸ್ಯಾತಾಂ ನ ವಾ ಕಸ್ಯ ಮೃತ್ಯುಶ್ಚಾಮೃತಮೇವ ಚ ।।೫।।**

**ಲೋಕೇ** ಲೋಕದಲ್ಲಿ **ದಂಡಧಾರಿಣಃ** ಶಿಕ್ಷೆ ಮಾಡುವ **ಶಾಸ್ತಾರಃ** ಶಾಸಕರು **ಬಹವಃ ಯದಿ ಸ್ಯುಃ** ಬಹಳ ಜನ ಇರುವುದಾದರೆ ಅವರೆಲ್ಲ ಮೃತ್ಯುವನ್ನು ಅಮೃತವನ್ನು ಕೊಡುವ ಸಾಮರ್ಥ್ಯ ಉಳ್ಳವರೇ? ಅಲ್ಲವೇ? ಎರಡನೆಯ ಪಕ್ಷದಲ್ಲಿ (ಸಾಮರ್ಥ್ಯವಂತರಲ್ಲ ಎಂದಲ್ಲಿ) **ಮೃತ್ಯುಃ** ಬಂಧವು **ಅಮೃತ ಏವ ಚ** ಮೋಕ್ಷವೂ **ಕಸ್ಯ** ಯಾವನಿಗೆ **ಸ್ಯಾತಾಂ** ಆದಾವು. ಅವುಗಳನ್ನು ಕೊಡುವ ಸಾಮರ್ಥ್ಯವೇ ಇಲ್ಲವಾದ್ದರಿಂದ ಯಾರೂ ಬಂಧಮುಕ್ತರೇ ಆಗುವಂತಿಲ್ಲವೆಂದರ್ಥ. ಎಲ್ಲರೂ ಸಮರ್ಥರೇ ಎಂದು ಹೇಳುವದಾದರೆ ಬಾಧಕವನ್ನು ಹೇಳುತ್ತಾರೆ. **ಕಸ್ಯ ವಾ ನ ಸ್ಯಾತ್ಯಾಂ** ಯಾರಿಗೆ ತಾನೇ ಆಗದೇ ಹೋದಾವು ಎಲ್ಲರೂ ಸಮರ್ಥರಾದ್ದರಿಂದ ಎಲ್ಲರಿಗೂ ಆಗಬೇಕಾದೀತು ಎಂದರ್ಥ. ಇನ್ನೊಂದು ರೀತಿಯಲ್ಲಿಯೂ ಈ ಶ್ಲೋಕಕ್ಕೆ ಅಭಿಪ್ರಾಯ ಹೇಳಿರುವುದುಂಟು. ಅನೇಕ ಶಾಸಕರಿದ್ದಲ್ಲಿ ಅವರಿಗೆ ಪರಸ್ಪರ ವಿರೋಧವಿದೆಯೇ ಐಕಮತ್ಯವಿದೆಯೇ? ಪರಸ್ಪರ ವಿರೋಧವಿದ್ದಲ್ಲಿ **ಮೃತ್ಯುಃ** ದುಃಖವಾಗಲಿ **ಅಮೃತಂ** ಸುಖವಾಗಲಿ **ಕಸ್ಯ ಸ್ಯಾತಾಂ** ಯಾರಿಗೆ ಆದೀತು? ಪರಸ್ಪರ ವಿರೋಧದಿಂದ ಒಬ್ಬರ ಆಜ್ಞೆಗೆ ಮತ್ತೊಬ್ಬರ ಆಜ್ಞೆಯು ಪ್ರತಿಬಂಧಕವಾಗುವುದರಿಂದ ಯಾರಿಗೂ ಸುಖವೂ ಆಗುವದಿಲ್ಲ ದುಃಖವೂ ಆಗುವಂತಿಲ್ಲ ಇನ್ನು ಐಕ್ಯಮತ್ಯವಿರುವುದಾದರೆ **ಕಸ್ಯ ವಾ ನ ಸ್ಯಾತಾಂ** ಒಟ್ಟಿಗೆ ಸುಖದುಃಖಗಳಾಗಬೇಕಾದೀತು. ಒಬ್ಬ ಶಾಸಕನು ಸುಖವನ್ನು ಮತ್ತೊಬ್ಬನು ಅವನು ಕೊಡುವ ದುಃಖವನ್ನು ಇವನು ಅನುಮೋದಿಸುವದರಿಂದ ಜೀವರಿಗೆ ಸುಖ ದುಃಖಗಳು ಒಟ್ಟಿಗೆ ಆಗಬೇಕಾಗುವುದು ಎಂದು ಅಭಿಪ್ರಾಯ. ।।೫।।

ಬಹಳ ಜನರಿರುವಾಗ ಒಬ್ಬನು ಕೊಲ್ಲಲಿಚ್ಛಿಸಿದರೆ ಈಗ ಕೊಲ್ಲಲಾಗದು ಎಂದು ತಡೆದಾಗ ಯಾರಿಗೂ ಯಾವುದೂ ಆಗದೇ ಹೋಗುವುದು. ವಿರುದ್ಧ ಕ್ರಿಯೆ ನಡೆದು ಶರೀರ ನುಗ್ಗಾಗುವುದು.

ಇಲ್ಲಿ **ಹೇ ಲೋಕೇಶ ಯದಿ ಅಸ್ತಾರಃ** ದೋಷವಿಲ್ಲದವನು (ಏಕವಚನದಿಂದ) ಒಬ್ಬನು ಶಾಸಕನಾದರೆ ಅವನು **ಕಸ್ಯ** ಯಾವನಿಗೆ **ಮೃತ್ಯುಶ್ಚ ಅಮೃತಂ ಚ ಸ್ಯಾತ್ಯಾಂ** ಸುಖ ದುಃಖವಾಗಲಿ ಎಂದು ಇಚ್ಛಿಸುವನೋ **ತಸ್ಯ** ಅವನಿಗೆ **ಸ್ಯಾತಾಂ** ಆಗುವದು. **ನ ವಾ ಇತಿ ಕಸ್ಯ** ಯಾರಿಗೆ ಬೇಡವೆಂದು ಇಚ್ಛಿಸುವನೋ **ತಸ್ಯ** ಅವನಿಗೆ **ನ ಸ್ಯಾತಾಂ** ಆಗುವದಿಲ್ಲ ಎಂದು ಅವರ ಅಂತರಾಭಿಪ್ರಾಯ. ಇಲ್ಲಿಯ ಪದಗಳಿಂದ ಬರುವದು ಎನ್ನುತ್ತಾರೆ ಶ್ರೀಗಳವರು. ।।೫।।

ಬಹಳ ಮಂದಿ ಶಾಸಕರು ಎಲ್ಲರೂ ಸ್ವತಂತ್ರರು ಯಾವಾಗಲೂ ತಮ್ಮ ಪ್ರವೃತ್ತಿ ನಡೆಸುವರೋ ಇಲ್ಲವೇ ವ್ಯವಸ್ಥೆಯಿಂದಲೋ ಎರಡು ರೀತಿಯಿಂದಲೂ ದುರವಸ್ಥೆಯೇ ಬರುವುದು ಎಂದು 'ಅನವಸ್ಥಿತೇರಸಂಭವಾಚ್ಚ ನೇತರಃ' ಎಂದು ಹೇಳಿದೆ. ಕೇವಲ ನೀನೊಬ್ಬನೇ ಲೋಕೇಶ ಎಂದು ನಮ್ಮ ನಿಶ್ಚಯ. ಅದು ಹೇಗೆ ಭೂತಲದಲ್ಲಿ ಬೇರೆ ಆಯಿತು ಎಂದು ಐದು ಶ್ಲೋಕಗಳಿಂದ ವಿವರಿಸುವರು-

**ಕಿಂತು ಶಾಸ್ಯಬಹುತ್ವೇ ಸ್ಯಾದ್ ಬಹೂನಾಮಿಹ ಕರ್ಮಿಣಾಮ್ ।**
**ಶಾಸ್ತೃತ್ವಮುಪಚಾರೋ ಹಿ ಯಥಾ ಮಂಡಲವರ್ತಿನಾಮ್ ॥೬॥**

**ಕಿಂತು** ಮತ್ತೇನೆಂದರೆ **ಇಹ** ಈ ಜಗತ್ತಿನಲ್ಲಿ **ಬಹೂನಾಂ ಕರ್ಮಿಣಾಂ** ಕರ್ಮ ಮಾಡುವ ಅನೇಕ ಜನರಿಗೆ **ಶಾಸ್ಯಬಹುತ್ವೇ** ಅನೇಕ ಶಾಸಕರಿದ್ದಲ್ಲಿ **ಮಂಡಲವರ್ತಿನಾಂ ಯಥಾ** ಮಾಂಡಲಿಕ ರಾಜರಂತೆ **ಶಾಸ್ತೃತ್ವಂ** ಶಾಸಕತ್ವವು **ಉಪಚಾರಃ ಸ್ಯಾತ್** ಔಪಚಾರಿಕವಾಗುವುದು.

ಮತ್ತೊಂದು ರೀತಿಯಲ್ಲಿಯೂ ಅರ್ಥ ಮಾಡಿರುವರು. **ಬಹೂನಾಂ ಕರ್ಮಿಣಾಂ** ಬಹು ಕರ್ಮಿಗಳಿಗೆ ವ್ಯವಸ್ಥೆಯಿಂದ (ಇಂಥವರಿಗೆ ಇಂತಹವರೇ ಎಂದು) ಅನೇಕ ಶಾಸಕರಿರಲಿ ಆ ದೋಷವಿಲ್ಲವಲ್ಲ ಎಂದರೆ ಈ ರೀತಿ ಶಾಸಕತ್ವ ಯುಕ್ತವಾಗುವುದು **ಕಿಂತು** ಆದರೆ **ಉಪಚಾರಃ** ಅಮುಖ್ಯವಾಗುವುದು. ಚಕ್ರವರ್ತಿಯಲ್ಲಿರುವ ಶಾಸಕತ್ವ ಮುಖ್ಯವಾಗಿರುವಂತೆ ಎಲ್ಲರಿಗೂ ಶಾಸಕನಾದವನ ಶಾಸಕತ್ವವೇ ಮುಖ್ಯವಾಗುವದೆಂದು ಅಭಿಪ್ರಾಯ. ಆದ್ದರಿಂದ ಒಬ್ಬ ಶಾಸಕನೇ ಮುಖ್ಯ ಶಾಸಕನು ಎಂಬುದೇ ಯುಕ್ತವೆಂದು ತಾತ್ಪರ್ಯ. ॥೬॥

ಬಹುಶಾಸಕರೆಂಬ ಪಕ್ಷದಲ್ಲಿ ಮೇಲೆ ಹೇಳಿದಂತೆ ದೋಷವಿರುವದರಿಂದ ಒಬ್ಬನೇ ಶಾಸಕನೆಂಬುದೇ ಸರಿಯಾದುದು. ಆ ಒಬ್ಬನು ನೀನೇ ಎಂಬ ಪಕ್ಷವೇ ಅಭಿಮತವೆಂದು ಹೇಳುತ್ತಾರೆ.

**ಅತಸ್ತ್ವಮೇಕೋ ಭೂತಾನಾಂ ಸೇಶ್ವರಾಣಾಮಧೀಶ್ವರಃ ।**
**ಶಾಸ್ತಾ ದಂಡಧರೋ ನೄಣಾಂ ಶುಭಾಶುಭವಿವೇಚನಃ ॥೭॥**

**ಅತಃ** ಶಾಸಕಬಹುತ್ವ ಯುಕ್ತವಲ್ಲದ್ದರಿಂದ **ಸೇಶ್ವರಾಣಾಂ** ಅವಾಂತರ ನಿಯಾಮಕರಿಂದ ಕೂಡಿದ **ಭೂತಾನಾಂ** ಜೀವರಿಗೆ **ಅಧೀಶ್ವರಃ** ಮುಖ್ಯ

ನಿಯಾಮಕನು **ತ್ವಂ ಏಕಃ** ನೀವೊಬ್ಬರೇ **ನೃಣಾಂ** ಮನುಷ್ಯರ **ಅನೃಣಾಂ** ರಕ್ಷಃ ಪಿಶಾಚಾದಿಗಳ ಹೀಗೆ ಎಲ್ಲ ಭೂತಗಳ **ಶುಭಾಶುಭವಿವೇಚನಃ** ಪುಣ್ಯ-ಪಾಪರೂಪವಾದ ಫಲಕೊಡುವ ಮೂಲಕ ಶುಭಾಶುಭಕರ್ಮಗಳನ್ನು ಬೇರೆ ಬೇರೆಯಾಗಿ ತಿಳಿಯುವ **ದಂಡಧರಃ** ಬ್ರಹ್ಮದೇವರ ವರದಿಂದ ಬಂದ ದಂಡವನ್ನು ಧರಿಸಿದವನು **ಶಾಸ್ತಾ** ಶಾಸಕನು ಆಗಿರುವಿ. ಇಲ್ಲಿಯ ವರೆಗೆ ನಿಮ್ಮ ಶಾಸನಕ್ಕೆ ತಡೆ ಬಂದಿಲ್ಲ. ಆದ್ದರಿಂದ ಬೇರೇ ಯಾರೂ ಶಾಸಕರಲ್ಲ. ನೀವೇ ಶಾಸಕರು ಎಂದು ಭಾವ. ।।೭।।

**ತಸ್ಯ ತೇ ವಿಹತೋ ದಂಡೋ ನೃಲೋಕೇ ವರ್ತತೇಽಧುನಾ ।**
**ಚತುರ್ಭಿರದ್ಭುತೈಃ ಸಿದ್ಧೈರಾಜ್ಞಾ ತೇ ವಿಪ್ರಲಂಭಿತಾ ।।೮।।**

**ತಸ್ಯ ತೇ** ಅಂತಹ ಏಕೈಕ ಶಾಸಕರಾದ ನಿಮ್ಮ **ದಂಡಃ** ಶಾಸನವು **ಅಧುನಾ** ಈಗ **ನೃಲೋಕೇ** ಮನುಷ್ಯಲೋಕದಲ್ಲಿ **ವಿಹತಃ ವರ್ತತೇ** ತಿರಸ್ಕೃತವಾಗಿದೆ. ಅದನ್ನೇ ವಿವರಿಸುತ್ತಾರೆ. **ಅದ್ಭುತೈಃ** ಆಶ್ಚರ್ಯಕರರಾದ **ಚತುರ್ಭಿಃ** ನಾಲ್ವರು **ಸಿದ್ಧೈಃ** ಸಿದ್ಧಪುರುಷರಿಂದ **ತೇ** ನಿಮ್ಮ **ಆಜ್ಞಾ** ಅಪ್ಪಣೆಯು **ವಿಪ್ರಲಂಭಿತಾ** ಮೀರಲ್ಪಟ್ಟಿತು.

**ಸಿದ್ಧೈಃ** ನಿನ್ನ ಆಜ್ಞೆಯನ್ನು ಅನುಷ್ಠಾನ ಮಾಡಲು ಸದಾ ಸನ್ನದ್ಧರಾದ ನಮ್ಮಿಂದ **ತೇ ಆಜ್ಞಾ** ಅಜಾಮಿಳನನ್ನು ಕರೆದು ತರಬೇಕೆಂಬ ನಿಮ್ಮ ಆಜ್ಞೆಯು **ವಿಪ್ರಲಂಭಿತಾ** ಮೀರಲ್ಪಟ್ಟಿತು. ನಾವು ಮನಃಪೂರ್ವಕವಾಗಿ ನಿಮ್ಮ ಆಜ್ಞೆಯನ್ನು ಮೀರಿಲ್ಲ. ಕಾರಣ ನಾವು ನಿರಪರಾಧಿಗಳು ಎಂದು ಭಾವ. ಹೀಗೆ ಅನ್ವಯ ಮಾಡದೇ ಹೋದರೆ ಈ ಪಾದವೆಲ್ಲವೂ ಪೂರ್ವೋಕ್ತ ಅನುವಾದ ಎಂದು ಆಗಬೇಕಾಗುವುದು. ಅನಿರ್ವಾಹ ಪಕ್ಷದಲ್ಲಿ ಹಾಗೆ ಹೇಳಬೇಕಷ್ಟೇ ಎನ್ನುವರು ಶ್ರೀಪಾದಂಗಳವರು. ।।೮।।

ದುಃಖದಿಂದ ತಿರಸ್ಕಾರ ಪ್ರಕಾರವನ್ನೇ ಸವಿಸ್ತಾರವಾಗಿ ಹೇಳುವರು-

**ನೀಯಮಾನಂ ತವಾದೇಶಾದಸ್ಮಾಭಿರ್ಯಾತನಾಗೃಹಮ್ ।**
**ವ್ಯಾಮೋಚಯನ್ ಪಾತಕಿನಂ ಛಿತ್ವಾ ಪಾಶಾನ್ ಪ್ರಸಹ್ಯ ತೇ ।।೯।।**

**ತವ** ನಿಮ್ಮ **ಆದೇಶಾತ್** ಅಪ್ಪಣೆಯಂತೆ **ಅಸ್ಮಾಭಿಃ** ನಮ್ಮಿಂದ **ಯಾತನಾಗೃಹಂ** ನರಕಕ್ಕೆ **ನೀಯಮಾನಂ** ತರಲ್ಪಡುವ **ಪಾತಕಿನಂ** ಪಾಪಿಯನ್ನು **ತೇ** ಆ ನಾಲ್ವರು ಸಿದ್ಧರು **ಪ್ರಸಹ್ಯ** ಬಲಾತ್ಕಾರವಾಗಿ **ಪಾಶಾನ್** ಪಾಪಿಗೆ ಹಾಕಿದ ಪಾಶಗಳನ್ನು **ಛಿತ್ವಾ** ಕತ್ತರಿಸಿ **ವ್ಯಮೋಚಯನ್** ಬಿಡುಗಡೆ ಮಾಡಿದರು. ।। ೯ ।।

**ತಾಂಸ್ತೇ ವೇದಿತುಮಿಚ್ಛಾಮೋ ಯದಿ ನೋ ಮನ್ಯಸೇ ಕ್ಷಮಮ್ ।**
**ನಾರಾಯಣೇತ್ಯಭಿಹಿತೇ ಮಾ ಭೈರಿತ್ಯಾಯಯುರ್ದ್ರುತಮ್ ॥೧೦॥**

**(ಪಾತಕಿನಾ)** ಆ ಪಾತಕಿಯು **ನಾರಾಯಣ ಇತಿ ಅಭಿಹಿತೇ** ನಾರಾಯಣನೆಂದು ಹೇಳುತ್ತಿರಲು **ಮಾ ಭೈಃ ಇತಿ** ಹೆದರಬೇಡ ಎಂದು ಹೇಳುತ್ತ **ದ್ರುತಂ** ಶೀಘ್ರದಲ್ಲಿ **ಆಯಯುಃ** ಬಂದರು. **ನಃ** ನಮ್ಮ **ಕ್ಷಮಂ** ಹಿತವನ್ನು **ಮನ್ಯಸೇ ಯದಿ** ತಿಳಿಯುವುದಾದರೆ **ತೇ** ನಿಮ್ಮಿಂದ **ತಾನ್** ಅವರು ಯಾರೆಂದು **ವೇದಿತುಂ** ತಿಳಿಯಲು **ಇಚ್ಛಾಮಃ** ಅಪೇಕ್ಷಿಸುವೆವು. **ಯದಿ ಕ್ಷಮಂ** ಅಂದರೆ ಕೇಳಲು ಯೋಗ್ಯವಾಗಿದ್ದರೆ ಎಂದೂ ಅರ್ಥ.

ಕ್ಷಿತಿಕ್ಷಾಂತ್ಯೋಃ ಕ್ಷಮಾ ಪ್ರೋಕ್ತಾ ಹಿತೇ ಶಕ್ತೇ ಚ ವಾಚ್ಯವತ್ ಎಂದು ವಿಶ್ವವಿದೆ. ಹೀಗೆ ಆಶ್ಚರ್ಯಕರ ಪ್ರಭಾವ ಉಳ್ಳ ಅವರನ್ನು ತಿಳಿಯದೇ ನಾವು ತಿರಸ್ಕರಿಸಿದರೆ ಭೃತ್ಯರಾದ ನಾವು ಮಾಡಿದ್ದರಿಂದ ಸ್ವಾಮಿಯಾದ ತಮಗೂ ಅನರ್ಥವಾಗಬಾರದು ಎಂದು ಅಭಿಪ್ರಾಯ. ॥೧೦॥

ದೂತರು ತನ್ನನ್ನೇ ನಿರ್ದಿಷ್ಟನಾದ ಸ್ವಾಮಿ ಎಂದು ಹೇಳಿದ್ದರು. ಆ ವಿಷಯವನ್ನು ಯಮ ಸಹಿಸಲಿಲ್ಲ. ಒಬ್ಬನೇ ಸ್ವಾಮಿ ಎಂಬ ಪಕ್ಷವನ್ನು ಯಮನು ಒಪ್ಪಿದ. ಆದರೆ ಆ ಸ್ವಾಮಿ ತಾನಲ್ಲ. ಮತ್ತಾರೂ ಅಲ್ಲ. 'ಸಾ ಚ ಪ್ರಶಾಸನಾತ್' 'ಏಕಃ ಶಾಸ್ತಾ ನ ದ್ವಿತೀಯೋಽಸ್ತಿ ಶಾಸ್ತಾ' ಮುಂತಾದ ಸೂತ್ರ-ಶ್ರುತಿಗಳಿಂದ ಯಾರು ಪ್ರತಿಪಾದ್ಯನಾಗಿರುವನೋ ಅಜಾಮಿಲನು ಯಾವನ ನಾಮವನ್ನು ಉಚ್ಚರಿಸಿರುವನೋ ಆ ನಾರಾಯಣನೇ ಸ್ವಾಮಿಯು ಶಾಸಕನು ಎಂಬ ಮಹಾಪ್ರಮೇಯವನ್ನು ತಿಳಿಸಲು ಇದು ಅವಕಾಶವೆಂದು ಭಾವಿಸಿದ ಸೂರ್ಯಸುತನು ಮಂಗಲಾಚರಣೆ ಮಾಡಿ 'ಇತಿ' ಮುಂತಾದ ಶ್ಲೋಕಗಳಿಂದ ಹೇಳಿದನು ಎಂದು ಹೇಳುವರು.

**ಶ್ರೀಶುಕ ಉವಾಚ -**

**ಇತಿ ದೇವಃ ಸ ಆಪೃಷ್ಟಃ ಪ್ರಜಾಸಂಯಮನೋ ಯಮಃ ।**
**ಪ್ರೀತಃ ಸ್ವದೂತಾನ್ ಪ್ರತ್ಯಾಹ ಸ್ಮರನ್ ಪಾದಾಂಬುಜಂ ಹರೇಃ ॥೧೧॥**

**ಇತಿ** ಈ ರೀತಿಯಾಗಿ **ಆಪೃಷ್ಟಃ** ಪ್ರಶ್ನಿಸಲ್ಪಟ್ಟ **ಪ್ರಜಾಸಂಯಮನಃ** ಪ್ರಜೆಗಳನ್ನು ಶಿಕ್ಷಿಸುವ **ಸಃ ಯಮಃ** ಆ ಯಮದೇವನು **ಪ್ರೀತಃ ಸನ್** ಭಗವಂತನ ಮಾಹಾತ್ಮ್ಯವನ್ನು

ಅನಾಯಾಸವಾಗಿ ಹೇಳಲವಕಾಶವಾಯಿತೆಂದು ಸಂತುಷ್ಟನಾಗಿ **ಹರೇಃ** ಶ್ರೀಹರಿಯ **ಪಾದಾಂಬುಜಂ ಸ್ಮರನ್** ಪಾದಕಮಲಗಳನ್ನು ಸ್ಮರಿಸುತ್ತಾ **ಸ್ವದೂತಾನ್ ಪ್ರತಿ** ತನ್ನ ದೂತರನ್ನು ಕುರಿತು **ಆಹ** ಉತ್ತರ ಕೊಟ್ಟನು. ।।೧೧।।

ನಾನೊಬ್ಬನೇ ಶಾಸಕನೆಂದು ನೀವು ಹೇಳಿದ್ದು ವಿಚಾರ ಮಾಡದೇ ಹೇಳಿದ ಮಾತು. ನನಗಿಂತ ಭಿನ್ನವಾದ ಅತ್ಯುತ್ತಮನಾದ ಶಾಸಕನಿರುವನು ಎಂದು ಹೇಳುವರು.

**ಯಮ ಉವಾಚ -**

**ಪರೋ ಮದನ್ಯೋ ಜಗತಸ್ತಸ್ಥುಷಶ್ಚ**
**ಓತಂ ಪ್ರೋತಂ ಪಟವದ್ ಯತ್ರ ವಿಶ್ವಮ್ ।**
**ಯದಂಶತೋऽಸ್ಯ ಸ್ಥಿತಿಜನ್ಮನಾಶಾ**
**ನಸ್ಯೋತವದ್ ಯಸ್ಯ ವಶೇ ಚ ಲೋಕಃ ।।೧೨।।**

**ಯತ್ರ** ಯಾವ ಪರಮಾತ್ಮನಲ್ಲಿ **ವಿಶ್ವಂ** ಈ ಎಲ್ಲ ಜಗತ್ತು **ಪಟವತ್** ಹರಕು ಬಟ್ಟೆಯು ದಾರದಲ್ಲಿ ಉದ್ದಕ್ಕೂ ಅಡ್ಡಕ್ಕೂ ಇದ್ದುಕೊಂಡು ದಾರವನ್ನೇ ಆಧಾರವಾಗಿ ಹೊಂದಿರುವಂತೆ **ಓತಂ ಪ್ರೋತಂ** ಉದ್ದಕ್ಕೂ ಅಡ್ಡಕ್ಕೂ ಇದ್ದುಕೊಂಡು ಅವನನ್ನೇ ಆಧಾರವಾಗಿ ಹೊಂದಿರುವುದೋ **ಅಸ್ಯ** ಈ ಜಗತ್ತಿನ **ಸ್ಥಿತಿಜನ್ಮನಾಶಾಃ ಚ** ಪಾಲನ ಹುಟ್ಟು ಸಂಹಾರಗಳು **ಯದಂಶತಃ** ಯಾವ ಪರಮಾತ್ಮನ ಸ್ವರೂಪಾಂಶಗಳಾದ ವಾಸುದೇವ ಮೊದಲಾದವುಗಳಿಂದ ಮತ್ತು ಬ್ರಹ್ಮನಲ್ಲಿರುವ ಬ್ರಹ್ಮ ರೂಪ ಸ್ವಯಂ ವಿಷ್ಣು ಶಿವನಲ್ಲಿರುವ ಶಿವರೂಪಗಳಿಂದ ಭಿನ್ನಾಂಶಗಳಾದ ಬ್ರಹ್ಮ-ರುದ್ರಾದಿಗಳಿಂದ **ಭವಂತಿ** ಆಗುವವೋ ಚ ಮತ್ತು

ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ।।

ಎಂಬ ಸ್ಮೃತಿಯಂತೆ ವ್ಯಾಸಾದಿರೂಪಗಳಿಂದಲೂ ಧರಿಸಲ್ಪಟ್ಟಿರುವುದೋ **ಯಸ್ಯ** ಯಾವ ಪರಮಾತ್ಮನ **ವಶೇ** ಅಧೀನದಲ್ಲಿ **ಲೋಕಃ** ಲಕ್ಷ್ಮೀ-ಬ್ರಹ್ಮಾದಿ ಎಲ್ಲ ಜಗತ್ತೂ ನಸಿ ಮೂಗಿನಲ್ಲಿ **ಓತವತ್** ಪೋಣಿಸಲ್ಪಟ್ಟ ದಾರ ಉಳ್ಳ ಎತ್ತಿನಂತೆ **ವರ್ತತೇ** ಇರುವುದೋ **ಸಃ** ಅಂತಹ **ಜಗತಃ** ಜಂಗಮಪ್ರಾಣಿಗಳಿಗೂ **ತಸ್ಥುಷಶ್ಚ** ಸ್ಥಾವರ ಪ್ರಾಣಿಗಳಿಗೂ **ಶಾಸ್ತಾ** ಶಾಸಕನು **ಮದನ್ಯಃ** ನನಗಿಂತ ಭಿನ್ನನಾದವನು **ಪರಃ** ಸರ್ವೋತ್ತಮನೂ ಆದ ಪರಮಾತ್ಮನು **ಅಸ್ತಿ** ಇರುವನು.

**ವಿಶಿಷ್ಟ ಅರ್ಥ.**

'ಜಗತಸ್ತಸ್ಥುಷಶ್ಚ' ಎಂದು ಹೇಳಿದ್ದರಿಂದ ಆ ಶಾಸಕನಾದ ಪರಮಾತ್ಮನು ಜಂಗಮ ಸ್ಥಾವರಗಳಿಗೆ ಶಾಸಕನೆಂದೂ ನಾನು ಜಂಗಮಗಳಿಗೆ ಮಾತ್ರ ಅದರಲ್ಲಿಯೂ ಮನುಷ್ಯರಿಗೆ ಮಾತ್ರ ಅವರಲ್ಲಿಯೂ ಪಾಪಿಗಳಿಗೆ ಮಾತ್ರ ಅದೂ ಆ ಪರಮಾತ್ಮನ ಕಿಂಕರನಾಗಿ ಶಾಸಕನೇ ಹೊರತು ಸರ್ವೋತ್ತಮ ಶಾಸಕನಲ್ಲವೆಂದೂ ಯಮದೇವರು ಹೇಳಿಕೊಂಡಿರುವರು.

'ಪರಃ' ಎಂದು ಹೇಳಿದ್ದರಿಂದ ಆ ಶಾಸಕನ ಹೆಸರು ಪರಮಾತ್ಮನೆಂದು ಹೇಳಿದಂತಾಯಿತು. ಪಟವತ್ ಎಂಬಲ್ಲಿ ಧುಬಟಿ (ಕೌದಿ)ಯನ್ನು ನಿರ್ಮಿಸಲು ಚೂರು ಚೂರು ಬಟ್ಟೆಗಳು ಮೂರು ಹುರಿದಾರದಲ್ಲಿ ಓತಪ್ರೋತ ವಾಗಿರುವಂತೆ (ಹಾಸು ಹೊಕ್ಕಿರುವಂತೆ) ಶ್ರೀಹರಿಯಲ್ಲಿ ಜಗತ್ತು ಓತಪ್ರೋತವಾಗಿದೆ ಎಂದರ್ಥ. ಇದರಿಂದ ಪಟಕ್ಕೂ ತಂತುವಿಗೂ ಭೇದಾಭೇದವಿದ್ದಂತೆ ಉಪಾದಾನ ಉಪಾದೇಯಭಾವವಿದ್ದಂತೆ ಜಗತ್ತಿಗೂ ಪರಮಾತ್ಮನಿಗೂ ಭೇದಾಭೇದ-ಉಪಾದಾನ ಉಪಾದೇಯತ್ವವಿದೆ ಎಂಬ ಶಂಕೆಗೆ ಅವಕಾಶವಿಲ್ಲ. 'ಯಸ್ಮಿನ್ನಿದಂ ಸಂಚ ವಿಚೈತಿ ಸರ್ವಂ' ಎಂಬ ಶ್ರುತಿಯೂ

**ಯಥಾ ಕಂಥಾ ಪಟಾ ಸೂತ್ರ ಓತಾಪ್ರೋತಾಶ್ಚ ಸಂಸ್ಥಿತಃ ।**
**ಏವಂ ವಿಷ್ಣಾವಿದಂ ವಿಶ್ವಂ ಓತಂ ಪ್ರೋತಂ ಚ ಸಂಸ್ಥಿತಂ ॥**

ಮೊದಲಾದ ಸ್ಮೃತಿಗಳೂ ಇರುವುದರಿಂದ ಈ ಲಕ್ಷಣವು ಶ್ರೀಹರಿಗೆ ಯುಕ್ತವಾಗಿದೆ. ಈ ಲಕ್ಷಣಕ್ಕೆ ಯಾವ ಬಗೆಯ ಅವ್ಯಾಪ್ತಿ ಅತಿವ್ಯಾಪ್ತಿದೋಷ-ಗಳಿಲ್ಲವೆಂದು ತಿಳಿಯಬೇಕು. ಉಪಾದಾನ-ಉಪಾದೇಯ ಭಾವವಿಲ್ಲದ ಈ ದೃಷ್ಟಾಂತದಿಂದ ಶ್ರೀಹರಿಗೂ ಜಗತ್ತಿಗೂ ಉಪಾದಾನ ಉಪಾದೇಯ ಭಾವವಿಲ್ಲವೆಂದು ಹೇಳಿದಂತಾಯಿತು. ಇದಕ್ಕೆ ಧಾರಕನಿಲ್ಲದಿದ್ದರೆ ಇದು ಬಿದ್ದು ಹೋಗುತ್ತಿತ್ತು. ವೇಗವಿಲ್ಲದ ಬಾಣದಂತೆ ಎಂಬ ತರ್ಕದಿಂದಲೂ ಶ್ರೀಹರಿಗೆ ಧಾರಕತ್ವವು ಸಿದ್ಧವಾಗುವದು.

'ಯದಂಶತಃ' ಎಂಬುದು ಮತ್ತೊಂದು ಲಕ್ಷಣ.

**ಯತೋ ವಾ ಇಮಾನಿ ಭೂತಾನಿ ಜಾಯಂತೇ ।**
**ಯೇನ ಜಾತಾನಿ ಜೀವಂತಿ ಯತ್ಪ್ರಯಂತ್ಯಭಿ ಸಂವಿಶಂತಿ ॥**

ಎಂಬ ಶ್ರುತಿಯೂ

ಬ್ರಹ್ಮವಿಷ್ಣ್ವೀಶರೂಪಾಣಿ ತ್ರೀಣಿ ವಿಷ್ಣೋರ್ಮಹಾತ್ಮನಃ ।
ಬ್ರಹ್ಮಣಿಸ್ಥಃ ಸೃಜೇದ್ವಿಷ್ಣುಃ ಸ್ಥಿತ್ವಾ ರುದ್ರೇ ತ್ವಭಕ್ಷಯತ್ ॥

ಪೃಥಕ್ ಸ್ಥಿತ್ವಾ ಜಗತ್ಪಾತಿ ತದ್ಬ್ರಹ್ಮಾದ್ಯಾಹ್ವಯೋ ಹರಿಃ ।
ಸ್ರಷ್ಟಾ ಪಾತಾ ಚ ಸಂಹರ್ತಾ ಸ ಏಕೋ ಹರಿರೀಶ್ವರಃ ।
ಸೃಷ್ಟ್ಯತ್ವಾದಿಕಮನ್ಯೇಷಾಂ ದಾರುಯೋಷಾವದಿಷ್ಯತೇ ॥

ಎಂಬ ಸ್ಮೃತಿಯೂ ಪರಮಾತ್ಮನಿಗೆ ಸೃಷ್ಟ್ಯಾದಿಕರ್ತೃತ್ವವನ್ನು ಹೇಳುತ್ತದೆ. ಜನ್ಮಕರ್ತೃತ್ವ ನಾಶಕರ್ತೃತ್ವ ಇತ್ಯಾದಿಗಳೂ ಭಗವಂತನಿಗೆ ಬೇರೆ ಬೇರೆ ಲಕ್ಷಣಗಳಾಗಿವೆ. ರೆಕ್ಕೆಯು ಬಂದ ಹಕ್ಕಿಯು ತಾಯಿಯ ಅಧೀನವಾಗಿರುವುದಿಲ್ಲ. ಹಾಗೆ ಹುಟ್ಟಿದ ಈ ಜಗತ್ತು ಭಗವಂತನ ಆಧೀನವಾಗದೇ ಇರಬಹುದಲ್ಲ ಎಂಬ ಶಂಕೆಯು ಬರುತ್ತದೆ. ಈ ಶಂಕೆಯನ್ನು 'ನಸ್ಯೋತವತ್' ಎಂಬ ವಚನವು ಪರಿಹರಿಸುತ್ತದೆ.

'ಓತವತ್' ಎಂಬಲ್ಲಿ ವತಿ ಪ್ರತ್ಯಯದ ಹಿಂದೆ ಪ್ರಕೃತಿಯಾದ ಓತ ಎಂಬ ಪದದ ಮುಂದೆ ಗೋ ಶಬ್ದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಅಂದರೆ ಓತಗವವತ್ ಎಂದು ಪದವು ನಿಷ್ಪನ್ನವಾಗುವದು. ಆಗ ಮೂಗುದಾರ ಹಾಕಿದ ಎತ್ತಿನಂತೆ ಎಂದು ಅರ್ಥವಾಗುವದು.

ಅಧ್ಯಾಹೃತವಾದ ಗೋಪದವನ್ನು ಪ್ರಕೃತಿಪ್ರತ್ಯಯಗಳ ಮಧ್ಯದಲ್ಲಿ ನಿವೇಶನ ಮಾಡುವುದು ಹೇಗೆ? ಈ ರೀತಿ ನಿವೇಶನ ಮಾಡಿದ್ದು ಎಲ್ಲಿಯೂ ಕಂಡಿಲ್ಲವಲ್ಲ ಎನ್ನುವಂತಿಲ್ಲ.

'ಯಥಾರ್ಥಜ್ಞಾನಜನಕಾ ಯಥಾರ್ಥಾ ಯುಕ್ತಯಃ ಸ್ಮೃತಾಃ' ಎಂಬ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನ ಮಾಡುವಾಗ ಶ್ರೀಮನ್ನ್ಯಾಯಸುಧಾದಲ್ಲಿ 'ಬಹುವಚನಮಾದ್ಯರ್ಥೇ । ಯುಕ್ತ್ಯಾದಯ ಇತ್ಯರ್ಥಃ' ಎಂಬ ವಚನವಿದೆ. ಈ ಸುಧೆಯ ವ್ಯಾಖ್ಯಾನರೂಪವಾದ ಪರಿಮಳಾದಲ್ಲಿ ಆದಿಶಬ್ದಾರ್ಥೇ ಬಹುವಚನಂ ಜ್ಞಾಪಕಮಿತ್ಯರ್ಥಃ ತೇನ ಫಣಾಂ ಚ ಸಪ್ತಾನಾಂ ಇತ್ಯಾದಾವಿವ ಯುಕ್ತಯಃ ಇತ್ಯತ್ರ ಪ್ರಕೃತಿಪ್ರತ್ಯಯಯೋಃ ಮಧ್ಯೇ ಯತ್ರಾऽನವಸರೋऽನ್ಯತ್ರ ಇತಿ ನ್ಯಾಯೇನ ಆದಿಪದಮಧ್ಯಾಹಾರ್ಯಮಿತಿ ಭಾವೇನಾऽಹ ಯುಕ್ತ್ಯಾದಯ ಇತ್ಯರ್ಥ ಇತಿ ॥ ತಥಾ ಚ ಯುಕ್ತಿಶ್ಚ ಆದೀ ಚ ಯುಕ್ತ್ಯಾದಯ ಇತಿ ಬಹುವಚನೋಪಪತ್ತಿರಿತಿ ಭಾವಃ ।

ಇಲ್ಲಿ ಓತ ಎಂಬ ಪ್ರಕೃತಿ ವತಿ ಎಂಬ ಪ್ರತ್ಯಯಗಳ ಮಧ್ಯದಲ್ಲಿ ಗೋಪದವನ್ನು ಅಧ್ಯಾಹಾರಮಾಡಿದ್ದು ಅಯುಕ್ತವಲ್ಲ.

ಅಲ್ಲಿ ಬಹುವಚನ ಜ್ಞಾಪಕವಿದೆ. ಇಲ್ಲಿ ಹಾಗೆ ಜ್ಞಾಪಕವಾದದ್ದು ಯಾವುದೂ ಇಲ್ಲ ಎಂದು ಶಂಕಿಸಬಾರದು. ಓತಂ ಎಂಬ ವಿಶೇಷಣನೈರರ್ಥಕ್ಯವೇ ಇಲ್ಲಿ ಗಮಕವಾಗಿದೆ. ಮುಂದೆ ಮತ್ತು ಸ್ಥಾನಾಂತರದಲ್ಲಿ ಗೋಪದದ ಸಮಭಿವ್ಯಾಹಾರನಿಯಮವೂ ಗಮಕವಾಗಿದೆ ಎಂದೂ ಕೆಲವರು ಹೇಳುತ್ತಾರೆ. ಓತಪದವೇ ಲಕ್ಷಣಯಾ ಓತಗವಪರ ಎಂದು ಹೇಳಬಹುದು.

**ಸರ್ವಾನ್ಯಃ** ಎಂದು ಹೇಳಬೇಕಾದಲ್ಲಿ ಭಟರು ತನ್ನಲ್ಲಿ ಮಾತ್ರ ಪರತ್ವವಿದೆ ಎಂದು ಪರ್ಯವಸಾನ ಮಾಡಿದ್ದರಿಂದ **ಮದನ್ಯಃ** ಎಂದು ಮೊದಲು ಯಮದೇವರು ಹೇಳಿದರು. ಮುಂದೆ **ಅಸ್ಯ ವಶೇ ಚ ಲೋಕಾಃ** ಎಂದೂ ಹೇಳಿದರು. ಆದ್ದರಿಂದ ಪ್ರಕೃತ ಮದನ್ಯಃ ಎಂಬಲ್ಲಿಯ ಅಸ್ಮತ್ ಪದ ಉಪಲಕ್ಷಕವೆಂದು ತಿಳಿಯಬೇಕು. ಮುಂದೆ ಬೇರೆಯವರಿಂದಲೂ ಭೇದ ತಿಳಿಸುವ ವಿರುದ್ಧಧರ್ಮಗಳನ್ನು ಬಹಳ ಹೇಳುವುದರಿಂದ ಅಸ್ಮತ್ ಪದ ನನ್ನನ್ನು ಮಾತ್ರ ಹೇಳುವುದಿಲ್ಲ ಎಂದು ಯಮದೇವರು ಅಭಿಪ್ರಾಯ ಪಡುವರು ಎಂದು ತಿಳಿಯಬೇಕು.

'ಪರೋ ಮದನ್ಯೋ ಜಗತಃ ತಸ್ಥುಷಶ್ಚ' ಎಂಬ ಶ್ಲೋಕದಲ್ಲಿ ಪರಪದವಾಗಲೀ ಅನ್ಯಪದವಾಗಲೀ 'ಓತಂ ಪ್ರೋತಂ ಪಟವತ್' ಎಂಬುದಕ್ಕೆ ಉಪಾದಾನತ್ವದಿಂದ ಪ್ರಪಂಚೈಕ್ಯವನ್ನು ಹೇಳಲು ಅವಕಾಶ ಕೊಡುವುದಿಲ್ಲ ಎಂದು ಅಂತರಂಗಾನುಪಪತ್ತಿಯನ್ನು ಯದ್ಯಪಿ ಆಚಾರ್ಯರು ಹೇಳಬೇಕಿತ್ತು. ಆದರೂ ಅನ್ಯಾದಿ ಪದಗಳಿಗೆ ವ್ಯಾವಹಾರಿಕಭೇದ ಪರತ್ವವನ್ನು ಅಂಗೀಕರಿಸಿ ಪೂರ್ವಪಕ್ಷಿಯೂ ಸಮಾಧಾನ ಮಾಡಬಹುದು. ಹೀಗೆ ಹೇಳಲೂ ಬಹುದು. **ಅನ್ಯೋಽಂತರಾತ್ಮಾ** ಇತ್ಯಾದಿ ಸ್ಥಳಗಳಲ್ಲಿ ವ್ಯಭಿಚಾರವನ್ನು ತೋರಿಸಿ ಪರಪದವು ಅನೇಕಾರ್ಥಕವಾದ್ದರಿಂದ ಇದೇ ಅರ್ಥವೆಂದು ನಿರ್ಧಾರ ಮಾಡಲು ಬರುವುದಿಲ್ಲ ಎಂದು ಹೇಳಲು ಉದ್ಯುಕ್ತನಾಗಬಹುದು. ಹೀಗಾದರೆ ಉಕ್ತವಾದ ಪರಿಹಾರವೂ ಅನುಕ್ತಪ್ರಾಯ ಎಂದಾಗಬಹುದು. ಆದ್ದರಿಂದ ಬೇರೇ ಯಾವುದೇ ಅರ್ಥಕ್ಕೆ ಅವಕಾಶವಿಲ್ಲದಿರುವಂತೆ ಮುಖ್ಯ ಭೇದ ಪರತ್ವ ವ್ಯವಸ್ಥೆಯನ್ನು ಅರ್ಥತಃ ಅನುವಾದಿಸಿ ಆನಂದತೀರ್ಥರು ಪ್ರಮಾಣದಿಂದ ವಿವರಿಸುವರು.




**ತಾತ್ಪರ್ಯ**

ಓತಂ ಪ್ರೋತಂ ಪಟವತ್ ।
ಯಥಾ ಕಂಥಾಪಟಾಃ ಸೂತ್ರ ಓತಾಃ ಪ್ರೋತಾಶ್ಚ ಸಂಸ್ಥಿತಾಃ ।
ಏವಂ ವಿಷ್ಣಾವಿದಂ ವಿಶ್ವಮೋತಂ ಪ್ರೋತಂ ಚ ಸಂಸ್ಥಿತಮ್ ॥ -ಇತಿ ಸ್ಕಾಂದೇ

ಈ ಪ್ರಮಾಣವಚನದ ಅರ್ಥ ವಿಶೇಷಾರ್ಥದಲ್ಲಿ ನಿರೂಪಿತವಾಗಿದೆ. ಇಲ್ಲಿ **ಜಗತ್** ಎಂದರೆ ಸಂಕೋಚ ಮಾಡಿ ಕೆಲವನ್ನು ಬಿಡಬಹುದು. ಅದನ್ನು ನಿರಾಕರಿಸಲು **ವಿಶ್ವಂ** ಎಂದಿದ್ದಾರೆ. ವಿಶ್ವಶಬ್ದವು ತಂತ್ರೇಣ ಜಗದ್ವಾಚಕ ಮತ್ತು ಸಾಮಸ್ತ್ಯವಾಚಕವೂ ಆಗಿದೆ. ಆದ್ದರಿಂದ ಕೆಲವನ್ನು ಬಿಡಲು ಅವಕಾಶವಿಲ್ಲ. ಸ್ಕಾಂದೇ ಎಂದದ್ದರಿಂದ ನಿಶ್ಚಿತ ಪ್ರಾಮಾಣ್ಯವುಳ್ಳದ್ದಾದ್ದರಿಂದ ಉದಾಹರಣೀಯವಾಗಿದೆ. ಎಂದು ತಿಳಿಸಿರುವರು. ಇದರಂತೆ ಹಿಂದೆ ಮುಂದೆ ಪ್ರಮಾಣಗಳ ಹೆಸರು ಹೇಳುವುದಕ್ಕೆ ಕೃತ್ಯ ತಿಳಿಯಬೇಕು.

ಯಮನು ದಂಡದಿಂದ ಶಾಸನ ಮಾಡುವಂತೆ ಶ್ರೀಹರಿಯು ಶಾಸನ ಮಾಡುವುದಿಲ್ಲ. ಕಿಂತು ವೇದವಚನದಿಂದ ಶಾಸನ ಮಾಡುತ್ತಾನೆ ಎಂದು ಹೇಳುತ್ತಾರೆ.

**ಯೋ ನಾಮಭಿರ್ವಾಚಿ ಜನಂ ನಿಜಾಯಾಂ**
**ಬಧ್ನಾತಿ ತಂತ್ಯಾಮಿವ ದಾಮಭಿರ್ಗಾಃ ।**
**ಯಸ್ಮೈ ಬಲಿಂ ತ ಇಮೇ ನಾಮಕರ್ಮಭಿಃ**
**ನಿಬಂಧಬದ್ಧಾಃ ಚಕಿತಾ ವಹಂತಿ ॥೧೩॥**

**ಯಃ** ಸರ್ವೋತ್ತಮನಾದ ಯಾವ ಶ್ರೀಹರಿಯು **ದಾಮಭಿಃ** ಹಗ್ಗಗಳಿಂದ **ಗಾಃ ಇವ** ಗೋವುಗಳನ್ನು ಅವುಗಳ ಯಜಮಾನನು ಕಟ್ಟಿ ಹಾಕುವಂತೆ **ನಿಜಾಯಾಂ** ತನ್ನಿಂದ ಅಭಿವ್ಯಕ್ತವಾದ **ವಾಚಿ** ವಿಧಿ-ನಿಷೇಧರೂಪವಾದ ವೇದವಾಕ್ಯವೆಂಬ **ತಂತ್ಯಾಂ** ಹಗ್ಗದಲ್ಲಿ **ಜನಂ** ಜೀವರನ್ನು **ನಾಮಭಿಃ** ಬ್ರಾಹ್ಮಣ ಮೊದಲಾದ ಹೆಸರುಗಳಿಂದ **ಕರ್ಮಭಿಃ** ಶಮ ಮೊದಲಾದ ಕರ್ಮಗಳಿಂದಲೂ **ನಿಬಂಧಬದ್ಧಾಃ** ಅತ್ಯಂತ ದೃಢವಾಗಿ ಕಟ್ಟಿ ಹಾಕಲ್ಪಟ್ಟ **ತೇ ಇಮೇ** ಈ ಜೀವರು **ಚಕಿತಾಃ ಸಂತಃ** ಹೆದರಿದವರಾಗಿ **ಯಸ್ಮೈ** ಯಾವ ಸರ್ವೋತ್ತಮನಾದ ಶ್ರೀಹರಿಗಾಗಿ **ಬಲಿಂ** ಪೂಜೆಯನ್ನು **ವಹಂತಿ** ಮಾಡುತ್ತಿರುವರೋ ಅಂತಹ ಪರಮಾತ್ಮನು ಶಾಸಕನಿರುವನೆಂದು ಹಿಂದಕ್ಕೆ ಅನ್ವಯ.

ಗೋವುಗಳು ಗೋವಿನ ಯಜಮಾನನಿಗಾಗಿ ಅವನ ಅಧೀನವಾಗಿ ಕರ್ಮ ಮಾಡುವಂತೆ ಬ್ರಹ್ಮ ಮೊದಲಾದವರು ಶ್ರೀಹರಿಯ ಅಧೀನರಾಗಿ ತಮ್ಮ ತಮ್ಮ

ಕರ್ಮಗಳನ್ನು ನಿರ್ವಹಿಸುವ ಮೂಲಕ ಪೂಜಿಸುತ್ತಿರುವರೆಂದು ತಾತ್ಪರ್ಯ.

ನಾಮ-ಕರ್ಮಗಳಿಂದ ಜೀವರು ಅನಂತರೆಂದು ತಿಳಿಸಲು 'ನಾಮಕರ್ಮಭ್ಯಾಂ' ಎಂದು ಹೇಳದೇ 'ನಾಮಕರ್ಮಭಿಃ' ಎಂದು ಬಹುವಚನವನ್ನು ಪ್ರಯೋಗಿಸಿರುವರು. 'ಭಿಷಾಸ್ಮಾದ್ವಾತಃ ಪವತೇ' ಮುಂತಾದ ವಾಕ್ಯಗಳು 'ಚಕಿತಾಃ' ಎಂಬುದನ್ನೂ ಸಮರ್ಥಿಸುವವು.

ನ ಜಾಯತೇ ಇತಿ ನಿಜಾ ತಸ್ಯಾಂ ನಿತ್ಯವಾದ ಹೀಗೂ ಅರ್ಥ.

**ನಾಮಭಿಃ** ಬ್ರಹ್ಮರುದ್ರಾದಿನಾಮಗಳಿಂದ **ಕರ್ಮಭಿಃ** ತಮ್ಮ ತಮ್ಮ ಕ್ರಿಯಾಗಳಿಂದ ನಿಬಂಧ ಇವನು ಈ ಹೆಸರಿನವನು ಇವನು ಈ ಕಾರ್ಯ ಮಾಡುವವನು ಆಗಲಿ ಎಂಬ ನಿಯಮದಿಂದ ಭೀತರಾಗಿ ಎಂದರ್ಥ. ॥೧೩॥

ಸ್ವಾಮಿನ್ ! ನಿಮ್ಮ ಜ್ಞಾನದ ಸೀಮೆ ಇಷ್ಟೇ ಎಂದಾದರೆ ಅಜಾಮಿಳನನ್ನು ಕರೆತರಲು ನಮ್ಮನ್ನು ಕಳಿಸಬಾರದಿತ್ತು. ನಾವು ಅಲ್ಲಿಗೆ ಹೋಗದಿದ್ದರೆ ಈ ಅವಮಾನ ಆಗುತ್ತಿರಲಿಲ್ಲವಲ್ಲ ಎಂದರೆ ನಾವು ಸಂಪೂರ್ಣವಾಗಿ ಶ್ರೀಹರಿಯ ಜ್ಞಾನ ಉಳ್ಳವರಲ್ಲ. ಎಂದು ತಮಗಿಂತ ಉತ್ತಮರನ್ನು ಸ್ವೀಕರಿಸಿ ಕೈಮುತ್ಯದಿಂದ ಹೇಳುವರು. ಹಿಂದಿನಂತೆ ತನ್ನನ್ನು ಮೊದಲು ಸ್ವೀಕರಿಸಿದ್ದು. ಎಲ್ಲರೂ ಅಜ್ಞರೇ ಆದ್ದರಿಂದ ತರತಮ ಭಾವವಿಲ್ಲದೆ ಸ್ವೀಕರಿಸಿರುವರು.

**ಅಹಂ ಮಹೇಂದ್ರೋ ನಿರ್ಋತಿಃ ಪ್ರಚೇತಾಃ**
**ಸೋಮೋಽಗ್ನಿರೀಶಃ ಪವನೋಽರ್ಕೋ ವಿರಿಂಚಃ ।**
**ಆದಿತ್ಯವಿಶ್ವೇವಸವೋಽಥ ಸಾಧ್ಯಾ**
**ಮರುದ್ಗಣಾ ರುದ್ರಗಣಾಃ ಸಸಿದ್ಧಾಃ** ॥೧೪॥

**ಅಹಂ** ನಾನು (ಯಮನು) **ಮಹೇಂದ್ರಃ** ಇಂದ್ರದೇವರು **ನಿರ್ಋತಿಃ** ನಿರ್ಋತಿಯು **ಪ್ರಚೇತಾಃ** ವರುಣನು **ಸೋಮಃ** ಚಂದ್ರನು **ಅಗ್ನಿಃ** ಅಗ್ನಿಯು **ಈಶಃ** ರುದ್ರದೇವರು **ಪವನಃ** ವಾಯುದೇವರು **ವಿರಿಂಚಃ** ಬ್ರಹ್ಮದೇವರು **ಆದಿತ್ಯಃ** ಸೂರ್ಯನು **ವಿಶ್ವೇ** ವಿಶ್ವೇದೇವತೆಗಳು **ವಸವಃ** ಅಷ್ಟವಸುಗಳು **ಸಾಧ್ಯಾಃ** ಸಾಧ್ಯರು **ಮರುದ್ಗಣಾಃ** ೪೯ ಮರುದ್ದೇವತೆಗಳು **ರುದ್ರಗಣಾಃ** ಏಕಾದಶ ರುದ್ರರು **ಸಸಿದ್ಧಾಃ** ಸಿದ್ಧರಿಂದ ಕೂಡಿದವರು ॥೧೪॥




**ಅನ್ಯೇ ಚ ಯೇ ವಿಶ್ವಸೃಜೋಽಮರೇಶ**
**ಭೃಗ್ವಾದಯೋಽಸ್ಪೃಷ್ಟರಜಸ್ತಮಸ್ಕಾಃ ।**
**ಯಸ್ಯೇಹಿತಂ ನ ವಿದುಃ ಸ್ಪೃಷ್ಟಮಾಯಾಃ**
**ಸತ್ತ್ವಪ್ರಧಾನಾ ಅಪಿ ಕಿಂ ತತೋಽನ್ಯೇ ॥೧೫॥**

**ಅನ್ಯೇ ಚ** ಇತರರಾದ **ವಿಶ್ವಸೃಜಃ** ಪ್ರಜೆಗಳನ್ನು ಸೃಷ್ಟಿಸುವ ಕಶ್ಯಪಾದಿಗಳು **ಭೃಗ್ವಾದಯಃ** ಭೃಗು ಮೊದಲಾದವರು **ಅಮರೇಶಾಃ** ದೇವತೆಗಳು **ಅಸ್ಪೃಷ್ಟ ರಜಸ್ತಮಸ್ಕಾಃ** ರಜೋಗುಣ ತಮೋಗುಣಗಳಿಂದ ಸ್ಪೃಷ್ಟರಲ್ಲದ (ಕಿಂಚಿತ್ ಸ್ಪೃಷ್ಟರಾದ) ಆದ್ದರಿಂದಲೇ ಶುದ್ಧ ಸಾತ್ವಿಕರಾದವರು **ಸತ್ವಪ್ರಧಾನಾಃ** ಸತ್ವಗುಣ ಹೆಚ್ಚಾಗಿರುವ **ತತಃ** ಭೃಗು ಮೊದಲಾದವರಿಂದ **ಅನ್ಯೇಽಪಿ** ಭಿನ್ನರಾದ ಮನು ಮೊದಲಾದವರು **ಸ್ಪೃಷ್ಟಮಾಯಾಃ** ಸತ್ವಾಪ್ರಾಚುರ್ಯ ಇತರ ಪ್ರಾಚುರ್ಯ ಪ್ರಾಪಕವಾದ ಪ್ರಕೃತಿಯ ಸಂಪರ್ಕ ಉಳ್ಳ ಅಥವಾ ಎಲ್ಲರೂ ಭಗವದಿಚ್ಛೆಯಿಂದ ಆಚ್ಛಾದಿತರಾಗಿರುವ (ಅವರವರ ಯೋಗ್ಯತಾನುಸಾರ ಆಚ್ಛಾದನ ಕ್ರಮದಿಂದ ಜ್ಞಾನದಲ್ಲಿ ಕ್ರಮವನ್ನು ತಿಳಿಯಬೇಕು.) **ಯಸ್ಯ** ಯಾವ ಶ್ರೀಹರಿಯ **ಈಹಿತಂ** ಅಭಿಪ್ರಾಯವನ್ನು ಚೇಷ್ಟೆಯನ್ನು **ನ ವಿದುಃ** ತಿಳಿದಿಲ್ಲವೋ ಅವನು ಮುಖ್ಯ ಶಾಸಕನು ಎಂದು ಅನ್ವಯ ಮಾಡಿಕೊಳ್ಳಬೇಕು. **ತತಃ ಅನ್ಯೇ** ಸಾತ್ತ್ವಿಕರಲ್ಲದವರು ತಿಳಿಯುವುದಿಲ್ಲವೆಂದು **ಕಿಂ ವಕ್ತವ್ಯಂ** ಏನು ಹೇಳುವದು. ಶ್ರೀಹರಿಯ ಲೀಲೆ ಎಂಥವರಿಗೂ ತಿಳಿಯಲು ಅಸಾಧ್ಯವೆಂದರ್ಥ. ॥೧೫॥

ಕಾಣದಿರುವ ಗುರಿಯನ್ನು ಹೊಡೆಯುವದು ಹೇಗೆ ಕಷ್ಟಸಾಧ್ಯವೋ ಹಾಗೆಯೇ ಇಂದ್ರಿಯಗಳಿಗೆ ವಿಷಯನಲ್ಲದ ಶ್ರೀಹರಿಯ ಜ್ಞಾನವು ಅವನ ಅನುಗ್ರಹವಿಲ್ಲದೇ ಸಾಧ್ಯವಿಲ್ಲವೆಂದು ಹೇಳುತ್ತಾರೆ.

**ಯಂ ವೈ ನ ಗೋಭಿಃ ಮನಸಾಽಸುಭಿರ್ವಾ**
**ಹೃದಾ ಗಿರಾವಾಽಸುಭೃತೋ ವಿಚಕ್ಷತೇ ।**
**ಆತ್ಮಾನಮಂತರ್ಹೃದಿ ಸಂತಮಾತ್ಮನಾಂ**
**ಚಕ್ಷುರ್ಯಥೈವಾಕೃತಯಸ್ತತಃ ಪರಮ್ ॥೧೬॥**

**ಅಸುಭೃತಃ** ಜೀವರು **ಆತ್ಮನಾಂ** ಜೀವರ **ಆತ್ಮಾನಂ** ಅಂತರ್ಯಾಮಿಯನ್ನು ದ್ರಷ್ಟಾರನನ್ನು **ಅಂತರ್ಹೃದಿ** ಹೃದಯದೊಳಗೆ **ಸಂತಂ** ಇರುವವನನ್ನು ಇದು

ಪರಮಾತ್ಮನ ಮತ್ತೊಂದು ರೂಪವೆಂದಾದರೂ ಇಟ್ಟುಕೊಳ್ಳಬಹುದು ಅಥವಾ ಹೃದಯದಲ್ಲಿರುವ ಅಂತರ್ಯಾಮಿಯನ್ನು **ಆಕೃತಯಃ** ರೂಪಗಳು **ಚಕ್ಷುಃ** ತಮಗೆ ವಿಷಯವಲ್ಲದ ಕಣ್ಣನ್ನು **ಯಥೈವ** ಹೇಗೆ ನೋಡಲಾರವೋ **ತಥೈವ** ಹಾಗೆಯೇ **ಗೋಭಿಃ** ಇಂದ್ರಿಯಗಳಿಂದ **ಮನಸಾ** ಬುದ್ಧಿಯಿಂದ **ಅಸುಭಿಃ** ಪ್ರಾಣಗಳಿಂದ **ವಾ** ಮತ್ತು **ಹೃದಾ** ಮನಸ್ಸಿನಿಂದ **ಗಿರಾ** ಮಾತಿನಿಂದ **ನ ವಿಚಕ್ಷತೇ** ತಿಳಿಯಲಾರರೋ ಅವನ ಅನುಗ್ರಹವಾದರೇ ತಮ್ಮ ಯೋಗ್ಯತೆಗೆ ತಕ್ಕಷ್ಟು ಸ್ವಲ್ಪ ಮಾತ್ರ ತಿಳಿಯುವರೋ ಅಂತಹ ನನಗಿಂತ ಭಿನ್ನನಾದ ಶಾಸಕನಿರುವನು ಎಂದನ್ವಯ.

ಇದರಿಂದ ಸಮೀಪದಲ್ಲಿರುವ ಚಕ್ಷುಸ್ಸು ಮೊದಲಾದ ಇಂದ್ರಿಯಾಭಿಮಾನಿ ದೇವತೆಗಳಿಗೂ ಶ್ರೀಹರಿಯ ಜ್ಞಾನವು ಸಂಪೂರ್ಣ ಇಲ್ಲವೆಂದು ಹೇಳಿದಂತಾಯಿತು. ಆಕೃತಿಗಳು ತಮ್ಮ ಸ್ವರೂಪವಾದ್ದರಿಂದ ಚಕ್ಷುರಿಂದ್ರಿಯವನ್ನು ತಿಳಿಯಲಿಲ್ಲವೆಂಬುದು ಇಲ್ಲವೆಂದು ತತಃ ಪರಂ ಎಂಬುದರಿಂದ ಆಕೃತಿಗಳಿಗಿಂತ ಚಕ್ಷುರಿಂದ್ರಿಯ ಭಿನ್ನವೆಂದರ್ಥ. ಹೀಗೆ ಇಂದ್ರಿಯಾವಿಷಯತ್ವ ಶ್ರೀಹರಿಯ ಲಕ್ಷಣವೆಂದು ತಿಳಿಯಬೇಕು.

೨.ಮತ್ತೊಂದರ್ಥ. **ಗೋಭಿಃ** ಇಂದ್ರಿಯಾಭಿಮಾನಿಗಳಾದ ಇಂದ್ರ ಮೊದಲಾದವರೊಂದಿಗೆ **ಮನಸಾ** ಚಂದ್ರನೊಂದಿಗೆ **ಅಸುಭಿಃ** ಮುಖ್ಯಪ್ರಾಣ ಮೊದಲಾದ ಮರುತ್ತುಗಳೊಂದಿಗೆ **ಹೃದಾ** ಅಂತಃಕರಣಾಭಿಮಾನಿ ರುದ್ರದೇವರೊಂದಿಗೆ **ಗಿರಾ** ವಾಗಭಿಮಾನಿ ಉಮಾದೇವಿ ವೇದಾಭಿಮಾನಿ ಸರಸ್ವತಿ ಲಕ್ಷ್ಮಿಯರೊಂದಿಗೆ ಕೂಡಿದ **ಅಸುಭೃತಃ** ಎಲ್ಲ ಜೀವರೂ **ತತಃ ಪರಂ** ಎಲ್ಲ ಜೀವರಿಗಿಂತ ಉತ್ತಮನು ವಿಲಕ್ಷಣನೂ ಆದ **ಯಂ** ಯಾವನನ್ನು **ನ ವಿಚಕ್ಷತೇ** ವಿಶೇಷವಾಗಿ ತಿಳಿಯಲಾರರೋ ಅಂತಹ ಎಂದನ್ವಯ.

ಇದಕ್ಕೆ ದೃಷ್ಟಾಂತ **ಆಕೃತಯಃ** ರೂಪಾಭಿಮಾನಿಗಳು ರುದ್ರಪುತ್ರರು ಮತ್ತು ವ್ಯಾನ ವಾಯುವು **ತತಃ ಪರಂ** ತಮಗಿಂತ ಉತ್ತಮನಾದ **ಚಕ್ಷುಃ** ಕಣ್ಣಿಗೆ ಅಭಿಮಾನಿ ಸೂರ್ಯನನ್ನು ಹೇಗೆ ತಿಳಿಯಲಾರರೋ ಹಾಗೆ ಎಂದರ್ಥ. ಸಾಕಲ್ಯೇನ ಭಗವಂತನ ಜ್ಞಾನವಿಲ್ಲದಿದ್ದರೂ ಅವನ ಅನುಗ್ರಹದಿಂದ ತಮ್ಮ ಯೋಗ್ಯತೆಗೆ ತಕ್ಕಷ್ಟು ತಿಳಿಯುವರು. ಆದ್ದರಿಂದ 'ತಮೇವಂ ವಿದ್ವಾನಮೃತ ಇಹ ಭವತಿ' ಎಂಬ ಶ್ರುತಿಗೂ ವಿರೋಧವಿಲ್ಲ. ಈ ರೀತಿ ಅರ್ಥಕ್ಕೆ ಪ್ರಮಾಣಗಳು ಕೆಳಗಿನಂತೆ ಇವೆ.

ಮೊದಲನೆಯ ಅರ್ಥಕ್ಕೆ 'ನೇಂದ್ರಿಯಾಣಿ ನಾನುಮಾನಂ ವೇದಾ ಹ್ಯೇವೈನಂ ವೇದಯಂತಿ' 'ಯನ್ಮನಸಾ ನ ಮನುತೇ' 'ಯದ್ವಾಚಾऽನಭ್ಯುದಿತಂ' 'ಯತೋ ವಾಚೋ ನಿವರ್ತಂತೇ'

ಎರಡನೆಯ ಅರ್ಥಕ್ಕೆ 'ಇಂದ್ರಾದ್ಯಾ ಇಂದ್ರಿಯಾತ್ಮಾನಃ' 'ಮನಶ್ಚಂದ್ರಃ ಪ್ರಕೀರ್ತಿತಃ' 'ಮರುತಃ ಪ್ರಾಣಮಾನಿನಃ' 'ರುದ್ರೋ ಅಂತಃಕರಣಾತ್ಮಕಂ' 'ಉಮಾ ವೈ ವಾಕ್ ಸಮುದ್ದಿಷ್ಟಾ' ಮುಂತಾಗಿ. ।।೧೬।।

ಪರಮೇಶ್ವರ ಹೀಗಿರಲಿ. ಯಾರು ನಮ್ಮನ್ನು ಹೆದರಿಸಿ ಪಾಪಿಯನ್ನು ರಕ್ಷಿಸುವರೋ ಅವರಾರು? ಎಂದರೆ ಹೇಳುವರು 'ತಾನ್ ತೇ ವೇದಿತುಮಿಚ್ಛಾಮಃ' ಎಂಬುದಕ್ಕೆ ಉತ್ತರಿಸುವರು.

**ತಸ್ಯಾತ್ಮತಂತ್ರಸ್ಯ ಹರೇರಧೀಶಿತುಃ**
**ಪರಸ್ಯ ಮಾಯಾಧಿಪತೇರ್ಮಹಾತ್ಮನಃ ।**
**ಪ್ರಾಯೇಣ ದೂತಾ ಇಹ ವೈ ಮನೋಹರಾಃ**
**ಚರಂತಿ ತದ್ರೂಪಗುಣಸ್ವಭಾವಾಃ ।।೧೭।।**

**ಆತ್ಮತಂತ್ರಸ್ಯ** ಸ್ವತಂತ್ರನಾದ **ಅಧೀಶಿತುಃ** ಪರಮೈಶ್ವರ್ಯವಂತನಾದ ಆದ್ದರಿಂದಲೇ **ಪರಸ್ಯ** ಪೂರ್ಣನಾದ **ಮಾಯಾಧಿಪತೇಃ** ಲಕ್ಷ್ಮೀಪತಿಯಾದ **ಮಹಾತ್ಮನಃ** ಸರ್ವೋತ್ತಮನಾದ **ತಸ್ಯ ಹರೇಃ** ಆ ಶ್ರೀಹರಿಯ **ಪ್ರಾಯೇಣ** ಸದೃಶಗಳಾದ **ತದ್ರೂಪಗುಣಸ್ವಭಾವಾಃ** ಭಗವಂತನ ಚತುರ್ಭುಜತ್ವಾದಿ ಶ್ಯಾಮಾದಿ ರೂಪ ಜ್ಞಾನಾದಿಗುಣಗಳು ಭಕ್ತಪ್ರಿಯತ್ವಾದಿ ಸ್ವಭಾವಗಳಿಂದ ಕೂಡಿದ ಆದ್ದರಿಂದಲೇ **ಮನೋಹರಾಃ** ಸುಂದರ ಆಕಾರವುಳ್ಳ **ದೂತಾಃ** ಭಟರು **ಇಹ** ಭೂಲೋಕದಲ್ಲಿ **ಚರಂತಿ ವೈ** ಸಂಚರಿಸುವರಷ್ಟೇ.

**ಪ್ರಾಯೇಣ** ಎಂಬುದರಿಂದ ಪರಮಾತ್ಮನ ರೂಪ-ಗುಣ-ಸ್ವಭಾವಗಳ ಪ್ರತಿಬಿಂಬ ಇವರ ರೂಪಾದಿಗಳಾದ್ದರಿಂದ ಅವುಗಳ ಸಾರೂಪ್ಯ ಇವುಗಳಿಗೆ ಸೂಚಿಸಿರುವರು. 'ಪ್ರಾಯಸ್ತುಲ್ಯಬಾಹುಲ್ಯಯೋರಪಿ' ಎಂದು ವಿಶ್ವವಿದೆ. **ಪ್ರಾಯೇಣ** ಬಹಳವಾಗಿ **ಚರಂತಿ** ಸಂಚರಿಸುವರು ಹೀಗೂ ಅನ್ವಯ ಮಾಡಬಹುದು.।।೧೭।।

ಈ ವಿಷ್ಣುದೂತರು ಬಂದುದು ಕಾಕತಾಲೀಯವೆಂದು ತಿಳಿಯಬೇಡಿರಿ ಎಂದು ದೂತರಿಗೆ ಹೇಳುವರು. ವಿಷ್ಣುದೂತರ ಕೃತ್ಯ ಹೇಳುವರು.

**ಭೂತಾನಿ ವಿಷ್ಣೋಃ ಸುರಪೂಜಿತಾನಿ**
**ದುರ್ದರ್ಶಲಿಂಗಾನಿ ಮಹಾದ್ಭುತಾನಿ ।**
**ರಕ್ಷಂತಿ ತದ್ಭಕ್ತಿಮತಃ ಪರೇಭ್ಯೋ**
**ಮತ್ತಶ್ಚ ಮರ್ತ್ಯಾನಥ ಸರ್ವತಶ್ಚ ॥೧೮॥**

**ಸುರಪೂಜಿತಾನಿ** ದೇವತೆಗಳಿಂದ ಗೌರವಿತರಾದ **ದುರ್ದರ್ಶಲಿಂಗಾನಿ** ಕಣ್ಣಿಗೆ ಕಾಣದ ಲಕ್ಷಣಗಳುಳ್ಳ **ಮಹಾದ್ಭುತಾನಿ** ಅತ್ಯಾಶ್ಚರ್ಯಕರವಾದ **ವಿಷ್ಣೋಃ ಭೂತಾನಿ** ಶ್ರೀಹರಿಯ ದೂತರಾದವರು **ತದ್ಭಕ್ತಿಮತಃ** ಶ್ರೀಹರಿಯಲ್ಲಿ ಭಕ್ತಿ ಮಾಡುವ **ಮರ್ತ್ಯಾನ್** ಮನುಷ್ಯರನ್ನು **ಪರೇಭ್ಯಃ** ಶತ್ರುಗಳಿಂದ ಮತ್ತು **ಮತ್ತಃ ಚ** ನನ್ನಿಂದಲೂ **ಅಥ** ಮತ್ತು **ಸರ್ವತಃ** ಬೆಂಕಿ ಮೊದಲಾದ ಎಲ್ಲ ವಿಪತ್ತಿನಿಂದ **ರಕ್ಷಂತಿ** ಕಾಪಾಡುವರು.

**ದುರ್ದರ್ಶಲಿಂಗಾನಿ** ಪುಣ್ಯ ಮಾಡದವರಿಗೆ ಕಾಣಿಸದ ಚಿಹ್ನೆ ಉಳ್ಳ **ಮತ್ತಃ** ನನ್ನಿಂದ **ಪರೇಭ್ಯಃ** ಭಿನ್ನರಾದವರಿಂದ ಹೀಗೆ **ಸರ್ವತಃ** ಎಲ್ಲರಿಂದ ಹೀಗೂ ಅನ್ವಯಾರ್ಥ.

**ಅಥ** ಅವರು ರಕ್ಷಿಸಿದ ನಂತರ **ಪರೇಭ್ಯಃ** ಇತರರಿಂದ **ಮರ್ತ್ಯಾನ್** ಮನುಷ್ಯರನ್ನು ನಿಯಮಿಸುವವನು ಮರ್ತ್ಯಾನ್ ಅನಯತೀತಿ ಮರ್ತ್ಯಾನ್ ಣಿ ಲೋಪಕ್ಕೆ ಸ್ಥಾನಿವದ್ಭಾವವಾದ್ದರಿಂದ ನಲೋಪವಾಗಿಲ್ಲ. ಛಾಂದೋಗ್ಯೋಪನಿಷದ್ಭಾಷ್ಯದಲ್ಲಿ 'ತಜ್ಜಲಾನ್' ಎಂಬುದನ್ನು ವ್ಯಾಖ್ಯಾನಿಸುವಾಗ 'ಯೋಽಸೌ ಜಲೇ ಅನಿತಿ' ಎಂದಿದ್ದಾರೆ ಆಚಾರ್ಯರು.

ಬಹುಜನ ನಿಯಮನ ಮಾಡುವನು ಅಂದರೆ ರಾಜನಾಗುವನು. ಪರೇಭ್ಯಃ ಸನ್ ಮರ್ತ್ಯಾನ್ **ಪರೇಷಾಂ** ಎಲ್ಲರಿಗಿಂತ **ಇಭ್ಯಃ** ಆಢ್ಯನಾಗಿ ಮನುಷ್ಯರನ್ನು ನಿಯಮಿಸುವನು. **ಪರಂ** ಅತ್ಯಂತ **ಇಭ್ಯಃ** ಆಢ್ಯನಾಗಿ ಎಂದಾದರೂ ಮಾಡಬಹುದು. ಸರ್ವತಃ ಹಿಂಸೆಯಿಂದ ರಕ್ಷಿಸುವರು ಎಂದೂ ಅರ್ಥ. 'ಅರ್ವಷರ್ವಹಿಂಸಾಯಾಂ ಎಂದು ಧಾತು ವ್ಯಾಖ್ಯಾನವಿದೆ. ಯಾವನು ತದ್ಭಕ್ತಿಮತಃ ತಸ್ಮಿನ್ ಭಕ್ತಿಃ ಯಸ್ಯ ಸಃ ತದ್ಭಕ್ತಿಃ ಇತಿ ಮತಃ ಅಂದರೆ ಭಗವಂತನಲ್ಲಿ ಭಕ್ತಿ ಉಳ್ಳವನೆಂದು ಸಮ್ಮತನಾದರೆ **ಸಃ** ಅವನು **ಮತ್ತಶ್ಚೇದಪಿ** ಹುಚ್ಚನಾದರೂ **ಸರ್ವತಃ ರಕ್ಷತಿ** ಎಲ್ಲ ರೀತಿಯಿಂದಲೂ ರಕ್ಷಿಸುವನು. ಯಮನ ಮಾತನ್ನು ಅನುವಾದ ಮಾಡುವಾಗ ಮತ್ ಎಂದಿಷ್ಟೇ ಹೇಳಿದರೆ ಉಚ್ಚಾರಣೆಯಲ್ಲಿ ಲಾಘವ ಮತ್ತು ಅರ್ಥ ಪೂರ್ತಿಯಾಗುವದು. ಆದರೂ ಹಾಗೆನ್ನಲು ಮನಸ್ಸು ಮಾಡದೆ ಮತ್ತ ಎಂಬ ಪದವನ್ನಿಟ್ಟು ಈ ಅರ್ಥವನ್ನು ಸೂಚಿಸಿರುವರು ವ್ಯಾಸರು ಎನ್ನುತ್ತಾರೆ ಶ್ರೀಗಳವರು. ॥೧೮॥

ಇವರು ವಿಷ್ಣುದೂತರಾದರೆ ಬುದ್ಧಿಪೂರ್ವಕ ಮಹಾಪಾಪ ಮಾಡಿದವನನ್ನು ಹೇಗೆ ಬಿಡಿಸಿದರು ಎಂದರೆ ಧರ್ಮದ ಮರ್ಮ ಅತ್ಯಂತ ಸೂಕ್ಷ್ಮ. ಅದನ್ನು ಇಂಥವರೇ ತಿಳಿಯಲಾರರು. ನಿಮ್ಮ ಪಾಡೇನು ಎಂದು ಕೆಲವರನ್ನು ಹೇಳುವರು.

**ಧರ್ಮಂ ತು ಸಾಕ್ಷಾದ್ ಭಗವತ್ಪ್ರಣೀತಂ**
**ನ ವೈ ವಿದುಃ ಋಷಯೋ ನಾऽಪಿ ದೇವಾಃ ।**
**ನ ಸಿದ್ಧಮುಖ್ಯಾ ಅಸುರಾ ಮನುಷ್ಯಾಃ**
**ಕುತೋ ನು ವಿದ್ಯಾಧರಚಾರಣಾದ್ಯಾಃ ॥೧೯॥**

**ಸಾಕ್ಷಾತ್ ಭಗವತ್ಪ್ರಣೀತಂ ಧರ್ಮಂ ತು** ಭಗವಂತನೇ ಮಾಡಿದ ಧರ್ಮ ರಹಸ್ಯವನ್ನು **ಋಷಯಃ ನ ವೈ ವಿದುಃ** ಸಾಮಾನ್ಯ ಋಷಿಗಳು ತಿಳಿಯಲಾರರು. **ದೇವಾ ಅಪಿ ನ ವಿದುಃ** ಸಾಮಾನ್ಯ ದೇವತೆಗಳೂ ತಿಳಿದಿಲ್ಲ **ಸಿದ್ಧಮುಖ್ಯಾಃ** ಸಿದ್ಧ ಶ್ರೇಷ್ಠರು ನ ತಿಳಿದಿಲ್ಲ. **ವಿದ್ಯಾಧರಚಾರಣಾದ್ಯಾಃ ನ ವಿದುಃ** ವಿದ್ಯಾಧರರು ಚಾರಣರೂ ತಿಳಿದಿಲ್ಲ. ಇನ್ನು **ಅಸುರಾ ಮನುಷ್ಯಾಃ ಕುತೋ ನು** ಮನುಷ್ಯರು ಅಸುರರು ತಿಳಿದಿಲ್ಲವೆಂದೇನು ಹೇಳುವುದು. ಕೈಮುತ್ಯ ಸಿದ್ಧವೆಂದರ್ಥ. ॥೧೯॥

ಯಾರಿಗೂ ತಿಳಿದಿಲ್ಲ ಎಂದರೆ ಧರ್ಮವು ಮಲದ ಕೊಂಬಿನಂತೆ ಅಸತ್ತಾಗಿದೆಯೇ ಎಂದರೆ ಅದನ್ನು ತಿಳಿದ ಕೆಲವರನ್ನು ತಿಳಿಸುವರು.

**ಸ್ವಯಂಭೂರ್ನಾರದಃ ಶಂಭುಃ ಕುಮಾರಃ ಕಪಿಲೋ ಮನುಃ ।**
**ಪ್ರಹ್ಲಾದೋ ಜನಕೋ ಭೀಷ್ಮೋ ಬಲಿರ್ವೈಯಾಸಕಿರ್ವಯಮ್ ॥೨೦॥**

**ದ್ವಾದಶೈತೇ ವಿಜಾನೀಮೋ ಧರ್ಮಂ ಭಾಗವತಂ ಭಟಾಃ ।**
**ಗುಹ್ಯಂ ವಿಶುದ್ಧಂ ದುರ್ಬೋಧಂ ಯಜ್ಜ್ಞಾತ್ವಾಮೃತಮಶ್ನುತೇ ॥೨೧॥**

**ಸ್ವಯಂಭೂಃ** ಬ್ರಹ್ಮದೇವರು **ನಾರದಃ** ನಾರದರು **ಶಂಭುಃ** ರುದ್ರದೇವರು **ಕುಮಾರಃ** ಸನತ್ಕುಮಾರರು **ಕಪಿಲಃ ಮುನಿಃ** ಕಪಿಲನಾಮಕನಾದ ಒಬ್ಬ ಸಜ್ಜನ ಅಥವಾ ಭಾಗವತದಲ್ಲಿ ಭಗವಂತನನ್ನು ಋಷಿಕೋಟಿಯಲ್ಲಿ ಸೇರಿಸಿದ್ದರಿಂದ ಸ್ವಯಂ ಪದದಿಂದ ಹೇಳಿದ ಭಗವಂತನಿಂದ ಪ್ರತ್ಯೇಕ ಹೇಳಿದೆ ಎಂದು ತಿಳಿಯಬೇಕು. **ಮನುಃ** ಸ್ವಾಯಂಭುವ ಮನುವು **ಪ್ರಹ್ಲಾದಃ** ಪ್ರಹ್ಲಾದರಾಜರು **ಜನಕಃ** ಜನಕರಾಜರು **ಭೀಷ್ಮಃ** ಭೀಷ್ಮಾಚಾರ್ಯರು **ಬಲಿಃ ಚ** ಬಲಿಚಕ್ರವರ್ತಿಗಳು **ವೈಯಾಸಕಿಃ** ಶುಕಾಚಾರ್ಯರು **ವಯಂ** ನಾವು (ಯಮನು) **ಏತೇ ದ್ವಾದಶ** ಈ ಹನ್ನೆರಡು ಮಂದಿ **ಗುಹ್ಯಂ** ರಹಸ್ಯವೂ

**ವಿಶುದ್ಧಂ** ಶುದ್ಧವೂ **ದುರ್ಬೋಧಂ** ಶ್ರೀಹರಿಯ ಅನುಗ್ರಹವಿಲ್ಲದೆ ತಿಳಿಯಲಾಗದ **ಭಾಗವತಂ ಧರ್ಮಂ** ಭಗವತ್ಪ್ರೀತಿಕರವಾದ ಮರ್ಮವನ್ನು **ಜಾನೀಮಃ** ತಿಳಿದಿರುವೆವು. **ಯತ್** ಯಾವ ಈ ಧರ್ಮ ಸೂಕ್ಷ್ಮವನ್ನು **ಜ್ಞಾತ್ವಾ** ತಿಳಿದು ಆಚರಿಸಿದರೆ **ಅಮೃತಂ** ಮೋಕ್ಷವನ್ನು **ಅಶ್ನುತೇ** ಅನುಭವಿಸುವನು.

ಇಲ್ಲಿ **ಸ್ವಯಂ** ಅಂದರೆ ಭಗವಂತನು **ಭೂಃ** ಎಂದರೆ ಲಕ್ಷ್ಮೀದೇವಿಯು ಎಂಬುದು ಅಂತರಂಗಾಭಿಪ್ರಾಯ. ಕಾರಣ ದ್ವಾದಶ ಎಂದುದು ವಿರುದ್ಧವಲ್ಲ. ಅಥವಾ ಈಶ ಕೋಟಿಯಲ್ಲಿ ಸೇರದಿರುವವರು ಹನ್ನೆರಡು ಎಂದರ್ಥ. ಸ್ಥೂಲದೃಷ್ಟಿಯವರಿಗೆ ತಿಳಿಸಲು ಇನ್ನು ಹೆಚ್ಚು ಅಧಿಕಾರಿಗಳಿರುವದು ಎಲ್ಲರೂ ಒಪ್ಪಬೇಕಾದುದೇ. ಇಲ್ಲವಾದರೇ 'ಯೇಽನ್ಯೇ ವಿಭೀಷಣಹನೂಮದುಪೇಂದ್ರದತ್ತಾಃ ಪಾರ್ಥಾರ್ಷ್ಟಿಷೇಣವಿದುರ-ಶ್ರುತಸೇನಭೂಪಾಃ' ಮುಂತಾದ ಅನೇಕ ಪ್ರಮಾಣ ಬಿಡಬೇಕಾಗುವದು. ಕಾರಣ ಉಪಲಕ್ಷಣಯಾ ಅವರೆಲ್ಲರನ್ನು ಸ್ವೀಕರಿಸಬೇಕು. ।।೨೦-೨೧।।

ಧರ್ಮಗಳ ಮಧ್ಯದಲ್ಲಿ ಶ್ರೇಷ್ಠವಾದ ಧರ್ಮವನ್ನೇ ಅಜಾಮಿಳನು ಮಾಡಿದ್ದಾನೆ. ಆದ್ದರಿಂದ ವಿಷ್ಣುದೂತರು ಹೇಳಿದ್ದೇ ಸರಿಯಾದುದು. ಈಗ ಏನಾಯಿತೋ ಆಯಿತು ಇನ್ನು ಮುಂದೆ ನೀವು ಜಾಗ್ರತರಾಗಿರಬೇಕು. ಸ್ಥಲಾಸ್ಥಲಗಳನ್ನು ವಿವೇಚನೆ ಮಾಡಿ ತಿಳಿದುಕೊಂಡು ಹೋಗಿರಿ ಎಂದು ಕೆಲವು ಶ್ಲೋಕಗಳಿಂದ ತನ್ನ ದೂತರಿಗೆ ಯಮರಾಜ ಹೇಳುವನು.

**ಏತಾವಾನೇವ ಲೋಕೇಽಸ್ಮಿನ್ ಪುಂಸಾಂ ಧರ್ಮಃ ಪರಃ ಸ್ಮೃತಃ ।**
**ಭಕ್ತಿಯೋಗೋ ಭಗವತಿ ತನ್ನಾಮಗ್ರಹಣಾದಿಭಿಃ ।।೨೨।।**

**ತನ್ನಾಮಗ್ರಹಣಾದಿಭಿಃ** ಶ್ರೀಹರಿಯ ನಾಮೋಚ್ಚಾರಣ ಮೊದಲಾದವುಗಳಿಂದ **ಭಗವತಿ** ಶ್ರೀಹರಿಯಲ್ಲಿ **ಭಕ್ತಿಯೋಗಃ** ಭಕ್ತಿ ಎಂಬ ಮೋಕ್ಷೋಪಾಯವು **(ಯಃ ಅಸ್ತಿ)** ಯಾವುದಿದೆಯೋ **ಏತಾವಾನೇವ** ಇಷ್ಟೇನೇ **ಅಸ್ಮಿನ್ ಲೋಕೇ** ಈ ಪ್ರಪಂಚದಲ್ಲಿ **ಪುಂಸಾಂ** ಪುರುಷರೇ ಮೊದಲಾದ ಅಧಿಕಾರಿ ಚೇತನರಿಗೆ **ಪರಃ** ಉತ್ತಮವಾದ **ಧರ್ಮಃ** ಧರ್ಮವೆಂದು **ಸ್ಮೃತಃ** 'ಏಷ ಮೇ ಸರ್ವಧರ್ಮಾಣಾಂ ಧರ್ಮೋಽಧಿಕತಮೋ ಮತಃ । ಯದ್ಭಕ್ತ್ಯಾ ಪುಂಡರೀಕಾಕ್ಷಂ ಸ್ತವೈರರ್ಚೇನ್ನರಸ್ಸದಾ' ಮುಂತಾದ ಸ್ಮೃತಿಯಲ್ಲಿ ಹೇಳಲಾಗಿದೆ. ।।೨೨।।

**ನಾಮೋಚ್ಚಾರಣಮಾಹಾತ್ಮ್ಯಂ ಹರೇಃ ಪಶ್ಯತ ಪುತ್ರಕಾಃ ।**
**ಅಜಾಮಿಲೋಽಪಿ ಯೇನೈವ ಮೃತ್ಯುಪಾಶಾದಮುಚ್ಯತ ॥೨೩॥**

**ಹೇ ಪುತ್ರಕಾಃ** ಮಕ್ಕಳಿರಾ **ಹರೇಃ** ಶ್ರೀಹರಿಯ **ನಾಮೋಚ್ಚಾರಣಮಾಹಾತ್ಮ್ಯಂ** ನಾಮೋಚ್ಚಾರಣಮಹಿಮೆಯನ್ನು **ಪಶ್ಯತ** ನೋಡಿರಿ **ಅಜಾಮಿಲಃ ಅಪಿ** ಪಾಪ ಮಾಡಿದ ಅಜಾಮಿಳನು ಸಹ **ಯೇನ ಏವ** ಯಾವ ಭಕ್ತಿ ಪೂರ್ವಕ ನಾಮೋಚ್ಚಾರಣದಿಂದಲೇ **ಮೃತ್ಯುಪಾಶಾತ್** ಯಮಪಾಶದಿಂದ **ಅಮುಚ್ಯತ** ಬಿಡುಗಡೆ ಹೊಂದಿದನು ಪ್ರತ್ಯಕ್ಷವಿರುವಾಗ ಬೇರೆ ಪ್ರಮಾಣಬೇಕಿಲ್ಲವೆಂದರ್ಥ.

ಇಲ್ಲಿ ಇಷ್ಟು ದಿವಸ ಪಾಪರಹಿತನಾದ ನನ್ನ ಸಹವಾಸದಲ್ಲಿದ್ದರೂ ನನ್ನಿಂದ ಧರ್ಮವನ್ನು ನೀವು ತಿಳಿಯಲಿಲ್ಲ, ಎಂದು ಕ್ರಮವಾಗಿ ಪುತ್ರ ಎಂಬುದರಿಂದ ಕ ಪ್ರತ್ಯಯದಿಂದ ಲಾಲನ-ಹೇಳನ ಎರಡನ್ನೂ ಮಾಡಿದನೆಂದು ತಿಳಿಯಬೇಕು. ॥೨೩॥

**ಏತಾವತಾಲಮಘನಿರ್ಹರಣಾಯ ಪುಂಸಾಂ**
**ಸಂಕೀರ್ತನಂ ಭಗವತೋ ಗುಣಕರ್ಮನಾಮ್ನಾಮ್ ।**
**ವಿಕ್ರುಶ್ಯ ಪುತ್ರಮಘವಾನ್ ಯದಜಾಮಿಲೋಽಪಿ**
**ನಾರಾಯಣೇತಿ ಮ್ರಿಯಮಾಣ ಇಯಾಯ ಮುಕ್ತಿಮ್ ॥೨೪॥**

**ಪುಂಸಾಂ** ಅಧಿಕಾರಿಗಳಾದ ಚೇತನರ **ಅಘನಿರ್ಹರಣಾಯ** ಪಾಪವನ್ನು ಸಂಪೂರ್ಣವಾಗಿ ಹೋಗಲಾಡಿಸಲು **ಭಗವತಃ** ಶ್ರೀಹರಿಯ **ಗುಣಕರ್ಮನಾಮ್ನಾಂ** ೧. ನಾರಾಯಣ ಮೊದಲಾದ ಗುಣವಾಚಕವಾದ ನಾಮಗಳ ಮತ್ತು ಮಧುಸೂದನ ಮೊದಲಾದ ಕ್ರಿಯಾವಾಚಕನಾಮಗಳ ೨. ಗುಣಗಳ ಕ್ರಿಯೆಗಳ ಮತ್ತು ನಾಮಗಳ **ಸಂಕೀರ್ತನಂ** ಭಕ್ತಿಯುಕ್ತ ಉಚ್ಚಾರಣೆಯು **ಏತಾವತಾ** ಇಷ್ಟು ಮಾತ್ರವೇ **ಅಲಂ** ಸಮರ್ಥವಾದುದು ಮತ್ತೊಂದು ಸಾಧನ ಅಪೇಕ್ಷಿತವಲ್ಲ **ಯತ್** ಏಕೆಂದರೆ **ಮ್ರಿಯಮಾಣಃ** ಸಾಯಲಿದ್ದ **ಅಘವಾನ್** ಪಾಪಿಯಾದ **ಅಜಾಮಿಲೋಽಪಿ** ಅಜಾಮಿಳನೂ ಸಹ **ನಾರಾಯಣ ಇತಿ** ನಾರಾಯಣ ಎಂದು **ಪುತ್ರಂ** ಮಗನನ್ನು **ವಿಕ್ರುಶ್ಯ ಅಪಿ** ಕರೆದರೂ ಕೂಡ ಅದರ ಫಲವಾಗಿ ಉಂಟಾದ ಭಕ್ತಿಯಿಂದ ಉಚ್ಚರಿತವಾದ ಶ್ರೀಹರಿಯ ಸ್ಮರಣೆಯಿಂದ **ಮುಕ್ತಿಂ** ಮೃತ್ಯುವಿನಿಂದ ಬಿಡುಗಡೆಯನ್ನು ಮುಂದೆ ಮೋಕ್ಷವನ್ನು **ಉಪೈತಿ** ಹೊಂದಿದನು. ಹೊಂದುವನೋ ಅಥವಾ ಅಜಾಮಿಲನು ನಾರಾಯಣ ಎಂಬ ಪುತ್ರನ ನಾಮವನ್ನು ಉಚ್ಚರಿಸಿ **ಮುಕ್ತಿಂ ಅಗಾತ್**

**ಯತ್** ಮುಕ್ತಿಯನ್ನು ಹೊಂದಿದನೇನು? ಇಲ್ಲ. ಮತ್ತೇನೆಂದರೆ **ಏತಾವತಾ** ಹಿಂದೆ ಹೇಳಿದ ಭಕ್ತಿಪೂರ್ವಕ ಸಂಕೀರ್ತನದಿಂದಲೇ ಹೊಂದಿದನು ಎಂದರ್ಥ.

ಈ ಶ್ಲೋಕದಲ್ಲಿ ಭಕ್ತಿರಹಿತ ಕೀರ್ತನೆಯೂ ಸಮಸ್ತಪಾಪಪರಿಹಾರಕವೆಂದು ಸಮರ್ಥಿಸುವ ವ್ಯಾಖ್ಯಾನಗಳು ಸರಿಯಲ್ಲ. ಶ್ರದ್ಧಾ-ಭಕ್ತ್ಯಾದಿಗಳನ್ನು ವಿಧಿಸುವ ಎಲ್ಲ ಶಾಸ್ತ್ರಗಳು ವ್ಯರ್ಥವಾಗುವವು. ಪ್ರಾಯಶ್ಚಿತ್ತಾದಿ ವಿಧಿಗಳು ವ್ಯರ್ಥವಾಗುವವು. 'ಅಭಕ್ತ್ಯೋದಾಹೃತಂ ನೈವ ಫಲದಾತೃ ಭವಿಷ್ಯತಿ' ಇತ್ಯಾದಿ ಹಿಂದೆ ಹೇಳಿದ ಪ್ರಮಾಣ ವಿರೋಧ ಬರುವದು. 'ಸಂಕೀರ್ತನಂ ಅಘನಿರ್ಹರಣಾಯ ಅಲಂ' ಎಂದು ಅನ್ವಯ ಮಾಡುವದರಿಂದ ತೃತೀಯಾ ಅನುಪಪತ್ತಿರೂಪ ದೋಷವೂ ಇಲ್ಲ. ಯೋಗ್ಯತಾ ಇರುವಾಗ ದೂರಾನ್ವಯವೂ ದೋಷವಲ್ಲ.

'ಯಚ್ಛಬ್ದಾ ಯೋಗವೃತ್ತಯಃ' ಎಂದು ಅಣುಭಾಷ್ಯದಲ್ಲಿ 'ವಿದ್ವದ್ರೂಢಿಃ ವೈದಿಕಾ ಸ್ಯಾತ್ ಸಾ ಯೋಗಾದೇವ ಲಭ್ಯತೇ' ಎಂದು ಅನುವ್ಯಾಖ್ಯಾನದಲ್ಲಿ ಭಗವಂತನಲ್ಲಿ ವಿದ್ವದ್ರೂಢಿಯಿಂದಲೇ ಎಲ್ಲ ಶಬ್ದಗಳ ಪ್ರವೃತ್ತಿಯನ್ನು ಅಂಗೀಕರಿಸಿದ್ದರಿಂದ 'ತತ್ರ ಪ್ರಸಿದ್ಧಾನಾಂ ನಾರಾಯಣದಿನಾಮ್ನಾಂ' ಎಂದು ತತ್ತ್ವ ಪ್ರಕಾಶಿಕೆಯಲ್ಲಿ ಹೇಳಿದಂತೆ ವಿಶೇಷಕೃತವಾದುದು. 'ಆನಂದೋ ಬ್ರಹ್ಮ' ಎಂದು ಹೇಳಿದ ಆನಂದಾದಿಗಳು ಗುಣನಾಮಗಳು ಕಂಸಹಿಂಸಕ ಮುಂತಾದವು ಕರ್ಮನಾಮಗಳು ಎಂಬ ವ್ಯವಹಾರ ಎನ್ನುತ್ತಾರೆ ಶ್ರೀಗಳವರು. ।।೨೪।।

ಭಕ್ತಿಪೂರ್ವಕ ನಾಮಸ್ಮರಣೆಯು ಮುಕ್ತಿದಾಯಕವಾಗಿದ್ದಲ್ಲಿ ಎಲ್ಲರೂ ಏಕೆ ಅದನ್ನು ಅನುಷ್ಠಾನ ಮಾಡುತ್ತಿಲ್ಲವೆಂದರೆ ಹೇಳುತ್ತಾರೆ-

**ಪ್ರಾಯೇಣ ವೇದ ತದಿದಂ ನ ಮಹಾಜನೋಽಯಂ**
**ದೇವ್ಯಾ ವಿಮೋಹಿತಮತಿರ್ಬತ ಮಾಯಯಾಽಲಮ್ ।**
**ತ್ರಯ್ಯಾಂ ಜಡೀಕೃತಮತಿರ್ಮಧುಪುಷ್ಪಿತಾಯಾಂ**
**ವೈತಾನಿಕೇ ಮಹತಿ ಕರ್ಮಣಿ ಯುಜ್ಯಮಾನಃ ।।೨೫।।**

**ಪ್ರಾಯೇಣ** ಬಹಳವಾಗಿ **ಮಹಾಜನಃ ಅಯಂ** ಬಹುಸಂಖ್ಯೆಯ ಮಂದಜನ **ದೇವ್ಯಾಃ** ದ್ಯೋತಮಾನವಾದ ಬಹುವಿಧವಿಲಾಸವುಳ್ಳ **ಮಾಯಯಾ** ಭಗವದಿಚ್ಛೆಯಿಂದ **ಅಲಂ** ಸಂಪೂರ್ಣ **ವಿಮೋಹಿತಮತಿಃ** ವಿಶೇಷವಾಗಿ ವಿವೇಕರಹಿತವಾದ ಬುದ್ಧಿಯುಳ್ಳದ್ದಾಗಿ **(ವರ್ತತೇ)** ಇದೆ. ಆದ್ದರಿಂದಲೇ

**ಮಧುಪುಷ್ಪಿತಾಯಾಂ** ಆಪಾತತಃ ಸ್ವರ್ಗ ಮೊದಲಾದ ಪುಷ್ಪಸದೃಶ ಫಲಗಳನ್ನು ಹೇಳುವ **ತ್ರಯ್ಯಾಂ** ವೇದಗಳಲ್ಲಿ **ಜಡೀಕೃತಮತಿಃ ಸನ್** ಸ್ವರ್ಗಾದಿ ಫಲ ಅದಕ್ಕೆ ಸಾಧನವಾದ ಯಾಗ ಮೊದಲಾದುವೇ ಮುಖ್ಯಾರ್ಥವೆಂದು ಅಭಿನಿವೇಶ ಯುಕ್ತ ಬುದ್ಧಿಯುಳ್ಳದ್ದಾಗಿ **ಮಹತಿ** ಬಹುವಿತ್ತವ್ಯಯ ಮತ್ತು ಶ್ರಮಸಾಧ್ಯವಾದ **ವೈತಾನಿಕೇ ಕರ್ಮಣಿ** ವೇದವಿಹಿತವಾದ ಯಜ್ಞಸಂಬಂಧಿ ಕರ್ಮಗಳಲ್ಲಿ **ಯುಜ್ಯಮಾನಃ** ಪ್ರೇರಿತವಾಗಿ (ಆಸಕ್ತವಾಗಿ) **ತತ್ ಇದಂ** ವೇದವು ಮುಖ್ಯವಾಗಿ ಮೋಕ್ಷಫಲವನ್ನೂ ಅದಕ್ಕೆ ಸಾಧನವಾದ ಭಗವದನುಸ್ಮರಣೆಯನ್ನೂ ವಿಧಿಸುವುದು ಎಂಬುದನ್ನು **ನ ವೇದ** ತಿಳಿದಿಲ್ಲ. ಆದ್ದರಿಂದ ಎಲ್ಲರೂ ಆಚರಿಸುತ್ತಿಲ್ಲವೆಂದು ಭಾವ.

ವೇದವು ಅಮುಖ್ಯವಾಗಿ ಸ್ವರ್ಗಾದಿ ಫಲವನ್ನೂ ಅದರ ಸಾಧನವನ್ನೂ ತಿಳಿಸುತ್ತದೆ. ಮಂದಾಧಿಕಾರಿಗಳನ್ನು ಈ ಸಾಧನಗಳಲ್ಲಿ ಪ್ರವೃತ್ತಗೊಳಿಸುವುದು ವೇದದ ಉದ್ದೇಶವಾಗಿದೆ. ಆದರೆ ಉತ್ತಮಾಧಿಕಾರಿಗಳಿಗೆ ಜ್ಞಾನವನ್ನೇ ಮುಖ್ಯವಾಗಿ ತಿಳಿಸುವದು.

**ಮಂದಾಧಿಕಾರಿಣಾ ನಿತ್ಯಂ ತಪಸ್ಯೈವ ಪ್ರತೀಕ್ಷಿತುಮ್ ।**
**ಮೋಕ್ಷೋ ನ ಶಕ್ಯತೇ ಧೈರ್ಯಾತ್ ತತಃ ಸ್ವರ್ಗಾದಿಕಂ ವದನ್ ॥**

**ಸ್ವರ್ಗಾದಿಪುಷ್ಪಫಲತಾಂ ಜ್ಞಾಪಯಿತ್ವಾ ವಿಮೋಕ್ಷದಮ್ ।**
**ಜ್ಞಾನಂ ವಕ್ತುಂ ತೂತ್ತಮಾನಾಂ ನಿತ್ಯೋ ವೇದಃ ಪ್ರವರ್ತತೇ ॥**

**ಇಕ್ಷುದಂಡಂ ದದಾನೀತಿ ಯಥಾ ಭೈಷಜ್ಯರೋಚನಮ್ ।**
**ಏವಂ ಮಂದೇಷೂತ್ತಮೇಷು ಮೋಕ್ಷಮಾಹಾತ್ಮ್ಯಮುಚ್ಯತೇ ।**
**ನ ಹ್ಯನ್ಯಫಲಭಾಗ್ವೇದೋ ವಾಸುದೇವೈಕಸಂಶ್ರಯಃ ॥**

ಎಂಬ ಪ್ರಮಾಣವು ಈ ಅರ್ಥವನ್ನು ಸ್ಫುಟಪಡಿಸುತ್ತದೆ.

ಈ ಶ್ಲೋಕದಲ್ಲಿ ಶ್ರೀಗಳವರು ಬರೆದ ವಿಶೇಷಾರ್ಥ ಹೀಗಿದೆ. **ಮಹಾಜನಃ** ಮಹಾಜನರೆಂದು ತಿಳಿದವರು **ದೇವ್ಯಾ ಮಾಯಯಾ** ಅವಾರಣೀಯವಾದ ಶ್ರೀಹರಿಯ ಇಚ್ಛೆಯಿಂದ ಮತ್ತು ಪ್ರಕೃತಿಯಿಂದ **ಅಲಂ ವಿಮೋಹಿತಮತಿಃ ಇತಿ ಹೇತೋಃ** ಬಹಳ ಮೋಹಿತನಾದ್ದರಿಂದ **ತ್ರಯ್ಯಾಂ** ವೇದದಲ್ಲಿ **ಜಡೀಕೃತಮತಿಃ** ಬೇರೆ ಕಡೆಗೆ ಹೋಗದಿರುವದರಿಂದ ಜಡವಾಗಿ ಮಾಡಲ್ಪಟ್ಟ ಬುದ್ಧಿಯುಳ್ಳ **ಮಧು ಪುಷ್ಪಿತಾಯಾಂ** ಮಧುವಿನಂತೆ ಮದವನ್ನು ತರಿಸುವ **ಪುಷ್ಪಂ** ಸ್ವರ್ಗಸುಖವನ್ನು

'ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ' ಎಂಬ ಗೀತೆಯ ವಚನದ ಗೀತಾಭಾಷ್ಯದಲ್ಲಿ 'ಮೋಕ್ಷಮಪೇಕ್ಷ್ಯ ಸ್ವರ್ಗಾದಿಪುಷ್ಪಯುಕ್ತಾಂ' ಎಂದು ಹೇಳಿದ್ದಾರೆ. **ವೈತಾನಿಕೇ** 'ವಿತಾನೋ ಯಜ್ಞವಿಸ್ತಾರಃ' ಎಂದು ವಿಶ್ವವಿರುವದರಿಂದ ಯಜ್ಞಸಂಬಂಧಿಯಾದ ಕರ್ಮದಲ್ಲಿ ಎಂದರ್ಥ. **ವೈತಾನಿಕೇ** ಎಂಬುದಕ್ಕೆ ಮಹತಿ ಮಹಾಯಾಸಸಾಧ್ಯವಾದ ಅಥವಾ **ವೈತಾನಿಕೇ** ಯಜ್ಞಕರ್ಮದಲ್ಲಿ **ಕರ್ಮಣಿ** ಬೇರೆ ಕರ್ಮಗಳಲ್ಲಿಯೂ ಎಂದರ್ಥ. 'ವಿತಾನಃ ಕ್ರತುಕರ್ಮಣಿ' ಎಂದು ವಿಶ್ವವಿದೆ. **ಮಾಯಯಾ** ಶ್ರೀಹರಿಯ ಇಚ್ಛೆಯಿಂದ **ಇದಂ** ಭಗವತ್ಕೀರ್ತನವು **ವಿಮೋಹಿತಮತಿಃ ವಿಮಂ** ಸಂಪತ್ಪ್ರದವಲ್ಲ ಜ್ಞಾನಪ್ರದವಲ್ಲ ಎಂದು **ಊಹಿತ** ತರ್ಕಿತವಾದ **ಮತಿಃ** ಬುದ್ಧಿಯುಳ್ಳ ಎಂದರ್ಥ ಹೀಗೆ ಮಾಡಿದ್ದರಿಂದ ಜಡೀಕೃತಿಮತಿಃ ಎಂಬುದು ಹೆಚ್ಚಾಗಲಾರದು ಎಂದು ತಿಳಿಯಬೇಕು. **ಯತ್** ಯಾವ ಕಾರಣ **ಇದಂ** ಭಗವತ್ಕೀರ್ತನವನ್ನು **ಅಲಂ** ನಿರರ್ಥಕವೆಂದು **ವೇದ** ತಿಳಿದನೋ **ತತ್** ಆದ್ದರಿಂದ **ಅಯಂ** ಇವನು **ನ ಮಹಾಜನಃ** ದೊಡ್ಡ ಮನುಷ್ಯನಲ್ಲ. 'ಅಲಂ ಭೂಷಣಪರ್ಯಾಪ್ತಿವಾರಣೇಷು ನಿರರ್ಥಕೇ' ಎಂದು ವಿಶ್ವ. 'ನಾರಾಯಣೇತಿ ಮಂತ್ರೋಽಸ್ತಿ ವಾಗಸ್ತಿ ವಶವರ್ತಿನೀ । ತಥಾಽಪಿ ನರಕೇ ಘೋರೇ ಪಂತತೀತ್ಯೇತದದ್ಭುತಮ್' ಎಂದಿರುವದರಿಂದ **ಬತ** ಆಶ್ಚರ್ಯ ಅಥವಾ ಖೇದ ಎಂದು ಅರ್ಥ 'ಬತ ಖೇದಾನುಕ್ರೋಶವಿಸ್ಮಯೇ' ಎಂದು ವಿಶ್ವ. **ಅಮಹತಿ ಕರ್ಮಣಿ** ಎಂಬುದು ವ್ಯಸ್ತ ಮತ್ತು ಸಮಸ್ತಪದ. ವ್ಯಸ್ತವಾದಾಗ ತುಚ್ಛ ಫಲಪ್ರದವಾದ್ದರಿಂದ ತುಚ್ಛವಾದ ಕರ್ಮದಲ್ಲಿ ಎಂದರ್ಥ. ಸಮಸ್ತವಾದಾಗ ನ ಭವತಿ ಮಾ ಜ್ಞಾನಂ ಯಸ್ಮಾತ್ ತತ್ ಅಮಂ ತಸ್ಯ ಹತಿಃ ತಿರಸ್ಕ್ರಿಯಾ ಯಸ್ಯ ತದಮಹತಿ ತಚ್ಚ ತತ್ ಕರ್ಮ ಚ ತಸ್ಮಿನ್ ಜ್ಞಾನಜನಕವಾಗದೇ ಇದ್ದುದರಿಂದ ತಿರಸ್ಕೃತವಾದ ಕರ್ಮದಲ್ಲಿ ಎಂದರ್ಥ. ॥೨೫॥

ಪ್ರಾಯಃ ತಿಳಿಯುವದಿಲ್ಲ ಎಂದು ಹೇಳಿದ್ದರಿಂದ ಕೆಲವರು ತಿಳಿಯುವರು ಎಂದಂತಾಯಿತು ಅವರಾರೆಂದು ಹೇಳುವರು.

**ಏವಂ ವಿಮೃಶ್ಯ ಸುಧಿಯೋ ಭಗವತ್ಯನಂತೇ**
**ಸರ್ವಾತ್ಮನಾ ವಿದಧತೇ ಖಲು ಭಾವಯೋಗಮ್ ।**
**ತೇ ಮೇ ನ ದಂಡಮರ್ಹಂತ್ಯಥ ಯದ್ಯಮೀಷಾಂ**
**ಸ್ಯಾತ್ಪಾತಕಂ ತದಪಿ ಹಂತ್ಯುರುಗಾಯವಾದಃ ॥೨೬॥**

**ಸುಧಿಯಃ** ಜ್ಞಾನಿಗಳು **ಏವಂ** ಭಕ್ತಿಸಹಿತವಾದ ಕೀರ್ತನವೇ ಪಾಪಪರಿಹಾರಕ ಮತ್ತು ಮುಕ್ತಿ ಸಾಧಕವೆಂದು **ವಿಮೃಶ್ಯ** ಸರಿಯಾಗಿ ವಿಚಾರಮಾಡಿ **ಸರ್ವಾತ್ಮನಾ** ಎಲ್ಲ ರೀತಿಯಿಂದಲೂ **ಭಗವತಿ** ಐಶ್ವರ್ಯಸಂಪನ್ನನಾದ **ಅನಂತೇ** ದೇಶ-ಕಾಲ-ಗುಣಗಳಿಂದ ಅಂತವಿಲ್ಲದ ಅಥವಾ ಬದ್ಧನಲ್ಲದ ನಿತ್ಯಮುಕ್ತನಾದ ಶ್ರೀಹರಿಯಲ್ಲಿ 'ಮಯ್ಯನಂತಗುಣೇಽನಂತೇ ಗುಣತೋಽನಂತವಿಗ್ರಹೇ' ಎಂದಿದೆ. 'ಅತಿ ಅದಿ ಬಂಧನೇ' ಎಂದು ಧಾತು ವ್ಯಾಖ್ಯಾನವಿದೆ. **ಭಾವಯೋಗಂ** ಭಕ್ತಿರೂಪ ಉಪಾಯವನ್ನು 'ಭಾವೋ ಭಕ್ತಿರಿತಿ ಪ್ರೋಕ್ತಃ' ಎಂದಿದೆ. ಮನಸ್ಸನ್ನಿಡುವನೋ 'ಭಾವಶ್ಚೇಷ್ಟಾತ್ಮಾ' ಎಂದು ವಿಶ್ವವಿದೆ. **ವಿದಧತೇ** ವಿಶೇಷವಾಗಿ ಮಾಡುವರು **ಖಲು** ನಿಶ್ಚಯ **ತೇ** ಆ ಭಗವದ್ಭಕ್ತರು ಪಾಪ ಮಾಡಿದರೂ **ಮೇ** ನನ್ನ ಕಡೆಯಿಂದ **ದಂಡಂ** ಶಿಕ್ಷೆಯನ್ನು **ನ ಅರ್ಹಂತಿ** ಹೊಂದಲು ಯೋಗ್ಯರಲ್ಲ. **ಅಮೀಷಾಂ** ಈ ಭಕ್ತರಿಗೆ **ಪಾತಕಂ** ಪಾಪವು **ಸ್ಯಾತ್ ಯದಿ** ಒಂದು ವೇಳೆ ಬಂದರೂ **ತದಪಿ** ಅದನ್ನು **ಉರುಗಾಯವಾದಃ** ಬ್ರಹ್ಮಾದಿಗಳಿಂದ ಗೀತವಾದ ಮಹಿಮೆಯುಳ್ಳ ಶ್ರೀಹರಿಯ ನಾಮಸಂಕೀರ್ತನವು **ಹಂತಿ** ಹೋಗಲಾಡಿಸುವುದು.

ಸ್ಯಾತ್ ಯದಿ ಎಂದು ಹೇಳಿದ್ದರಿಂದ ಭಗವದ್ಭಕ್ತರು ಪಾಪ ಮಾಡುವುದಿಲ್ಲ ಕರ್ಮಾನುಸಾರ ಒಂದು ವೇಳೆ ಮಾಡಿದರೂ ಅದು ಹೋಗುವುದು. ಎಂದು ಹೇಳಿದಂತಾಯಿತು.

ಭಗವದ್ಭಕ್ತರು ಪಾಪ ಮಾಡಿದರೆ ಇದು ಸಮಯವೆಂದು ಅವರಿಗೆ ನಮಸ್ಕರಿಸಿರಿ ಎಂದು ಹೇಳುವರು ಯಮದೇವರು ಅಥ ಯದ್ಯಮಿಷಾಂ ಎಂದು.

ಉರುಗಾಯವಾದಃ ಪರಮಾತ್ಮನನ್ನು ಮುಖದಿಂದ ಹೇಳುವದು 'ವಾದೋ ವಿಷಯಕತ್ವಂ ಚ ಮುಖತೋ ವಚನಂ ಸ್ಮೃತಮ್' ಎಂದು ಅಭಿಧಾನವಿದೆ ಎಂದು ಗೀತಾಭಾಷ್ಯದಲ್ಲಿದೆ. ಇವರು ಶಿಕ್ಷೆಗೆ ಅರ್ಹರಲ್ಲ.

**ಅಥ ಅಥಾಪಿ** ಆದರೂ **ತದಪಿ** ಆ ಪಾಪವಾದರೂ **ಉರುಗಾಯಾಃ ಉರಂ** ಸರ್ವೋತ್ತಮನಾದ ಹರಿಯನ್ನು **ಗಾಯಂತಿ** ಗಾನ ಮಾಡುವವರು ಉರುಗಾಯರು ಅವರ ಜೊತೆಗೆ **ವಾದಃ** ತೈಃ ಸಹ ವಾದಃ ಸಂಭಾಷಣವು ಎಂದರ್ಥ. ಅಥವಾ **ಉರು** ಜಗತ್ತನ್ನು **ಗಚ್ಛತಿ** ವ್ಯಾಪಿಸುವುದರಿಂದ ಉರುಗನು ಶ್ರೀಹರಿಯು ಉರುಗಾಯೇನ ಅಯಃ ಲಾಭ ಉಳ್ಳ ಶುಭಾವಹದೈವವುಳ್ಳವರಾರೋ ಅವರು ಉರುಗಾಯ

ಅವರೊಡನೆ ಮಾತಾಡುವದು ಉರುಗಾಯವಾದವು **ಹಂತಿ** ನಾಶಮಾಡುವದು. ಅಂದರೆ ಮಹಾಪಾಪಿಗಳು ಯಾರೊಡನೆ ಮಾತಾಡುವದರಿಂದ ಪಾಪಕಳೆದುಕೊಳ್ಳುವರೋ ಅಂಥವರು ನನ್ನಿಂದ ದಮನೀಯರಲ್ಲ ಎಂದೇನು ಹೇಳುವದು ಎಂದು ಭಾವ. 'ತುಲಯಾಮ ಲವೇನಾಽಪಿ ನ ಸ್ವರ್ಗಂ ನಾಽಪುನರ್ಭವಂ । ಭಗವತ್ಸಂಗಿಸಂಗಸ್ಯ...' ಮುಂತಾಗಿ ಇದೆ. ।।೨೬।।

ಕೇಳುವದನ್ನೆಲ್ಲ ಕೇಳಿ ಮಾಡುವದನ್ನು ದೂತರಿಗೆ ಹೇಳುವನು.

**ತೇ ದೇವ(ವೇದ) ಸಿದ್ಧಪರಗೀತಪವಿತ್ರಗಾಥಾ**
**ಯೇ ಸಾಧವಃ ಸಮದೃಶೋ ಭಗವತ್ಪ್ರಪನ್ನಾಃ ।**
**ತಾನ್ ನೋಪಸೀದತ ಹರೇರ್ಗದಯಾಭಿಗುಪ್ತಾನ್**
**ನೈಷಾಂ ಭಯಂ ನ ಚ ವಯಂ ಪ್ರಭವಾಮ ದಂಡೇ ।।೨೭।।**

**ಯೇ** ಯಾರು **ಭಗವತ್ಪ್ರಪನ್ನಾಃ** ಭಗವಂತನನ್ನು ಶರಣು ಹೊಂದಿರುವರೋ **ಸಾಧವಃ** ಪರರನ್ನು ಪೀಡಿಸದಿರುವ ಒಳ್ಳೆ ಸ್ವಭಾವದವರೋ **ಸಮದೃಶಃ** ಎಲ್ಲ ಕಡೆಯಲ್ಲಿಯೂ ಅವರವರ ಯೋಗ್ಯತಾನುಸಾರ ನಿರ್ದೋಷನಾದ ಶ್ರೀಹರಿಯು ಸನ್ನಿಹಿತನೆಂದು ಕಾಣುವರೋ **ಭಗವತ್ಪ್ರಪನ್ನಾಃ** ಭಗವಂತನನ್ನೇ ಶರಣು ಹೊಂದಿರುವರೋ **ತೇ** ಅವರು **ದೇವಸಿದ್ಧಪರಿಗೀತಪವಿತ್ರಗಾಥಾಃ** ದೇವತೆಗಳಿಂದ ಸಿದ್ಧರಿಂದ ಗಾನ ಮಾಡಲ್ಪಡುವ ಪುಣ್ಯವಾದ ಚರಿತ್ರೆಯುಳ್ಳವರು **ವೇದ** ಎಂಬ ಪಾಠದಲ್ಲಿ ವೇದಗಳಿಂದ ಯಾವಾಗಲೂ ಹೇಳಲ್ಪಟ್ಟ ಪುಣ್ಯ ಕಥೆಯುಳ್ಳವರು ಅಥವಾ ವೇದಗಳಿಂದ ಯಾವಾಗಲೂ ಹೇಳಲ್ಪಟ್ಟ ಶ್ರೀಹರಿಯ ಪುಣ್ಯ ಕಥೆಯುಳ್ಳವರು ಆದ್ದರಿಂದಲೇ **ಹರೇಃ** ಶ್ರೀಹರಿಯ **ಗದಯಾ** ಕೌಮೋದಕೀಗದೆಯಿಂದ **ಅಭಿಗುಪ್ತಾನ್** ಎಲ್ಲರೀತಿಯಿಂದ ರಕ್ಷಿತರಾದ **ತಾನ್** ಅಂತಹ ಭಗವದ್ಭಕ್ತರನ್ನು **ನ ಉಪಾಸೀದತ** ನೀವು ಸಮೀಪಿಸಬೇಡಿ ಹತ್ತಿರ ಹೋಗಬೇಡಿ **ಏಷಾಂ** ಇಂತಹ ಭಗವದ್ಭಕ್ತರಿಗೆ **ನ ಭಯಂ** ಯಾವ ಭಯವೂ ಇಲ್ಲ **ಚ** ಮತ್ತು **ವಯಂ** ನಾವು **ದಂಡೇ** ಅವರನ್ನು ಶಿಕ್ಷಿಸಲು **ನ ಪ್ರಭವಾಮ** ಸಮರ್ಥರಲ್ಲ. ಭಗವದ್ಭಕ್ತರಲ್ಲದವರಿಗೆ ನಾನು ಶಿಕ್ಷಕನೆಂದು ಭಾವ.

**ಯೇ ಅದೇವಸಿದ್ಧಪರಿಗೀತಪವಿತ್ರಗಾಥಾಃ ಅಸಾಧವಃ** ಯಾರು ದೇವತೆಗಳಿಂದ ಸಿದ್ಧರಿಂದ ಸ್ತುತ್ಯರಲ್ಲವೋ **ಸಮದೃಶಃ** ಅತ್ಯಂತಜ್ಞಾನಹೀನರೋ **ಅಭಗವತ್ಪ್ರಪನ್ನಾಃ** ಶ್ರೀಹರಿಯ ಮೊರೆ ಹೊಕ್ಕಿಲ್ಲವೋ **ಹರೇಃ ಗದಯಾ ಅಭಿಗುಪ್ತಾನ್** ಶ್ರೀಹರಿಯ

ಗದೆಯಿಂದ ಅವಜ್ಞೆಯಿಂದ ರಕ್ಷಿತರಾದ (ಮಾನ ಪೂರ್ವಕವಲ್ಲ). **ತಾನ್** ಅಂಥವರನ್ನು **ಉಪಾಸೀದತ** ಸಮೀಪಿಸಿರಿ **ಏಷಾಂ ಸಕಾಶಾತ್ ಭಯಂ ನ** ಅಂಥವರಿಂದ ನಮಗೆ ಭಯವಿಲ್ಲ. **ವಯಂ ದಂಡೇ ಪ್ರಭವಾಮ** ಅಂಥವರನ್ನು ಶಿಕ್ಷಿಸಲು ನಾವು ಸಮರ್ಥರು. 'ಅಭಿಪ್ರೇಯಸಃ' ಎಂಬ ಕಾಠಕಖಂಡಾರ್ಥದಲ್ಲಿ ಅವಜ್ಞಾ ಎಂಬರ್ಥದಲ್ಲಿ ಅಭಿ ಎಂಬ ಅವ್ಯಯವನ್ನು ಹೇಳಿದ್ದಾರೆ. 'ಅವ್ಯಯಗಳು ಅನೇಕಾರ್ಥಕಗಳು' ಅಪ ವಿಕೃತವಾದ ಕೃತಿಯುಳ್ಳವರಾಗಿ ನಿರ್ದೇಶಪೂರ್ವಕ ಹರ್ಷದಿಂದ **ಸೀದತ** ಹೋಗಿರಿ. ನಮಗೆ ಅವರಿಂದ ಭಯವಿಲ್ಲ 'ಅಪ ವಿಕೃತೌ ಚೌರ್ಯನಿರ್ದೇಶಹರ್ಷಯೋಃ' ಎಂದು ವಿಶ್ವವಿದೆ. ಹೀಗೂ ಅರ್ಥವನ್ನು ಶ್ರೀಗಳವರು ಮಾಡಿರುವರು. ।।೨೭।।

ಹಾಗಾದರೆ ಶಿಕ್ಷೆಗಾಗಿ ಯಾರನ್ನು ಕರೆದು ತರಬೇಕು ಎಂದರೆ ಎರಡು ಶ್ಲೋಕಗಳಿಂದ ಹೇಳುತ್ತಾರೆ.

**ತಾನಾನಯಧ್ವಮಸತೋ ವಿಮುಖಾನ್ ಮುಕುಂದ-**
**ಪಾದಾರವಿಂದಮಕರಂದರಸಾದಜಸ್ರಮ್ ।**
**ನಿಷ್ಕಿಂಚನೈಃ ಪರಮಹಂಸಕುಲೈಃ ರಸಜ್ಞೈಃ**
**ಜುಷ್ಟಾದ್ ಗೃಹೇ ನಿರಯವರ್ತ್ಮನಿ ಬದ್ಧತೃಷ್ಣಾನ್ ।।೨೮।।**

**ನಿಷ್ಕಿಂಚನೈಃ** ಯಾವ ವಿಷಯಾಭಿಲಾಷೆ ಇಲ್ಲದ **ರಸಜ್ಞೈಃ** ಸಾರವನ್ನರಿತ **ಪರಮಹಂಸಕುಲೈಃ** ಯೋಗಿಗಳ ಸಮೂಹದಿಂದ ಅಥವಾ **ಪರಂ ಅಹಂಸಾಃ** ನಿರ್ಮತ್ಸರರಾದವರ ಸಮೂಹದಿಂದ 'ಹಂಸೋ ಯೋಗಿಮಾತ್ರೇಽಪಿ ಪರಮಾತ್ಮನಿ ಮತ್ಸರೇ' ಎಂದು ವಿಶ್ವವಿದೆ. **ಅಜಸ್ರಂ** ಯಾವಾಗಲೂ **ಜುಷ್ಟಾತ್** ಸೇವಿತವಾದ **ಮುಕುಂದಪಾದಾರವಿಂದಮಕರಂದರಸಾತ್** ಮೋಕ್ಷಪ್ರದನಾದ ಶ್ರೀಹರಿಯ ಪಾದ ಕಮಲಗಳ ಮಕರಂದರಸದಿಂದ **ವಿಮುಖಾನ್** ಹಿಮ್ಮುಖರಾದ (ರಸವನ್ನು ಸೇವಿಸದಿರುವ) ಆದ್ದರಿಂದಲೇ **ನಿರಯವರ್ತ್ಮನಿ** ನರಕಕ್ಕೆ ಹಾದಿಯಾದ **ಗೃಹೇ** ಹೆಂಡತಿ ಮೊದಲಾದವುಗಳಲ್ಲಿ **ಬದ್ಧತೃಷ್ಣಾನ್** ಅತ್ಯಂತ ಆಸಕ್ತರಾದ **ಅಸತಃ** ಲೋಕನಿಂದಿತವಾದ ಕಾರ್ಯಗಳಲ್ಲಿ ನಿರತರಾದ ದುಷ್ಟರಾದ **ತಾನ್** ಭಗವದ್ಭಕ್ತರಲ್ಲದವರನ್ನು **ಆನಯಧ್ವಂ** ಕರೆದು ತನ್ನಿರಿ **ನಿರಯವರ್ತ್ಮನಿ ಗೃಹೇ ಅಸತಃ** ನರಕಮಾರ್ಗವಾದ ಹೆಂಡತಿ ಮುಂತಾದವುಗಳಲ್ಲಿ ಇಲ್ಲದಂತಿರುವ ಆದಕ್ಕೆ ಕಾರಣ **ಬದ್ಧತೃಷ್ಣಾನ್** ಪ್ರತಿಬದ್ಧವಾದ ತೃಷ್ಣೆಯುಳ್ಳ ಅಂದರೆ ಆಶೆಯಿಲ್ಲದಿರುವ **ನಿಷ್ಕಿಂಚನೈಃ ರಸಜ್ಞೈಃ ಪರಮಹಂಸಕುಲೈಃ**

**ಜುಷ್ಟಾತ್ ಮುಕುಂದಪಾದಾರವಿಂದಮಕರಂದರಸಾತ್ ಅಜಸ್ರಂ ಅವಿಮುಖಾನ್** ವಿಮುಖರಾಗದ ತತ್ಪರರಾದ (ರಸಾಸಕ್ತರಾದ) **ತಾನ್** ಭಕ್ತರನ್ನು **ಅ ಆನಯಧ್ವಂ** ತರಬೇಡಿರಿ. 'ಅಃ ಸ್ಯಾತ್ ನಞರ್ಥೇ' ಎಂದು ಹೈಮ ಎಂದು ಭಾನು. ಸವರ್ಣದೀರ್ಘಸಂಧಿ ಛಾಂದಸವೆಂದು ತಿಳಿಯಬೇಕು. ಅಥವಾ ಹಿಂದಿನ ಶ್ಲೋಕದಿಂದ ನ ಎಂಬುದನ್ನು ತಂದು ಆವೃತ್ತಿ ಮಾಡಿಕೊಂಡು ಅನ್ವಯಿಸಬಹುದು. ।।೨೮।।

**ಜಿಹ್ವಾ ನ ವಕ್ತಿ ಭಗವದ್ಗುಣನಾಮಧೇಯಂ**
**ಚೇತಶ್ಚ ನ ಸ್ಮರತಿ ತಚ್ಚರಣಾರವಿಂದಮ್ ।**
**ಕೃಷ್ಣಾಯ ನೋ ನಮತಿ ಯಚ್ಛಿರ ಏಕದಾಽಪಿ**
**ತಾನಾನಯಧ್ವಮಸತೋಽಕೃತವಿಷ್ಣುಕೃತ್ಯಾನ್ ।।೨೯।।**

**ಏಕದಾ ಅಪಿ** ಒಂದು ಸಲವಾದರೂ **ಯಜ್ಜಿಹ್ವಾ** ಯಾರ ನಾಲಿಗೆಯು **ಭಗವದ್ಗುಣನಾಮಧೇಯಂ** ಶ್ರೀಹರಿಯ ಗುಣಗಳನ್ನು ಪ್ರತಿಪಾದಿಸುವ ನಾಮಗಳನ್ನು **ನ ವಕ್ತಿ** ಹೇಳುವದಿಲ್ಲವೋ **ಯಚ್ಚೇತಃ ಚ** ಯಾರ ಮನಸ್ಸು **ತಚ್ಚರಣಾರವಿಂದಂ** ಆ ಶ್ರೀಹರಿಯ ಪಾದಕಮಲಗಳನ್ನು **ನ ಸ್ಮರತಿ** ಸ್ಮರಿಸುವದಿಲ್ಲವೋ **ಯಚ್ಛಿರಃ** ಯಾರ ತಲೆಯು **ಕೃಷ್ಣಾಯ** ಶ್ರೀಹರಿಗೆ **ನೊ ನಮತಿ** ನಮಸ್ಕಾರ ಮಾಡುವದಿಲ್ಲವೋ **ಅಕೃತವಿಷ್ಣುಕೃತ್ಯಾನ್** ಶ್ರೀಹರಿ ಅರ್ಚನೆ ಮೊದಲಾದವನ್ನು ಮಾಡದಿರುವ ಆದ್ದರಿಂಲೇ **ಅಸತಃ** ದುಷ್ಟರಾದ **ತಾನ್** ಆ ಭಗವದ್ಭಕ್ತರಲ್ಲದವರನ್ನು **ಆನಯಧ್ವಂ** ಕರೆತನ್ನಿರಿ. ಇಲ್ಲಿ ಕೀರ್ತನೆ ವಂದನ ಸ್ಮರಣಗಳನ್ನು ಸಾಕ್ಷಾತ್ ಹೇಳಿ ಉಳಿದ ಶ್ರವಣ ಪಾದಸೇವನ ಅರ್ಚನ ದಾಸ್ಯ ಸಖ್ಯ ಆತ್ಮನಿವೇದನಗಳನ್ನು ವಿಷ್ಣುಕೃತ್ಯಾಪದದಿಂದ ತಿಳಿಸಿರುವರು ಎಂದು ತಿಳಿಯಬೇಕು.

**ಯೇಷಾಂ ಜಿಹ್ವಾ** ಯಾರ ನಾಲಿಗೆಯು **ಭಗವದ್ಗುಣನಾಮಧೇಯಂ ನ ವಕ್ತೀತಿ ನ** ಭಗವಂತನ ಗುಣಗಳನ್ನು ಪ್ರತಿಪಾದಿಸುವ ನಾಮಗಳನ್ನು ಹೇಳುವುದಿಲ್ಲವೆಂದಿಲ್ಲವೋ (ಹೇಳುತ್ತದೆಯೋ) **ಚೇತಶ್ಚ ತಚ್ಚರಣಾರವಿಂದಂ ಸ್ಮರತಿ** ಮನಸ್ಸು ಪರಮಾತ್ಮನ ಪಾದಕಮಲವನ್ನು ಸ್ಮರಿಸುವದೋ **ಯಚ್ಛಿರಃ** ಯಾವನ ತಲೆಯು **ಏಕದಾ** ಒಂದು ಸಲ **ತಚ್ಚರಣಾರವಿಂದಂ** ಪರಮಾತ್ಮನ ಪಾದಕಮಲವನ್ನು **ನಮತಿ** ನಮಸ್ಕರಿಸುವದು **ಯಶ್ಚ** ಯಾವನು **ಕೃಷ್ಣಾಯನಃ** ಶ್ರೀಕೃಷ್ಣನೇ ಆಶ್ರಯವೆಂದು ತಿಳಿದವನೋ **ಅಸತಃ ಸಂಸಾರೇ** ಅಸಾರವಾದ ಸಂಸಾರದಲ್ಲಿ **ಅಕೃತವಿಷ್ಣುಕೃತ್ಯಾನ್** ಅಕೃತ್ರಿಮವಾದ ವಿಷ್ಣುಪೂಜಾದಿ

ಕೃತ್ಯವುಳ್ಳ ಅಥವಾ ಕೃತಂ ಎಂದರೆ ಫಲವು ಆದಕ್ಕಾಗಿ ವಿಷ್ಣುಕೃತ್ಯಂ ವಿಷ್ಣುವಿನ ಕರ್ಮಗಳು ಯಾರಿಗೆ ಇಲ್ಲವೋ ಅವರು ಅಕೃತವಿಷ್ಣುಕೃತ್ಯರು ಅಂದರೆ ಫಲಾಪೇಕ್ಷೆಯಿಲ್ಲದೆ ವಿಷ್ಣುಕೃತ್ಯ ಮಾಡಿದವರು ಎಂದರ್ಥ. ಅಥವಾ ಕೃತಂ ಇದು ಸಾಕು ಎಂದು ಅನ್ನದೇ ವಿಷ್ಣುಕೃತ್ಯವುಳ್ಳವರು (ವಿಷ್ಣುಕೃತ್ಯಂ ನ ಭವತಿ ಯೇಷಾಂ ತೇ ಅಕೃತವಿಷ್ಣುಕೃತ್ಯಾಃ ತಾನ್) ವಿಷ್ಣುಪೂಜಾದಿಗಳನ್ನು ಇಷ್ಟು ಸಾಕು ಎನ್ನದೆ ಮಾಡುವವರೆಂದರ್ಥ. 'ಕೃತಂ ಪರ್ಯಾಪ್ತೇ ಫಲೇ' ಎಂದು ವಿಶ್ವವಿದೆ. ಅಥವಾ ವಿಷ್ಣುದ್ವೇಷ ಮಾಡದಿರುವ ಎಂದರ್ಥ. 'ಕೃತ್ಯಂ ವಿದ್ವಿಷ್ಟಕಾರ್ಯಯೋಃ' ಎಂದು ವಿಶ್ವವಿದೆ.

**ಹೇ ಕದ** ಸುಖವನ್ನು ಕೊಡುವ ಸ್ವಾಮಿಯೇ **ಯಚ್ಛಿರಃ** ಯಾವನ ತಲೆಯು **ಏ** ಅಕಾರವಾಚ್ಯನಾದ ಭಗವಂತನಲ್ಲಿ **ನಮತಿ** ಬಾಗುವದೋ ಅಂಥವರನ್ನು **ನ ಆನಯಧ್ವಂ** ತರಬೇಡಿರಿ **ಯಃ** ಯಾವ ಶ್ರೀಹರಿಯು **ಸ್ಮರತಿ** ಸೌಂದರ್ಯದಲ್ಲಿ ಮನ್ಮಥನಂತೆ ಆಚರಿಸುವನೋ **ತಚ್ಚರಣಾರವಿಂದಂ** ಅವನ ಪಾದಾರವಿಂದವನ್ನು **ಯತ್** ಯಾವ ಕಾರಣ **ನ ನಮತಿ** ನಮಸ್ಕರಿಸುವುದಿಲ್ಲವೋ **ಸಃ** ಅವನು **ಕೃಷ್ಣಾಯನಃ ನ ಇತಿ** ಕೃಷ್ಣಾಶ್ರಿತನಲ್ಲವಾದ್ದರಿಂದ **ಅಸತಃ** ಅಮಂಗಲನಾದವನ **ಶಿರಃ** ತಲೆಯನ್ನು **ಆನಯಧ್ವಂ** ತನ್ನಿರಿ.

'ಯತ್ತದಿತ್ಯಾದಯಃ ಶಬ್ದಾಃ ಪಂಚಮ್ಯಂತಾಃ ಪ್ರಕೀರ್ತಿತಾಃ' ಎಂದು ಬೃಹದ್ಭಾಷ್ಯದಲ್ಲಿ ಹೇಳಿದೆ. ಭಗವತ್ಸಂಗಿಗಳ ಸಂಗ ಇಲ್ಲದವರನ್ನು ಕರೆದು ತನ್ನಿರಿ ಎಂದೂ ಹೇಳುವರು. **ಕೃಷ್ಣಾಯನೋನಂ** ಎಂದು ಕೃಷ್ಣಾಯನೇನ ಊನಂ ಅಂದರೆ ಭಗವದಾಶ್ರಯರಾದ ಜನರಿಂದ ರಹಿತನಾದವನನ್ನು **ಅತಿ** ಅತಿಕ್ರಮಿಸಿ **ತಸ್ಯ ಅಸತಃ ಶಿರಃ ಆನಯಧ್ವಂ** ಆ ದುಷ್ಟನ ತಲೆಯನ್ನು ತನ್ನಿ. 'ಅತಿ ಲಂಘನೇ' ಎಂದು ವಿಶ್ವವಿದೆ.

**ರತಿತಚ್ಚರಣರಾವಿಂದಂ** ಎಂದು ಪದ ಇಟ್ಟುಕೊಂಡು ಅರ್ಥ ರಾತಂ ಎಂದರೆ ರತಿ. ರಾತಂ ಅಸ್ಯ ಅಸ್ತೀತಿ ರತಿಃ ರತಿ ಎಂದರೆ ಭಕ್ತನು ಎಂದು ಅರ್ಥ. ತತ್ ಎಂದರೆ ತದ್ವತ್ ಎಂದು ಅರ್ಥ. ಭಕ್ತನಂತೆ. ಪ್ರಥಮತಾತ್ಪರ್ಯದಲ್ಲಿ ತದ್ವೈ ಧನುಃ ಎಂಬ ಶ್ಲೋಕ ವ್ಯಾಖ್ಯಾನಿಸುವಾಗ ಸ ರಥೋ ಹಯಾಸ್ತೇ ಎಂಬುದಕ್ಕೆ ತತ್ಸದೃಶಾಃ ಎಂದು ಅರ್ಥ ಮಾಡಿದ್ದಾರೆ. ಏಕೆಂದರೆ ಅದೇ ರಥ ಕುದುರೆಗಳು ಇಲ್ಲಿ ಸುಟ್ಟು ಹೋಗಿವೆ ಎಂದು. ಹದಿನಾಲ್ಕನೇ ಅಧ್ಯಾಯದಲ್ಲಿ ತೇ ಇಷವಃ ಎಂಬಂತೆ ಇಲ್ಲಿ ತತ್ ಎಂದಿದ್ದಾರೆ. 'ಸದೃಶೇ

ವಾ ಪ್ರಧಾನೇ ವಾ ಕಾರಣೇ ವಾ ತದಿತ್ಯಯಂ । ಶಬ್ದಃ ಸಂಘಟತೇ ಭೇದೇ ವಿದ್ಯಮಾನೇऽಪಿ ತತ್ತ್ವತಃ' ಎಂದು ಬ್ರಹ್ಮತರ್ಕದಲ್ಲಿದೆ.

**ಚರಣಾರವಿಂದಂ** ರವಿಂ ದ್ಯತಿ ಖಂಡಯತೀತಿ ರವಿಂದಂ ಎಂದರೆ ಅಂಧಕಾರವು. 'ರವಿಂದಂ ಅಂಧಕಾರೇ ಸ್ಯಾತ್' ಎಂದು ಜಯಕೋಶವಿದೆ. ತತ್ ನ ವಿದ್ಯತೇ ಯೇನ ತತ್ ಅರವಿಂದಂ ಅಂಧಕಾರನಾಶಕವಾದ **ಚರಣಂ** ಚಕ್ರವು ಯಸ್ಯ ಸಃ ಅರವಿಂದಚರಣಃ ತಂ ಅಂಧಕಾರನಾಶಕ ಚಕ್ರ ಉಳ್ಳವನೆಂದರ್ಥ.

ಯತ್ ಎಲ್ಲಿ ಧೇಯಂ ಇಡಬೇಕೋ ಅಲ್ಲಿ ನ ಇಟ್ಟಿಲ್ಲವೋ ಅದು ಅಧೇಯಂ ಅದು **ನ ಚೇತಃ** ಮನಸ್ಸೇ ಅಲ್ಲ. ಆ ಮನಸ್ಸಿಗೆ ಮನಸ್ತ್ವವೇ ಇಲ್ಲವೆಂದರ್ಥ. ಯತ್ ಎಂಬುದು ಅವ್ಯಯವಾದ್ದರಿಂದ ಯತ್ರ ಎಂದಾಗುವದು ಎಂದು ಬೃಹದ್ಭಾಷ್ಯದಲ್ಲಿದೆ. **ಯಾ** ಯಾವದು **ಭಗವದ್ಗುಣಾನಾಂ** ಭಗವಂತ ಭಗವಂತ ಎಂದು ಗುಣಗಾನವನ್ನು ಅಭ್ಯಾಸವನ್ನು (ಆವೃತ್ತಿಯನ್ನು) **ನ ಅಕೃತ** ಮಾಡಿಲ್ಲವೋ **ಸಾ** ಅದು **ಜಿಹ್ವಾ ನ** ನಾಲಿಗೆಯೇ ಅಲ್ಲ.

ಯಚ್ಚ ನ ಸ್ಮರತಿ ತಚ್ಚರಣಾರವಿಂದಂ ಧ್ಯೇಯಂ ನ ಇತಿ ತಚ್ಚೇತಃ ಚೇತಃ ಇತಿ ಜನಃ ನ ವಕ್ತಿ ಯಾವ ಮನಸ್ಸು ಶ್ರೀಹರಿಪಾದವನ್ನು ಧ್ಯೇಯವಲ್ಲವೆಂದು ಸ್ಮರಿಸುವದಿಲ್ಲವೋ ಅಂತಹ ಮನಸ್ಸನ್ನು ಜನರು ಮನಸ್ಸು ಎನ್ನಲಾರರು ಎಂದರ್ಥ. 'ಗುಣನಿಕಾ ಚರಣಾದಿಕಗೋಚರಾ' ಎಂದು ಮಧ್ವವಿಜಯದಲ್ಲಿದೆ. **ವಿಷ್ಣುಕೃತ್ಯಾನ್** ವಿಷ್ಣುದ್ವೇಷಿಗಳನ್ನು ತನ್ನಿರಿ. ವಿಷ್ಣುವಿನ ಕೃತ್ಯವುಳ್ಳವರನ್ನು ತರಬೇಡಿರಿ. ಎಂದು ಎರಡೂ ಪಕ್ಷದಲ್ಲಿ ಅರ್ಥ ತಿಳಿಯಬೇಕು.

ಇತಶ್ಚ ಇತೋऽಪಿ ಇಷ್ಟು ಅನ್ವಯ-ವ್ಯತಿರೇಕದಿಂದ ಉತ್ತಮತೆ ಅನುಭವವಾದರೂ **ಯಾ ಜಿಹ್ವಾ** ಯಾವ ನಾಲಿಗೆಯು ಭಗವದ್ಗುಣನಾಮಧಾ ನ ಭಗವಂತನ ಗುಣಬೋಧಕ ನಾಮಗಳನ್ನು ಧರಿಸುವದಿಲ್ಲವೋ **ಇಯಂ** ಇದನ್ನು **ಜನತಾ** ಜನಸಮೂಹವೂ ಸಾ ನೇತಿ ವಕ್ತಿ ಅದು ಇಲ್ಲವೆಂದೇ ಹೇಳುವರು. **ಯಾ ಜಿಹ್ವಾ ಭಗವತ್** ಯಾವ ನಾಲಿಗೆಯು ಐಶ್ವರ್ಯಶಾಲಿ **ಗುಣನಾಮಧಾ** ಗುಣನಾಮಧಾರಕನಾದ ಬ್ರಹ್ಮ ಎಂದು **ನ ವಕ್ತಿ** ಹೇಳುವದಿಲ್ಲವೋ **ಸಾ** ಆ ನಾಲಿಗೆಯು ಇಯಂ ದಾರ್ದುರಿಕೀ ಎಂದು ಹೇಳಿದ್ದು ಎಂದರ್ಥ. ಬುದ್ಧಿ ಸನ್ನಿಹಿತವಾದ್ದರಿಂದ **ಇಯಂ** ಎಂದು ಹೇಳಿದೆ ಎನ್ನುತ್ತಾರೆ ಶ್ರೀಗಳು.




**ಯದ್ಯಪಿ ಪದ್ಯೇ ಪದ್ಯೇऽರ್ಥಸ್ಯ ವಿದ್ಯತೇ ಹೃದ್ಯತಾ ।**
**ವಿಸ್ತರದುಸ್ತರದರತೋ ವಿರತಂ ನ ರತಂ ಮನೋ ಮಮೇತಿ ವಿದ್ಧಿ ॥**

ಈ ಶ್ಲೋಕದ ಅರ್ಥದಲ್ಲಿ ಇನ್ನು ಸಾಕಷ್ಟು ಮನೋಹರತೆ ಇದೆ ಆದರೆ ಬಹಳ ವಿಸ್ತಾರದ ಭಯದಿಂದ ನಮ್ಮ ಮನಸ್ಸು ವಿರಾಮ ಹೊಂದಿದೆ ವಿಸ್ತಾರದಲ್ಲಿ ಆಸಕ್ತವಾಗಿಲ್ಲವೆಂದು ತಿಳಿ ಎನ್ನುತ್ತಾರೆ.

ಮೇಲೆ ಹೇಳಿದಂತೆ ತಮ್ಮಿಂದ ದಂಡ್ಯರನ್ನು ತಿಳಿಸಿ ಈಗ ಶ್ರೀಹರಿಯ ಭಜನೆಯೇ ಸಮಸ್ತಪಾಪನಿವರ್ತಕವೆಂದೂ ಕೇವಲ ಕರ್ಮಗಳಲ್ಲವೆಂದೂ ಹೇಳಿ ತಮ್ಮ ಉಪದೇಶವನ್ನು ಮುಗಿಸುತ್ತಾರೆ.

**ಕೃಷ್ಣಾಂಘ್ರಿಪದ್ಮಮಧುಲಿಟ್ ನ ಪುನರ್ವಿಸೃಷ್ಟ -**
**ಮಾಯಾಗುಣೇಷು ರಮತೇ ವೃಜಿನಾವಹೇಷು ।**
**ಅನ್ಯಸ್ತು ಕಾಮಹತ ಆತ್ಮರಜಃ ಪ್ರಮಾರ್ಷ್ಟು-**
**ಮೀಹೇತ ಕರ್ಮ ಯತ ಏವ ರಜಃ ಪುನಃ ಸ್ಯಾತ್ ॥೩೦॥**

**ಕೃಷ್ಣಾಂಘ್ರಿಪದ್ಮಮಧುಲಿಟ್** ಶ್ರೀಕೃಷ್ಣನ ಪಾದಕಮಲಗಳ ಮಕರಂದವನ್ನು ಆಸ್ವಾದಿಸುವ ಅಧಿಕಾರಿಯು **ಪುನಃ** ಮತ್ತೆ **ವೃಜಿನಾವಹೇಷು** ಪಾಪವನ್ನು ತಂದುಕೊಡುವ ಸಂಸಾರಕ್ಕೆ ಕಾರಣಗಳಾದ **ವಿಸೃಷ್ಟಮಾಯಾಗುಣೇಷು** ತನ್ನ ಕರ್ಮಗಳಿಂದ ಫಲವಾಗಿ ನಿರ್ಮಿತಗಳಾದ ಪ್ರಾಕೃತ ವಿಷಯಗಳಲ್ಲಿ ಅಥವಾ ವಿಷ್ಣು ಭಕ್ತಿಯಿಂದ ಹೇಯವೆಂದು ಬಿಡಲ್ಪಟ್ಟ ಮಮತಾದಿಗುಣಗಳಲ್ಲಿ **ನ ರಮತೇ** ವಿಷಯಾನುಭವವೇ ಪರಮಪುರುಷಾರ್ಥವೆಂದು ತಿಳಿದು ಆಸಕ್ತನಾಗುವದಿಲ್ಲ. ಅವನನ್ನು ತರಬೇಡಿ. **ಅನ್ಯಃ ತು** ಶ್ರೀಹರಿಯ ಪಾದಕಮಲಮಧುವನ್ನು ಆಸ್ವಾದಿಸದವನು **ಕಾಮಹತಃ ಸನ್** ವಿಷಯೇಚ್ಛೆಯಿಂದ ಪ್ರತಿಹತನಾಗಿ **ಯತಃ** ಯಾವ ಕರ್ಮದಿಂದ **ಪುನಃ** ಮತ್ತೆ **ರಜ ಏವ ಸ್ಯಾತ್** ರಾಗವು ಪಾಪವೂ ಬರುವದೋ **ತತ್**(ಕರ್ಮ) ಅಂತಹ ಪ್ರಾಯಶ್ಚಿತ್ತಾದಿಕರ್ಮಗಳನ್ನು **ಆತ್ಮರಜಃ** ತಮ್ಮ ಪಾಪಗಳನ್ನು **ಪ್ರಮಾರ್ಷ್ಟುಂ** ಸಮೂಲನಾಶಮಾಡಿಕೊಳ್ಳಲು **ಈಹೇತ** ಬಯಸುವನು.

ತು ಶಬ್ದದಿಂದ ಕೆಸರಿನಿಂದ ಕೆಸರನ್ನು ತೊಳೆದಂತೆ ಪಾಪಪರಿಹಾರಕವೆಂದು ಮಾಡಿದ ಭಗವದ್ಭಕ್ತಿ ಇಲ್ಲದ ಪ್ರಾಯಶ್ಚಿತ್ತಾದಿಗಳಿಂದ ಪವಿತ್ರನಾಗುವದಿಲ್ಲವೆಂದು ಸೂಚಿಸುವರು. ಸಮೂಲಪಾಪನಾಶಕವಾಗದು ಎಂದು ಭಾವ. ಇವನನ್ನು ಕರೆ ತನ್ನಿ.

ವಾ ಪ್ರಧಾನೇ ವಾ ಕಾರಣೇ ವಾ ತದಿತ್ಯಯಂ । ಶಬ್ದಃ ಸಂಘಟತೇ ಭೇದೇ ವಿದ್ಯಮಾನೇಽಪಿ ತತ್ತ್ವತಃ' ಎಂದು ಬ್ರಹ್ಮತರ್ಕದಲ್ಲಿದೆ.

**ಚರಣಾರವಿಂದಂ** ರವಿಂ ದ್ಯತಿ ಖಂಡಯತೀತಿ ರವಿಂದಂ ಎಂದರೆ ಅಂಧಕಾರವು. 'ರವಿಂದಂ ಅಂಧಕಾರೇ ಸ್ಯಾತ್' ಎಂದು ಜಯಕೋಶವಿದೆ. ತತ್ ನ ವಿದ್ಯತೇ ಯೇನ ತತ್ ಅರವಿಂದಂ ಅಂಧಕಾರನಾಶಕವಾದ **ಚರಣಂ** ಚಕ್ರವು ಯಸ್ಯ ಸಃ ಅರವಿಂದಚರಣಃ ತಂ ಅಂಧಕಾರನಾಶಕ ಚಕ್ರ ಉಳ್ಳವನೆಂದರ್ಥ.

ಯತ್ ಎಲ್ಲಿ ಧೇಯಂ ಇಡಬೇಕೋ ಅಲ್ಲಿ ನ ಇಟ್ಟಿಲ್ಲವೋ ಅದು ಅಧೇಯಂ ಅದು **ನ ಚೇತಃ** ಮನಸ್ಸೇ ಅಲ್ಲ. ಆ ಮನಸ್ಸಿಗೆ ಮನಸ್ತ್ವವೇ ಇಲ್ಲವೆಂದರ್ಥ. ಯತ್ ಎಂಬುದು ಅವ್ಯಯವಾದ್ದರಿಂದ ಯತ್ರ ಎಂದಾಗುವದು ಎಂದು ಬೃಹದ್ಭಾಷ್ಯದಲ್ಲಿದೆ. **ಯಾ** ಯಾವದು **ಭಗವದ್ಗುಣಾನಾಂ** ಭಗವಂತ ಭಗವಂತ ಎಂದು ಗುಣಗಾನವನ್ನು ಅಭ್ಯಾಸವನ್ನು (ಆವೃತ್ತಿಯನ್ನು) **ನ ಅಕೃತ** ಮಾಡಿಲ್ಲವೋ **ಸಾ** ಅದು **ಜಿಹ್ವಾ ನ** ನಾಲಿಗೆಯೇ ಅಲ್ಲ.

ಯಚ್ಚ ನ ಸ್ಮರತಿ ತಚ್ಚರಣಾರವಿಂದಂ ಧ್ಯೇಯಂ ನ ಇತಿ ತಚ್ಚೇತಃ ಚೇತಃ ಇತಿ ಜನಃ ನ ವಕ್ತಿ ಯಾವ ಮನಸ್ಸು ಶ್ರೀಹರಿಪಾದವನ್ನು ಧ್ಯೇಯವಲ್ಲವೆಂದು ಸ್ಮರಿಸುವದಿಲ್ಲವೋ ಅಂತಹ ಮನಸ್ಸನ್ನು ಜನರು ಮನಸ್ಸು ಎನ್ನಲಾರರು ಎಂದರ್ಥ. 'ಗುಣನಿಕಾ ಚರಣಾದಿಕಗೋಚರಾ' ಎಂದು ಮಧ್ವವಿಜಯದಲ್ಲಿದೆ. **ವಿಷ್ಣುಕೃತ್ಯಾನ್** ವಿಷ್ಣುದ್ವೇಷಿಗಳನ್ನು ತನ್ನಿರಿ. ವಿಷ್ಣುವಿನ ಕೃತ್ಯವುಳ್ಳವರನ್ನು ತರಬೇಡಿರಿ. ಎಂದು ಎರಡೂ ಪಕ್ಷದಲ್ಲಿ ಅರ್ಥ ತಿಳಿಯಬೇಕು.

ಇತಶ್ಚ ಇತೋಽಪಿ ಇಷ್ಟು ಅನ್ವಯ-ವ್ಯತಿರೇಕದಿಂದ ಉತ್ತಮತೆ ಅನುಭವವಾದರೂ **ಯಾ ಜಿಹ್ವಾ** ಯಾವ ನಾಲಿಗೆಯು ಭಗವದ್ಗುಣನಾಮಧಾ ನ ಭಗವಂತನ ಗುಣಬೋಧಕ ನಾಮಗಳನ್ನು ಧರಿಸುವದಿಲ್ಲವೋ **ಇಯಂ** ಇದನ್ನು **ಜನತಾ** ಜನಸಮೂಹವೂ ಸಾ ನೇತಿ ವಕ್ತಿ ಅದು ಇಲ್ಲವೆಂದೇ ಹೇಳುವರು. **ಯಾ ಜಿಹ್ವಾ ಭಗವತ್** ಯಾವ ನಾಲಿಗೆಯು ಐಶ್ವರ್ಯಶಾಲಿ **ಗುಣನಾಮಧಾ** ಗುಣನಾಮಧಾರಕನಾದ ಬ್ರಹ್ಮ ಎಂದು **ನ ವಕ್ತಿ** ಹೇಳುವದಿಲ್ಲವೋ **ಸಾ** ಆ ನಾಲಿಗೆಯು ಇಯಂ ದಾರ್ದುರಿಕೀ ಎಂದು ಹೇಳಿದ್ದು ಎಂದರ್ಥ. ಬುದ್ಧಿ ಸನ್ನಿಹಿತವಾದ್ದರಿಂದ **ಇಯಂ** ಎಂದು ಹೇಳಿದೆ ಎನ್ನುತ್ತಾರೆ ಶ್ರೀಗಳು.

**ಯದ್ಯಪಿ ಪದ್ಯೇ ಪದ್ಯೇಽರ್ಥಸ್ಯ ವಿದ್ಯತೇ ಹೃದ್ಯತಾ ।**
**ವಿಸ್ತರದುಸ್ತರದರತೋ ವಿರತಂ ನ ರತಂ ಮನೋ ಮಮೇತಿ ವಿದ್ಧಿ ॥**

ಈ ಶ್ಲೋಕದ ಅರ್ಥದಲ್ಲಿ ಇನ್ನು ಸಾಕಷ್ಟು ಮನೋಹರತೆ ಇದೆ ಆದರೆ ಬಹಳ ವಿಸ್ತಾರದ ಭಯದಿಂದ ನಮ್ಮ ಮನಸ್ಸು ವಿರಾಮ ಹೊಂದಿದೆ ವಿಸ್ತಾರದಲ್ಲಿ ಆಸಕ್ತವಾಗಿಲ್ಲವೆಂದು ತಿಳಿ ಎನ್ನುತ್ತಾರೆ.

ಮೇಲೆ ಹೇಳಿದಂತೆ ತಮ್ಮಿಂದ ದಂಡ್ಯರನ್ನು ತಿಳಿಸಿ ಈಗ ಶ್ರೀಹರಿಯ ಭಜನೆಯೇ ಸಮಸ್ತಪಾಪನಿವರ್ತಕವೆಂದೂ ಕೇವಲ ಕರ್ಮಗಳಲ್ಲವೆಂದೂ ಹೇಳಿ ತಮ್ಮ ಉಪದೇಶವನ್ನು ಮುಗಿಸುತ್ತಾರೆ.

**ಕೃಷ್ಣಾಂಘ್ರಿಪದ್ಮಮಧುಲಿಟ್ ನ ಪುನರ್ವಿಸೃಷ್ಟ -**
**ಮಾಯಾಗುಣೇಷು ರಮತೇ ವೃಜಿನಾವಹೇಷು ।**
**ಅನ್ಯಸ್ತು ಕಾಮಹತ ಆತ್ಮರಜಃ ಪ್ರಮಾರ್ಷ್ಟು-**
**ಮೀಹೇತ ಕರ್ಮ ಯತ ಏವ ರಜಃ ಪುನಃ ಸ್ಯಾತ್ ॥೩೦॥**

**ಕೃಷ್ಣಾಂಘ್ರಿಪದ್ಮಮಧುಲಿಟ್** ಶ್ರೀಕೃಷ್ಣನ ಪಾದಕಮಲಗಳ ಮಕರಂದವನ್ನು ಆಸ್ವಾದಿಸುವ ಅಧಿಕಾರಿಯು **ಪುನಃ** ಮತ್ತೆ **ವೃಜಿನಾವಹೇಷು** ಪಾಪವನ್ನು ತಂದುಕೊಡುವ ಸಂಸಾರಕ್ಕೆ ಕಾರಣಗಳಾದ **ವಿಸೃಷ್ಟಮಾಯಾಗುಣೇಷು** ತನ್ನ ಕರ್ಮಗಳಿಂದ ಫಲವಾಗಿ ನಿರ್ಮಿತಗಳಾದ ಪ್ರಾಕೃತ ವಿಷಯಗಳಲ್ಲಿ ಅಥವಾ ವಿಷ್ಣು ಭಕ್ತಿಯಿಂದ ಹೇಯವೆಂದು ಬಿಡಲ್ಪಟ್ಟ ಮಮತಾದಿಗುಣಗಳಲ್ಲಿ **ನ ರಮತೇ** ವಿಷಯಾನುಭವವೇ ಪರಮಪುರುಷಾರ್ಥವೆಂದು ತಿಳಿದು ಆಸಕ್ತನಾಗುವದಿಲ್ಲ. ಅವನನ್ನು ತರಬೇಡಿ. **ಅನ್ಯಃ ತು** ಶ್ರೀಹರಿಯ ಪಾದಕಮಲಮಧುವನ್ನು ಆಸ್ವಾದಿಸದವನು **ಕಾಮಹತಃ ಸನ್** ವಿಷಯೇಚ್ಛೆಯಿಂದ ಪ್ರತಿಹತನಾಗಿ **ಯತಃ** ಯಾವ ಕರ್ಮದಿಂದ **ಪುನಃ** ಮತ್ತೆ **ರಜ ಏವ ಸ್ಯಾತ್** ರಾಗವು ಪಾಪವೂ ಬರುವದೋ **ತತ್**(ಕರ್ಮ) ಅಂತಹ ಪ್ರಾಯಶ್ಚಿತ್ತಾದಿಕರ್ಮಗಳನ್ನು **ಆತ್ಮರಜಃ** ತಮ್ಮ ಪಾಪಗಳನ್ನು **ಪ್ರಮಾರ್ಷ್ಟುಂ** ಸಮೂಲನಾಶಮಾಡಿಕೊಳ್ಳಲು **ಈಹೇತ** ಬಯಸುವನು.

ತು ಶಬ್ದದಿಂದ ಕೆಸರಿನಿಂದ ಕೆಸರನ್ನು ತೊಳೆದಂತೆ ಪಾಪಪರಿಹಾರಕವೆಂದು ಮಾಡಿದ ಭಗವದ್ಭಕ್ತಿ ಇಲ್ಲದ ಪ್ರಾಯಶ್ಚಿತ್ತಾದಿಗಳಿಂದ ಪವಿತ್ರನಾಗುವದಿಲ್ಲವೆಂದು ಸೂಚಿಸುವರು. ಸಮೂಲಪಾಪನಾಶಕವಾಗದು ಎಂದು ಭಾವ. ಇವನನ್ನು ಕರೆ ತನ್ನಿ.

ನಮ್ಮಲ್ಲಿ ಬರುವವರು ಎರಡು ವಿಧ. ಸ್ವಲ್ಪದಿನ ನಮ್ಮಲ್ಲಿದ್ದು ತಮ್ಮ ಕರ್ಮಗಳು ಕಳೆದ ನಂತರ ಭಗವಲ್ಲೋಕಕ್ಕೆ ಹೋಗುವವರು. ಇನ್ನು ಕೆಲವರು ಮೇಲೇಳದ ಸ್ಥಾನದಲ್ಲಿಯೇ ಇಡಬೇಕಾದವರು. ಇವರಿಬ್ಬರನ್ನೂ ತರುವದು ಯುಕ್ತವೇ. ಕಾರಣ ನಾನು ಹೇಳಿದ್ದು ಯುಕ್ತವೇ ಎಂದು ಅಭಿಪ್ರಾಯ. ಬಹಿರಂಗವಾಗಿ ಆಂತರಂಗಿಕವಾಗಿ ನಾವು ಉಪಪಾದಿಸಿದುದನ್ನು (ಅಭಿಪ್ರಾಯವನ್ನು) ವ್ಯಾಸರು ಪುನಃ ನರಮತೇಽನ್ಯಃ ಎಂಬ ಪದಗಳಿಂದಲೂ ತು ಶಬ್ದದಿಂದಲೂ ತಿಳಿಸಿರುವರು. ವೃಜಿನ ವ್ರಜನ ಎರಡೂ ಶಬ್ದಗಳಿವೆ. ವಿಸೃಷ್ಟ ಪದಕ್ಕೆ ತ್ಯಾಗ ಎಂಬರ್ಥವೇ ಯೋಗ್ಯ. ಹಿಂದೆ ಹೇಳಿದ ಕುಂಜರಶೌಚವತ್ ಎಂಬುದು ಹೊಂದುವದು. ।।೩೦।।

ದೂತರು ಮಾಡಿದ ಅಪರಾಧ ಅವರಿಗೆ ಮಾತ್ರ ಪರ್ಯವಸಾನವಾಗದು. ಯಜಮಾನನಿಗೂ ಬಹಳ ಫಲ ಕೊಡುವದು ಎಂದು ಭೀತನಾದ ಪ್ರೇತನಾಥನು ಶ್ರೀನಾಥನನ್ನು ಕ್ಷಮೆ ಕೇಳುವನೆಂದು ಹೇಳುವರು.

**ತತ್ ಕ್ಷಮ್ಯತಾಂ ಸ ಭಗವಾನ್ ಪುರುಷಃ ಪುರಾಣೋ**
**ನಾರಾಯಣಃ ಸ್ವಪುರುಷೈರ್ಯದಸತ್ಕೃತಂ ನಃ ।**
**ಸ್ವಾನಾಮಹೋ ನ ವಿದುಷಾಂ ರಚಿತಾಂಜಲೀನಾಂ**
**ಕ್ಷಾಂತಿರ್ಗರೀಯಸಿ ನಮಃ ಪುರುಷಾಯ ಭೂಮ್ನೇ ।।೩೧।।**

**ಪುರಾಣಃ ಪುರುಷಃ** ಪುರಾತನನಾದ ಶರೀರಸ್ಥನಾದ ಪೂರ್ಣಷಡ್ಗುಣನಾದ ಪಾಪಪಾವಕನಾದ 'ಉಷಣಾತ್ ಸರ್ವಪಾಪಾನಾಂ ಪೂರ್ಣಃ ಪುರುಷ ಉಚ್ಯತೇ' ಎಂದು ಬೃಹದ್ಭಾಷ್ಯದಲ್ಲಿದೆ. **ಭಗವಾನ್** ಐಶ್ವರ್ಯಶಾಲಿಯಾದ **ಸಃ ನಾರಾಯಣಃ** ಭಕ್ತರಿಂದ ಉಪಾಸ್ಯನಾದ ಸಮಸ್ತ ಪಾಪಗಳನ್ನು ಪರಿಹರಿಸುವ ಶ್ರೀಹರಿಯು **ಸ್ವ ಪುರುಷೈಃ** ನನ್ನ ಭೃತ್ಯರಿಂದ **ಯತ್ ಅಸತ್ಕೃತಂ** ಶ್ರೀಹರಿಯ ಭಕ್ತಿಯುಕ್ತ ನಾಮೋಚ್ಚಾರಣೆಯಿಂದ ಶುದ್ಧನಾದ ಅಜಾಮಿಳನನ್ನು ಶಿಕ್ಷೆಗಾಗಿ ಕರೆತರುವುದೆಂಬ ಅನ್ಯಾಯವು ನಡೆಯಿತೋ **ನಃ** ನಮ್ಮ **ತತ್** ಆ ಅಪರಾಧವನ್ನು **ಕ್ಷಮ್ಯತಾಂ** ಕ್ಷಮಸಲಿ. ಭೃತ್ಯರು ಮಾಡಿದ್ದು ನಾನು ಮಾಡಿದಂತೆಯೇ. ಆದ್ದರಿಂದ ನನ್ನ ಈ ಅಪರಾಧವನ್ನು ಕ್ಷಮಿಸಲಿ ಎಂದರ್ಥ. ಕೇಳಿಕೊಂಡ ಮೇಲೆಯಂತೂ ಕ್ಷಮಿಸಿಯೇ ಕ್ಷಮಿಸುವನು ಎಂಬ ಭರವಸೆಯನ್ನು ಹೇಳುತ್ತಾರೆ. **ನ ವಿದುಷಾಂ** ಶ್ರೀಹರಿಯ ಮಾಹಾತ್ಮ್ಯವನ್ನು (ಸಂಪೂರ್ಣವಾಗಿ) ಅರಿಯದ ಆದರೆ **ಭೂಮ್ನೇ** ಗುಣ ಪೂರ್ಣನಾದ **ಪುರುಷಾಯ**

ಅತಿಶಯಫಲದಾಯಕನಾದ ಶ್ರೀಹರಿಗೆ **ನಮಃ** ನಮಸ್ಕಾರವು ಎಂದು **ರಚಿತಾಂಜಲೀನಾಂ** ಕೈ ಮುಗಿದಿರುವ **ಸ್ವಾನಾಂ** ತನ್ನ ಭಕ್ತರ ವಿಷಯದಲ್ಲಿ **ವರೀಯಸಿ** ಸರ್ವೋತ್ತಮನಾದ ಶ್ರೀಹರಿಯಲ್ಲಿ **ಕ್ಷಾಂತಿಃ** ಕ್ಷಮಾಗುಣವು **ಭವತಿ** ಇದ್ದೇ ಇದೆ **ಅಹೋ** ಆಶ್ಚರ್ಯ.

ಮಹಾಂತರಲ್ಲೇ ಕ್ಷಮಾಗುಣವಿರುವಾಗ ಮಹತ್ತಮನಾದ ಶ್ರೀಹರಿಯಲ್ಲಿ ಇದ್ದೇ ಇರುವದು ಎಂದು **ವರಿಯಸಿ** ಎಂಬುದರಿಂದ ತಿಳಿಸಿರುವರು. ಸಪ್ತಮೀ ವಿಭಕ್ತಿಯಿಂದ ಮಹಾಂತರಲ್ಲಿ ಯಾವಾಗಲೂ ಇರುವದು ಎಂದು ಸೂಚಿಸಿರುವರು. ಯದ್ಯಪಿ ಯಮದೇವರು ಶ್ರೀಹರಿಯ ಮಹಿಮೆಯನ್ನು ಬಲ್ಲರು. ಭೃತ್ಯರಿಗೆ ಅವರು ಮಾಡಿದ ಮೇಲಿನ ಉಪದೇಶದಿಂದಲೇ ಇದು ವ್ಯಕ್ತವಾಗುವದು. ಆದರೂ ತಾವು ತಮಗಿಂತ ಉತ್ತಮರು ತಿಳಿದಷ್ಟು ತಿಳಿದಿಲ್ಲವೆಂದು ಆಗಲಿ ಅಪರಾಧ ಮಾಡಿದ ತಮ್ಮ ಭೃತ್ಯರಿಗೆ ತಿಳಿಯದೆಂದಾಗಲಿ ಹಾಗೆ ಹೇಳಿರುವರು ಎಂದು ತಿಳಿಯಬೇಕು. ಅಂಜಲಿ ರಚನೆಯೇ ಕ್ಷಮೆಗಾಗಿ ಕೊಡುವ ದಂಡವೆಂದು ಆ ಪದದಿಂದಲೂ ಅನಾಯಾಸವಾದ ಈ ದಂಡವೇ ಸಾಕೆಂದು ನಮಃ ಪದದಿಂದಲೂ ಸ್ವಾಭಾವಿಕವಾಗಿ ಕ್ಷಮಾಶೀಲನಾದ ಶ್ರೀಹರಿಗೆ ದ್ರವ್ಯಾದಿ ದಂಡಕ್ಕಿಂತ ಇದರಿಂದಲೇ ಹೆಚ್ಚು ತೃಪ್ತಿ ಎಂದು ಕ್ಷಾಂತಿ ಎಂಬ ಪದದಿಂದ ತಿಳಿಸಿರುವರು 'ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ' ಎಂಬ ಶ್ರುತಿಯು ಇದನ್ನೇ ಹೇಳುವದು. ಇಲ್ಲಿ ಅಪರಾಧಕ್ಷಮೆಗೆ ಮೂರು ಕಾರಣಗಳನ್ನು ಹೇಳಿರುವರು.

೧. ಶ್ರೀಹರಿಯ ಭಕ್ತರಾದ್ದರಿಂದ ೨. ಹರಿಯ ಮಹಿಮೆಯನ್ನು ಅರಿಯದ್ದರಿಂದ ೩. ನಮಃ ಎಂದು ಕೈ ಜೋಡಿಸಿದ್ದರಿಂದ ಎಂದು ತಿಳಿಯಬೇಕು. (ಮತ್ತೇನನ್ನೂ ಕೊಡಲು ಸಾಧ್ಯವಿಲ್ಲದೆ) ಅಹೋ ಎಂಬುದರಿಂದ ಕೇವಲ ನಮಃ ಎಂಬ ಉಕ್ತಿಯಿಂದಲೇ ದೊಡ್ಡವರು ಕ್ಷಮಿಸುವರು ಎಂಬ ಆಶ್ಚರ್ಯವನ್ನು ಹೇಳುವರು.

ಕ್ಷಮಾ ಮಾಡಿದ ನಂತರ **ಯದಸತ್** ಅನಭಿವ್ಯಕ್ತವಾದ **ಅಹಃ** ಮೋಕ್ಷವು **ಕೃತಂ** ಫಲಿತವು 'ಅಹರ್ಮುಹೂರ್ತಂ ವಿಜ್ಞೇಯಮಹರ್ಮೋಕ್ಷೋಽಪಿ ಭಣ್ಯತೇ' **ಅಸತ್** ಅನುಜ್ಜೃಂಭಿತವಾದ **ಅಹಃ** ಜ್ಞಾನ ಅಥವಾ ಬಲವು **ಕೃತಂ** ಸಂಪಾದಿತವಾಯಿತು 'ಅಹರ್ದಿನಂ ಪ್ರಕಾಶಶ್ಚ ಕ್ವಚಿತ್ ಜ್ಞಾನಂ ಬಲಂ ತಥಾ' ಎಂದು ಬೃಹದ್ಭಾಷ್ಯದಲ್ಲಿ ಹೇಳಿದೆ. **ವರೀಯಸಿ** ಪರತರನಾದ ಸ್ವಾಮಿಯಲ್ಲಿ

ಪುರುಷಾಯಭೂಮ್ನೇ ಎಂಬುದು ಒಂದೇ ಪದವಾಗಿದೆ. **ಪುರುಷೈಃ** ಬ್ರಹ್ಮಾದಿಗಳಿಂದ **ಆಯಃ** ಗಮ್ಯವಾದ **ಭೂಮಾ** ಯೋಗ್ಯಾತಾನುಸಾರ ಪೂರ್ಣತೆಯು **ಯೇನ** ಯಾವನಿಂದ ಬರುವದೋ ತಸ್ಮೈ **ಪುರುಷಾಯಭೂಮ್ನೇ** ಬೃಹದ್ಭಾಷ್ಯದಲ್ಲಿ ಪುರುಷವಿಧ ಎಂಬ ಪದ ವ್ಯಾಖ್ಯಾನ ಮಾಡುವಾಗ 'ಓಷೇತ್ಸರ್ವಮನುಷ್ಣಃ ಸನ್ ಬ್ರಹ್ಮಾ ವಿಷ್ಣುಪ್ರಸಾದತಃ' ಎಂದು ಹೇಳಿರುವರು.

ಈ ರೀತಿ ಅರ್ಥ ಮಾಡಿದ್ದರಿಂದ ಪುರುಷ ಎಂಬುದರ ಪುನರ್ವಚನಕ್ಕೆ ಭೂಮ ಪದಕ್ಕೂ ವೈಯ್ಯರ್ಥ್ಯ ಕ್ಲಿಷ್ಟತೆಗಳು ಭ್ರಷ್ಟವಾದವು ಎಂದು ತಿಳಿಯಬೇಕು.

ಕೊನೆಯಲ್ಲಿಯ ತಮ್ಮ ಮಾತೂ ಮಂಗಲರೂಪವಾಗಿದೆ ಎಂದು ತಿಳಿಸಲು ಭಗವನ್ನಮನರೂಪವಾದ ಮಂಗಲವನ್ನು ಮಾಡಿರುವರು ಎಂಬುದು ರಹಸ್ಯ. 'ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ' ಎಂದಿದೆಯಷ್ಟೇ. ।।೩೦।।

**ಶ್ರೀಶುಕ ಉವಾಚ –**

**ಇತ್ಥಂ ಸ್ವಭರ್ತೃಗದಿತಂ ಭಗವನ್ಮಹಿತ್ವಂ**
**ಸಂಸ್ಮೃತ್ಯ ವಿಸ್ಮಿತಧಿಯೋ ಯಮಕಿಂಕರಾಸ್ತೇ ।**
**ತೇನಾಚ್ಯುತಾಶ್ರಯಜನಂ ಪ್ರತಿ ಶಂಕಮಾನಾ**
**ದ್ರಷ್ಟುಂ ಚ ಬಿಭ್ಯತಿ ತತಃ ಪ್ರಭೃತಿ ಸ್ಮ ರಾಜನ್ ।।೩೨।।**

**ರಾಜನ್** ಪರೀಕ್ಷಿತನೇ **ತೇ ಯಮಕಿಂಕರಾಃ** ಆ ಯಮಭಟರು **ಇತ್ಥಂ** ಮೇಲೆ ಹೇಳಿದಂತೆ **ಸ್ವಭರ್ತೃಗದಿತಂ** ತಮ್ಮ ಸ್ವಾಮಿ ಯಮದೇವರು ಹೇಳಿದ **ಭಗವನ್ಮಹಿತ್ವಂ** ಭಗವಂತನ ಮಹಿಮೆಯನ್ನು **ಸಂಸ್ಮೃತ್ಯ** ಭಕ್ತಿಯಿಂದ ಸ್ಮರಿಸಿದವರಾಗಿ **ವಿಸ್ಮಿತಧಿಯಃ** ಅಚ್ಚರಿಗೊಂಡ ಮನಸ್ಸುಳ್ಳವರಾಗಿ ಆದರು. **ತೇನ** ಆ ಮಾಹಾತ್ಮ್ಯಜ್ಞಾನದಿಂದ **ತತಃ ಪ್ರಭೃತಿ** ಆ ದಿನದಿಂದ ಆರಂಭಿಸಿ **ಅಚ್ಯುತಾಶ್ರಯಜನಂ ಪ್ರತಿ** ಶ್ರೀಹರಿಯನ್ನು ಆಶ್ರಯಿಸಿದ ಭಕ್ತರ ವಿಷಯದಲ್ಲಿ **ಶಂಕಮಾನಾಃ** ಎಲ್ಲಿ ಅಪರಾಧವಾಗುವದೋ ಎಂದು ಸಂಶಯ ಪಡುತ್ತಾ ಜನರನ್ನು **ದ್ರಷ್ಟುಂ ಚ** ಕ್ರೂರದೃಷ್ಟಿಯಿಂದ ನೋಡಲೂ ಸಹ **ಬಿಭ್ಯತಿ ಸ್ಮ** ಹೆದರುತ್ತಿದ್ದರು. ಮುಟ್ಟುವದಂತೂ ಇಲ್ಲವೇ ಇಲ್ಲವೆಂದು ಭಾವ. **ಸ್ಮ ರಾಜನ್** ಎಂಬಲ್ಲಿ ಸ್ಮರ ಅಜನ್ ಎಂದು ಛೇದ. ನೀನೂ ಸಹ **ಅಜನ್** ಹೋಗುವವನೇ ಕೊನೆಕಾಲವೆಂದು **ಸ್ಮರ** ಜ್ಞಾಪಿಸಿಕೋ ಎಂದು ಅಂತರಂಗದ ಭಾವ. ಇಲ್ಲವಾದರೆ 'ಸ್ಮ

ಪಾದ ಪೂರಣೇ' ಎಂದು ಹೇಳಿರುವದರಿಂದ ಅಷ್ಟಕ್ಕಾಗಿಯೇ ಪ್ರಯೋಗ ಮಾಡಬೇಕಿಲ್ಲ ಎನ್ನುತ್ತಾರೆ. ಶ್ರೀಗಳು. ।।೩೨।।

ಶುಕಾಚಾರ್ಯರು ಯಾತಕ್ಕಾಗಿ ಇತಿಹಾಸ ಹೇಳಿದರೋ ಅದನ್ನು ನಿಗಮನಮಾಡಿ ಹೇಳುವರು.

**ತಸ್ಮಾತ್ ಸಂಕೀರ್ತನಂ ವಿಷ್ಣೋರ್ಜಗನ್ಮಂಗಲಮಂಹಸಾಮ್ ।**
**ಮಹತಾಮಪಿ ಕೌರವ್ಯ ವಿದ್ಧ್ಯೇಕಾಂತವಿನಿಷ್ಕೃತಮ್ ।।೩೩।।**

**ಹೇ ಕೌರವ್ಯ** ಯಾವ ಕುರುಕುಲದಲ್ಲಿ ಧರ್ಮೋಪದೇಶಕರಾದ ಭೀಷ್ಮಾಚಾರ್ಯ ಮೊದಲಾದವರು ಜನಿಸಿರುವರೋ ಅಲ್ಲಿ ಜನಿಸಿದ ಪರೀಕ್ಷಿತನೇ **ತಸ್ಮಾತ್** ಸರ್ವಪಾಪನಿರ್ಮೂಲನಕರವಾದ್ದರಿಂದ **ಜಗನ್ಮಂಗಲಂ** ಜಗತ್ತಿನ ಎಲ್ಲ ಅಧಿಕಾರಿಗಳಿಗೂ ಮೋಕ್ಷಾದಿಪುರುಷಾರ್ಥಪ್ರದವಾದ **ವಿಷ್ಣೋಃ** ಶ್ರೀಹರಿಯ **ಸಂಕೀರ್ತನಂ** ಭಕ್ತಿಯಿಂದ ಮಾಡಿದ ನಾಮೋಚ್ಚಾರಣವು **ಮಹತಾಂ ಅಪಿ ಅಂಹಸಾಂ** ಪ್ರಾಯಶ್ಚಿತ್ತಾದಿಗಳಿಂದ ಹೋಗದಿರುವ ಅತಿ ದೊಡ್ಡ ಪಾಪಗಳಿಗೂ ಅಥವಾ **ಮಹತಾಂ ಅಪಿ** ಕೇವಲ ಸ್ತ್ರೀಶೂದ್ರಾದಿಗಳಿಗಲ್ಲ ಉತ್ತಮಾಧಿಕಾರಿಗಳಿಗೂ **ಏಕಾಂತವಿನಿಷ್ಕೃತಂ** ಮುಖ್ಯಪ್ರಾಯಶ್ಚಿತ್ತವೆಂದು ರಹಸ್ಯಪ್ರಾಯಶ್ಚಿತ್ತ ನಿಯತಪ್ರಾಯಶ್ಚಿತ್ತವೆಂದು ಆತ್ಯಂತಿಕಪ್ರಾಯಶ್ಚಿತ್ತವೆಂದು ವಿದ್ಧಿ ತಿಳಿ. ।।೩೩।।

**ಶೃಣ್ವತೋ ಗೃಣತೋ ವೀರ್ಯಾಣ್ಯುದ್ದಾಮಾನಿ ಹರೇರ್ಮುಹುಃ ।**
**ಯಥಾ ಸುಜಾತಯಾ ಭಕ್ತ್ಯಾ ಶುದ್ಧ್ಯೇನ್ನಾತ್ಮಾ ವ್ರತಾದಿಭಿಃ ।।೩೪।।**

**ಹರೇಃ** ಶ್ರೀಹರಿಯ **ಉದ್ದಾಮಾನಿ** ಸರ್ವೋತ್ತಮವಾದ ನಿರ್ದೋಷವಾದ **ವೀರ್ಯಾಣಿ** ಮಹಿಮೆಗಳನ್ನು **ಮುಹುಃ** ಮತ್ತೆ ಮತ್ತೆ **ಶೃಣ್ವತಃ** ಗುರುಮುಖದಿಂದ ಕೇಳುವ **ಗೃಣತಃ** ಸ್ವಯಂ ಹೇಳುವ ಅಧಿಕಾರಿಗೆ **ಸುಜಾತಯಾ** ಶ್ರೀಹರಿ ಅನುಗ್ರಹದಿಂದ ಚೆನ್ನಾಗಿ ಜನಿಸಿದ **ಭಕ್ತ್ಯಾ** ಭಕ್ತಿಯಿಂದ **ಆತ್ಮಾ** ಮನಸ್ಸು ಜೀವನು **ಯಥಾ ಶುದ್ಧ್ಯೇತ್** ಹೇಗೆ ಪವಿತ್ರನಾಗುವನೋ **ನ ತಥಾ ವ್ರತಾದಿಭಿಃ** ಕೇವಲ ವ್ರತಾದಿಗಳಿಂದ ಹಾಗೆ ಶುದ್ಧನಾಗುವದಿಲ್ಲ. ಭಕ್ತಿಗೂ ಇದೇ ರೀತಿ ಎಂದಾದರೆ ವ್ರತಾದಿಗಳಂತೆ ಎಂದಾದರೆ ಅದನ್ನು ಏಕೆ ಸಂಪಾದಿಸಬೇಕು ಎಂದರೆ ಹೇಳುವರು. **ಅವ್ರತಾದಿಭಿಃ** ಎಂದು. ವ್ರತಾದಿಗಳಿಲ್ಲದೇನೇ **ನಾ** ಪುರುಷನು **ಶುದ್ಧ್ಯೇತ್** ಕೇವಲ ಭಕ್ತಿಯಿಂದಲೇ ಶುದ್ಧನಾಗುವನು ಎಂದು ಭಾವ. ।।೩೪।।

**ಇತಿಹಾಸಮಿಮಂ ಗುಹ್ಯಂ ಭಗವಾನ್ ಕುಂಭಸಂಭವಃ ।**
**ಕಥಯಾಮಾಸ ಮಲಯ ಆಸೀನೋ ಹರಿಮರ್ಚಯನ್ ॥೩೫॥**

॥ ಇತಿ ಶ್ರೀಮದ್ಭಾಗವತೇ ಷಷ್ಠಸ್ಕಂಧೇ ತೃತೀಯೋಽಧ್ಯಾಯಃ ॥

**ಭಗವಾನ್** ಪೂಜ್ಯರಾದ **ಕುಂಭಸಂಭವಃ** ಆಗಸ್ತ್ಯರು **ಮಲಯೇ** ಮಲಯವೆಂಬ ಪರ್ವತದಲ್ಲಿ **ಹರಿಮರ್ಚಯನ್** ಶ್ರೀಹರಿಯನ್ನು ಪೂಜಿಸುತ್ತ **ಆಸೀನಃ** ಕುಳಿತವರಾಗಿ **ಇಮಂ ಗುಹ್ಯಂ ಇತಿಹಾಸಂ ಕಥಯಾಮಾಸ** ಈ ರಹಸ್ಯವಾದ ಇತಿಹಾಸವನ್ನು ಹೇಳಿದರು.

ವಿಶ್ವಾಸ ಹುಟ್ಟಿಸಲು **ಭಗವಾನ್** ಎಂದಿದ್ದಾರೆ. **ಹರಿಂ ಅರ್ಚಯನ್** ಎಂದು ಹೇಳಿದ್ದರಿಂದ ಶಪಥ ಮಾಡಿ ದೇವರ ಪಾದ ಮುಟ್ಟಿ ಹೇಳಿದ್ದು ಎಂದು ಧ್ವನಿತವಾಗುವದು. **ಭಗವಾನ್** ಎಂದು ಹೇಳುತ್ತಾ ಶುಕಾಚಾರ್ಯರು ವ್ಯಾಸರು ಮಂದವಾಗಿ ತಲೆ ಆಡಿಸುವರು ಎಂದು ಸೂಚಿಸುವರು. ॥೩೫॥

ಇಲ್ಲಿಗೆ ಮೂರನೇ ಅಧ್ಯಾಯ ಮುಗಿಯಿತು

★★★★★




## ಅಥ ಶ್ರೀಮದ್ಭಾಗವತೇ - ಷಷ್ಠಸ್ಕಂಧೇ

## ಚತುರ್ಥೋऽಧ್ಯಾಯಃ

ರಾಜ ಹೇಳಿದ. ದೇವತೆಗಳು, ಅಸುರರು, ನಾಗರು, ಮೃಗ-ಪಕ್ಷಿಗಳು ಈ ಎಲ್ಲ ಭೂತಗಳ ಸೃಷ್ಟಿಯ ವಿಚಾರವನ್ನು ಸಂಕ್ಷೇಪವಾಗಿ ನೀವು ತಿಳಿಸಿದ್ದೀರಿ. ಆ ಸೃಷ್ಟಿಯನ್ನು ವಿಸ್ತಾರವಾಗಿ ಕೇಳಬೇಕೆಂದು ಬಯಸುತ್ತಿದ್ದೇನೆ.

ಸೂತರು ಹೇಳಿದರು. ಪರೀಕ್ಷಿತರ ಈ ರೀತಿಯಾದ ಪ್ರಶ್ನೆಯನ್ನು ಕೇಳಿದ ಶುಕಮುನಿಗಳು ಸಂತೋಷಪಟ್ಟರು. ರಾಜನನ್ನು ಅಭಿನಂದಿಸಿದರು. ಶ್ರೀಹರಿಯ ಲೀಲಾವೈಭವವನ್ನು ತಿಳಿಸಿಕೊಡುವ ಈ ಎಲ್ಲ ಭೂತಗಳ ಸೃಷ್ಟಿಯನ್ನು ವಿಸ್ತಾರವಾಗಿ ಹೇಳಲು ಉಪಕ್ರಮಿಸಿದರು.

ಪ್ರಾಚೀನಬರ್ಹಿಗೆ ಹತ್ತು ಜನ ಮಕ್ಕಳಿದ್ದರು. ಅವರೆಲ್ಲರೂ ಪ್ರಚೇತಸ ಎಂಬ ಹೆಸರಿನವರು. ಪ್ರಜೋತ್ಪತ್ತಿಯನ್ನು ಮಾಡಬೇಕೆಂಬ ತಂದೆಯ ಆಜ್ಞೆಯನ್ನು ಶಿರಸಾ ವಹಿಸಿದರು. ಅದಕ್ಕಾಗಿ ಸಮುದ್ರದ ಅಂತರ್ಭಾಗದಲ್ಲಿ ಅತಿಕಠೋರವಾದ ತಪಸ್ಸನ್ನು ಆಚರಿಸಿದರು. ತಪಸ್ಸಿದ್ಧಿಯನ್ನು ಪಡೆದರು. ಸಮುದ್ರದಿಂದ ಮೇಲೆದ್ದು ಬಂದರು.

ಪ್ರಾಚೀನಬರ್ಹಿ ಇರಲಿಲ್ಲ. ಇದ್ದ ಪ್ರಾಚೇತಸರು ಸಮುದ್ರ ಸೇರಿದ್ದರು. ಹೀಗಾಗಿ ರಾಜ್ಯವೆಲ್ಲ ಅರಾಜಕವಾಗಿತ್ತು. ಎಲ್ಲ ಕಡೆ ವೃಕ್ಷಗಳು ಬೆಳೆದಿದ್ದವು. ಕಾಲಿಡಲು ಸ್ಥಳವಿರಲಿಲ್ಲ. ಪ್ರಚೇತಸರ ಗಮನಕ್ಕೆ ಆತಂಕವಾಯಿತು. ಅದನ್ನು ಗಮನಿಸಿದರು. ಸಿಟ್ಟು ಮುಗಿಲು ಮುಟ್ಟಿತು. ಆ ಎಲ್ಲ ವೃಕ್ಷಗಳನ್ನು ನಾಶಮಾಡಬೇಕೆಂದು ಕೊಂಡರು. ತಮ್ಮ ಮುಖದಿಂದ ವಾಯುವನ್ನು, ಅಗ್ನಿಯನ್ನು ಸೃಷ್ಟಿಸಿದರು.

ಗಾಳಿ-ಅಗ್ನಿ ಸೇರಿ ಎಲ್ಲ ವೃಕ್ಷಗಳನ್ನು ಸುಡಲು ಪ್ರಾರಂಭಿಸಿದವು. ವೃಕ್ಷಗಳೆಲ್ಲ ಭಸ್ಮವಾಗುತ್ತಿರುವುದನ್ನು ಚಂದ್ರ ಕಂಡ. ಪ್ರಚೇತಸರ ಕ್ರೋಧವನ್ನು ಶಮನ ಮಾಡಬೇಕೆಂದು ಕೆಳಗಿಳಿದು ಬಂದ. ಪ್ರಚೇತಸರಿಗೆ ಹೇಳಿದ.

ಪ್ರಚೇತಸರೇ ನೀವು ಮಹಾಭಾಗ್ಯಸಂಪನ್ನರು. ಪ್ರಜಾವೃದ್ಧಿಯನ್ನು ಮಾಡಬೇಕಾದ ಪ್ರಜಾಪತಿಗಳು. ಆದ್ದರಿಂದ ದೀನರಾದ ಈ ವೃಕ್ಷಗಳನ್ನು ಹೀಗೆ ಭಸ್ಮಮಾಡುವುದು ನಿಮಗೆ ಉಚಿತವಲ್ಲ. ಇಷ್ಟೇ ಅಲ್ಲದೇ ವೃಕ್ಷಗಳನ್ನು ಭಸ್ಮಮಾಡುವುದರಿಂದ ನಿಮಗೆ ನಾರಾಯಣನ ಅನುಗ್ರಹವಾಗುವುದಿಲ್ಲ.

ಪರಮಾತ್ಮನೇ ವನಸ್ಪತಿಗಳನ್ನು, ಓಷಧಿಗಳನ್ನು, ಪಿತೃಗಳ, ದೇವತೆಗಳ ಅನ್ನವನ್ನು ಸೃಷ್ಟಿಮಾಡಿದ್ದಾನೆ. ಚರವಾದ ಪ್ರಾಣಿಗಳಿಗೆ ಅಚರವಾದವುಗಳು ಅನ್ನವಾಗಿವೆ. ಪಾದಚಾರಿಗಳಿಗೆ ಪಾದಹೀನವಾದ ಪ್ರಾಣಿಗಳು ಅನ್ನವಾಗಿವೆ. ಹಸ್ತಯುಕ್ತರಾದವರಿಗೆ ಹಸ್ತರಹಿತವಾದ ಪ್ರಾಣಿಗಳು ಅನ್ನವಾಗಿವೆ. ದ್ವಿಪಾದಪ್ರಾಣಿಗಳಿಗೆ ಚತುಷ್ಪಾದ ಪ್ರಾಣಿಗಳು ಅನ್ನವಾಗಿವೆ. ಹೀಗೆ ಭಗವಂತ ವ್ಯವಸ್ಥೆ ಮಾಡಿದ್ದಾನೆ. ಹೀಗೆ ಪ್ರಾಣಿಗಳಿಗೆ ಅನ್ನವಾಗುವ ಎಲ್ಲ ಓಷಧಿ- ವನಸ್ಪತಿಗಳನ್ನು ನೀವು ಭಸ್ಮಮಾಡುವ ಮೂಲಕ ನೀವು ಎಲ್ಲರ ಅನ್ನವನ್ನೇ ನಾಶಪಡಿಸುತ್ತಿರುವಿರಿ. ಇದು ನಿಮ್ಮಂಥವರಿಗೆ ಯೋಗ್ಯವಲ್ಲ.

ಪ್ರಜಾಸೃಷ್ಟಿಯನ್ನು ಮಾಡಬೇಕೆಂದು ಮಹದೇವರ ಆಜ್ಞೆ ನಿಮಗಿದೆ. ತಂದೆಯ ಆದೇಶವೂ ಇದೆ. ಆದ್ದರಿಂದ ವೃಕ್ಷಗಳನ್ನು ದಹಿಸುವುದು ನಿಮಗೆ ಯೋಗ್ಯವಲ್ಲ. ಎಲ್ಲ ಪ್ರಾಣಿಗಳಲ್ಲಿಯೂ ಅಂತರ್ಯಾಮಿಯಾಗಿ ವಾಸುದೇವ ವಾಸವಾಗಿದ್ದಾನೆ. ಆದ್ದರಿಂದ ಈ ಕಾರ್ಯದಿಂದ ಶ್ರೀಹರಿಯ ದ್ರೋಹವಾಗುತ್ತದೆ. ಈಗ ಆಗಿಹೋದ ದಹನ ಸಾಕು. ಇನ್ನು ಈ ಕಾರ್ಯದಿಂದ ನೀವು ನಿವೃತ್ತರಾಗಬೇಕು. ನಿಮಗೆಲ್ಲರಿಗೂ ಮಂಗಳವಾಗಲಿ. ವೃಕ್ಷಗಳ ಮಗಳಾದ ಈ ಮಾರಿಷಾಳನ್ನು ವಿವಾಹವಾಗಿರಿ. ಇವಳನ್ನು ಪತ್ನಿಯನ್ನಾಗಿ ಸ್ವೀಕರಿಸಿರಿ.

ಹೀಗೆ ಚಂದ್ರನು ಪ್ರಚೇತಸರಿಗೆ ಉಪದೇಶಿಸಿದ. ಆ ಕನ್ಯೆಯನ್ನು ಹತ್ತು ಜನ ಪ್ರಚೇತಸರಿಗೆ ಧಾರೆ ಎರೆದ. ತಿರುಗಿ ಹೋದ. ಆ ಪ್ರಚೇತಸರಿಂದ ಮಾರಿಷಾಳಲ್ಲಿ ದಕ್ಷನೆಂಬ ಪುತ್ರನು ಜನಿಸಿದ. ಆ ದಕ್ಷನು ಮಾಡಿದ ಪ್ರಜಾಸೃಷ್ಟಿ ಈ ಜಗತ್ತಿನಲ್ಲೆಲ್ಲ ವ್ಯಾಪ್ತವಾಯಿತು. ಮೂರು ಲೋಕಗಳೂ ಪ್ರಜೆಗಳಿಂದ ತುಂಬಿ ತುಳುಕಿದವು.

ಪ್ರಜಾಪತಿಯಾದ ದಕ್ಷನಿಗೆ ಪ್ರಜಾಸೃಷ್ಟಿಯನ್ನು ಮಾಡಲು ಬ್ರಹ್ಮದೇವರು ಆಜ್ಞಾಪಿಸಿದರು. ಬ್ರಹ್ಮದೇವರ ಆಜ್ಞೆಯನ್ನು ಶಿರಸಾ ಧರಿಸಿದ ದಕ್ಷ. ಪರಮಪಾವನವಾದ ವಿಂಧ್ಯಕ್ಷೇತ್ರಕ್ಕೆ ಹೊರಟ. ಅಲ್ಲಿ ಅಘಮರ್ಷಣತೀರ್ಥದ ಆಶ್ರಮದಲ್ಲಿ ನೆಲಸಿದ. ತ್ರಿಷವಣಸ್ನಾನ ಪೂರ್ವಕವಾಗಿ ತಪಸ್ಸನ್ನು ಆಚರಿಸಿದ. ಹಂಸಗುಹ್ಯಸ್ತೋತ್ರದಿಂದ ದೇವರನ್ನು ಒಲಿಸಿದ. ದಕ್ಷನು ಮಾಡಿದ ಸ್ತೋತ್ರದಿಂದ ಸ್ತುತಿಪ್ರಿಯನಾದ ಪರಮಾತ್ಮ ಸಂತುಷ್ಟನಾದ. ಶಂಖ-ಚಕ್ರ-ಅಸಿ-ಚರ್ಮ-ಬಾಣ-ಧನುಃ-ಪಾಶ-ಗದಾ ಆಯುಧಗಳನ್ನು ಧರಿಸಿದವನಾದ. ಪೀತಾಂಬರಧಾರಿಯಾಗಿ, ಸುಪರ್ಣಸ್ಕಂಧಾರೂಢನಾಗಿ ದರ್ಶನವನ್ನಿತ್ತ. ನಾರದಾದಿಪಾರ್ಷದರಿಂದ ಸಮೇತನಾದ ಪರಮಾತ್ಮನ ದಿವ್ಯಮಂಗಳವಿಗ್ರಹವನ್ನು ದಕ್ಷ ದರ್ಶನ ಮಾಡಿಕೊಂಡ. ಪುಲಕಾಂಕಿತನಾದ. ಸಂತುಷ್ಟನಾಗಿ ದೀರ್ಘದಂಡಪ್ರಣಾಮಗಳನ್ನು ಮಾಡಿದ. ದಕ್ಷನ ಸಂತೋಷಕ್ಕೆ ಪಾರವೇ ಇರಲಿಲ್ಲ. ತನುವಿನಲ್ಲೆಲ್ಲ ಸಂತೋಷವೇ ತುಂಬಿತ್ತು. ಸಂತೋಷ ತುಂಬಿದ ಮನಸ್ಸಿನಲ್ಲಿ ಮಾತುಗಳಿಗೆ ಅವಕಾಶವೇ ಸಿಗಲಿಲ್ಲ. ಮೂಕನಾಗಿ ನಿಂತ. ನಮ್ರನಾಗಿ ಕೈ ಜೋಡಿಸಿ ನಿಂತಿರುವ ದಕ್ಷನನ್ನು ನೋಡಿದ ಶ್ರೀಹರಿ. ಮೆಚ್ಚಿದ. ಪ್ರೀತಿಯಿಂದ ಮಾತನಾಡಿದ.

ಮಗೂ ಪ್ರಾಚೇತಸ ! ನೀನು ತಪಸ್ಸಿನಿಂದ ಸಿದ್ಧನಾಗಿರುವಿ. ನನ್ನಲ್ಲಿ ನೀನು ಅನನ್ಯವಾದ ಭಕ್ತಿಯನ್ನು ಮಾಡಿರುವಿ. ಆ ಭಕ್ತಿಯಿಂದ ನಾನು ಸಂತುಷ್ಟನಾಗಿದ್ದೇನೆ. ಪಂಚಜನಪ್ರಜಾಪತಿಯ ಮಗಳಾದ ಈ ಅಸಿಕ್ನಿಯನ್ನು ಪತ್ನಿಯಾಗಿ ಪರಿಗ್ರಹಿಸು. ಮೈಥುನಧರ್ಮದಿಂದ ಇವಳಲ್ಲಿ ಪ್ರಜಾಸೃಷ್ಟಿಯನ್ನು ಮಾಡು. ಇದು ನನ್ನ ಸೇವೆ ಎಂದೇ ತಿಳಿ. ನಿನ್ನ ನಂತರ ಎಲ್ಲ ಪ್ರಜರೂ ಮೈಥುನಧರ್ಮದಿಂದಲೇ ಪ್ರಜೋತ್ಪತ್ತಿಯನ್ನು ಮಾಡುತ್ತಾರೆ. ನಿನಗೆ ಶುಭವಾಗಲಿ. ಎಂದು ಹೇಳಿದ. ದಕ್ಷನು ನೋಡುತ್ತಿದ್ದಂತೆಯೇ ಸ್ವಪ್ನದೃಷ್ಟವಾದ ಪದಾರ್ಥಗಳು ಮಾಯವಾಗುವಂತೆ ಪರಮಾತ್ಮ ಅಂತರ್ಹಿತನಾದ.

★★★★★

'ಮುಹ್ಯಂತಿ ಯಂ ಸೂರಯಃ' ಎಂಬಲ್ಲಿ ಬ್ರಹ್ಮಾದಿಜ್ಞಾನಿಗಳಿಂದಲೂ ತಿಳಿಯಲಾಗದ ಮಹಿಮೆ ಉಳ್ಳವನೆಂದು ಹೇಳಿತ್ತು. 'ಜನ್ಮಾದ್ಯಸ್ಯ ಯತಃ' ಎಂಬಲ್ಲಿ ಸೃಷ್ಟ್ಯಾದಿ ಕಾರ್ಯಗಳು ಯಾರಿಂದ ನಡೆಯುತ್ತವೋ ಎಂದು ಪ್ರತಿಜ್ಞೆ ಮಾಡಲಾಗಿತ್ತು. ಇವೆರಡೂ ಶ್ರೀಹರಿಯಲ್ಲಿಯೇ ಹೊರತು ಮತ್ತೊಬ್ಬರಲ್ಲಿ ಅಲ್ಲವೆಂದು ಈ ಅಧ್ಯಾಯದಲ್ಲಿ ಪ್ರತಿಪಾದಿಸುತ್ತಾರೆ.

ಮೂರನೇ ಸ್ಕಂಧ ಮೊದಲಾದ ಸ್ಕಂಧಗಳಲ್ಲಿ ಹೇಳಿದ ಸೃಷ್ಟಿಯು ಶ್ರೀಹರಿಯಲ್ಲಿ ಮಾತ್ರ ಇದೆಯೋ ಮತ್ತೆ ಯಾರಲ್ಲಾದರೂ ಇದೆಯೋ ? ಮತ್ತು ಮತ್ತೊಬ್ಬರಲ್ಲಿ ಇದ್ದರೂ ಶ್ರೀಹರಿಯ ಅನುಗ್ರಹಾಧೀನವೋ ? ಎಂಬ ಅಭಿಪ್ರಾಯದಿಂದ ರಾಜನು ಹಿಂದೆ ಹೇಳಿದ್ದನ್ನು ಅನುವಾದ ಮಾಡಿ ಅದನ್ನೇ ವಿವರಿಸಿರಿ ಎಂದು ಕೇಳುತ್ತಾನೆ-

**ರಾಜೋವಾಚ -**

**ದೇವಾಸುರನೃಣಾಂ ಸರ್ಗೋ ನಾಗಾನಾಂ ಮೃಗಪಕ್ಷಿಣಾಮ್ ।**
**ಸಾಮಾಸಿಕಸ್ತ್ವಯಾ ಪ್ರೋಕ್ತೋ ಯಸ್ತು ಸ್ವಾಯಂಭುವೇಽಂತರೇ ॥೧॥**

**ಭಗವಾನ್** ಪೂಜ್ಯರೇ ! **ಸ್ವಾಯಂಭುವೇ ಅಂತರೇ** ಸ್ವಾಯಂಭುವ ಮನ್ವಂತರದಲ್ಲಿ **ಯಃ** ಯಾವ **ದೇವಾಸುರನೃಣಾಂ** ದೇವತೆಗಳ ಅಸುರರ ಮನುಷ್ಯರ **ನಾಗಾನಾಂ** ಸರ್ಪಗಳ **ಮೃಗಪಕ್ಷಿಣಾಂ** ಮೃಗಗಳ ಪಕ್ಷಿಗಳ **ಸಾಮಾಸಿಕಃ** ಸಂಕ್ಷೇಪವಾಗಿ **ಸರ್ಗಃ** ಸೃಷ್ಟಿಯು **ತ್ವಯಾ** ನಿಮ್ಮಿಂದ **ಪ್ರೋಕ್ತಃ** ಹೇಳಲ್ಪಟ್ಟಿತೋ. ॥೧॥

**ತಸ್ಯೈವ ವ್ಯಾಸಮಿಚ್ಛಾಮಿ ಶ್ರೋತುಂ ತೇ ಭಗವನ್ ಯಥಾ ।**
**ಅನುಸರ್ಗಂ ಯಥಾ ಶಕ್ತ್ಯಾ ಸಸರ್ಜ ಭಗವಾನ್ ಪರಃ ॥೨॥**

**ತಸ್ಯೈವ** ಅದರದೇ **ವ್ಯಾಸಂ** ವಿಸ್ತಾರವನ್ನು **ಯಥಾ** ಯಥಾವತ್ತಾಗಿ **ತೇ** ತಮ್ಮಿಂದ **ಶ್ರೋತುಂ** ಕೇಳಿ ತಿಳಿಯಲು **ಇಚ್ಛಾಮಿ** ಇಷ್ಟ ಪಡುತ್ತೇನೆ. **ಪರಃ** ಸರ್ವೋತ್ತಮನಾದ **ಭಗವಾನ್** ಶ್ರೀಹರಿಯು **ಶಕ್ತ್ಯಾ** ಸ್ವಸಾಮರ್ಥ್ಯದಿಂದ ರಮೆಯಿಂದ ಕೂಡಿಕೊಂಡು (ಶಕ್ಯತ್ವಾತ್ ಶಕ್ತಯೋ ಭಾರ್ಯಾಃ ಎಂದಿದೆ) **ಯಥಾ** ಹೇಗೆ **ಅನುಸರ್ಗಂ** ಅವಾಂತರಸೃಷ್ಟಿಯನ್ನು **ಸಸರ್ಜ** ಮಾಡಿದನೋ ಅದನ್ನು ಕೇಳಲಿಚ್ಛಿಸುವೆನು. **ಯಥಾ ಸಸರ್ಜ** ಹೇಗೆ ಸೃಷ್ಟಿಸಿದನು ಅದನ್ನು ತಿಳಿಯಲಿಚ್ಛಿಸುವೆನು ಎಂದೂ ಅನ್ವಯಾರ್ಥ.

'ಮಹದಾದ್ಯಂಡಪರ್ಯಂತಃ ಸರ್ಗೋಽಂಡೇ ಬ್ರಹ್ಮಣಸ್ತು ಯಃ । ಅನುಸರ್ಗ ಇತಿ ಪ್ರೋಕ್ತಃ ಪೌರುಷಶ್ಚೇತಿ ಕಥ್ಯತೇ' ಎಂದು ವಚನವಿದೆ. ಮಹತ್ತತ್ವವನ್ನಾರಂಭಿಸಿ ಬ್ರಹ್ಮಾಂಡದವರೆಗೆ ಸೃಷ್ಟಿ ಎಂದು ಹೆಸರು. ಬ್ರಹ್ಮಾಂಡದಲ್ಲಿ ಚತುರ್ಮುಖನ ಸೃಷ್ಟಿಯು ಅನುಸರ್ಗವೆನಿಸುವದು.

ಮೊದಲನೆ ಶ್ಲೋಕದಲ್ಲಿ 'ದೇವಾಸುರನೃಣಾಂ' ಎಂದು 'ನಾಗಾನಾಂ ಮೃಗಪಕ್ಷಿಣಾಂ' ಎಂದು ಪ್ರತ್ಯೇಕವಾಗಿ ಹೇಳಿದ್ದು ಅವುಗಳ ಜನ್ಮ ವಿಲಕ್ಷಣವಾದುವು ಎಂದು ತಿಳಿಸಲು. ।।೧-೨।।

**ಶ್ರೀಸತ್ಯಧರ್ಮರು**

ರಾಜನ ಪ್ರಶ್ನೆಗೆ ಶುಕಾಚಾರ್ಯರು ಉತ್ತರಿಸಿದರೆ? ಬೇರೆ ಕಥೆ ಹೇಳಿದರೆ? ಅಥವಾ ಪ್ರಶ್ನೆ ಕೇಳಿ ನಕ್ಕು ಸುಮ್ಮನಿದ್ದರೆ? ಎಂದು ಶೌನಕರು ಪ್ರಶ್ನಿಸಿದರು. ಅದಕ್ಕೆ ಸೂತರು ಉತ್ತರಿಸುವರು. ಈ ರೀತಿ ಶೌನಕರ ಪ್ರಶ್ನೆ ವಾಕ್ಯವನ್ನು ಅಧ್ಯಾಹಾರ ಮಾಡಬೇಕು.

ಓಂ ವ್ಯತಿಹಾರೋ ವಿಶಿಂಷಂತಿ ಹೀತರವತ್ ಎಂಬ ಸೂತ್ರದ 'ಏಷು ತು ವಾಽತಿ ವದತಿ ಇತಿ ವಿಶಿಂಷಂತಿ ಹಿ ಯಥಾ ಇತರೇಷು ವಿಶೇಷಣಂ । ಉತ್ತಮತ್ವಂ ಹಿ ದೇವಾನಾಂ ಮುಕ್ತಾವಪಿ ಹಿ ಮಾನವಾತ್ । ತೇಭ್ಯಃ ಪ್ರಾಣಸ್ಯ ತಸ್ಮಾಚ್ಚ ನಿತ್ಯಮುಕ್ತಸ್ಯ ವೈ ಹರೇಃ ।। ಎಂಬ ಭಾಷ್ಯ-ಟೀಕಾಗಳಲ್ಲಿ ಪ್ರಶ್ನಾದಿಗಳಿಲ್ಲದ್ದರಿಂದ ಪ್ರಾಣ ವಿಶೇಷಣವೇ ಇದು ಎನ್ನಬಾರದು. ಪ್ರಶ್ನಾದಿಗಳನ್ನು ಅಧ್ಯಾಹಾರ ಮಾಡಲು ಬರುವದು ಎಂದು ಪ್ರಶ್ನೋತ್ತರ ಅಧ್ಯಾಹಾರ ಹೇಳಿದ್ದಾರೆ. ಅಧ್ಯಾಹಾರ ನಿರಂಕುಶವಾದ್ದರಿಂದ ರಾಜೋವಾಚ ಆದ ತತ್ಕ್ಷಣವೇ ಶೌನಕ ಉವಾಚ ಎಂದು ಮೊದಲೇ ಅಧ್ಯಾಹಾರ ಮಾಡಿರಿ. ಅದೇ ನ್ಯಾಯ ಲಘು ಎನ್ನುವದು ಸರಿಯಲ್ಲ. **ಮುನಿಸತ್ತಮಾಃ** ಎಂಬುದರ ಮೊದಲಿನ ಗ್ರಂಥದ ಪೀಡೆಯನ್ನು ಸಂಪಾದಿಸಬಾರದೆಂದು ಸುಮ್ಮನಿರು. ಇಲ್ಲವಾದರೆ **ಮುನಿಸತ್ತಮಾಃ** ಎಂದು ವಿಶಿಷ್ಯ ಸಂಭೋಧನ ಮಾಡಿದ್ದು ಸರಿ ಹೋಗದು ಎಂದು ತಿಳಿಯಬೇಕು. ಹೀಗೆ ಮಾಡಿದರೆ 'ನಾಪೃಷ್ಟಃ ಕಸ್ಯಚಿತ್ ಬ್ರೂಯಾತ್' ಎಂಬ ಮಾತನ್ನೂ ಗೌರವಿಸಿದಂತಾಗುವದು ಎಂದು ಭಾವ.

**ಸೂತ ಉವಾಚ -**

**ಇತಿ ಸಂಪ್ರಶ್ನಮಾಕರ್ಣ್ಯ ರಾಜರ್ಷೇರ್ಬಾದರಾಯಣಿಃ ।**
**ಪ್ರತಿನಂದ್ಯ ಮಹಾಯೋಗೀ ಜಗಾದ ಮುನಿಸತ್ತಮಾಃ ।।೩।।**

**ಹೇ ಮುನಿಸತ್ತಮಾಃ** ಶೌನಕಾದಿಗಳೇ **ರಾಜರ್ಷೇಃ** ಪರೀಕ್ಷಿತ್ ರಾಜನ **ಇತಿ** ಮೇಲೆ ಹೇಳಿದ **ಸಂಪ್ರಶ್ನಂ** ಭಕ್ತಿಯುಕ್ತವಾದ ವಕ್ತೃ-ಶ್ರೋತೃಗಳಿಗೆ ಸದ್ಗತಿದಾಯಕವಾದ ಪ್ರಶ್ನೆಯನ್ನು **ಆಕರ್ಣ್ಯ** ಕೇಳಿ **ಮಹಾಯೋಗೀ** ಶ್ರೀಹರಿಯನ್ನು ಧ್ಯಾನ ಮಾಡುವ **ಬಾದರಾಯಣಿಃ** ಬಾದರಾಯಣ ಪುತ್ರರಾದ ಶುಕಾಚಾರ್ಯರು **ಪ್ರತಿನಂದ್ಯ** ರಾಜನನ್ನು ಶ್ಲಾಘಿಸಿ **ಜಗಾದ** ಹೇಳಿದರು.

ಇಲ್ಲಿ ಸೂತ-ಶೌನಕರ ಸಂವಾದ ಹೇಳಿದ್ದರಿಂದ ಇನ್ನೂ ಅವರ ಸಂವಾದ ಮುಗಿದಿಲ್ಲವೆಂದೂ ಶೌನಕಾದಿ ಪ್ರಶ್ನೆಯೂ ಇದೇ ರೀತಿಯದೆಂದೂಅದಕ್ಕೆ ಉತ್ತರವೂ ಮುಂದೆ ಹೇಳುವುದಿದೆ ಎಂದೂ ಸೂಚಿಸಿದಂತಾಯಿತು. ಹೇಳುವ ಸಾಮರ್ಥ್ಯವಿದೆ ಎಂದು ತಿಳಿಸಲು **ಬಾದರಾಯಣಿಃ** ಎಂದಿರುವರು. ಕೇಳುವನ ಉದಾಸೀನತೆ ನಿರಾಕರಿಸಲು **ರಾಜರ್ಷೇ** ಎಂದಿರುವರು. ಇವೆರಡಕ್ಕನುಗುಣವಾಗಿ **ಪ್ರತಿನಂದ್ಯ** ಎಂದಿರುವರು. ಸಾಂಸಾರಿಕ ವಿವಿಧ ವ್ಯಸನದಿಂದ ವ್ಯಗ್ರನಾಗದೆ ಅಗ್ರದಲ್ಲಿ ಏನೂ ಹೇಳದೆ ಹೊರಟನೆಂದಲ್ಲವೆಂದು ಮಹಾಯೋಗೀ ಎಂಬುದರಿಂದ ಸೂಚಿಸಿರುವರು. ||೩||

ನಾಲ್ಕನೇ ಸ್ಕಂಧದಲ್ಲಿ ಹೇಳಿದ್ದನ್ನು ಅನುವಾದಿಸುತ್ತಾ ಪ್ರಾರಂಭಿಸುವರು. ಜನ್ಮಾದಿಕಾರಣತ್ವವೆಂಬ ಲಕ್ಷಣ ಅತಿವ್ಯಾಪ್ತವಲ್ಲ ಏಕೆಂದರೆ ದಕ್ಷಾದಿಗಳು ಸ್ವತಃ ಸೃಷ್ಟಿ ಮಾಡಲು ದಕ್ಷರಲ್ಲವೆಂದು ಅವರ ಸೃಷ್ಟಿಯನ್ನು ಹೇಳಲು ಪೀಠಿಕೆ ಹಾಕುವರು. ಜನ್ಮಾದಿಕಾರಣತ್ವ ಅನ್ಯನಿಷ್ಠವಾಗಿದೆ ಎಂದು ಅಜ್ಞಾನಿಗಳಿಗೆ ಕಂಡರೂ ಅನ್ಯನಿಷ್ಠವಾದ ಕಾರಣತ್ವವು ಶ್ರೀಹರಿಯ ಅಧೀನವೇ ಆಗಿದೆ. ಆದ್ದರಿಂದ ಜನ್ಮಾದಿಕಾರಣತ್ವವು ತದೇಕನಿಷ್ಠವಾಗಿದೆ.

**ಋಷಿರುವಾಚ -**

**ಯದಾ ಪ್ರಚೇತಸಃ ಪುತ್ರಾ ದಶ ಪ್ರಾಚೀನಬರ್ಹಿಷಃ ।**
**ಅಂತಃ ಸಮುದ್ರಾದುನ್ಮಗ್ನಾ ದದೃಶುರ್ಗಾಂ ದ್ರುಮೈಃ ವೃತಾಮ್ ॥೪॥**

**ಪ್ರಚೇತಸಃ** ಪ್ರಚೇತಸರೆಂದು ಎಲ್ಲರಿಗೂ ಒಂದೇ ಹೆಸರುಳ್ಳ **ಪ್ರಾಚೀನಬರ್ಹಿಷಃ** ಪ್ರಾಚೀನಬರ್ಹಿ ಎಂಬ ರಾಜನ **ದಶ ಪುತ್ರಾಃ** ಹತ್ತು ಮಕ್ಕಳು **ಯದಾ** ಯಾವಾಗ **ಅಂತಃಸಮುದ್ರಾತ್** ಸಮುದ್ರದ ಮಧ್ಯದಿಂದ **ಉನ್ಮಗ್ನಾಃ** ಮೇಲಕ್ಕೆ ಬಂದರೋ **ತದಾ** ಆಗ **ಗಾಂ** ಭೂಮಿಯನ್ನು **ದ್ರುಮೈಃ** ಗಿಡಗಳಿಂದ **ವೃತಾಂ** ದಟ್ಟವಾಗಿ

ತುಂಬಿರುವುದನ್ನಾಗಿ **ದದೃಶುಃ** ಕಂಡರು. **ಉನ್ಮಗ್ನಾಃ** ತಪಸ್ಸಿಗಾಗಿ ಸಮುದ್ರದಲ್ಲಿ ಮುಳುಗಿದ ಪ್ರಚೇತಸರು **ಸಮುದ್ರಾತ್** ಲ್ಯಬ್ ಲೋಪನಿಮಿತ್ತಪಂಚಮೀ. ಸಮುದ್ರಂ ಉತ್ತಾರ್ಯ ಸಮುದ್ರದಿಂದ ಮೇಲೆದ್ದು **ಅಂತಃ** ಸಮುದ್ರತೀರ ಪ್ರಾಂತವನ್ನಾರಂಭಿಸಿ **ಗಾಂ ವೃಕ್ಷೈಃ ವೃತಾಂ ದದೃಶುಃ** ಎಂದು ಅನ್ವಯಾರ್ಥ ಮಾಡಿರುವರು.

ತಾವು ಬಹುಕಾಲ ನೀರಿನಲ್ಲಿ ಮುಳುಗಿದ್ದರಿಂದ ಪ್ರಾಚೀನಬರ್ಹಿಯೂ ನಿವೃತ್ತನಾದ್ದರಿಂದ ಅರಾಜಕವಾಗಿ ಕೃಷಿಮಾಡದಿರುವದರಿಂದ ಗಿಡಗಳು ಬೆಳೆದುಕೊಂಡಿದ್ದವು ಎಂದು ಭಾವ. ।।೪।।

**ದ್ರುಮೇಭ್ಯಃ ಕ್ರುಧ್ಯಮಾನಾಸ್ತೇ ತಪೋದೀಪಿತಮನ್ಯವಃ ।**
**ಮುಖತೋ ವಾಯುಮಗ್ನಿಂ ಚ ಸಸೃಜುಸ್ತದ್ದಿಧಕ್ಷಯಾ ।।೫।।**

**ತಪೋದೀಪಿತಮನ್ಯವಃ** ತಪಸ್ಸಿನಿಂದ ಉಜ್ವಲಿತವಾದ ಕೋಪ ಉಳ್ಳ (ಹೀಗೆ ಹೇಳುವ ಮೂಲಕ ಇವರ ಕೋಪ ವಿಫಲವಾಗಲಿಲ್ಲ. ಆದ್ದರಿಂದ ಬಡವರ ಕೋಪ ದವಡೆಗೆ ಮೂಲ ಎಂಬ ಗಾದೆಯ ಅತಿಕ್ರಮಣವಾಯಿತೆಂದು ಸೂಚಿಸಿರುವರು.) **ತೇ** ಪ್ರಾಚೇತಸರು **ದ್ರುಮೇಭ್ಯಃ** ಗಿಡಗಳ ಮೇಲೆ **ಕ್ರುಧ್ಯಮಾನಾಃ** ಕುಪಿತರಾಗಿ **ತದ್ದಿಧಕ್ಷಯಾ** ಅವುಗಳನ್ನು ಸುಡುವ ಇಚ್ಛೆಯಿಂದ **ಮುಖತಃ** ಬಾಯಿಯಿಂದ **ವಾಯುಂ ಅಗ್ನಿಂ ಚ** ಗಾಳಿ ಮತ್ತು ಬೆಂಕಿಯನ್ನು **ಸಸೃಜುಃ** ಸೃಷ್ಟಿಸಿದರು.

ಮುಂದಿನ ಫಲಕ್ಕೆ ಅನುಕೂಲಕ್ಕಾಗಿ ಪರಸ್ಪರ ಮೈತ್ರಿ ಇರುವದರಿಂದ ಎರಡನ್ನು ಸೃಷ್ಟಿಸಿದ್ದು ಎಂದು ತಿಳಿಯಬೇಕು. ।।೫।।

**ತಾಭ್ಯಾಂ ನಿರ್ದಹ್ಯಮಾನಾಸ್ತಾನುಪಲಭ್ಯ ಕುರೂದ್ವಹ ।**
**ರಾಜೋವಾಚ ಮಹಾನ್ ಸೋಮೋ ಮನ್ಯುಂ ಪ್ರಶಮಯನ್ನಿವ ।।೬।।**

**ಕುರೂದ್ವಹ** ಪರೀಕ್ಷಿತರಾಜನೇ (ಇದರಿಂದ ನೀನೂ ರಾಜನು. ಪ್ರಜಾಪಾಲನೆಯಲ್ಲಿ ಜಾಗೃತನಾಗು ಎಂದು ಸೂಚಿಸುವರು) **ತಾಭ್ಯಾಂ** ಅವರಿಂದ ಸೃಷ್ಟವಾದ ಗಾಳಿ-ಬೆಂಕಿಗಳಿಂದ **ನಿರ್ದಹ್ಯಮಾನಾನ್** ಸಮೂಲವಾಗಿ ಸುಟ್ಟು ಹೋಗುತ್ತಿರುವ **ತಾನ್** ಆ ಮರಗಳನ್ನು **ಉಪಲಭ್ಯ** ನೋಡಿ **ರಾಜಾ** ವನಸ್ಪತಿಗಳಿಗೆ ರಾಜನಾದ **ಮಹಾನ್** ಗುಣವಂತನಾದ **ಸೋಮಃ** ಚಂದ್ರದೇವರು **ಮನ್ಯುಂ** ಪ್ರಚೇತಸರ ಕೋಪವನ್ನು **ಶಮಯನ್ನಿವ** ಸ್ವಲ್ಪ ಕಡಿಮೆ ಮಾಡುತ್ತ **ಉವಾಚ** ಹೇಳಿದನು. ಎಲ್ಲ

ದೇವತೆಗಳಿರುವಾಗ ಚಂದ್ರನಿಗೆ ಏಕಿಷ್ಟು ಹೊಟ್ಟೆಯಲ್ಲಿ ಬೆಂಕಿ ಎಂದರೆ ಹೇಳಿರುವರು **ರಾಜಾ** ಎಂದು 'ಸೋಮೋ ವೈ ವನಸ್ಪತೀನಾಂ ರಾಜಾ' ಎಂದು ಇದೆ. ಅವನು ಹೇಳಿದ್ದನ್ನು ಇವರೇಕೆ ಮಾಡುವರು ಎಂದರೆ ಹೇಳಿರುವರು **ಮಹಾನ್** ಎಂದು.

ಪ್ರೇಕ್ಷಾವಂತರಿಂದ ಅಂಗೀಕೃತವಾದ ಸರ್ವಪ್ರಮಾಣ ಮುಖ್ಯಾರ್ಥನಾದ ಶ್ರೀಹರಿಯೇ ಸೋಮನಾಗಿದ್ದಾನೆ. ಅವನೇ ಕೋಪ ಶಮನ ಮಾಡಿದನೆಂದರ್ಥ. ಅವನೂ ಕೋಪಿಷ್ಠನಾದರೆ ಕುರಿಮರಿಯನ್ನು ಹುಲಿ ಒಯ್ದರೆ ಆಗುವ ಹಾನಿ ಏನು? ತೋಳ ಒಯ್ದರೆ ಆಗುವ ಲಾಭವೇನು? ಎಂದಂತೆ ಆಯಿತಲ್ಲ ಎಂದರೆ ಹೇಳುವರು. **ಸೋಮ** ಎಂದು.

**ಉಮಾಃ** ಎಂದರೆ ಪ್ರಜೆಗಳು ಅವುಗಳಿಂದ ಸಹಿತನಾದವನು ಸೋಮ. 'ವಿರಹಪಾಲನಂ ನ ತತ್ಸಾಹಿತ್ಯಂ ಸಂಭವತಿ' 'ಪಾಲನವಿರಹೇ ನ ತತ್ಸಾಹಿತ್ಯಂ ಸಂಭವತಿ' ಎಂದಿರಬೇಕು ಎನ್ನಿಸುತ್ತದೆ. ಪ್ರಜೆಗಳ ಪಾಲನ ಮಾಡದಿದ್ದರೆ ಪ್ರಜಾಸಾಹಿತ್ಯವಿರುವದಿಲ್ಲ.

'ಸೋಮೋ ಹಿನೋತಿ ಮರ್ತ್ಯಂ' ಎಂಬ ಋಗ್ಭಾಷ್ಯ-ಟೀಕಾಗಳಲ್ಲಿ 'ಉಮ್ಯೈರ್ಯುಕ್ತತ್ವತೋऽಪಿ ವಾ' 'ಉಮ್ಯೈಃ ಭೂತ್ಯೈಃ' 'ಭೂತಾನಿ ವೈ ಊಮಾ ಇತಿ ಶ್ರುತೇಃ'. 'ಸಹ ಊಮ್ಯೈಃ ವರ್ತತೇ ಇತಿ ಸೋಮಃ' ಎಂದು ಹೀಗೆ ಹೇಳಿದೆ. ಶ್ರುತಿಯಲ್ಲಿ ಭಾಷ್ಯದಲ್ಲಿಯೂ ಊವಮಾ ಎಂದು ಪಾಠ ಎಂದು ಕೆಲವು ವ್ಯಾಖ್ಯಾನಕಾರರು. 'ಭವಂತ್ಯೂಮಾ' ಎಂದು ಅಷ್ಟಮಾಷ್ಟಕ ಸಪ್ತಮಾಧ್ಯಾಯ ಪ್ರಥಮವರ್ಗದಲ್ಲಿ ಕೇಳಿ ಬರುವದೆ ಬಲ. ಇದರಂತೆ ಅಲ್ಲಿಯೇ 'ಮದಂತ್ಯೂಮಾ' ಎಂದು ಮತ್ತೊಂದು ಋಕ್‌ನಲ್ಲಿಯೂ ಇದೆ. 'ಊರೀಕೃತಾಶ್ಚ ತಾ ಮಾಶ್ಚ ಉಮಾಃ ತಾಭಿಃ ಸಹಿತಃ ಸೋಮಃ' ಭಗವಂತನು ಮುಖ್ಯವಾಗಿ ಸಂಪತ್ತು-ಜ್ಞಾನಗಳನ್ನು ಸ್ವೀಕರಿಸಿದವನು ಅಮುಖ್ಯವಾಗಿ ಇತರರು. ಇದನ್ನೇ ಓಮಾಸಃ ಎಂಬ ಋಕ್ ವ್ಯಾಖ್ಯಾನ ಭಾಷ್ಯ ಟೀಕಾಗಳಲ್ಲಿ 'ಆಸಮಂತಾತ್ ಸ್ವೀಕೃತಾ ಮಾ ಓಮಾ ಇತಿ ಚ ಶಬ್ದಿತಃ । ಓಂನಾಮಾ ಭಗವಾನ್ ವಿಷ್ಣುಃ ತೇನ ವಾ ನಿರ್ಮಿತಾಃ ಸುರಾಃ ।। ಓತಾ ಮಾನೇಷು ಮಾ ವೈಷು ಪ್ರೋತಾ ಓಮಾ ಇತೀರಿತಾಃ । ಆಇತ್ಯನುವಾದಃ ಎಂದಾರಂಭಿಸಿ ನೈಘಂಟುಕೈಃ' ಎಂಬಲ್ಲಿವರೆಗೆ ಋಗ್ಭಾಷ್ಯಟೀಕಾದಲ್ಲಿ ಹೇಳಿದೆ. 'ರಾಜಾ ಪರಿವೃಢೇ ಚಂದ್ರೇ' ಎಂದು ಧನಂಜಯದಲ್ಲಿ ಹೇಳಿರುವಾಗ ಒಂದರಿಂದ ಆಗಲಿ




ತಂತ್ರದಿಂದಾಗಲಿ ಎರಡರ್ಥ ತೆಗೆದುಕೊಳ್ಳಲು ಬರುವಾಗ ಸೋಮ ಎಂಬುದು ಹೆಚ್ಚು ಅಲ್ಲ ಎಂಬುದು ಇದರಿಂದ ತಿಳಿಯಬೇಕು. **ಪ್ರಶಮಯನ್ ಇವ** ಸ್ವಲ್ಪ ಶಮನ ಮಾಡುತ್ತ ಎಂದರ್ಥ. 'ಉಪಮಾರ್ಥೇ ತಥಾಲ್ಪತ್ವೇ ಚೇವ ಶಬ್ದಃ ಪ್ರಯುಜ್ಯತೇ' ಎಂದು ಶಬ್ದನಿರ್ಣಯದಲ್ಲಿದೆ ಎಂದು ಬೃಹದ್ಭಾಷ್ಯದಲ್ಲಿದೆ. ಸಾದೃಶ್ಯಾರ್ಥಕತ್ವ ಇಟ್ಟುಕೊಂಡರೆ ಅಂದರೆ ಶಮನ ಆಗಿಲ್ಲ ಎಂದರ್ಥ ತೋರುವದು. ಈ ಅರ್ಥವು ಉತ್ತರಕ್ಕೆ ಅನನುಗುಣವಾಗುವುದು. ಸೋಮನ ಶ್ರಮ ವ್ಯರ್ಥವೆಂದು ತೋರುವದು. ಕಾರಣ ಅಲ್ಪ ಎಂಬ ಅರ್ಥವೇ ಸರಿ. ಅಗಾಧವಾದ ಕೋಪ ನಿಧಾನವಾಗಿ ಶಮನವಾಗುವದೇ ಉಚಿತ. ಹೀಗೆ ಶ್ರೀಗಳವರ ವ್ಯಾಖ್ಯಾನ. ।।೬।।

**ಮಾ ದ್ರುಮೇಭ್ಯೋ ಮಹಾಭಾಗಾ ದೀನೇಭ್ಯೋ ದ್ರೋಗ್ಧುಮರ್ಹಥ ।**
**ವಿವರ್ಧಯಿಷವೋ ಯೂಯಂ ಪ್ರಜಾನಾಂ ಪತಯಃ ಸ್ಮೃತಾಃ ।।೭।।**

**ಹೇ ಮಹಾಭಾಗಾಃ** ಮಹಾಭಾಗ್ಯಶಾಲಿಗಳೇ **ಯೂಯಂ** ನೀವು **ಪ್ರಜಾನಾಂ ಪತಯಃ** ಪ್ರಜೆಗಳಿಗೆ ಪಾಲಕರೆಂದು **ಸ್ಮೃತಾಃ** ಹೇಳಲ್ಪಟ್ಟಿರುವಿರಿ **ವಿವರ್ಧಯಿಷವಃ** ಬೆಳೆಯಲಿಚ್ಛಿಸುವವರು ಪ್ರಜೆಗಳನ್ನು ಬೆಳೆಸಲು ಇಚ್ಛಿಸುವವರು ಆದ್ದರಿಂದ **ದೀನೇಭ್ಯಃ** ದುಃಖತಪ್ತರಾದ ಕೃಪಾಸ್ಪದರಾದ **ದ್ರುಮೇಭ್ಯಃ** ಗಿಡಗಳಿಗೆ **ದ್ರೋಗ್ಧುಂ ಮಾ ಅರ್ಹಥ** ದ್ರೋಹ ಮಾಡಲು ಯೋಗ್ಯರಲ್ಲ.

**ದೀನೇಭ್ಯಃ** ಎಂಬ ಶಬ್ದದಿಂದ ರಕ್ಷಕರೇ ಇಲ್ಲದೇ ವೃಕ್ಷಗಳು ಕ್ಷೀಣವಾಗಿವೆ ಎಂಬದನ್ನು ತಿಳಿಸುತ್ತಿದ್ದಾರೆ. ।।೭।।

ಪ್ರಜಾಪಾಲಕರಾದ ನಿಮಗೆ ಪ್ರಜಾಭೋಗ್ಯವಾದ ವೃಕ್ಷಗಳನ್ನು ದಹಿಸುವುದು ಯೋಗ್ಯವಲ್ಲ. ಎಂದು ತಿಳಿಸುತ್ತಿದ್ದಾರೆ. ಸುಟ್ಟದ್ದೇ ಆದರೆ ಶ್ರೀಹರಿಯ ಅನುಗ್ರಹಕ್ಕೆ ದೂರರಾಗುವಿರಿ ಎಂದು ಹೇಳುತ್ತಾರೆ-

**ಆದೌ ಪ್ರಜಾಪತಿಪತಿರ್ಭಗವಾನ್ ಹರಿರವ್ಯಯಃ ।**
**ವನಸ್ಪತೀನೋಷಧೀಶ್ಚ ಸಸರ್ಜೋರ್ಜಮಿಷಂ ವಿಭುಃ ।।೮।।**

**ವಿಭುಃ** ಸರ್ವಸಮರ್ಥನಾದ **ಅವ್ಯಯಃ** ನಾಶರಹಿತನಾದ **ಪ್ರಜಾಪತಿಪತಿಃ** ಬ್ರಹ್ಮಾದಿಗಳಿಗೆ (ಬ್ರಹ್ಮದೇವರಿಗೆ) ಸ್ವಾಮಿಯಾದ **ಭಗವಾನ್** ಷಡ್ಗುಣೈಶ್ವರ್ಯ ಸಂಪನ್ನನಾದ **ಹರಿಃ** ಶ್ರೀಹರಿಯು **ಆದೌ** ಮೊದಲಿಗೆ **ವನಸ್ಪತೀನ್** ಗಿಡಗಳನ್ನು **ಓಷಧೀಃ**

ಒಂದೇ ಸಲ ಫಲ ಕೊಟ್ಟು ಒಣಗುವ ಭತ್ತ ಮುಂತಾದ ಪೈರುಗಳನ್ನು **ಊರ್ಜಂ** ದೇವತೆಗಳಿಗೆ ಅನ್ನವಾಗಿಯೂ **ಇಷಂ** ಪಿತೃಗಳಿಗೆ ಅನ್ನವಾಗಿಯೂ **ಸಸರ್ಜ** ಸೃಷ್ಟಿಸಿದನು.

'ವನಸ್ಪತಿರ್ವೃಕ್ಷಮಾತ್ರೇ ವಿನಾ ಪುಷ್ಪಫಲೇ ದ್ರುಮಃ' ಎಂದು ವಿಶ್ವ. ಎಲ್ಲ ವೃಕ್ಷಗಳಿಗೂ ವನಸ್ಪತಿ ಎನ್ನುತ್ತಾರೆ. ಹೂವು ಹಣ್ಣು ಇಲ್ಲದ ವೃಕ್ಷಗಳಿಗೆ ದ್ರುಮಗಳು ಎಂದು ಕರೆಯುತ್ತಾರೆ.

೧. ವನಸ್ಪತಿ ೨. ವೃಕ್ಷ ೩. ಲತಾ ೪. ಓಷಧಿಗಳೆಂದು ನಾಲ್ಕು ವಿಧ ಗಿಡಗಳು. ೧. ಪುಷ್ಪಿಸದೇ ಫಲಿಸುವದು ವನಸ್ಪತಿ ಆಲ ಅರಳಿ ಅತ್ತಿ ಮುಂತಾದವುಗಳು. ೨. ಪುಷ್ಪಿಸಿ ಫಲಿಸುವದು ವೃಕ್ಷ ಮಾವು ಬೇಲ ತೆಂಗು ಬೇವು ಹುಣಸೆ ಮುಂತಾದವುಗಳು. ೩. ಹಬ್ಬುವ ಕುಡಿಗಳಿಂದ ಕೂಡಿದುದು ಲತೆಗಳು. ದ್ರಾಕ್ಷಿ ಮಲ್ಲಿಗೆ ಜಾಜಿ ಮುಂತಾದವುಗಳು. ೪. ಫಲಿಸಿ ಫಲ ನೀಡಿದ ಕೂಡಲೇ ಒಣಗುವದು ಓಷಧಿಗಳು. ಕುಂಬಳ ಪಡವಲ ಸೌತೆ ಭತ್ತದ ಪೈರು ಮುಂತಾದವು.

ಊರ್ಜ ಎಂದರೆ ಪಿತ್ರನ್ನ ಇಷ ಎಂದರೆ ದೇವಾನ್ನ ಎಂದು ವಿಜಯಧ್ವಜರು ಹೇಳುತ್ತಾರೆ. ಶ್ರೀಸತ್ಯಧರ್ಮರು ಮತ್ತು ಚೆಟ್ಟಿ ಆಚಾರ್ಯರು ಉರ್ಜ ಎಂದರೆ ದೇವಾನ್ನವೆಂದು ಇಷ ಎಂದರೆ ಪ್ರಿತ್ರನ್ನ ಎಂದು ಹೇಳುತ್ತಾರೆ. ಆ ವಿಷಯದಲ್ಲಿ ಬೃಹದ್ಭಾಷ್ಯದ ಸಮ್ಮತಿಯನ್ನೂ ತೋರಿಸುತ್ತಾರೆ. 'ಊರ್ಜಂ ದೇವಾನ್ನಮುದ್ದಿಷ್ಟ-ಮೂರ್ಜಿತಾಸ್ತು ಗುಣಾಸ್ತಥಾ' 'ಊರ್ಜಂ ನೋ ಧೇಹಿ ದ್ವಿಪದೇ ಚತುಷ್ಪದೇ' 'ಇಷಮೂರ್ಜಮಸ್ಮಾಸು ಧೇಹ್ಯೂರ್ಜಂ ತದಾಥಾ ಊರ್ಜಂ ಮೇ ದತ್ತ ಸರಸ್ವತೀಮಿಷಂ' ಮುಂತಾಗಿ ಶ್ರುತಿಯಿದೆ. ಇದು ಅವಾಂತರ ಸೃಷ್ಟಿಯಲ್ಲ ಎಂದು ತಿಳಿಸಲು **ಆದೌ** ಎಂದಿದ್ದಾರೆ. ಪ್ರಜಾಪತಿಪತಿಯು ವಿಧಾತಾ ಅಲ್ಲ ಎಂದು ತಿಳಿಸಲು **ಭಗವಾನ್** ಎಂದಿದ್ದಾರೆ. ಆ ಭಗವಂತನೂ 'ಭಗವಾನ್ ಹರಿವಾತಾರ್ಕ...' ಎಂದು ವಿಶ್ವವಿರುವದರಿಂದ ಮಾತರಿಶ್ವಾ ವಾಯು ಸೂರ್ಯ ಇತ್ಯಾದಿಗಳು ಅಲ್ಲ ಎನ್ನಲು **ಅವ್ಯಯಃ** ಎಂದು ಹೇಳಿರುವರು ಎಂದು ತಿಳಿಯಬೇಕು. ಆ ನಾರಾಯಣನು ದೂರ ಇದ್ದವನಲ್ಲ ಎಂದು ಕೂಡಾ ಅವ್ಯಯಃ ಎಂಬ ಪದವು ತಿಳಿಸುತ್ತದೆ. **ಅವ್ಯಯಃ** ಅವಿಂ ಸೂರ್ಯಂ ಅಯತೇ ಗಚ್ಛತಿ ಇತಿ ಅವ್ಯಯಃ ಎಂದರೆ ಸೂರ್ಯಾಂತರ್ಗತನೆಂದರ್ಥ. 'ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ' ಎಂದಿದೆ. 'ಅವಿಃ ಶೈಲೇ ರವೌ'

ಎಂದು ವಿಶ್ವವಿದೆ. 'ಅವಯಃ ಶೈಲಮೇಷಾರ್ಕಾಃ' ಎಂದು ಅಭಿಧಾನವಿದೆ ಎನ್ನುತ್ತಾರೆ ಶ್ರೀಗಳು. ।।೮।।

ಸಾಧಾರಣವಾದ ಪ್ರಾಣಧಾರಣ ಅನ್ನವನ್ನು ಹೇಳುವರು-

**ಅನ್ನಂ ಚರಾಣಾಮಚರಾ ಹ್ಯಪಾದಃ ಪಾದಚಾರಿಣಾಮ್ ।**
**ಅಹಸ್ತಾ ಹಸ್ತಯುಕ್ತಾನಾಂ ದ್ವಿಪದಾಂ ಚ ಚತುಷ್ಪದಃ ।।೯।।**

**ಚರಾಣಾಂ** ಚೇತನರಿಗೆ **ಅಚರಾಃ** ವ್ರೀಹಿ ಮೊದಲಾದ ಸ್ಥಾವರಗಳು **ಅಪಾದಃ** ಚರಪ್ರಾಣಿಗಳಲ್ಲಿಯೂ ಕಾಲಿಲ್ಲದೇ ಇದ್ದದ್ದು (ಅಪಾದ ಎಂಬಲ್ಲಿ ಪಾದ ಎಂದು ಅಕಾರಾಂತವಾದ ಶಬ್ದವಲ್ಲ. ಕಿಂತು ಪಾತ್ ಶಬ್ದ ಎಂದಿಟ್ಟುಕೊಂಡಲ್ಲಿ ಬಹುವಚನದ ಅತಿಕ್ರಮಣವಾಗುವುದಿಲ್ಲ.) ಕಾಲಿಲ್ಲದವುಗಳು **ಪಾದಚಾರಿಣಾಂ** ಕಾಲಿನಿಂದ ತಿರುಗಾಡುವ ಪ್ರಾಣಿಗಳಿಗೆ **ಅಹಸ್ತಾಃ** ಕೈಯಿಲ್ಲದವುಗಳು **ಹಸ್ತಯುಕ್ತಾನಾಂ** ಕೈಯಿರುವ ಪ್ರಾಣಿಗಳಿಗೆ **ದ್ವಿಪದಾಂ** ಎರಡು ಕಾಲಿನ ಪ್ರಾಣಿಗಳಿಗೆ **ಚತುಷ್ಪದಃ ಚ** ನಾಲ್ಕು ಕಾಲಿನ ಪ್ರಾಣಿಗಳು **ಅನ್ನಂ** ಆಹಾರವೆಂದು ಪ್ರತ್ಯೇಕ ಅನ್ವಯ ಮಾಡಬೇಕು. ಮನುಷ್ಯರೇ ದ್ವಿಪದರು. ಅವರಿಗೆ ಚತುಷ್ಪದಗಳು ಎಂದರೆ ವಿಹಿತವಾದ ಪಂಚನಖಗಳು ಅನ್ನವೆಂದು ತಿಳಿಯಬೇಕು. ।।೯।।

ದ್ರೋಹ ಮಾಡದೇ ಗಿಡಗಳನ್ನು ಸುಟ್ಟರೆ ಶ್ರೀಹರಿಯು ಸೃಷ್ಟಿಸಿದ್ದನ್ನು ನಷ್ಟ ಮಾಡಿದ್ದರಿಂದ ಅವನ ಅನುಗ್ರಹ ನಿಮಗೆ ಆಗುವದಿಲ್ಲವೆಂದು ಭಾವ. ।।೯।।

**ಯೂಯಂ ಚ ಪಿತ್ರಾಽನ್ವಾದಿಷ್ಟಾ ದೇವದೇವೇನ ಚಾನಘಾಃ ।**
**ಪ್ರಜಾಸರ್ಗಾಯ ಹಿ ಕಥಂ ವೃಕ್ಷಾನ್ ನಿರ್ದಗ್ಧುಮರ್ಹಥ ।।೧೦।।**

**ಅನಘಾಃ** ಪಾಪರಹಿತರೇ **ಪಿತ್ರಾ** ನಿಮ್ಮಂತೆ ಪ್ರಾಚೀನಬರ್ಹಿ ರಾಜನಿಂದಲೂ **ಚ** ಮತ್ತು **ದೇವದೇವೇನ** ವಿಷ್ಣುವಿನಿಂದ ಬ್ರಹ್ಮದೇವರಿಂದ **ಪ್ರಜಾಸರ್ಗಾಯ** ಪ್ರಜೆಗಳ ಸೃಷ್ಟಿಗಾಗಿ **ಅನ್ವಾದಿಷ್ಟಾಃ** ಆಜ್ಞಪ್ತರಾದ **ಯೂಯಂ** ನೀವೂ **ವೃಕ್ಷಾನ್** ಪ್ರಜಾಭೋಗ್ಯಗಳಾದ ಗಿಡಗಳನ್ನು **ಕಥಂ** ಹೇಗೆ **ನಿರ್ದಗ್ಧುಂ** ಸುಡಲು **ಅರ್ಹಥ** ಅರ್ಹರಾಗಿದ್ದೀರಿ. ಅರ್ಹರಲ್ಲವೆಂದು ಭಾವ.

ಯಾವುದಕ್ಕಾಗಿ ಸೃಷ್ಟರಾಗಿರುವರೋ ಅದರ ದಾಹ ಯೋಗ್ಯವಲ್ಲ. ದೇವನೇ ಆ ಅದೃಷ್ಟ ನಮಗಿಲ್ಲ ಎಂದರೆ ಹೇಳುವದು. **ಆದಿಷ್ಟಾಃ** ಆ ಸಮೀಚೀನವಾದ ಸೃಷ್ಟಿ ಮಾಡುವ **ದಿಷ್ಟಂ** ದೈವವು ಯಾರಿಗೆ ಇದೆಯೋ ಅವರು ಆದಿಷ್ಟರು ಎಂದು ಭಾವ.

ತಂದೆಯ ಆಜ್ಞೆಯು ತಿರಸ್ಕಾರ್ಯವಲ್ಲ ಎಂತು ತಿಳಿಸುವುದಕ್ಕಾಗಿ **ಪಿತ್ರಾ** ಎಂದಿರುವರು. ತಂದೆಯದ್ದೊಂದೇ ಆಜ್ಞೆಯಾಗಿದ್ದರೆ ನಾನು ಮಾತ್ರ ಕದಾಚಿತ್ ಅನುಸರಿಸಬೇಕು. ಕದಾಚಿತ್ ಅನುಸರಿಸದಿದ್ದರೆ ಸ್ನೇಹವಿಶೇಷದಿಂದ ನಾನು ಮಾಡಿದ ಈ ತಪ್ಪನ್ನು ಸಹಿಸಬಹುದು ಎಂದರೆ **ದೇವದೇವೇನ** ಎಂದು ಹೇಳಿರುವರು. ಸಕಲಸುರರಿಂದ ಪೂಜ್ಯನಾದ ಶ್ರೀಹರಿಯಿಂದಲೂ ಆಜ್ಞಪ್ತನೆಂದು ಅರ್ಥ. ।।೧೦।।

**ಆತಿಷ್ಠತ ಸತಾಂ ಮಾರ್ಗಂ ಕೋಪಂ ಯಚ್ಛತ ದೀಪಿತಮ್ ।**
**ಪಿತ್ರಾ ಪಿತಾಮಹೇನಾಽಪಿ ಜುಷ್ಟಂ ವಃ ಪ್ರಪಿತಾಮಹೈಃ ।।೧೧।।**

**(ತಸ್ಮಾತ್)** ಆದ್ದರಿಂದ **ವಃ** ನಿಮ್ಮ **ಪಿತ್ರಾ** ತಂದೆಯಿಂದಲೂ **ಪಿತಾಮಹೇನ** ತಾತನಿಂದಲೂ **ಪ್ರಪಿತಾಮಹೈಃ** ಮುತ್ತಾತಂದಿರಿಂದಲೂ **ಜುಷ್ಟಂ** ಸೇವಿತವಾದ ಅನುಸರಿಸಲ್ಪಟ್ಟ **ಸತಾಂ ಮಾರ್ಗಂ** ಸಜ್ಜನರ ಮಾರ್ಗವನ್ನು ಅವರ ಉಪದೇಶವನ್ನು **ಆತಿಷ್ಠತ** ಆಶ್ರಯಿಸಿರಿ. **ದೀಪಿತಂ** ತಪಸ್ಸಿನಿಂದ ಉದ್ದೀಪಿತವಾದ **ಕೋಪಂ** ಸಿಟ್ಟನ್ನು **ಯಚ್ಛತ** ತಡೆಯಿರಿ.

ದೀನರನ್ನು ಸಂರಕ್ಷಿಸಿರಿ ಇತ್ಯಾದಿಯಾಗಿ ನೀವೇನೋ ಉಪದೇಶ ಮಾಡುತ್ತಿದ್ದೀರಿ. ಆದರೆ ನಮ್ಮ ವಂಶದಲ್ಲಿ ಈ ಆಚಾರವಿಲ್ಲ ಎಂದರೆ ಪಿತ್ರಾ ಮುಂತಾಗಿ ಹೇಳಿದರು. 'ಪಿತಾಮಹಾದ್ಯಾಸ್ತು ಪಿತರೋ ನಾಮ ಕೀರ್ತಿತಾಃ' ಎಂದು ಐತರೇಯಭಾಷ್ಯದಲ್ಲಿ ಹೇಳಿದ ಪ್ರಕಾರ **ಪಿತೃಭಿಃ** ಎಂದರೆ ಎಲ್ಲರೂ ಬರುವರು. ಆದರೂ ದೀನರಕ್ಷಣ ಮಾರ್ಗ ಕುಲಪರಂಪರಾಗತವಾಗಿದೆ. ಮಧ್ಯದಲ್ಲಿ ಸಂಕುಚಿತವಾಗಿಲ್ಲ ಎಂದು ತಿಳಿಸಲು ಪ್ರತ್ಯೇಕವಾಗಿ ಪಿತ್ರಾ ಪಿತಾಮಹೇನ ಪ್ರಪಿತಾಮಹೈಃ ಎಂದು ಹೇಳಿದರು. ।।೧೧।।

ಎಲ್ಲ ಪ್ರಾಣಿಗಳು ಭಗವಂತನಿಗೆ ಅಧಿಷ್ಠಾನವಾಗಿವೆ. ಆದ್ದರಿಂದ ಈ ವೃಕ್ಷದಹನದಿಂದ ನಿಮಗೆ ಒಳ್ಳೆಯದಾಗುವುದಿಲ್ಲ. ಎಂದು ಉಪಯುಕ್ತವಾದುದನ್ನು ಯುಕ್ತವಾಗಿ ಇಲ್ಲಿ ಹೇಳುತ್ತಿದ್ದಾರೆ-

ಮತ್ತೊಬ್ಬ ರಕ್ಷಕರಿಲ್ಲದ ವೃಕ್ಷಗಳನ್ನು ಸುಟ್ಟಲ್ಲಿ ಶರಣಾಗತರನ್ನು ಕೊಂದ ದೋಷ ನಿಮಗೆ ಬರುವದೆಂಬ ಅಭಿಪ್ರಾಯದಿಂದ ಹೇಳುತ್ತಾರೆ-

**ತೋಕಾನಾಂ ಪಿತರೌ ಬಂಧೂ ದೃಶಃ ಪಕ್ಷ್ಮ ಸ್ತ್ರಿಯಃ ಪತಿಃ ।**
**ನೃಪಃ ಪ್ರಜಾನಾಂ ಭಿಕ್ಷೂಣಾಂ ಗೃಹ್ಯಜ್ಞಾನಾಂ ಬುಧಃ ಸುಹೃತ್ ।।೧೨।।**

**ತೋಕಾನಾಂ** ಮಕ್ಕಳಿಗೆ **ಪಿತರೌ** ತಂದೆತಾಯಿಗಳು **ಬಂಧೂ** ಬಂಧುಗಳು **ದೃಶಃ** ಕಣ್ಣುಗಳಿಗೆ **ಪಕ್ಷ್ಮ** ರೆಪ್ಪೆಯು ಬಂಧುವು **ಭಿಕ್ಷೂಣಾಂ** ಸನ್ಯಾಸಿಗಳಿಗೆ **ಗೃಹೀ** ಗೃಹಸ್ಥನು ಬಂಧುವು **ಅಜ್ಞಾನಾಂ** ಅಜ್ಞಾನಿಗಳಿಗೆ **ಬುಧಃ** ಜ್ಞಾನಿಯು **ಸುಹೃತ್** ಜ್ಞಾನದಾನ ಮಾಡುವ ಮೂಲಕ ಸ್ನೇಹಿತನು ನಿರ್ವ್ಯಾಜಬಂಧುವು **ಬಂಧೂ** ಎಂಬುದು ವಿಪರಿಣತವಾಗಿ ಅಲ್ಲಲ್ಲಿ ಅನ್ವಿತವಾಗುವದು ಅಥವಾ ಆವೃತ್ತವಾದ **ಸುಹೃತ್** ಎಂಬುದು ಪಕ್ಷ್ಮ ಮುಂತಾದವುಗಳಲ್ಲಿ ಅನ್ವಯಿಸುವದು. **ಪ್ರಜಾನಾಂ** ಪ್ರಜೆಗಳಿಗೆ **ನೃಪಃ** ರಾಜನು **ಸುಹೃತ್** ಉಪಕಾರಕನು. **ಸ್ತ್ರಿಯಃ** ಹೆಣ್ಣು ಮಕ್ಕಳಿಗೆ **ಪತಿಃ** ಗಂಡನು ಬಂಧುವು **ಸ್ತ್ರೀಯಾಃ** ಎಂದು ಕೆಲವೆಡೆ ಪಾಠವಿದೆ. ಅದೇ ಸರಳ. ಹೆಂಡತಿಗೆ ಗಂಡನು **ಸುಹೃತ್** ಅನಿಮಿತ್ತ ಉಪಕಾರಕನೆಂದರ್ಥ. **ಬುಧಃ** ಸ್ವಲ್ಪ ತಿಳಿದವನಿಗೆ **ಸುಹೃತ್** ಸುಮನಸ್ಕನು ಬಂಧುವು ಹೀಗೆ ಅರ್ಥಮಾಡಿದಾಗ ಬಂಧು ಪದದ ಅನ್ವಯ ಎಲ್ಲ ಕಡೆಗೆ ಎಂದು ತಿಳಿಯಬೇಕು.

ಪ್ರಜೆಗಳಿಗೆ ಪ್ರಜಾಪಾಲಕರಾದ ನೀವೇ ಬಂಧುಗಳು ಕಾರಣ ಅವರ ಜೀವಿಕಾ ನಾಶ ಮಾಡಬಾರದು ಎನ್ನಲು ಈ ದೃಷ್ಟಾಂತ ಕೊಟ್ಟು ತಿಳಿಸಿರುವರು. ಅವರನ್ನೇ ಕಟಾಕ್ಷೀಕರಿಸಿ ಹೇಳಿದ್ದು ನೃಪಃ ಪ್ರಜಾನಾಂ ಎಂದು. ।।೧೨।।

ಇದರಿಂದ ಶ್ರೀಹರಿಯ ದ್ರೋಹ ಬಗೆದಂತೆ ಎಂದು ಹೇಳುವರು-

**ಅಂತರ್ದೇಹೇಷು ಭೂತಾನಾಮಾತ್ಮಾऽಸ್ತೇ ಹರಿರೀಶ್ವರಃ ।**
**ಸರ್ವಂ ತದ್ಧಿಷ್ಣ್ಯಮೀಕ್ಷಧ್ವಮೇವಂ ವಸ್ತೋಷಿತೋ ಹ್ಯಸೌ ।।೧೩।।**

**ಭೂತಾನಾಂ** ಪ್ರಾಣಿಗಳ **ದೇಹೇಷು ಅಂತಃ** ದೇಹಗಳೊಳಗೆ **ಆತ್ಮಾ** ಅಂತರ್ಯಾಮಿಯಾದ ಗುಣಪೂರ್ಣನಾದ ವ್ಯಾಪ್ತನಾದ **ಈಶ್ವರಃ** ಈಶರಾದ ಬ್ರಹ್ಮರುದ್ರಾದಿಗಳಿಗಿಂತ ಶ್ರೇಷ್ಠನಾದ **ಹರಿಃ** ಶ್ರೀಹರಿಯು **ಆಸ್ತೇ ಯತಃ** ಇರುವನಾದ್ದರಿಂದ **ಸರ್ವಂ** ಎಲ್ಲ ಪದಾರ್ಥಗಳು **ತದ್ಧಿಷ್ಣ್ಯಂ** ಹರಿಯ ಆವಾಸ ಸ್ಥಾನವೆಂದು **ಈಕ್ಷಧ್ವಂ** ತಿಳಿಯಿರಿ. **ಏವಂ** ಹೀಗೆ ತಿಳಿದದ್ದಾದರೆ **ಅಸೌ** ಶ್ರೀಹರಿಯು **ವಃ** ನಿಮ್ಮಿಂದ **ತೋಷಿತಃ ಭವತಿ** ಸಂತುಷ್ಟನಾಗುವನು.

ಭೂತಗಳು ಈಶ್ವರನಿಗೆ ಅಧಿಷ್ಠಾನವಾಗಿವೆ. ಆದ್ದರಿಂದ ಭೂತದ್ರೋಹ ಮಾಡಬಾರದು. ಸರಿ. ನಾವೀಗ ಭೂತಗಳನ್ನು ದಹಿಸುತ್ತಿಲ್ಲ. ವೃಕ್ಷಗಳನ್ನು ದಹಿಸುತ್ತಿದ್ದೇವೆ. ಇದು ಹೇಗೆ ಭೂತದ್ರೋಹವಾಗುತ್ತದೆ. ತನ್ಮೂಲಕ

ಈಶ್ವರದ್ರೋಹವೆಂದು ಹೇಗಾಗುತ್ತದೆ. ಎಂಬ ಶಂಕೆಗೆ ಉತ್ತರಿಸಲು **ಸರ್ವಂ ತದ್ಧಿಷ್ಣ್ಯಂ** ಎಂದು ಹೇಳಿದ್ದಾರೆ. ಭೂತಗಳು ಮಾತ್ರವಲ್ಲ, ಎಲ್ಲವೂ ಈಶ್ವರನಿಗೆ ಅಧಿಷ್ಠಾನವೇ ಆಗಿದೆ. ಆದ್ದರಿಂದ ವೃಕ್ಷದಾಹವೂ ಈಶ್ವರದಾಹವಾದಂತೆಯೇ ಎಂದು ಹೇಳಿದ ಹಾಗಾಗುತ್ತದೆ.

**ಯದ್ಧಿಷ್ಣ್ಯಂ** ಯಾವ ಕೋಪವೆಂಬ ಅಗ್ನಿಯು **ಅಂತಃ** ನಾಶಕವು ಎಂದು **ಸರ್ವಂ** ನಾವು ಹೇಳಿದ ಎಲ್ಲವನ್ನು **ಈಕ್ಷಧ್ವಂ** ವಿಚಾರ ಮಾಡಿರಿ ಆ ಕೋಪಾಗ್ನಿಯ **ಅಂತಃ** ಒಳಗೂ ಹರಿಯಿದ್ದಾನೆ. ಹೀಗೂ ಅರ್ಥ.

ಶ್ರೀಹರಿಯ ಸಂತೋಷವು ಸುಖ-ದುಃಖ-ಆಯ-ವ್ಯಯಗಳಲ್ಲೊಂದಲ್ಲ. ಆದರಿಂದ ನಮಗೇನು ಪ್ರಯೋಜನವೆಂದರೆ ಹಿ ಶಬ್ದದಿಂದ 'ತುಷ್ಟೇ ತು ತತ್ರ ಕಿಮಲಭ್ಯಮನಂತ ಈಶೇ' ಮುಂತಾದ ಪ್ರಮಾಣಸಿದ್ಧವಾದ ಸರ್ವಫಲಸೌಲಭ್ಯವನ್ನು ತಿಳಿಸಿರುವರು. ॥೧೩॥

ಈ ಕಾರಣದಿಂದಲೂ ಕೋಪಪಡಬಾರದು ಎಂದು ಹೇಳುವರು-

**ಯಃ ಸಮುತ್ಪತಿತಂ ದೇಹ ಆಕಾಶಾನ್ಮನ್ಯುಮುಲ್ಬಣಮ್ ।**
**ಆತ್ಮಜಿಜ್ಞಾಸಯಾ ಯಚ್ಛೇತ್ ಸ ಗುಣಾನತಿವರ್ತತೇ ॥೧೪॥**

**ಯಃ** ಯಾವನು **ದೇಹೇ** ದೇಹದಲ್ಲಿ **ಆಕಾಶಾತ್** ೧. ಹೃದಯಾಕಾಶದಿಂದ ೨. 'ಆಕಾಶಸ್ತಲ್ಲಿಂಗಾತ್' ಎಂದಿರುವದರಿಂದ ಆಕಾಶನಾಮಕನಾದ ಭಗವಂತನಿಂದ ೩. 'ಆಕಾಶನಾಮಿಕಾ ಶ್ರೀಶ್ಚ' ಎಂದು ಬೃಹದ್ಭಾಷ್ಯದಲ್ಲಿರುವುದರಿಂದ ಸಕಲ ವಾಙ್ಮನೋನಿಯಾಮಕಳಾದ ಲಕ್ಷ್ಮೀದೇವಿಯಿಂದ ೪. 'ಆಕಾಶೋ ವಿಘ್ನ ಉದ್ದಿಷ್ಟಃ ಕಾಶತೇ ಹಿ ಪೃಥೂದರಃ' ಎಂದೂ ಪ್ರಮಾಣವಿರುವದರಿಂದ ಆಕಾಶಾಭಿಮಾನಿ ಯಾದ್ದರಿಂದಲೂ ಆದಿಸೃಷ್ಟಿ ವಿಘ್ನ ಕೊಟ್ಟಿದ್ದರಿಂದಲೂ ಆಕಾಶನಾಮಕನಾದ ವಿನಾಯಕನಿಂದ ಈ ಎಲ್ಲ ನಿಮಿತ್ತದಿಂದ **ಸಮುತ್ಪತಿತಂ** ಪ್ರಜ್ವಲಿತವಾದ 'ಆಕಾಶಾದ್ದೇಹೇ ಸಮುತ್ಪತಿತಂ' ಎಂದರೆ ಆಕಸ್ಮಿಕವಾದ ಎಂಬ ಅರ್ಥವನ್ನು ಚಟ್ಟೀ ಆಚಾರ್ಯರು ಹೇಳುತ್ತಾರೆ. **ಉಲ್ಬಣಂ** ಅತಿಶಯವಾದ **ಮನ್ಯುಂ** ಕೋಪವನ್ನು **ಆತ್ಮಜಿಜ್ಞಾಸಯಾ** ಶ್ರೀಹರಿಯ ವಿಚಾರದಿಂದ 'ಜ್ಞಾನೇಚ್ಛಾಂತರ್ಗತೋ ವಿಚಾರೋ ಲಕ್ಷ್ಯತೇ' ಎಂದಾರಂಭಿಸಿ 'ಜಿಜ್ಞಾಸಿತಂ ಸಂಪನ್ನಂ' ಎಂಬಲ್ಲಿ ವರೆಗೆ ಸುಧಾ-ತತ್ತ್ವ ಪ್ರಕಾಶಿಕಾಗಳಲ್ಲಿ ರೂಢಿಯಿಂದ ಲಕ್ಷಣಯಾ ವಿಚಾರಪರ ಎಂದು ಹೇಳಿದ್ದಾರೆ.

'ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ' ಎಂಬ ಶ್ರುತ್ಯರ್ಥವನ್ನು ಪರ್ಯಾಲೋಚಿಸಿ ಭೂತದ್ರೋಹದಿಂದ ಶ್ರೀಹರಿಯ ದ್ರೋಹವೇ ಆಗುವದೆಂಬ ಭಾವನೆಯಿಂದ **ಯಚ್ಛೇತ್** ಉಪಶಮ ಮಾಡಿಕೊಳ್ಳುವನೋ **ಸಃ** ಅವನು **ಗುಣಾನ್** ಸಂಸಾರಕಾರಣಗಳಾದ ಪ್ರಾಕೃತಗುಣಗಳನ್ನು **ಅತಿವರ್ತತೇ** ಅತಿಕ್ರಮಿಸಿ ಇರುವನು. ಮುಕ್ತನಾಗುವನೆಂದರ್ಥ. ಶ್ರೀಹರಿಯೇ ಸ್ವತಂತ್ರನು. ಅವನೇ ಎಲ್ಲಕ್ಕೂ ಸ್ವಾಮಿಯೆಂಬ ವಿಚಾರದಿಂದ ಪ್ರಾಣಿಗಳಲ್ಲಿ ಕೋಪವನ್ನು ಬಿಡಬೇಕೆಂದು ಅಭಿಪ್ರಾಯ.

**ಸಮುತ್ ಪತಿತಂ** ಎಂದು ಪದಚ್ಛೇದ ಸಮುತ್ ಚ ಭವತಿ ಎಂದು ಶೇಷ. ಸಂತೋಷವುಳ್ಳವನೆಂದರ್ಥ. ಕೋಪ ಕೊಡುವವನು ಕಳೆಯುವವನು ಶ್ರೀಹರಿಯೇ ಆಗಿದ್ದಾನೆ. ಆದ್ದರಿಂದ ಶ್ರೀಹರಿಯ ಜಿಜ್ಞಾಸೆಯನ್ನು ಅವಶ್ಯವಾಗಿ ಮಾಡಬೇಕು.

ಆಕಾಶಾದ್ದೇಹೇ ಸಮುತ್ಪತಿತಂ ಎಂಬುದಕ್ಕೆ ಆಕಸ್ಮಿಕವೆಂಬ ವ್ಯಾಖ್ಯಾನ ಸರಿಯಲ್ಲವೆನ್ನುತ್ತಾರೆ ಶ್ರೀಪಾದಂಗಳವರು. ।।೧೪।।

**ಅಲಂ ದಗ್ಧೈಃ ದ್ರುಮೈಃ ದೀನೈಃ ಶೇಷಾಣಾಂ ಶಿವಮಸ್ತು ವಃ ।**
**ವಾರ್ಕ್ಷೀ ಹ್ಯೇಷಾ ವರಾ ಕನ್ಯಾ ಪತ್ನೀತ್ವೇ ಪ್ರತಿಗೃಹ್ಯತಾಮ್ ।।೧೫।।**

**ದಗ್ಧೈಃ** ಸುಡಲ್ಪಟ್ಟ **ದೀನೈಃ ದ್ರುಮೈಃ** ರಕ್ಷಕರಿಲ್ಲದ ಮರಗಳಿಂದ **ಅಲಂ** ಸಾಕು ಇವುಗಳನ್ನು ಸುಟ್ಟಿದ್ದು ಸಾಕು **ಶೇಷಾಣಾಂ** ಅಳಿದುಳಿದಿರುವ ಗಿಡಗಳಿಗೂ **ವಃ** ನಿಮಗೂ **ಶಿವಂ ಅಸ್ತು** ಕಲ್ಯಾಣವಾಗಲಿ **ಏಷಾ** ಎದುರಿಗೆ ಇರುವ **ವಾರ್ಕ್ಷೀ** ವೃಕ್ಷಗಳಿಂದ ರಕ್ಷಿತಳಾಗಿದ್ದರಿಂದ ಅವುಗಳ ಮಗಳಾದ **ವರಾ** ನಿಮ್ಮಿಂದ ವರಿಸಲು ಯೋಗ್ಯಳಾದ **ಹಿ ಕನ್ಯಾ** ಅವಿವಾಹಿತಳಾಗಿರುವ **ತಾಂ** ಅವಳನ್ನು **ಪತ್ನೀತ್ವೇ** ಹೆಂಡತಿಯಾಗಿ **ಪ್ರತಿಗೃಹ್ಯತಾಂ** ಸ್ವೀಕರಿಸಿರಿ. ವಃ ನಿಮ್ಮಿಂದ ಉಳಿದ ವೃಕ್ಷಗಳಿಗೆ **ಶಿವಮಸ್ತು** ಮಂಗಳವಾಗಲಿ ಎಂದಾದರೂ ಅರ್ಥ.

ವೃಕ್ಷಗಳ ರಕ್ಷಣೆಗಾಗಿ ವೃಕ್ಷಗಳ ಸಂಬಂಧ ಹೇಳಿರುವನು. ಚಂದ್ರನಿಂದ ಕಲ್ಲುಗಳೂ ಕರಗುತ್ತವೆ. ಚಂದ್ರನ ಮಾತಿನಿಂದ ಕಲ್ಲಿನಂತಹ ಹೃದಯವೂ ಕರಗುವದು ಅಷ್ಟೇ. 'ನನ್ವಗ್ನಿಃ ಪ್ರಮದಾ ನಾಮ ಘೃತಕುಂಭಸಮಃ ಪುಮಾನ್' ಎಂದಿದೆ. ಸ್ತ್ರೀಯು ಅಗ್ನಿ ಇದ್ದಂತೆ ಪುರುಷ ತುಪ್ಪದ ಕೊಡವಿದ್ದಂತೆ ಎಂದರ್ಥ. ಆದಕಾರಣ ಈ ಕಾಣಿಕೆಯನ್ನು ಚಂದ್ರನು ಹೇಳುವನು.

**ವರಾ** ಉತ್ತಮಳಾದ ಅಥವಾ ವರಗಳನ್ನು ವರಿಸುವಳಾದ್ದರಿಂದ ವರಾ ಎಂದರ್ಥ. ಇದರಿಂದ ವಿವಾಹವಾಗಿಲ್ಲವೆಂದು ಸೂಚಿಸುವನು. **ಕನ್ಯಾ** ದೀಪ್ತಿಮತಿಯಾದ 'ಕನಿ ದೀಪ್ತೌ ಎಂಬ ಧಾತು ಇದೆ. ಇದರಿಂದ ನಿರಾಕರಿಸಲು ಕಾರಣವಾದ ಕುರೂಪ ಇಲ್ಲವೆಂದು ಸೂಚಿಸುವನು. 'ಪಂಚ ಕನ್ಯಾಃ ಸ್ಮರೇನ್ನಿತ್ಯಂ' ಎಂಬಲ್ಲಿ ಕನ್ಯಾ ಎಂದಿದ್ದರೂ ಅವರೆಲ್ಲರೂ ವಿವಾಹಿತರೇ. ಅವಿವಾಹಿತರಲ್ಲ. ಆದ್ದರಿಂದ ಕನ್ಯಾತ್ವವನ್ನು ಪ್ರಯೋಜಕ ಎಂದು ಮಾಡದೆ ವ್ಯಭಿಚಾರವಿಲ್ಲದಿರುವ ವರಯಿತೃತ್ವ (ವರವನ್ನೇಪೇಕ್ಷಿಸುವುದು) ಪ್ರಯುಕ್ತವಾದ ವರತ್ವವೇ ಅವಿವಾಹಿತತ್ವಕ್ಕೆ ಪ್ರಯೋಜಕವಾಗಿ ಹೇಳಿದ್ದಾರೆಂದು ತಿಳಿಯಬೇಕು.

ಕನ್ಯಾಪರೀಕ್ಷೆಗೆ ಬಹಳ ಕಾಲದ ಅವಕಾಶವೂ ಬೇಕಿಲ್ಲ. ಕೇವಲ ಜನರ ಮಾತಿನಿಂದಲೂ ತಿಳಿದುಕೊಳ್ಳುವ ಪ್ರಸಂಗವಿಲ್ಲ. ನಿಮ್ಮ ಎದುರಿಗೆ ಅವಳು ಇದ್ದಾಳೆ ಎಂದು ಏಷಾ ಎಂಬ ಮಾತಿನಿಂದ ತಿಳಿಸುತ್ತಿದ್ದಾರೆ.

ಭಾರ್ಯತ್ವೇ ಎನ್ನದೇ ಪತ್ನೀತ್ವೇ ಎಂದದ್ದರಿಂದ. ಯಾಗಾದಿಗಳಿಗೆ ಅನುಪಯುಕ್ತ ಜಾತ್ಯಂತರದಲ್ಲಿ ಜನಿಸಿದವಳಲ್ಲ ಇವಳು ಎಂದು ಸೂಚಿಸುವರು. ಆದ್ದರಿಂದಲೇ 'ಪತ್ಯುರ್ನೋ ಯಜ್ಞಸಂಯೋಗೇ' ಎಂಬ ಸ್ತ್ರೀಪ್ರತ್ಯಯ ಸೂತ್ರವನ್ನು ವ್ಯಾಖ್ಯಾನಿಸುವಾಗ ಯಜ್ಞಕ್ಕೆ ಉಪಯೋಗವಾಗದವಳಿಗೆ ಪತ್ನೀ ಎನ್ನಬಾರದು ಎಂದು ಹೇಳಿ ಹಾಗಾದರೆ ವೃಷಲಸ್ಯ ಪತ್ನೀಂ ಎನ್ನುವದು ಹೇಗೆ ಎಂದರೆ ಪತ್ನೀ ಇವ ಪತ್ನೀ ಎಂದು ಉಪಚಾರ ಎಂಬ ಉತ್ತರ ಹೇಳಿದ್ದಾರೆ. ಅದು ಸಂಗತವಾಗುವದು ಎಂದು ತಿಳಿಯಬೇಕು. ।।೧೫।।

**ಇತ್ಯಾಮಂತ್ರ್ಯ ವರಾರೋಹಾಂ ಕನ್ಯಾಮಾಪ್ಸರಸೀಂ ನೃಪ ।**
**ಸೋಮೋ ರಾಜಾ ಯಯೌ ದತ್ವಾ ತೇ ಧರ್ಮೇಣೋಪಯೇಮಿರೇ ।।**

**ನೃಪಃ** ಪರೀಕ್ಷಿತನೇ **ರಾಜಾ** ವೃಕ್ಷಗಳನ್ನು ಕಿರಣಗಳಿಂದ ರಂಜಿಸುವ (ಸಂತೋಷ ಪಡಿಸುವ) **ಸೋಮಃ** ಚಂದ್ರನು **ಇತಿ** ಮೇಲೆ ಹೇಳಿದಂತೆ **ಆಮಂತ್ರ್ಯ** ಪ್ರಚೇತಸರೊಡನೆ ಆಲೋಚಿಸಿ **ವರಾರೋಹಾಂ** ಸುಂದರಳಾದ ಸುಂದರ ನಿತಂಬ ಉಳ್ಳ **ಆಪ್ಸರಸೀಂ ಕನ್ಯಾಂ** ಕಂಡು ಋಷಿಗಳಿಂದ ಪ್ರಮ್ಲೋಚೆ ಎಂಬ ಅಪ್ಸರಸೆಯಲ್ಲಿ ಜನಿಸಿದ ಕನ್ಯೆಯನ್ನು **ದತ್ವಾ** ಕೊಟ್ಟು **ಯಯೌ** ಹೋದನು. **ತೇ** ಆ ಪ್ರಚೇತಸರು **ಧರ್ಮೇಣ** ವಿಧಿಪೂರ್ವಕವಾಗಿ **ಉಪಯೇಮಿರೇ** ಎಲ್ಲರೂ ಮದುವೆಯಾದರು.

**ರಾಜಾ** ಎಂಬ ಪದದಿಂದ ಆಜ್ಞೆಯು ಅನುಲ್ಲಂಘನೀಯ ಎಂದು ಹೇಳುವರು. **ಧರ್ಮೇಣ** ಎಂಬ ಪದವು ಪ್ರಾಚೇತಸರು ಕೂಡಾ ರಾಜನಾದ ಚಂದ್ರನ ಭಯದಿಂದ ಅವಳನ್ನು ಮದುವೆಯಾಗಲಿಲ್ಲ. ಕಿಂತು ಧರ್ಮದಿಂದಲೇ ವಿವಾಹ ಮಾಡಿಕೊಂಡರು ಎಂಬ ವಿಷಯವನ್ನು ತಿಳಿಸುತ್ತದೆ. ಒಬ್ಬನು ಒಬ್ಬಳ ಕೈ ಹಿಡಿಯುವುದು ವಿಹಿತ. ಇವರೆಲ್ಲ ಒಬ್ಬಳನ್ನೇ ಮದುವೆಯಾದರಲ್ಲಾ ಎಂದರೆ ಅನುರೂಪವಾದ ದೃಷ್ಟಾಂತವನ್ನೂ ಇದರಿಂದ ತಿಳಿಸುವರು. **ಧರ್ಮೇಣ** ಎಂಬುದು ಲುಪ್ತೋಪಮಾ. ಧರ್ಮರಾಜನಂತೆ ಎಂದರ್ಥ. ಅವನು ಹೇಗೆ ನಾಲ್ಕು ಜನರೊಂದಿಗೆ ದ್ರೌಪದಿ ಒಬ್ಬಳನ್ನೇ ವಿವಾಹವಾದನೋ ಹಾಗೆ ಎಂದು ಭಾವ. **ವಿಧಿನಾ** ಮುಂತಾಗಿ ಹೇಳದೇ **ಧರ್ಮೇಣ** ಎಂದು ಇಟ್ಟಿದ್ದರಿಂದ ಅಂತರಂಗಾಭಿಪ್ರಾಯ ಇದು ಎಂದು ಸೂಚಿಸಿರುವರು.

ಇಲ್ಲಿ ಬರೆಯಬೇಕಾದ ವಿಷಯವನ್ನು 'ಅಕ್ರೂರೋಽಧ್ಯಗಾತ್ಪುರಾ' ಎಂಬಲ್ಲಿ ಪೂರ್ವಾರ್ಧ ದಶಮಸ್ಕಂಧದಲ್ಲಿ ಬರೆದಿದೆ. ।।೧೬।।

**ತೇಭ್ಯಸ್ತಸ್ಯಾಮಭೂದ್ ರಾಜನ್ ದಕ್ಷಃ ಪ್ರಾಚೇತಸಃ ಕಿಲ ।**
**ಯಸ್ಯ ಪ್ರಜಾವಿಸರ್ಗೇಣ ಲೋಕಾ ಆಪೂರಿತಾಸ್ತ್ರಯಃ ।।೧೭।।**

**ರಾಜನ್** ಪರೀಕ್ಷಿತನೇ **ತಸ್ಯಾಂ** ವಾರ್ಕ್ಷಿಯಲ್ಲಿ **ತೇಭ್ಯಃ** ಪ್ರಚೇತಸರಿಂದ **ದಕ್ಷಃ** ಸೃಷ್ಟ್ಯಾದಿಕರ್ಮದಲ್ಲಿ ಸಮರ್ಥನಾದ ದಕ್ಷನೆಂಬ ಹೆಸರಿರುವನು **ಪ್ರಾಚೇತಸಃ** ಪ್ರಚೇತಸನ ಮಗನಾಗಿ **ಅಭೂತ್** ಜನಿಸಿದನು. (ಬ್ರಹ್ಮದೇವರಿಂದ ಮೊದಲು ಹುಟ್ಟಿದವನು) **ಯಸ್ಯ** ಯಾವನ **ಪ್ರಜಾವಿಸರ್ಗೇಣ** ಪ್ರಜೆಗಳ ಸೃಷ್ಟಿಯಿಂದ **ತ್ರಯಃ ಲೋಕಾಃ** ಮೂರು ಲೋಕಗಳು **ಆಪೂರಿತಾಃ** ಚೆನ್ನಾಗಿ ತುಂಬಿದವು **ಕಿಲ** ಸತ್ಯವೆಂದರ್ಥ. 'ಕಿಲ ಶಬ್ದಃ ಸತ್ಯನೃತ್ಯಯೋಃ' ಎಂದು ವಿಶ್ವ. ।।೧೭।।

**ಯಥಾ ಸಸರ್ಜ ಭೂತಾನಿ ದಕ್ಷೋ ದುಹಿತೃವತ್ಸಲಃ ।**
**ರೇತಸಾ ಮನಸಾ ಚೈವ ತನ್ಮಮಾವಹಿತಃ ಶೃಣು ।।೧೮।।**

**ದುಹಿತೃವತ್ಸಲಃ** ಹೆಣ್ಣುಮಕ್ಕಳಲ್ಲಿ ಪ್ರೀತಿಯುಳ್ಳ (ದುಹಿತೃವತ್ಸಲಃ ಎಂಬುದರಿಂದ ದಕ್ಷನದ್ದು ಕನ್ಯೆಯ ವಂಶವೇ ಎಂಬುದು ಸೂಚಿತವಾಗುತ್ತದೆ.) **ದಕ್ಷಃ** ದಕ್ಷನು **ಭೂತಾನಿ** ಪ್ರಾಣಿಗಳನ್ನು **ಮನಸಾ** ಮನಸ್ಸಿನಿಂದಲೂ **ರೇತಸಾ** ವೀರ್ಯದಿಂದಲೂ **ಯಥಾ ಸಸರ್ಜ** ಹೇಗೆ ಸೃಷ್ಟಿಸಿದನು ಎಂಬುದನ್ನು **ಮಮ ಸಕಾಶಾತ್** ನನ್ನಿಂದ **ಅವಹಿತಃ ಶೃಣು** ಸಾವಧಾನ ಮನಸ್ಸಿನಿಂದ ಕೇಳು. ।।೧೮।।

ಮುಂದಿನ ಕಥೆಗೆ ಉಪಯುಕ್ತವಾದ ಒಂದು ಕಥೆಯನ್ನು ಹೇಳುವರು

**ಮನಸೈವಾಸೃಜತ್ ಪೂರ್ವಂ ಪ್ರಜಾಪತಿರಿಮಾಃ ಪ್ರಜಾಃ ।**
**ದೇವಾಸುರಮನುಷ್ಯಾದೀನ್ ನಭಃಸ್ಥಲಜಲೌಕಸಃ ॥೧೯॥**

**ಪ್ರಜಾಪತಿಃ** ದಕ್ಷನು **ಪೂರ್ವಂ** ಮೊದಲಿಗೆ **ಇಮಾಃ** ಈ **ನಭಃಸ್ಥಲಜಲೌಕಸಃ** ಆಕಾಶ-ಭೂಮಿ-ನೀರುಗಳೇ ವಾಸಸ್ಥಾನವಾಗಿರುವ **ಪ್ರಜಾಃ** ಪ್ರಾಣಿಗಳನ್ನು **ದೇವಾಸುರಮನುಷ್ಯಾದೀನ್** ದೇವತೆಗಳು-ದೈತ್ಯರು-ಮನುಷ್ಯರು ಮೊದಲಾದವರನ್ನು **ಮನಸಾ ಏವ** ಮನಸ್ಸಿನಿಂದಲೇ **ಅಸೃಜತ್** ಸೃಷ್ಟಿಸಿದನು. ॥೧೯॥

**ತಮಬೃಂಹಿತಮಾಲೋಕ್ಯ ಪ್ರಜಾಸರ್ಗಂ ಪ್ರಜಾಪತಿಃ ।**
**ವಿಂಧ್ಯಪಾದಾನುಪವ್ರಜ್ಯ ಸೋಽಚರದ್ ದುಶ್ಚರಂ ತಪಃ ॥೨೦॥**

**ಸಃ ಪ್ರಜಾಪತಿಃ** ಆ ದಕ್ಷನು **ತಂ ಪ್ರಜಾಸರ್ಗಂ** ಆ ಮಾನಸಿಕ ಸೃಷ್ಟಿಯನ್ನು **ಅಬೃಂಹಿತಂ** ಅಪೂರ್ಣವಾದ ಬೆಳೆಯದಿರುವದನ್ನು **ಆಲೋಕ್ಯ** ನೋಡಿ **ವಿಂಧ್ಯಪಾದಾನ್** ವಿಂಧ್ಯಪರ್ವತದ ಪ್ರತ್ಯಂತ ಪರ್ವತಗಳನ್ನು **ಉಪವ್ರಜ್ಯ** ಸಮೀಪಿಸಿ **ದುಶ್ಚರಂ** ಬೇರೆಯವರಿಗೆ ಮಾಡಲಾಗದ **ತಪಃ** ತಪಸ್ಸನ್ನು **ಅಚರತ್** ಮಾಡಿದನು.

**ತತ್ರಾಘಮರ್ಷಣಂ ನಾಮ ತೀರ್ಥಂ ಪಾಪಹರಂ ಪರಮ್ ।**
**ಉಪಸ್ಪೃಶ್ಯಾನುಸವನಂ ತಪಸಾಽತೋಷಯದ್ಧರಿಮ್ ॥೨೧॥**

**ತತ್ರ** ವಿಂಧ್ಯಪರ್ವತದ ಪ್ರತ್ಯಂತ ಪರ್ವತಗಳಲ್ಲಿ **ಅಘಮರ್ಷಣಂ ನಾಮ** ಅಘಮರ್ಷಣವೆಂಬ ಹೆಸರಿನ **ತೀರ್ಥಂ** ಋಷಿಗಳಿಂದ ಸೇವಿತವಾದ ಜಲವು (ಸರೋವರ) **ಪಾಪಹರಂ** ಪಾಪನಾಶಕವು **ಪರಂ** ಶ್ರೇಷ್ಠವಾದುದು **ತತ್ರ** ಆ ತೀರ್ಥದಲ್ಲಿ **ಅನುಸವನಂ** ನಿರಂತರ ಅಥವಾ ಮೂರು ಹೊತ್ತು **ಉಪಸ್ಪೃಶ್ಯ** ಸ್ನಾನಾದಿಗಳನ್ನು ಮಾಡಿ **ತಪಸಾ** ತಪಸ್ಸಿನಿಂದ **ಹರಿಂ** ಪರಮಾತ್ಮನನ್ನು **ಅತೋಷಯತ್** ಸಂತೋಷಪಡಿಸಿದನು.

**ಅಸ್ತೌಷೀದ್ ಹಂಸಗುಹ್ಯೇನ ಭಗವಂತಮಧೋಕ್ಷಜಮ್ ।**
**ತುಭ್ಯಂ ತದಭಿಧಾಸ್ಯಾಮಿ ಕಸ್ಯಾತುಷ್ಯದ್ಯತೋ ಹರಿಃ ॥೨೨॥**

**ಅಧೋಕ್ಷಜಂ** ಕಣ್ಣಿನಿಂದ ಅಥವಾ ಇಂದ್ರಿಯಗಳಿಂದುಂಟಾದ ಜ್ಞಾನವನ್ನು ಕೆಳಗೆ ಹಾಕಿದ ಇಂದ್ರಿಯಗೋಚರನಲ್ಲದ **ಭಗವಂತಂ** ಶ್ರೀಹರಿಯನ್ನು **ಹಂಸಗುಹ್ಯೇನ**

ಹಂಸಗುಹ್ಯವೆಂಬ ಮಂತ್ರದಿಂದ **ಅಸ್ತೌಷೀತ್** ಸ್ತುತಿಸಿದನು. **ಯತಃ** ಯಾವುದರಿಂದ **ಹರಿಃ** ಶ್ರೀಹರಿಯು **ಕಸ್ಯ** ದಕ್ಷನಿಗೆ **ಅತುಷ್ಯತ್** ಸಂತುಷ್ಟನಾದನೋ **ತತ್** ಅದನ್ನು **ತುಭ್ಯಂ** ನಿನಗೆ **ಅಭಿಧಾಸ್ಯಾಮಿ** ಹೇಳುವೆನು.

'ಕ್ರಿಯಯಾ ಯಮಭಿಪ್ರೈತಿ ಸೋಽಪಿ ಸಂಪ್ರದಾನಂ' 'ಪತ್ಯೇ ಶೇತೇ' ಮುಂತಾಗಿ ಇರುವದರಿಂದ ತುಭ್ಯಂ ಎಂದು ಚತುರ್ಥೀ. ತುಭ್ಯಂ ತದಭಿಧಾಸ್ಯಾಮಿ ಎಂದು ಪ್ರತಿಜ್ಞೆ ಮಾಡಿದಾಗ ರಾಜನು **ಯತಃ** ಯಾವದರಿಂದ **ಕಸ್ಯ** ಯಾವ ಅಧಿಕಾರಿಗೆ **ಹರಿಃ ಅತುಷ್ಯತ್** ಶ್ರೀಹರಿ ಸಂತುಷ್ಟನಾದನು ಎಂದು ಪ್ರಶ್ನಿಸಿದನು. ಅದಕ್ಕೆ ಉತ್ತರಿಸುವರು. ಶುಕಾಚಾರ್ಯರು **ಕಸ್ಯಾತುಷ್ಯದ್ಯತೋ ಹರಿಃ** ಎಂದು. ಕಸ್ಯ ಎಂದರೆ ದಕ್ಷನಿಗೆ ಎಂದು ಅರ್ಥ. ದಕ್ಷನಿಗೆ ಹಂಸಗುಹ್ಯದಿಂದ ಸಂತುಷ್ಟನಾದನೆಂದು ಅರ್ಥ.

ಹೀಗೆ 'ಕಾ ಶೀತಲವಾಹಿನೀ ಗಂಗಾ?' ಶೀತಲವಾಗಿ ಹರಿಯುವ ಗಂಗೆ ಯಾವುದು? ಎಂಬ ಪ್ರಶ್ನೆಗೆ 'ಕಾಶೀತಲವಾಹಿನೀ ಗಂಗಾ' ಕಾಶಿಯಲ್ಲಿ ಹರಿಯುವುದೇ ಶೀತಲವಾಹಿನೀ ಗಂಗಾ ಎಂಬುದೇ ಉತ್ತರ. 'ಕಂ ಬಲವಂತಂ ನ ಬಾಧತೇ ಶೀತಂ?' ಬಲವಂತನಾದ ಯಾರನ್ನು ಛಳಿಯು ಬಾಧಿಸುವುದಿಲ್ಲ ? ಎಂದು ಪ್ರಶ್ನರೂಪವೂ ಆಗಿದೆ. ಈ ಪ್ರಶ್ನೆಗೆ 'ಕಂಬಲವಂತಂ ನ ಬಾಧತೇ ಶೀತಂ'. ಕಂಬಳಿಯನ್ನು ಹೊದ್ದುಕೊಂಡವನಿಗೆ ಛಳಿಯ ಬಾಧೆ ಇರುವುದಿಲ್ಲ. ಎಂಬಂತೆ ಪ್ರಶ್ನೋತ್ತರ ರೂಪವಾಗಿಯೂ ಈ ವಾಕ್ಯವನ್ನು ಯೋಜಿಸಬಹುದು ಎಂದು ಪದಚಮತ್ಕೃತಿಯಿಂದ ಧ್ವನಿತವಾಗುವದು. ।।೨೨।।

ಆ ಸ್ತೋತ್ರವನ್ನೇ ಮುಂದಿನ ಹನ್ನೆರಡು ಪದ್ಯಗಳಿಂದ ಹೇಳುತ್ತಾರೆ-

**ಪ್ರಜಾಪತಿರುವಾಚ -**

**ನಮಃ ಪರಾಯಾವಿತಥಾನುಭೂತಯೇ**
**ಗುಣತ್ರಯಾಭಾಸನಿಮಿತ್ತಬಂಧವೇ ।**
**ಅದೃಷ್ಟಧಾಮ್ನೇ ಗುಣತತ್ತ್ವಬುದ್ಧಿಭಿಃ**
**ನಿವೃತ್ತಮಾನಾವಧಯೇ ಸ್ವಯಂಭುವೇ ।।೩೨।।**

**ಅವಿತಥಾನುಭೂತಯೇ** ಎಲ್ಲಿಯೂ ಯಾವಾಗಲೂ ತಡೆಯಿಲ್ಲದ ಜ್ಞಾನ ಉಳ್ಳ (ಸತ್ಯವಾದ ಜ್ಞಾನ ಉಳ್ಳ 'ಸತ್ಯಂ ಜ್ಞಾನಂ' ಎಂಬ ಶ್ರುತಿಯಿದೆ.) **ಗುಣತ್ರಯಾಭಾಸ-ನಿಮಿತ್ತಬಂಧವೇ** ಸತ್ತ್ವರಜಸ್ತಮೋಗುಣಗಳಿಂದ ಆಗುವ (ಆಭಾಸ) ಸೃಷ್ಟಿಗೆ

ನಿಮಿತ್ತರಾದ ಪ್ರಕೃತಿ-ಪುರುಷರಿಗೆ ಬಂಧುವಾದ ಅಂದರೆ ಅವರಲ್ಲಿದ್ದು ಸೃಷ್ಟಿಗೆ ಪ್ರವರ್ತಕನಾದ ೨. ಸತ್ತ್ವಾದಿಗುಣಗಳ ಆಭಾಸ ಪ್ರತೀತಿಗೆ ನಿಮಿತ್ತವಾದ ಅವ್ಯಕ್ತತತ್ತ್ವಕ್ಕೆ ಆಶ್ರಯನಾದ (ತದಭಿಮಾನಿ ಲಕ್ಷ್ಮಿಗೆ ಆಶ್ರಯನಾದ 'ಸತೋ ಬಂಧುಮಸತಿ ನಿರವಿಂದನ್' ಎಂಬ ಶ್ರುತಿಯು ಇದಕ್ಕೆ ಪ್ರಮಾಣ.) ೩. ಗುಣತ್ರಯ ಸೃಷ್ಟಿಗೆ ನಿಮಿತ್ತವಾದ ದೈವ (ಅದೃಷ್ಟ) ಕಾಲಗಳಿಗೆ ಬಂಧು ಉತ್ತೇಜಕನಾದ **ಗುಣತ್ರಯ** ಗುಣತ್ರಯಗಳಿಗೆ ಉತ್ತೇಜಕವಾದ ಚಿದಚಿತ್ ಪ್ರಕೃತಿಗಳು **ಆಭಾಸ** 'ಆಭಾಸಾಕಾಭಾಸಪಾರಾವಭಾಸ...' 'ಆಭಾಸ ಏವ ಚ' ಇತ್ಯಾದಿಪ್ರಮಾಣಗಳಿಂದ ಆಭಾಸ ಎಂದರೆ ಪ್ರತಿಬಿಂಬನಾದ ಜೀವ **ನಿಮಿತ್ತ** ಕಾಲಾದೃಷ್ಟಾದಿಗಳು ಇವುಗಳಿಗೆ ಬಂಧುವಾದ ೪. ಗುಣತ್ರಯಗಳ ಅಭಾಸ ಅಪ್ರತಿಭಾನ ತೋರದಿರುವದಕ್ಕೆ ನಿಮಿತ್ತನಾದ ಬಂಧುವೇ (ಮೋಕ್ಷ ಕೊಡುವವನೇ) ಎಂದರ್ಥ. **ಗುಣತತ್ತ್ವಬುದ್ಧಿಭಿಃ** ೧. ಶಬ್ದಾದಿ ವಿಷಯಗಳಲ್ಲಿ ಪುರುಷಾರ್ಥ ಬುದ್ಧಿಯುಳ್ಳ ವಿಷಯಲಂಪಟರಿಂದ ೨. ಶಬ್ದಾದಿಗಳು ನನಗೆನೇ ಸುಖಜನಕವೆಂದು ರಹಸ್ಯಮತಿಯುಳ್ಳವರಿಂದ ೩. **ಗುಣೇಷು** ಅಪ್ರಧಾನರಾದವರಲ್ಲಿ **ತತ್ತ್ವಬುದ್ಧಿಃ** ಪರಮಾತ್ಮತ್ವ ಬುದ್ಧಿಯುಳ್ಳವರಿಂದ (ತತ್ತ್ವಂ ಸ್ವರೂಪೇ ಪರಮಾತ್ಮನಿ ಎಂದು ವಿಶ್ವವಿದೆ.) **ಅದೃಷ್ಟಧಾಮ್ನೇ** ೧. ತಿಳಿಯದಿರುವ ಸ್ವರೂಪ ಉಳ್ಳ 'ನ ಚಕ್ಷುಷಾ ಪಶ್ಯತಿ ಕಶ್ಚಿದೇನಂ ಎಂದು ಶ್ರುತಿ ಇದೆ. ೨. ಅದರ್ಶಿತ ವೈಕುಂಠಾದಿ ಗೃಹಾದಿಗಳುಳ್ಳ ೩. ಅದೃಷ್ಟವಾದ ತನ್ನ ತೇಜಸ್ಸುಳ್ಳ ಅಥವಾ **ಗುಣತತ್ತ್ವಬುದ್ಧಿಭಿಃ** ಭಗವಂತನ ಜ್ಞಾನಾನಂದಾದಿ ಗುಣಗಳಲ್ಲಿ ಭಗವತ್ಸ್ವರೂಪತ್ವ ಬುದ್ಧಿಯುಳ್ಳವರಿಂದ **ಅದೃಷ್ಟಧಾಮ್ನೇ** ಸ್ವಲ್ಪವಾಗಿ ತಿಳಿಯಲ್ಪಟ್ಟ ಸ್ವರೂಪ ಉಳ್ಳ (ಅದೃಷ್ಟಂ ಈಷದ್‌ದೃಷ್ಟಂ ಸಾಕಲ್ಯೇನ ಅನಾಕಲಿತಂ) 'ನೇಹ ನಾನಾಽಸ್ತಿ ಕಿಂಚನ' 'ಏವಂ ಧರ್ಮಾನ್ ಪೃಥಕ್ ಪಶ್ಯನ್' ಮುಂತಾಗಿ ಭೇದಜ್ಞಾನಕ್ಕೆ ಅನರ್ಥ ಹೇಳಿದೆ.

ಬ್ರಹ್ಮಣಸ್ತದ್ಗುಣಾನಾಂ ಚ ಭೇದದರ್ಶ್ಯಧರಂ ತಮಃ ।
ಭೇದಾಭೇದಪ್ರದರ್ಶೀ ಚ ಮಧ್ಯಮಂ ತು ತಮೋ ವಿಶೇತ್ ।
ಈಷದ್ಭೇದಪ್ರದರ್ಶೀ ಚ ತಮ ಏವೋತ್ತರಂ ವಿಶೇತ್ ॥

ಎಂದು ಬೃಹದ್ಭಾಷ್ಯದಲ್ಲಿದೆ. **ನಿವೃತ್ತಮಾನಾವಧಯೇ** ಪರಿಮಾಣದ ಅವಧಿಯಿಂದ ನಿವೃತ್ತನಾದ ಅಪರಿಮಿತನಾದ ೨. ಜ್ಞಾನದ ಅವಧಿಯಿಲ್ಲದ ಅಪ್ರಮೇಯನಾದ ೩. ನಿವೃತ್ತವಾದ ಪ್ರಮಾಣಗಳುಳ್ಳ 'ಯತೋ ವಾಚೋ ನಿವರ್ತಂತೇ' ವೇದಗಳು ಸಾಕಲ್ಯೇನ ತಿಳಿಸಲಾರವು ಎಂದೂ ಅರ್ಥ. ನಿತರಾಂ ವೃತ್ತಃ ಮಾನಾನಾಂ ಅವಧಿಃ

ಸಾಕ್ಷೀ ತದ್ರೂಪನಾದ **ನಿವೃತ್ತೌ** ನಿತರಾಂ ವೃತ್ತಂ ಪ್ರವರ್ತನಂ ಲೋಕಾನಾಂ ಯಾಭ್ಯಾಂ ತೌ ಮಾ ಚ ರಮಾ ಚ ಅನಶ್ಚ ವಾಯುಶ್ಚ ತೌ ಅವಧೀ ದುಃಖಸ್ಪೃಷ್ಟತದಸ್ಪೃಷ್ಟಯೋಃ ಯೇನ ಸಃ ತಸ್ಮೈ ಅಂದರೆ ಎಲ್ಲ ಜಗತ್ತಿನ ಪ್ರವರ್ತಕರಾದ ಲಕ್ಷ್ಮೀದೇವಿ ಮತ್ತು ವಾಯುದೇವರುಗಳನ್ನು ದುಃಖಸ್ಪೃಷ್ಟರ ಅಧಿ ಕಾರಿ ಜೀವರುಗಳಿಗೆ ಉತ್ತರರನ್ನಾಗಿ ವಾಯುದೇವರನ್ನು ರಮೆಯನ್ನು ದುಃಖದ ಸಂಬಂಧವಿಲ್ಲದೆ ನಿತ್ಯಮುಕ್ತಳನ್ನಾಗಿ ಮಾಡಿದವನಿಗೆ ಎಂದರ್ಥ.

'ನಿತ್ಯಾಽದುಃಖಾ ರಮಾ' 'ಇಯದಾಮನನಾತ್' 'ಶ್ರೀರ್ವಾಯುಶ್ಚ ನಿಯತೌ ಹರಿಣೈವ ತು' ಮುಂತಾದ ಬೃಹದಾರಣ್ಯಕ ಭಾಷ್ಯವಿದೆ. 'ಲೋಕಮಾತಾ ಮಾ' 'ಅವಧಿಸ್ತ್ವವಸಾನೇ ಸ್ಯಾತ್ ಸೀಮ್ನಿ' ಎಂದು ಅಮರ-ವಿಶ್ವಗಳಿವೆ. ಅಥವಾ **ನಿವೃತ್ತಮಾನಾವಧಯೇ** ಎಂದರೆ ನಿರಹಂಕಾರ ಶಿರೋಮಣಿಗೆ ಎಂದರ್ಥ. ಅಥವಾ ನಿವೃತ್ತವಾದ ಸದಾಚಾರ ಉಳ್ಳವರಲ್ಲಿ **ಮಾನಃ** ಸತ್ಕಾರ ಚಿತ್ತಸಮುನ್ನತಿಗೆ ಅವಧಿಯಾದ ಅದನ್ನು ಕೊಡುವ **ನಿವೃತ್ತ** ಇಲ್ಲದಿರುವ **ಮಾನಂ** ಲಯವುಳ್ಳ **ಅವಧಿಃ** ನಿಷೇಧ ಶೇಷನಾದವವನಿಗೆ ಎಂದರ್ಥ. 'ಮಾನಂ ಜ್ಞಾನಂ ಲಯಶ್ಚೈವ' ಎಂದು ಬೃಹದ್ಭಾಷ್ಯ. **ಸ್ವಯಂಭುವೇ** ಸ್ವತಃಸಿದ್ಧನಾದ **ಪರಾಯ** ನಿರ್ದೋಷಗುಣಪೂರ್ಣನಾದ ಪರಮಾತ್ಮನಿಗೆ **ನಮಃ** ನಮಸ್ಕಾರವು. '

ಈ ಶ್ಲೋಕದಲ್ಲಿ ಪರಾಯ ನಮಃ ಎಂದಿದ್ದಾರೆ. 'ಪರೋರಿಪರಮಾತ್ಮನೋಃ' ಎಂದು ಅಭಿಧಾನವಿರುವುದರಿಂದ ಪರಶಬ್ದವು ಹರಿಗೆ ಸಂಜ್ಞೆಯಾಗಿದೆ ಕಾರಣ 'ಸಂಜ್ಞೋಪಸರ್ಜನಭೂತಾಸ್ತು' ಎಂಬ ವ್ಯಾಕರಣ ನಿಯಮದ ಪ್ರಕಾರ ಸರ್ವನಾಮ ಸಂಜ್ಞೆ ಇಲ್ಲದ್ದರಿಂದ ಪರಸ್ಮೈ ಎಂದಾಗಿಲ್ಲ. ಸ್ತುತಿಪದಗಳಾದ್ದರಿಂದ ಆರ್ಥಿಕ ಪುನರುಕ್ತಿ ದೋಷವಲ್ಲ. ವಸ್ತುಸ್ಥಿತಿಯಲ್ಲಿ ತಾತ್ಪರ್ಯವಿರುತ್ತದೆ ಎಂದು ಸುಧೆಯಲ್ಲಿ ಹೇಳಿದೆ. ಶಬ್ದವು ಸಂಜ್ಞೆಯಾಗಿದ್ದರೂ, 'ಕಸ್ಮೈ ಯದಾ ಭವೇತ್' ಎಂಬ ಋಗ್ಭಾಷ್ಯ ವ್ಯಾಖ್ಯಾನಿಸುವಾಗ ಪ್ರವೇಶನಾತ್ ವಿಶಾಂ ವಾನಾತ್ ಎಂಬ ಎರಡು ಪಕ್ಷದಲ್ಲಿಯೂ ವಿಶ್ವವೆಂಬ ರೂಪ ಸಿದ್ಧವಾಗುವದಿಲ್ಲ. ಸರ್ವಶಬ್ದ ಪರ್ಯಾಯ ವಿಶ್ವಶಬ್ದಕ್ಕೆ ಸರ್ವನಾಮ ಸಂಜ್ಞಾ ಹೇಳಿದೆ. ಸರ್ವನಾಮ್ನಃ ಪರಸ್ಯ ಜಸಃ ಶೀಭಾವ ವಿಧಾನ ಮಾಡಿದೆ ಎಂದರೆ ಶಬ್ದ ಇತಿ ಎಂದು ಉತ್ತರಿಸುವರು. ಹೇಗೆ 'ಕಸ್ಮೈ ದೇವಾಯ ಹವಿಷಾ ವಿಧೇಮ' ಎಂಬ ಹಿರಣ್ಯಗರ್ಭ ಸೂಕ್ತದಲ್ಲಿ ಪ್ರಜಾಪತಿಪರ್ಯಾಯವಾದ ಕ ಶಬ್ದಕ್ಕೆ ಸರ್ವನಾಮ ಸಂಜ್ಞೆ ಇಲ್ಲದಿದ್ದರೂ 'ಸರ್ವೇ ವಿಧಯಃ ಛಂದಸಿ ಬಹುಲಾ ಭವಂತಿ'

ಎಂದಿರುವದರಿಂದ ಸರ್ವನಾಮಗಳಿಗೆ ಸ್ಮೈ ಎಂಬ ಸರ್ವನಾಮ ಕಾರ್ಯವಾಗುವದು ಎಂದು ಟೀಕೆಯಲ್ಲಿ ಹೇಳಿ 'ನಮಃ ಪರಸ್ಮೈ ಪುರುಷಾಯ' ಎಂಬಲ್ಲಿಯಂತೆ ಎಂದಿದ್ದಾರೆ. ವಿಷ್ಣುಸಹಸ್ರನಾಮದಲ್ಲಿ ಕಃ ಕಿಂ ಎಂಬ ಎರಡು ನಾಮಗಳಲ್ಲಿ 'ಅಕಯ...' ಎಂದು ರೂಢಿ ಇರುವದರಿಂದ ಒಂದೆಡೆ ರೂಢಿಯಿದ್ದರೂ ಸರ್ವನಾಮ ಸಂಜ್ಞೆಯನ್ನು ರಾಜಾಜ್ಞೆಯಿಲ್ಲದೆ ಸ್ವೀಕರಿಸಬೇಕಾಗಿದೆ. ಇಲ್ಲವಾದರೆ ನಾಮ ವೈಚಿತ್ರ್ಯ ಬರದಿರುವದರಿಂದ ಉಚ್ಚರಿಸಲಾಗುವದಿಲ್ಲ. ಆದ್ದರಿಂದ ಈ ಸಮಾಧಾನ ಹೇಗೆ ಸರಿ ಹೋಗುವದು ಎಂದರೆ ನಿಜ. ವಚನಗಳು ಎರಡೂ ರೀತಿ ಇವೆ. ಇದು ಮಂತ್ರವಾದ್ದರಿಂದ ಗೋಪ್ಯವಾಗಿಡಬೇಕಾದ್ದರಿಂದ 'ಮೋನಯದಾಸಾಪ್ರಪಕ್ಷಿವ್ಯತ್ಯಸ್ತ-ಪಕ್ಷಿತಾರೌ' ಎಂಬಲ್ಲಿಯಂತೆ ಇತರ ವೈಲಕ್ಷಣ್ಯವನ್ನು ಹರಿಗೆ ತಿಳಿಸುತ್ತ ಈ ರೀತಿ ಹೇಳಿರುವರು ಎಂದು ಕಿಂಚಿತ್ ಸಮಾಧಾನ ಮಾಡಬಹುದು.

ಇವನು ಉತ್ತಮನಾದರೂ ಪರರಂತೆ ಜನನಾದಿಗಳಿದ್ದವನಾದರೆ ದೋಷ ಉಳ್ಳವನು ಅಪ್ರಾರ್ಥ್ಯನಾಗುವನು. ಕಾರಣ ಸ್ವಯಂಭುವೇ ಎಂದಿರುವರು. ಸ್ವತಃ ಸಿದ್ಧ ಉತ್ಪತ್ತಿರಹಿತ ಎಂದರ್ಥ. ಆದರೂ ಈ ಶಬ್ದವೂ 'ಅಶಿತೇ ಲಶುನೇ ನ ಶಾಂತೋ ವ್ಯಾಧಿಃ' ಎಂಬಂತೆ ಬ್ರಹ್ಮನು ಶ್ರೇಷ್ಠರೆಂಬುವವರಿಗೆ 'ಸ್ವಯಂಭೂಶ್ಚತುರಾನನಃ' ಎಂದು ಕೋಶವಿರುವುದರಿಂದ ಚತುರ್ಮುಖನ ವ್ಯಾವೃತ್ತಿಯಾಗುವುದಿಲ್ಲ. ಆದ್ದರಿಂದ **ಅವಿತಥಾನುಭೂತಯೇ** ಎಂದಿದ್ದಾರೆ. ಅಪ್ರತಿಹತಜ್ಞಾನನೆಂದರ್ಥ. ಇದು ಬ್ರಹ್ಮನಿಗೆ ಯುಕ್ತವಾಗುವುದಿಲ್ಲ. 'ಅಜ್ಞಾನಂ ಚ ಚತುರ್ವಾರಂ' ಎಂದಿರುವದರಿಂದ ಚತುರ್ಮುಖನ ವ್ಯಾವೃತ್ತಿ ಯಾಗುತ್ತದೆ.

ಅದೃಷ್ಟಧಾಮ್ನೇ ಎಂದು ಹೇಳಿದ್ದನ್ನು ಪ್ರತಿಪಾದಿಸುತ್ತಾರೆ-

**ನ ಯಸ್ಯ ಸಖ್ಯಂ ಪುರುಷೋ ವೇತ್ತಿ ಸಖ್ಯುಃ**
**ಸಖಾ ವಸನ್ ಸಂವಸತಃ ಪುರೇಽಸ್ಮಿನ್ ।**
**ಗುಣೋ ಯಥಾ ಗುಣಿನೋಽವ್ಯಕ್ತದೃಷ್ಟಿಃ**
**ತಸ್ಮೈ ಮಹೇಶಾಯ ನಮಸ್ಕರೋಮಿ ॥೨೪॥**

**ಸಖಾ** ಸ್ನೇಹಿತನಾದ **ಪುರುಷಃ** ಜೀವನು **ಅಸ್ಮಿನ್ ಪುರೇ** ತನ್ನ ಕರ್ಮಾನು ಗುಣವಾಗಿ ಶ್ರೀಹರಿಯಿಂದ ಕೊಡಲ್ಪಟ್ಟ ದೇಹದಲ್ಲಿ **ವಸನ್** ಇರುತ್ತಾ **ಅಸ್ಮಿನ್ ಪುರೇ** ಈ ದೇಹದಲ್ಲಿಯೇ **ಸಂವಸತಃ** ದುಃಖಾದ್ಯನುಭವರಹಿತನಾಗಿ ವಾಸಿಸುವ **ಸಖ್ಯುಃ**

ಸ್ನೇಹಿತನಾದ **ಯಸ್ಯ** ಯಾವ ಶ್ರೀಹರಿಯ **ಸಖ್ಯಂ** ಶರೀರೇಂದ್ರಿಯಪ್ರವರ್ತಕತ್ವ-ರೂಪವಾದ ಸ್ನೇಹವನ್ನು **ಅವ್ಯಕ್ತದೃಷ್ಟಿಃ** ಸ್ಥೂಲದೃಷ್ಟಿಯುಳ್ಳ **ಗುಣಃ** ಅಪ್ರಧಾನನು ಅಂದರೆ ಭೃತ್ಯನು **ಗುಣಿನಃ** ಪ್ರಧಾನನ ಅಂದರೆ ರಾಜನ **ಸಖ್ಯಂ ಯಥಾ** ಸ್ನೇಹವನ್ನು ಹೇಗೆ ತಿಳಿಯುವದಿಲ್ಲವೋ ಹಾಗೆ **ನ ವೇತ್ತಿ** ತಿಳಿಯುವದಿಲ್ಲವೋ **ತಸ್ಮೈ** ಅಂತಹ **ಮಹೇಶಾಯ** ಶಿವನಿಗಿಂತಲೂ ಉತ್ತಮನಾದ ಸರ್ವೋತ್ತಮ ನಿಯಾಮಕನಾದ ಶ್ರೀಹರಿಗೆ **ನಮಸ್ಕರೋಮಿ** ನಮಸ್ಕಾರ ಮಾಡುತ್ತೇನೆ.

'ದ್ವಾಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ' ಎಂಬ ಶ್ರುತಿಯು ಒಂದೇ ಶರೀರದಲ್ಲಿ ಇಬ್ಬರೂ ಇರುವದರಿಂದ ಪರಸ್ಪರ ಸಖರೆಂದು ತಿಳಿಸುವದು. 'ತದ್ದೂರೇ ತದ್ವಂತಿಕೇ' ಎಂಬ ಶ್ರುತಿಯು ಸಹವಾಸವನ್ನು ತಿಳಿಸುವದು.

ಹೇಗೆ ಎದುರಿಗೆ ಇದ್ದರೂ ಭೃತ್ಯನು ರಾಜನ ಸ್ನೇಹವನ್ನು ಇವನು ನನ್ನ ಸ್ನೇಹಿತನೆಂಬ ರಾಜನ ಗಂಭೀರಾಭಿಪ್ರಾಯವನ್ನು ಜೊತೆಯಲ್ಲಿಯೇ ಇರುವ ಭೃತ್ಯನು ಸ್ಥೂಲ ದೃಷ್ಟಿಯಾದ್ದರಿಂದ ತಿಳಿಯುವದಿಲ್ಲವೋ ಹಾಗೆ ಶ್ರೀಹರಿಯು ಮುಕ್ತಿ ಯೋಗ್ಯ ಜೀವನನ್ನು ತನ್ನ ಸ್ನೇಹಿತನೆಂದು ತಿಳಿದಿರುವ ಅಭಿಪ್ರಾಯವನ್ನು ಜೊತೆಯಲ್ಲಿಯೇ ಇರುವ ಸ್ಥೂಲ ದೃಷ್ಟಿಯಾದ ಸಾತ್ವಿಕ ಜೀವನು ಅರಿತಿಲ್ಲವೆಂದು ಉದಾಹರಣೆಯ ಅಭಿಪ್ರಾಯ.

**ಗುಣಃ** ವಿಷಯವು **ಗುಣಿನಃ** ವಿಷಯಿಯಾದ ಇಂದ್ರಿಯಾದಿಗಳ **ಸಖ್ಯಂ** ಪ್ರಕಾಶಕತ್ವವನ್ನು **ಯಥಾ ನ ವೇತ್ತಿ** ಹೇಗೆ ತಿಳಿಯುವದಿಲ್ಲವೋ **ತದ್ವತ್** ಅದರಂತೆ ಎಂದು ಪರಕೀಯರು ಮಾಡುವ ವ್ಯಾಖ್ಯಾನದಲ್ಲಿ ಜ್ಞಾನದ ಪ್ರಸಕ್ತಿಯೇ ಇಲ್ಲದ ಶಬ್ದಾದಿ ವಿಷಯಗಳಿಗೆ ತಿಳುವಳಿಕೆ ಇರುವ ವಿಜ್ಞಾತೃವಿಗೆ ದೃಷ್ಟಾಂತತೆಯು ಪ್ರಾಜ್ಞರಿಗೆ ಸಮ್ಮತವಲ್ಲವಾದ್ದರಿಂದ ಶ್ರೀಮದಾಚಾರ್ಯರು ಸ್ವಯಂ ವಿವರಿಸಿ ಆ ವಿಷಯದಲ್ಲಿ ಪ್ರಮಾಣವಾಗಿ ಸ್ಕಾಂದವಚನವನ್ನು ಉದಾಹರಿಸುವರು.

### ತಾತ್ಪರ್ಯ

**ಗುಣೋ ಯಥಾ ಗುಣಿನಃ । ಕಶ್ಚಿತ್ ಪುರಃಸ್ಥಿತಃ ಗುಣಭೂತಃ ಪ್ರಧಾನಭೂತಸ್ಯ ರಾಜ್ಞಃ ಮಮಾಸೌ ಸಖಾ ಇತಿ ರಾಜ್ಞಾ ಚಿಂತಿತಮಪಿ ನ ಜಾನಾತಿ ।**

**ಯಥಾ ರಾಜ್ಞಃ ಪ್ರಿಯತ್ವಂ ತು ಭೃತ್ಯೋ ವೇದ ನ ಚಾತ್ಮನಃ ।**
**ತಥಾ ಜೀವೋ ನ ಯತ್ಸಖ್ಯಂ ವೇತ್ತಿ ತಸ್ಮೈ ನಮೋಽಸ್ತು ತೇ ॥ ಇತಿ ಸ್ಕಾಂದೇ**

ಇಲ್ಲಿ ಗುಣಗುಣಿ ಶಬ್ದಗಳು ನೈಯ್ಯಾಯಿಕರು ಹೇಳುವ ರೂಪ ಘಟಾದಿಗುಣಗುಣಿಪರವಲ್ಲ. ಕಿಂತು ಉಪಸರ್ಜನ-ಪ್ರಧಾನ ವಾಚಕಗಳು. ಆಗ ಅಪ್ರಧಾನನು ಪ್ರಧಾನನ ಸಖ್ಯ ತಿಳಿಯಲಾರನು ಎಂದು ಯಥಾಸ್ಥಿತ ಯೋಜನೆಯು ಸಾಲದು. ಪ್ರಧಾನನ ಸಖ್ಯವನ್ನು ಅಪ್ರಧಾನರು ತಿಳಿಯಲು ಅನುಪಪತ್ತಿ ಇಲ್ಲ. ಕಾರಣ ಅದನ್ನು ಮಮಾಸೌ ಸಖಾ ಮುಂತಾಗಿ ವಿವರಿಸುವರು.

ಒಬ್ಬ ಪ್ರಧಾನನಾದ ರಾಜನ ಎದುರಿಗೆ ನಿಂತಿರುವ ಹೊಸದಾಗಿ ಬಂದ ಮಂತ್ರಿ ಮುಂತಾದವನು ರಾಜನು ಇವನು ನನಗೆ ಸಖಾ ಎಂದು ಮನಸ್ಸಿನಲ್ಲಿ ಅಂದುಕೊಂಡಾಗ ಇಂಗಿತವನ್ನರಿಯದ ಇವನ ಸಖ್ಯವನ್ನು ತಿಳಿಯಲಾರನೋ ಹಾಗೆ ಜೀವನು ಒಂದೇ ಶರೀರದಲ್ಲಿದ್ದರೂ ತನ್ನ ಸ್ಥಿತಿಗೆ ಕಾರಣನಾದ ಶ್ರೀಹರಿಯ ಸಖ್ಯವನ್ನು ತಿಳಿಯಲಾರನು. ಅಂತಹ ಮಹಾಮೋಹಕನಾದ ನಿನಗೆ ನಮಸ್ಕಾರವೆಂದು ಭಾವ. ಹೀಗೆ ಸ್ಕಂದಪುರಾಣವು ತಿಳಿಸುತ್ತದೆ. ।।೨೪।।

ಮುಹ್ಯಂತಿ ಸೂರಯಃ ಎಂದು ಹೇಳಿದ್ದನ್ನು ಸ್ಪಷ್ಟಪಡಿಸುತ್ತಾರೆ-

**ದೇಹೋಽಸವೋಽಕ್ಷಾ ಮನ(ಸೋ)ವೋ ಭೂತಮಾತ್ರಾ-**
**ನಾತ್ಮಾನಮನ್ಯಂ ಚ ವಿದುಃ ಪರಂ ಯತ್ ।**
**ಸರ್ವಂ ಪುಮಾನ್ ವೇದ ಗುಣಾಂಶ್ಚ ತಜ್ಜ್ಞೋ**
**ನ ವೇದ ಸರ್ವಜ್ಞಮನಂತಮೀಡೇ ।।೨೫।।**

**ವಿಜಯಧ್ವಜರ ಪ್ರಕಾರ**

'ತಾ ಆಪ ಐಕ್ಷಂತ' ಎಂಬಲ್ಲಿ ಹೇಳಿದಂತೆ ದೇಹ ಮೊದಲಾದ ಜಡಪದಾರ್ಥಗಳಿಗೆ ಜ್ಞಾತೃತ್ವ ಕೂಡುವದಿಲ್ಲವಾದ್ದರಿಂದ ದೇಹಾದಿಗಳಿಂದ ಭಿನ್ನನಾದ ಜ್ಞಾನಕ್ಕೆ ಆಶ್ರಯನಾದ ಚೇತನನನ್ನು ಹೇಳಬೇಕು. ಆ ಚೇತನನು ಸಾಮಾನ್ಯ ಜೀವನೆಂದು ಹೇಳುವಂತಿಲ್ಲ. ಸಾಮಾನ್ಯಜೀವನು ಜ್ಞಾನಾಶ್ರಯನಾದರೂ ಅವನು ಚೆನ್ನಾಗಿ ತನ್ನನ್ನೂ ತನಗಿಂತ ಉತ್ತಮ ವಸ್ತುವನ್ನೂ ತಿಳಿದಿಲ್ಲವಾದ್ದರಿಂದ ಇವನ ಪ್ರತ್ಯಕ್ಷಕ್ಕೆ ಶ್ರೀಹರಿಯು ವಿಷಯನಲ್ಲವೆಂದು ಹೇಳಿದ್ದರಿಂದ ಶ್ರೀಹರಿಯ ಮಹಿಮೆ ಏನೂ ಹೇಳಿದಂತಾಗುವದಿಲ್ಲ. ಆದ್ದರಿಂದ ಎಲ್ಲ ವಿಷಯವನ್ನು ಬಲ್ಲ ವಿಶಿಷ್ಟ ಜೀವನೊಬ್ಬನನ್ನು ಒಪ್ಪಲೇಬೇಕಾಗುವದು. ಇದರಂತೆ ಇನ್ನೂ ಇತರ ಸರ್ವಜ್ಞಜೀವರು ಇರುವಲ್ಲಿ ಯಾವ ಬಾಧಕವಿಲ್ಲ. ಈ ಎಲ್ಲ ಸರ್ವಜ್ಞರೆನಿಸಿಕೊಂಡವರಿಂದಲೂ ಸಂಪೂರ್ಣವಾಗಿ ತಿಳಿಯಲಾಗದ

ಮಹಾಮಹಿಮನು ಶ್ರೀಹರಿ ಎಂದಲ್ಲಿ ಶ್ರೀಹರಿಯ ನಿರತಿಶಯ ಮಹಿಮೆಯು ತಿಳಿದು ಬರುವದು. ಆದ್ದರಿಂದ ದೇಹ ಮೊದಲಾದ ಶಬ್ದಗಳಿಂದ ಅವುಗಳಿಗೆ ಅಭಿಮಾನಿಗಳಾದ ಉತ್ತಮ ಜೀವರು ವಚನ ವೃತ್ತಿಯಿಂದಲೇ ಹೇಳಲ್ಪಡುವರು. ಲಕ್ಷಣಾವೃತ್ತಿಯಿಂದ ಎಂದು ವಿಜಯಧ್ವಜತೀರ್ಥರು ಹೇಳುತ್ತಾರೆ. ಹಾಗೆ ಹೇಳುವ ಕಾರಣವಿಲ್ಲ. ಅಭಿಮಾನ್ಯಧಿಕರಣದ ಪ್ರಕಾರ ವಚನ ವೃತ್ತಿಯನ್ನೇ ಹೇಳಬೇಕು. ಅಭಿಮಾನಿಗಳಾದ್ದರಿಂದ ವೈಶ್ರವಣ ಮೊದಲಾದವರು ಒಂದೇ ವಿಭಕ್ತಿಯಲ್ಲಿ ಹೇಳಲ್ಪಟ್ಟಿರುವರು ಹೊರತು ಅವರು ಆಯಾ ಪದಾರ್ಥಾತ್ಮಕರೆಂದಲ್ಲ.

**ದೇಹಃ** ದೇಹಾಭಿಮಾನಿಯಾದ ಕುಬೇರನು **ಅಸವಃ** ಪ್ರಾಣಗಳಿಗೆ ಅಭಿಮಾನಿಗಳಾದ ಮರುತರು **ಅಕ್ಷಾಃ** ಇಂದ್ರಿಯಾಭಿಮಾನಿಗಳಾದ ಇಂದ್ರ ಅಗ್ನಿ ವರುಣ ಮೊದಲಾದವರು **ಮನವಃ** ಅಂತಃಕರಣವೃತ್ತಿಗಳಿಗೆ ಅಭಿಮಾನಿಗಳಾದ ರುದ್ರದೇವರು (ವೃತ್ತಿಗಳು ಬಹಳವಾದ್ದರಿಂದ ಬಹುವಚನ) **ಭೂತ** ಪಂಚಭೂತಗಳಿಗೆ ಅಭಿಮಾನಿಗಳಾದ ಪೃಥಿವೀ ಮೊದಲಾದ ಅಥವಾ ಸುಪರ್ಣ ಮೊದಲಾದ ದೇವತೆಗಳು **ಮಾತ್ರಾಃ** ಶಬ್ದಾದಿಗಳು ಅವುಗಳಿಗೆ ಅಭಿಮಾನಿಗಳಾದ ರುದ್ರಪುತ್ರರು (ಸ್ಕಂದ-ವಿನಾಯಕ ಮುಂತಾದವರು) ಅಥವಾ ಸೌಪರ್ಣಿ ಮುಂತಾದವರು ಈ ಎಲ್ಲ ದೇವತೆಗಳೂ **ಆತ್ಮಾನಂ** ತಮ್ಮನ್ನು (ತಮ್ಮ ಸ್ವರೂಪವನ್ನು) **ಅನ್ಯಂ** ತಮಗಿಂತ ಭಿನ್ನವಾದ ಪ್ರಪಂಚವನ್ನೂ **ನ ವಿದುಃ** ತಿಳಿದಿಲ್ಲ. ಅಂದಮೇಲೆ **ಯತ್** ಯಾವುದು **ಪರಂ** ಈ ದೇವತೆಗಳಿಗಿಂತಲೂ ತದ್ಭಿನ್ನ ಪ್ರಪಂಚಕ್ಕಿಂತಲೂ ಉತ್ತಮವಾದ ವಿಷ್ಣು ಎಂಬ ಪರಬ್ರಹ್ಮ ವಸ್ತುವೋ **ತತ್** ಅದನ್ನು ತಿಳಿದಿಲ್ಲವೆಂದು (ಕಿಮುತ) ಹೇಳುವದೇನು. ಶ್ರೀಹರಿಯ ಅನುಗ್ರಹವಿಲ್ಲದೇ ಅವನನ್ನು ತಿಳಿಯಲಾರರೆಂದರ್ಥ. **ಪುಮಾನ್** ಜೀವಾಭಿಮಾನಿಗಳಾದ ಬ್ರಹ್ಮದೇವರು **ಸರ್ವಂ** ತಮ್ಮನ್ನು ತಮಗಿಂತ ಭಿನ್ನವಾದ ಪ್ರಪಂಚವನ್ನೂ **ವೇದ** ತಿಳಿದಿರುವರು. ಅಷ್ಟೇ ಅಲ್ಲ **ಗುಣಾನ್ ಚ** ಆಯಾ ಪದಾರ್ಥಗಳಲ್ಲಿರುವ ಗುಣಗಳನ್ನು ಅಂದರೆ ಶಬ್ದಾದಿಗಳನ್ನು ಅವುಗಳ ವಿಶೇಷಗಳನ್ನೂ ಕ್ರಿಯೆ ಮೊದಲಾದುವನ್ನೂ **ವೇದ** ತಿಳಿದಿರುವರು. ಹಾಗಾದರೆ ಇವರು ಪರಮಾತ್ಮನನ್ನು ಸಂಪೂರ್ಣವಾಗಿ ತಿಳಿದಿರುವರೇ ಎಂದರೆ ಇಲ್ಲವೆಂದು ಹೇಳುತ್ತಾರೆ. **ತಜ್ಜ್ಞಃ** ಇವೆಲ್ಲವನ್ನೂ ತಿಳಿದ ಬ್ರಹ್ಮದೇವರು **ತಂ ಸರ್ವಜ್ಞಂ** ಹರಿಯನ್ನು **ನ ವೇದ** ಸಂಪೂರ್ಣವಾಗಿ ತಿಳಿದಿಲ್ಲ. ಶ್ರೀಹರಿಯು ತನ್ನನ್ನೂ ತನಗಿಂತ ಭಿನ್ನವಾದ ಎಲ್ಲವನ್ನೂ ಹೇಗೆ ಅರಿತಿರುವನೋ ಹಾಗೆ ಅರಿತಿಲ್ಲವೆಂದರ್ಥ.

**ಅನಂತಂ** ಅನಂತನಾದ್ದರಿಂದ ತನ್ನನ್ನು ಅಪರಿಚ್ಛಿನ್ನನೆಂದೇ ತಿಳಿದಿರುವ **ಸರ್ವಜ್ಞಂ** ಅವನ ಜ್ಞಾನವು ಯಥಾರ್ಥವಾದದ್ದರಿಂದ ಎಲ್ಲರಿಗಿಂತ ಮುಖ್ಯ ಸರ್ವಜ್ಞನಾದ ಶ್ರೀಹರಿಯನ್ನು **ಈಡೇ** ಸ್ತೋತ್ರಮಾಡುತ್ತೇನೆ. ಇದರಿಂದ ಬ್ರಹ್ಮದೇವರೂ ಶ್ರೀಹರಿಯಷ್ಟು ಸರ್ವಜ್ಞರಲ್ಲವೆಂದಂತಾಯಿತು. 'ತದ್ಬ್ರಹ್ಮ ಅವೇತ್ ಅಹಂ ಬ್ರಹ್ಮಾಸ್ಮೀತಿ' 'ವಿಷ್ಣೋರ್ನು ಕಂ ವೀರ್ಯಾಣಿ ಪ್ರವೋಚಂ' ಇತ್ಯಾದಿ ಶ್ರುತಿಗಳು ಮೇಲಿನ ಅರ್ಥವನ್ನು ಸಮರ್ಥಿಸುತ್ತವೆ.

ಶ್ರೀಸತ್ಯಧರ್ಮರ ಪ್ರಕಾರ ಮೇಲಿನ ಶ್ಲೋಕದಲ್ಲಿ ಜ್ಞಾನಸಾಮಾನ್ಯ ಇಲ್ಲದಿರುವ ದೇಹಾದಿಗಳಿಗೆ ಜ್ಞಾನಪ್ರಸಕ್ತಿಯೇ ಅಯುಕ್ತವಾದ್ದರಿಂದ ನ ವಿದುಃ ಎಂದು ನಿಷೇಧ ಮಾಡುವದೂ ಸರಿಯಲ್ಲ ಎಂಬ ಶಂಕೆ ಬಂದರೆ ಪ್ರಮಾಣದಿಂದಲೇ ಅವುಗಳ ಅಭಿಮಾನಿಗಳಿಗೆ ಜ್ಞಾನಪ್ರಸಕ್ತಿವುಳ್ಳವರ ಹೆಸರುಗಳನ್ನು ಹೇಳುತ್ತಾ ಮತ್ತು ಪುಮಾನ್ ಎಂಬುದು ಮನುಷ್ಯ ಮೊದಲಾದ ಜೀವವಾಚಿಯಲ್ಲ ಎಂದೂ ಮೂಲಕಾರರ ವಿವಕ್ಷೆಯಂತೆ ಅರ್ಥವನ್ನು ಹೇಳುವವರಾಗಿ ಸಮಗ್ರಶ್ಲೋಕವನ್ನು ವ್ಯಾಖ್ಯಾನಿಸುವರು.

## ತಾತ್ಪರ್ಯ

ದೇಹಮಾನೀ ವೈಶ್ರವಣೋ ಮರುತಃ ಪ್ರಾಣಮಾನಿನಃ ।
ಇಂದ್ರಾದ್ಯಾ ಇಂದ್ರಿಯಾತ್ಮಾನೋ ರುದ್ರೋಽಂತಃಕರಣಾತ್ಮಕಃ ।

ನೈತೇ ವಿಂದಂತಿ ಸ್ವಾತ್ಮಾನಂ ಪರಂ ವಾಽಪಿ ವಿಮೋಹಿತಾಃ ।
ಜೀವಾಭಿಮಾನೀ ಬ್ರಹ್ಮಾ ತು ಸರ್ವಂ ವೇದ ಪ್ರಜಾಪತಿಃ ।
ಸೋಽಪಿ ವೇದ ಹರಿಂ ನೈವ ಸಮ್ಯಕ್ ಸೈವ ಹಿ ಸರ್ವವಿತ್ ।। ಇತಿ ಚ ।।೨೫।।

ದೇಹಾಭಿಮಾನಿಯಾದ ಕುಬೇರನು ಪ್ರಾಣಾಭಿಮಾನಿಗಳಾದ ಮರುತ್ತುಗಳು ಇಂದ್ರಿಯಾಭಿಮಾನಿಗಳಾದ ಇಂದ್ರ ಮೊದಲಾದವರು ಅಂತಃಕರಣಾಭಿಮಾನಿಯಾದ ರುದ್ರದೇವರು ಇವರೆಲ್ಲರೂ ಬಂಧಕಶಕ್ತಿಯಿಂದ ಮೋಹಿತರಾಗಿ ತಮ್ಮ ಸ್ವರೂಪವನ್ನು ಪರರ ಸ್ವರೂಪವನ್ನು ತಿಳಿಯಲಾರರು. ಜೀವಾಭಿಮಾನಿಯಾದ ಬ್ರಹ್ಮನಾದರೂ ಸಮಸ್ತವನ್ನೂ ತಿಳಿಯುತ್ತಾನೆ. ಚತುರ್ಮುಖನೂ ಕೂಡ ಶ್ರೀಹರಿಯನ್ನು ಚೆನ್ನಾಗಿ ತಿಳಿಯುವದೇ ಇಲ್ಲ. ಶ್ರೀಹರಿಯೇ ಮುಖ್ಯ ಸರ್ವಜ್ಞನು.

ವೈಶ್ರವಣ ವಿಶ್ರವಸನ ಮಗನಾದ ಕುಬೇರ. 'ವಿಶ್ರವಸೋ ವಿಶ್ರವಣೌ' ಎಂಬ ಸೂತ್ರದಿಂದ ವಿಶ್ರವ ಶಬ್ದಕ್ಕೆ ವಿಶ್ರವಣ ಶಬ್ದ ಆದೇಶವಾಗುವದು. ವಿಶ್ರವಣ ಶಬ್ದವು

ಶಿವಾದಿಗಣದಲ್ಲಿ ನಿಪಾತಿತವಾದುದು. 'ಸ್ಥಾನಿವದಾದೇಶಾ ಭವಂತಿ' ಎಂಬ ಸೂತ್ರದ ಕೌಸ್ತುಭರೀತಿಯಿಂದ ಶಬ್ದಾಂತರಗಳು ಪ್ರತ್ಯಯ ವಿಷಯವಾಗುವವು ಎಂದು ತಿಳಿಯಬೇಕು.

ಮನವಃ ಎಂಬುದರ ಅರ್ಥ ರುದ್ರಃ ಎಂಬುದು. 'ಮನು ಅವಬೋಧನೇ' ಎಂದು ಧಾತು ಇರುವದರಿಂದ ಮನು ಎಂದರೆ ಬುದ್ಧಿ. ತದುಪಾದಾನಕವಾದ್ದರಿಂದ ಅಂತಃಕರಣವು ಮನು ಎನಿಸುವದು. ಅಂತಃಕರಣ ಅಭಿಮಾನಿಯಾದ್ದರಿಂದ ಮತ್ತು 'ಮನೋ ರುದ್ರ ಉದಾಹೃತಃ' ಎಂದಿರುವದರಿಂದಲೂ ರುದ್ರದೇವರನ್ನು ಮನು ಶಬ್ದದಿಂದ ಸ್ವೀಕರಿಸಿರುವರು. **ಸೋऽಪಿ** ಜ್ಞಾನಿತ್ವೇನ ಸಂಪ್ರತಿಪನ್ನನಾದ ವಿರಿಂಚನು ಹರಿಯನ್ನು ಸಾಕಲ್ಯೇನ ತಿಳಿಯಲಾರನೆಂದರೆ ಸಾಕಲ್ಯೇನ ತಿಳಿಯುವವರು ಇಲ್ಲವೇ ಇಲ್ಲ ಎಂದರೇ ಹೇಳುವರು **ಸ್ವೈವ ಹಿ** ಎಂದು. ಶ್ರೀಹರಿಯು ತನ್ನನ್ನು ತಾನು ಸಾಕಲ್ಯೇನ ತಿಳಿಯುವವನು ಎಂದು ಭಾವ.

ಇಲ್ಲಿ ಒಂದು ಶಂಕೆ. 'ಬ್ರಹ್ಮಾದ್ಯಾ ಮನುಸಂಜ್ಞಾ ಯೇ' ಎಂದು ಛಾಂದೋಗ್ಯಭಾಷ್ಯದಲ್ಲಿ 'ಮನವೋ ಬೋಧವೈಶೇಷ್ಯಾದ್ದೇವಾ ಬ್ರಹ್ಮಾದಯಃ ಸ್ಮೃತಾಃ' ಎಂದು ಗೀತಾತಾತ್ಪರ್ಯ ಮುಂತಾದ ಸ್ಥಳಗಳಲ್ಲಿ ಮನು ಶಬ್ದ ಬ್ರಹ್ಮಾದಿವಾಚಕವೆಂದು ತಿಳಿದುಬರುವದರಿಂದ ಅವರನ್ನು ಬಿಟ್ಟು ರುದ್ರದೇವರನ್ನು ಸ್ವೀಕರಿಸಿದ್ದು ಮನೋऽಭಿಮಾನಿಗಳಾದ್ದರಿಂದ ಎನ್ನುವದಾದರೆ ಮನೋऽಭಿಮಾನಿತ್ವವೂ ಬ್ರಹ್ಮಾದಿಗಳಿಗೆ ಬರುವದು. 'ಬ್ರಹ್ಮಾ ಸರಸ್ವತೀ ವಾಯುರ್ಮನ ಆದ್ಯಭಿಮಾನಿನಃ' ಎಂದು ಬೃಹದ್ಭಾಷ್ಯದಲ್ಲಿ 'ಸರ್ವೇ ಸರ್ವಾಭಿಮಾನಿನಃ' ಎಂದು ಪ್ರಮಾಣವಿರುವದರಿಂದ ಮತ್ತು ಹಿಂದೆ ಹೇಳಿದ ಪ್ರಮಾಣದಿಂದ ಉಮಾ ಚಂದ್ರ ಗ್ರಹಣವನ್ನು ಅಪ್ರಯೋಜಕವೆಂದು ರುದ್ರನನ್ನೇ ತೆಗೆದುಕೊಳ್ಳಲು ಕಾರಣವೇನು ಎಂದರೆ ಹೀಗೆ ಉತ್ತರ. 'ಜೀವಾಭಿಮಾನೀ ಬ್ರಹ್ಮಾ ತು' ಎಂದು ಕಿಂಚಿಜ್ಜ್ಞರೆಂದು ಹೇಳಲ್ಪಟ್ಟವರಿಗಿಂತ ಇವರೆಲ್ಲರಿಗಿಂತ ಪ್ರತ್ಯೇಕಿಸಿ ಹೇಳಿದ್ದರಿಂದ ಆದರಿಂದಲೇ 'ವ್ಯಾಖ್ಯಾತೋ ಬ್ರಹ್ಮಣಾ ಮರುತ್' ಎಂದಿರುವದರಿಂದ ವಾಯುವಿಗೆ ಅವರ ಪತ್ನಿಯರನ್ನು ಹೇಳಬೇಕಾಗಿಲ್ಲವಾದ್ದರಿಂದ ಇಲ್ಲಿ ಅವರನ್ನು ತೆಗೆದುಕೊಳ್ಳವದು ಅನುಚಿತವಾದಂತೆ ರುದ್ರದೇವರನ್ನು ಸ್ವೀಕರಿಸಿದ್ದರಿಂದಲೇ ಉಮಾ ಚಂದ್ರಾದಿಗಳಿಗೆ ಕೈಮುತ್ಯದಿಂದಲೇ ಅವಿಜ್ಞಾತತ್ವವು ಬರುವದು. ಅವರನ್ನು ತೆಗೆದುಕೊಳ್ಳುವದೂ ಅನುಚಿತವೇ. ಕಾರಣ 'ರುದ್ರೋऽಂತಃಕರಣಾತ್ಮಕಃ' ಎಂದಿಷ್ಟೇ ಹೇಳಿರುವರು ಎಂದು

ತಿಳಿಯಬೇಕು. ಈ ಕುಬೇರಾದಿಗಳು ತಮ್ಮ ಕರ್ಮಾನುಸಾರ ಪ್ರಕೃತಿಯಿಂದ ಹರಿಯ ಇಚ್ಛೆಯಿಂದ ಹರಿಯನ್ನು ತಿಳಿಯಲಾರರು. ಜೀವಾಭಿಮಾನಿ ಜೀವಾಂತರ್ಯಾಮಿಯಾಗಿ ತತ್ಪ್ರೇರಕನಾಗಿ ಬ್ರಹ್ಮದೇವರು ತನ್ನ ಸ್ವರೂಪವನ್ನು ಪರರನ್ನೂ ಆಲೋಚನೆ ಮಾಡಿದರೆ ತಿಳಿಯುವರು.

'ಸೋಽಚಿ ಲೋಪೇ ಚೇತ್ ಪಾದಪೂರಣಂ' ಎಂದು ಸುಲೋಪವಾದಾಗ ವೃದ್ಧಿಯಾಗಿ 'ಸೈಷ ದಾಶರಥೀ ರಾಮ ಎಂಬಲ್ಲಿಯಂತೆ' ಸಂಧಿಯಾಗಿದೆ ಎಂದು ತಿಳಿಯಬೇಕು. **ಸ ಏವ** ಶ್ರೀಹರಿಯೇ **ಸರ್ವವಿತ್** ಸ್ವಪರಗತ ಅಖಿಲ ವಿಶೇಷಜ್ಞನು. **ಹಿ** ಎಂದು 'ಯಃ ಸರ್ವಜ್ಞಃ ಸ ಸರ್ವವಿತ್' ಎಂಬ ಪ್ರಸಿದ್ಧಿಯನ್ನು ತಿಳಿಸುವರು. ಇಲ್ಲಿ 'ಸ ಏವ ಹಿ ಸರ್ವವಿತ್' ಎಂದು ಹೇಳಬೇಕಾದಲ್ಲಿ 'ಸೈವ...' ಎಂದು ಹೇಳಿದ ಸ್ಕಂದನು ಲೋಕಜನನಿಯು ತಿಳಿಯಬಹುದೇನೋ ಎಂಬ ಶಂಕೆಯನ್ನು ಒಬ್ಬ ಬುದ್ಧಿವಂತ ಮಾಡಿಯಾನು. ಅವಳೂ ಚೆನ್ನಾಗಿ ತಿಳಿದಿಲ್ಲವೆಂದು ರಮೆಯನ್ನೂ ನಿವಾರಿಸಲು ಈ ರೀತಿ ಹೇಳಿರುವನೆಂದು ಬುದ್ಧಿವಂತರು ತಿಳಿಯಬೇಕು.'ಸಾ ಲಕ್ಷ್ಮೀಃ ಸಮುದಾಹೃತಾ' ಎಂದು ಏಕಾಕ್ಷರನಿಘಂಟು ಇರುವದರಿಂದ **ಸಾ** ಲಕ್ಷ್ಮಿಯು **ಸಮ್ಯಕ್ ನ ವೇದ** ಸರಿಯಾಗಿ ತಿಳಿದಿಲ್ಲ. ಅಥವಾ ಪ್ರಜಾಪತಿಃ ಎಂದಿಷ್ಟೇ ಹೇಳಿದರೆ ಸಾಕಾಗುತ್ತಿರಲು ಹೆಚ್ಚಿನ ಬ್ರಹ್ಮಶಬ್ದವು 'ಮಮ ಯೋನಿರ್ಮಹದ್ ಬ್ರಹ್ಮ' 'ಪುಂವಚ್ಛಕ್ತಿಮತೀ ಯತಃ' ಎಂದು ಹೇಳಿರುವದರಿಂದ 'ಕೂಟಸ್ಥೋಽಕ್ಷರ ಉಚ್ಯತೇ' ಮುಂತಾದವುಗಳಂತೆ ಪುಲ್ಲಿಂಗವಾದುದು ಲಕ್ಷ್ಮೀವಾಚಕವಾಗುವದು. ಕಾರಣ ಅವಳೂ ತಿಳಿದಿಲ್ಲ. ಅಥವಾ ಬ್ರಹ್ಮ ಅ ತು ಎಂದು ಪದಚ್ಛೇದ ಬ್ರಹ್ಮ ಲಕ್ಷ್ಮೀದೇವಿಯೂ ವೇದವೂ **ಅ ವೇದ** ತಿಳಿದಿಲ್ಲ ಹೀಗೂ ಅನ್ವಯ. 'ಬ್ರಹ್ಮ ತತ್ತ್ವಂ ತಪೋ ವೇದಃ' ಎಂದು ವಿಶ್ವವಿದೆ.

ಈಡೇ ಎಂಬಲ್ಲಿ ಈ ಈಡೇ ಎಂದು ಪದಗಳು. **ಈ** ರಮೆಯು **ಸ್ವಾತ್ಮಾನಂ** ತನ್ನ ಸ್ವರೂಪವನ್ನು **ಅನ್ಯತ್** ಬೇರೆ ಪದಾರ್ಥಗಳನ್ನು ಅವುಗಳ ಧರ್ಮಗಳನ್ನು ಗುಣಗಳನ್ನೂ ಯಾವಳು ತಿಳಿದಿರುವಳೋ ಸಾಽಪಿ ಅವಳೂ **ಪರಂ** ಪರಮಾತ್ಮನನ್ನು ಸಮ್ಯಕ್ ನ ವೇದ ತಿಳಿದಿಲ್ಲ ಎಂದು ಅಭಿಪ್ರಾಯ. ಇವಳು ಈಶಕೋಟಿಯಲ್ಲಿ ಸೇರಿದವಳು. ಅಧಿಕಾರಿವರ್ಗದವಳಲ್ಲ. ಕಾರಣ ಮೂಲದಲ್ಲಿ ತಾತ್ಪರ್ಯದಲ್ಲಾಗಲಿ ಈ ರೀತಿ ಪರ್ಯಾಯವಾಗಿ ಹೇಳಿರುವರು. ಇಲ್ಲವಾದರೆ ಮಂಗಲದೇವತೆ ಭಗವಂತನನ್ನು ತಿಳಿಯುವಳೆಂಬ ಶಂಕೆಗೆ ಉತ್ತರವಿಲ್ಲದಂತಾಗುವದು. 'ವೇದಾ ಹ್ಯೇವೈನಂ

ವೇದಯಂತಿ' ಎಂದಿರುವದರಿಂದ ವೇದಕ್ಕೆ ಸಂಪೂರ್ಣ ಸರ್ವಜ್ಞತೆ ಇದೆಯೇ ಎಂದರೆ ಹೇಳುವರು. 'ನ ವೇದ ಸರ್ವಜ್ಞಂ' ಎಂದು. ವೇದಾಃ ಸರ್ವಜ್ಞಾಃ ಜ್ಞಾಪಕಾ ವಾ ನ ಯಸ್ಯ ಸಃ ತಂ. 'ಯತೋ ವಾಚೋ ನಿವರ್ತಂತೇ' ಎಂದಿರುವದರಿಂದ ವೇದಗಳಿಂದಲೂ ತಿಳಿಯದಿರುವವನೆಂದರ್ಥ. ಒಂದೆಡೆ ನ ವೇದ ಎಂದು ಹೇಳಿದರೆ ಎಲ್ಲ ನಿರ್ವಾಹ ಮಾಡಲಾಗುವಾಗ ಮತ್ತೆ ಮತ್ತೆ ನ ವೇದ ಸರ್ವಜ್ಞಂ ಎಂದು ಹೇಳಿದ್ದು ಅರ್ಥವಿಶೇಷವನ್ನು ತಿಳಿಸುವದು ಎಂದು ಅತುಚ್ಛಹೃದಯರು ಆಲೋಚಿಸಬೇಕು. ॥೨೫॥

ಅನುಮಾನ ಪ್ರಮಾಣದಿಂದಲೂ ಶ್ರೀಹರಿಯ ಜ್ಞಾನವು ಸುಲಭವೆಂದು ಹೇಳುವರು-

**ಯದೋಪರಾಮೋ ಮನಸೋ ನಾಮರೂಪ-**
**ರೂಪಸ್ಯ ದೃಷ್ಟಿಸ್ಮೃತಿಸಂಪ್ರಮೋಷಾತ್ ।**
**ಯ ಈಯತೇ ಕೇವಲಯಾ ಸ್ವಸಂಸ್ಥಯಾ**
**ಹಂಸಾಯ ತಸ್ಮೈ ಶುಚಿಸದ್ಮನೇ ನಮಃ ॥೨೬॥**

**ಯದಾ** ಸ್ವಪ್ನ-ಸುಷುಪ್ತಿ ಮೊದಲಾದ ಅವಸ್ಥಾನಗಳಲ್ಲಿ **ನಾಮರೂಪರೂಪಸ್ಯ** ನಾಮಾತ್ಮಕ ಮತ್ತು ರೂಪಾತ್ಮಕ (ಅರ್ಥಾತ್ಮಕ) ಪ್ರಪಂಚದ ಜ್ಞಾನವನ್ನುಂಟು ಮಾಡುವ **ಮನಸಃ** ಮನಸ್ಸಿನ **ದೃಷ್ಟಿಸ್ಮೃತಿಸಂಪ್ರಮೋಷಾತ್** ಚಕ್ಷುರಾದಿ ಇಂದ್ರಿಯಜನ್ಯ ಅನುಭವ ಮತ್ತು ಸ್ಮರಣವೆಂಬ ಮಾನಸ ಜ್ಞಾನಗಳ ಸಂಪೂರ್ಣ ಅಪಹಾರವಾಗಿ **ಉಪರಾಮಃ** ಯಾವ ವ್ಯಾಪಾರವೂ ಇಲ್ಲದಿರುವ ಅವಸ್ಥೆಯೋ **ತದಾ** ಆಗ **ಯಃ** ಯಾವ ಶ್ರೀಹರಿಯು **ಕೇವಲಯಾ** ಜೀವನು ಅಸ್ವತಂತ್ರನಾದ್ದರಿಂದಲೂ ಸ್ವಪ್ನ ಪ್ರಬೋಧ (ಎಚ್ಚರಿಕೆ) ಮೊದಲಾದವು ಕಂಡು ಬರುವದರಿಂಲೂ **ಕೇವಲಯಾ** ಜೀವನ ಇಚ್ಛೆ ಇಲ್ಲದೇ ಶುದ್ಧವಾದ **ಸ್ವಸಂಸ್ಥಯಾ** ಸ್ವರೂಪ ಸತ್ತಾದಿಂದ **(ಪ್ರಬುದ್ಧೇನ ಜೀವೇನ)** ಎಚ್ಚರಗೊಂಡ ಜೀವನಿಂದ **ಈಯತೇ** ತನಗಿಂತ ಭಿನ್ನನೂ ಸ್ವಪ್ನಾದಿ ಅವಸ್ಥೆಗಳಿಗೆ ನಿಯಾಮಕನೂ ಆದ ಶ್ರೀಹರಿಯು ಇರುವನೆಂದು ಊಹಿಸಲ್ಪಡುವನೋ **ತಸ್ಮೈ** ಅಂಥ **ಶುಚಿಸದ್ಮನೇ** ವಾಯುದೇವರೇ ನಿವಾಸ ಸ್ಥಾನವಾಗಿ ಉಳ್ಳ **ಹಂಸಾಯ** ನಿತ್ಯನಿರ್ದೋಷ ಸ್ವರೂಪನಿಗೆ ಶಾಸ್ತ್ರರೂಪನಿಗೆ ನಿತ್ಯ ನಿರ್ದೋಷ ಸಾರರೂಪನಿಗೆ **ನಮಃ** ನಮಸ್ಕಾರವು.

ಮೇಲಿನ ಶ್ಲೋಕದಲ್ಲಿ ಮನಸಃ ಉಪರಮಃ ಯದಾ ಭವತಿ ತದಾ ಯಃ ಕೇವಲಯಾ ಸ್ವಸಂಸ್ಥಯಾ ಈಯತೇ ಎಂಬ ಅನ್ವಯಭ್ರಮವನ್ನು ನಿರಾಕರಿಸಲು ಮತ್ತು ನಾಮರೂಪರೂಪಸ್ಯ ದೃಷ್ಟಿಸ್ಮೃತಿಸಂಪ್ರಮೋಷಾತ್ ಎಂಬುದರ ವಿವಕ್ಷಿತ ಅರ್ಥವನ್ನು ತಿಳಿಸಲು ಬೇಕಾದ ಸ್ವಲ್ಪ ಅಧ್ಯಾಹಾರ ಮಾಡಿ ಅನ್ವಯಾರ್ಥಗಳನ್ನು ತಿಳಿಸುವರು.

### ತಾತ್ಪರ್ಯ

ಕೇವಲಯಾ ಸ್ವಸಂಸ್ಥಯಾ ಸ್ವಪ್ನಸುಷುಪ್ತ್ಯಾದೌ ಮನಸ ಉಪರಮಾಜ್ಜೀವಸ್ಯಾ-ಸ್ವಾತಂತ್ರ್ಯದರ್ಶನೇಽಪಿ ಸ್ವಪ್ನಪ್ರಬೋಧಾದಿದರ್ಶನಾದನ್ಯ ಈಶ್ವರಸ್ತನ್ನಿಯಾಮಕೋಽಸ್ತೀತಿ ಜ್ಞಾಯತೇ । ಜೀವೇಚ್ಛಾಭಾವಾತ್ಕೇವಲತ್ವಮ್ ।

ಯದೋಪರಾಮೋ ಮನಸಃ ಸ್ವಪ್ನಸುಪ್ತಿಲಯಾದಿಷು ।
ತದಾವಸ್ಥಾ ಪ್ರಬೋಧಾದಿಕಾರಣತ್ವೇನ ಕೇಶವಃ ॥

ಅಸ್ವಾತಂತ್ರ್ಯಾತ್ತು ಜೀವಸ್ಯ ವಿದ್ಯತೇಽನ್ಯೋ ನಿಯಾಮಕಃ ।
ಜೀವಪ್ರವೃತ್ತ್ಯಾನುಕೂಲ್ಯಾತ್ ಜ್ಞಾಯತೇಽಸೌ ತದಾ ವಿಭುಃ । -ಇತಿ ಹರಿವಂಶೇಷು

ಕೇವಲಯಾ ಸ್ವಸಂಸ್ಥಯಾ ಎಂಬ ತಾತ್ಪರ್ಯದ ಭಾವಾರ್ಥ.

ಜೀವರ ಇಚ್ಛೆಗೆ ಅಧೀನವಾಗಿರುವ ಶ್ರೀಹರಿಯ ಇಚ್ಛಾರೂಪ ಮಹಿಮೆಯಿಂದ ಸ್ವಪ್ನಕಾಲದಲ್ಲಿ ಸ್ವಾಪ್ನ ಪದಾರ್ಥಗಳನ್ನು ವಿಷಯೀಕರಿಸಿದರೂ ಬಾಹ್ಯವಸ್ತುಗಳನ್ನು ಮನಸ್ಸು ವಿಷಯೀಕರಿಸದಿರುವದರಿಂದಲೂ ಸುಷುಪ್ತಿ-ಲಯಗಳಲ್ಲಿ ಮನಸ್ಸು ನಿರ್ವ್ಯಾಪಾರತೆಯನ್ನು ಹೊಂದಿರುವದರಿಂದಲೂ ಜೀವರಿಗೆ ಅಸ್ವಾತಂತ್ರ್ಯ ತೋರಿದರೂ ಸ್ವಪ್ನ-ಸುಷುಪ್ತಿ-ಪ್ರಬೋಧ ಮೊದಲಾದ ಅವಸ್ಥೆಗಳು ಶ್ರೀಹರಿಯ ಅಧೀನವಾಗಿಯೇ ತೋರುವುದರಿಂದ ಜೀವರ ಸ್ವಪ್ನಾದ್ಯವಸ್ಥೆಗಳಿಗೆ ನಿಮಾಮಕನೂ ಜೀವರಿಗಿಂತ ಭಿನ್ನನೂ ಶ್ರೀಹರಿಯು ಇದ್ದಾನೆಂದು ಎಚ್ಚರಗೊಂಡ ಜೀವನು ತಿಳಿಯುತ್ತಾನೆ. ಸ್ವಪ್ನಾದ್ಯವಸ್ಥೆಗಳಲ್ಲಿ ಜೀವರ ಇಚ್ಛೆ ಇಲ್ಲದಿರುವದರಿಂದ **ಕೇವಲಯಾ** ಎಂದು ಹೇಳಿದ್ದು.

(ಪ್ರಮಾಣದ ಅರ್ಥ.) ಯಾವಾಗ ಸ್ವಪ್ನ-ಸುಷುಪ್ತಿ-ಲಯ ಮೂರ್ಛಾದಿಗಳಲ್ಲಿ ಮನಸ್ಸಿನ ವ್ಯಾಪಾರವು ಇಲ್ಲವಾಗುತ್ತದೋ ಆ ಕಾಲದಲ್ಲಿ ಜೀವರಿಗೆ ಸ್ವಾತಂತ್ರ್ಯ ವಿಲ್ಲದಿರುವದರಿಂದಲೂ ಜೀವರ ಪ್ರವೃತ್ತ್ಯಾದಿಗಳು ಶ್ರೀಹರಿಯ ಇಚ್ಛಾಧೀನವೇ ಆಗಿರುವುದರಿಂದಲೂ ಜೀವನ ಸ್ವಪ್ನಾದ್ಯವಸ್ಥೆಯ ಪ್ರಬೋಧಾದಿಗಳಿಗೆ ಕಾರಣನಾಗಿ

ಶ್ರೀಹರಿಯು ತನ್ನಿಂದ ಭಿನ್ನನೆಂದೂ ಸ್ವಪ್ನಾದ್ಯವಸ್ಥೆಗಳಿಗೆ ನಿಯಾಮಕನೆಂದು ಸ್ವಪ್ನದಿಂದ ಎಚ್ಚೆತ್ತ ಜೀವನು ತಿಳಿಯುತ್ತಾನೆಂದು ಹರಿವಂಶಗಳಲ್ಲಿ ಹೇಳಿದೆ.

**ವಿಶೇಷಾರ್ಥ**

ಹರಿವಂಶದಲ್ಲಿಯ ಯದಾ ತದಾ ಎಂಬ ಶಬ್ದಗಳಿಗೆ ಯಸ್ಮಾತ್ ತಸ್ಮಾತ್ ಎಂದರ್ಥ. 'ಯದಾ ತದೇತಿ ಹೇತ್ವರ್ಥೇ ಕಾಲಾರ್ಥೇ ಚಾऽಪಿ ಭಣ್ಯತೇ' ಎಂದು ತೃತೀಯಸ್ಕಂಧ ತಾತ್ಪರ್ಯದಲ್ಲಿ ಹೇಳಿದೆ. ಸ್ವಪ್ನಸುಪ್ತಿಲಯಾದಿಷು ಎಂದು ಕಾಲವನ್ನು ಪ್ರತ್ಯೇಕ ಹೇಳಿದ್ದರಿಂದ ಹೇತ್ವರ್ಥಕಗಳಾಗಿವೆ. ಮೇಲೆ ಹೇಳಿದ ಕಾಲಗಳಲ್ಲಿ ಮನಸ್ಸು ಉಪರತವಾದ್ದರಿಂದ ಆ ಅವಸ್ಥಾ ಕಾರಣತ್ವೇನ ಕೇಶವನನ್ನು ತಿಳಿಯುವನು.

ಕಶ್ಚ ಈಶಶ್ಚ ಕೇಶೌ ವಿಧಿ-ವಿಧುಶೇಖರ ಬ್ರಹ್ಮ-ರುದ್ರರು ಅವರನ್ನು ವರ್ತಯತಿ ಪ್ರವರ್ತಿಸುವವನು ಕೇಶವನು. ಇದನ್ನು ಗೀತಾಭಾಷ್ಯದಲ್ಲಿ 'ಕಂ ಬ್ರಹ್ಮಾಣಂ ಈಶಂ ರುದ್ರಂ ಚ ವರ್ತಯತಿ ಇತಿ ಕೇಶವಃ ತಥಾ ಹಿ ನಿರುಕ್ತಿಃ ಕೃತಾ ಹರಿವಂಶೇಷು ರುದ್ರೇಣ ಕೈಲಾಸಯಾತ್ರಾಯಾಂ (ರುದ್ರದೇವರೇ ಹೀಗೆ ಅರ್ಥ ಹೇಳಿರುವರು). 'ಹಿರಣ್ಯಗರ್ಭಃ ಕಃ ಪ್ರೋಕ್ತಃ ಈಶಃ ಶಂಕರ ಏವ ಚ । ಸೃಷ್ಟ್ಯಾದಿನಾ ವರ್ತಯತಿ ತೌ ಯತಃ ಕೇಶವೋ ಭವಾನ್ ।। ಇತಿ ವಚನಾಚ್ಚ ।। ಎಂದು ಪ್ರಮೇಯದೀಪಿಕೆಯಲ್ಲಿಯೂ 'ಕೋ ಬ್ರಹ್ಮೇತಿ ಸಮಾಖ್ಯಾತಃ ಈಶೋऽಹಂ ಸರ್ವದೇಹಿಷು । ಆವಾಂ ತ್ವದಂಗಸಂಭೂತೌ ತತಃ ಕೇಶವ ನಾಮವಾನ್ ।। ಇತಿ ಹರಿವಂಶವಚನಮ್ ।।

ವಚನಾಂತರಾಚ್ಚ ಇಯಮೇವ ನಿರುಕ್ತಿಃ ಸ್ವೀಕಾರ್ಯಾ ಇತ್ಯಾಹ 'ಹಿರಣ್ಯಗರ್ಭ ಇತಿ' ಯತಃ ಎಂದಿರುವದರಿಂದ ಅತಃ ಎಂಬ ಪದ ಲಭ್ಯವಾಗುವದು. ಅದಕ್ಕೆ ಏವ ಶಬ್ದಾನ್ವಯ. ಕಃ ಹಿರಣ್ಯಗರ್ಭನೇ ಬೇರೇ ಯಾರೋ ಪ್ರಜಾಪತಿ ಅಲ್ಲ ಈಶನು ಶಂಕರನೇ ಬೇರೆ ಯಾವನೋ ಸಮರ್ಥನಾದವನು ಎಂದು ಅರ್ಥವಲ್ಲ. ಕೇಶಯೋಃ ಕರ್ಮಣೋಃ ಉಪಪದಯೋಃ ಅಂತರ್ಣೀತಣ್ಯರ್ಥಾತ್ 'ವೃತು ವರ್ತನೇ' ಇತ್ಯಸ್ಮಾದ್ ಧಾತೋಃ ಡಃ 'ಅನ್ಯತ್ರಾऽಪಿ ದೃಶ್ಯತೇ' ಇತಿ ಡ ಪ್ರತ್ಯಯಃ' ಎಂದು ಹೇಳಿದಂತಾಯಿತು.

ಅಥವಾ ಕಶ್ಚ ಈ ಚ ರಮಾ ಚ ಈಶಃ ಶಂಕರಶ್ಚ ಕೇಶಾಃ ತಾನ್ ವರ್ತಯತಿ ಕೇಶವಃ. 'ನೈಕಾಂಶಸಮಮಾಹಾತ್ಮ್ಯಾಃ ಶ್ರೀಶೇಷಬ್ರಹ್ಮಶಂಕರಾಃ' ಎಂದು ಗೀತಾಭಾಷ್ಯ ಮುಂತಾದವುಗಳಲ್ಲಿ ಬೇರೆಡೆ ಹೇಳಿದೆ. ಉಳಿದದ್ದು ಹಿಂದಿನಂತೆ.

'ಸೂರ್ಯಸ್ಯ ತಪತೋ ಲೋಕಾನ್ ಅಗ್ನೇಃ ಸೋಮಸ್ಯ ಚಾಪ್ಯುತ ।
ಅಂಶವೋ ಯತ್ಪ್ರಕಾಶಂತೇ ಮಮೈತೇ ಕೇಶಸಂಜ್ಞಿತಾಃ ।
ಸರ್ವಜ್ಞಾಃ ಕೇಶವಂ ತಸ್ಮಾತ್ ಮಾಮಾಹುಃ ।

ಎಂದು ಮೋಕ್ಷಧರ್ಮದಲ್ಲಿ ಹೇಳಿದ ನಿರುಕ್ತಿಯನ್ನು ತಿಳಿಯಬಹುದು. ಲೋಕವನ್ನು ತಾಪಗೊಳಿಸುವ ಸೂರ್ಯ ಅಗ್ನಿ ಚಂದ್ರರ ಕಿರಣಗಳು ನನ್ನ ಕೇಶವೆನಿಸಿಕೊಳ್ಳುವವು. ಕಾರಣ ಜ್ಞಾನಿಗಳು ನನ್ನನ್ನು ಕೇಶವನೆನ್ನುವರು. (ಅಂದರೆ ಸೂರ್ಯಾಗ್ನಿಚಂದ್ರ ಕಿರಣನಿಯಾಮಕನೆಂದರ್ಥ) ಈ ಹೆಸರಿನ ಉಚ್ಚಾರಣೆಯ ಫಲವನ್ನು 'ಸ್ವಪತ್ನ್ಯಾಮಾಹಿತೋ ಗರ್ಭಃ' ಎಂದಾರಂಭಿಸಿ 'ಸ ಹಿ ದೀರ್ಘತಮಾ ನಾಮ' ಎಂದು ಮಧ್ಯದಲ್ಲಿ ಹೇಳಿ 'ಸ ಚಕ್ಷುಷ್ಮಾನ್ ಸಮಭವತ್ ಗೌತಮಶ್ಚ ಭವತ್ಪುನಃ' ಎಂಬಲ್ಲಿ ವರೆಗೆ ಹೇಳಿದ್ದನ್ನು ಅಲ್ಲಿ ತಿಳಿಯಬೇಕು.

ಉದಾಹೃತ ವಾಕ್ಯ ಸಹಿತ ಆಚಾರ್ಯರ ಮಾತಿನಲ್ಲಿ ಲಕ್ಷ್ಮಿಯೂ ಈಶಕೋಟಿಯಲ್ಲಿ ಸೇರಿದ್ದರಿಂದ ಹೇಳಿಲ್ಲ.

ಅರ್ಥ ವಿಶೇಷ ಲಾಭದ ಲೋಭದಿಂದ ಈ ರೀತಿ ವ್ಯಾಖ್ಯಾನವು 'ಅನಿಷಿದ್ಧ ಮನುಮತಂ' ಎಂದು ನೀತಿಯಿಂದ ಆಚಾರ್ಯರಿಗೂ ಸಮ್ಮತವೇ ಎಂದು ಮನೀಷಿಗಳು ತೋಷಿಸಬೇಕು.

ಇಲ್ಲಿ ಹೀಗೊಂದು ಸಂಶಯ ಬರುವದು.

'ಸಂಸ್ಕಾರೈರ್ಭಗವಾನೇವ ಸೃಷ್ಟ್ವಾ ನಾನಾವಿಧಂ ಜಗತ್ ಸ್ವಪ್ನಕಾಲೇ ದರ್ಶಯತಿ' ಎಂದು ಅನುವ್ಯಾಖ್ಯಾನದ ವ್ಯಾಖ್ಯಾನವಾದ ಸುಧೆಯಲ್ಲಿ ಶ್ರೀಮತ್ ಟೀಕಾಕಾರರು 'ಜೀವಾಯ ಇತಿ ಶೇಷಃ । ದರ್ಶನಸಾಧನಂ ಚ ಮನಃ ಏವೇತಿ ವಕ್ಷ್ಯತಿ ಮನಶ್ಚ ಕೇಚನ ಜಡ ಏವೇತಿ ಮನ್ಯಂತೇ । ಅಪರೇ ತು ಅಚೇತನಮೇವ ಆರೋಪಿತಚೈತನ್ಯಂ ತನ್ನಿರಾಸೇನ ಸ್ವರೂಪಂ ಕಥಯತಿ । ಚಿದಚಿನ್ಮಿಶ್ರಮೇವೇತಿ । 'ಚಿದಚಿನ್ಮಿಶ್ರಮೇವೈತನ್ಮನೋ ಯಾವಚ್ಚ ಸಂಸೃತಿಃ । ತೇನಾವಸ್ಥಾ ಇಮಾಃ ಸರ್ವಾ ಜೀವಃ ಪಶ್ಯತಿ' ಎಂಬ ಅನುವ್ಯಾಖ್ಯಾನ ವ್ಯಾಖ್ಯಾನ ಮಾಡುವಾಗ 'ಕೇವಲಮಚೇತನಸ್ಯ ಘಟಾದಿವದೇವಂಭಾವಾಸಂಭವಾತ್ ಚೈತನ್ಯಾರೋಪಸ್ಯ ನಿರಾಕೃತತ್ವಾತ್ ಚಿದಚಿನ್ಮಿಶ್ರಮೇವ ಅಂಗೀಕಾರ್ಯಮ್ । ಭವಂತಿ ಚ ಅತ್ರ ಆಗಮಾಃ ಯದಿ ಮನಸಃ ಸರ್ವಾವಸ್ಥಾಪ್ರಾಪ್ತಿಃ ತದಾ ತಸ್ಯ ಮೋಕ್ಷೇಽಪಿ ಭಾವಾತ್ ಅವಸ್ಥಾಃ

ಸ್ಯುಃ ಇತ್ಯತ ಉಕ್ತಂ ಯಾವತ್ ಸಂಸೃತಿಃ ತಾವತ್ ಜೀವಸ್ಯ ಉಪಕಾರಾಪಕಾರೌ ಕರೋತೀತಿ । ಕಾರ್ತ್ಸ್ನ್ಯೇನಾನಭಿವ್ಯಕ್ತಸ್ವರೂಪತ್ವಾದಿತಿ ವ್ಯಾಖ್ಯಾತಿ । ಮನೋವಿಕಾರಾ ಇತಿ । ಯತ್ ಯಸ್ಮಾತ್ ಸ್ವಾಪ್ನವಿಷಯಾ ಮನೋಜನ್ಯವಾಸನಾವಿಕಾರಾಃ । ನ ಕೇವಲಂ ಸ್ವಾಪ್ನಂ ಕಿಂತು ಸಾಂಸಾರಿಕೀಃ ಸರ್ವಾ ಅವಸ್ಥಾಃ ತೇನೈವ ಪಶ್ಯತಿ । ಅತಃ ಪ್ರಧಾನತ್ವಾತ್ ತದ್ದ್ವಾರಕ ಏವ ಸಂಬಂಧಃ ಆದರಣೀಯಃ ನಾऽಪರಃ' ಮುಂತಾಗಿ ವ್ಯಾಪಾರ ಸಹಿತವಾದ ಮನಸ್ಸು ಇರುವದೆಂದು ಹೇಳಿರುವದರಿಂದ ಇಲ್ಲಿ ಸ್ವಪ್ನ-ಸುಷುಪ್ತಿಗಳಲ್ಲಿ ಮನಸ್ಸು ಉಪರತವಾಗಿರುವದು ಎಂದು ತಾತ್ಪರ್ಯದಲ್ಲಿಯೂ ಸ್ವಪ್ನ-ಸುಷುಪ್ತಿ-ಲಯಗಳಲ್ಲಿ ಉಪರಮವಾಗಿರುವದೆಂದು ಹರಿವಂಶದಲ್ಲಿ ಮೂಲದಲ್ಲಿಯೂ ಮನಸ್ಸಿಗೆ ಉಪರಮ ಹೇಳಿದ್ದು ಹೇಗೆ ಸಮಂಜಸವಾದೀತು ಎಂದರೆ

'ಸ್ವಪ್ನಕಾಲದಲ್ಲಿ ಹುಟ್ಟಿದ ಪದಾರ್ಥಸಮೂಹಕ್ಕೆ ಬಾಹ್ಯಾರ್ಥಗಳಂತೆ ಸ್ಥೂಲತೆ ಮತ್ತು ಸ್ವಪರಸಾಧಾರಣ ತತ್ಕಾಲ ಕಾಲಾಂತರ ದರ್ಶನ ವಿಮರ್ಶನಾದಿಗಳಿಗೆ ಕಾರಣವಾದದ್ದು ಇರದಿರುವದರಿಂದ ಮನಸ್ಸಿಗೆ ವ್ಯಾಪಾರ ಉಪರಮ ಹೇಳಿದ್ದು ಎಂಬ ಸಮಾಧಾನ ಹೇಳಬಹುದು. ಅಲ್ಲಿಯೇ ಹೀಗೆ ಹೇಳಿರುವರು. 'ಅತ ಏವ ಬಾಹ್ಯಾರ್ಥವತ್ ಸ್ಥೂಲಾ ನ ಭವಂತಿ' ತೇಷಾಂ ಕ್ವಚಿತ್ ಸ್ಪಷ್ಟತಾ ನಾऽಸ್ತಿ । ಅತಃ ಸ್ವಾಪ್ನವಿಷಯಾಃ ಮನೋವಿಕಾರಾ ಇತಿ ಯೋಜನಾ' ಮುಂತಾಗಿ ಅಂದರೆ ಬಾಹ್ಯವ್ಯಾಪಾರ ಇಲ್ಲದಿರುವದರಿಂದ ಉಪರಮ ಎಂದು ಹೇಳಿದ್ದು ಎಂದಂತಾಯಿತು. ಬಾಹ್ಯವ್ಯಾಪಾರಗಳೂ ಬಹಳವಾಗಿ ಪ್ರಮಾಣದಿಂದ ಕಂಡು ಬರುವದಿಲ್ಲವಲ್ಲ ಎಂದರೆ ಅದನ್ನೂ ಅಲ್ಲಿಯೇ ಶಂಕಿಸಿ ಉತ್ತರಿಸಿರುವರು.

'ನನು ಸ್ವಾಪ್ನಕಾಮಿನೀಸಂಭೋಗಾದೇಃ ಚರಮಧಾತುವಿಸರ್ಗಾದಿ ಬಾಹ್ಯಾರ್ಥ-ಕ್ರಿಯಾಕಾರಿತ್ವಾದರ್ಶನಾತ್ ಭಾಗಾಸಿದ್ಧಿಃ ಇತ್ಯತ ಆಹ- **ಕ್ವಚಿದಿತಿ ॥** ತೇ ಸ್ವಾಪ್ನಾ ವಿಷಯಾಃ ಕ್ವಚಿತ್ ಸ್ಪಷ್ಟಾಃ ಅಪಿ ಸ್ಯುಃ ಏವ ತಥಾಪಿ ತದತಿರಿಕ್ತಪಕ್ಷೀಕರಣಾತ್ ಅದೋಷಃ ಇತಿ ಭಾವಃ । ತರ್ಹಿ ತದಂಶಸ್ಯ ವಾಸನಾಮಯತ್ವಂ ನ ಸ್ಯಾತ್ ಇತ್ಯತಃ ಆಹ- **ವಾಸನೇತಿ ॥** ಸಾ ಚ ಮಾನಸೀ ವಾಸನಾ ಸಿದ್ಧಾ । ಅಸ್ಪಷ್ಟತ್ವಾಭಾವೇऽಪಿ ಅಸ್ಥೂಲತ್ವಸ್ಯ ಸತ್ವಾತ್ ಇತಿ ಭಾವಃ ।

ಅಂತೂ ಎಲ್ಲ ಕಡೆಗೆ ಉಪರಮ ಶಬ್ದದಿಂದ ಮನಸ್ಸಿಗೆ ವ್ಯಾಪಾರವಿಲ್ಲವೆಂದು ಹೇಳಿದ್ದು ಅದರ ವಿಕಾರವಾದ ವಾಸನಾಮಯ ಪದಾರ್ಥಕ್ಕೆ ಸ್ಥೂಲತೆ ಬಾಹ್ಯಾರ್ಥ-

ಕ್ರಿಯಾಕಾರಿತ್ವ ಇಲ್ಲದ ಪ್ರಯುಕ್ತ ಎಂದಂತಾಯಿತು. 'ಸಂಧ್ಯೇ ಸೃಷ್ಟಿರಾಹ ಹಿ' ಮುಂತಾದ ನಾಲ್ಕು ಸೂತ್ರಗಳು 'ಅತಃ ಪ್ರಬೋಧೋಽಸ್ಮಾತ್' 'ಮುಗ್ಧೇಽರ್ಧ-ಸಂಪತ್ತಿಃ ಪರಿಶೇಷಾತ್' ಎಂಬ ಸೂತ್ರಗಳಿಂದಲೂ 'ನ ಸ್ವಪ್ನೋಽಪಿ ತಂ...' ಎಂದಾರಂಭಿಸಿ 'ಯತ ಏವಂ ತ್ರಯೋಽವಸ್ಥಾ ಮೋಹಸ್ತು ಪರಿಶೇಷತಃ । ಅರ್ಧಪ್ರಾಪ್ತಿರಿತಿ ಜ್ಞೇಯೋ ದುಃಖಮಾತ್ರಪ್ರತಿಸ್ಮೃತೇಃ । ಎಂಬುದು ಭಾಷ್ಯದಲ್ಲಿಯೂ ಮನಸ್ಸಿನ ಉಪರಮತರತಮಭಾವೋಕ್ತಿಭಾವವೂ ಆವಿಷ್ಕೃತವಾಯಿತು. ಎಲ್ಲಕ್ಕೂ ಐಕಕಂಠ್ಯವನ್ನು ಇದರ ವಿಚಾರ ಔತ್ಕಂಠ್ಯ ಉಳ್ಳ ವಿಮತ್ಸರರು ತಿಳಿಯಬೇಕು ಎನ್ನುತ್ತಾರೆ ಶ್ರೀಗಳವರು.

**ಹಂಸಾಯ** ಶುದ್ಧನಾದ ಸೂರ್ಯಸಂಸ್ಥನಾದ ಪ್ರಲಯದಲ್ಲಿ ಎಲ್ಲವನ್ನು ಪ್ರಲಯ ಮಾಡುವ ನಿನಗೆ ನಮಸ್ಕಾರ. 'ಸ ಏವ ಸೂರ್ಯಸಂಸ್ಥತ್ವಾದ್ಧಂಸನಾಮಾ' 'ಹಂತೃತ್ವಾದ್ಧಂಸನಾಮಾಸೌ' ಮುಂತಾಗಿ ಬೃಹದ್ಭಾಷ್ಯದಲ್ಲಿದೆ.

ಮತ್ತು ಜೀವನ ಶ್ವಾಸನಿಯಾಮಕನಾಗಿ 'ಪ್ರಾತರ್ಯೋಗೋ ಮಹಾನಯಂ' ಮುಂತಾಗಿ ಹೇಳಿರುವದರಿಂದ ಹಂಸಮಂತ್ರವೇದ್ಯನಾದ ಎಂದೂ ಅರ್ಥ. 'ನ ಯಸ್ಯ ಸಖ್ಯಂ...' ಎಂಬ ಶ್ಲೋಕದಲ್ಲಿ ಅರ್ಥತಃ ಪ್ರತೀಕವಾಗಿ ಹಿಡಿದ 'ದ್ವಾಸುಪರ್ಣಾ...' ಎಂಬ ಶ್ರುತಿಯಲ್ಲಿ ವೃಕ್ಷ-ಪಕ್ಷಿ ಎಂದು ದೇಹ-ಹರಿಜೀವರನ್ನು ಉತ್ಪ್ರೇಕ್ಷಿಸಿರುವದರಿಂದಲೂ 'ಹಂಸಾಯ' ಎಂದಿದ್ದಾರೆ. 'ಸುಪರ್ಣಃ ಪಕ್ಷಿಮಾತ್ರೇ ಸ್ಯಾದ್ವೈನತೆಯೇ ಚ' ಇತಿ ವಚನಾತ್' ಹಂಸ ಇವ ಹಂಸಃ ತಸ್ಮೈ ಎಂದೂ ಹೇಳಬಹುದು. ಆದ್ದರಿಂದಲೇ 'ದ್ವಿಖಗೋ ಹ್ಯಾದಿವೃಕ್ಷಃ' ಮುಂತಾದ ಸ್ಕಂಧಾಂತರದ ಮಾತುಗಳು ಇದಕ್ಕೆ ಅನುಕೂಲವಾಗಿವೆ.

ಶರೀರ ಮತ್ತು ಸಮೀರರಲ್ಲಿ ಸಂಚರಿಸುವದರಿಂದ ಹಂಸ. 'ಹಂಸಃ ಶರೀರ ಮರುದಂತರೇ । ಹಂಸೋ ವಿಹಗಭೇದೇ ಚ' ಎಂದು ವಿಶ್ವವಿದೆ. 'ಹಿನಸ್ತಿ ಲಯೇ ಸರ್ವಂ ಇತಿ ಹಂಸಃ । ಹಿಸಿ ಹಿಂಸಾಯಾಂ ಎಂದು ಧಾತು ವ್ಯಾಖ್ಯಾನವಿದೆ. 'ಭವೇದ್ವರ್ಣಾಗಮಾದ್ಧಂಸಃ' ಇತ್ಯಾದೇಃ ।

**ಶುಚಿಸದ್ಮನೇ** ಶುಚಯಃ ಶುದ್ಧಯೋಗಿಗಳು ವಾಯು ಅಥವಾ ಅಗ್ನಿ ಇವರೇ ಸದ್ಮ ನಿವಾಸಸ್ಥಾನವಾಗಿ ಉಳ್ಳವನಿಗೆ ಪ್ರಲಯದಲ್ಲಿಯೂ ಲೀನವಾಗದ ಸ್ಥಳ ಉಳ್ಳವನಿಗೆ ಎಂದೂ ಅರ್ಥ. ಶುಚಿಸದ್ಮನೇ ಎಂಬ ಪಾಠ ಪಾಂಕ್ತವಾದುದು. ಶುಚಿಷದ್ಮನೇ ಎಂಬ ಪಾಠ ಕೆಲವೆಡೆ ಆರ್ಷ.

**ನಿತ್ಯಂ ಹೀನೋಽಖಿಲೈರ್ದೋಷೈಃ ಸಾರರೂಪೋ ಯತೋ ಹರಿಃ ।**
**ಹಂಸ ಇತ್ಯುಚ್ಯತೇ ತಸ್ಮಾತ್ ವಾಯುಸ್ಥಃ ಶುಚಿಷನ್ಮತಃ ॥ ಇತಿ ವಚನಾತ್**

ನಿತ್ಯ ನಿರ್ದೋಷ ಸಾರರೂಪನಾದ ವಾಯುವೇ ಮುಖ್ಯಾಧಿಷ್ಠಾನವಾಗಿ ಉಳ್ಳ ಹರಿಗೆ ನಮಸ್ಕಾರವೆಂದರ್ಥ. ॥೨೬॥

ಜ್ಞಾನಿಪ್ರತ್ಯಕ್ಷವೂ ಈ ವಿಷಯದಲ್ಲಿ ಇರುವದರಿಂದ ಮೇಲಿನ ಅನುಮಾನವು ಬಲಿಷ್ಠವೆಂದು ಹೇಳುವರು-

**ಮನೀಷಿಣೋಽಂತರ್ಹೃದಿ ಸನ್ನಿವೇಶಿತಂ**
**ಸ್ವಶಕ್ತಿಭಿರ್ನವಭಿಶ್ಚ ತ್ರಿವೃದ್ಭಿಃ ।**
**ವಹ್ನಿಂ ಯಥಾ ದಾರುಣಿ ಪಾಂಚದಶ್ಯಂ**
**ಮನೀಷಯಾ ನಿಷ್ಕೃಷಂತೀಹ ಗೂಢಮ್** ॥೨೭॥

ಇಹ ಜೀವರಾಶಿಯಲ್ಲಿ **ಮನೀಷಿಣಃ** ಮನಸ್ಸನ್ನು ನಿಯಮನ ಮಾಡುವ ಸಾಮರ್ಥ್ಯವುಳ್ಳ ಧೀರರು (ಜ್ಞಾನಿಗಳು) **ತ್ರಿವೃದ್ಭಿಃ** ಜ್ಞಾನ ಇಚ್ಛಾ ಕ್ರಿಯಾ ಎಂದು ಮೂರು ಬಗೆಯಾದ **ನವಭಿಃ** ವಿಮಲಾ ಉತ್ಕರ್ಷಿಣಿ ಜ್ಞಾನಾ ಕ್ರಿಯಾ ಯೋಗಾ ಪ್ರಹ್ವೀ ಸತ್ಯಾ ಈಶಾನಾ ಅನುಗ್ರಹಾ ಹೀಗೆ ಒಂಭತ್ತು ಸಂಖ್ಯೆಯ (ಭಗವಂತನ ಶಕ್ತಿಗಳು) (ಇವು ಪ್ರತ್ಯೇಕವಾಗಿ ಮೂರು ವಿಧ. ಅಂದರೆ ಇಚ್ಛಾವಿಮಲಾ ಜ್ಞಾನವಿಮಲಾ ಕ್ರಿಯವಿಮಲಾ ಮುಂತಾಗಿ ಮೂರು ವಿಧವಾದವು) **ಸ್ವಶಕ್ತಿಭಿಃ** ಸ್ವರೂಪಭೂತಶಕ್ತಿಗಳಿಂದ ಲಕ್ಷಿತನಾದ **ಪಾಂಚದಶ್ಯಂ** ಹತ್ತು ಇಂದ್ರಿಯಗಳು ಮನಸ್ಸು ಬುದ್ಧಿ ಪ್ರಾಣ ಪ್ರಧಾನಗಳೆಂಬ ಹದಿನಾಲ್ಕು ತತ್ವಗಳಿಗಿಂತ ಉತ್ತಮನಾಗಿ ಹದಿನೈದನೇಯವನಾಗಿರುವ ೨. ದಶೇಂದ್ರಿಯಗಳು ಮನಸ್ಸು ಬುದ್ಧಿ ಅಹಂಕಾರ ಚಿತ್ತ ಚೇತನಗಳೆಂಬ ಹದಿನೈದರಲ್ಲಿ ಅವುಗಳಿಗೆ ಪ್ರೇರಕನಾಗಿದ್ದು ಪಂಚದಶ ಸಂಬಂಧಿ ಯಾದ್ದರಿಂದ ಪಾಂಚದಶ್ಯನೆನಿಸಿದ **ಹೃದಿ** ಹೃದಯದಲ್ಲಿರುವ **ಅಂತಃ** ಒಳಗೆ **ಸನ್ನಿವೇಶಿತಂ** ದುಃಖಾದಿಸಂಬಂಧವಿಲ್ಲದೆ ನೆಲೆಸಿರುವ ಆದರೆ **ಇಹ** ಜೀವರಾಶಿಗಳ ಶರೀರದಲ್ಲಿ **ಗೂಢಂ** ಅನುಗ್ರಹವಿಲ್ಲದೇ ತಿಳಿಯಲಾಗದವನಾಗಿ ಒಳಗಿರುವ ಶ್ರೀಹರಿಯನ್ನು **ದಾರುಣಿ** ಅರಣಿಯಲ್ಲಿ ನಿಗೂಢವಾಗಿರುವ **ವಹ್ನಿಂ** ಅಗ್ನಿಯನ್ನು **ಯಥಾ** ಹೇಗೆ ಅದನ್ನು ತಿಳಿದವರು ಮಥನ ಮಾಡಿ ಕಾಣುವಂತೆ **ಮನೀಷಯಾ** ತಮ್ಮ ಬುದ್ಧಿಯಿಂದ **ನಿಷ್ಕೃತಂತಿ** ವಿಚಾರಮಾಡಿ ತಿಳಿಯುವರು.

ಈ ಶ್ಲೋಕದಲ್ಲಿ **ತ್ರಿವೃದ್ಭಿಃ ನವಭಿಃ ಶಕ್ತಿಭಿಃ** ಎಂಬುದರಿಂದ ಶಕ್ತಿಗಳನ್ನು ಹೇಳಿರುವರು. ಆ ಶಕ್ತಿಗಳು ಯಾವುವು ಎಂದರೆ ಮೂಲದಲ್ಲಿ **ನವಭಿಃ** ಎಂದು ಮೊದಲು ಹೇಳಿದರೂ ಮೂರು ಶಕ್ತಿಗಳು ಎಲ್ಲ ಕಾರ್ಯಗಳಿಗೆ ಕಾರಣಗಳಾದ್ದರಿಂದ ಮೊದಲು ಹೇಳುವದು ಯುಕ್ತವೆಂದು ತಿಳಿದವರಾಗಿ ತಾವು ತಮ್ಮ ವಚನದಿಂದ ತೋರಿಸಿ ಆಯಾ ಬೇರೆ ವಿಷಯದಲ್ಲಿ ಪ್ರಮಾಣವನ್ನೇ ಗೌರವಿಸಿ ಅದನ್ನು ಉದಹರಿಸುವರು.

ತಾತ್ಪರ್ಯ

**ಇಚ್ಛಾದಿ ರೂಪೇಣ ತ್ರಿವೃದ್ಭಿಃ ।**

**ಇಚ್ಛಾದಿತ್ವೇನ ತ್ರಿವಿಧಾ ವಿಮಲಾದ್ಯಾಸ್ತು ಶಕ್ತಯಃ ।**
**ವಿಷ್ಣೋಃ ಸ್ವರೂಪಭೂತಾ ಯಾಸ್ತಾಭ್ಯಸ್ತನ್ನಾಮಿಕಾಃ ಪರಾಃ ।**

**ಜಾಯಂತೇ ತತ್ಪ್ರಸಾದೇನ ತಾಶ್ಚ ಪೀಠೇ ಪ್ರಪೂಜಯೇತ್ ।**
**ತದ್ಭಿನ್ನಜೀವಾಸ್ತಸ್ಯೈವ ಪ್ರಸಾದಾತ್ತತ್ಸಮೀಪಗಾಃ ॥ -ಇತಿ ತಂತ್ರನಿರ್ಣಯೇ**

**ದಶೇಂದ್ರಿಯಾಣಿ ಚ ಮನೋಬುದ್ಧಿಪ್ರಾಣಪ್ರಧಾನಕಾಃ ।**
**ಚತುರ್ದಶೈಷಾಂ ಪರಮಃ ಪಾಂಚದಶ್ಯೋ ಹರಿಃ ಸ್ಮೃತಃ ।**
**ಬುದ್ಧೇರ್ಭೇದೇನ ವೈತೇಷು ಪಾಂಚದಶ್ಯೋಽಥ ಸಂಸ್ಥಿತೇಃ ॥ -ಇತಿ ಚ**

**ತಾತ್ಪರ್ಯ ಭಾವಾರ್ಥ.**

ಇಚ್ಛಾ ಜ್ಞಾನ ಪ್ರಯತ್ನ ನಿಯಾಮಕಗಳೆಂದು ಮೂರು ವಿಧಗಳು. (ಪ್ರಮಾಣದ ಅರ್ಥ) ಇಚ್ಛಾದಿನಿಯಾಮಕ ರೂಪಗಳು ಮೂರು ವಿಧಗಳು. ವಿಮಲಾ ಉತ್ಕರ್ಷಿಣಿ ಕ್ರಿಯಾ ಯೋಗಾ ಜ್ಞಾನಾ ಪ್ರಹ್ವೀ ಸತ್ಯಾ ಈಶಾನಾ ಅನುಗ್ರಹಾ ಎಂದು ಒಂಭತ್ತು ವಿಧ ಶ್ರೀವಿಷ್ಣುವಿನ ಸ್ವರೂಪಭೂತ ಶಕ್ತಿಗಳು. ಅವುಗಳಿಂದ ಆಯಾ ನಾಮಗಳುಳ್ಳ (ಅವುಗಳ ನಾಮಗಳುಳ್ಳ) ವಿಮಲಾದಿ ಶಕ್ತಿಗಳಿಗೆ ಅಭಿಮಾನಿಗಳಾದ ಜೀವರು ಆ ಶ್ರೀವಿಷ್ಣುವಿನ ಅನುಗ್ರಹದಿಂದಲೇ ಹುಟ್ಟುತ್ತಾರೆ. ಭಿನ್ನ ಅಭಿನ್ನ ಎಲ್ಲಾ ಶಕ್ತಿಗಳನ್ನೂ ಪೀಠದಲ್ಲಿ ಪೂಜಿಸಬೇಕು. ಶ್ರೀಪರಮಾತ್ಮನ ಸ್ವರೂಪಭೂತವಾದ ವಿಮಲಾದಿ ಶಕ್ತಿಗಳಿಂದ ಭಿನ್ನರಾದ ಜೀವರು ಶ್ರೀಹರಿಯ ಅನುಗ್ರಹದಿಂದಲೇ ವಿಷ್ಣುವಿನ ಸ್ವರೂಪಭೂತ ವಿಮಲಾದಿಶಕ್ತಿಗಳ ಸಮೀಪದಲ್ಲಿರತಕ್ಕವುಗಳು ಎಂದು ತಂತ್ರ ನಿರ್ಣಯದಲ್ಲಿ ಹೇಳಿದೆ.

ಹತ್ತು ಇಂದ್ರಿಯಗಳು ಮನಸ್ಸು ಬುದ್ಧಿ ಪ್ರಾಣ ಅವ್ಯಕ್ತತತ್ತ್ವ ಒಟ್ಟಿಗೆ ಹದಿನಾಲ್ಕು. ಅವುಗಳಿಂದ ಉತ್ತಮನಾಗಿರುವದರಿಂದ ಶ್ರೀಹರಿಯು ಹದಿನೈದನೆಯವನೆನಿಸುತ್ತಾನೆ. ಮತ್ತು ಮನಸ್ಸು ಬುದ್ಧಿ ಅಹಂಕಾರ ಚಿತ್ತ ಚೇತನ ಎಂಬ ಐದು ಮನೋಭೇದದಿಂದ ಕೂಡಿದ ಹತ್ತು ಇಂದ್ರಿಯಗಳಲ್ಲಿದ್ದ ಪ್ರಯುಕ್ತವು ಶ್ರೀಹರಿಯು ಪಾಂಚದಶ್ಯನೆನಿಸುತ್ತಾನೆ.

**ವಿಶೇಷಾರ್ಥ**

ತ್ರೀನ್ ಪ್ರಕಾರಾನ್ ವೃಣ್ವತ ಇತಿ ತ್ರಿವೃತಃ ತಾಭಿಃ । ಮೂರು ಪ್ರಕಾರವಾದ ಇಚ್ಛಾದಿಗಳಿಂದ ಆದಿ ಪದದಿಂದ ಜ್ಞಾನಶಕ್ತಿ ಪ್ರಯತ್ನಶಕ್ತಿ ಈ ಎರಡನ್ನು ಸ್ವೀಕರಿಸಬೇಕು. ಜಾನಾತಿ ಇಚ್ಛತಿ ಯತತೇ ಮೊದಲು ಜ್ಞಾನ ಆಮೇಲೆ ಇಚ್ಛೆ ನಂತರ ಪ್ರಯತ್ನ ಹೀಗೆ ಕ್ರಮವಿದ್ದರೂ ಇಚ್ಛೆಯನ್ನು ಮೊದಲೇ ಹೇಳಿದ್ದು ಅವುಗಳಿಗೆ ಭಗವಂತನಿಂದ ಅಭೇದವಿದ್ದಂತೆ ಪರಸ್ಪರ ಅಭೇದವಿದೆ ಎಂದು ತಿಳಿಸಲು ಎಂದು ತಿಳಿಯಬೇಕು. ಇದನ್ನೇ ದ್ವಿತೀಯತಾತ್ಪರ್ಯದಲ್ಲಿ ಹೀಗೆ ಹೇಳಿದ್ದಾರೆ.

**ಇಚ್ಛಾ ಜ್ಞಾನಂ ಕ್ರಿಯಾ ಚೇತಿ ನಿತ್ಯಾಃ ಶಕ್ತಯ ಈಶಿತುಃ ।**
**ಸ್ವರೂಪಭೂತಾ ಅಪಿ ತು ಭಿನ್ನವದ್ವ್ಯವಹಾರಿಕಾಃ । -ಇತಿ ಪ್ರಕಾಶಸಂಹಿತಾಯಾಂ**

ಶ್ರೀಹರಿಯ ಈ ಶಕ್ತಿಗಳು ಸ್ವರೂಪಗಳೇ ಆಗಿದ್ದರೂ ಭಿನ್ನವಾದವುಗಳಂತೆ ವ್ಯವಹಾರ ಮಾಡುವರು ಎಂದು ಬೃಹದ್ಭಾಷ್ಯದಲ್ಲಿ 'ಪ್ರತ್ಯೇಕಂ ತು ಗುಣಾಂಸ್ತಾಂಸ್ತು ಸದಾ ಸರ್ವಗುಣಾತ್ಮಕಾನ್' ಎಂದು ಎಲ್ಲ ಗುಣಗಳೂ ಎಲ್ಲ ಗುಣಗಳಿಂದ ಅಭಿನ್ನ ಎಂದಿದ್ದಾರೆ. ಗೀತಾಭಾಷ್ಯದಲ್ಲಿ 'ತಾನಿ ತಾನಿ ಚ ಸರ್ವಾಣ್ಯನ್ಯೋನ್ಯಸ್ವರೂಪಾಣಿ' ಮುಂತಾಗಿ ದ್ವಿತೀಯತಾತ್ಪರ್ಯದಲ್ಲಿ ಮತ್ತೊಂದೆಡೆಯಲ್ಲಿ 'ಜ್ಞಾನವೀರ್ಯೋ ಜ್ಞಾನಬಲೋ ಜ್ಞಾನಾನಂದ ಉದಾಹೃತಃ' ಮುಂತಾಗಿ ಹೇಳಿದ್ದಾರೆ.

'ಅಮಂದಾನಂದಸ್ಯಂದ್ಯನಂತಗುಣಾರ್ಣವಃ' ಎಂಬ ಅನುವ್ಯಾಖ್ಯಾನದ ನಯಚಂದ್ರಿಕಾ-ಸನ್ನ್ಯಾಯರತ್ನಾವಲಿಗಳಲ್ಲಿ ಆನಂದಸ್ಯಂದಿನಃ ಆನಂದಪೂರ್ಣಾ ಅನಂತಗುಣಾಃ ನಿತ್ಯಾನಂದಸ್ಯಂದಿ ಗುಣಾನಂತ್ಯಂ ಮುಂತಾಗಿ ಹೇಳಿದೆ. ಹಾಗಾದರೆ ಸುಧೆಯಲ್ಲಿ ಅಮಂದಸ್ಯಂದೀ ಚಾಸೌ ಅನಂತಗುಣಶ್ಚಾಸೌ ಅರ್ಣವಶ್ಚ ಎಂದು ವಿಗ್ರಹ ತೋರಿಸಿರುವದರಿಂದ ಅದರ ವಿರೋಧ ಬರುವದಲ್ಲ ಎಂದರೆ ಅಲ್ಲಿ ಈಶ್ವರನು ಅಷ್ಟಗುಣನೆಂದು ಹೇಳಿದೆ. ನೈಯ್ಯಾಯಿಕರನ್ನು ಖಂಡನ ಮಾಡುವಲ್ಲಿ ಮಾತ್ರ ನೈರ್ಭರ್ಯ ಉಳ್ಳವರಾದ್ದರಿಂದ ಈ ರೀತಿ ಹೇಳಿಲ್ಲ. ಎಲ್ಲ ಗುಣಗಳು ಎಲ್ಲ

ಈ ಶ್ಲೋಕದಲ್ಲಿ **ತ್ರಿವೃದ್ಭಿಃ ನವಭಿಃ ಶಕ್ತಿಭಿಃ** ಎಂಬುದರಿಂದ ಶಕ್ತಿಗಳನ್ನು ಹೇಳಿರುವರು. ಆ ಶಕ್ತಿಗಳು ಯಾವುವು ಎಂದರೆ ಮೂಲದಲ್ಲಿ **ನವಭಿಃ** ಎಂದು ಮೊದಲು ಹೇಳಿದರೂ ಮೂರು ಶಕ್ತಿಗಳು ಎಲ್ಲ ಕಾರ್ಯಗಳಿಗೆ ಕಾರಣಗಳಾದ್ದರಿಂದ ಮೊದಲು ಹೇಳುವದು ಯುಕ್ತವೆಂದು ತಿಳಿದವರಾಗಿ ತಾವು ತಮ್ಮ ವಚನದಿಂದ ತೋರಿಸಿ ಆಯಾ ಬೇರೆ ವಿಷಯದಲ್ಲಿ ಪ್ರಮಾಣವನ್ನೇ ಗೌರವಿಸಿ ಅದನ್ನು ಉದಹರಿಸುವರು.

**ತಾತ್ಪರ್ಯ**

**ಇಚ್ಛಾದಿ ರೂಪೇಣ ತ್ರಿವೃದ್ಭಿಃ ।**

**ಇಚ್ಛಾದಿತ್ವೇನ ತ್ರಿವಿಧಾ ವಿಮಲಾದ್ಯಾಸ್ತು ಶಕ್ತಯಃ ।**
**ವಿಷ್ಣೋಃ ಸ್ವರೂಪಭೂತಾ ಯಾಸ್ತಾಭ್ಯಸ್ತನ್ನಾಮಿಕಾಃ ಪರಾಃ ।**

**ಜಾಯಂತೇ ತತ್ಪ್ರಸಾದೇನ ತಾಶ್ಚ ಪೀಠೇ ಪ್ರಪೂಜಯೇತ್ ।**
**ತದ್ಭಿನ್ನಜೀವಾಸ್ತಸ್ಯೈವ ಪ್ರಸಾದಾತ್ತತ್ಸಮೀಪಗಾಃ ।। -ಇತಿ ತಂತ್ರನಿರ್ಣಯೇ**

**ದಶೇಂದ್ರಿಯಾಣಿ ಚ ಮನೋಬುದ್ಧಿಪ್ರಾಣಪ್ರಧಾನಕಾಃ ।**
**ಚತುರ್ದಶೈಷಾಂ ಪರಮಃ ಪಾಂಚದಶ್ಯೋ ಹರಿಃ ಸ್ಮೃತಃ ।**
**ಬುದ್ಧೇರ್ಭೇದೇನ ವೈತೇಷು ಪಾಂಚದಶ್ಯೋಽಥ ಸಂಸ್ಥಿತೇಃ ।। -ಇತಿ ಚ**

**ತಾತ್ಪರ್ಯ ಭಾವಾರ್ಥ.**

ಇಚ್ಛಾ ಜ್ಞಾನ ಪ್ರಯತ್ನ ನಿಯಾಮಕಗಳೆಂದು ಮೂರು ವಿಧಗಳು. (ಪ್ರಮಾಣದ ಅರ್ಥ) ಇಚ್ಛಾದಿನಿಯಾಮಕ ರೂಪಗಳು ಮೂರು ವಿಧಗಳು. ವಿಮಲಾ ಉತ್ಕರ್ಷಿಣಿ ಕ್ರಿಯಾ ಯೋಗಾ ಜ್ಞಾನಾ ಪ್ರಹ್ವೀ ಸತ್ಯಾ ಈಶಾನಾ ಅನುಗ್ರಹಾ ಎಂದು ಒಂಭತ್ತು ವಿಧ ಶ್ರೀವಿಷ್ಣುವಿನ ಸ್ವರೂಪಭೂತ ಶಕ್ತಿಗಳು. ಅವುಗಳಿಂದ ಆಯಾ ನಾಮಗಳುಳ್ಳ (ಅವುಗಳ ನಾಮಗಳುಳ್ಳ) ವಿಮಲಾದಿ ಶಕ್ತಿಗಳಿಗೆ ಅಭಿಮಾನಿಗಳಾದ ಜೀವರು ಆ ಶ್ರೀವಿಷ್ಣುವಿನ ಅನುಗ್ರಹದಿಂದಲೇ ಹುಟ್ಟುತ್ತಾರೆ. ಭಿನ್ನ ಅಭಿನ್ನ ಎಲ್ಲಾ ಶಕ್ತಿಗಳನ್ನೂ ಪೀಠದಲ್ಲಿ ಪೂಜಿಸಬೇಕು. ಶ್ರೀಪರಮಾತ್ಮನ ಸ್ವರೂಪಭೂತವಾದ ವಿಮಲಾದಿ ಶಕ್ತಿಗಳಿಂದ ಭಿನ್ನರಾದ ಜೀವರು ಶ್ರೀಹರಿಯ ಅನುಗ್ರಹದಿಂದಲೇ ವಿಷ್ಣುವಿನ ಸ್ವರೂಪಭೂತ ವಿಮಲಾದಿಶಕ್ತಿಗಳ ಸಮೀಪದಲ್ಲಿರತಕ್ಕವುಗಳು ಎಂದು ತಂತ್ರ ನಿರ್ಣಯದಲ್ಲಿ ಹೇಳಿದೆ.




ಹತ್ತು ಇಂದ್ರಿಯಗಳು ಮನಸ್ಸು ಬುದ್ಧಿ ಪ್ರಾಣ ಅವ್ಯಕ್ತತತ್ತ್ವ ಒಟ್ಟಿಗೆ ಹದಿನಾಲ್ಕು. ಅವುಗಳಿಂದ ಉತ್ತಮನಾಗಿರುವದರಿಂದ ಶ್ರೀಹರಿಯು ಹದಿನೈದನೆಯವನೆನಿಸುತ್ತಾನೆ. ಮತ್ತು ಮನಸ್ಸು ಬುದ್ಧಿ ಅಹಂಕಾರ ಚಿತ್ತ ಚೇತನ ಎಂಬ ಐದು ಮನೋಭೇದದಿಂದ ಕೂಡಿದ ಹತ್ತು ಇಂದ್ರಿಯಗಳಲ್ಲಿದ್ದ ಪ್ರಯುಕ್ತವು ಶ್ರೀಹರಿಯು ಪಾಂಚದಶ್ಯನೆನಿಸುತ್ತಾನೆ.

**ವಿಶೇಷಾರ್ಥ**

ತ್ರೀನ್ ಪ್ರಕಾರಾನ್ ವೃಣ್ವತ ಇತಿ ತ್ರಿವೃತಃ ತಾಭಿಃ । ಮೂರು ಪ್ರಕಾರವಾದ ಇಚ್ಛಾದಿಗಳಿಂದ ಆದಿ ಪದದಿಂದ ಜ್ಞಾನಶಕ್ತಿ ಪ್ರಯತ್ನಶಕ್ತಿ ಈ ಎರಡನ್ನು ಸ್ವೀಕರಿಸಬೇಕು. ಜಾನಾತಿ ಇಚ್ಛತಿ ಯತತೇ ಮೊದಲು ಜ್ಞಾನ ಆಮೇಲೆ ಇಚ್ಛೆ ನಂತರ ಪ್ರಯತ್ನ ಹೀಗೆ ಕ್ರಮವಿದ್ದರೂ ಇಚ್ಛೆಯನ್ನು ಮೊದಲೇ ಹೇಳಿದ್ದು ಅವುಗಳಿಗೆ ಭಗವಂತನಿಂದ ಅಭೇದವಿದ್ದಂತೆ ಪರಸ್ಪರ ಅಭೇದವಿದೆ ಎಂದು ತಿಳಿಸಲು ಎಂದು ತಿಳಿಯಬೇಕು. ಇದನ್ನೇ ದ್ವಿತೀಯತಾತ್ಪರ್ಯದಲ್ಲಿ ಹೀಗೆ ಹೇಳಿದ್ದಾರೆ.

**ಇಚ್ಛಾ ಜ್ಞಾನಂ ಕ್ರಿಯಾ ಚೇತಿ ನಿತ್ಯಾಃ ಶಕ್ತಯ ಈಶಿತುಃ ।**
**ಸ್ವರೂಪಭೂತಾ ಅಪಿ ತು ಭಿನ್ನವದ್ವ್ಯವಹಾರಿಕಾಃ । -ಇತಿ ಪ್ರಕಾಶಸಂಹಿತಾಯಾಂ**

ಶ್ರೀಹರಿಯ ಈ ಶಕ್ತಿಗಳು ಸ್ವರೂಪಗಳೇ ಆಗಿದ್ದರೂ ಭಿನ್ನವಾದವುಗಳಂತೆ ವ್ಯವಹಾರ ಮಾಡುವರು ಎಂದು ಬೃಹದ್ಭಾಷ್ಯದಲ್ಲಿ 'ಪ್ರತ್ಯೇಕಂ ತು ಗುಣಾಂಸ್ತಾಂಸ್ತು ಸದಾ ಸರ್ವಗುಣಾತ್ಮಕಾನ್' ಎಂದು ಎಲ್ಲ ಗುಣಗಳೂ ಎಲ್ಲ ಗುಣಗಳಿಂದ ಅಭಿನ್ನ ಎಂದಿದ್ದಾರೆ. ಗೀತಾಭಾಷ್ಯದಲ್ಲಿ 'ತಾನಿ ತಾನಿ ಚ ಸರ್ವಾಣ್ಯನ್ಯೋನ್ಯಸ್ವರೂಪಾಣಿ' ಮುಂತಾಗಿ ದ್ವಿತೀಯತಾತ್ಪರ್ಯದಲ್ಲಿ ಮತ್ತೊಂದೆಡೆಯಲ್ಲಿ 'ಜ್ಞಾನವೀರ್ಯೋ ಜ್ಞಾನಬಲೋ ಜ್ಞಾನಾನಂದ ಉದಾಹೃತಃ' ಮುಂತಾಗಿ ಹೇಳಿದ್ದಾರೆ.

'ಅಮಂದಾನಂದಸ್ಯಂದ್ಯನಂತಗುಣಾರ್ಣವಃ' ಎಂಬ ಅನುವ್ಯಾಖ್ಯಾನದ ನಯಚಂದ್ರಿಕಾ-ಸನ್ನ್ಯಾಯರತ್ನಾವಲಿಗಳಲ್ಲಿ ಆನಂದಸ್ಯಂದಿನಃ ಆನಂದಪೂರ್ಣಾ ಅನಂತಗುಣಾಃ ನಿತ್ಯಾನಂದಸ್ಯಂದಿ ಗುಣಾನಂತ್ಯಂ ಮುಂತಾಗಿ ಹೇಳಿದೆ. ಹಾಗಾದರೆ ಸುಧೆಯಲ್ಲಿ ಅಮಂದಸ್ಯಂದೀ ಚಾಸೌ ಅನಂತಗುಣಶ್ಚಾಸೌ ಅರ್ಣವಶ್ಚ ಎಂದು ವಿಗ್ರಹ ತೋರಿಸಿರುವದರಿಂದ ಆದರ ವಿರೋಧ ಬರುವದಲ್ಲ ಎಂದರೆ ಅಲ್ಲಿ ಈಶ್ವರನು ಅಷ್ಟಗುಣನೆಂದು ಹೇಳಿದೆ. ನೈಯ್ಯಾಯಿಕರನ್ನು ಖಂಡನ ಮಾಡುವಲ್ಲಿ ಮಾತ್ರ ನೈರ್ಭರ್ಯ ಉಳ್ಳವರಾದ್ದರಿಂದ ಈ ರೀತಿ ಹೇಳಿಲ್ಲ. ಎಲ್ಲ ಗುಣಗಳು ಎಲ್ಲ

ಸ್ವರೂಪವೆಂದು ಹೇಳಬೇಕಾದರೆ ಇಲ್ಲಿ ಹೇಳಿದಂತೆ ನಿಷ್ಪತ್ತಿ ತಿಳಿಸಬೇಕು ತಿಳಿಸಿಲ್ಲ ಅಷ್ಟೇ. ಈ ಪ್ರಮೇಯವು ಬಹುಸಮ್ಮತಿ ಇರುವದರಿಂದ ಅವರಿಗೆ ಅನುಮತವೇ ಆದ ಕಾರಣ ವಿರೋಧವಿಲ್ಲ.

ವಿಮಲಾದ್ಯಾಃ ಎಂಬಲ್ಲಿ ಆದಿ ಪದದಿಂದ ಪ್ರಮಾಣಾಂತರದಲ್ಲಿ ತಿಳಿಸಿದ ಮೇಲೆ ಹೇಳಿದ ಉತ್ಕರ್ಷಿಣೀ ಮುಂತಾದ ಎಂಟನ್ನು ತೆಗೆದುಕೊಳ್ಳಬೇಕು. ಮೂಲದಲ್ಲಿ ನವಭಿಃ ಎಂದಿದೆ. ಅದಕ್ಕೆ ಸಮ್ಮತಿಯಾಗಿ ಉದಾಹೃತವಾದ ತಂತ್ರನಿರ್ಣಯದಲ್ಲಿ ಆ ಒಂಭತ್ತನ್ನು ಹೇಳಿಲ್ಲವಲ್ಲ ಎಂದರೆ ಹೀಗೆ ಸಮಧಾನ. ಮೂಲದಲ್ಲಿ ತ್ರಿವೃದ್ಭಿಃ ಎಂಬುದರ ವ್ಯಾಖ್ಯಾನರೂಪವಾದ ತ್ರಿವಿಧಾಃ ಎಂಬ ಪ್ರಮಾಣದಲ್ಲಿರುವ ಪದವು ವಿಮಲಾದ್ಯ ಪದದಿಂದಲೂ ಅನ್ವಯಿಸುವುದು. ತು ಶಬ್ದವು ವಿಮಲಾ ಉತ್ಕರ್ಷಿಣಿ ಜ್ಞಾನಾ ಚ ಎಂಬುದು ಒಂದು ವಿಧ. ಕ್ರಿಯಾ ಯೋಗಾ ಪ್ರಹ್ವೀ ಎಂಬುದು ಮತ್ತೊಂದು ವಿಧ. ಸತ್ಯಾ ಈಶಾನಾ ಅನುಗ್ರಹಾ ಎಂಬುದು ಇನ್ನೊಂದು ವಿಧ. ಈ ರೀತಿ ಮೂರು ವಿಧ ಎಂಬ ಭೇದ ಸೂಚಕ. 'ತು ಪಾದಪೂರಣೇ ಭೇದೇ' ಎಂದು ವಿಶ್ವವಿದೆ. ಅಂತೂ ಹೀಗೆ ಮೂರರ ಮೂರಾದರೆ ಒಂಭತ್ತಾಗುವದು.

ಇವು ಭಿನ್ನವೂ ಅಭಿನ್ನವೂ ಎಂದು ಎರಡು ವಿಧಗಳಾಗಿವೆ. ಯದ್ಯಪಿ ಅಭಾವಪ್ರತೀತಿಯು ನಿಯಮೇನ ಭಾವಪ್ರತೀತಿಯ ಅಧೀನ ಎಂದು ಇರುವದರಿಂದ ಮೊದಲು ಭಿನ್ನವಾದವುಗಳನ್ನು ಹೇಳಬೇಕು. ಆದರೂ ಭಿನ್ನವಾದವುಗಳಿಗೆ ಅಭಿನ್ನವಾದವುಗಳು ಕಾರಣಗಳಾದ್ದರಿಂದ ಅಭಿನ್ನಶಕ್ತಿಗಳನ್ನು ಮೊದಲು ಹೇಳಿರುವರು. ವಿಷ್ಣುವಿನ ಸ್ವರೂಪಭೂತ ವಿಮಲಾದಿಶಕ್ತಿಗಳಿಂದ ಅವುಗಳಿಂದ ಪರಾಃ ಭಿನ್ನಗಳಾದ ತನ್ನಾಮಿಕಾ ತಾನಿ ನಾಮಾನಿ ತಾಸಾಂ ನಾಮಾನಿ ಯಸಾಂ ತಾಃ ಆ ಹೆಸರಿನ ಅಥವಾ ಅವುಗಳ ಹೆಸರಿನ ಶಕ್ತಿಗಳು ಹುಟ್ಟುವವು. ಅದಕ್ಕೆ ಕಾರಣ ತತ್ಪ್ರಸಾದೇನ. ಸ್ವರೂಪಶಕ್ತಿಗೆ ಅಧಿಷ್ಠಾನವಾಗಿ ಪೂಜ್ಯತೆ ಸಂಪಾದಕವಾದ ಪ್ರಸಾದದಿಂದ ಎಂದರ್ಥ. ತಾಃ ಉತ್ಪಾದಕ ಶಕ್ತಿಗಳನ್ನು ಪೀಠದಲ್ಲಿ ಪೂಜಿಸಬೇಕು. ಅವುಗಳಿಂದ ಭಿನ್ನವಾದ ವಿಮಲಾದಿಗಳಿಂದ ಅಧಿಷ್ಠಿತರಾದ ಜೀವರುಗಳು ಅವನ ವಿಮಲಾದಿಗಳಿಗೆ ನಿಲಯರಾಗಲಿ ನನ್ನ ಸಮೀಪದಲ್ಲಿ ಇರಲಿ ಎಂದು ಅಂಗೀಕರಿಸಿದ ಪ್ರಸಾದದಿಂದ ವಿಷ್ಣುಸಮೀಪದಲ್ಲಿ ಇರುವವು. ಆಧಾರ-ಆಧೇಯಗಳಿಗೆ ಒಂದೇ ಹೆಸರು ಎಂದು ತಿಳಿಯಬೇಕು. ಇದರಿಂದ ಅವುಗಳಿಗೂ ಯಥೋಚಿತ ಪೂಜನೀಯತಾವನ್ನೂ ಸೂಚಿಸಿರುವರು.

ವಾಸಿಷ್ಠದಲ್ಲಿ 'ಗೃಹಿತಚಾಮರಾ ದಿವ್ಯಾ ವಿಲಾದ್ಯಾಶ್ಚ ಶಕ್ತಯಃ । ಛತ್ರಂ ಚ ಚಾಮರಂ ಚೈವ ವ್ಯಜನಂ ದರ್ಪಣಂ ತಥಾ । ಗೀತಂ ನೃತ್ಯಂ ಚ ವಾದ್ಯಂ ಚ ಸ್ತೋತ್ರಮೇತತ್ಸಮರ್ಪಣಂ ಎಂದು ಹೇಳಿದೆ.

ಹತ್ತು ಇಂದ್ರಿಯ ಮನಸ್ಸು ಬುದ್ಧಿ ಪ್ರಾಣ ಅವ್ಯಕ್ತ ಹೀಗೆ ಹದಿನಾಲ್ಕು. ಅದಕ್ಕಿಂತ ಉತ್ತಮ ಶ್ರೀಹರಿ ಪಾಂಚದಶ್ಯ. ಪಂಚದಶಸಂಖ್ಯಾಪೂರಕ. 'ಪೂರಣಾರ್ಥೇ ತದ್ಧಿತಾಃ' ಇತಿ ಬಹುವಚನ ಜ್ಞಾಪಿತವಾದ ಷ್ಯಞ್. ಅಥವಾ ಬುದ್ಧಿ ಮನಸ್ಸು ಅಹಂಕಾರ ಚಿತ್ತ ಚೇತನ ಹತ್ತು ಇಂದ್ರಿಯ ಹೀಗೆ ಹದಿನೈದು. ಇವುಗಳಲ್ಲಿ ಇರುವದರಿಂದ ಪರಮಾತ್ಮ ಪಾಂಚದಶ್ಯನಾಗಿದ್ದಾನೆ. ಈ ಪಕ್ಷದಲ್ಲಿ ಭಾವಾರ್ಥೇ ತದ್ಧಿತ ಎಂದು ಭಾವ. ಚ ಶಬ್ದದಿಂದ ಇದನ್ನು ತಂತ್ರನಿರ್ಣಯದಲ್ಲಿಯೇ ಹೇಳಿದೆ ಎಂದು ಸೂಚಿಸುವರು. ಈ ರೀತಿ ಪ್ರಮಾಣವಿರುವದರಿಂದ ಪಂಚದಶೀ ಎಂಬ ಸಂಖ್ಯೆಯ ತಿಥಿಯಲ್ಲಿ ಇರುವದರಿಂದ ಪಾಂಚದಶ್ಯನೆಂದು ಮಾಡಿದ ಅರ್ಥ ಸರಿಯಲ್ಲ ಎಂದಂತಾಯಿತು. ॥೨೭॥

**ಸ ವೈ ಮಮಾಶೇಷವಿಶೇಷಮಾಯಾ-**
**ನಿಷೇಧನಿರ್ವಾಣಸುಖಾನುಭೂತಿಃ ।**
**ಸ ಸರ್ವನಾಮಾ ಸ ಚ ವಿಶ್ವರೂಪಃ**
**ಪ್ರಸೀದತಾಮನಿರುಕ್ತಾತ್ಮಶಕ್ತಿಃ ॥೨೮॥**

ಈ ಶ್ಲೋಕದಲ್ಲಿ **ಸಃ** ಎಂದಿರುವುದರಿಂದ (ಹಿಂದಿನ ಶ್ಲೋಕದಲ್ಲಿ) **ಯಃ** ಎಂದು ಸೇರಿಸಿಕೊಳ್ಳಬೇಕು. **ಯಃ** ಯಾವನು ಜ್ಞಾನಿಗಳಿಂದ ಮಥನ ಮಾಡಿ ತಿಳಿಯಲ್ಪಟ್ಟನೋ **ಸಃ** ಅಂತಹ ಹರಿಯು ಪ್ರಸನ್ನನಾಗಲಿ ಎಂದನ್ವಯ. **ಅಶೇಷವಿಶೇಷಮಾಯಾ-ನಿಷೇಧನಿರ್ವಾಣಸುಖಾನುಭೂತಿಃ ಅಶೇಷ** ಎಲ್ಲ **ವಿಶೇಷ** ಇಷ್ಟೇ ಎಂಬ ಅವಧಿ ಮತ್ತು **ಮಾಯಾ** ಪ್ರಕೃತಿಯ **ನಿಷೇಧ** ರಾಹಿತ್ಯ ಉಳ್ಳ **ನಿರ್ವಾಣ** ಶರೀರವಿಲ್ಲದೇ ಅನುಭವಿಸಲು ಯೋಗ್ಯವಾದ ಸುಖದ ಅನುಭವ ಉಳ್ಳ ಅಂದರೆ ಅಪರಿಮಿತ ಅಪ್ರಾಕೃತ ಶರೀರದಿಂದ ಅನುಭವಿಸಲರ್ಹವಾದ ಆನಂದಾನುಭವರೂಪನಾದ **ಸಃ** ಆ ಶ್ರೀಹರಿಯು **ಸರ್ವನಾಮಾ** ಎಲ್ಲ ಶಬ್ದಗಳಿಂದ ಮುಖ್ಯವಾಚ್ಯನು. (ಹೊರತು ಸರ್ವ ಎಂಬ ಹೆಸರುಳ್ಳವನಲ್ಲ) **ವಿಶ್ವರೂಪಃ** ಜಗತ್ತೇ ಪ್ರತಿಮೆಯಾಗಿ ಉಳ್ಳವನು. ವಿಶ್ವದ ರೂಪದಂತೆ ರೂಪ ಉಳ್ಳವನು. **ಅನಿರುಕ್ತಾತ್ಮಶಕ್ತಿಃ** ೧. ವಿಚಿತ್ರವಾದ ಆತ್ಮಶಕ್ತಿಯುಳ್ಳ ೨.

ಸಮಸ್ತವಾಗಿ ನಿರ್ವಚನ ಮಾಡಲಾಗದ ತನ್ನ ಜ್ಞಾನಶಕ್ತಿಯುಳ್ಳ **ಸಃ** ಶ್ರೀಹರಿಯು **ಮಮ** ನನಗೆ **ಪ್ರಸೀದತಾಂ ವೈ** ಪ್ರಸನ್ನನಾಗಲಿ.

ಮೇಲಿನ ಶ್ಲೋಕದಲ್ಲಿ ಭಗವಂತನಿಗೆ ನಿರ್ಗುಣತೆ ಹೇಳಲ್ಪಡುವದು ಎಂಬುದನ್ನು ನಿವಾರಿಸಲು ಪ್ರಮಾಣದಿಂದ ವಿವಕ್ಷಿತವಾದ ಅರ್ಥವನ್ನು ತಿಳಿಸುವರು.

ತಾತ್ಪರ್ಯ

**ಇಯತ್ತಾ ತು ವಿಶೇಷಃ ಸ್ಯಾದಾನಂದಾದೌ ತದುಜ್ಝಿತೇಃ ।**
**ಸರ್ವೈಃ ವಿಶೇಷೈ ರಹಿತ ಉಚ್ಯತೇ ಹರಿರವ್ಯಯಃ ।**

**ಅಪ್ರಾಕೃತಸ್ವರೂಪತ್ವಾನ್ನಿರ್ಮಾಯಶ್ಚೇತಿ ಕಥ್ಯತೇ ॥ ಇತಿ ಚ**
**ತದ್ರೂಪಸದೃಶಂ ರೂಪಂ ಯತಃ ಸರ್ವಸ್ಯ ಸರ್ವದಾ ।**
**ಸರ್ವರೂಪೋ ಯತಃ ಶಬ್ದಮುಖ್ಯಾರ್ಥಃ ಸರ್ವನಾಮಕಃ ॥ ಇತಿ ಚ**

**ಭಾವಾರ್ಥ-** ಆನಂದಾದಿಗಳಲ್ಲಿ ಪರಿಮಿತಿಯೇ ವಿಶೇಷವೆನಿಸುತ್ತದೆ. ಆನಂದಾದಿಗಳಲ್ಲಿ ಪರಿಮಿತಿ ಇಲ್ಲದಿರುವದರಿಂದ ಶ್ರೀಹರಿಯು ಎಲ್ಲ ವಿಶೇಷಗಳಿಂದ ರಹಿತನೆನಿಸುತ್ತಾನೆ. ಹೊರತು ನಿರ್ವಿಶೇಷನಾದ್ದರಿಂದಲ್ಲ. ಅಪ್ರಾಕೃತಸ್ವರೂಪ-ನಾದ್ದರಿಂದ ನಿರ್ಮಾಯನೆನಿಸುತ್ತಾನೆ. ಸಮಸ್ತಜಗತ್ತಿಗೆ ಶ್ರೀಹರಿಯ ರೂಪಕ್ಕೆ ಸದೃಶವಾದ ರೂಪವಿರುವುದರಿಂದ ಸರ್ವರೂಪನೆನಿಸುತ್ತಾನೆ. ಎಲ್ಲ ಶಬ್ದಗಳಿಂದ ಮುಖ್ಯವಾಚ್ಯನಾದ್ದರಿಂದ ಸರ್ವನಾಮನೆನಿಸುತ್ತಾನೆ.

**ವಿಶೇಷ ವಿಷಯ**

ನಿರ್ವಾಣ ಎಂದರೆ ಅಶರೀರ. 'ಕಾಯೋ ಬಾಣಂ ಶರೀರಂ ಚ' ಎಂದು ಅಭಿಧಾನವಿದೆ ಎಂದು ಗೀತಾಭಾಷ್ಯದಲ್ಲಿದೆ.

**ಅಭಾನಾಜ್ಜಡದೇಹಸ್ಯ ವಿಷ್ಣುರ್ನಿರ್ವಾಣ ಉಚ್ಯತೇ ।**
**ಭಿನ್ನದೇಹಾಭಾವತೋ ವಾ ಸ ಸಹಸ್ರಶಿರಾ ಅಪಿ ॥**

ಎಂದು ಗೀತಾತಾತ್ಪರ್ಯದಲ್ಲಿದೆ. 'ಏತದ್ಬಾಣವಷ್ಟಭ್ಯ...' ಎಂದು ಷಟ್ ಪ್ರಶ್ನದಲ್ಲಿದೆ.

**ಸುಖಾನುಭೂತಿಃ** ಸುಖಾನುಭವ ಉಳ್ಳವನು ಎಂದರ್ಥ. ಅಥವಾ **ಸು** ಶೋಭನಗಳಾದ ಅಪ್ರಾಕೃತಗಳಾದ **ಖ** ಇಂದ್ರಿಯಗಳು **ಅನುಭೂತಿಃ**




ಅನುಭೂತಿಯುಳ್ಳ. ಅಥವಾ 'ಸ್ವಿತ್ಯಾನಂದಃ ಸಮುದ್ದಿಷ್ಟಃ...' ಎಂದು ಬೃಹದ್ಭಾಷ್ಯದಲ್ಲಿ ಹೇಳಿದ್ದರಿಂದ **ಸು** ಆನಂದ **ಖ** ಇಂದ್ರಿಯಗಳು **ಅನುಭೂತಿ** ಅನುಭೂತಿಯುಳ್ಳ ಅಥವಾ ನಾರಾಯಣನನ್ನು ತಿಳಿಸುವ ಅಸಾಧಾರಣ ಧರ್ಮ ಯಾವುದೂ ಈ ಶ್ಲೋಕದಲ್ಲಿ ಇಲ್ಲವೆಂದರೆ ಹೇಳುವರು **ಸುಖಾನುಭೂತಿಃ** ಎಂದು. ಸುಖಾತ್ ಅನು ಹೀನಾ ಭೂತಿಃ ಮಹಾಲಕ್ಷ್ಮೀಃ ಯಸ್ಯ ಸಃ ಅಂದರೆ ಲಕ್ಷ್ಮೀದೇವಿಯೂ ಸುಖದಲ್ಲಿ ಯಾವನಿಗಿಂತ ಕಡಿಮೆಯೋ ಅವನು ಎಂದರ್ಥ. ಅಥವಾ **ಅನು** ಸಹ ವರ್ತತೇ **ಭೂತಿಃ** ಯಸ್ಯ ಸಃ ಲಕ್ಷ್ಮೀದೇವಿಯು ಯಾವನ ಜೊತೆಗಿರುವಳೋ ಅವನು. ಈ ಪಕ್ಷದಲ್ಲಿ ನಿರ್ವಾಣಸುಖಶ್ಚಾಸೌ ಅನುಭೂತಿಶ್ಚ ಎಂದು ವಿಗ್ರಹ. 'ಅನು ಹೀನೇ ಸಹಾರ್ಥೇ ಚ' ಎಂದು ವಿಶ್ವವಿದೆ. ಆ ಲಕ್ಷ್ಮೀದೇವಿಯೂ ಒಬ್ಬಳಲ್ಲ ಎಂದು ಹೇಳುವರು. **ಅನುಭೂತಿಃ** ಎಂದು. ಅನುಸೃತಾ ಯಾ ಭುವಃ ಊತಿಃ ಸಂಬಂಧಃ ಯಸ್ಯ ಸಃ ಅನುಸರಿಸಲ್ಪಟ್ಟ ಭೂದೇವಿಯ ಸಂಬಂಧ ಉಳ್ಳವನು ಎಂದರ್ಥ. **ಅನು** ಮುಮುಕ್ಷುಗಳ ಮೋಕ್ಷವನ್ನು ಅಪೇಕ್ಷಿಸಿ **ಭೂತಿಃ** ಪ್ರಾದುರ್ಭಾವ ಉಳ್ಳ ಅಥವಾ **ಅನುಭು** ಪ್ರತಿಯೊಂದು ಅವತಾರದಲ್ಲಿ **ಊತಿಃ** ಅಭಿಪ್ರೇತಾರ್ಥಸಿದ್ಧಿಯು ಯಾವನಿಂದ ಆಗುವದೋ ಅವನು ಅನುಭೂತಿಯು. 'ಆಶ್ರಯೇ ಮೋಕ್ಷೇ ಅನು' ಎಂದು ವಿಶ್ವವಿದೆ. **ಊತಯೇ** ಅಭಿಪ್ರೇತಾರ್ಥಸಿದ್ಧಯೇ ಎಂದು ಋಗ್ಭಾಷ್ಯದಲ್ಲಿ ಹೇಳಿದೆ. ಊತಿಜೂತಿ ಮುಂತಾಗಿ ನಿಪಾತಿತವಾದ ಶಬ್ದವಿದು.

**ಮಮ ಪ್ರಸೀದತಾಂ** ಎಂದರೆ ನನ್ನ ವಿಷಯದಲ್ಲಿ ಇವನನ್ನು ಉದ್ಧರಿಸುವೆನು ಎಂದು ಇಚ್ಛೆಯನ್ನು ಮಾಡಲಿ ಅಥವಾ ಅನುಗ್ರಹ ಸಹಿತನಾಗಲಿ ಎಂದರ್ಥ. 'ಪ್ರಸಾದೋ ನಾಮ ಇಚ್ಛಾವಿಶೇಷೋ ವಾ ಗುಣಾಂತರಂ ವಾ ನ ನಃ ಕಶ್ಚಿತ್ ಕ್ಷತಿಃ' ಎಂದು ಸುಧೆಯಲ್ಲಿದೆ. ಪ್ರಸಾದೋಽನುಗ್ರಹಃ' ಎಂದು ವಿಶ್ವವಿದೆ.

ವೈ ಶಬ್ದ 'ಏತಸ್ಯೈವಾನಂದಸ್ಯ ಅನ್ಯಾನಿ ಭೂತಾನಿ ಮಾತ್ರಾಂ ಉಪಜೀವಂತಿ' 'ನ ತೇ ವಿಷ್ಣೋ' 'ವಿಚಿತ್ರಶಕ್ತಿಃ ಪುರುಷಃ ಪುರಾಣಃ' 'ಅದೃಶ್ಯೇಽನಾತ್ಮ್ಯೇಽನಿರುಕ್ತೇ' 'ನ ತದೀದೃಗಿತಿ ಜ್ಞೇಯಂ' 'ಸರ್ವನಾಮಾ' 'ಯೋ ದೇವಾನಾಂ ನಾಮಧಾ' 'ನಾಮಾನಿ ಸರ್ವಾಣಿ ಯಮಾವಿಶಂತಿ' ಮುಂತಾದ ಪ್ರಮಾಣಪ್ರಸಿದ್ಧಿ ದ್ಯೋತಕವಾಗಿದೆ.

**ಅನುಭೂತಿಃ ಅನು** ತದ್ಭವನಮನು **ಭೂತಿಃ** ಸಂತಾನವಿಶೇಷಃ ಯಸ್ಮಾತ್ ಸಃ ಅನುಭೂತಿಃ ಯಾವ ತನ್ನಿಂದ ಅವನ ಇರುವಿಕೆಗೆ ತಕ್ಕಂತೆ ಸಂತಾನವಾಗುವದೋ ಅವನು ಯೋಗ್ಯಪುತ್ರರನ್ನು ಕೊಡುವ ಎಂದರ್ಥ. ಇಲ್ಲಿ ಅನುಪಪತ್ತಿ ಉಪಪತ್ತಿಗಳನ್ನು 'ನನ್ವಸೌ ತಂತುಸಂತಾನೇ ಪಠ್ಯತೇ...' ಮುಂತಾದ ಸುಧೆಯಿಂದ ತಿಳಿಯಬೇಕು.

ಮಿಕ್ಕವರನ್ನೂ ಬಿಟ್ಟು ಶ್ರೀಹರಿಯ ಪ್ರಸಾದವನ್ನೇ ಪ್ರಾರ್ಥಿಸಲು ಕಾರಣ 'ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾ ಜಾತಾನಿ ಪರಿತಾ ಬಭೂವ' ಎಂಬ ಶ್ರುತಿಯಂತೆ ಎಲ್ಲರಿಗಿಂತ ಅತಿಶಯಿತವಾದ ಮಹಾತ್ಮ್ಯ ಉಳ್ಳವನು ಎಂದು ತಿಳಿಸಿರುವರು 'ಏಷ ಹ್ಯೇವ ಶತಾನಂದಃ' ಎಂಬ ಶ್ರುತಿಯಂತೆ. ಬ್ರಹ್ಮಾದಿಗಳ ಆನಂದಕ್ಕೆ ಅವಧಿ ಉಂಟು. ಆದರೆ ಶ್ರೀಹರಿಯು ಅಪರಿಮಿತ ಆನಂದಾನುಭವರೂಪನು ಎಂದು ಮೇಲಿನ ಪ್ರಮಾಣಗಳಿಂದ ತಿಳಿಯುವದು.||೨೮||

'ಸ ಚ ವಿಶ್ವರೂಪಃ' ಎಂದು ಹೇಳಿದೆ. ಬಿಂಬ-ಪ್ರತಿಬಿಂಬ (ಪ್ರತಿಮಾ) ಭಾವವನ್ನು ಸ್ಪಷ್ಟಪಡಿಸುತ್ತಾರೆ.

**ಯದ್ಯನ್ನಿರುಕ್ತಂ ವಚಸಾ ನಿರೂಪಿತಂ**
**ಧಿಯಾಽಕ್ಷಿಭಿರ್ವಾ ಮನಸಾ ವೋತ ಯಸ್ಯ ।**
**ಮಾಭೂತ್ ಸ್ವರೂಪಂ ಗುಣರೂಪಬೃಂಹಿತಂ**
**ಸ ವೈ ಗುಣಾಪಾಯನಿಸರ್ಗಲಕ್ಷಣಃ ॥೨೯॥**

**ಯದ್ಯತ್** ಜಗತ್ತಿನಲ್ಲಿರುವ ಯಾವ ಯಾವುದು **ವಚಸಾ** ಘಟ ಮೊದಲಾದ ಮಾತುಗಳಿಂದ **ನಿರುಕ್ತಂ** ಹೇಳಲ್ಪಡುವದೋ **ಉತ** ಮತ್ತು **ಧಿಯಾ** ಬುದ್ಧಿಯಿಂದ **ಅಕ್ಷಿಭಿಃ** ಇಂದ್ರಿಯಗಳಿಂದಾಗಲಿ **ಮನಸಾ** ಮನಸ್ಸಿನಿಂದಾಗಲಿ **ನಿರೂಪಿತಂ** ತಿಳಿಯಲ್ಪಟ್ಟಿದೆಯೋ **ಗುಣರೂಪಬೃಂಹಿತಂ** ಸತ್ವ ಮೊದಲಾದ ಗುಣ ಸಮೂಹದಿಂದ ಅಭಿವೃದ್ಧವಾದ **ತತ್ತತ್** ಅದೆಲ್ಲವೂ **ಯಸ್ಯ** ಯಾವ ಶ್ರೀಹರಿಯ **ಸ್ವರೂಪಂ** ನಿಜರೂಪವೂ **ಮಾಭೂತ್** ಅಲ್ಲವೇ ಅಲ್ಲ, ಪ್ರತಿಮಾ (ಪ್ರತಿಬಿಂಬ) ವೆಂದರ್ಥ. **ಸಃ** ಶ್ರೀಹರಿಯು **ಗುಣೋಪಾಯನಿಸರ್ಗಲಕ್ಷಣಃ** ಸತ್ವಾದಿ ಗುಣರಾಹಿತ್ಯವೇ ಸ್ವಾಭಾವಿಕ ಲಕ್ಷಣವಾಗಿ ಉಳ್ಳವನು. **ವೈ** ಹೀಗೆಂದು 'ಕೇವಲೋ ನಿರ್ಗುಣಶ್ಚ' ಎಂಬ ಶ್ರುತಿಯಿಂದ ಪ್ರಸಿದ್ಧನು. 'ಗುಣರೂಪಬೃಂಹಿತಂ' 'ಗುಣಾಪಾಯನಿಸರ್ಗಲಕ್ಷಣಂ' ಎಂದು ವಿರುದ್ಧ ಧರ್ಮಗಳನ್ನು ಹೇಳಿದ್ದರಿಂದ ಜಗದ್ರೂಪವು ತ್ರಿಗುಣಾತ್ಮಕವೆಂದು ಭಗವದ್ರೂಪವು ಅಪ್ರಾಕೃತವೆಂದೂ ನಿರ್ಣಯಿಸಿ ಪರಸ್ಪರ ಭಿನ್ನಗಳೆಂದು ತಿಳಿಸಿರುವರು.

ಮಾ ಭೂತ್ ಎಂದು ಹೇಳಿದ್ದರಿಂದ ಜಗತ್ತನ್ನು ಭಗವಂತನ ಸಾಕ್ಷಾದ್ರೂಪವೆಂದು ತಿಳಿಯಬೇಡವೆಂದು ಸೂಚಿಸಿರುವರು.

ಮೇಲಿನ ಶ್ಲೋಕದಲ್ಲಿ ಹರಿಯ ರೂಪವು ಮಾತು ಮೊದಲಾದವುಗಳಿಂದ ಹೇಳಲ್ಪಡುವುದಿಲ್ಲ. ಅದು ನಿರುಕ್ತವೂ ಅಲ್ಲ. ನಿರೂಪಿತವೂ ಅಲ್ಲ ಎಂದು ಹೇಳಿದಂತೆ ಆಗುತ್ತದೆ. ಹಾಗಾದರೆ ಸರ್ವಥಾ ಅನಿರುಕ್ತ ಅನಿರೂಪಿತವೆಂಬ ಭ್ರಮವು ಬರುತ್ತದೆ. ಈ ಭ್ರಾಂತಿಯನ್ನು ಪರಿಹರಿಸಲು ಈ ತಾತ್ಪರ್ಯವು ಪ್ರವೃತ್ತವಾಗಿದೆ.

ತಾತ್ಪರ್ಯ

**ಅಲೌಕಿಕತ್ವಾನ್ನೋ ವಿಷ್ಣುಃ ನಿರುಕ್ತೋಽತೋ (ನೋ) ನಿರೂಪಿತಃ ।**
**ತಥಾಪಿ ವೇದೇಷೂಕ್ತತ್ವಾದುಕ್ತೋ ರೂಪೀ ಸ ಏವ ಚ ॥**
**-ಇತಿ ವ್ಯೋಮಸಂಹಿತಾಯಾಮ್ ॥**

ವಿಷ್ಣುವು ಲೋಕವಿಲಕ್ಷಣನಾದ್ದರಿಂದ ಸರ್ವಶಬ್ದಗಳಿಂದಲೂ ಸಂಪೂರ್ಣವಾಗಿ ಹೇಳಲ್ಪಡುವದಿಲ್ಲ. ಮನಸ್ಸು ಮೊದಲಾದವುಗಳಿಂದ ತಿಳಿಯಲ್ಪಡುವದಿಲ್ಲ. ಆದರೂ ವೇದಗಳಲ್ಲಿ ಪ್ರತಿಪಾದಿತನಾಗಿರುವದರಿಂದ ನಿರೂಕ್ತನೆಂದೂ ಜ್ಞಾತನೆಂದೂ ಅನ್ನಿಸಿಕೊಳ್ಳುತ್ತಾನೆ. ಎಂದು ವ್ಯೋಮಸಂಹಿತೆಯಲ್ಲಿದೆ.

ಮೇಲೆ ಶ್ರೀವಿಜಯಧ್ವಜರ ಪ್ರಕಾರ ಅರ್ಥ ಬರೆದಿದೆ. ಶ್ರೀಸತ್ಯಧರ್ಮರ ಪ್ರಕಾರ ಈ ರೀತಿಯಾಗಿ ಅರ್ಥವನ್ನು ತಿಳಿಯಬೇಕು.

**ಯಸ್ಯ** ಯಾವ ಶ್ರೀಹರಿಯ **ಯದ್ಯತ್** ಯಾವುದು ಯಾವುದು ಸ್ವರೂಪವೋ ವೀಪ್ಸಾದಿಂದ (ಎರಡು ಸಲ ಹೇಳುವುದು ವೀಪ್ಸಾ) ಯಾವ ಅವತಾರದಲ್ಲಿಯೂ ಇದಕ್ಕೆ ವ್ಯತ್ಯಾಸವಿಲ್ಲವೆಂದು ತಿಳಿಸುವರು. ಅಂದರೆ ಎಲ್ಲ ಭಗವದ್ರೂಪಗಳೂ **ವಚಸಾ** ಮಾತಿನಿಂದ **ನಿರುಕ್ತಂ** ಹೇಳಲ್ಪಡುವದು **ಧಿಯಾ** ಬುದ್ಧಿಯಿಂದ **ಅಕ್ಷಿಭಿಃ** ಇಂದ್ರಿಯಗಳಿಂದ **ಉತ** ಮತ್ತು **ಮನಸಾ** ಮನಸ್ಸಿನಿಂದಲೂ **ನಿರೂಪಿತಂ ಮಾಭೂತ್** ತಿಳಿಯಲ್ಪಡುವದಿಲ್ಲ. ಮಾಙಿ ಲುಙ್ ಆದ್ದರಿಂದ ಲಙ್ ಅರ್ಥ. ಅಕ್ಷಿಭಿಃ ಎಂಬ ಪದದಿಂದಲೇ ಮನಸ್ಸನ್ನೂ ಸ್ವೀಕರಿಸಲು ಬಂದರೂ ಮತ್ತೆ **ಮನಸಾ** ಎಂದು ಹೇಳಿದ್ದು ಎಲ್ಲದ್ದಕ್ಕೂ ಮೂಲವಾದ್ದರಿಂದ ಎಲ್ಲ ಇಂದ್ರಿಯಗಳು ಉಪರತವಾದಾಗ ಮನಸ್ಸಿನ ವೃತ್ತಿ ಉಪರಮವಾಗದಿರುವದರಿಂದ ಎಂದು ತಿಳಿಯಬೇಕು. **ಧಿಯಾ** ಎಂದು ಮನೋವೃತ್ತಿವಿಶೇಷಾಭಿಪ್ರಾಯದಿಂದ 'ಹ್ರೀಃ ಧೀಃ ಭೀಃ ಇತ್ಯೇತತ್ಸರ್ವಂ ಮನ ಏವ'

ಎಂದಿದೆ. ಹಾಗಾದರೆ ನಿರುಪಾಖ್ಯನೇ ಎಂದರೆ **ಗುಣರೂಪಬೃಂಹಿತಂ** ಎಂದು ಹೇಳುವರು. **ಗುಣ** ಜ್ಞಾನಾನಂದಾದಿಗಳಿಂದ **ರೂಪ** ಆಕಾರಗಳಿಂದ **ಬೃಂಹಿತಂ** ಪೂರ್ಣನು ಗುಣಪದದಿಂದ ಸತ್ತ್ವಾದಿಗಳನ್ನು ತೆಗೆದುಕೊಂಡರೆ **ಗುಣಾಪಾಯನಿಸರ್ಗಲಕ್ಷಣಃ** ಸತ್ವಾದಿಗಳ ವರ್ಜನವೇ ಸ್ವಾಭಾವಿಕ ಲಕ್ಷಣವು ಜಗದ್ವಿಲಕ್ಷಣತೆಗೆ ಕಾರಣವಾದುದು ಯಾವನಿಗೆ ಇದೆ ಅಥವಾ ಗುಣರಹಿತವಾಗಿಯೇ ಯಾವನ **ನಿಸರ್ಗಃ** ಪ್ರಾದುರ್ಭಾವಾದಿಗಳೇ ಲಕ್ಷಣವಾದವನು. **ವೈ** ಶಬ್ದವು 'ತ್ರಿಗುಣಾತೀತಮಕ್ಷರಂ' 'ನ ತಸ್ಯ ಪ್ರಾಕೃತಾ ಮೂರ್ತಿಃ' 'ಅರೂಪೋ ಭೂತವರ್ಜನಾತ್' 'ಆನಂದಮಾತ್ರಕರಃ' 'ಸದ್ದೇಹಃ' ಮುಂತಾದ ಪ್ರಸಿದ್ಧಿಯನ್ನು ತಿಳಿಸುವದು. ಹೀಗೆ ಅರ್ಥಮಾಡಿರುವರು. ಗುಣಾನ್ ಸತ್ತ್ವಾದೀನ್ ರೂಪಯತಿ ಪ್ರತಿಷ್ಠಿತಾನ್ ಕರೋತಿ ಗುಣರೂಪಂ ಅಥವಾ ಗುಣಾಃ ರೂಪಂ ಆಕಾರೋ ಯಸ್ಯ ಎಂದಾಗಲಿ ಸತ್ತ್ವಾದಿಗುಣಪ್ರಧಾನವಾದ ಜಗತ್ತು **ಯಸ್ಯ** ಯಾವನ **ಸ್ವರೂಪಂ ಮಾ ಭೂತ್** ಸ್ವರೂಪ ಅಲ್ಲ. ಏಕೆಂದರೇ 'ಸ ವೈ ಗುಣಾಪಾಯನಿಸರ್ಗಲಕ್ಷಣಃ' ವಿರುದ್ಧಧರ್ಮವಿರುವುದರಿಂದ ಜಗತ್ತಿಗೆ ಶ್ರೀಹರಿಗೆ ಅಭೇದವಿಲ್ಲವೆಂದು ಭಾವ. ॥೨೯॥

ಕಾಲಕಾರಣತ್ವವು ಬ್ರಹ್ಮನ ಸ್ವರೂಪ ಲಕ್ಷಣವೆಂದು ಹೇಳುತ್ತಾರೆ-

**ಯಸ್ಮಿನ್ ಯತೋ ಯೇನ ಚ ಯಸ್ಯ ಯಸ್ಮೈ**
**ಯಂ ಯೋ ಯಥಾ ಕುರುತೇ ಕಾರ್ಯತೇ ವಾ ।**
**ಪರಾವರೇಷಾಂ ಪರಮಂ ಪ್ರಾಕ್ಪ್ರಸಿದ್ಧಂ**
**ತದ್ಬ್ರಹ್ಮ ತದ್ಧೇತುರನನ್ಯದೇಕಮ್ ॥೩೦॥**

**ಯಸ್ಮಿನ್** ಯಾವ ಅಧಿಕರಣವಾದ ಕಾಲದಲ್ಲಿ ಇದು ಇದೆಯೋ **ಯತಃ** ಯಾವ ಅಪಾದಾನವಾದ ಕಾಲದಿಂದ ಇದು ಆಯಿತೋ **ಯೇನ** ಯಾವ ಕಾರಣವಾದ ಕಾಲದಿಂದ ಹುಟ್ಟಿತೋ **ಯಸ್ಯ** ಯಾವ ಸಂಬಂಧವಾದ ಕಾಲಕ್ಕೆ ಇದು ಅಧೀನ-ವಾಗಿದೆಯೋ **ಯಸ್ಮೈ** ಯಾವ ಸಂಪ್ರದಾನವಾದ ಕಾಲಕ್ಕಾಗಿ ಇರುವದೋ (ಯೋಗ್ಯವೋ) **ಯಂ** ಯಾವ ಕರ್ಮವಾದ ಕಾಲವನ್ನು ಪ್ರತೀಕ್ಷಿಸುವದೋ **ಯಃ** ಯಾವ ಕರ್ತೃವಾದ ಕಾಲವು ಪ್ರೇರಿಸುವದೋ **ಯಥಾ** ಯಾವ ರೀತಿಯಲ್ಲಿ (ಯಾವ ಪ್ರಕಾರ) **ಪುರುಷಃ** ಜೀವನು **ಕುರುತೇ** ಕರ್ಮವನ್ನು ಮಾಡುವನೋ **ವಾ** ಅಥವಾ

**ಕಾರ್ಯತೇ** ಸ್ವಯಂ ಇನ್ನೊಬ್ಬರಿಂದ ಮಾಡಿಸಲ್ಪಡುವನೋ **ತದ್ಧೇತುಃ** ಆ ಏಳು ವಿಭಕ್ತ್ಯರ್ಥವಾದ ಕಾಲಕ್ಕೂ ಪ್ರಕಾರಗಳಿಗೂ ಕರ್ತೃವಿಗೂ ಪ್ರೇರಕನಿಗೂ ಯಾವುದು ಕಾರಣವೋ **ಯತ್** ಯಾವುದು **ಪರಾವರೇಷಾಂ ಪರಾ** ಉತ್ತಮರಾದ ಇಂದ್ರಾದಿಗಳು **ಅವರಾಃ** ಯಾರಿಗಿಂತ ಕಡಿಮೆಯೋ ಅಂಥ ಬ್ರಹ್ಮಾದಿಗಳಿಗಿಂತ **ಪ್ರಾಕ್** ಮೊದಲೇ ಅನಾದಿಯಾಗಿ **ಸಿದ್ಧಂ** ಕಾರ್ಯಕಾರಣಾತ್ಮಕವಾದ ಪ್ರಪಂಚಕ್ಕಿಂತ ಭಿನ್ನವಾಗಿ ತಾನಾಗಿಯೇ ಸಿದ್ಧವಾಗಿದೆಯೋ ಆದ್ದರಿಂದಲೇ **ಪರಮಂ** ಸರ್ವೋತ್ತಮವೋ **ಅನನ್ಯತ್** ಅಸದೃಶವಾದ ಮತ್ತೊಂದು ವಸ್ತು ಇಲ್ಲದಿರುವದೋ **ಏಕಂ** ಅವತಾರಗುಣಕ್ರಿಯಾದಿಗಳಿಂದ ಭೇದರಹಿತವೋ **ತತ್** ಅದೇ **ಬ್ರಹ್ಮ** ಪೂರ್ಣವಾದ ನಾರಾಯಣನೆಂಬ ವಸ್ತುವು ಅಥವಾ ಶ್ರುತ್ಯಾದಿಗಳಿಂದ ಪ್ರಸಿದ್ಧವಾದ ಪರಬ್ರಹ್ಮವಸ್ತುವು ಅವುಗಳಿಗೆ ಕಾರಣವು ಎಂದಾದರೂ ಅನ್ವಯ.

ಮೇಲಿನ ಶ್ಲೋಕದಲ್ಲಿ ಸಪ್ತಮೀ ಮುಂತಾದ ಏಳು ವಿಭಕ್ತ್ಯಂತ ಪದಗಳಿಗೆ ಅಧಿಕರಣಾದಿಕಾರಕವಾಚಕತ್ವ ಭ್ರಾಂತಿಯನ್ನು ಅದರಂತೆ ಯಥಾಶಬ್ದ ದೃಷ್ಟಾಂತಾರ್ಥ ಎಂಬ ಭ್ರಾಂತಿಯನ್ನು ಕಳೆಯುತ್ತ ಅನ್ವಯಸಹಿತವಾಗಿ ತಾವು ವ್ಯಾಖ್ಯಾನಿಸಿ ಆ ವಿಷಯದಲ್ಲಿ ಪ್ರಮಾಣ ಹೇಳುವರು.

ತಾತ್ಪರ್ಯ

**ಸಪ್ತವಿಭಕ್ತ್ಯರ್ಥಸ್ಯ ಕಾಲಸ್ಯ ಪ್ರಕಾರಸ್ಯ ಚ ಹೇತುರ್ಬ್ರಹ್ಮ ।**

**ವಿಭಕ್ತ್ಯರ್ಥಸ್ಯ ಕಾಲಸ್ಯ ಪ್ರಕಾರಾಣಾಂ ಚ ಕಾರಣಮ್ ।**
**ಏಕ ಏವ ಪರೋ ವಿಷ್ಣುಃ ಸರ್ವಸತ್ತಾಪ್ರದತ್ವತಃ ॥ -ಇತಿ ಭವಿಷ್ಯತ್ಪರ್ವಣಿ**

**ಅನನ್ಯಃ ಸದೃಶಾಭಾವಾದೇಕೋ ರೂಪಾದ್ಯಭೇದತಃ ॥ -ಇತಿ ಚ**

ಏಳು ವಿಭಕ್ತಿಗಳ ಅಧಿಕರಣಾದ್ಯರ್ಥರೂಪವಾದ ಕಾಲಕ್ಕೂ ಪರಾಧೀನಕರ್ತೃತ್ವಾದಿ ರೂಪವಾದ ಪ್ರಕಾರಕ್ಕೂ ಬ್ರಹ್ಮನೇ ಕಾರಣನು. ವಿಭಕ್ತಿಗಳ ಅರ್ಥವಾದ ಕಾಲಕ್ಕೂ ಪ್ರಕಾರಗಳಿಗೂ ಸರ್ವಕ್ಕೂ ಸತ್ತಾದಿಗಳನ್ನು ಕೊಡತಕ್ಕವನಾದುದರಿಂದ ಸರ್ವೋತ್ತಮನಾದ ಶ್ರೀವಿಷ್ಣು ಒಬ್ಬನೇ ಕಾರಣನು ಎಂದು ಭವಿಷ್ಯತ್ಪರ್ವದಲ್ಲಿದೆ. ಸದೃಶನಿಲ್ಲದಿರುವದರಿಂದ ಅನನ್ಯವೆಂದು ಅವತಾರಾದಿಗಳಿಂದ ಭೇದವಿಲ್ಲದಿರುವದರಿಂದ ಏಕ ಎಂದೂ ಹೇಳಲ್ಪಡುವನು.

**ಯದಧೀನಾ ಯಸ್ಯ ಸತ್ತಾ ತತ್ತದಿತ್ಯೇವ ಭಣ್ಯತೇ ।**
**ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ ॥**

ಎಂದಿರುವದರಿಂದ ಸರ್ವಸತ್ತಾಪ್ರದನಾದ್ದರಿಂದಲೇ ಏಕನೆಂದು ಹೇಳಲ್ಪಡುವನು. ಹೊರತು ಎರಡನೇ ವಸ್ತು ಇಲ್ಲದ್ದರಿಂದಲ್ಲ. ಮತ್ಸ್ಯಾದಿರೂಪಗಳಿಂದ ಗುಣಕರ್ಮಾದಿಗಳಿಂದ ಅಭಿನ್ನನಾದ್ದರಿಂದ ಏಕನೆನಿಸುವನು.

ಆಯಾ ಕಾಲಕ್ಕೆ ಸದಾತನ ಸತ್ತ್ವವನ್ನು ಕೊಡುವುದು ವಿಷ್ಣುವಿಗೆ ಸೇರಿದ್ದು. ಮತ್ತೊಬ್ಬನಿಗಲ್ಲವೆಂದು ತಿಳಿಸುವುದಕ್ಕಾಗಿ ಏಳು ವಿಭಕ್ತ್ಯರ್ಥವಾಗಿ ಕಾಲವನ್ನು ವಿಶಿಷ್ಟವಾಗಿ ಹೇಳಿದ್ದು. ಇಲ್ಲದಿದ್ದರೇ ಕಾಲಕ್ಕೆ ಕಾರಣ ಬ್ರಹ್ಮ ಎಂದು ಹೇಳಿದ್ದರೆ ಸಾಕಾಗುತ್ತಿತ್ತು. (ಪ್ರಾತಿಪದಿಕಾರ್ಥ ಕರ್ಮತ್ವ ಕರ್ತೃತ್ವ ಕರಣತ್ವ ಸಂಪ್ರದಾನತ್ವ ಅಪಾದಾನತ್ವ ಸ್ವಸ್ವಾಮಿಭಾವಸಂಬಂಧ ಆಧಾರಾಧೇಯಭಾವ ಇತ್ಯಾದಿ ಏಳು ವಿಭಕ್ತ್ಯರ್ಥಕ್ಕೂ ಕುರುತೇ ಇತ್ಯಾದಿ ತಿಙರ್ಥಕ್ಕೂ ಸುಪ್‌ತಿಙ್‌ಗಳಲ್ಲಿರುವ ಏಕತ್ವ-ದ್ವಿತ್ವ-ಬಹುತ್ವಗಳಿಗೂ ಯಥಾ ಎಂದು ಹೇಳಿದ ಪ್ರಕಾರಗಳಿಗೂ ಬ್ರಹ್ಮನೇ ಕಾರಣ. ಉಳಿದವರ ಕರ್ತೃತ್ವಾದಿಗಳು ಭಗವದಧೀನವೆಂಬುದನ್ನು 'ಪರಾವರೇಷಾಂ ಪರಮಂ' ಎಂಬುದರಿಂದಲೂ ಬೇರೆ ಜಗತ್ತೇ ಇಲ್ಲವಾದ್ದರಿಂದ ಜಗತ್ಕಾರಣತ್ವ ಕೊಡುವದಿಲ್ಲವೆಂಬ ಶಂಕೆಯನ್ನು ಅನನ್ಯಶಬ್ದದಿಂದ ನರಸಿಂಹಾದಿಗಳು ಸಂಹಾರಕಾರಣರಾದ್ದರಿಂದ ಪರಬ್ರಹ್ಮನೇ ಸರ್ವಕಾರಣ ಹೇಗೆಂಬ ಶಂಕೆಯನ್ನು ಏಕಂ ಎಂಬುದರಿಂದ ತಿಳಿಸಿರುವರು. ತಸ್ಮೈ ನಮಃ ಎಂದು ಅನ್ವಯ. ॥೩೦॥

ಶಕ್ತಿ ಸ್ವರೂಪವನ್ನು ವ್ಯಕ್ತಗೊಳಿಸುವರು-

**ಯಚ್ಛಕ್ತಯೋ ವದತಾಂ ವಾದಿನಾಂ ವೈ**
**ವಿವಾದಸಂವಾದಭುವೋ ಭವಂತಿ ।**
**ಕುರ್ವಂತಿ ತೇಷಾಂ ಮುಹುರಾತ್ಮಮೋಹಂ**
**ತಸ್ಮೈ ನಮೋಽನಂತಗುಣಾಯ ಭೂಮ್ನೇ ॥೩೧॥**

**ವದತಾಂ** ಬ್ರಹ್ಮನು ಸಗುಣನು ನಿರ್ಗುಣನು ಎಂದು ವಿವಾದ ಮಾಡುವ **ವಾದಿನಾಂ** ವಾದಿ-ಪ್ರತಿವಾದಿಗಳಿಗೆ **ಯಚ್ಛಕ್ತಯಃ** ಯಾವ ಶ್ರೀಹರಿಯ ಶಕ್ತಿ ಮೊದಲಾದ ಗುಣಗಳು **ವಿವಾದಸಂವಾದಭುವಃ** ವಿಪ್ರತಿಪತ್ತಿ-ಸಂಪ್ರತಿಪತ್ತಿಗಳಿಗೆ ವಿಷಯಗಳು **ಭವಂತಿ** ಆಗುವವೋ **ತೇಷಾಂ** ಆ ವಾದಿಗಳಿಗೆ (ಸಗುಣ-ನಿರ್ಗುಣ

ಎಂದು ಹೇಳುವವರಿಗೆ) ಯಾವನ ಗುಣಗಳು **ಮುಹುಃ** ಮತ್ತೆ ಮತ್ತೆ **ಆತ್ಮಮೋಹಂ** ತಮ್ಮ ಗುಣವಿಷಯಕ ಅಜ್ಞಾನವನ್ನು **ಕುರ್ವಂತಿ** ಉಂಟು ಮಾಡುವವೋ **ತಸ್ಮೈ** ಅಂತಹ **ಅನಂತಗುಣಾಯ** ಅಪರಿಮಿತಗುಣಪೂರ್ಣನಾದ **ಭೂಮ್ನೇ** ಸರ್ವೋತ್ತಮನಾದ ಶ್ರೀಹರಿಗೆ **ನಮಃ** ನಮಸ್ಕಾರವು.

ವಾದಿಗಳ ಮತವು ಅಜ್ಞಾನ ಮೂಲಕವೆಂದು ಹೇಳಿದಂತಾಯಿತು. ಭಗವಂತನ ಗುಣಗಳು ಅನಂತವಾದ್ದರಿಂದ ಯೋಗ್ಯರಾದವರೂ ಸಂಪೂರ್ಣವಾಗಿ ತಿಳಿಯಲಾರರು. ಅಯೋಗ್ಯರಂತೂ ಗುಣಗಳನ್ನೇ ತಿಳಿಯುವುದಿಲ್ಲ ಎಂದು ಭಾವ.

**ವಿಶೇಷಾರ್ಥ**

**ಅನಂತಗುಣಾಯ ಅನಂತಾನಾಂ** ಮುಕ್ತರಿಗೆ **ಗುಣಾಃ** ಜ್ಞಾನಾನಂದಾದಿಗಳು ಯಾವನಿಂದ ಬರುವವೋ ಅವನು ಅನಂತಗುಣನು. ಅಪರಿಚ್ಛಿನ್ನಗುಣನು. ಅಥವಾ ಅನಂತಗುಣಾಯಭೂಮ್ನೇ ಎಂದು ವಿಶಿಷ್ಟ ಪದ ಅನಂತಗುಣ ಎಂದರೆ ಆಕಾಶ ಗುಣವಾದ ಶಬ್ದ ಆದರಿಂದ ಅಯ್ಯಂತೇ ತಿಳಿಯಲ್ಪಡುವವರು ಅನಂತಗುಣಾಯಾಃ ಎಂದರೆ ಶ್ರೀಬ್ರಹ್ಮಮುಂತಾದವರು. ಅವರಿಗಿಂತ **ಭೂಮ್ನೇ** ಜ್ಯೇಷ್ಠನಾದವನಿಗೆ ಎಂದರ್ಥ. ಅಥವಾ **ಅನಂತಗುಣಾಯ** ಶಬ್ದವೇದ್ಯನಾದ **ಭೂಮ್ನೇ** ಮಹತ್ವವು ಯಾವನಿಗಿದೆಯೋ ಅವನಿಗೆ. ಈ ರೀತಿ ಅರ್ಥಕ್ಕೆ ಬೇಕಾದ ಪ್ರಮಾಣ 'ಅನಂತಂ ಸುರವರ್ತ್ಮ ಖಂ' ಎಂದು ಅಮರ. 'ನೈಕಾಂಶಸಮಮಾಹಾತ್ಮ್ಯಾಃ ಶ್ರೀಶೇಷಬ್ರಹ್ಮಶಂಕರಾಃ' ಎಂದು ಗೀತಾಭಾಷ್ಯದಲ್ಲಿದೆ.

**ಯಚ್ಛಕ್ತಯಃ** ಏವ ಯಾವನ ಶಕ್ತಿಗಳೇ **ವಾದಿನಾಂ** ವಾದಿಗಳಿಗೆ **ವದತಾಂ** ವಾಗ್ಮಿತೆಯನ್ನು **ಕುರ್ವಂತಿ** ಆ ಶಕ್ತಿಗಳೇ ಮೋಹವನ್ನೂ ಉಂಟು ಮಾಡುವವು. ಈ ರೀತಿ ಯೋಜಿಸಿದ್ದರಿಂದ **ವಾದಿನಾಂ** ಎಂದಿಷ್ಟೇ ಸಾಕು. **ವದತಾಂ** ಎಂಬುದು ಬೇಕಿಲ್ಲವೆಂಬ ಶಂಕೆ ನಿರಾಕೃತವಾಯಿತು. 'ವದೋ ವಾದಾವದೋ ವಾಗ್ಮೀ' ಎಂದು ಅಮರವಿದೆ.

ಅಥವಾ ಮೊದಲನೆ ಪಕ್ಷದಲ್ಲಿ (ಅಂದರೆ ವದತಾಂ ವಾದಿನಾಂ ಎಂದು ವಿಶೇಷಣ ಮಾಡಿದಾಗ) **ವಾದಿನಾಂ** ಎಂದಿಷ್ಟೇ ಹೇಳಿದಾಗ ವಾದೋಪಲಕ್ಷಿತತ್ತ್ವ ಶಂಕೆಯಿಂದ ಯಾವಾಗಲೋ ವಾದಿತಾ ಇರುವದರಿಂದ ವಾದಿಗಳು ಎಂದಿರುವದೆಂದು ತೋರಬಹುದು. ಆ ಆಪತ್ತನ್ನು ಪರಿಹರಿಸಲು **ವದತಾಂ** ಎಂದು ಹೇಳಿ ವಾದಕ್ಕೆ

ವರ್ತಮಾನಕಾಲದಲ್ಲಿ ವರ್ತಮಾನತೆಯನ್ನು ತಿಳಿಸುವರೆಂದು ತಿಳಿಯಬೇಕು. ಹಾಗಾದರೆ ವಾದಿನಾಂ ಎಂಬುದು ಹೆಚ್ಚಾಯಿತು ಎನ್ನುತ್ತೇವೆ? ಎಂದರೆ ಹಾಗೇನಿಲ್ಲ, ಈಗಲೇ ಅಭ್ಯಾಸ ಮಾಡಿ ಗಿಳಿ ಮರಿಯಂತೆ ಏನೋ ಸ್ವಲ್ಪ ಹೇಳುವನು ಎಂದು ತೋರುವದು. ಈ ಅಪಾಯಕ್ಕೆ ಉಪಾಯವನ್ನು ವಾದಿನಾಂ ಎಂಬಲ್ಲಿರುವ ಭೂಮಾರ್ಥಕ ಇನಿ ಪ್ರತ್ಯಯದಿಂದ ತಿಳಿಸಿರುವರು. ವಾದ ಮಾಡುವ ಸ್ವಭಾವದವರು ಎಂದರ್ಥ. ಅಂಥವರೂ ಸಹ ಸುಮ್ಮನೇ ಕುಳಿತಿಲ್ಲವೆಂಬುದನ್ನು ವದತಾಂ ಎಂಬುದರಿಂದ ಸೂಚಿಸಿರುವರು ಹೀಗೆ ಎರಡೂ ಸಾರ್ಥಕವೇ ಎಂದು ಭಾವ.

ವಿವಾದ-ಸಂವಾದಗಳು ಹೇಗೆ ಆಗುವವೆಂದು ಹೇಳುತ್ತಾರೆ-

**ಅಸ್ತೀತಿ ನಾಸ್ತೀತಿ ಚ ವಸ್ತುನಿಷ್ಠಯೋಃ**
**ಏಕಸ್ಥಯೋರ್ಭಿನ್ನವಿರುದ್ಧಧರ್ಮಯೋಃ ।**
**ಅಪೇಕ್ಷಿತಂ ಕಿಂಚನ ಸಾಂಖ್ಯಯೋಗಯೋಃ**
**ಸಮಂ ಪರಂ ಹ್ಯನುಕೂಲಂ ಬೃಹತ್ ತತ್ ॥೩೨॥**

**ಯತ್** ಯಾವುದು **ಅಸ್ತಿ ಇತಿ** ನನಗಿಂತ ಭಿನ್ನವಾದ ಈಶ್ವರನೆಂಬ ವಸ್ತುವಿದೆ ಎಂದು ದೇವತೆಗಳ ಮತಾನುಯಾಯಿಗಳು **ನಾಸ್ತಿ ಇತಿ** ನನಗಿಂತ ಭಿನ್ನವಾದ ಈಶ್ವರನೆಂಬ ವಸ್ತು ಇಲ್ಲವೆಂದು ಅಸುರಮತಾನುಯಾಯಿಗಳು ಪ್ರತಿಪಾದಿಸುವ **ವಸ್ತು ನಿಷ್ಠಯೋಃ** ಭಿನ್ನವಸ್ತುಗಳಲ್ಲಿರುವ **ಏಕಸ್ಥಯೋಃ** ಒಂದೇ ವಸ್ತುವಿನಲ್ಲಿರುವ **ಭಿನ್ನ ವಿರುದ್ಧಧರ್ಮಯೋಃ** ಭಿನ್ನಗಳೂ ಮತ್ತು ವಿರುದ್ಧಗಳೂ ಆದ ಸ್ವರೂಪಸತ್ವ-ಅಸತ್ವಗಳಿಗೆ **ಅಪೇಕ್ಷಿತಂ** ವಿಷಯವೋ **ಕಿಂಚನ** ಲೋಕವಿಲಕ್ಷಣ- ವಾದುದೋ **ಸಾಂಖ್ಯಯೋಗಯೋಃ** ಯಥಾರ್ಥಜ್ಞಾನಸಾಧನವಾದ ವೇದಾಂತದಲ್ಲಿ ವಿಚಾರಿತವೋ ಕರ್ಮಾನುಷ್ಠಾನವೆಂಬ ಯೋಗವನ್ನು ಪ್ರತಿಪಾದಿಸುವ ಕರ್ಮಕಾಂಡದಲ್ಲಿ ಅದಕ್ಕೆ ಫಲದಾತೃವೆಂದು ಪ್ರತಿಪಾದಿತವೂ ಆಗಿ ಜ್ಞಾನ-ಕರ್ಮಯೋಗಗಳೆರಡಕ್ಕೂ ವಿಷಯವೋ **ಅನುಕೂಲಂ** ಎಲ್ಲರಿಗೂ ಪ್ರಿಯತಮವೋ ಅಥವಾ ಆಯಾ ವಾದಿಗಳಿಗೆ ಆಯಾ ಬುದ್ಧಿಯನ್ನು ಹುಟ್ಟಿಸಿ ಅದಕ್ಕೆ ಅನುರೂಪ ಫಲವನ್ನು ಕೊಡುತ್ತಲಿದೆಯೋ **ತತ್** ಅಂತಹ **ಪರಂ ಬೃಹತ್** ಪರಬ್ರಹ್ಮವಸ್ತುವನ್ನು **ಪ್ರಪದ್ಯೇ** ಶರಣು ಹೊಂದುವೆನು. ಅಥವಾ ಅಂಥ ಪರಬ್ರಹ್ಮವಸ್ತುವು **ಪ್ರಸೀದತು** ಎಂದು ಮುಂದಿನ ಶ್ಲೋಕದ ಪದದೊಡನೆಯಾದರೂ ಅನ್ವಯ.

**ವಿಶೇಷ ಅರ್ಥ**

ಸತ್ತ್ವಾಸತ್ತ್ವಗಳು ಭಿನ್ನವಸ್ತುನಿಷ್ಠವಾದ್ದರಿಂದ ಭಿನ್ನಗಳೆಂದು ಒಂದೇ ವಸ್ತುನಿಷ್ಠವಾದಾಗ ವಿರುದ್ಧಗಳೆಂದು ತಿಳಿಯಬೇಕು. ಒಂದೇ ವಸ್ತುವಿಗೆ ತನ್ನ ರೂಪದಿಂದ ಸತ್ತ್ವವೂ ಅನ್ಯರೂಪದಿಂದ ಅಸತ್ತ್ವವೂ ಹೇಳಬಹುದಾದ್ದರಿಂದ ಅಂತಹ ಸತ್ತ್ವಾಸತ್ತ್ವಗಳನ್ನು ಇಲ್ಲಿ ಹೇಳಿಲ್ಲ. ತನ್ನ ಸ್ವರೂಪದಿಂದಲೇ ಸತ್ತ್ವಾಸತ್ತ್ವಗಳನ್ನು ಹೇಳಿದೆ ಎಂದು ತಿಳಿಸುವದಕ್ಕಾಗಿ ವಸ್ತುನಿಷ್ಠ ಮತ್ತು ಏಕಸ್ಥ ಎಂಬ ಎರಡು ಪದಗಳನ್ನು ಹೇಳಿರುವರು. ಬೃಹತ್ ಎಂಬ ಪದದಿಂದ ಯಾವಾಗಲೂ ವೃದ್ಧಿಸುವದೇ (ಪೂರ್ಣನೇ) ಹೊರತು ಎಂದೂ ಕ್ಷಯಿಸದವನು (ಅಪೂರ್ಣನು) ಅಲ್ಲವೆಂದು ತಿಳಿಸಿರುವರು. ಸಾಂಖ್ಯಯೋಗಯೋಃ ಎಂದು ವಿಶೇಷಣ ಕೊಟ್ಟಿದ್ದರಿಂದ ಅಸ್ತಿ ಎಂಬ ಮತವೇ ಶ್ರೇಯಸ್ಕರವೆಂದು ನಾಸ್ತಿ ಎಂಬುದು ಅಲ್ಲವೆಂದು ವಿಶದ ಪಡಿಸಿರುವರು. ಹಿ ಎಂಬುದರಿಂದ 'ಸರ್ವೇ ವೇದಾ ಯತ್ಪದಮಾಮನಂತಿ...' ಎಂಬ ಶ್ರುತಿಯನ್ನು ಸೂಚಿಸಿರುವರು. ಅಥವಾ ಸಾಂಖ್ಯಯೋಗಗಳಿಗೆ ಜಗದ್ಭಿನ್ನನು ಈಶ್ವರನೆಂಬ ವಸ್ತುವಿದೆ ಎಂಬಲ್ಲಿ ನಿಷ್ಠೆ ಇದೆ ಎಂದು ಅಸುರಮತಕ್ಕೆ ಜಗದಭಿನ್ನ ವಸ್ತುವೇ ಇರುವದೆಂಬುದರಲ್ಲಿ ನಿಷ್ಠೆ ಎಂದು ತಿಳಿಸುವ ಪ್ರಮಾಣವಾಕ್ಯವನ್ನು ಸೂಚಿಸುವರು.

**ತಾತ್ಪರ್ಯ**

**ಮದನ್ಯೋ ನಾಸ್ತಿ ಸರ್ವಶ ಇತಿ ವಿದ್ಯಾ್ಯಸುರಂ ಮತಮ್ ।**
**ಅಸ್ತೀತಿ ದೈವಮುಭಯೋರ್ಹರಿರೇವ ಹ್ಯಪೇಕ್ಷಿತಃ ।।**

**ನಿಷೇಧವಿಧ್ಯೋರ್ವಿಷಯಃ ಫಲದಾತಾ ಚ ಕೇಶವಃ ।**
**ತಾದೃಗ್ಬುದ್ಧೇಃ ಕಾರಣಂ ಚ ಸ್ಥಾನಯೋಃ ಚೋಚ್ಚನೀಚಯೋಃ ।। ಇತಿ ಚ ।।**

ನನಗಿಂತ ಭಿನ್ನನಾದ ಸರ್ವೇಶ್ವರನಿಲ್ಲವೆಂದು ಅಸುರ ಮತವು. ಇದ್ದಾನೆಂದು ದೈವಮತವು. ಈ ಎರಡೂ ಮತಗಳಿಗೂ ವಿಷಯನು ಬ್ರಹ್ಮನು. ಶ್ರೀಹರಿಯು ನಿಷೇಧ-ವಿಧಿ ಶಾಸ್ತ್ರಗಳಿಗೆ ವಿಷಯನು. ಫಲದಾಯಕನು. ಅಂತಹ ಎರಡು ವಿಧ ಬುದ್ಧಿಗೆ ಕಾರಣನು. ಉಚ್ಚನೀಚ ಸ್ಥಾನಗಳಿಗೂ ಪ್ರಾಪಕನು.

(**ಸಮಂ** ಉಚ್ಚ-ನೀಚಸ್ಥಾನಗಳಿಗೆ ಯಥಾಯೋಗ್ಯ ಫಲ ಕೊಡುವದೂ **ಅನುಕೂಲಂ** ಆ ಬಗೆಯ ಮತಭೇದದಿಂದ ಎರಡು ಬಗೆ ಬುದ್ಧಿಕೊಡುವದು. ಜ್ಞಾನ-ಕರ್ಮಯೋಗಿಗಳಿಗೆ **ಪರಂ** ಮುಖ್ಯತಾತ್ಪರ್ಯವೂ ಆದುದು ಯಾವುದೋ **ತತ್** ಅದೇ ಬ್ರಹ್ಮ ವಸ್ತು ಎಂದು ಶ್ಲೋಕಕ್ಕೆ ಅರ್ಥ ಮಾಡಿರುವರು.)

ಮೂಲದಲ್ಲಿ ಅಸ್ತಿ ನಾಸ್ತಿ ಎಂದಿದೆ. ತಾತ್ಪರ್ಯದಲ್ಲಿಯ ಪ್ರಮಾಣವಚನದಲ್ಲಿ ವಿಪರೀತ ಕ್ರಮ ಏಕೆ ಇದೆ. ಅದರಂತೆ ನಿಷೇಧವಿಧ್ಯೋಃ ಎಂಬಲ್ಲಿ ಘ್ಯಂತ-ಅಲ್ಪಾಚ್ತತ್ವ ನಿಮಿತ್ತಗಳು ಇದ್ದರೂ ವಿಧಿಪದವನ್ನು ಮೊದಲು ಪ್ರಯೋಗಿಸಿಲ್ಲ. ಆ ಕ್ರಮ ಉಚ್ಚನೀಚಯೋಃ ಎಂಬಲ್ಲಿ ಏಕೆ ಚ್ಯುತವಾಯಿತು ಎಂದರೆ ಮೂಲದಲ್ಲಿ ಅಸ್ತೀತಿ ನಾಸ್ತೀತಿ ಆದರಂತೆ ಉಚ್ಚನೀಚಯೋಃ ಎಂಬಲ್ಲಿಯೂ ವಿಧಿ-ಉಚ್ಚಗಳನ್ನು ಮೊದಲು ಹೇಳಿದ್ದು ಸ್ವರೂಪತಃ ಮಹತ್ವವಿರುವದರಿಂದ. ಬೇರೆಡೆ ಬಾಹುಲ್ಯ ಪ್ರಯುಕ್ತ ಮಹತ್ವವಿರುವದರಿಂದ 'ಅಸುರಾ ಬಹುಲಾ ಯಸ್ಮಾತ್' 'ಕನೀಯಸಾ ದೇವಾ ಜ್ಯಾಯಸಾ ಅಸುರಾಃ' 'ಅತಸ್ತ್ವಿರಜ್ಜ್ಯಾಯೋ ಲಿಂಗಾಚ್ಚ' ಮುಂತಾಗಿರುವದರಿಂದ ನಿಷೇಧವನ್ನು ಮೊದಲು ಹೇಳುವ ಸಂಭವವಿದೆ.

ಭಿನ್ನ ಎಂದಿಷ್ಟೇ ಹೇಳಿದರೆ ಪಂಚ ಪಾಂಡವಾಃ ಎಂದು ಒಂದು ವಾಕ್ಯ ದಶಾರ್ಧಸಂಖ್ಯಾಃ ಎಂದು ಇನ್ನೊಂದು ವಾಕ್ಯ ಹೇಳಿದಾಗ ಅರ್ಥ ಒಂದಾದರೂ ಭಂಗಿ ಭೇದವಿದ್ದಂತೆ ಎಂದರ್ಥವಾದೀತು. ಆದಕಾರಣ ವಿರುದ್ಧ ಎಂದಿದ್ದಾರೆ. ವಿರುದ್ಧ ಎಂದಿಷ್ಟೇ ಹೇಳಿದರೆ ಶ್ರೀಹರಿಯಲ್ಲಿ ಅಣುತ್ವ-ಮಹತ್ವಗಳಂತೆ ಒಂದೆಡೆ ಇರುವವು ಎಂದೂ ತೋರುವದು ಕಾರಣ ಭಿನ್ನ ಎಂದೂ ಧರ್ಮಕ್ಕೆ ವಿಶೇಷಣ ಕೊಟ್ಟಿರುವರು.

**ಸಾಂಖ್ಯ** ಎಂದರೆ ಶುದ್ಧಾತ್ಮತತ್ತ್ವವಿಜ್ಞಾನ **ಯೋಗ** ಉಪಾಯ ಗೀತಾಭಾಷ್ಯ ಪ್ರಕಾರ.

**ಅಪೇಕ್ಷಿತಂ ಅಪಂ** ಪಾಲಕರಹಿತಂ ರಕ್ಷಕರಹಿತಂ ತಾನೇ ಸರ್ವರ ರಕ್ಷಕ ಇತಿ **ಈಕ್ಷಿತಂ** ಎಂಬುದು ಒಂದು ಮತ. ಬ್ರಹ್ಮ ಅಪೇಕ್ಷಿತಂ ಇಷ್ಟ ಎಂಬುದು ಒಂದು ಮತ ಹೀಗೆ ಮತದ್ವಯ ರಹಸ್ಯ. ಪಾತೀತಿ **ಪಃ** 'ಆತೋಽನುಪಸರ್ಗೇ ಕಃ' 'ಪಃ ಪಾತರಿ ಸಮೀರೇಽರ್ಕೇ' 'ಪಃ ಪುಮಾನ್ಯವನೇ ಪಾತರಿ' ಎಂದು ವಿಶ್ವ-ಏಕಾಕ್ಷರ ನಿಘಂಟುಗಳಲ್ಲಿದೆ. ।।೩೨।।

ಮುಂದೆ ಹೇಳುವ ಕಾರಣದಿಂದಲೂ ನನ್ನಿಂದ ಭಿನ್ನನಾದ ಈಶ್ವರನಿದ್ದಾನೆ ಎಂಬ ಪಕ್ಷವೇ ಶ್ರೇಯಸ್ಕರವೆಂದು ಹೇಳುವರು.

ದೈವಮತವೇ ಮತವು. ಶ್ರೇಯಃ ಸಾಧನವಾದ್ದರಿಂದ ಸದಾ ಸಂಸೇವನೀಯವೆಂದು ಹೇಳುವರು.

**ಯೋಽನುಗ್ರಹಾರ್ಥಂ ಭಜತಾಂ ಪಾದ-**
**ಮೂಲಮನಾಮರೂಪೋ ಭಗವಾನನಂತಃ ।**
**ನಾಮಾನಿ ರೂಪಾಣಿ ಚ ಜನ್ಮಕರ್ಮಭಿಃ**
**ಭೇಜೇ ಸ ಮಹ್ಯಂ ಪರಮಃ ಪ್ರಸೀದತಾಮ್** ॥೩೩॥

**ಯಃ** ಯಾವನು **ಅನಂತಃ** ದೇಶಕಾಲಗುಣಗಳಿಂದ ಅಪರಿಚ್ಛಿನ್ನನು **ಅನಾಮರೂಪಃ** ಇತರ ಜೀವರಂತೆ ಕಣ್ಣಿಗೆ ಕಾಣಿಸುವ ಕರ್ಮವಿಲ್ಲದ್ದರಿಂದ ಅನಾಮನೆಂದು ಕಾಣದಿರುವ ರೂಪವಿರುವದರಿಂದ ಅರೂಪನೆಂದೂ ೨. ಇತರರಲ್ಲಿ ಉಪಪನ್ನವಾಗದ ಅರ್ಥವನ್ನು ಹೇಳುವ ನಾಮವುಳ್ಳವನಾದ್ದರಿಂದ ಅನಾಮನೆಂದೂ ಅವ್ಯಕ್ತನಾದ್ದರಿಂದ ಅರೂಪನೆಂದೂ ಕರೆಸಿಕೊಳ್ಳುವ **ಭಗವಾನ್** ಶ್ರೀಹರಿಯು **ಪಾದಮೂಲಂ** ತನ್ನ ಪಾದಗಳನ್ನು **ಭಜತಾಂ** ಸೇವಿಸುವ ಭಕ್ತರಿಗೆ **ಅನುಗ್ರಹಾರ್ಥಂ** ಅನುಗ್ರಹಮಾಡಲು **ಜನ್ಮಕರ್ಮಭಿಃ** ಅವತಾರ ಮತ್ತು ಅವುಗಳಲ್ಲಿ ಮಾಡುವ ಕರ್ಮಗಳಿಂದ **ನಾಮಾನಿ** ಕಂಸ ಮೊದಲಾದವರನ್ನು ನಿಗ್ರಹಮಾಡಿದ್ದರಿಂದ ಬಂದ ವಾಕ್ಯಾರ್ಥಕ್ಕೆ ಸಮಾನವಾದ ಕಂಸಾರಿ ಮುರಾರಿ ಮೊದಲಾದ ಹೆಸರುಗಳನ್ನು **ರೂಪಾಣಿ ಚ** ವ್ಯಕ್ತನಾಗುವದರಿಂದ ಕೃಷ್ಣ ಮೊದಲಾದ ರೂಪಗಳನ್ನು **ಭೇಜೇ** ಸ್ವೀಕರಿಸಿದನೋ **ಪರಮಃ** ಸರ್ವೋತ್ತಮನೋ **ಸಃ** ಆ ಶ್ರೀಹರಿಯು **ಮಹ್ಯಂ** ನನಗೆ **ಪ್ರಸೀದತು** ಪ್ರಸನ್ನನಾಗಲಿ.

**ವಿಶೇಷ ಅರ್ಥ**

'ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ ಕರ್ತಾರಮೀಶಂ' 'ಅಥೈನಮಾಹುಃ ಸತ್ಯಕರ್ಮೇತಿ' 'ಸರ್ವಕರ್ಮಾ ಸರ್ವನಾಮಾ ಸರ್ವರೂಪಃ' ಮುಂತಾದ ಶ್ರುತಿಗಳಿಂದಲೂ ಅವತಾರಗಳಲ್ಲಿ ಕಂಡು ಬಂದಿರುವ ನಾಮ-ಕರ್ಮಗಳಿಂದಲೂ ಶ್ರೀಹರಿಯು ಸ್ವರೂಪ ಕರ್ಮಗಳಿಂದ ರಹಿತನೆಂದು ಹೇಳಲು ಸಾಧ್ಯವಿಲ್ಲ. ಕಾರಣ ಅನಾಮರೂಪನೆಂಬುದಕ್ಕೆ ಮೇಲೆ ಹೇಳಿದ ಅರ್ಥವನ್ನೇ ಹೇಳಬೇಕು. ಮೇಲಿನ ಶ್ಲೋಕದಲ್ಲಿ ಅನಾಮರೂಪೋ ನಾಮರೂಪಾಣಿ ಭಜತೇ ಎಂದು ಹೇಳಿದ್ದರಿಂದ ನಾಮರೂಪಗಳಿಗೆ ಅನಿತ್ಯತ್ವವನ್ನು ಸ್ಪಷ್ಟವಾಗಿ ಹೇಳಿದಂತೆ ಕಾಣುವದು ಅದು ನಿಶ್ಚಿತವಾಗಿಯೂ ಅನಿಷ್ಟವೇ ಆದಕಾರಣ ಅದರ ಅಭಿಪ್ರಾಯವನ್ನು ವ್ಯಕ್ತಗೊಳಿಸುವರು.

ತಾತ್ಪರ್ಯ

ತತ್ಕರ್ಮಣಾಮದೃಷ್ಟತ್ವಾದನಾಮಾ ಚಾಪ್ಯದರ್ಶನಾತ್ ।
ಅರೂಪಸ್ತ್ವವತಾರೇಣ ರೂಪಕರ್ಮಾಣಿ ದರ್ಶಯೇತ್।

ನಿತ್ಯರೂಪೋ ನಿತ್ಯಕರ್ಮಾಽಪ್ಯವ್ಯಕ್ತತ್ವಮಪೇಕ್ಷ್ಯ ತು ।
ಅರೂಪಕರ್ಮೇತ್ಯುದಿತೋ ರೂಪಕರ್ಮೋಜ್ಝಿತೇಃ ನ ತು ॥

-ಇತಿ ಪ್ರಕಾಶಸಂಹಿತಾಯಾಂ ॥

ಅನಾಮಾ ಸೋಽಧಿಕಾರ್ಥತ್ವಾದವ್ಯಕ್ತತ್ವಾದರೂಪಕಃ ।
ಕಂಸಾರಿತ್ವಾದಿಸಾಮ್ಯಾರ್ಥೋ ವ್ಯಕ್ತರೂಪೋಽವತಾರಗಃ ॥ಇತಿ ಚ॥

ಲೋಕದೃಷ್ಟ್ಯಾಧಿಕಾರ್ಥಾನಿ ಮೂಲನಾಮಾನಿ ಕೇಶವೇ ।
ಅಥ ದಾಮೋದರಾದೀನಿ ಲೋಕದೃಷ್ಟ್ಯಾ ಸಮಾನಿ ತು ।

ಆನಂದೋಽವ್ಯಕ್ತರೂಪಸ್ತು ಮೂಲರೂಪಮುದಾಹೃತಮ್ ।
ಸ ಏವ ವ್ಯಕ್ತಿಮಾಪನ್ನಃ ಪ್ರಾದುರ್ಭಾವ ಉದೀರಿತಃ ॥ಇತಿ ಚ॥

**ಭಾವಾರ್ಥ**

ಕಂಸನಿಗೆ ಶತ್ರು (ಕಂಸಾರಿ) ಮುಂತಾದ ನಾಮಗಳಿಗೆ ಅರ್ಥವಾದ ಕಂಸಹನನಾದಿ ಕರ್ಮಗಳೂ ಗುಣಗಳು ಮೂಲರೂಪದಲ್ಲಿ ಕಾಣದಿರುವದರಿಂದ ಶ್ರೀಹರಿಯು ಅನಾಮನೆಂದೂ ಕೃಷ್ಣವರ್ಣವು ಕಾಣದಿರುವದರಿಂದ ಅರೂಪನೆಂದೂ (ಜನರಿಂದ) ಶ್ರೀಹರಿಯು ಅವತಾರ ರೂಪದಿಂದ ಆ ರೂಪ ಕರ್ಮಗಳನ್ನು ತೋರಿಸುವನು ಆದಕಾರಣ ನಿತ್ಯಗಳಾದ ರೂಪ-ಕ್ರಿಯೆಗಳುಳ್ಳವನಾದರೂ ಶ್ರೀಹರಿಯು ಜನರಿಗೆ ಆ ರೂಪ ಕರ್ಮಗಳು ಮೂಲ ರೂಪದಲ್ಲಿ ಅವ್ಯಕ್ತವಾಗಿವೆ ಎಂಬ ಅಭಿಪ್ರಾಯದಿಂದಲೇ ರೂಪ ಕರ್ಮಗಳು ಇಲ್ಲದವನೆಂದು ಹೇಳಲ್ಪಡುತ್ತಾನೆ ಹೊರತು ಶ್ರೀಹರಿಗೆ ಸರ್ವಥಾ ರೂಪ-ಕರ್ಮ ಇಲ್ಲದಿರುವುದರಿಂದಲ್ಲ. ಎಂದು ಪ್ರಕಾಶಸಂಹಿತೆಯಲ್ಲಿ ಹೇಳಿದೆ.

ಅಥವಾ ಶ್ರೀಹರಿಯು ಲೋಕಸಿದ್ಧನಾಮಾರ್ಥಕ್ಕಿಂತ ಹೆಚ್ಚು ನಾಮಾರ್ಥ ಉಳ್ಳವನಾದ್ದರಿಂದ ಲೋಕಸಿದ್ಧ ಅಲ್ಪನಾಮಪ್ರವೃತ್ತಿನಿಮಿತ್ತವಿಲ್ಲದಿರುವದರಿಂದ ಅನಾಮನೆಂದೂ ಭಗವದ್ರೂಪವು ಸಂಪೂರ್ಣವಾಗಿ ವ್ಯಕ್ತವಾಗದಿರುವದರಿಂದ ಅರೂಪನೆಂದು ಕರೆಸಿಕೊಳ್ಳವನು. ಕಂಸಾರಿ ಮುರಾರಿ ರಾವಣಾರಿ ಇತ್ಯಾದಿ ನಾಮಗಳ ಅರ್ಥವು ರಾಮ ಕೃಷ್ಣ ಮೊದಲಾದ ಅವತಾರಗಳಲ್ಲಿಯೇ ವ್ಯಕ್ತವಾಗಿದೆ.

ಮೂಲರೂಪದಲ್ಲಿರುವ ಬ್ರಹ್ಮ ನಾರಾಯಣ ಮೊದಲಾದ ನಾಮಗಳು ಲೋಕದೃಷ್ಟಿಗೆ ಅಗೋಚರಗಳಾದ ಅನಂತಕಲ್ಯಾಣಗುಣಪೂರ್ಣತ್ವ ಮುಂತಾದ ಅರ್ಥವುಳ್ಳವುಗಳು ದಾಮೋದರ (ಹೊಟ್ಟೆಯಲ್ಲಿ ಹಗ್ಗ ಇದ್ದರೆ) ಮಧುಸೂದನ (ಮಧು ಕೊಡುವ) ಮೊದಲಾದ ನಾಮಗಳು ಮೂಲರೂಪದಲ್ಲಿಯೂ ಅವತಾರರೂಪದಲ್ಲಿಯೂ ಸಮಾನಗಳಾದರೂ ಶ್ರೀ ಕೃಷ್ಣಾದ್ಯವತಾರಗಳಲ್ಲಿ ಲೋಕದೃಷ್ಟಿಗೆ ವಿಷಯಗಳಾದ ನಾಮಗಳಿಂದ ಉದರದಲ್ಲಿ ಕಟ್ಟಲ್ಪಟ್ಟವನು ಮುಂತಾದ ಅರ್ಥ ಉಳ್ಳವುಗಳು. ಆನಂದರೂಪಿಯಾದ ಮೂಲರೂಪಿ ಶ್ರೀಹರಿಯು ಅವ್ಯಕ್ತರೂಪನೆಂದೇ ಹೇಳಲ್ಪಟ್ಟಿರುತ್ತಾನೆ. ಆ ಶ್ರೀಹರಿಯೇ ಭಕ್ತರಿಗೆ ಕೃಷ್ಣಾದಿ ಅವತಾರಗಳಿಂದ ವ್ಯಕ್ತಿಯನ್ನು ಹೊಂದಿದವನಾಗಿ ಪ್ರಾದುರ್ಭಾವರೂಪನೆನಿಸುತ್ತಾನೆ. ।।೩೩।।

ಆಯಾ ಜೀವರ ಅಧಿಕಾರಕ್ಕೆ ತಕ್ಕಂತೆ ಶ್ರೀಹರಿಯ ಜ್ಞಾನವು ಅವರವರ ತಾರತಮ್ಯಕ್ಕೆ ಕಾರಣವೆಂದು ಪ್ರಮಾಣಸಿದ್ಧವಾದ್ದರಿಂದ ನನಗಿಂತ ಭಿನ್ನನಾದ ಈಶ್ವರನಿಲ್ಲವೆಂಬುದು ಅಸುರಮತವೆಂಬ ಅಭಿಪ್ರಾಯದಿಂದ ಹೇಳುವರು.

**ಯಃ ಪ್ರಾಕೃತೈಃ ಜ್ಞಾನಪಥೈರ್ಜನಾನಾಂ**
**ಯಥಾಶಯಂ ದೇಹಗತೋ ವಿಭಾತಿ ।**
**ಯಥಾನಿಲಃ ಪಾರ್ಥಿವಮಾಶ್ರಿತೋ ಗುಣಂ**
**ಸ ಈಶ್ವರೋ ಮೇ ಕುರುತಾನ್ಮನೋರಥಮ್** ।।೩೪।।

**ಯಃ** ಯಾವ ಶ್ರೀಹರಿಯು **ಯಥಾ** ಹೇಗೆ **ಪಾರ್ಥಿವಂ ಗುಣಂ** ಪೃಥಿವೀಕಾರ್ಯವಾದ ಸುಖ-ದುಃಖಭೋಗಸಾಧನ ಶರೀರವನ್ನು **ಆಶ್ರಿತಃ** ಆಶ್ರಯಿಸಿರುವ **ಅನಿಲಃ** ಪ್ರಾಣವಾಯುವು **ಜನಾನಾಂ** ಅಧಮ ಮಧ್ಯಮ ಉತ್ತಮ ಜನರಿಗೆ **ಪ್ರಾಕೃತೈಃ** ಪ್ರಕೃತಿವಿಕಾರಗಳಾದ **ಜ್ಞಾನಪಥೈಃ** ಜ್ಞಾನಸಾಧನಗಳಾದ ಇಂದ್ರಿಯಗಳಿಂದ **ಯಥಾಶಯಂ** ಅವರವರ ಬುದ್ಧಿಗೆ ತಕ್ಕಂತೆ **ದೇಹಗತಃ** ದೇಹದಲ್ಲಿರುವ ಶ್ವಾಸವೆಂದೂ ಶರೀರಧಾರಕ ಪ್ರಾಣವೆಂದು **ಸರ್ವಂ** ದೇವಶ್ರೇಷ್ಠ ಸೂತ್ರಾತ್ಮಕವಾಯುವೆಂದೂ **ವಿಭಾತಿ** ತೋರುವದೋ **ತಥಾ** ಹಾಗೆ **ಜನಾನಾಂ** ಅಧಮಜೀವರಿಗೆ **ಪ್ರಾಕೃತೈಃ** ಅಸರ್ವಜ್ಞ ಜನರಿಂದ ನಿರ್ಮಿತಗಳಾದ **ಜ್ಞಾನಪಥೈಃ** ದುರಾಗಮಗಳ ಪ್ರಕಾರ **ದೇಹಗತಃ** ದೇಹದಲ್ಲಿರುವ ಜೀವನೆಂದು ಅಂದರೆ ಜೀವಾಭಿನ್ನನಾಗಿ 'ಅಹಂ ಬ್ರಹ್ಮಾಸ್ಮಿ' ಎಂದೂ **ಜನಾನಾಂ** ಮಧ್ಯಮಜೀವರಿಗೆ **ಪ್ರಾಕೃತೈಃ**

**ಜ್ಞಾನಪಥೈಃ** ಅವರ ಬುದ್ಧಿಗನುಗುಣವಾದ ಸಿದ್ಧಾಂತಗಳಿಂದ **ದೇಹಗತಃ** ಜೀವನೋ ಜೀವಭಿನ್ನನೋ ಎಂಬ ಸಂದೇಹವಿಷಯನಾಗಿ ಅಂದರೆ ನಿರ್ಣಯವಿಲ್ಲದೇ **ಜನಾನಾಂ** ಮುಕ್ತಿಯೋಗ್ಯರಾದ ಉತ್ತಮಜೀವರಿಗೆ **ಪ್ರಾಕೃತೈಃ** ಸಂಪೂರ್ಣವಾಗಿ ಮಾಡದಿರುವ ಅಂದರೆ ಸಹಜವಾದ (ಸ್ವರೂಪಭೂತವಾದ) **ಜ್ಞಾನಪಥೈಃ** ಜ್ಞಾನವೆಂಬ ಮಾರ್ಗಗಳಿಂದ **ದೇಹಗತಃ** ದೇಹದಲ್ಲಿರುವ ಜೀವನಿಗಿಂತ ಭಿನ್ನನಾದ ಅವರವರ ಅನಾದಿವಾಸನಾವಾಸಿತ ಅಂತಃಕರಣಕ್ಕೆ ಅನುಸಾರವಾಗಿ **ವಿಭಾತಿ** ತೋರುವನೋ **ಸಃ ಈಶ್ವರಃ** ಆ ಸರ್ವೋಚ್ಚನಿಯಾಮಕನಾದ ಶ್ರೀಹರಿಯು **ಮೇ** ನನ್ನ **ಮನೋರಥಂ** ಇಚ್ಛೆಯನ್ನು **ಕುರುತಾತ್** ನೆರವೇರಿಸಲಿ. ।।೩೪।।

ಈ ಶ್ಲೋಕವು ಅಸ್ಪಷ್ಟವಾದ್ದರಿಂದ ವಿಪರೀತಾರ್ಥವಾಗದಿರಲೆಂದು ಪ್ರಮಾಣದಿಂದ ಸ್ಪಷ್ಟಪಡಿಸುವರು.

ತಾತ್ಪರ್ಯ

ಸ್ವದೇಹಸ್ಥಂ ಹರಿಂ ಪ್ರಾಹುರಧಮಾ ಜೀವಮೇವ ತು ।
ಮಧ್ಯಮಾಶ್ಚಾಪ್ಯನಿರ್ಣೀತಂ ಜೀವಾದ್ಭಿನ್ನಂ ಜನಾರ್ದನಮ್ ।

ಪೂರ್ಣಾನಂದಾದಿಗುಣಕಂ ಸರ್ವಜೀವವಿಲಕ್ಷಣಮ್ ।
ಉತ್ತಮಾಸ್ತು ಹರಿಂ ಪ್ರಾಹುಸ್ತಾರತಮ್ಯೇನ ತೇಷು ಚ ।

ಬುದ್ಧಿಶುದ್ಧ್ಯನುಸಾರೇಣ ಯಥಾ ಪ್ರಾಣಂ ಶರೀರಗಮ್ ।
ಶ್ವಾಸಮಾತ್ರಂ ಜನಾ ಪ್ರಾಹುರನಿರ್ಣೀತಂ ಚ ಮಧ್ಯಮಾಃ ।
ದೇವದೇವೇಶ್ವರಂ ಸೂತ್ರಮಾನಂದಂ ಪ್ರಾಣವೇದಿನಃ ।। ಇತಿ ಚ ।।

ಅಧಮಜೀವರು ತಮ್ಮ ದೇಹದಲ್ಲಿರತಕ್ಕ ಶ್ರೀಹರಿಯನ್ನು ಜೀವರಿಂದ ಅಭಿನ್ನನೆಂದು ಹೇಳುತ್ತಾರೆ. ಮಧ್ಯಮರು ಶ್ರೀಹರಿಯನ್ನು ಜೀವರಿಗಿಂತ ಭಿನ್ನನೋ ಅಭಿನ್ನನೋ ಎಂದು ಸಂದಿಗ್ಧನನ್ನಾಗಿ ಹೇಳುತ್ತಾರೆ.

ಉತ್ತಮಜೀವರು ಶ್ರೀಹರಿಯನ್ನು ಜೀವರಿಗಿಂತ ಭಿನ್ನನೆಂದೂ ಪೂರ್ಣಾನಂದಾದಿ-ಗುಣಗಳುಳ್ಳವನೆಂದೂ ಸರ್ವಜೀವರಿಗಿಂತ ವಿಲಕ್ಷಣನೆಂದೂ ಹೇಳುತ್ತಾರೆ. ಹೀಗೆ ತ್ರಿವಿಧಜೀವರು ತಮ್ಮ ತಮ್ಮ ಬುದ್ಧಿಶುದ್ಧಿಗೆ ಅನುಸಾರವಾಗಿ ಶ್ರೀಹರಿಯನ್ನು ಹೇಳುತ್ತಾರೆ. ಹೇಗೆ ಅಧಮಜನರು ಶರೀರದಲ್ಲಿರತಕ್ಕ ಮುಖ್ಯಪ್ರಾಣನನ್ನು ಶ್ವಾಸಮಾತ್ರನೆಂದೂ ಮಧ್ಯಮರು ಅನಿರ್ಣೀತನೆಂದೂ ಉತ್ತಮರು ದೇವತೆಗಳಿಗೆ

ನಿಯಾಮಕರಾದ ರುದ್ರಾದಿಗಳಿಗೆ ನಿಯಾಮಕನೆಂದೂ ಆನಂದರೂಪನೆಂದೂ ಸೂತ್ರಶಬ್ದವಾಚ್ಯನೆಂದೂ ಹೇಳುತ್ತಾರೋ ಹಾಗೆಯೇ. ।।೩೪।।

**ಶ್ರೀ ಸತ್ಯಧರ್ಮರ ಪ್ರಕಾರ ವಿಶೇಷಾರ್ಥ**

**ಜನಾರ್ದನಂ** ನ ಜಾಯತೇ ಅರ್ದಯತಿ ಸಂಸಾರಂ ಇತಿ ಜನಾರ್ದನಃ ಹುಟ್ಟದಿರುವವನು ಸಂಸಾರನಾಶಕನು ಆದ ಎಂದರ್ಥ. ಇದನ್ನೇ 'ಸಂಭೂತಃ ಸ ಜನಾರ್ದನಃ' ಎಂದು ಬಾಭ್ರವ್ಯಶಾಖಾದಲ್ಲಿ ಹೇಳಿದೆ. 'ಸ ಹ್ಯಾಸೀತ್ ಸ ನಾऽಸೀತ್ ಸೋऽರ್ದಯತಿ' ಎಂದು ಗೀತಾಭಾಷ್ಯದಲ್ಲಿ ಹೇಳಿದೆ. ತಾತ್ಪರ್ಯದಲ್ಲಿರುವ ಬುದ್ಧಿಶುದ್ಧ್ಯನುಸಾರೇಣ ಎಂಬುದು ಉತ್ತಮರಿಗೆ ಮಾತ್ರ ಅನ್ವಯಿಸುವದು. ಇಲ್ಲವಾದರೆ ಶುದ್ಧಿ ಪದವು ಹೊಂದಲಾರದು. ತಾರತಮ್ಯವು ಬುದ್ಧಿಶುದ್ಧಿ ಸಾಧ್ಯವಾದದ್ದರಿಂದ ಹೆಚ್ಚು ಸಂಬದ್ಧವಾಗುವದು. ಅಥವಾ **ಬುದ್ಧಿಶುದ್ಧ್ಯನುಸಾರೇಣ** ಎಂಬಲ್ಲಿ ಭಾವೇ ಕ್ತ ಪ್ರತ್ಯಯ ಎಂದು ತಿಳಿದು ಬುದ್ಧಂ (ಬುದ್ಧಿಃ) ಏಷಾಂ ಅಸ್ತೀತಿ ಬುದ್ಧಿನಃ ನಿಂದಾಯಾಂ ಇನಿಃ ಎಂದಿಟ್ಟುಕೊಂಡು ಅಧಮರು ಅಧಮಬುದ್ಧ್ಯನು ಸಾರವಾಗಿ ಮಧ್ಯಮರು ಬುದ್ಧ್ಯನುಸಾರ ಎಂದರೆ ಮಿಶ್ರಬುದ್ಧ್ಯನುಸಾರವಾಗಿ ಉತ್ತಮರು ಬುದ್ಧಿಶುದ್ಧ್ಯನುಸಾರವಾಗಿ ಎಂದರೆ ಬುದ್ಧಿಯಿಂದ ವಿವೇಕ ಮಾಡಿ ಎಲ್ಲ ಕಡೆಗೂ ಅನ್ವಯಿಸಬಹುದು.

ಪ್ರಾಣನನ್ನು ಉತ್ತಮರು **ದೇವದೇವೇಶ್ವರಂ** ದೇವದೇವರು ಎಂದರೆ ರುದ್ರಾದಿಗಳು ಅವರಿಗೂ ಈಶ್ವರರು ನಿಯಾಮಕರು ಎಂದಾಗಲಿ ಅಥವಾ ದೇವದೇವ ಎಂದರೆ ವಾಸುದೇವನೇ ಈಶ್ವರಃ ನಿಯಾಮಕನಾಗಿವುಳ್ಳವನು ಎಂದು ಸೂತ್ರನಾಮಕನೆಂದು ಆನಂದಪ್ರದನೆಂದು ಪ್ರಾಣದೇವನನ್ನು ತಿಳಿಯುವರು.

**ಪ್ರಾಕೃತೈಃ ಜ್ಞಾನಪಥೈಃ** ಎಂಬ ಮೂಲಪದಕ್ಕೆ ಕೃತಂ ಸುಕೃತಂ ಏಷಾಂ ನಾಸ್ತಿ ತೇ ಅಕೃತಾಃ ಪ್ರ ಶಬ್ದಾರ್ಥವಾದ ಪ್ರಕರ್ಷಕ್ಕೆ ಕೃತಶಬ್ದದಿಂದ ಅನ್ವಯ ಮಾಡಿದರೆ **ಪ್ರಾಕೃತೈಃ** ಎಂದರೆ ಅವಿಹಿತವಾದ ಜ್ಞಾನಮಾರ್ಗದಿಂದ ಎಂದರ್ಥ. ಇದು ಅಧಮಾಧಿಕಾರಿಗಳಿಗೆ ಸಂಬಂಧಿಸಿದ್ದು. **ಪ್ರಾಕೃತೈಃ** ಮಹಾಫಲವಲ್ಲದ ಇಷ್ಟಮಾತ್ರಪರ್ಯವಸಾಯಿಯಾದ ಮಿಶ್ರವಾದ ಎಂದರ್ಥ. ಇದು ಮಧ್ಯಮರಿಗೆ ಸಂಬಂಧಿಸಿದ್ದು. 'ಕೃತಂ ಯುಗೇऽಪಿ ಪರ್ಯಾಪ್ತೇ ವಿಹಿತೇ' ಎಂದು ವಿಶ್ವವಿದ್ದುದರಿಂದ ಅಕೃತ ಎಂಬುದಕ್ಕೆ ಅವಿಹಿತ ಎಂದರ್ಥವಾಗುವದು. ಪ್ರಕೃತೇಃ ಇಮೇ ಪ್ರಾಕೃತಾಃ ತಸ್ಯೇದಮಿತ್ಯರ್ಥೇ ಅಣ್

ಅಂದರೆ ಸ್ವಾಭಾವಿಕವಾದ ಜ್ಞಾನಮಾರ್ಗದಿಂದ ಎಂದರ್ಥ. ಇದು ಉತ್ತಮಾಧಿಕಾರಿಗಳ ಜ್ಞಾನವನ್ನು ಹೇಳುವದು. ಹೀಗೆ ವಿಶೇಷಾರ್ಥ ಮಾಡಿರುವರು. ।।೩೪।।

ಈ ಸ್ತುತಿಯು ಕಾಲೋಚಿತವಾದುದು ಎಂದು ಹೇಳುವರು. ನಾಲಿಗೆಯ ತುದಿಯ ಬೆಲ್ಲದಂತಲ್ಲ, ಶ್ರೀಹರಿಯ ಮನಸ್ಸು ಕರಗಲು ಕಾರಣವಾಗಿರುವ ಸ್ತುತಿ ಇದಾಗಿದೆ. ಎಂದು ಹೇಳುವರು-

**ಶ್ರೀ ಶುಕ ಉವಾಚ -**

**ಇತಿ ಸ್ತವೈಃ ಸಂಸ್ತುವತಃ ಸ ತಸ್ಮಿನ್ನಘಮರ್ಷಣೇ ।**
**ಪ್ರಾದುರಾಸೀತ್ ಕುರುಶ್ರೇಷ್ಠ ಭಗವಾನ್ ಭಕ್ತವತ್ಸಲಃ ।।೩೫।।**

**ಕುರುಶ್ರೇಷ್ಠ** ಕುರುಶ್ರೇಷ್ಠನೇ **ತಸ್ಮಿನ್** ಆ **ಅಘಮರ್ಷಣೇ** ಅಘಮರ್ಷಣ ಸರೋವರದಲ್ಲಿ ಇತಿ ಮೇಲೆ ಹೇಳಿದಂತೆ **ಸ್ತವೈಃ** ಸ್ತೋತ್ರಗಳಿಂದ (ಸ್ತುತ್ಯವಾದ ಗುಣ ಉಳ್ಳವನೆಂದು) **ಸಂಸ್ತುವತಃ** ಭಕ್ತಿಯಿಂದ ಸ್ತೋತ್ರ ಮಾಡುತ್ತಿದ್ದ **(ತಸ್ಯ ಪುರಃ)** ಆ ದಕ್ಷನ ಎದುರಿಗೆ **ಭಕ್ತವತ್ಸಲಃ ಸಃ ಭಗವಾನ್** ಭಕ್ತವತ್ಸಲನಾದ ಆ ಭಗವಂತನು **ಪ್ರಾದುರಾಸೀತ್** ವ್ಯಕ್ತನಾಗಿ ಕಾಣಿಸಿಕೊಂಡನು. ।।೩೫।।

ಶ್ರೀಹರಿಯ ರೂಪವನ್ನು ವರ್ಣಿಸುತ್ತಾರೆ.

**ಕೃತಪಾದಃ ಸುಪರ್ಣಾಂಸೇ ಪ್ರಲಂಬಾಷ್ಟಮಹಾಭುಜಃ ।**
**ಶಂಖಚಕ್ರಾಸಿಚರ್ಮೇಷುಧನುಃಪಾಶಗದಾಧರಃ ।।೩೬।।**

**ಸುಪರ್ಣಾಂಸೇ** ಗರುಡನ ಹೆಗಲ ಮೇಲೆ **ಕೃತಪಾದಃ** ಪಾದಗಳನ್ನಿಟ್ಟಿರುವ **ಪ್ರಲಂಬಾಷ್ಟಮಹಾಭುಜಃ** ಉದ್ದವಾದ ಎಂಟು ತೋಳುಗಳುಳ್ಳ **ಶಂಖಚಕ್ರಾಸಿ-ಚರ್ಮೇಷುಧನುಃಪಾಶಗದಾಧರಃ** ಶಂಖ ಚಕ್ರ ಖಡ್ಗ ಡಾಲು (ಗುರಾಣಿ) ಬಾಣ ಧನುಸ್ಸು ಪಾಶ ಗದಾಗಳನ್ನು ಧರಿಸಿದ ।।೩೬।।

**ಪೀತವಾಸಾ ಘನಶ್ಯಾಮಃ ಪ್ರಸನ್ನವದನೇಕ್ಷಣಃ ।**
**ವನಮಾಲಾನಿವೀತಾಂಗೋ ಲಸಚ್ಛ್ರೀವತ್ಸಕೌಸ್ತುಭಃ ।।೩೭।।**

**ಪೀತವಾಸಾಃ** ಹಳದಿ ಬಟ್ಟೆಯನ್ನುಟ್ಟ **ಘನಶ್ಯಾಮಃ** ಮೋಡದಂತೆ ಶ್ಯಾಮವರ್ಣ ಉಳ್ಳ **ಪ್ರಸನ್ನವದನೇಕ್ಷಣಃ** ಪ್ರಸನ್ನವಾದ ಮುಖ ಕಣ್ಣುಗಳುಳ್ಳ **ವನಮಾಲಾನಿವೀತಾಂಗಃ** ವನಮಾಲೆಯನ್ನು ಹಾರವಾಗಿ ಹೊಂದಿರುವ ಅವಯವವುಳ್ಳ **ಲಸತ್ ಶ್ರೀವತ್ಸಕೌಸ್ತುಭಃ** ಪ್ರಕಾಶಿಸುವ ಶ್ರೀವತ್ಸ ಮತ್ತು ಕೌಸ್ತುಭ ರತ್ನವನ್ನು ಧರಿಸಿದ ।।೩೭।।

**ಮಹಾಕಿರೀಟಕಟಕಸ್ಫುರನ್ಮಕರಕುಂಡಲಃ ।**
**ಕಾಂಚ್ಯಂಗುಲೀಯವಲಯನೂಪುರಾಂಗದಭೂಷಿತಃ ॥೩೮॥**

**ತ್ರೈಲೋಕ್ಯಮೋಹನಂ ರೂಪಂ ಬಿಭ್ರತ್ ತ್ರಿಭುವನೇಶ್ವರಃ ।**
**ವೃತೋ ನಾರದನಂದಾದ್ಯೈಃ ಪಾರ್ಷದೈಃ ಸುರಯೂಥಪೈಃ ।**
**ಸ್ತೂಯಮಾನೋಽನುಗಾಯದ್ಭಿಃ ಸಿದ್ಧಗಂಧರ್ವಚಾರಣೈಃ ॥೩೯॥**

**ಮಹಾಕಿರೀಟ** ದೊಡ್ಡ ಕಿರೀಟವೂ **ಕಟಕ** ಕಡಗವು **ಸ್ಫುರನ್ಮಕರಕುಂಡಲಃ** ಹೊಳೆಯುವ ಮಕರಕುಂಡಲಗಳೂ ಉಳ್ಳ **ಕಾಂಚಿ** ಉಡುದಾರ (ನಡುಪಟ್ಟಿ) **ಅಂಗುಲೀಯ** ಉಂಗುರ **ವಲಯ** ಕಾಲ್ಗಡಗ **ನೂಪುರ** ಗೆಜ್ಜೆ ಮೊದಲಾದ ಒಡವೆಗಳಿಂದ ಅಲಂಕೃತನಾದ **ತ್ರೈಲೋಕ್ಯಮೋಹನಂ ರೂಪಂ ಬಿಭ್ರತ್** ಮೂರು ಲೋಕವನ್ನೂ ಮೋಹಗೊಳಿಸುವ ರೂಪವನ್ನು ಧರಿಸಿದ **ತ್ರಿಭುವನೇಶ್ವರಃ** ಮೂರು ಲೋಕಗಳಿಗೆ ನಿಯಾಮಕನಾದ **ನಾರದನಂದಾದ್ಯೈಃ ಪಾರ್ಷದೈಃ** ನಾರದ ನಂದ ಮೊದಲಾದ ದ್ವಾರಪಾಲಕರಿಂದ **ಸುರಯೂಥಪೈಃ** ದೇವಸಮೂಹಪಾಲಕರಿಂದಲೂ **ವೃತಃ** ಸುತ್ತುವರಿಯಲ್ಪಟ್ಟ **ಅನುಗಾಯದ್ಭಿಃ** ಅನುಸರಿಸಿ ಗಾನಮಾಡುವ **ಸಿದ್ಧಗಂಧರ್ವಚಾರಣೈಃ** ಸಿದ್ಧ ಚಾರಣ ಗಂಧರ್ವರಿಂದ **ಸ್ತೂಯಮಾನಃ** ಸ್ತೋತ್ರ ಮಾಡಿಸಿಕೊಳ್ಳುವ ಭಕ್ತವತ್ಸಲನಾದ ಭಗವಂತನು ಎಂದು ಹಿಂದೆ ಅನ್ವಯ. ॥೩೯॥

ಈ ರೂಪವು ಮಾಯಾಕಲ್ಪಿತವಲ್ಲ ಅರ್ಥಕ್ರಿಯಾಕಾರಿಯಾದ್ದರಿಂದ ಸತ್ಯವಾದುದು ಎಂಬ ಅಭಿಪ್ರಾಯದಿಂದ ಹೇಳುವರು.

**ರೂಪಂ ತನ್ಮಹದಾಶ್ಚರ್ಯಂ ವಿಲಕ್ಷ್ಯಾಗತಸಾಧ್ವಸಃ ।**
**ನನಾಮ ದಂಡವದ್ಭೂಮೌ ಪ್ರಹೃಷ್ಟಾತ್ಮಾ ಪ್ರಜಾಪತಿಃ ॥೪೦॥**

**ಮಹದಾಶ್ಚರ್ಯಂ** ಅತ್ಯಂತ ಆಶ್ಚರ್ಯಕರವಾದ ಅಥವಾ ಮಹಾತ್ಮರಿಗೂ ಆಶ್ಚರ್ಯಕರವಾದ **ತದ್ರೂಪಂ** ಆ ಶ್ರೀಹರಿಯ ನಿಜರೂಪವನ್ನು **ವಿಲಕ್ಷ್ಯ** ನೋಡಿ **ಗತಸಾಧ್ವಸಃ** ಭಯವನ್ನು ಕಳೆದುಕೊಂಡ **ಪ್ರಜಾಪತಿಃ** ದಕ್ಷಪ್ರಜಾಪತಿಯು **ಪ್ರಹೃಷ್ಟಾತ್ಮಾ** ಹರ್ಷಗೊಂಡವನಾಗಿ **ಭೂಮೌ** ಭೂಮಿಯಲ್ಲಿ **ದಂಡವತ್** ದಂಡದಂತೆ ಉದ್ದವಾಗಿ ಮಲಗಿ ಸಾಷ್ಟಾಂಗವಾಗಿ **ನನಾಮ** ನಮಸ್ಕರಿಸಿದನು. ॥೪೦॥

**ನ ಕಿಂಚನೋದೀರಯಿತುಮಶಕತ್ ತೀವ್ರಯಾ ಮುದಾ ।**
**ಆಪೂರಿತಮನೋದ್ವಾರೋ ಹ್ರದಿನ್ಯ ಇವ ನಿರ್ಝರೈಃ ॥೪೧॥**

**ನಿರ್ಝರೈಃ** ಪ್ರವಾಹಗಳಿಂದ **ಹ್ರದಿನ್ಯ ಇವ** ತುಂಬಿದ ನದಿಗಳಂತೆ (ನದಿಯ ಕಾಲುವೆಗಳಂತೆ) **ತೀವ್ರಯಾ** ಅತಿಶಯವಾದ **ಮುದಾ** ಸಂತೋಷದಿಂದ **ಆಪೂರಿತಮನೋದ್ವಾರಃ** ತುಂಬಿದ ಮನಸ್ಸೆಂಬ ದ್ವಾರ ಉಳ್ಳ ಆ ದಕ್ಷಪ್ರಜೇಶ್ವರರು **ಕಿಂಚನ** ಏನನ್ನೂ **ಉದೀರಯಿತುಂ** ಹೇಳಲು **ನ ಅಶಕತ್** ಸಮರ್ಥರಾಗಲಿಲ್ಲ. ॥೪೧॥

**ತಂ ತಥಾವನತಂ ಭಕ್ತಂ ಪ್ರಜಾಕಾಮಂ ಪ್ರಜಾಪತಿಮ್ ।**
**ಚಿತ್ತಜ್ಞಃ ಸರ್ವಭೂತಾನಾಮಿದಮಾಹ ಜನಾರ್ದನಃ ॥೪೨॥**

**ಸರ್ವಭೂತಾನಾಂ** ಎಲ್ಲ ಪ್ರಾಣಿಗಳ **ಚಿತ್ತಜ್ಞಃ** ಮನಸ್ಸಿನಲ್ಲಿರುವದನ್ನು ಬಲ್ಲವನಾದ **ಜನಾರ್ದನಃ** ಶ್ರೀಹರಿಯು **ತಥಾ** ಆ ರೀತಿಯಲ್ಲಿ **ಅವನತಂ** ಬಾಗಿರುವ **ಪ್ರಜಾಕಾಮಂ** ಮಕ್ಕಳನ್ನು ಪಡೆಯಬಯಸುವ **ತಂ ಪ್ರಜಾಪತಿಂ** ಆ ದಕ್ಷನನ್ನು ಕುರಿತು **ಇದಂ** ಮುಂದೆ ಹೇಳುವ ಮಾತನ್ನು **ಆಹ** ಹೇಳಿದನು.

ಅವನು ಏನೂ ಹೇಳದಿದ್ದರೂ ಚಿತ್ತಜ್ಞನಾದ ಶ್ರೀಹರಿಯು ಅಭಿಪ್ರಾಯವನ್ನರಿತು ಉತ್ತರ ಕೊಟ್ಟನೆಂದು ಭಾವ. ॥೪೨॥

'ಪ್ರಜಾಕಾಮಂ' ಎಂಬುದರಿಂದ ಹೆಣ್ಣು ಮಕ್ಕಳ ಸಲುವಾಗಿಯೇ ಇಷ್ಟು ವರ್ಷ ತಪಸ್ಸು ಮಾಡಿದ್ದು ಭಗವಂತನು ಕೊಟ್ಟ ವರವೂ ಅದಕ್ಕೆ ಅನುಗುಣವಾದುದು ಎಂದು ಧ್ವನಿತವಾಗುವದು.

ಜನಾರ್ದನ ಎಂಬುದರಿಂದ ಶ್ರೀಹರಿಯ ರೂಪಗಳಿಗೆ ಒಂದೇ ಕಾರ್ಯವಲ್ಲ. ಕಿಂತು ಸೇವಾವಿಶೇಷದಿಂದ ಅವರವರ ಅಭಿಲಾಷ ಪೂರಕತೆ ಇದೆ ಎಂದು ತಿಳಿಯುವದು. ಅಥವಾ ಜನಂ ಜನನಂ ಅರ್ದಯತಿ ಆಗಮಯತೀತಿ ಜನಾರ್ದನಃ ಜನನವನ್ನು ತಂದುಕೊಡುವ ಎಂದರ್ಥ. 'ಅರ್ದ ಗತೌ ಯಾಚನೇ ಚ' ಎಂದು ಧಾತು ಇದೆ. ಹೀಗೆ ಮಾಡದಿದ್ದರೆ 'ಜನನಂ ಅರ್ದಯತಿ' ಜನನವನ್ನು ನಾಶಗೊಳಿಸುವ ಎಂಬ ವ್ಯುತ್ಪತ್ತಿಯಿಂದ ಈ ಹೆಸರನ್ನು ಪ್ರಜಾಕಾಮನಾಸಮಯದಲ್ಲಿ ಅನನುರೂಪವಾದ್ದರಿಂದ ಹೇಳಬಾರದಾಗಿತ್ತು. ಆದ್ದರಿಂದ ಮೇಲೆ ಹೇಳಿದಂತೆ ವ್ಯುತ್ಪತ್ತಿಯಿಂದ ಏಕೆ ಸಂತೋಷಿಸಬಾರದು ಎನ್ನುತ್ತಾರೆ ಶ್ರೀಗಳವರು. ॥೪೨॥




**ಶ್ರೀ ಭಗವಾನುವಾಚ -**

**ಪ್ರಾಚೇತಸ ಮಹಾಭಾಗ ಸಂಸಿದ್ಧಃ ತಪಸಾ ಭವಾನ್ ।**
**ಯಚ್ಛ್ರದ್ಧಯಾ ಮತ್ಪರಯಾ ಮಯಿ ಭಾವಂ ಪರಂ ಗತಃ ॥೪೩॥**

**ಪ್ರೀತೋऽಹಂ ತೇ ಪ್ರಜಾನಾಥ ಯತ್ತೇ ಸ್ಯಾತ್ ಬೃಂಹಣಂ ತಪಃ ।**
**ಮಮೈಷ ಕಾಮೋ ಭೂತಾನಾಂ ಯದ್ ಭೂಯಾಸುರ್ವಿಭೂತಯಃ ॥**

**ಮಹಾಭಾಗ** ಮಹಾಪುಣ್ಯಶಾಲಿಯಾದ **ಪ್ರಾಚೇತಸ** ಪ್ರಚೇತಸರ ಮಗನಾದ ದಕ್ಷನೇ **ತಪಸಾ** ತಪಸ್ಸಿನಿಂದ **ಭವಾನ್** ನೀನು **ಸಂಸಿದ್ಧಃ** ಸರಿಯಾದ ಸಿದ್ಧಿಯನ್ನು ಪಡೆದಿರುವಿ **ಯತ್** ಯಾಕೆಂದರೆ **ಮತ್ಪರಯಾ** ನನ್ನ ವಿಷಯಕವಾದ **ಶ್ರದ್ಧಯಾ** ಶ್ರದ್ಧೆಯಿಂದ **ಮಯಿ** ನನ್ನಲ್ಲಿ **ಪರಂ** ನನ್ನ ಪ್ರಸನ್ನತೆಗೆ ಕಾರಣವಾಗುವಷ್ಟು ಉತ್ತಮವಾದ **ಭಾವಂ** ಭಕ್ತಿಯನ್ನು **ಗತಃ** ಹೊಂದಿರುವಿ. ।।೪೩।।

**ಪ್ರಜಾನಾಥ** ಪ್ರಜೇಶ್ವರನೇ **ತೇ** ನಿನ್ನ ವಿಷಯದಲ್ಲಿ **ಪ್ರೀತಃ** ಪ್ರಸನ್ನನಾಗಿರುವೆನು **ಯತ್** ಯಾವ ಆ ಪ್ರೀತಿಯಿಂದ **ತೇ** ನಿನ್ನ **ತಪಃ** ತಪಸ್ಸು **ಬೃಂಹಣಂ** ಪ್ರಜಾವೃದ್ಧಿಕರವಾಗಿ **ಸ್ಯಾತ್** ಆಗುವದು. **ಭೂತಾನಾಂ** ಪ್ರಾಣಿಗಳ **ವಿಭೂತಯಃ** ಸಮೃದ್ಧಿಗಳು **ಭೂಯಾಸುಃ** ಆಗಲಿ **ಇತಿ** ಎಂಬುದೇನುಂಟೋ **ಏಷಃ** ಇದು **ಮಮ** **ಕಾಮಃ** ನನ್ನ ಇಚ್ಛೆಯಾಗಿದೆ. ।।೪೪।।

**ವಿಭೂತಯಃ** ನನ್ನ ಸನ್ನಿಧಾನಕ್ಕೆ ವಿಶೇಷವಾಗಿ ಪಾತ್ರವಾದವುಗಳು ಎಂದೂ ಅರ್ಥ.

ಗಂಡನಿಗೆ ಹೊರಸಾಗದು ಹೆಂಡತಿಗೆ ನೆಲವಾಗದು ಎಂಬ ಗಾದೆಯಂತೆ ವರ ಕೊಡುವ ಭಗವಂತನಿಗೆ ಸ್ವೀಕರಿಸುವ ದಕ್ಷರಿಗೆ ವಿರುದ್ಧವಾದ ಇಚ್ಛೆ ಇಲ್ಲ ಕಿಂತು ಪರಬ್ರಹ್ಮನಿಗೂ ಬ್ರಹ್ಮಪುತ್ರನಿಗೂ ಒಂದೇ ರೀತಿ ಇಚ್ಛೆ ಇದೆ ಎಂದು ಈ ಮಾತುಗಳಿಂದ ಸೂಚಿಸಿರುವರು.

ಮೇಲೆ ಹೇಳಿದ ವಿಭೂತಿಗಳು ಯಾವು ಎಂದು ಹೇಳುವರು-

**ಬ್ರಹ್ಮಾ ಭವೋ ಭವಂತಶ್ಚ ಮನವೋ ವಿಬುಧೇಶ್ವರಾಃ ।**
**ವಿಭೂತಯೋ ಮಮ ಹ್ಯೇತಾ ಭೂತಾನಾಂ ಭೂತಿಹೇತವಃ ॥೪೫॥**

**ಬ್ರಹ್ಮಾ** ಚತುರ್ಮುಖನು **ಭವಃ** ರುದ್ರನು **ಭವಂತಃ** ನೀನೇ ಮೊದಲಾದ ಪ್ರಜೇಶ್ವರರು **ಮನವಃ** ಮನುಗಳು **ವಿಬುಧೇಶ್ವರಾಃ** ದೇವತಾಶ್ರೇಷ್ಠರು **ಏತಾಃ** ಇವರು

**ಮಮ** ನನ್ನ **ವಿಭೂತಯಃ** ವಿಶೇಷ ಸನ್ನಿಧಾನ ಸ್ಥಾನಗಳೆಂದು **ಹಿ** ಶಾಸ್ತ್ರ ಪ್ರಸಿದ್ಧವು. ಆದ್ದರಿಂದಲೇ **ಏತಾಃ** ಇವರು (ಇವು) **ಭೂತಾನಾಂ** ಪ್ರಜೆಗಳ **ಭೂತಿಹೇತವಃ** ಉತ್ಪತ್ತಿಗೆ ಕಾರಣರಾಗಿದ್ದಾರೆ. ।।೪೫।।

ಮೇಲಿನ ಶ್ಲೋಕದಲ್ಲಿ ಬ್ರಹ್ಮಾದಿಗಳು ಭಗವಂತನ ಸಾಕ್ಷಾದ್ರೂಪಗಳೆಂದು ತೋರುವದು ಕಾರಣ ಅನುಮಾನಮುನಿಗಳು ಮಾನದಿಂದ ತಾತ್ಪರ್ಯ ತಿಳಿಸುವರು.

**ತಾತ್ಪರ್ಯ**

**ವಿಶೇಷವ್ಯಕ್ತಿಪಾತ್ರತ್ವಾತ್ ಬ್ರಹ್ಮಾದ್ಯಾಸ್ತು ವಿಭೂತಯಃ ।**
**ತದಂತರ್ಯಾಮಿಣಶ್ಚೈವ ಮತ್ಸ್ಯಾದ್ಯಾ ವಿಭವಾಃ ಸ್ಮೃತಾಃ ।।**
**-ಇತಿ ತಂತ್ರನಿರ್ಣಯೇ ।।**

ಬ್ರಹ್ಮಾದಿಗಳು ವಿಶೇಷವಾಗಿ ಶ್ರೀಹರಿಯ ಅಭಿವ್ಯಕ್ತಿಗೆ ಪಾತ್ರರಾದ್ದರಿಂದಲೇ ವಿಭೂತಿಗಳೆನಿಸುತ್ತಾರೆ. ಅವರ ಅಂತರ್ಯಾಮಿರೂಪಗಳು ಮತ್ತು ಮತ್ಸ್ಯಾದಿ ಅವತಾರ ರೂಪಗಳೂ ವಿಭವಗಳೆನಿಸುವವು. ಎಂದು ತಂತ್ರನಿರ್ಣಯದಲ್ಲಿ ಹೇಳಿದೆ. ಈ ಪ್ರಮಾಣಾನುಸಾರ **ಭೂತಾನಾಂ** ವಿಶೇಷಸನ್ನಿಧಾನ ಪಾತ್ರರಾದ್ದರಿಂದ ವಿಭೂತಿ ಪದವಾಚ್ಯರಾದ ಬ್ರಹ್ಮಾದಿಗಳಿಗೆ **ಮತ್ಸ್ಯಾದ್ಯಾಃ** ಮತ್ಸ್ಯಾದಿಗಳು **ಭೂತಿಹೇತವಃ** ಐಶ್ವರ್ಯಕ್ಕೆ ಕಾರಣರು ಎಂದೂ ಯೋಜಿಸಬಹುದು. ।।೪೫।।

ಶ್ರೀಹರಿಯ ಇಷ್ಟವಾದ ವಿಶ್ವಸೃಷ್ಟಿಗಾಗಿ ತಪಸ್ಸು ಮಾಡಿದ್ದರಿಂದ ನಾನು ಪ್ರೀತನಾಗಿದ್ದೇನೆ ಎಂದು ಹೇಳಿದ ಭಗವಂತನು ತಪಸ್ಸನ್ನು ಸ್ತೋತ್ರಮಾಡುತ್ತ ಪ್ರಾಸಂಗಿಕವಾಗಿ ಲೋಕವೃದ್ಧಿಕರಗಳಾದ ವಿದ್ಯಾದಿಗಳನ್ನು ಸ್ತೋತ್ರಮಾಡುತ್ತಾನೆ-

**ತಪೋ ಮೇ ಹೃದಯಂ ಬ್ರಹ್ಮ ತನುರ್ವಿದ್ಯಾ ಕ್ರಿಯಾ ಕೃತಿಃ ।**
**ಅಂಗಾನಿ ಕ್ರತವೋ ಜಾತಾ ಧರ್ಮ ಆತ್ಮಾಽಸವಃ ಸುರಾಃ ।।೪೬।।**

**ಬ್ರಹ್ಮ** ಪೂರ್ಣನಾದ **ತಪಃ** ತಪಸ್ಸು **ಮೇ** ನನಗೆ **ಹೃದಯಂ** ಪ್ರಿಯವಾದುದು ಏಕೆಂದರೆ **ತಪಃ** ತಪಸ್ಸಿಗೆ ಅಭಿಮಾನಿಯಾದ ರುದ್ರದೇವರು **ಮೇ** ನನ್ನ **ಹೃದಯಂ** ಹೃದಯದಿಂದ ಹುಟ್ಟಿದವರು. ಮತ್ತು ಅದನ್ನು ಆಶ್ರಯಿಸಿಕೊಂಡಿರುವರು. **ವಿದ್ಯಾ** ವಿದ್ಯೆಯು **ತನುಃ** ಸ್ವರೂಪವು (ದೇಹವು) ಏಕೆಂದರೆ **ವಿದ್ಯಾ** ವಿದ್ಯಾಭಿಮಾನಿನಿಯಾದ ಉಮಾದೇವಿಯು **ಮೇ ತನುಃ** ನನ್ನ ಶರೀರದಿಂದ ಹುಟ್ಟಿದವಳು ಮತ್ತು ಅದನ್ನು ಆಶ್ರಯಿಸಿ ಇರುವವಳು. **ಕ್ರಿಯಾ** ಕೆಲಸವು **ಮೇ** ನನ್ನ **ಆಕೃತಿಃ** ಆಕಾರವು ಏಕೆಂದರೆ

**ಕ್ರಿಯಾ** ಕ್ರಿಯಾಭಿಮಾನಿನಿಯಾದ ಇಂದ್ರನು **ಆಕೃತಿಃ** ಶೃಂಗಾರಾದಿ ಆಕಾರದಿಂದ ಹುಟ್ಟಿದವನು ಮತ್ತು ಅದನ್ನು ಆಶ್ರಯಿಸಿದವನು **ಕ್ರತವಃ** ಯಾಗಗಳು (ಸಂಕಲ್ಪಗಳು) **ಅಂಗಾನಿ** ಅವಯವಗಳಾಗಿ **ಜಾತಾಃ** ಇರುವವು ಏಕೆಂದರೆ **ಕ್ರತವಃ** ಯಜ್ಞಾಭಿಮಾನಿದೇವತೆಗಳು **ಅಂಗಾನಿ** ನನ್ನ ಅವಯವಗಳಿಂದ **ಜಾತಾಃ** ಹುಟ್ಟಿದವರು ಮತ್ತು ಅವನ್ನೇ ಆಶ್ರಯಿಸುವವರು **ಧರ್ಮಃ** ಧರ್ಮವು **ಮೇ ಆತ್ಮಾ** ನನ್ನ ಮಧ್ಯದೇಹವು ಏಕೆಂದರೆ **ಧರ್ಮಃ** ಧರ್ಮಾಭಿಮಾನಿಯಾದ ಯಮಧರ್ಮನು **ಆತ್ಮಾ** ಮಧ್ಯದೇಹದಿಂದ ಜನಿಸಿದವನು ಅದನ್ನು ಆಶ್ರಯಿಸಿದವನು ೧. **ಸುರಾಃ ಸು** ಶೋಭನವಾದ **ರಾಃ** ಲಾತವ್ಯಕುಲಯೋಗ್ಯವಾದ ಅನ್ನವುಳ್ಳ ವಾಯುದೇವರು **ಅಸವಃ** ನನ್ನ ಪ್ರಾಣದಿಂದ ಹುಟ್ಟಿದವರು ಅದನ್ನು ಆಶ್ರಯಿಸಿ ಕೊಂಡಿರುವವರು ೨. ಸುರಾಃ ಬ್ರಹ್ಮಾದಿದೇವತೆಗಳು **ಮೇ ಅಸವಃ** ನನ್ನ ಇಂದ್ರಿಯಗಳು ಏಕೆಂದರೆ **ಅಸವಃ ಶ್ರೋತ್ರಾದಿ** ಇಂದ್ರಿಯಗಳಿಂದ ಹುಟ್ಟಿದವರು ಮತ್ತು ಅವುಗಳನ್ನು ಆಶ್ರಯಿಸಿ ಕೊಂಡಿರುವವರು (ವಾಯು ಎಂಬರ್ಥದಲ್ಲಿ **ಸುರಾಃ** ಎಂಬುದು ಏಕವಚನ ಸುರಾಃ ಸುರಾಯೌ ಸುರಾಯಃ ಮುಂತಾಗಿ. **ಅಸವಃ** ಎಂಬುದು ನಿತ್ಯ ಬಹುವಚನವಾದ್ದರಿಂದ ಏಕವಚನಾರ್ಥದಲ್ಲಿ ಪ್ರಯುಕ್ತವೆಂದು ತಿಳಿಯಬೇಕು.)

'ಯದಾಶ್ರಯಂ ಯದ್ಭವತಿ ತತ್ ತನ್ನಾಮಕಮೀರಿತಂ' ಎಂಬ ಕೋಶವನ್ನು ಅನುಸರಿಸಿ ಆಶ್ರಯಿಸಿಕೊಂಡಿರುವ ವಸ್ತುವನ್ನು ಆಶ್ರಯನಾಮದಿಂದಲೇ 'ತಪಃ ಹೃದಯಂ' ಮುಂತಾಗಿ ಹೇಳಿದೆ. ಯಜ್ಞಗಳು ಶ್ರೀಹರಿಯ ಅಂಗಗಳು ಎಂಬುದಕ್ಕೆ 'ಶಿರೋ ವೈ ತದ್ಯಜ್ಞಸ್ಯ ಯತ್ಪ್ರವರ್ಗ್ಯೋ ಗ್ರೀವೋಪಸದಶ್ಚಕ್ಷುಷ್ಯಾಜ್ಯಭಾಗೌ' ಮುಂತಾದ ಶ್ರುತಿಯನ್ನು ನೋಡಬಹುದು.

ಈ ಶ್ಲೋಕದಲ್ಲಿ 'ತಪೋ ಮೇ ಹೃದಯಂ' ಮುಂತಾಗಿ ಜಡವಾದ ತಪಸ್ಸು ಮೊದಲಾದವುಗಳಿಗೆ ಭಗವಂತನ ಅವಯವ ತಾದಾತ್ಮ್ಯ (ಅಭೇದ) ಹೇಳಿದಂತೆ ತೋರುವದು. ಕಾರಣ ಅದನ್ನು ನಿರಾಕರಿಸುತ್ತಾ ಪ್ರಮಾಣದಿಂದ ಆಚಾರ್ಯರು ತಾತ್ಪರ್ಯ ಹೇಳುವರು-

### ತಾತ್ಪರ್ಯ

ತಪೋಽಭಿಮಾನೀ ರುದ್ರಸ್ತು ವಿಷ್ಣೋರ್ಹೃದಯಮಾಶ್ರಿತಃ ।
ವಿದ್ಯಾರೂಪಾ ತಥೈವೋಮಾ ವಿಷ್ಣೋಸ್ತನುಮುಪಾಶ್ರಿತಾ ॥

**ಶೃಂಗಾರಾದ್ಯಾಕೃತಿಗತಃ ಕ್ರಿಯಾತ್ಮಾ ಪಾಕಶಾಸನಃ ।**
**ಅಂಗೇಷು ಕ್ರತವಃ ಸರ್ವೇ ಮಧ್ಯದೇಹೇ ಚ ಧರ್ಮರಾಟ್ ॥**

**ಪ್ರಾಣೋ ವಾಯುಶ್ಚಿತ್ತಗತೋ ಬ್ರಹ್ಮಾದ್ಯಾಃ ಖೇಷು ದೇವತಾಃ ॥ಇತಿ ಚ॥**
**ಯದಾಶ್ರಿತಂ ಯದ್ಭವತಿ ತತ್ತನ್ನಾಮಕಮೀರಿತಮ್ ॥ ಇತಿ ಶಬ್ದನಿರ್ಣಯೇ॥**

ತಪೋಽಭಿಮಾನಿಯಾದ ರುದ್ರನು ವಿಷ್ಣುವಿನ ಹೃದಯವನ್ನಾಶ್ರಯಿಸಿರುತ್ತಾನೆ. ವಿದ್ಯಾಭಿಮಾನಿನಿಯಾದ ಪಾರ್ವತಿಯು ಶ್ರೀಹರಿಯ ಸರ್ವದೇಹವನ್ನು ಆಶ್ರಯಿಸಿರುವಳು. ಕ್ರಿಯಾಭಿಮಾನಿಯಾದ ಇಂದ್ರನು ಶೃಂಗಾರಾದ್ಯಾಕಾರಗಳಲ್ಲಿ ಇರುವನು. ಯಜ್ಞಾಭಿಮಾನಿಗಳು ಹಸ್ತ-ಪಾದ ಮೊದಲಾದ ಅಂಗಗಳಲ್ಲಿ ಆಶ್ರಿತರಾಗಿರುತ್ತಾರೆ. ಧರ್ಮರಾಜನು ಮಧ್ಯದೇಹದಲ್ಲಿ ಆಶ್ರಿತನು. ವಾಯು ಮನಸ್ಸಿನಲ್ಲಿದ್ದಾನೆ. ಬ್ರಹ್ಮಾದಿಗಳು ಶ್ರೀಹರಿಯ ಶ್ರೋತ್ರಾದಿ ಇಂದ್ರಿಯಗಳಲ್ಲಿ ಆಶ್ರಿತರು. ಯಾವುದು ಯಾವುದನ್ನು ಆಶ್ರಯಿಸಿರುತ್ತದೋ ಅದಕ್ಕೆ ಆ ನಾಮವೇ ಬರುತ್ತದೆ ಎಂದು ಶಬ್ದನಿರ್ಣಯದಲ್ಲಿ ಹೇಳಿದೆ.

'ಸಪ್ತಸು ಪ್ರಥಮಾ' ಎಂಬ ಸೂತ್ರಾನುಸಾರ ಹೃದಯಂ ಮುಂತಾದ ಪ್ರಥಮಾ ಸಪ್ತಮ್ಯರ್ಥೇ ಎಂಬ ಪರಿಹಾರವಿದ್ದರೂ ಪರಿಹಾರಾಂತರವನ್ನು 'ಯದಾಶ್ರಿತಂ'ಎಂದು ಹೇಳಿದ್ದಾರೆ ಎಂದು ತಿಳಿಯಬೇಕು.

'ಪಂಚಭಿಃ ಪಂಚಭಿಃ ಬ್ರಹ್ಮ' ಎಂಬಲ್ಲಿ ಬ್ರಹ್ಮ ಶಬ್ದಕ್ಕೆ ಪೂರ್ಣಂ ಎಂದು ವ್ಯಾಖ್ಯಾನಿಸಿದ್ದರಿಂದಲೂ 'ಬೃಹತ್ ಬ್ರಹ್ಮ ಮಹಚ್ಚೇತಿ ಶಬ್ದಾಃ ಪರ್ಯಾಯವಾಚಕಾಃ' ಎಂದು ಮೋಕ್ಷಧರ್ಮದಲ್ಲಿ ಹೇಳಿದ್ದರಿಂದ ಪೂರ್ಣ ಎಂದರ್ಥ ಹೇಳಿದೆ.

ಆತ್ಮಾ ಎಂಬುದನ್ನು ಆವೃತ್ತಿಮಾಡಿ ಅದಕ್ಕೆ ಚಿತ್ತಗತ ವಾಯು ಎಂದರ್ಥ ಮಾಡಿರುವರು. 'ಯಜ್ಞದೇವತಾಃ ಇಂದ್ರಾದ್ಯಾಃ' ಎಂದು ಛಾಂದೋಗ್ಯದಲ್ಲಿದೆ.

ಬ್ರಹ್ಮಶಬ್ದಕ್ಕೆ ವೇದ ಎಂದೂ ಅರ್ಥ ಮಾಡಬಹುದು. 'ತಸ್ಯ ಯಜುರೇವ ಶಿರಃ ಋಗ್ದಕ್ಷಿಣಃ ಪಕ್ಷಃ ಸಾಮೋತ್ತರಃ ಪಕ್ಷಃ' ಮುಂತಾಗಿರುವದರಿಂದ ಭಗವಂತನ ಅವಯವ ಎಂದು ಹೇಳಿದ್ದರಿಂದ ಅದಕ್ಕೆ ಅಭಿಮಾನಿಯಾದ 'ಯಜುರ್ವೇದಾತ್ಮಕೋ ಹರಿಃ ಇಂದ್ರಾದ್ಯಾ ಯಜುರುದ್ದಿಷ್ಟಾಃ' ಎಂದಿದೆ. 'ಋಚಃ ಶ್ರೀರ್ಗೀರುಮಾದ್ಯಾಶ್ಚ' ಎಂದು ಛಾಂದೋಗ್ಯದಲ್ಲಿ ಹೇಳಿದೆ. 'ಸಾಮ್ನಃ ಪ್ರಾಣಶಿವಾದಯಃ' ಎಂದು ಗೀತಾತಾತ್ಪರ್ಯದಲ್ಲಿದೆ. ಆದ್ದರಿಂದ ವೇದಾಭಿಮಾನಿಗಳಾದ ದೇವತೆಗಳು

ಶ್ರೀಹರಿಯನ್ನು ಆಶ್ರಯಿಸಿರುವರೆಂದೂ ಅರ್ಥ ಮಾಡಬಹುದು. 'ತಾ ಆಪ ಐಕ್ಷಂತ' 'ಯಜಮಾನಃ ಪ್ರಸ್ತರಃ' 'ಮಹತಶ್ಚತುರ್ಮುಖಾತ್' 'ಮಮಾತ್ಮಾ ಭದ್ರಸೇನಃ' ಮುಂತಾದ ಲೌಕಿಕ-ವೈದಿಕ ಪ್ರಯೋಗಗಳಿಗೆ ಗತಿಯನ್ನು ಇಚ್ಛೆ ಇಲ್ಲದಿದ್ದರೂ ಅಭಿಮಾನ್ಯಧಿಕರಣದಲ್ಲಿ ಸೂತ್ರಕಾರರು ಹೇಳಿದ್ದನ್ನು ಅಂಗೀಕರಿಸಲೇಬೇಕು. ಈ ಪಕ್ಷದಲ್ಲಿ ಬ್ರಹ್ಮಪದಾರ್ಥ ಸಮಂಜಸವೆಂದು ತಿಳಿಯಬೇಕು. ।।೪೬।।

ಇಲ್ಲಿ ಅದ್ವೈತಿಗಳು ವಾಙ್ಮನಸ್ಸುಗಳಿಗೆ ಅಗೋಚರವಾದ ನಿರ್ಗುಣ ಜಗತ್ಕಾರಣವಾದ ಸಗುಣ ಎಂದು ಎರಡು ಬ್ರಹ್ಮನನ್ನು ಕಲ್ಪಿಸುತ್ತಾರೆ. ಅದನ್ನು ನಿರಾಕರಿಸಲು ಹೇಳುತ್ತಾರೆ-

**ಅಹಮೇವೇದಮಾಸಾಗ್ರೇ ನಾನ್ಯತ್ ಕಿಂಚಾಂತರಂ ಬಹಿಃ ।**
**ಸಂಜ್ಞಾನಮಾತ್ರಮವ್ಯಕ್ತಂ ಪ್ರಸುಪ್ತಮಿವ ವಿಶ್ವತಃ ।।೪೭।।**

**ಅಂತರಂ** ಎಲ್ಲರ ಒಳಗೂ **ಬಹಿಃ** ಎಲ್ಲದರ ಹೊರಗೂ ಇರುವ 'ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ' **ಸಂಜ್ಞಾನಮಾತ್ರಂ** ಪ್ರಕೃತಿಪ್ರಾಕೃತರೂಪ ರಹಿತವಾಗಿ ಶುದ್ಧಜ್ಞಾನಸ್ವರೂಪನಾದ **ಅವ್ಯಕ್ತಂ** ಅತಿಸೂಕ್ಷ್ಮವಾದ ಶ್ರೀಹರಿಯ ಅನುಗ್ರಹವಿಲ್ಲದೆ ನೋಡಲಾಗದ **ವಿಶ್ವತಃ (ಭಿನ್ನಂ)** ಲಕ್ಷ್ಮೀಬ್ರಹ್ಮಾದಿ ಜಗತ್ತಿಗಿಂತ ಭಿನ್ನವಾದ **ಪ್ರಸುಪ್ತಂ ಇವ** ಕೇವಲ ಕಣ್ಣು ಮುಚ್ಚಿದ್ದರಿಂದ ನಿದ್ರೆ ಮಾಡುವಂತೆ ಇದ್ದ **ಅಹಂ** ನನ್ನ **ಇದಂ ಏವ** ನೀನು ತಪಸ್ಸು ಮಾಡಿ ಈಗ ಕಾಣುತ್ತಿರುವ ಈ ವರ್ಣ ಮತ್ತು ಕರಚರಣಾದಿ ಅವಯವ ವಿಶಿಷ್ಟ ರೂಪವೇ **ಅಗ್ರೇ** ಸೃಷ್ಟಿಗೆ ಮೊದಲು ಪ್ರಳಯದಲ್ಲಿ **ಆಸ** ಇದ್ದಿತು **ಅನ್ಯತ್ ಕಿಂಚ** ವಾಙ್ಮನಸ್ಸುಗಳಿಗೆ ಅಗೋಚರವಾದ ನಿರ್ಗುಣವಾದ ಮತ್ತೊಂದು ಯಾವ ವಸ್ತುವು **ನ ಆಸ** ಇರಲಿಲ್ಲ.

ಮೇಲಿನ ಶ್ಲೋಕದಲ್ಲಿ ಈ ಜಗತ್ತೇ ನಾನು ಎಂಬ ಅಪಾರ್ಥವಾಗುವದು ಅದನ್ನು ತಾವು ವ್ಯಾಖ್ಯಾನ ಮಾಡಿ ಪ್ರಲಯಕಾಲದಲ್ಲಿರುವ ಶ್ರೀಹರಿಗೆ ನಿರಾಕಾರತ್ವ ಭ್ರಮವನ್ನು ಪರಿಹರಿಸಲು ಪ್ರಮಾಣವನ್ನು ಉದಾಹರಿಸುವರು.

ತಾತ್ಪರ್ಯ

ಸಂಜ್ಞಾಮಾತ್ರಂ ಯದಿದಂ ತ್ವಯಾ ತಪಸಾ ದೃಷ್ಟಂ ಮಮ ರೂಪಂ ತದೇವ ಅಗ್ರೇ ಆಸೀತ್ ।

**ನಾನಾವರ್ಣೋ ಹರಿಸ್ತ್ವೇಕೋ ಬಹುಶೀರ್ಷಭುಜೋರುಪಾತ್ ।**
**ಆಸೀಲ್ಲಯೇ ತದನ್ಯತ್ತು ಸೂಕ್ಷ್ಮರೂಪಂ ಶ್ರಿಯಂ ವಿನಾ ।**

**ಅಸುಪ್ತಃ ಸುಪ್ತ ಇವ ಚ ಮೀಲಿತಾಕ್ಷೋ ಭವೇದ್ಧರಿಃ ।**
**ಅನ್ಯತ್ರಾನಾದರಾದ್ವಿಷ್ಣೋಃ ಶ್ರೀಶ್ಚ ಲೀನೇವ ಕಥ್ಯತೇ ।**
**ಸೂಕ್ಷ್ಮತ್ವೇನ ಹರೌ ಸ್ಥಾನಾಲ್ಲೀನಮನ್ಯದಪೀಷ್ಯತೇ ॥ ಇತಿ ಮಾತ್ಸ್ಯೇ ॥**

ಕೇವಲ ಜ್ಞಾನಾನಂದಾದಿ ಸ್ವರೂಪವಾದ ಯಾವ ನನ್ನ ರೂಪವನ್ನು ತಪಸ್ಸಿನಿಂದ ಕಂಡಿದ್ದಿಯೋ ಅದೇ ಪ್ರಲಯಕಾಲದಲ್ಲಿ ಇತ್ತು. (ಇಷ್ಟು ಮೂಲದಲ್ಲಿ ಶೇಷ ಪೂರ್ಣಮಾಡಿದ್ದು)

**ಪ್ರಮಾಣದ ಅರ್ಥ.**

ಶ್ರೀಹರಿಯೊಬ್ಬನೇ ನಾನಾ ವಿಧವರ್ಣಗಳುಳ್ಳವನು 'ರುಕ್ಮವರ್ಣಂ' 'ಶಶಿವರ್ಣಂ' 'ನಾನಾವರ್ಣಾನಿ ದಿವ್ಯಾನಿ' ಮುಂತಾಗಿ ಹೇಳಿದೆ. ಅನೇಕ ಶಿರಸ್ಸು ಭುಜ ತೊಡೆ ಪಾದಗಳುಳ್ಳವನು. ಬಹು ಎನ್ನುವದು ಎಲ್ಲ ಕಡೆ ಅನ್ವಯಿಸುವದು. 'ಸಹಸ್ರಶೀರ್ಷಾಃ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್'' 'ಅನಂತಕರಪಾದ-ಮುಖೋದರಾದಿಃ' ಮುಂತಾಗಿ ಹೇಳಿದೆ). ಇಂತಹವನು ಪ್ರಲಯಕಾಲದಲ್ಲಿದ್ದನು. ಲಕ್ಷ್ಮಿಯನ್ನು ಭೂತಸೂಕ್ಷ್ಮರೂಪವಾದ ಜಡಪ್ರಕೃತಿ ಅವ್ಯಾಕೃತಾಕಾಶ ಜೀವ ವರ್ಣ ಇವುಗಳನ್ನು ಬಿಟ್ಟು ಬೇರೆ ಯಾವುದೂ ಇರಲಿಲ್ಲ. ಶ್ರೀಹರಿಯು ಸ್ವಭಾವತಃ ಅಸುಪ್ತನಾದರೂ ಕಾರ್ಯ ಮಾಡದೇ ಇದ್ದುದರಿಂದ ಸುಪ್ತನಂತೆ ಕಣ್ಣು ಮುಚ್ಚಿರುವನು. ಹಾಗಾದರೆ ಲಕ್ಷ್ಮಿಗೆ ಲಯವಿಲ್ಲವೆಂದು ಭಾವ ಬರುವದು. ಅದು 'ಸ ಇದಂ ಸರ್ವಂ ವಿಲಾಪಯತಿ ಸ ಹರಿಃ ಪರಃ ಪರಮಾತ್ಮಾ ತೇಜಃ ಪರಸ್ಯಾಂ ದೇವತಾಯಾಂ' ಎಂಬ ಪ್ರಮಾಣಬಾಧಿತ ಎಂದರೆ ಹೇಳುವರು. ಶ್ರೀವಿಷ್ಣುವಿನಿಂದ ಬೇರೆಡೆಯಲ್ಲಿ ಅನುಗ್ರಹರೂಪವಾದ ಆದರ ಮಾಡದಿರುವುದರಿಂದ ಲಯ ಹೊಂದಿದವಳಂತೆ ಹೇಳಲ್ಪಡುತ್ತಾಳೆ. 'ಹರೇರತ್ಯಂತಸಾಮೀಪ್ಯಂ ಲಯೋ ಲಕ್ಷ್ಮ್ಯಾಃ ಪ್ರಕೀರ್ತಿತಃ' ಎಂದು ಇದೇ ಅಭಿಪ್ರಾಯದಿಂದ ಹೇಳಿದ್ದಾರೆ. ಜಡಪ್ರಕೃತ್ಯಾದಿಗಳು ಸೂಕ್ಷ್ಮರೂಪದಿಂದ ಶ್ರೀಹರಿಯಲ್ಲಿದ್ದರೂ ಸ್ಥೂಲರೂಪದಿಂದ ಇಲ್ಲದಿರುವದರಿಂದ ನಾಶ ಹೊಂದಿವೆ ಎನಿಸಿಕೊಳ್ಳುತ್ತವೆ.




ನಿಯಮ್ಯವನ್ನು ಹೇಳಿದರೆ ನಿಯಾಮಕ ಜ್ಞಾನ ಸುಲಭ ಸಾಧ್ಯವೆಂದು ತಿಳಿಸಲು ಪ್ರಮಾಣದಲ್ಲಿ ಮೊದಲು ಮೊದಲಿಗೆ ಸೂಕ್ಷ್ಮರೂಪವನ್ನು (ಪ್ರಕೃತಿ ಮುಂತಾದವನ್ನು) ನಿರೂಪಿಸಿದ್ದಾರೆ. ನಂತರ ಮತ್ತು ಮೊದಲು ಲಕ್ಷ್ಮಿಯನ್ನು ಶ್ರೀ ಎಂದು ಹೇಳಿದ್ದು ಅಧೀನವೆಂದು ಹೇಳಿದ್ದು ಸೂಕ್ಷ್ಮವಸ್ತುಗಳ ಸತ್ತಾ ಲಕ್ಷ್ಮಿಯ ಅಧೀನವೆಂದು ಮುಖ್ಯತೆಯನ್ನು ಆಖ್ಯಾನಿಸಲು ಎಂದು ತಿಳಿಯಬೇಕು. 'ಅಸುಪ್ತಃ ಸುಪ್ತಾನಭಿಚಾಕಶೀತಿ' ಎಂಬ ಶ್ರುತ್ಯರ್ಥ ಗರ್ಭವಾಗಿದೆ (ಮಾಹಾತ್ಮ್ಯವಾಣಿ) ಮಾತ್ಸ್ಯವಾಣಿಯು.

ಮೂಲದಲ್ಲಿ ಆಸ ಎಂಬುದು ವಿಭಕ್ತಿಪ್ರತಿರೂಪಕ ಅವ್ಯಯವು. 'ಯಥಾ ದ್ರೋಣೇರುಲೂಕೇನ ಕೃತಮಪ್ಯಾಸ ಬೋಧಕಮ್' ಎಂಬ ಅನುವಾಖ್ಯಾನದ ಸುಧೆಯಲ್ಲಿ 'ನನ್ವಾಸೇತಿ ಕಥಂ ಅಸ್ತೇರ್ಭೂರಿತ್ಯಸ್ಯ ನಿತ್ಯತ್ವಾತ್' ಎಂದು ಶಂಕಿಸಿ ವಿಭಕ್ತಿಪ್ರತಿರೂಪಕಂ ಚ ಅವ್ಯಯಂ ಭವತೀತಿ ವಚನಾದವ್ಯಯಮೇತದಿತಿ ನ ದೋಷಃ । ವಿಭಕ್ತಿಪ್ರತಿರೂಪಕಮವ್ಯಯಮಿತ್ಯುಚ್ಯತೇ । ನ ಚೈವಂ ವಿಭಕ್ತಿರಸ್ತಿ । ಆಮಂತಾನುಪ್ರಯೋಗಸ್ಯ ವಿದ್ಯಮಾನತ್ವಾತ್ ಎಂದಿದ್ದಾರೆ. ಗತ್ಯರ್ಥಕವಾದ ಅಸ ಧಾತುವಿಗೆ ಧಾತೂನಾಂ ಅನೇಕಾರ್ಥತ್ವಾತ್ ಅಭೂತ್ ಎಂದರ್ಥ ಮಾಡಬೇಕು.

'ಯದಿದಮುಪಾಸತೇ' ಎಂಬ ತಲವಕಾರಭಾಷ್ಯದಲ್ಲಿರುವ 'ಆಸ ತೇ ವಿನಿಯಾಮಕಂ' ಎಂಬಲ್ಲಿರುವ ಆಸ ಎಂಬುದಕ್ಕೆ ಶ್ರೀಸತ್ಯಪ್ರಿಯತೀರ್ಥರು ಗುರುರಾಜರು ಹೀಗೆಯೇ ವ್ಯಾಖ್ಯಾನಿಸಿದ್ದಾರೆ.

**ಬಹಿಃ** ಹೊರಗೆ **ಅನ್ಯತ್ ಕಿಂ ಚ** ಯಾವುದೂ **ನಾಸ** ಇರಲಿಲ್ಲ ಅಂತರಂ ಉದರಸ್ಥಿತಂ ವಾ ಆಸ ಇತ್ತು ಹೀಗೂ ಅರ್ಥ ಮಾಡಬಹುದು. ಈ ಪದ್ಯವನ್ನು 'ಸದೇವ ಸೋಮ್ಯೇದಮಗ್ರ ಆಸೀತ್' ಎಂಬ ಶ್ರುತಿ ವ್ಯಾಖ್ಯಾನ ಮಾಡುವಾಗ ಇದಮಗ್ರೇ ಷಷ್ಠ್ಯರ್ಥೇ ದ್ವಿತೀಯಾ ಎಂದು ಬೃಹದ್ಭಾಷ್ಯದಲ್ಲಿ ಹೇಳಿದಂತೆ ಯೋಜಿಸಬಹುದು. ಅಂದರೆ ಇದಂ ಅಸ್ಯ ಜಗತಃ ಅಗ್ರೇ ಯಸ್ಯ ಮಮ ರೂಪಂ ತಪಸಾ ತ್ವಯಾ ದೃಷ್ಟಂ ತದಹಮೇವ. ಅಂದರೆ ನನ್ನ ಈ ರೂಪಕ್ಕೂ ಅದಕ್ಕೂ ಭೇದವಿಲ್ಲವೆಂದರ್ಥ. ಉಳಿದದ್ದೆಲ್ಲದಕ್ಕೆ ಹಿಂದಿನಂತೆಯೇ ಅರ್ಥವನ್ನು ತಿಳಿಯಬೇಕು. (ಮೇಲೆ ಮಾಡಿದ ವ್ಯಾಖ್ಯಾನ ದ್ವಿತೀಯಾ ಇಟ್ಟುಕೊಂಡೇ ಇದಂ ರೂಪಂ ಎಂದು.)

ಇನ್ನು ಬೃಹದ್ಭಾಷ್ಯದಲ್ಲಿ ಭಾಷ್ಯಕಾರರು ಪ್ರಥಮಪ್ರಾಪ್ತವಾದ ಪ್ರಥಮಾವನ್ನು 'ಸಪ್ತಸು ಪ್ರಥಮಾ' ಎಂಬ ಮಹಾವ್ಯಾಕರಣಸೂತ್ರದಿಂದ ಅನಾಯಾಸ

ಸಂಪಾದನೀಯ ಷಷ್ಠ್ಯರ್ಥ ಉಳ್ಳದ್ದನ್ನು ಬಿಟ್ಟು ದ್ವಿತಿಯಾವನ್ನು ಏಕೆ ಸ್ವೀಕರಿಸಿದರು ಎಂಬ ಶಂಕೆ ಬರುವದು. ಈ ಶಂಕೆಯು ಯದ್ಯಪಿ ಯಾರಿಂದಲೂ ಉತ್ತರಿಸಲಾಗದ್ದು. ಆದರೂ ಗುರುಭಕ್ತಿಗೆ ಯಾವುದು ಅಸಾಧ್ಯ. ಆದ್ದರಿಂದ ಉತ್ತರಿಸುವೆವು ಎನ್ನುತ್ತಾರೆ ಶ್ರೀಪಾದರು. ಸ್ವತಂತ್ರೇಚ್ಛುಗಳಾಗಿದ್ದರೂ ಪ್ರಥಮಾ ಎಂದು ಹೇಳಿದರೆ ಏಳು ವಿಭಕ್ತಿಗಳ ಅರ್ಥಗಳು ಉಪಸ್ಥಿತವಾಗಬೇಕು. ದ್ವಿತೀಯಾ ಎಂದು ಹೇಳಿದರೆ ಆರು ವಿಭಕ್ತ್ಯರ್ಥಗಳ ಉಪಸ್ಥಿತಿ ಸಾಕು. ಕಾರಣ ಅರ್ಥೋಪಸ್ಥಿತಿ ಲಾಘವದಲ್ಲಿ ಮನಸ್ಸಿಟ್ಟು 'ಷಟ್ಸು ದ್ವಿತೀಯಾ' 'ಯಸ್ಮಾಚ್ಚ' ಎಂಬ ಛಾಂದೋಗ್ಯಭಾಷ್ಯದಲ್ಲಿ ತಾವೇ ಹೇಳಿದ ರೀತಿಯಿಂದ ಎಂದಿದ್ದಾರೆ. ಎರಡೂ ಪಕ್ಷದಲ್ಲಿ ಮಹಾವ್ಯಾಕರಣ ಸಮ್ಮತಿ ತಾನೇ ಹೇಳಬೇಕು. ಒಬ್ಬ ಅಜ್ಞಾನಿಯು ಮೂಗೆಳೆಯುವನು ಅವನು ಸಂತುಷ್ಟನಾಗಲಿ ಎಂದು ಷಷ್ಠ್ಯರ್ಥೇ ದ್ವಿತೀಯಾ ಅಥವಾ ಯೋಗವಿಭಾಗ ಮಾಡಿ ಕೇವಲ ದ್ವಿತೀಯಾ ಎಂದು ಹೇಳಬಹುದು. ಅದು ಸಹ ಶೇಷಪೂರ್ತಿಯಿಂದ ಅಭಿಲಷಿತ ಸರ್ವನಿರ್ವಾಹಕವಾಗಿದೆ. ಪ್ರಥಮಾ ಹಾಗಲ್ಲ. ಕಾರಣ ಹೀಗೆ ಹೇಳಿರುವರು. ಎಂದು ಸಮಾಧಾನ ತಿಳಿಯಬೇಕು.

**ಚಟ್ಟಿಆಚಾರ್ಯರು-** ಅಹಂ ಎಂಬುದು ಷಷ್ಠೀವಿಭಕ್ತಿಯ ಅರ್ಥದಲ್ಲಿ ಹೇಳಿರುವ ಪ್ರಥಮಾ. 'ಸಪ್ತಸು ಪ್ರಥಮಾ' ಎಂದು ಸೂತ್ರವಿದೆ. (ವಿಜಯಧ್ವಜೀಯ) 'ಸತೋ ಬಂಧುಮಸತಿ ನಿರವಿಂದನ್' ಎಂಬುದರಿಂದ ಇದೇ ಪ್ರಳಯದಲ್ಲಿಯೂ ಇದ್ದುದೆಂದು ಶ್ರುತಿಯು ತಿಳಿಸುವದು. 'ಸಂಜ್ಞಾನಮಾತ್ರಂ' ಎಂಬುದರಿಂದ ತಪಃಫಲವಾಗಿ ವ್ಯಕ್ತವಾದ ಶ್ರೀಹರಿಯ ರೂಪವು ಪ್ರಾಕೃತವಲ್ಲ. ಅನುಪಪತ್ತಿ ಇಲ್ಲವೆಂದು ತಿಳಿಸಿರುವರು. ಸಂ ಎಂಬುದು ಜ್ಞಾನಕ್ಕೂ ಸ್ವರೂಪಕ್ಕೂ ಅಭೇದವನ್ನು ಸೂಚಿಸುವದು. ಮಾತ್ರವೆಂಬುದರಿಂದ ಅವತಾರರೂಪಗಳೂ ಶುದ್ಧಜ್ಞಾನಾತ್ಮಕಗಳೇ ಎಂದು ಸೂಚಿತವಾಯಿತು. 'ಸತ್ಯಂ ಜ್ಞಾನಂ...' ಎಂದು ಶ್ರುತಿಯಲ್ಲಿದೆ. 'ತದವ್ಯಕ್ತಮಾಹ ಹಿ' ಎಂಬ ಸೂತ್ರವು ಶ್ರೀಹರಿಯು ಅವ್ಯಕ್ತನೆಂದು ಸಮರ್ಥಿಸುವದು. (ಸೂಕ್ಷ್ಮತಮನೆಂದರ್ಥ) **ಪ್ರಸುಪ್ತಮಿವ** ಎಂದು ಹೇಳಿದ್ದರಿಂದ ಶ್ರೀಹರಿಯು ಮಲಗುವನೆಂಬ ಮಾತು ಲೋಕವ್ಯಾಮೋಹನಕ್ಕೆಂದೂ ಅಜ್ಞಾನಾತ್ಮಕ ನಿದ್ರೆ ಅವನಿಗಿಲ್ಲವೆಂದೂ ಸೂಚಿತವಾಯಿತು. ಲಕ್ಷ್ಮಿಯನ್ನು ಬಿಟ್ಟು ಇರುವ ಎಲ್ಲರೂ ಸ್ವಾಪಾವಸ್ಥಾನ ಹೊಂದುವವರು. ವಿಶ್ವತಃ (ಭಿನ್ನಂ) ಎಂದು ಹೇಳಿದ್ದರಿಂದ ಶ್ರೀಹರಿಯಲ್ಲಿ ಮುಖ್ಯವಾಗಿ ಲೀನವಾದಲ್ಲಿ ಅವನಿಗೆ ಅದಕ್ಕೂ ಭೇದವೇ ಇಲ್ಲದೆ ಹೋಗುವದು ಎಂಬ ಶಂಕೆಯು ನಿವಾರಿತವಾಯಿತು.

ಪ್ರಳಯಕಾಲದಲ್ಲಿ ಜಡಪ್ರಕೃತಿಯು ಸ್ಥೂಲರೂಪವನ್ನು ಕಳೆದುಕೊಂಡು ಸೂಕ್ಷ್ಮರೂಪದಿಂದ ಶ್ರೀಹರಿಯಲ್ಲಿರುವದು. ಅದರ ಅಭಿಮಾನಿ ಲಕ್ಷ್ಮೀದೇವಿಯು ವಿಷ್ಣುವಿನಿಂದ ಭಿನ್ನವಾದುದರಲ್ಲಿ ಆದರವಿಲ್ಲದ್ದ ವಿಷಯವನ್ನು ತಾತ್ಪರ್ಯೋದಾಹೃತ ಮಾತ್ಸ್ಯಪುರಾಣವಾಕ್ಯವು ತಿಳಿಸುವದು. ಆದ್ದರಿಂದ ಯಾವ ಶಂಕೆಗೆ ಅವಕಾಶವಿಲ್ಲ.

ಅಂತೂ ಸೃಷ್ಟಿಕಾಲದಲ್ಲಿ ನಾನಾವರ್ಣಗಳನ್ನು ಸ್ವೀಕರಿಸಿ ಜ್ಞಾನಾತ್ಮಕ ಅವಯವವುಳ್ಳ ಯಾವ ಶ್ರೀಹರಿಯ ರೂಪವು ವ್ಯಕ್ತವಾಗುವದೋ ಆ ರೂಪವೇ ಪ್ರಲಯಕಾಲದಲ್ಲಿ ತನ್ನ ಉದರದಲ್ಲಿ ಪ್ರಪಂಚವನ್ನು ಲೀನಮಾಡಿಕೊಂಡು ಯಾವಾಗಲೂ ಪ್ರಬುದ್ಧನಾಗಿದ್ದರೂ ತನ್ನಲ್ಲಿ ಲೀನವಾದಂತಿದ್ದ ಶ್ರೀತತ್ತ್ವದೊಂದಿಗೆ ಕಣ್ಣು ಮುಚ್ಚಿ ಅಪರಿಚ್ಛಿನ್ನವಾಗಿರುವ ಶ್ರೀಹರಿಯ ರೂಪವೆಂದು ಅಭಿಪ್ರಾಯವಾದ್ದರಿಂದ ನಿರ್ಗುಣ-ಸಗುಣ-ರೂಪದ್ವಯ ಕಲ್ಪನೆಯು ಅಪ್ರಾಮಾಣಿಕವೆಂದು ಭಾವ. ।।೪೨।।

ನೀನು ನೋಡಿದ ರೂಪವೇ ಪ್ರಲಯದಲ್ಲಿತ್ತು. ಬೇರೆ ಯಾವುದೂ ಇರಲಿಲ್ಲ ಎಂದು ಮೂಲಶ್ಲೋಕದಿಂದ ಹೇಳಿದ್ದರಿಂದ ಲಕ್ಷ್ಮಿಯೂ ಇರಲಿಲ್ಲ ಎಂದೂ ಅನೇಕ ರೂಪವುಳ್ಳದೆಂದು ತಿಳಿದುಬರುವದು. ಅದು ಹೇಗೆ ಸಾಧ್ಯವೆಂಬ ಶಂಕೆಯನ್ನು ತಾತ್ಪರ್ಯೋದಾಹೃತ ಮಾತ್ಸ್ಯ (ಮಾಹಾತ್ಮ್ಯ) ವಾಕ್ಯದಿಂದ ಪರಿಹರಿಸಿಕೊಳ್ಳಬೇಕು. ಅಲ್ಲಿ ಪರಮಾತ್ಮನಿಗೆ ನಾನಾ ವರ್ಣವನ್ನು ಬಿಟ್ಟು ಉಳಿದವು ಇರಲಿಲ್ಲವೆಂದು ಸ್ಪಷ್ಟಪಡಿಸಿದೆ. ಕಾರಣ ಲಕ್ಷ್ಮಿ ಇಲ್ಲದೆ ಅವಸ್ಥಾನ ಶಂಕೆ ಪರಿಹೃತವಾಯಿತು ಎಂದು ವಿಜಯಧ್ವಜರ ಭಾವವನ್ನು ತಿಳಿಯಬೇಕು. ।।೪೨।।

ಲಯವನ್ನು ಹೇಳಿ ಸೃಷ್ಟಿಯನ್ನು ಹೇಳುತ್ತಾರೆ.

**ಮಯ್ಯನಂತಗುಣೇಽನಂತೇ ಗುಣತೋಽನಂತವಿಗ್ರಹೇ ।**
**ಯದಾಸೀತ್ ತತ ಏವಾದ್ಯಃ ಸ್ವಯಂಭೂಃ ಸಮಭೂದಜಃ ।।೪೮।।**

**ಅನಂತಗುಣೇ** ಅಸಂಖ್ಯಾತ ಜ್ಞಾನಾದಿಗುಣಗಳುಳ್ಳ **ಗುಣತಃ** ಒಂದೊಂದು ಗುಣದಿಂದಲೂ **ಅನಂತೇ** ಅಸಂಖ್ಯಾತನಾದ **ಗುಣತಃ ಅನಂತವಿಗ್ರಹೇ** ಗುಣಾತ್ಮಕ ಅನಂತ ದೇಹವುಳ್ಳ **ಮಯಿ** ನನ್ನಲ್ಲಿ (ನಾಭಿಯಲ್ಲಿ) **ಯದಾಸೀತ್** 'ಅಜಸ್ಯ ನಾಭಾವಧ್ಯೇಕಮರ್ಪಿತಂ' ಎಂಬ ಪ್ರಮಾಣಸಿದ್ಧವಾದ ಕಮಲವು ಆವಿರ್ಭೂತವಾಯಿತೋ **ತತಃ ಏವ** ಆ ಪದ್ಮದಿಂದಲೇ **ಆದ್ಯಃ** ಜಗದಾದಿಯಲ್ಲಿ ಹುಟ್ಟಿದ **ಸ್ವಯಂಭೂಃ** ಚತುರ್ಮುಖ ಬ್ರಹ್ಮನು (ಈಗ ರೂಢ ಶಬ್ದವಿದು) **ಸಮಭೂತ್** ಹುಟ್ಟಿದರು

ಆದ್ದರಿಂದಲೇ **ಅಜಃ** ಅಕಾರವಾಚ್ಯಪರಮಾತ್ಮನಿಂದ ಹುಟ್ಟಿದ್ದರಿಂದ ಅಜ ಶಬ್ದವಾಚ್ಯನು. ಆತ್ ಜಾತ ಇತಿ ಅಜಃ.

ಈ ಶ್ಲೋಕದಲ್ಲಿ **ಗುಣತಃ** ಸತ್ವಾದಿಗುಣಗಳಿಂದ **ಅನಂತವಿಗ್ರಹೇ** ದೇವ-ದಾನವ -ಮಾನವ-ತಿರ್ಯಗಾದಿ ಅಪರ್ಯವಸಿತವಾದ **ಶರೀರೇ ಮಯಿ** ಎಂದು ಅನ್ವಯ (ಲಾಪನ) ಹೇಳುವುದರ ಲೋಪನಂ ವಿಧಿತ್ಸುಃ ಲೋಪಗೊಳಿಸಲು ಇಚ್ಛಿಸಿ ಈ ರೀತಿಯಾದ ಅನ್ವಯ ಅಸಾಧುವಾದುದೆಂದು ತಿಳಿಸಲು ಸ್ವಯಂ ಅನ್ವಯ ತೋರಿಸಿ ಪ್ರಮಾಣದಿಂದ ದೃಢಪಡಿಸುವರು.

### ತಾತ್ಪರ್ಯ

**ಗುಣತೋऽನಂತೇ ।**
**ಪ್ರತ್ಯೇಕಶೋ ಗುಣಾನಾಂ ತು ನಿಸ್ಸೀಮತ್ವಮುದೀರ್ಯತೇ ।**
**ತದಾನಂತ್ಯಂ ತು ಗುಣತಸ್ತೇ ಚಾನಂತಾ ಹಿ ಸಂಖ್ಯಯಾ ।**
**ಅತೋऽನಂತಗುಣೋ ವಿಷ್ಣುಃ ಗುಣತೋऽನಂತ ಏವ ಚ ॥**

-ಇತಿ ತಂತ್ರ ಭಾಗವತೇ॥

ಪರಮಾತ್ಮನ ಗುಣಗಳಿಗೆ ಎಲ್ಲ ಗುಣಗಳಿಗೆ ಸೇರಿ ಆನಂತತ್ವ ಹೇಳಿದಾಗ ಅನಂತ ಶಬ್ದಕ್ಕೆ ಸಂಖ್ಯಾಪರಿಚ್ಛೇದರಾಹಿತ್ಯವೆಂದರ್ಥ. ಯಾವಾಗ ಪ್ರತ್ಯೇಕಗುಣಗಳಿಗೆ ಆನಂತ್ಯ ಹೇಳುವರೋ ಆಗ ಸೀಮಾ ಪರಿಚ್ಛೇದರಾಹಿತ್ಯ ಅನಂತ ಶಬ್ದಾರ್ಥ ಎಂದು ಹೇಳಬೇಕು. ಇಲ್ಲವಾದರೆ ಒಂದರಲ್ಲಿ ಸಂಖ್ಯಾಪರಿಚ್ಛೇದರಾಹಿತ್ಯ ವ್ಯಾಹತವಾದುದು ಎಂದು ಭಾವ.

**ಹಿ** ಯಾವ ಕಾರಣ ಗುಣತಃ ಅನಂತ್ಯವು ಗುಣಗಳಿಗೆ ನಿಸ್ಸೀಮತ್ವವೇ ಇನ್ನು ಆ ಗುಣಗಳು ಸಂಖ್ಯೆಯಿಂದ ಅನಂತವಾದವು ಕಾರಣ ವಿಷ್ಣುವು ಅನಂತಗುಣತಃ ಅನಂತ ಎಂದು ಹೇಳಲ್ಪಡುವನು.

ಇಲ್ಲಿ 'ಸಾಮಸೀಮೇ ಸ್ತ್ರಿಯಾಮುಭೇ' ಎಂಬ ಅಮರದ ಪ್ರಕಾರ ಸೀಮಾ ಶಬ್ದ ಅಕಾರಾಂತ.

ಪರಮಾತ್ಮ ತನ್ನ ಗುಣಗಳ ಇಯತ್ತಾವನ್ನು ತಿಳಿಯುವನೆ ಇಲ್ಲವೇ. ಉಭಯ ಪಕ್ಷಗಳು ಅಭಯದಗಳಲ್ಲ. ತಿಳಿಯುತ್ತಾನೆ ಎಂದು ಹೇಳಿದರೆ ಅನಂತತ್ವ ಹೋಗುವದು ತಿಳಿಯುವುದಿಲ್ಲ ಎಂದರೆ ಅಸರ್ವಜ್ಞತ್ವ ಬರುವದು. ಎಂದರೆ ಹಾಗಲ್ಲ. ಇರುವದನ್ನೆಲ್ಲ

ತಿಳಿಯುವುದೇ ಸಾರ್ವಜ್ಞ್ಯ. ಭಗವಂತನ ಗುಣಗಳ ಸಂಖ್ಯೆಗೆ ಇಯತ್ತಾ ಇಲ್ಲ. ಆದ್ದರಿಂದ ಅದನ್ನು ತಿಳಿಯದಿದ್ದರೆ ಸಾರ್ವಜ್ಞ್ಯಹಾನಿ ಇಲ್ಲ. ತಿಳಿದಿಲ್ಲವಾದ್ದರಿಂದ ಇಯತ್ತೆ ಇಲ್ಲ. ಹೀಗೆಂದು ಏಕಾದಶತಾತ್ಪರ್ಯದಲ್ಲಿ ಹೇಳಿದೆ.

**ಅನಂತಮಿತಿ ವೇತ್ತಿಶಸ್ತ್ವನಂತಂ ತ್ವಂತವತ್ತಥಾ ।**
**ಅನಂತಸ್ಯ ತು ಸಂಖ್ಯಾನೇ ನ ತು ಸರ್ವಜ್ಞತಾ ಭವೇತ್ ॥**

ಅನಂತವಾದುದನ್ನು ಎಣಿಸಿದರೆ ಇಷ್ಟೇ ಎಂದು ತಿಳಿದರೆ ಅದು ಭ್ರಾಂತಿಯಾಗುವದು ಎಂದು ಭಾವ. ।।೪೮।।

**ಸ ವೈ ಯದಾ ಮಹಾದೇವೋ ಮಮ ವೀರ್ಯೋಪಬೃಂಹಿತಃ ।**
**ಮೇನೇಽಕಲ್ಪಮಿವಾತ್ಮಾನಮುದ್ಯತಃ ಸರ್ಗಕರ್ಮಣಿ ।।೪೯।।**

**ಅಥ ಮೇಽಭಿಹಿತೋ ದೇವಸ್ತಪೋಽತಪ್ಯತ ದಾರುಣಮ್ ।**
**ನವ ವಿಶ್ವಸೃಜೋ ಯುಷ್ಮಾನ್ ಯೇನಾದಾವಸೃಜದ್ ವಿಭುಃ ।।೫೦।।**

**ಸರ್ಗಕರ್ಮಣಿ** ಸೃಷ್ಟಿಕಾರ್ಯದಲ್ಲಿ **ಉದ್ಯತಃ** ಉದ್ಯುಕ್ತವಾದ **ಮಮ** ನನ್ನ **ವಿರ್ಯೋಪಬೃಂಹಿತಃ** ಸಾಮರ್ಥ್ಯದಿಂದ ಅಭಿವ್ಯಕ್ತವಾದ ಸ್ವರೂಪಶಕ್ತಿಯುಳ್ಳ **ಮಹಾದೇವಃ** ದೇವೋತ್ತಮರಾದ **ಸಃ** ಬ್ರಹ್ಮದೇವರು **ಯದಾ** ಯಾವಾಗ **ಆತ್ಮಾನಂ** ತಮ್ಮನ್ನು **ಅಕಲ್ಪಮಿವ** ಸೃಷ್ಟಿಕಾರ್ಯದಲ್ಲಿ ಅಸಮರ್ಥನೆಂಬಂತೆ **ಮೇನೇ** ತಿಳಿದರೋ **ಅಥ** ಆಗ **ಮೇ** ನನ್ನಿಂದ **ಅಭಿಹಿತಃ** ತಪ ತಪ ಎಂದು ಅಶರೀರವಾಣಿಯಿಂದ ಹೇಳಲ್ಪಟ್ಟವರಾಗಿ **ದೇವಃ** ಬ್ರಹ್ಮದೇವರು **ದಾರುಣಂ** ಮತ್ತೊಬ್ಬರಿಂದ ಮಾಡಲಾಗದ ಭಯಂಕರವಾದ **ತಪಃ** ತಪಸ್ಸನ್ನು **ಅತಪ್ಯತ ವೈ** ಮಾಡಿದರಲ್ಲವೇ **ಯೇನ** ಯಾವ ಆ ತಪಸ್ಸಿನ ಪ್ರಭಾವದಿಂದ **ವಿಭುಃ** ಸಮರ್ಥರಾದ ಬ್ರಹ್ಮದೇವರು **ಆದೌ** ಎಲ್ಲಕ್ಕೂ ಮೊದಲು **ನವ ವಿಶ್ವಸೃಜಃ** ಒಂಭತ್ತು ಪ್ರಜೇಶ್ವರರಾದ **ಯುಷ್ಮಾನ್** ನಿಮ್ಮನ್ನು **ಅಸೃಜತ್** ಸೃಷ್ಟಿಸಿದರು. ।।೪೯-೫೦।।

೪೯ನೇ ಶ್ಲೋಕದ ವಿಶೇಷಾರ್ಥ. ಮಹಾಂಶ್ಚಾಸೌ ದೇವಶ್ಚ ಮಹಾದೇವಃ ಎಂದರೆ ದೇವಶ್ರೇಷ್ಠನೆಂದರ್ಥ. ಸಾಧನಸಂಪೂರ್ತಿಯಾಗದೇ ಇದ್ದದ್ದರಿಂದ ಅಸಮರ್ಥನೆಂದು ತಿಳಿದನು. ವೈ ಶಬ್ದವು ಸ ಭಾಣಮಕರೋತ್ । ಭಾರೂಪವೂ (ಜ್ಞಾನ ಪ್ರಕಾಶ ರೂಪನು) ಣರೂಪ ಸುಖರೂಪನಾದ್ದರಿಂದ ಭಗವಂತನು ಭಾಣ್ ನಾಮಕನಾಗಿದ್ದಾನೆ. ಅವನಿಗೆ ವ್ಯಂಜಕವಾದ್ದರಿಂದ ಭಾಣನವೆಂದರೆ ವಾಕ್. 'ನ

ರೇಮೇ ಸ ತತೋ ಬ್ರಹ್ಮಾ ತಸ್ಮಾದೇಕಸ್ಯ ನೋ ರತಿಃ' ಮುಂತಾದ ಬೃಹದಾರಣ್ಯಭಾಷ್ಯ ಪ್ರಕಾರ ಯೋಗ್ಯತೆಯನ್ನು ತಿಳಿಸುವದು.

ಅಥವಾ ಮೇನೇ ಲಕ್ಷ್ಮೀನಾಥನಾದ ನಾನು ಇದ್ದರೇನೇ **ಸರ್ಗಕರ್ಮಣಿ** ಸೃಷ್ಟಿ ಕ್ರಿಯೆಯಲ್ಲಿ **ಯತಃ** ಯಾವ ಬ್ರಹ್ಮನಿಗೆ **ಮುತ್** ಸಂತೋಷವು ನನ್ನ ಸಹಾಯವಿಲ್ಲದಿದ್ದರೆ ಆತ್ಮಾ ಮನಃ ನ ಸೃಷ್ಟಿಕರ್ಮಣಿ ಸೃಷ್ಟಿಯಲ್ಲಿ ಮನಸ್ಸಿಲ್ಲದವರಾದರೋ **ಸಃ** ಅವರು **ಸ್ವಂ** ತಮ್ಮನ್ನು **ಅಕಲ್ಪಮಿವ** ಅಸಮರ್ಥರೆಂದೇ **ಮೇನೇ** ತಿಳಿದರೆಂದರ್ಥ. ಆತ್ಮಾ ನ ಮುತ್ ಯತಃ ಎಂದು ಪದಚ್ಛೇದ ಮಾಡಿದೆ. ಇಲ್ಲಿ ಮಹಾದೇವನೆಂದರೆ ವಾಮದೇವ (ರುದ್ರ)ನೇಕಾಗಬಾರದು ಎಂಬ ಶಂಕೆಗೆ ಉತ್ತರ ಆತ್ಮಾ ಎಂಬುದು. 'ಆತ್ಮಾ ವಿರಿಂಚಃ ಸುಮನಾಃ' ಎಂದು ಬೃಹದ್ಭಾಷ್ಯದಲ್ಲಿ ಹೇಳಿದ್ದರಿಂದ ಆತ್ಮಾ ಎಂದರೆ ಬ್ರಹ್ಮದೇವರು **ಸರ್ಗಕರ್ಮಣಿ** ಸೃಷ್ಟಿಕಾರ್ಯದಲ್ಲಿ **ಯತಃ ಅಪಿ** ನಿಯಮಿತನಾದರೂ ಏಕಾಕಿಯಾದ್ದರಿಂದ **ನ ಮುತ್ ಸನ್** ಸಂತೋಷವಿಲ್ಲದವನಾಗಿ **ಅಕಲ್ಪಂ** ಅಸಮರ್ಥನೆಂದು **ಮೇನೇ** ತಿಳಿದನು. 'ಮೇನೇ ಖಿಲಂ' ಎಂಬ ಪಾಠವೂ ಎಲ್ಲರಿಗೂ ಮನೋಹರವಾದ ಪಾಠವು. ಖಿಲಂ ಸವೇಧಂ ದುರ್ಬಲನೆಂದರ್ಥ ದುರ್ಬಲನೆಂದು ತಿಳಿದವನೆಂದರ್ಥ. ಅಥವಾ ಅಸಮಸ್ತಂ ಸಾಹಿತೀವಿರಹಿತಂ ಎಂದರ್ಥ. ಅಂದರೆ ಅಖಿಲ ಎಂದರೆ ಸಮಸ್ತ ಖಿಲ ಎಂದರೆ ಅಸಮಸ್ತ ಸಹಾಯರಹಿತನೆಂದು ತಿಳಿದನೆಂದರ್ಥ. 'ಖಿಲ ಪದ್ಮವೇಧಯೋಃ' ಎಂದು ವಿಶ್ವವಿದೆ. ಯತೋ ನ ಮುತ್ ತತೋ ಅಕಲ್ಪಂ ಮೇನೇ ಎಂದೂ ಅನ್ವಯಿಸಬಹುದು. ಸಂತೋಷವಿಲ್ಲದ್ದರಿಂದ ಅಸಮರ್ಥನೆಂದು ತಿಳಿದನೆಂದರ್ಥ. 'ಸ ದರ್ಶಯತಿ ಮೋಹಾಯ ವಿಷ್ಣೋಃ ಪ್ರೀತ್ಯರ್ಥಮೇವ ಚ' ಎಂದು ಹೇಳಿರುವದರಿಂದ ಅಜ್ಞಾನ ಭಯಗಳು ಕೆಲವೇ ಸಲ ಇವೆ. **ಯದಾ** ಯಾವ ಕಾರಣ **ಮಹಾದೇವಃ** ವಿಷ್ಣುವು **ಆತ್ಮಾನಮುತ್** ತನ್ನ ಪ್ರಾಣಪ್ರತೋಷಕನೋ **ತದಾ** ಆ ಕಾರಣದಿಂದ **ಕಲ್ಪಮಪಿ ಮೇನೆ** ಸಮರ್ಥನೆಂದೂ ತಿಳಿದನು. ಅಥವಾ 'ಅಮಹಾತ್ ಏವಃ' ಎಂದು ಭೇದ ಅಮಹಾತ್ ಅನುತ್ಸವಾತ್ ಭಯದಿಂದ ಎಂದರ್ಥ. ಏಕತ್ವಾತ್ ಏ ವಾತೀತಿ ವಃ ಏ ಚಾऽಸೌ ವಶ್ಚ ಏವಃ ಒಬ್ಬನೇ ಸಂಚರಿಸುತ್ತ ಎಂದರ್ಥ. ಗೀತಾತಾತ್ಪರ್ಯನ್ಯಾಯ ದೀಪಿಕೆಗಳಲ್ಲಿ 'ಏಕಃ ಸರ್ವಾಧಿಕೋ ಜ್ಞೇಯಃ ಏಕ ಏವ ಕರೋತಿ ಯತ್ ಇತಿ ಚ । ಏಕತ್ವಾತ್ ಏ ಕರೋತೀತಿ ಕಃ ಎಂದು ಹೇಳಿದೆ. 'ಯದಾಹ ಶೌನಕೊ ದೇವದತ್ತಾಯ ವರ್ಣಸ್ಯ ವರ್ಣಯೋರ್ಲೋಪೋ ಬಹುನಾಂ ವ್ಯಂಜನಸ್ಯ ಚ' ಎಂದು ।।೪೯-೫೦।।

ಕಥೆಯನ್ನು ಹೇಳಿದ್ದರಿಂದ ಪ್ರಕೃತಕ್ಕೇನು ಮಾಡಿದಂತಾಯಿತು ಎಂದರೆ ಸೃಷ್ಟಿಕಾರ್ಯವನ್ನು ಈ ರೀತಿಯಾಗಿ ಮಾಡು ಎಂದು ಹೇಳುವನು-

**ಏಷಾ ಪಂಚಜನಸ್ಯಾಂಗ ದುಹಿತಾ ವೈ ಪ್ರಜಾಪತೇಃ ।**
**ಅಸಿಕ್ನೀ ನಾಮ ಪತ್ನೀತ್ವೇ ಪ್ರಜೇಶ ಪ್ರತಿಗೃಹ್ಯತಾಂ ॥೫೦॥**

**ಅಂಗ** ಎಲೋ ಪ್ರಜೇಶನಾದ ದಕ್ಷನೇ ಅಥವಾ ಇಷ್ಟನಾದ ದಕ್ಷನೇ ಅಂಗ ಇಷ್ಟ ಎಂದು ಛಾಂದೋಗ್ಯಭಾಷ್ಯದಲ್ಲಿ ಹೇಳಿದೆ. 'ಅಂಗ ಹೇ ಹಾ' ಎಂದು ಅಮರವಿದೆ. **ಪಂಚಜನಸ್ಯ ಪ್ರಜಾಪತೇಃ** ಪಂಚಜನನೆಂಬ ಪ್ರಜಾಪತಿಯ **ದುಹಿತಾ** ಮಗಳು **ನಾಮ ಅಸಿಕ್ನೀ** ನಾಮ ಎಂಬುದು ಲುಪ್ತತೃತೀಯಾಂತ ಅವ್ಯಯ. ಅಸಿಕ್ನೀ ಎಂಬ ಹೆಸರಿನವಳು **ಏಷಾ** ಇವಳು **ಪತ್ನೀತ್ವೇ ಪ್ರತಿಗೃಹ್ಯತಾಂ** ಹೆಂಡತಿಯಾಗಿ ಸ್ವೀಕರಿಸಲ್ಪಡಲಿ **ಅಂಗದುಹಿತಾ** ಸಾಕ್ಷಾತ್ ಶರೀರದಿಂದ ಹುಟ್ಟಿದವಳು ಸಾಕು ಮಗಳಲ್ಲ ಹೀಗೂ ಅರ್ಥ. ॥೫೦॥

**ಮಿಥುನವ್ಯವಾಯಧರ್ಮಸ್ತ್ವಂ ಪ್ರಜಾಸರ್ಗಮಿಮಂ ಪುನಃ ।**
**ಮಿಥುನವ್ಯವಾಯಧರ್ಮಿಣ್ಯಾಂ ಭೂರಿಶೋ ಭಾವಯಿಷ್ಯಸಿ ॥೫೨॥**

**ತ್ವಂ ಪುನಃ** ನೀನಾದರೋ **ಮಿಥುನವ್ಯವಾಯಧರ್ಮಾಃ ಸನ್** ಸ್ತ್ರೀಪುರುಷರ ಸಂಭೋಗವೇ ಧರ್ಮ ಉಳ್ಳವನಾಗಿ **ಮಿಥುನವ್ಯವಾಯಧರ್ಮಿಣ್ಯಾಂ** ಅದೇ ಧರ್ಮ ಉಳ್ಳ ಈ ಅಸಿಕ್ನಿಯಲ್ಲಿ **ಇಮಂ** ನೀನು ಮಾಡಬಯಸುವ **ಪ್ರಜಾಸರ್ಗಂ** ಪ್ರಜೆ ಎಂಬ ಸೃಜ್ಯವನ್ನು (ಪ್ರಜಾಸೃಷ್ಟಿಯನ್ನು) **ಭೂರಿಶಃ** ಬಹಳ ಸಲ ಬಹುಮುಖವಾಗಿ **ಭಾವಯಿಷ್ಯಸಿ** (ಮಾಡುವಿ) ಹುಟ್ಟಿಸುವಿ.

**ತತ್ವತ್ತೋಽಧಸ್ತಾತ್ ಪ್ರಜಾಃ ಸರ್ವಾ ಮಿಥುನೀಭೂಯ ಮಾಯಯಾ ।**
**ಮದೀಯಯಾ ಭವಿಷ್ಯಂತಿ ಹರಿಷ್ಯಂತಿ ಚ ಮೇ ಬಲಿಮ್ ॥೫೩॥**

**ತ್ವತ್ತಃ** ನಿನ್ನಿಂದ **ಅಧಸ್ತಾತ್** ಅನಂತರದ **ಸರ್ವಾಃ ಪ್ರಜಾಃ** ಎಲ್ಲ ಪ್ರಾಣಿಗಳು **ಮದೀಯಯಾ** ನನ್ನಿಂದ ಸೃಷ್ಟವಾದ **ಮಾಯಯಾ** ಸ್ತ್ರೀ ಎಂಬ ಪ್ರಕೃತಿಯೊಂದಿಗೆ **ಮಿಥುನೀಭೂಯ** ದಂಪತಿಗಳಾಗಿ 'ಮಿಥುನಂ ದಂಪತಿ ಯುಗೇ' ಎಂದು ವಿಶ್ವ. **ಮದೀಯಯಾ ಮಾಯಯಾ** ನನ್ನ ಸಾಮರ್ಥ್ಯದಿಂದ **ಭವಿಷ್ಯಂತಿ** ಮಕ್ಕಳಾಗಿ ಹುಟ್ಟುವರು **ಮೇ** ನನಗೆ **ಬಲಿಂ ಹರಂತಿ** ಪೂಜೆ ಮಾಡುವರು. **ಮದೀಯಯಾ ಮಾಯಯಾ** ನನ್ನ ಇಚ್ಛೆಯಿಂದ ಅಧೀನವಾದ ಪ್ರಕೃತಿಯಿಂದ ಎಂದೂ ಅರ್ಥ ಮಾಡಬಹುದು. ॥೫೩॥

**ಇತ್ಯುಕ್ತ್ವಾ ಮಿಷತಸ್ತಸ್ಯ ಭಗವಾನ್ ವಿಶ್ವಭಾವನಃ ।**
**ಸ್ವಪ್ನೋಪಲಬ್ಧಾರ್ಥ ಇವ ತತ್ರೈವಾಂತರ್ದಧೇ ಹರಿಃ ॥೫೪॥**

॥ ಇತಿ ಶ್ರೀಮದ್ಭಾಗವತೇ ಷಷ್ಠಸ್ಕಂಧೇ ಚತುರ್ಥೋಽಧ್ಯಾಯಃ ॥

**ವಿಶ್ವಭಾವನಃ** ಜಗತ್ತಿನ ಸೃಷ್ಟಿಕರ್ತನಾದ **ಭಗವಾನ್ ಹರಿಃ** ಐಶ್ವರ್ಯಶಾಲಿಯಾದ ಶ್ರೀಹರಿಯು **ಇತ್ಯುಕ್ತ್ವಾ** ಈ ರೀತಿ ಹೇಳಿ **ತಸ್ಯ ಮಿಷತಃ** ದಕ್ಷನು ನೋಡುತ್ತಿದ್ದಂತೆಯೇ **ತತ್ರೈವ** ಕಾಣಿಸಿಕೊಂಡ ಸ್ಥಳದಲ್ಲೇ **ಸ್ವಪ್ನೋಪಲಬ್ಧಾರ್ಥ ಇವ** ಕನಸಿನಲ್ಲಿ ಕಂಡ ಪದಾರ್ಥದಂತೆ **ಅಂತರ್ದಧೇ** ಕಾಣದಾದನು.

**ಮಿಷತಃ ವಿಶ್ವಭಾವನಃ** ದಕ್ಷನ ವ್ಯಾಪಾರ ವ್ಯಾಜದಿಂದ ಜಗದುತ್ಪಾದಕನಾದ ಎಂದೂ ಅರ್ಥ. 'ಮಿಷಂ ತು ಸ್ಪರ್ಶನೇ ವ್ಯಾಜೇ' ಎಂದು ವಿಶ್ವವಿದೆ. ಸಪ್ನೋಪಲಬ್ಧಾರ್ಥ ಇವ ಕನಸಿನಲ್ಲಿ ಕಂಡದ್ದರ ನಿವೃತ್ತಿಯಾದಂತೆ ಕಾಣದಾದನು. 'ಅರ್ಥೋಽಭಿಧೇಯರೈವಸ್ತುಪ್ರಯೋಜನನಿವೃತ್ತಿಷು' ಎಂದು ಅಮರವಿದೆ. ॥

ಇಲ್ಲಿಗೆ ನಾಲ್ಕನೇ ಅಧ್ಯಾಯವು ಮುಗಿಯಿತು

★★★★★




# ಅಥ ಶ್ರೀಮದ್ಭಾಗವತೇ - ಷಷ್ಠಸ್ಕಂಧೇ

## ಪಂಚಮೋಽಧ್ಯಾಯಃ

**ಸಾರಾಂಶ**

ಶುಕಾಚಾರ್ಯರು ಹೇಳಿದರು. ಶ್ರೀಹರಿಯ ಪ್ರಸಾದಕ್ಕೆ ಪಾತ್ರನಾದ ದಕ್ಷನು ಅಸಿಕ್ನಿಯಲ್ಲಿ ಹತ್ತು ಸಾವಿರ ಪುತ್ರರನ್ನು ಪಡೆದ. ಅವರೆಲ್ಲರೂ ಹರ್ಯಶ್ವ ಎಂಬ ಹೆಸರಿನವರು. ಪ್ರಜೋತ್ಪತ್ತಿಯನ್ನು ಮಾಡಲು ಆ ಹರ್ಯಶ್ವರಿಗೆ ದಕ್ಷನು ಆಜ್ಞಾಪಿಸಿದ. ಪಿತ್ರಾಜ್ಞಪ್ತರಾದ ಹರ್ಯಶ್ವರು ತಪಸ್ಸು ಮಾಡಲು ಪಶ್ಚಿಮ ದಿಕ್ಕಿಗೆ ಪ್ರಯಾಣಿಸಿದರು. ಸಿಂಧು-ಸಾಗರಸಂಗಮದಲ್ಲಿಯ ನಾರಾಯಣಸರೋವರಕ್ಕೆ ತೆರಳಿದರು. ಅಲ್ಲಿ ಅತ್ಯುಗ್ರವಾದ ತಪಸ್ಸಿನಲ್ಲಿ ತೊಡಗಿದರು.

ದೇವರ್ಷಿಗಳಾದ ನಾರದರು ಅಲ್ಲಿಗೆ ಬಂದರು. ಮಾತನಾಡಿದರು. ಹರ್ಯಶ್ವರೇ! ನೀವು ಪ್ರಜಾಸೃಷ್ಟಿಗಾಗಿ ತಪಸ್ಸನ್ನು ಮಾಡುತ್ತಿರುವಿರಿ. ಸೃಷ್ಟಿರೂಪವಾದ ಕಾರ್ಯ ಜ್ಞಾನಪೂರ್ವಕವಾಗಿರಬೇಕು. ಹತ್ತು ಪ್ರಶ್ನೆಗಳನ್ನು ನಾನು ಕೇಳುತ್ತೇನೆ. ಈ ಹತ್ತು ಪ್ರಶ್ನೆಗಳಿಗೆ ಉತ್ತರ ಗೊತ್ತಿವೆಯೇ? ವಿಚಾರಿಸಿರಿ. ನಂತರ ಪ್ರಜಾಸೃಷ್ಟಿಯನ್ನು ಮಾಡಲು ಮುಂದುವರಿಯಿರಿ ಎಂದು ಹೇಳಿದರು.

೧ ಭೂಮಿಯ ಕೊನೆ ಯಾವುದು? ೨. ಏಕಪುರುಷ ರಾಜ್ಯ ಯಾವುದು? ೩. ತಿರುಗಿ ಬರುವ ಮಾರ್ಗವಿಲ್ಲದ ಬಿಲ ಯಾವುದು? ೪. ಬಹುರೂಪಳಾದ ಸ್ತ್ರೀ ಯಾರು? ೫. ಪುಂಶ್ಚಲೀಪತಿಯಾದ ಪುರುಷ ಯಾರು? ೬. ಎರಡೂ ಕಡೆ ಹರಿಯುವ ನದೀ ಯಾವುದು? ೭. ಐದ್ಯೆದರ ಆಶ್ಚರ್ಯ ಗೃಹ ಯಾವುದು? ೮. ಚಿತ್ರಕಥೆ ಹೇಳುವ ಹಂಸ ಯಾವುದು? ೯. ಅಸಿಧಾರೆಯಂತೆ ತೀಕ್ಷ್ಣವಾದ ಸ್ವಯಂ ತಿರುಗುವ ಚಕ್ರ ಯಾವುದು? ೧೦. ತಂದೆಯ ಅನುರೂಪವಾದ ಆದೇಶ ಯಾವುದು?

ಒಗಟಿನ ರೂಪದಲ್ಲಿರುವ ಅತಿ ರಹಸ್ಯವಾದ ಈ ಪ್ರಶ್ನೆಗಳನ್ನು ಹರ್ಯಶ್ವರು ಕೇಳಿದರು. ಸ್ವಭಾವತಃ ಮಹಾಜ್ಞಾನಸಂಪನ್ನರು ಹರ್ಯಶ್ವರು. ಪರೋಪದೇಶವಿಲ್ಲದೇ ಸ್ವಯಂ ಪ್ರಶ್ನೆಗಳನ್ನು ವಿಚಾರಿಸಿದರು. ಒಗಟನ್ನು ಬಿಡಿಸಿದರು. ನಾರದರ ಪ್ರಶ್ನೆಗಳಿಗೆ ಉತ್ತರವನ್ನು ತಿಳಿಯಲು ಬಹಳ ಸಮಯ ಬೇಕಾಗಲಿಲ್ಲ. ಕೂಡಲೇ ಉತ್ತರವನ್ನು ಹೇಳಲು ಪ್ರಾರಂಭಿಸಿದರು.

**೧ ಭೂಮಿಯ ಕೊನೆ ಯಾವುದು?**

೧. ಭುವೋಽಂತಂ ಎಂಬಲ್ಲಿ ಭೂಶಬ್ದವಾಚ್ಯವಾದದ್ದು ಲಿಂಗಶರೀರ. ಅನಾದಿಕಾಲದಿಂದಲೂ ಅತಿಶಯವಾದ ಬಂಧಕ್ಕೆ ಕಾರಣವಾಗಿದೆ ಈ ಲಿಂಗಶರೀರ. ಈ ಲಿಂಗಶರೀರದ ನಾಶ ಯಾವ ಉಪಾಯದಿಂದ ಆಗುತ್ತದೆಂದು ತಿಳಿಯಬೇಕು. ಇದನ್ನು ತಿಳಿಯದೇ ಆತ್ಮಾನಾತ್ಮವಿವೇಕಕ್ಕೆ ಕಾರಣವಾಗದಿರುವ ಪ್ರಜಾಸೃಷ್ಟಿಯಿಂದ ಯಾವುದೇ ರೀತಿಯಾದ ಪ್ರಯೋಜನವಿಲ್ಲವೆಂದು ಅಭಿಪ್ರಾಯ.

**೨. ಏಕಪುರುಷ ರಾಜ್ಯ ಯಾವುದು?**

೨. ಜಾಗ್ರತ್-ಸ್ವಪ್ನ-ಸುಷುಪ್ತಿಗಳೆಂಬ ಅವಸ್ಥಾತ್ರಯಗಳನ್ನು ಪ್ರೇರಿಸುವವನು ಪರಮಾತ್ಮ. ಅವನು ಈ ಅವಸ್ಥಾತ್ರಯಗಳಿಂದ ಅತೀತನಾಗಿದ್ದಾನೆ. ತನಗೆ ತಾನೇ ಆಶ್ರಯನಾಗಿದ್ದಾನೆ. ಐಶ್ವರ್ಯಶಾಲಿಯಾಗಿದ್ದಾನೆ. ಸಂಸಾರನಿರ್ಮುಕ್ತನಾಗಿದ್ದಾನೆ. ಲಿಂಗಶರೀರರಹಿತನಾಗಿದ್ದಾನೆ. ನಿತ್ಯಮುಕ್ತನಾಗಿದ್ದಾನೆ. ಇಂತಹ ಶ್ರೀಹರಿಯು ಎಲ್ಲ ಜಗತ್ತಿಗೆ ಒಬ್ಬನೇ ಮುಖ್ಯನಿಯಾಮಕನಾಗಿದ್ದಾನೆ. ಈ ಪ್ರಪಂಚವೆಲ್ಲದಕ್ಕೂ ಪರಮಾತ್ಮನೇ ರಾಜನಾಗಿದ್ದಾನೆ. ಅವನನ್ನು ತಿಳಿಯದೇ ಮಾಡಿದ ಯಾವ ಕರ್ಮಗಳೂ ಮೋಕ್ಷಜನಕವಾಗುವುದಿಲ್ಲ.

**೩. ತಿರುಗಿ ಬರುವ ಮಾರ್ಗವಿಲ್ಲದ ಬಿಲ ಯಾವುದು?**

ಬಲಸಂಪನ್ನನಾದದ್ದರಿಂದ ಬಿಲಶಬ್ದವಾಚ್ಯನಾದವನು ಪರಮಾತ್ಮ. ಒಂದು ಬಾರಿ ಪರಮಾತ್ಮನನ್ನು ಪಡೆದ ಮೇಲೆ ಮತ್ತೆ ತಿರುಗಿ ಬರಲು ಸಾಧ್ಯವಿಲ್ಲ. ತಿರುಗಿ ಬರಲು ಮಾರ್ಗವಿಲ್ಲದ ಬಿಲ ಪರಮಾತ್ಮನೇ ಆಗಿದ್ದಾನೆ.

**೪. ಬಹುರೂಪಳಾದ ಸ್ತ್ರೀ ಯಾರು?**

ಜೀವನ ಬುದ್ಧಿಯೇ ಬಹುರೂಪ ಸ್ತ್ರೀ. ನಾನಾವಿಧ ಸಂಸ್ಕಾರಗಳಿಂದ ಯುಕ್ತವಾಗಿರುತ್ತದೆ. ಸ್ತ್ರೀಯಂತೆಯೇ ಸ್ವಚ್ಛಂದವರ್ತಿಯಾಗಿದೆ. ಆ ಬುದ್ಧಿಯು

ಭಗವತ್ಪರವಾಗುವಂತೆ ಮಾಡಬೇಕು. ಹೀಗೆ ಮಾಡದೇ ಬುದ್ಧಿಯ ದೋಷಗಳನ್ನು ನಾಶಮಾಡಲು ಸಮರ್ಥವಾಗದ ದಾನಾದಿರೂಪವಾದ ಕರ್ಮಗಳನ್ನು ಮಾಡುವುದರಿಂದ ಯಾವ ಪ್ರಯೋಜನವೂ ಇಲ್ಲ.

ಜೀವನು ಯಜ್ಞಾದಿ ಕರ್ಮಗಳಿಂದ ಸ್ವರ್ಗವನ್ನು ಪಡೆಯುತ್ತಾನೆ. ಪುಣ್ಯ ಮುಗಿದ ಮೇಲೆ ಮತ್ತೆ ಭೂಲೋಕಕ್ಕೆ ಬರುತ್ತಾನೆ. ಆದರೆ ಪರಮಾತ್ಮನನ್ನು ಪಡೆದವನು ತಿರುಗಿ ಈ ಭೂಲೋಕಕ್ಕೆ ಬರುವದಿಲ್ಲ.

**೫. ಪುಂಶ್ಚಲೀಪತಿಯಾದ ಪುರುಷ ಯಾರು?**

ಪುಂಶ್ಚಲೀಪತಿಯಾದ ಪುರುಷ ಸ್ವಯಂ ಜೀವನೇ ಆಗಿದ್ದಾನೆ. ಅನೇಕಸಂಸ್ಕಾರಗಳಿಂದ ಯುಕ್ತವಾದ ಆದ್ದರಿಂದಲೇ ಪುಂಶ್ಚಲಿಯಾದ ಬುದ್ಧಿಯ ವಶವಾಗಿದ್ದಾನೆ ಈ ಜೀವ. ಶ್ರೀಹರಿಯ ಜ್ಞಾನವೆಂಬ ಐಶ್ವರ್ಯವನ್ನು ಶಮ-ದಮಾದಿಸಂಪತ್ತುಗಳನ್ನು ಕಳೆದುಕೊಳ್ಳುತ್ತಿದ್ದಾನೆ. ಇಂತಹ ಪುರುಷನನ್ನು, ಈ ಪುರುಷನು ಪಡೆಯಬಹುದಾದ ಸ್ವರ್ಗ-ನರಕಾದಿ ಗತಿಗಳನ್ನು ತಿಳಿಯದೇ ತೀರ್ಥಯಾತ್ರಾದಿಗಳನ್ನು ಮಾಡುವುದರಿಂದ ಮುಕ್ತಿಯು ಸರ್ವಥಾ ಸಿಗಲಾರದು.

**೬. ಎರಡೂ ಕಡೆ ಹರಿಯುವ ನದೀ ಯಾವುದು?**

ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ ಹೀಗೆ ಕ್ರಮವಾಗಿ ಸೃಷ್ಟಿಯು ಆಗುತ್ತದೆ. ಪೃಥ್ವಿಯು ತನಗೆ ಕಾರಣವಾದ ಜಲತತ್ತ್ವದಲ್ಲಿ, ಜಲವು ತನಗೆ ಕಾರಣವಾದ ಅಗ್ನಿಯಲ್ಲಿ ಹೀಗೆ ವಿಪರೀತವಾಗಿ ಸಂಹಾರವಾಗುವುದರಿಂದ ಸೃಷ್ಟಿ-ಪ್ರಲಯರೂಪವಾದ ನದಿಯು ಉಭಯತೋವಾಹ ಎರಡೂ ಕಡೆಗೆ ಹರಿಯುವದು ಎಂದು ಭಾವ. ಈ ಸೃಷ್ಟಿ-ಸಂಹಾರಗಳಿಗೆ ಕಾರಣವಾದ್ದು ಶ್ರೀಹರಿಯ ಇಚ್ಛೆ. ಇದನ್ನು ತಿಳಿಯದೇ ಕೇವಲ ಕರ್ಮವನ್ನು ಮಾಡುವವನಿಗೆ ಯಾವುದೇ ರೀತಿಯಾದ ಪ್ರಯೋಜನವು ಸಿದ್ಧಿಸುವುದಿಲ್ಲ.

**೭. ಐದೈದರ ಆಶ್ಚರ್ಯ ಗೃಹ ಯಾವುದು?**

ಹನ್ನೊಂದು ಇಂದ್ರಿಯಗಳು, ಪಂಚಮಹಾಭೂತಗಳು, ಪಂಚತನ್ಮಾತ್ರಾಗಳು, ಅಹಂಕಾರತತ್ತ್ವ, ಮಹತ್ತತ್ವ, ಪ್ರಕೃತಿ ಮತ್ತು ಜೀವ ಇವು ಇಪ್ಪತ್ತೈದು ತತ್ತ್ವಗಳು. ಇವುಗಳಿಂದ ಕಂಗೊಳಿಸುವ ಗೃಹಸ್ಥಾನೀಯ ಜೀವ. ಆ ಜೀವನನ್ನು ದೇಹದಲ್ಲಿರುವ ಇಂದ್ರಿಯಗಳನ್ನು ತಿಳಿಯದಿರುವವನಿಗೆ ಮುಕ್ತಿರೂಪವಾದ ಪ್ರಯೋಜನವು

ಸಿದ್ಧಿಸಲಾರದು. ಈ ಇಪ್ಪತ್ತೈದು ತತ್ತ್ವಗಳಿಗೆ ಆಶ್ರಯನಾದ ಪರಿಪೂರ್ಣಷಡ್ಗುಣನಾದ ಆಶ್ಚರ್ಯಕರವಾದ ಜ್ಞಾನವನ್ನು ಕೊಡುವ ಪರಮಾತ್ಮನನ್ನು ತಿಳಿಯದೇ ಕೇವಲ ಕರ್ಮಗಳನ್ನು ಮಾಡುವುದರಿಂದ ಯಾವುದೇ ರೀತಿಯಾದ ಪ್ರಯೋಜನವಿಲ್ಲ.

**೮. ಚಿತ್ರಕಥೆ ಹೇಳುವ ಹಂಸ ಯಾವುದು?**

ಭಾರತಾದಿಸಚ್ಛಾಸ್ತ್ರಗಳೇ ಚಿತ್ರಕಥೆಯನ್ನು ಹೇಳುವ ಹಂಸ. ಈಶ್ವರಪ್ರತಿಪಾದಕವಾದ, ಸಮಾಧ್ಯಾದಿ ಭಾಷಾತ್ರಯಗಳಿಂದ ಯುಕ್ತವಾದ, ಬಂಧ-ಮೋಕ್ಷಗಳ ಸ್ವರೂಪವನ್ನು ತಿಳಿಸಿಕೊಡುವ ಹಂಸ ಶ್ರೀಮದ್ಭಾರತಾದಿಸಚ್ಛಾಸ್ತ್ರಗಳು. ಇವುಗಳನ್ನು ತಿಳಿಯದೇ ಬೌದ್ಧಾದಿಶಾಸ್ತ್ರಗಳನ್ನು ಕೇಳುವುದರಿಂದ ಜ್ಞಾನರೂಪವಾದ ಪ್ರಯೋಜನ ಇರುವುದಿಲ್ಲ.

**೯. ಅಸಿಧಾರೆಯಂತೆ ತೀಕ್ಷ್ಣವಾದ, ಸ್ವಯಂ ತಿರುಗುವ ಚಕ್ರ ಯಾವುದು?**

ಅಸಿಧಾರಾದಂತೆ ತೀಕ್ಷ್ಣವಾದ, ಸ್ವಯಂ ತಿರುಗುವ ಚಕ್ರವೆಂದರೇ ಅದು ದ್ವಾದಶಮಾಸಾತ್ಮಕವಾದ ಕಾಲಚಕ್ರವೇ ಆಗಿದೆ. ಈ ಕಾಲದ ಜ್ಞಾನವನ್ನು ಮಾಡಿಕೊಳ್ಳದೇ, ಆಯಾ ಕಾಲದಲ್ಲಿ ವಿಹಿತವಾದ ಕರ್ಮಗಳನ್ನು ಮಾತ್ರ ಮಾಡುವುದರಿಂದ ಕಾಲಜಯರೂಪವಾದ ಫಲವು ಸಿಗುವುದೇ ಇಲ್ಲ.

**೧೦. ತಂದೆಯ ಅನುರೂಪವಾದ ಆದೇಶ ಯಾವುದು?**

'ಪ್ರಾತರುತ್ಥಾಯ ಸಂಧ್ಯಾಮುಪಾಸೀತ' ಇತ್ಯಾದಿ ಶಾಸ್ತ್ರವು ಹಿತೋಪದೇಶಕವಾದದ್ದರಿಂದ ತಂದೆಯಾಗಿದೆ. ಈ ಶಾಸ್ತ್ರವನ್ನು ಯಾರು ತಿಳಿಯುವುದಿಲ್ಲವೋ ಅಂಥವನು ಸತ್ಕರ್ಮಗಳನ್ನು ಮಾಡಲು ಹೇಗೆ ಉಪಕ್ರಮಿಸುತ್ತಾನೆ. ಸತ್ಕರ್ಮಗಳನ್ನು ಅವನು ಮಾಡಲಾರ. ಮುಕ್ತಿಯನ್ನೂ ಪಡೆಯಲಾರ.

ನಾರದರ ವಚನಗಳ ಅಭಿಪ್ರಾಯವನ್ನು ಈ ರೀತಿಯಾಗಿ ಹರ್ಯಶ್ವರು ತಿಳಿದರು. ಪ್ರಜಾಸೃಷ್ಟಿಯು ನಮಗೆ ವಿಹಿತವಾದ ಮಾರ್ಗವಲ್ಲ ಎಂದು ತಿಳಿದರು. ವಿರಕ್ತರಾಗಿ ಸನ್ಯಾಸಿಗಳಾದರು. ಶ್ರೀಹರಿಯ ಚಿಂತನೆಯಲ್ಲಿಯೇ ಲೀನರಾದರು.

ನಾರದರಿಂದ ತನ್ನ ಮಕ್ಕಳಾದ ಹರ್ಯಶ್ವರೆಲ್ಲ ಸನ್ಯಾಸಿಗಳಾಗಿದ್ದಾರೆ ಎಂದು ದಕ್ಷ ತಿಳಿದುಕೊಂಡ. ಸತ್ಸಂತಾನದಿಂದ ದುಃಖವಾಗುತ್ತದೆಂದು ಮನಗಂಡ. ಶೋಕಸಂತಪ್ತನಾದ. ಬ್ರಹ್ಮದೇವರು ಬಂದು ದಕ್ಷನನ್ನು ಸಮಾಧಾನ ಪಡಿಸಿದರು.




ಸಮಾಹಿತನಾದ ದಕ್ಷ ಮತ್ತೆ ಅಸಿಕ್ನಿಯಲ್ಲಿ ಸಾವಿರ ಮಕ್ಕಳನ್ನು ಪಡೆದ. ಅವರೆಲ್ಲ ಶಬಲಾಶ್ವರು. ಶಬಲಾಶ್ವರಿಗೆ ಪ್ರಜಾಸೃಷ್ಟಿ ಮಾಡುವಂತೆ ದಕ್ಷ ಆಜ್ಞೆ ಮಾಡಿದ. ತಂದೆಯ ಆಜ್ಞೆಯಿಂದ ಶಬಲಾಶ್ವರು ಭ್ರಾತೃಗಳ ಮಾರ್ಗವನ್ನು ಅನುಸರಿಸಿದರು. ನಾರಾಯಣ ಸರೋವರಕ್ಕೆ ಹೋದರು. ತಪೋಮಗ್ನರಾದರು. ಮತ್ತೆ ನಾರದರು ಬಂದರು. ನಿಮ್ಮ ಅಣ್ಣಂದಿರು ಯಾವ ಮಾರ್ಗದಲ್ಲಿ ಪ್ರಯಾಣಿಸಿದ್ದಾರೋ ನೀವೂ ಅದೇ ಮಾರ್ಗದಲ್ಲಿಯೇ ನಡೆಯಬೇಕೆಂದು ಹೇಳಿದರು. ಅವರಿಗೂ ಹರ್ಯಶ್ವರಿಗೆ ಕೇಳಿದಂತೆ ಹತ್ತು ಪ್ರಶ್ನೆಗಳನ್ನು ಕೇಳಿದರು. ಆ ಪ್ರಶ್ನೆಗಳಿಗೆ ಉತ್ತರವನ್ನು ತಿಳಿದುಕೊಂಡು ಶಬಲಾಶ್ವರು ಕೂಡಾ ಸನ್ನ್ಯಾಸಮಾರ್ಗವನ್ನೇ ಅನುಸರಿಸಿದರು.

ಹೋದ ಶಬಲಾಶ್ವರೂ ತಿರುಗಿ ಬರಲಿಲ್ಲ. ನಾರದರಿಂದ ಶಬಲಾಶ್ವರೂ ಸನ್ನ್ಯಾಸಿಗಳಾಗಿದ್ದಾರೆಂದು ದಕ್ಷ ತಿಳಿದ. ಕೋಪೋದ್ರಿಕ್ತನಾದ. ಹರ್ಯಶ್ವ-ಶಬಲಾಶ್ವರಿಗೆ ಸನ್ನ್ಯಾಸಮಾರ್ಗವನ್ನು ತೋರಿಸಿಕೊಟ್ಟ ನಾರದರು ದಕ್ಷನ ಹತ್ತಿರ ಬಂದರು.

ಕ್ರುದ್ಧನಾದ ದಕ್ಷ ನಾರದರಿಗೆ ಶಾಪವನ್ನಿತ್ತ. ಜಟಾ-ಯಜ್ಞೋಪವೀತ-ಶಮ-ದಮಾದಿಸಾಧುಚಿಹ್ನೆಗಳನ್ನು ನೀನು ಧರಿಸಿದ್ದಿ. ಸ್ವತಃ ಸಾಧುವಲ್ಲ. ನಿನ್ನಿಂದ ನನ್ನ ಮಕ್ಕಳೆಲ್ಲ ನಷ್ಟರಾಗಿ ಹೋಗಿದ್ದಾರೆ. ನನಗೆ, ನನ್ನ ಮಕ್ಕಳಿಗೆ ನೀನು ಅಪಕಾರವನ್ನೇ ಮಾಡಿರುವಿ. ಆದ್ದರಿಂದ ನೀನು ಒಂದು ಕಡೆ ಸ್ಥಿರವಾಗಿ ನಿಲ್ಲುವುದೇ ಬೇಡ. ಸದಾ ಸಂಚಾರಶೀಲನಾಗು ಎಂದು ಶಪಿಸಿದರು.

ಯೋಗ್ಯತೆಯಲ್ಲಿ ನಾರದರಿಗಿಂತಲೂ ಉತ್ತಮರು ದಕ್ಷರು. ಆದರೂ ಪ್ರತಿಶಾಪವನ್ನು ಕೊಡಲು ಸಮರ್ಥರು ನಾರದರು. ಉತ್ತಮರಿಗೆ ಪ್ರತಿಶಾಪವನ್ನು ನೀಡುವುದರಿಂದ ಮಹಾ ಅನರ್ಥವಾಗುತ್ತದೆಂದು ತಿಳಿದು ದಕ್ಷರ ಶಾಪವನ್ನು ನಾರದರು ಸಂತೋಷದಿಂದ ಸ್ವೀಕರಿಸಿದರು. ಪ್ರತಿಯಾಗಿ ಶಪಿಸಲಿಲ್ಲ. ಇದು ಸಾಧುಗಳ ಲಕ್ಷಣವೇ ಆಗಿದೆ.

★★★★★

ಜ್ಞಾನವಿಲ್ಲದೇ ಕೇವಲ ಕರ್ಮವೇ ಪರಮಶ್ರೇಯೋರೂಪವಾದ ಮೋಕ್ಷ ಸಾಧನವೆಂಬುದನ್ನು ಈ ಅಧ್ಯಾಯದಲ್ಲಿ ನಿರಾಕರಿಸುತ್ತಾರೆ. ಮೊದಲಿಗೆ ಅದಕ್ಕೆ ಉಪಯುಕ್ತವಾದುದನ್ನು ಹೇಳುತ್ತಾ ಶ್ರೀಹರಿಯ ದಯೆ ಪಡೆದ ದಕ್ಷನು ಏನು ಮಾಡಿದನೆಂಬ ಪರೀಕ್ಷಿತನ ಸಂಶಯವನ್ನು ಪರಿಹರಿಸುವರೆಂದು ಹೇಳುವರು-

**ಬಾದರಾಯಣ ಉವಾಚ -**

**ತಸ್ಯಾಂ ಸ ಪಾಂಚಜನ್ಯಾಂ ವೈ ವಿಷ್ಣುಮಾಯೋಪಬೃಂಹಿತಃ ।**
**ಹರ್ಯಶ್ವಸಂಜ್ಞಾನಯುತಂ ಪುತ್ರಾನಜನಯದ್ವಿಭುಃ ॥೧॥**

**ವಿಭುಃ** ಸಮರ್ಥನಾದ **ವಿಷ್ಣುಮಾಯೋಪಬೃಂಹಿತಃ** ಶ್ರೀಹರಿಯ ಇಚ್ಛೆಯಿಂದ ಪುಷ್ಟರಾದ **ಸಃ** ದಕ್ಷಪ್ರಜೇಶ್ವರನು **ತಸ್ಯಾಂ ಪಾಂಚಜನ್ಯಾಂ** ಆ ಪಂಚಜನ ಕುವರಿಯಲ್ಲಿ **ಹರ್ಯಶ್ವಸಂಜ್ಞಾನ್** ಹರ್ಯಶ್ವರೆಂಬ ಹೆಸರಿನ **ಅಯುತಂ** ಹತ್ತು ಸಾವಿರ ಜನ **ಪುತ್ರಾನ್** ಮಕ್ಕಳನ್ನು **ಅಜನಯತ್** ಹುಟ್ಟಿಸಿದನು. ॥೧॥

**ಅಪೃಥಗ್ಧರ್ಮಶೀಲಾಸ್ತೇ ಸರ್ವೇ ದಾಕ್ಷಾಯಣಾ ನೃಪ ।**
**ಪಿತ್ರಾ ಪ್ರೋಕ್ತಾಃ ಪ್ರಜಾಸರ್ಗೇ ಪ್ರತೀಚೀಂ ಪ್ರಯಯುರ್ದಿಶಮ್ ॥೨॥**

**ಹೇ ನೃಪ** ಪರೀಕ್ಷಿತನೇ **ಪಿತ್ರಾ** ತಂದೆಯಿಂದ **ಪ್ರಜಾಸರ್ಗೇ** ಮಕ್ಕಳನ್ನು ಪಡೆಯಲು **ಪ್ರೋಕ್ತಾಃ** ಆಜ್ಞಪ್ತರಾದ **ಅಪೃಥಗ್ಧರ್ಮಶೀಲಾಃ** ಸಮಾನವಾದ ಧರ್ಮಸ್ವಭಾವವುಳ್ಳ **ಸರ್ವೇ** ಎಲ್ಲ **ದಾಕ್ಷಾಯಣಾಃ** ದಕ್ಷಪುತ್ರರು ಅಥವಾ ದಾಕ್ಷಾಯಣಿಯೇ ತಂಗಿಯಾಗಿ ಉಳ್ಳವರು **ಪ್ರತೀಚೀಂ ದಿಶಂ** ಪಶ್ಚಿಮದಿಕ್ಕಿಗೆ **ಪ್ರಯಯುಃ** ಪ್ರಯಾಣಮಾಡಿದರು. ॥೨॥

**ತತ್ರ ನಾರಾಯಣಸರಸ್ತೀರ್ಥಸಿಂಧುಸಮುದ್ರಯೋಃ ।**
**ಸಂಗಮೋ ಯತ್ರ ಸುಮಹನ್ಮುನಿಸಿದ್ಧನಿಷೇವಿತಮ್ ॥೩॥**

**ತತ್ರ** ಆ ಪಶ್ಚಿಮದಿಕ್ಕಿನಲ್ಲಿ **ಸಿಂಧುಸಮುದ್ರಯೋಃ ಸಂಗಮಃ** 'ಸಿಂಧು ಸಮುದ್ರೇ ನದ್ಯಾಂ ಚ' ಎಂದು ವಿಶ್ವವಿರುವುದರಿಂದ ನದೀಸಮುದ್ರ ಸಂಗಮವೆಂದಾಗಲಿ 'ಗಂಗಾ ಸಿಂಧು ಸರಸ್ವತೀ ಚ' ಎಂದು ಇರುವುದರಿಂದ ಆ ಹೆಸರಿನ ಸ್ವತಂತ್ರ ನದಿ ಸಾಗರ ಸಂಗಮವು ಮತ್ತು **ಸುಮಹತ್** ಬಹುದೊಡ್ಡದಾದ **ನಾರಾಯಣಸರಃ** ನಾರಾಯಣ ಎಂಬ ಹೆಸರಿನ **ತೀರ್ಥಂ** ತೀರ್ಥವೂ **ಯತ್ರ** ಎಲ್ಲಿದೆಯೋ **ಮನುಸಿದ್ಧನಿಷೇವಿತಂ**

ಸನ್ಯಾಸಿಗಳಿಂದಲೂ ಸಿದ್ಧರಿಂದಲೂ ಸೇವಿತವಾದುದು ಅಂತಹ ಪಶ್ಚಿಮದಿಕ್ಕಿಗೆ ಪ್ರಯಾಣ ಬೆಳೆಸಿದರು.

**ಸುಮಹಾಮುನಿಸಿದ್ಧನಿಷೇವಿತಂ** ಎಂಬ ಪಾಠದಲ್ಲಿ ಮಹಾಂತರಾದ ಮುನಿ-ಸನ್ಯಾಸಿಗಳು-ಇತರಸಿದ್ಧರು ಇರುವ ಎಂದರ್ಥ. ಗೀತಾಭಾಷ್ಯದಲ್ಲಿ ಮುನಿಃ ಸನ್ಯಾಸೀ ತಚ್ಚೋಕ್ತಂ 'ಸ ಹಿ ಲೋಕೇ ಮುನಿರ್ನಾಮ ಯಃ ಕಾಮಕ್ರೋಧವರ್ಜಿತಃ' ಎಂದು ಹೇಳಿದೆ. ।।೩।।

**ತದುಪಸ್ಪರ್ಶನಾದೇವ ವಿನಿರ್ಧೂತಮಲಾಶಯಾಃ ।**
**ಧರ್ಮೇ ಪಾರಮಹಂಸ್ಯೇ ಚ ಪ್ರೋತ್ಪನ್ನಮತಯೋಽಪ್ಯುತ ।।೪।।**

**ತದುಪಶ್ಪರ್ಶನಾತ್ ಏವ** ಆ ನಾರಾಯಣ ಸರೋವರದ ನೀರಿನಲ್ಲಿ ಸ್ನಾನ ಆಚಮನಾದಿಗಳನ್ನು ಮಾಡುವದರಿಂದಲೇ **ವಿನಿರ್ಧೂತ** ನಷ್ಟವಾದ **ಮಲ** ರಾಗಾದಿ ದೋಷಗಳುಳ್ಳ **ಆಶಯಾಃ** ಅಂತಃಕರಣವುಳ್ಳ **ಚ** ಮತ್ತು **ಪಾರಮಹಂಸ್ಯೇ ಧರ್ಮೇ** ಪರಮಹಂಸ ಸನ್ಯಾಸಿಗಳ ಧರ್ಮವಾದ ಊರ್ಧ್ವರೇತಸ್ಕತ್ವ ಮೊದಲಾದವುಗಳಲ್ಲಿ **ಪ್ರೋತ್ಪನ್ನಮತಯಃ ಅಪಿ** ನಿಶ್ಚಿತವಾದ ಮನಸ್ಸುಗಳುಳ್ಳವರಾಗಿದ್ದರೂ

**ತೇಪುಸ್ತೇ ತಪ ಏವೋಗ್ರಂ ಪಿತ್ರಾದೇಶೇನ ಯಂತ್ರಿತಾಃ ।**
**ಪ್ರಜಾವಿವೃದ್ಧಯೇ ಯತ್ತಾನ್ ದೇವರ್ಷಿಸ್ತಾನ್ ದದರ್ಶ ಹ ।।೫।।**

**ಪಿತ್ರಾದೇಶೇನ** ತಂದೆಯ ಅಪ್ಪಣೆಯಿಂದ **ಯಂತ್ರಿತಾಃ** ನಿಯಮಿತರಾದ **ತೇ** ಅವರು **ಪ್ರಜಾವಿವೃದ್ಧಯೇ** ಸಂತತಿಯ ಅಭಿವೃದ್ಧಿಗಾಗಿ **ಉಗ್ರಂ** ಕಠಿಣವಾದ **ತಪಃ ತೇಪೇ** ತಪಸ್ಸನ್ನು ಮಾಡಿದರು. **ಯತ್ತಾನ್** ಪ್ರಜಾಸೃಷ್ಟಿಗೆ ಸನ್ನದ್ಧರಾದ **ತಾನ್** ಆ ಹರ್ಯಶ್ವರನ್ನು **ದೇವರ್ಷಿಃ** ನಾರದರು **ದದರ್ಶ** ನೋಡಿದರು. **ಹ** ಅಲ್ಲವೇ. ।।೫।।

ಮೋಕ್ಷಮಾರ್ಗಕ್ಕೆ ಅಧಿಕಾರಿಗಳಾದ ಇವರು ಪ್ರವೃತ್ತಕರ್ಮಗಳಲ್ಲಿ ಆಸಕ್ತರಾಗಿ ಹಾಳಾಗುವರಲ್ಲ ಎಂದು ಕೃಪೆಯಿಂದ ಅವರನ್ನು ಕುರಿತು ನಾರದರು ಗೂಢಾರ್ಥ ಉಳ್ಳ ಮಾತುಗಳಿಂದ ಉಪದೇಶಿಸಿದರೆಂದು ನಾಲ್ಕು ಶ್ಲೋಕಗಳಿಂದ ಹೇಳುತ್ತಾರೆ.

**ಉವಾಚ ಚಾಽಥ ಹರ್ಯಶ್ವಾಃ ಕಥಂ ಸ್ರಕ್ಷ್ಯಥ ವೈ ಪ್ರಜಾಃ ।**
**ಅದೃಷ್ಟ್ವಾಂತಂ ಭುವೋ ಯೂಯಂ ಬಾಲಿಶಾ ಬತ (ಬಾ)ಪಾಲಕಾಃ ।।**

**ಅಥ** ಹರ್ಯಶ್ವರನ್ನು ನೋಡಿದ ನಂತರ **ಬಾಲಕಾಃ** ಮೂರ್ಖರಾದ **ಯೂಯಂ** ನೀವು (**ಪಾಲಕಾಃ** ಎಂಬ ಪಾಠದಲ್ಲಿ ಪಾಲಕರಾಗಿದ್ದರೂ ಮೂರ್ಖರಾದ ಎಂದರ್ಥ. ಪ್ರಜಾಪತಿಯ ಮಕ್ಕಳಾದ್ದರಿಂದ ಪಾಲಕರೆಂದು ಕರೆದಿರುವರು) **ಭುವಃ** ಭೂಮಿಯ **ಅಂತಂ** ಕೊನೆಯನ್ನು **ಅದೃಷ್ಟ್ವಾ** ಕಾಣದೆ **ಪ್ರಜಾಃ** ಪ್ರಜೆಗಳನ್ನು **ಕಥಂ** ಹೇಗೆ ತಾನೆ ಯಾವ ಪ್ರಯೋಜನಕ್ಕಾಗಿ **ಸ್ರಕ್ಷ್ಯಥ** ಸೃಷ್ಟಿಮಾಡುವಿರಿ? ಎಂದು **ಉವಾಚ ಚ** ಹೇಳಿದರೂ ಕೂಡ. ।।೬।।

ಸೃಷ್ಟಿಯೆಂಬ ಕರ್ಮವು ಜ್ಞಾನವೆಂಬ ಪ್ರಯೋಜನಕ್ಕಾಗಿ ಆಗಬೇಕು. ಆ ಜ್ಞಾನವೆಂಬ ಪ್ರಯೋಜನವು ಇಲ್ಲವಾದ್ದರಿಂದ ಸೃಷ್ಟಿಯು ಹೇಗೆ ಸಿದ್ಧಿಕರವಾದೀತು? ಸರ್ವಥಾ ಆಗಲಾರದು. **ವೈ** ಆ ಜ್ಞಾನವು ಆತ್ಮಾನಾತ್ಮವಿವೇಕ ರೂಪವಾದುದು. ಅದನ್ನು ಸಂಪಾದಿಸಿಕೊಂಡು ಸೃಷ್ಟಿಯಲ್ಲಿ ತೊಡಗಿರಿ ಎಂದು ಅಭಿಪ್ರಾಯ. 'ಪರೋಕ್ಷಪ್ರಿಯಾ ಇವ ಹಿ ವೈ ದೇವಾಃ ಪ್ರತ್ಯಕ್ಷದ್ವಿಷಃ' ದೇವತೆಗಳು ಪರೋಕ್ಷಪ್ರಿಯರು ಪ್ರತ್ಯಕ್ಷದ್ವೇಷಿಗಳು ಎಂದು ಶ್ರುತಿ ಇರುವುದರಿಂದಲೂ ಮತ್ತೊಬ್ಬರಿಗೆ ತಿಳಿಯಬಾರದೆಂದು ಹರ್ಯಶ್ವರಿಗೆ ಸ್ವಾಭಾವಿಕವಾಗಿ ಜ್ಞಾನವಿದೆಯೆಂಬುದನ್ನು ಪ್ರಕಟ ಮಾಡಲು ನಾರದರು 'ಭುವಃ ಅಂತಂ' ಮುಂತಾದ ರಹಸ್ಯಾರ್ಥಕ ಮಾತುಗಳಿಂದ ಜ್ಞಾನಾಭಾವವನ್ನು ತೋರಿಸುತ್ತಿದ್ದಾರೆ ಎಂದು ತಿಳಿಯಬೇಕು. ಯಾವ ಕಾರಣ ಬಾಲಕರೋ ಆ ಕಾರಣದಿಂದಾಗಿ ಬಾಲಿಶರು ಎಂಬುದು ಔಪಚಾರಿಕವೆಂದು ತಿಳಿಯಬೇಕು ಎಂದು ಶ್ರೀ ವಿಜಯಧ್ವಜರ ಭಾವ. ।।೬।।

**ತಥೈಕಪುರುಷಂ ರಾಜ್ಯಂ ಬಿಲಂ ಚಾದೃಷ್ಟನಿರ್ಗಮಮ್ ।**
**ಬಹುರೂಪಾಂ ಸ್ತ್ರಿಯಂ ಚಾಽಪಿ ಪುಮಾಂಸಂ ಪುಂಶ್ಚಲೀಪತಿಮ್ ।।೭।।**

**ತಥಾ** ಅದರಂತೆಯೇ **ಏಕಪುರುಷಂ ರಾಜ್ಯಂ** ಒಬ್ಬನೇ ಪುರುಷನಿರುವ ರಾಜ್ಯವನ್ನು **ಅದೃಷ್ಟನಿರ್ಗಮಂ ಬಿಲಂ** ಹೊರಹೋಗಲು ದಾರಿಯಿಲ್ಲದ ಬಿಲವನ್ನು **ಬಹುರೂಪಾಂ ಸ್ತ್ರಿಯಂ ಚ** ಅನೇಕರೂಪಗಳಾದ ಹೆಂಗಸನ್ನೂ **ಪುಂಶ್ಚಲೀಪತಿಂ ಪುಮಾಂಸಂ** ಸ್ವೈರಿಣಿಯ ಗಂಡನಾದ ಗಂಡಸನ್ನು ।।೭।।

**ನದೀಂ ಉಭಯತೋವಾಹಾಂ ಪಂಚಪಂಚಾದ್ಭುತಂ ಗೃಹಮ್ ।**
**ಕ್ವಚಿದ್ಧಂಸಂ ಚಿತ್ರಕಥಂ ಕ್ಷುರಾಂತಂ ಚ ಸ್ವಯಂ ಭ್ರಮಿಮ್ ।।೮।।**

**ಉಭಯತೋವಾಹಾಂ ನದೀಂ** ಎರಡು ಕಡೆಗೆ ಹರಿಯುವ ನದಿಯನ್ನು **ಪಂಚಪಂಚಾದ್ಭುತಂ ಗೃಹಂ** ಇಪ್ಪತ್ತೈದು ಸಂಖ್ಯೆಯುಳ್ಳ ಆಶ್ಚರ್ಯಕರ ಮನೆಯನ್ನು **ಕ್ವಚಿತ್**

ಅಲ್ಲಲ್ಲಿ **ಚಿತ್ರಕಥಂ** ಆಶ್ಚರ್ಯಕರ ಕಥೆ ಹೇಳುವ **ಹಂಸಂ** ಹಂಸವನ್ನು **ಕ್ಷುರಾಂತಂ** ಕತ್ತಿಯ ಒಳಭಾಗದಂತೆ ತೀಕ್ಷ್ಣವಾದ **ಸ್ವಯಂ ಭ್ರಮಿಂ** ಸ್ವತಂತ್ರವಾಗಿ ತಿರುಗುವ ವಸ್ತುವನ್ನು ।।೮।।

**ಕಥಂ ಸ್ವಪಿತುರಾದೇಶಮವಿದ್ವಾಂಸೋ ವಿಪಶ್ಚಿತಃ ।**
**ಅನುರೂಪಮವಿಜ್ಞಾಯ ಅಹೋ ಸರ್ಗಂ ಕರಿಷ್ಯಥ ।।೯।।**

**ಅನುರೂಪಂ** ಆತ್ಮಾನಾತ್ಮವಿವೇಕವೆಂಬ ಅನುಗುಣವಾದ ಜ್ಞಾನವನ್ನು **ಅವಿಜ್ಞಾಯ** ತಿಳಿಯದೇ **ಅವಿದ್ವಾಂಸಃ** ಅಜ್ಞಾನಿಗಳಾದ ನೀವು **ವಿಪಶ್ಚಿತಃ** ಜ್ಞಾನಿಗಳಾದ **ಸ್ವಪಿತುಃ** ನಿಮ್ಮ ತಂದೆಗಳ **ಆದೇಶಂ** ಅಪ್ಪಣೆಯಾದ **ಸರ್ಗಂ** ಸೃಷ್ಟಿಯನ್ನು **ಕಥಂ ಕರಿಷ್ಯಥ** ಹೇಗೆ ಮಾಡುವಿರಿ **ಅಹೋ** ಆಶ್ಚರ್ಯವು. ।।೯।।

**ಶ್ರೀ ಶುಕ ಉವಾಚ -**

**ತನ್ನಿಶಮ್ಯಾಥ ಹರ್ಯಶ್ವಾ ಔತ್ಪತ್ತಿಕಮನಿಷಯಾ ।**
**ವಾಚಃ ಕೂಟಂ ಚ ದೇವರ್ಷೇ ಸ್ವಯಂ ವಿಮಮೃಶುರ್ಧಿಯಾ ।।೧೦।।**

**ಹರ್ಯಶ್ವಾಃ** ದಕ್ಷಪುತ್ರರು **ತತ್** ಇದುವರೆಗೂ ನಾರದರು ಹೇಳಿದ **ವಾಚಃಕೂಟಂ** ಮಾತಿನ ಸಮೂಹವನ್ನು ಗುಹ್ಯಭಾಷೆಯಿಂದ ಹೇಳಿರುವದರಿಂದ ಮೋಸಗೊಳಿಸುವ ಮಾತಿನಂತೆ ತೋರುವ ಅಲ್ಪಬುದ್ಧಿಗಳಿಂದ ತಿಳಿಯಲಾಗದ ಪರೋಕ್ಷ ಕಥನದಿಂದ ಅರ್ಥಾಂತರ ತೋರುವ ಮಾತನ್ನು **ನಿಶಮ್ಯ** ಕೇಳಿ **ಸ್ವಯಂ** ತಾವೇ ಪರೋಪದೇಶವಿಲ್ಲದೆಯೇ **ಔತ್ಪತ್ತಿಕಮನಿಷಯಾ** ಸಹಜವಾದ ಸ್ವಾಭಾವಿಕವಾದ ವಿಚಾರಶಕ್ತಿಯುಳ್ಳ **ಧಿಯಾ** ಬುದ್ಧಿಯಿಂದ **ವಿಮಮೃಶುಃ** ವಿಮರ್ಶೆ ಮಾಡಿ ಗೂಢಾರ್ಥವನ್ನು ತಿಳಿದರು.

ಇದರಿಂದ ಹಿಂದೆ **ಬಾಲಿಶಾಃ** ಎಂದುದು ಇವರು ಅಜ್ಞಾನಿಗಳೆಂದಲ್ಲ. ಕಿಂತು ಬುಭುತ್ಸಾತಿಶಯ ಹುಟ್ಟಿಸಲು. ತಮ್ಮ ಮಾತನ್ನು ಕೇಳಿದ ನಂತರವೇ ಮನನದಲ್ಲಿ ಆದರ ತರಲು ಎಂದು ತಿಳಿಯಬೇಕು. 'ಕೂಟಂ ತು ಕೈತವಂ ಜ್ಞೇಯಂ ಸಮೂಹೋ ಮೇಲನಂ ತಥಾ' ಎಂದು ಅಭಿಧಾನವಿದೆ. ।।೧೦।।

ಋಷಿಗಳು ಹೇಳಿದ್ದರಲ್ಲಿ ಬುದ್ಧಿಯನ್ನು ಹಾಕಿ ಅರ್ಥ ನಿಶ್ಚಯಿಸಿ ಉತ್ತರ ಕೊಡುವರೆಂದು ಹೇಳುವರು.

ಹೇಗೆ ನಿಶ್ಚಯಿಸಿದರೆಂದರೆ ಮುಂದಿನ ಹತ್ತು ಶ್ಲೋಕಗಳಿಂದ ನಾರದರು ಹೇಳಿದ ಹತ್ತು ವಾಕ್ಯಗಳಿಗೂ ಅವರು ವಿಮರ್ಶಿಸಿ ನಿರ್ಣಯಿಸಿದ ಅರ್ಥವನ್ನು ತಿಳಿಸುತ್ತಾರೆ. ಮೊದಲಿಗೆ 'ಭುವೋ ಅಂತಂ ಅದೃಷ್ಟ್ವಾ...' ಎಂಬುದರ ಅರ್ಥವನ್ನು ಹೇಳುವರು-

**ಭೂಃ ಕ್ಷೇತ್ರಂ ಬೀಜಸಂಜ್ಞಸ್ಯ ಯದನಾದಿನಿಬಂಧನಮ್ ।**
**ಅದೃಷ್ಟ್ವಾ ತಸ್ಯ ನಿರ್ವಾಣಂ ಕಿಮಸತ್ಕರ್ಮಭಿರ್ಭವೇತ್ ॥೧೧॥**

**ಭೂಃ** ನಾರದರು ಹೇಳಿದ ಭೂ ಶಬ್ದದಿಂದ **ಬೀಜಸಂಜ್ಞಸ್ಯ** ಬೀಜವೆಂದು ಹೆಸರಿರುವ ಜೀವನಿಗೆ 'ಬೀಜಂ ತದಹಮರ್ಜುನ' ಎಂದಿರುವುದರಿಂದ **ಬೀಜೇನ** ಶ್ರೀಹರಿಯಿಂದ **ಸಂಜ್ಞಾ** ಸುಖ-ದುಃಖಾನುಭವವುಳ್ಳ ಎಂದು ಅರ್ಥ ಇದು ನಾಶವಾಗುವಂತೆ ಹುಟ್ಟಿದ್ದೇನು ಎಂದರೆ ಅಲ್ಲ ಪ್ರಾಗಭಾವದಂತೆ ಎಂದು ಹೇಳುವರು. **ಯತ್** ಯಾವುದು **ಅನಾದಿನಿಬಂಧನಂ** ಅನಾದಿಕಾಲದಿಂದಲೂ ಅತಿಶಯವಾದ ಬಂಧಕ್ಕೆ ಕಾರಣವಾಗಿದೆಯೋ **ತತ್** ಆ **ಕ್ಷೇತ್ರಂ** ಲಿಂಗಶಬ್ದವಾಚ್ಯವಾದ ಸೂಕ್ಷ್ಮ ಶರೀರವು **(ಉಚ್ಯತೇ)** ಹೇಳಲ್ಪಡುವದು. 'ಭೂ ಸತ್ತಾಯಾಂ' ಎಂಬ ಧಾತುವಿನಿಂದ ಉತ್ಪನ್ನವಾದ ಭೂ ಶಬ್ದವು ಸತ್ತಾವನ್ನು ತಿಳಿಸುವದು. ಅದು ಯಾವಾಗ ಪ್ರಾರಂಭವಾಯಿತೆಂದು ಹೇಳಲು ಬರದಿರುವುದರಿಂದ ಅನಾದಿ ಎಂದರ್ಥ.

**ಅನಾದಿನಿಬಂಧನಂ** ಅನಾದಿಕಾಲದಿಂದ ಬಂಧಕ ಅನಾದಿಯಾದ ಜೀವಗೆ ಬಂಧಕ ಎಂದು ಸಮಸ್ತವಾದ ಈ ಪದಕ್ಕೆ ಅರ್ಥಮಾಡಬೇಕು. **ಅನಾದಿ ನಿಬಂಧನಂ** ಎಂದು ವ್ಯಸ್ತವಾಗಿಯೂ ಅನ್ವಯ ಮಾಡಿಕೊಳ್ಳಬೇಕು. **ಅನಾದಿ** ಅನಾದಿಯಾದದ್ದು **ನಿಬಂಧನಂ** ಅತ್ಯಂತಬಂಧಕವಾದದ್ದು ಎಂದು ಅರ್ಥಮಾಡಬೇಕು.

**ಅಂತಂ ಅವಿಜ್ಞಾಯ** ಎಂಬುದರ ಅರ್ಥ ಹೇಳುವರು. **ತಸ್ಯ** ಬಂಧಕವಾದ ಆ ಲಿಂಗಶರೀರದ **ನಿರ್ವಾಣಂ** ಆತ್ಯಂತಿಕನಾಶವನ್ನು **ಅದೃಷ್ಟ್ವಾ** ತಿಳಿಯದೇ ಈ ಉಪಾಯದಿಂದ ನಾಶವಾಗುವದೆಂದು ತಿಳಿಯದೇ **ಅಸತ್ಕರ್ಮಭಿಃ** ಆತ್ಮಾನಾತ್ಮವಿವೇಕ ಹುಟ್ಟಿಸದ ಮೋಕ್ಷೋಪಯೋಗಿಯಲ್ಲದ ಸೃಷ್ಟಿರೂಪಕರ್ಮದಿಂದ **ಕಿಂ ಭವೇತ್** ಏನು ಪ್ರಯೋಜನವಾದೀತು. ಮೋಕ್ಷೋಪಯೋಗಿ ಜ್ಞಾನರಹಿತ ಪ್ರಜಾಸೃಷ್ಟಿಯಿಂದ ಏನೂ ಪ್ರಯೋಜನವಾಗುವದಿಲ್ಲವೆಂದರ್ಥ.

**ಜೀವಸ್ಯ** ಎಂದು ಹೇಳದೆ **ಬೀಜಸಂಜ್ಞಸ್ಯ** ಎಂದು ಹೇಳಿದ್ದರಿಂದ ಹೊಟ್ಟಿನಿಂದ ಕೂಡಿದ ಬೀಜವೇ ಅಂಕುರಜನಕವಾದಂತೆ ಅನಾದಿಲಿಂಗ ಶರೀರದಿಂದ ಕೂಡಿದ

ಜೀವನೇ ಅನೇಕಶರೀರಧಾರಣೆಗೆ ಕಾರಣಗಳಾದ ಕರ್ಮಗಳನ್ನು ಮಾಡುವುದರಿಂದ ಅದರ ನಾಶಕ್ಕೆ ಯತ್ನವು ಅವಶ್ಯ ಕರ್ತವ್ಯ ಎಂದು ತಿಳಿಸಿರುವರು.

**ಅಸತ್‌ಕರ್ಮಭಿಃ** ಕರ್ಮಗಳು ಯದ್ಯಪಿ ಸತ್ ಆಗಿವೆ. ಆದರೂ ಅವುಗಳಿಗೆ ಫಲವಿಲ್ಲವೆಂದಾದರೆ ಅಸತ್ತಿಗೆ ಸಮಾನವೆಂದೇ ಆಗುತ್ತವೆ. ಆದ್ದರಿಂದ **ಅಸತ್ಕರ್ಮಭಿಃ** ಎಂದು ಹೇಳಿದ್ದು. ಹಾಗಾದರೆ ಇದರಲ್ಲಿ ಆಸಕ್ತಿ ಹೇಗೆ ಎಂದರೆ ಅದಕ್ಕೂ ಉತ್ತರ **ನಿರ್ವಾಣಂ** ಎಂಬುದು. ಲುಪ್ತೋಪಮಾ. ಗಜಸ್ನಾನದಂತೆ ವ್ಯರ್ಥವೆಂದರ್ಥ. 'ನಿರ್ವಾಣಂ ಗಜಮಜ್ಜನಂ' ಎಂದು ವಿಶ್ವವಿದೆ. ||೧೧||

'ತಥೈಕಪುರುಷಂ ರಾಜ್ಯಂ' ಎಂಬುದರ ವಿಚಾರ ಮಾಡಿ ನಿರ್ಣೀತವಾದ ಅರ್ಥವನ್ನು ಹೇಳುವರು-

**ಏಕ ಏವೇಶ್ವರಸ್ತುರ್ಯೋ ಭಗವಾನ್ ಸ್ವಾಶ್ರಯಃ ಪರಃ ।**
**ತಮದೃಷ್ಟ್ವಾಽಭವಂ ಪುಂಸಃ ಕಿಮಸತ್ಕರ್ಮಭಿರ್ಭವೇತ್ ||೧೨||**

**ತುರ್ಯಃ** ಜಾಗ್ರತ್-ಸ್ವಪ್ನ-ಸುಷುಪ್ತಿಗಳೆಂಬ ಅವಸ್ಥಾತ್ರಯಗಳನ್ನು ಪ್ರೇರಿಸುವ ನಾಲ್ಕನೆಯವನಾದ 'ವಿಷ್ಣುಸ್ತುರೀಯರೂಪೇಣ ದ್ವಾದಶಾಂತೇ ವ್ಯವಸ್ಥಿತಃ' ಎಂದಾರಂಭಿಸಿ 'ಮುಕ್ತಸ್ಯ ಸರ್ವವ್ಯಾಪಾರಹೇತುರೇವ ತುರೀಯಕಃ' ಎಂಬಲ್ಲಿಯ ವರೆಗೆ ಮಾಂಡೂಕ್ಯಭಾಷ್ಯದಲ್ಲಿ ಹೇಳಿ ವಿಶೇಷವನ್ನು ತುರ್ಯನಲ್ಲಿ ತಿಳಿಯಬೇಕು. **ಸ್ವಾಶ್ರಯಃ** 'ಸ್ವೇ ಮಹಿಮ್ನಿ ಪ್ರತಿಷ್ಠಿತಃ' ಎಂಬ ಪ್ರಮಾಣ ಹೇಳುವಂತೆ ತನಗೆ ತಾನೇ ಆಶ್ರಯನಾದ **ಭಗವಾನ್** ಐಶ್ವರ್ಯಶಾಲಿಯಾದ **ಪರಃ** ಸರ್ವೋತ್ತಮನಾದ ಶ್ರೀಹರಿಯು **ಏಕ ಏವ ಈಶ್ವರಃ** ಎಲ್ಲ ಜಗತ್ತಿಗೆ ಒಬ್ಬನೇ ಮುಖ್ಯನಿಯಾಮಕನು 'ಏಷ ಸರ್ವೇಶ್ವರಃ' ಎಂದು ಶ್ರುತಿ ಇದೆ.

**ಅಭವಂ** ಸಂಸಾರವಿಲ್ಲದ ಲಿಂಗ ಶರೀರವಿಲ್ಲದ ಉತ್ಪತ್ತಿ ಇಲ್ಲದ ನಿತ್ಯ ಮುಕ್ತನಾದ **ತಂ** ಅವನನ್ನು **ಅದೃಷ್ಟ್ವಾ** ತಿಳಿಯದೇ **ಪುಂಸಃ** ಅಧಿಕಾರಿಗೆ **ಅಸತ್ಕರ್ಮಭಿಃ ಕಿಂ ಭವೇತ್** ಶ್ರೀಹರಿಯನ್ನು ತಿಳಿಯದೇ ಇದ್ದುದರಿಂದ ಅವನಿಗೆ ಸಮರ್ಪಿಸಿದ ಕೇವಲ ಪಶುಹಿಂಸಾ ರೂಪಕರ್ಮದಿಂದ ಏನು ಫಲ ಬರುವದು? ನಿತ್ಯಫಲವಾದ ಮೋಕ್ಷವಾಗಲಾರದು ಎಂದರ್ಥ.

**ಪುಂಸಃ** ಅಧಿಕಾರಿಗಳಿಗೆ **ಅಭವಂ** ನ ವಿದ್ಯತೇ ಭವಃ ಯೇನ ಸಃ ತಂ ಎಂದು ವಿಗ್ರಹ ಮಾಡಿಕೊಂಡಾಗ ಮುಕ್ತಿಪ್ರದನಾದ ಎಂದೂ ಅರ್ಥ ಮಾಡಬಹುದು

ಇದರಿಂದ ಶ್ರೀಹರಿಯೊಬ್ಬನೇ ಪ್ರಧಾನ ನಿಯಾಮಕನಾಗಿವುಳ್ಳ ಜಗತ್ತನ್ನು ಅರಿಯದೇ ಎಂದರ್ಥವನ್ನು 'ಏಕಪುರುಷಂ ರಾಜ್ಯಂ' ಎಂಬುದಕ್ಕೆ ಹೇಳಿದಂತಾಯಿತು. ।।೧೨।।

'ಬಿಲಂ ಚಾದೃಷ್ಟನಿರ್ಗಮಂ' ಎಂಬುದಕ್ಕೆ ಉತ್ತರಿಸುತ್ತಾರೆ-

**ಪುಮಾನ್ ನಾಪ್ಯೈತಿ ಯದ್ ಗತ್ವಾ ಬಿಲಂ ಸ್ವರ್ಗಗತೋ ಯಥಾ ।**
**ಪ್ರತ್ಯಗಾತ್ಮಾऽವಿದ ಇಹ ಕಿಮಸತ್ಕರ್ಮಭಿರ್ಭವೇತ್ ।।೧೩।।**

**ಪುಮಾನ್** ಅಧಿಕಾರಿಯು **ಯತ್** ಯಾವ **ಬಿಲಂ** ಅತ್ಯಂತ ಬಲಿಷ್ಠನಾದ್ದರಿಂದ ಬಿಲಶಬ್ದವಾಚ್ಯನಾದ ಭಗವಂತನನ್ನು (ತೃತೀಯೋऽತಿಶಯೇ ಎಂದು ಇರುವುದುರಿಂದ ಅ ಕಾರಕ್ಕೆ ಇ ಕಾರವಾದಾಗ ಬಲವೇ ಬಿಲವಾಗುವುದು.) **ಗತ್ವಾ** ಹೊಂದಿ **ನ ಅಪ್ಯೈತಿ** ತಿರುಗಿ ಬರುವದಿಲ್ಲ. **ಅವಿದಃ** ಅವನನ್ನು ತಿಳಿಯದವನಿಗೆ **ಇಹ ಅಸತ್ಕರ್ಮಭಿಃ ಕಿಂ ಭವೇತ್** ಈ ಜೀವಲೋಕದಲ್ಲಿ ನಶ್ವರವಾದ ಸ್ವರ್ಗಸಾಧನಗಳಾದ ನಿತ್ಯ-ನೈಮಿತ್ತಿಕಕರ್ಮಗಳಿಂದ ಏನು ಫಲವಾಗುವದು? ಈ ವಿಷಯದಲ್ಲಿ ವ್ಯತಿರೇಕ (ವಿರುದ್ಧ) ದೃಷ್ಟಾಂತ ಹೇಳುವರು. **ಪ್ರತ್ಯಗಾತ್ಮಾ** ಜೀವನು **ಸ್ವರ್ಗಂ ಗತಃ** ಯಜ್ಞಾದಿ ಕರ್ಮಗಳಿಂದ ಬಂದ ಸ್ವರ್ಗವನ್ನು ಅಂದರೆ 'ಯನ್ನ ದುಃಖೇನ ಸಂಭಿನ್ನಂ ನ ಚ ಗ್ರಸ್ತಮನಂತರಂ । ಅಭಿಲಾಷೋಪನೀತಂ ಚ ಸುಖಂ ತತ್ ಸ್ವಃಪದಾಸ್ಪದಂ' ಎಂದಿರುವದರಿಂದ ಸುಖವನ್ನು ಹೊಂದಿ **ಯಥಾ** ಹೇಗೆ **ಇಹ** ಭೂಲೋಕಕ್ಕೆ **ಭವೇತ್** ಪುಣ್ಯಶೇಷದಿಂದ ಬರುವನೋ ಹಾಗೆ ಭಗವಂತನನ್ನು ಪಡೆದವನು ತಿರುಗಿ ಈ ಭೂಲೋಕಕ್ಕೆ ಬರುವದಿಲ್ಲವೆಂದರ್ಥ.

'ಓಂ ಕೃತಾತ್ಯಯೇ ಅನುಶಯವಾನ್ ದೃಷ್ಟಸ್ಮೃತಿಭ್ಯಾಂ ಓಂ' ಎಂಬ ಸೂತ್ರ 'ಶೇಷವಾನ್ ಏವಾಯಾತಿ' ಎಂಬ ಶ್ರುತಿ 'ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ' ಎಂದು ಸ್ಮೃತಿಯು ಈ ವಿಷಯದಲ್ಲಿ ಪ್ರಮಾಣವಾಗಿದೆ.

ಅಥವಾ **ಸ್ವರ್ಗಂ ಗತಃ** ಎಂದರೆ ಸ್ವರ್ಗವನ್ನು ಪಡೆದ ಇಂದ್ರಾದಿಗಳು **ಯಥಾ** ಮತ್ತೆ ಭೂಮಿಯಲ್ಲಿ ಜನಿಸದೇ ಇರುವರೋ ಹಾಗೆ ಎಂದು ಅನ್ವಯದೃಷ್ಟಾಂತವನ್ನೂ ಹೇಳಬಹುದು. ಈ ಪಕ್ಷದಲ್ಲಿ ಲೋಕ ಪಡೆದ ಇಂದ್ರಾದಿಗಳಂತೆ ಎಂದು ಭಾವ. ಛಾಂದೋಗ್ಯ ಉಪನಿಷದ್ಭಾಷ್ಯದ ಟಿಪ್ಪಣಿಯಲ್ಲಿ ಸ್ವರೂಪಭೂತವಾದ ರಮಣ ಸುಖ **ಗ** ಜ್ಞಾನಾತ್ಮಕವಾದ್ದರಿಂದ **ಸ್ವರ್ಗ** ಶಬ್ದವು ವಿಷ್ಣುಲೋಕಪರವಾಗಿದೆ ಎಂದು ಹೇಳಿರುವರು. 'ಸ್ವರ್ಗಃ ಸುಷುಪ್ತಿರಿತ್ಯಾಖ್ಯಾ ಮುಕ್ತೇರಪಿ ನಿಗದ್ಯತೇ' ಎಂದು

ಬೃಹದ್ಭಾಷ್ಯದಲ್ಲಿಯೂ ಹೇಳಿದೆ. **ಬಿಲಂ** ಯಾವುದೋ ಒಂದು ಗುಹೆಯನ್ನು **ಗತ್ವಾ** ಹೋಗಿ **ಯಥಾ** ಹೇಗೆ **ಪುಮಾನ್ ಅಪ್ಯೈತಿ** ಪುರುಷನು ತಿರುಗಿ ಬರುವನೋ ಹಾಗೆ ನ ಬ್ರಹ್ಮನನ್ನು ಹೊಂದಿದವನು ತಿರುಗಿ ಬರುವುದಿಲ್ಲವೆಂದು ವ್ಯತಿರೇಕ ದೃಷ್ಟಾಂತ. ಅಥವಾ **ಬಿಲಂ** ನಿತ್ಯನರಕವನ್ನು **ಗತ್ವಾ** ಹೊಂದಿ **ಯಥಾ** ಹೇಗೆ ತಿರುಗಿಬರುವದಿಲ್ಲವೆಂದು ಅನ್ವಯದೃಷ್ಟಾಂತ ಎಂದೂ ಹೇಳಬಹುದು. ಹೀಗೆ ಸತ್ಯಧರ್ಮರು ವ್ಯಾಖ್ಯಾನಿಸಿದ್ದಾರೆ.

ವಿಜಯಧ್ವಜರ ಪ್ರಕಾರ **ಪುಮಾನ್ ಯತ್ ಪ್ರತ್ಯಗಾತ್ಮ** ಸರ್ವರೀತಿಯಿಂದಲೂ ಅನುಗತವಾದ ಬ್ರಹ್ಮಸ್ವರೂಪವನ್ನು **ಗತ್ವಾ** ಹೊಂದಿ **ಯಥಾ ಸ್ವರ್ಗಗತಃ** ಸ್ವರ್ಗಕ್ಕೆ ಹೋದವನು ತಿರುಗಿ ಬರುವಂತೆ **ನ ಅಪ್ಯೈತಿ** ತಿರುಗಿ ಬರುವದಿಲ್ಲವೋ **ತತ್** ಅಂತಹ **ಬಿಲಂ** ಅತಿ ಬಲಿಷ್ಠನಾದ ಬ್ರಹ್ಮನನ್ನು **ಅವಿದಃ** ತಿಳಿಯದೇ ಇರುವವನಿಗೆ **ಇಹ** ಈ ಜೀವಲೋಕದಲ್ಲಿ **ಅಸತ್ಕರ್ಮಭಿಃ ಕಿಂ ಭವೇತ್** ಅಸತ್ಕರ್ಮಗಳಿಂದ ಏನು ಫಲವಾಗುವದು ಎಂದು ಅರ್ಥೈಸಿರುವರು.

**ಪ್ರತ್ಯಕ್ ಧಾಮ** ಎಂಬ ಪಾಠದಲ್ಲಿ **ಪ್ರತ್ಯಕ್** ಸರ್ವಾಂತರ್ಯಾಮಿಯಾದ **ಧಾಮ** ತೇಜೋರೂಪನಾದ ಎಂದರ್ಥ. ಬ್ರಹ್ಮರೂಪವನ್ನು **ಅವಿದಃ** ತಿಳಿಯದ ಎಂದನ್ವಯವನ್ನು ಚೆಟ್ಟಿ ಆಚಾರ್ಯರು ಮಾಡಿರುವರು. ।।೧೩।।

'ಬಹುರೂಪಾಂ ಸ್ತ್ರಿಯಂ' ಎಂಬುದಕ್ಕೆ ಉತ್ತರಿಸುವರು.

**ನಾನಾರೂಪಾಽತ್ಮನೋ ಬುದ್ಧಿಃ ಸ್ವೈರಿಣೀವ ಗುಣಾನ್ವಿತಾ ।**
**ತನ್ನಿಷ್ಠಾಮಗತಸ್ಯೇಹ ಕಿಮಸತ್ಕರ್ಮಭಿರ್ಭವೇತ್ ।।೧೪।।**

**ಆತ್ಮನಃ** ಜೀವನ **ಗುಣಾನ್ವಿತಾ** ಸತ್ವಾದಿಗುಣಗಳಿಂದ ಕೂಡಿದ ಅಥವಾ ವಿಕೃತವಾದ ಆದ್ದರಿಂದಲೇ **ನಾನಾರೂಪಾ** ಅನೇಕ ಬಣ್ಣವುಳ್ಳ 'ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ' ಎಂದು ಶ್ವೇತಾಶ್ವತರ ಉಪನಿಷತ್ತಿನಲ್ಲಿ ಪ್ರಕೃತಿಗೆ ಅನೇಕ ವರ್ಣ ಹೇಳಿದೆ. ಅದರ ಗುಣ ವಿಕೃತಕ್ಕೆ ನಾನಾರೂಪವಿದೆ ಎಂದು ಭಾವ. ಅಥವಾ ಅನೇಕ ವೃತ್ತಿಗಳುಳ್ಳ ನಾನಾವಿಧ ಸಂಸ್ಕಾರಗಳಿಂದ ಕೂಡಿದ **ಸ್ವೈರೀಣಿ ಇವ** ತನ್ನ ಇಷ್ಟದಂತೆ ಹೋಗುವ ಸ್ತ್ರೀಯಂತೆ ಇರುವ **ಯಾ ಬುದ್ಧಿಃ** ಚೇತನಾತ್ಮಕ (ಸ್ವರೂಪ) ಅಚೇತನಾತ್ಮಕ ಮನಸ್ಸೇನಿದೆಯೋ **ತನ್ನಿಷ್ಠಾಂ** ಆ ಚೇತನಾತ್ಮಕ ಬುದ್ಧಿಯು ಭಗವಂತನಲ್ಲಿ ಆಸಕ್ತವಾಗುವಂತೆ ಅಚೇತನಾತ್ಮಕ ಬುದ್ಧಿಯು ನಾಶವಾಗುವಂತೆ **ಅಗತಸ್ಯ** ಭಗವಂತನಲ್ಲಿ ಭಕ್ತಿ ಮೊದಲಾದ ಸಾಧನ ಸಾಮಗ್ರಿಯನ್ನು ಸಂಪಾದಿಸಿಕೊಳ್ಳದಿರುವ ಪುರುಷನಿಗೆ

**ಅಸತ್ಕರ್ಮಭಿಃ** ಬುದ್ಧಿಯ ದೋಷಗಳನ್ನು ನಾಶಮಾಡಲು ಸಮರ್ಥವಾದ ದಾನ ಮೊದಲಾದ ನಶ್ವರಕರ್ಮಗಳಿಂದ **ಕಿಂ ಭವೇತ್** ಏನಾದೀತು? ಯಾವ ಫಲವಾಗಲಾರದು.

ಸತ್ಯಧರ್ಮರ ಪ್ರಕಾರ **ಸ್ವೈರಿಣೀ** ಪಿಂಗಲಾ ಎಂಬ ವೇಶ್ಯಾಸ್ತ್ರೀಯು **ಕಿಂ ಅಸತ್ಕರ್ಮಭಿಃ ಇತಿ** ಬಾಗಿಲಲ್ಲಿಯೇ ನಿಂತು ಬರುವ ಜಾರನ ಆಗಮನಸೂಚಕ ಕರ್ಮಗಳಿಂದ ಏನಾದೀತು ಎಂದು ತಿಳಿದು **ಗುಣಾನ್ವಿತಾ** 'ಗುಣಾನು ಇತಾ' ಎಂದು ಭೇದ ಮಾಡಿಕೊಳ್ಳಬೇಕು. ಗುಣಾಶ್ರಯನಾದ ಭಗವಂತನನ್ನು **ಇತಾ** ಹೊಂದಿದಳೋ ಆ ರೀತಿ ಅಲ್ಲದ ಎಂದು ವ್ಯತಿರೇಕ ದೃಷ್ಟಾಂತ. 'ಅನು ಆಶ್ರಯೇ' ಎಂದು ವಿಶ್ವವಿದೆ. ಇಲ್ಲಿ ಸ್ವೈರಿಣೀ ಶಬ್ದ ಇಡುವುದರಿಂದ ಏಕಾದಶಸ್ಕಂಧದಲ್ಲಿ 'ಸಾ ಸ್ವೈರಿಣ್ಯೇಕದಾ ಕಾಂತಂ ಸಂಕೇತಮುಪನೇಷ್ಯತೀ । ಅಭೂತ್ಕಾಲೇ ಬಹಿರ್ದ್ವಾರಿ...' ಎಂದಾರಂಭಿಸಿ ೮ ನೇ ಅಧ್ಯಾಯದ ಮುಕ್ತಾಯದ ತನಕ ಇರುವ ಕಥೆಯನ್ನು ಅನುಸಂಧಾನ ಮಾಡಿಕೊಳ್ಳಬೇಕೆಂದು ಸೂಚಿಸುತ್ತಾರೆ. ಎಂದು ಶ್ರೀಗಳು ಹೇಳುತ್ತಾರೆ. **ನಾನಾರೂಪಾತ್ಮನಃ** ಚಿನ್ನದಲ್ಲಿ ಆಸಕ್ತವಾದ ಮನಸ್ಸುಳ್ಳ ಸ್ವೈರಿಣಿಯಂತೆ ಎಂದೂ ಅನ್ವಯ. ಚಿನ್ನ ಸ್ವೀಕರಿಸಬೇಕೆಂದು ವ್ಯಗ್ರವಾದ ಮನಸ್ಸುಳ್ಳ ಸ್ತ್ರೀಯಂತೆ ಕಾಠಕಭಾಷ್ಯದಲ್ಲಿ 'ಸೃಂಕಾಂ ಚೇಮಾಮನೇಕರೂಪಾಂ' ಎಂಬ ವ್ಯಾಖ್ಯಾನರೂಪವಾದ 'ಬಹುರೂಪಂ ತು ಪುರಟಂ ಕಾರ್ತಸ್ವರಮಿತೀರ್ಯತೇ' ಎಂದು ಅಭಿಧಾನ ಹೇಳಿದೆ ಎನ್ನುತ್ತಾರೆ. ॥೧೪॥

'ಪುಮಾಂಸಂ ಪುಂಶ್ಚಲೀಪತಿಃ' ಎಂಬುದರ ಅರ್ಥವನ್ನು ಹೇಳುತ್ತಾರೆ-

**ತತ್ಸಂಗಭ್ರಂಶಿತೈಶ್ವರ್ಯಂ ಸಂಸರಂತಂ ಕುಭಾರ್ಯವತ್ ।**
**ತದ್ಗತೀರಬುಧಸ್ಯೇಹ ಕಿಮಸತ್ಕರ್ಮಭಿರ್ಭವೇತ್ ॥೧೫॥**

**ತತ್ಸಂಗ** ರಜೋಗುಣ ತಮೋಗುಣ ವಿಶಿಷ್ಟವಾದ ಬುದ್ಧಿಯ ವಶನಾಗಿ **ಭ್ರಂಶಿತ** ನಷ್ಟವಾದ ಶ್ರೀಹರಿಯ ಜ್ಞಾನವೆಂಬ ಐಶ್ವರ್ಯವನ್ನು **ಕುಭಾರ್ಯವತ್** ಶಾಸ್ತ್ರನಿಂದಿತಳು ಲೋಕನಿಂದಿತಳೂ ಆದ ಹೆಂಡತಿಯನ್ನು ಹೊಂದಿದವನಂತೆ **ಸಂಸರಂತಂ** ಅನೇಕ ಜನ್ಮತಾಳಿ ಸುಖ-ದುಃಖಗಳನ್ನು ಅನುಭವಿಸುವ ಜೀವನನ್ನು ಮತ್ತು **ತದ್ಗತೀಃ** ಅವನು ಹೊಂದುವ ಸ್ವರ್ಗ-ನರಕ ಮುಂತಾದ ಗತಿಯನ್ನು **ಅಬುಧಸ್ಯ** ತಿಳಿಯದಿರುವ ಪುರುಷನಿಗೆ **ಇಹ** ಇಲ್ಲಿ (ಜೀವಲೋಕದಲ್ಲಿ) **ಅಸತ್ಕರ್ಮಭಿಃ**

ಭಗವಂತನನ್ನು ಉದ್ದೇಶಿಸದೇ ಪ್ರಸಕ್ತಗಳಾದ ತೀರ್ಥ-ಸ್ನಾನಾದಿ ಕರ್ಮಗಳಿಂದ **ಕಿಂ ಭವೇತ್** ರಾಜಸ-ತಾಮಸಕರ್ಮಗಳಿಂದ ದುಃಖನಿವೃತ್ತಿ ರೂಪ ಫಲವಾಗುವದೇ? ಆಗುವದಿಲ್ಲವೆಂದರ್ಥ.

ಕುಭಾರ್ಯವತ್ ಎನ್ನುವುದರಿಂದ ಪುಂಶ್ಚಲೀಪತಿಃ ಶಬ್ದಾರ್ಥ ಹೇಳಿದಂತಾಯಿತು. ಇಲ್ಲಿ 'ತತ್ರ ತಸ್ಯೇವ' ಎಂಬ ನಿಯಮವು ಪ್ರಾಯಿಕವಾದ್ದರಿಂದ ದ್ವಿತೀಯಾಂತಾದಿಗಳ ಮೇಲೂ ವತಿ ಪ್ರತ್ಯಯ ನಮಗೂ ಪರಕೀಯರಿಗೂ ಸಮ್ಮತ. ಸುಧಾದಲ್ಲಿ 'ಅತೋ ವಿರುದ್ಧವಧ್ಭಾತಂ' ಎಂಬುದರ ವಿವರಣದಲ್ಲಿ ವಿರುದ್ಧವತ್ ಉಕ್ತ ಉಭಯ ವಿರುದ್ಧಾರ್ಥ ಪ್ರತಿಪಾದಕಮಿವ ಭಾತಂ ಎಂದಿದ್ದಾರೆ. ಪರಕೀಯರು ಇದೇ ರೀತಿ ಘಟವತ್ ಎಂಬುದನ್ನು ನಿರ್ವಚನ ಮಾಡುವರು. ಅಥವಾ ಕುಭಾರ್ಯಸ್ಯ ಇವ ತದ್ಗತಿಃ ಅಬುಧಸ್ಯ ಎಂದನ್ವಯ. ಉಳಿದುದು ಮೊದಲಿನಂತೆ ।।೧೫।।

'ನದೀಂ ಉಭಯತೋವಾಹಾಂ' ಎಂಬುದರ ಅರ್ಥ ಹೇಳುವರು-

**ಸೃಷ್ಟ್ಯಪ್ಯಯಕರೀಂ ಮಾಯಾಂ ವೇಲಾಕೂಲಾಂತವೇಗಿನೀ(ತಾ)ಮ್ ।**
**ಮತ್ತಸ್ಯ ತದವಿಜ್ಞಾನಾತ್ ಕಿಮಸತ್ಕರ್ಮಭಿರ್ಭವೇತ್ ।।೧೬।।**

**ವೇಲಾಕೂಲಾಂತವೇಗಿತಾಂ** ವೇಲಾಕೂಲ ಶಬ್ದಗಳಿಂದ ಸೃಷ್ಟಿ-ಸಂಹಾರಗಳನ್ನು ತೆಗೆದುಕೊಳ್ಳಬೇಕು. ಅವುಗಳ ಅಂತ ಕೊನೆಯಲ್ಲಿ ವೇಗಯುಕ್ತವಾದ (ವಾಹ ಶಬ್ದದ ಲಕ್ಷ್ಯಾರ್ಥ) ಸ್ಥಿತಿಕಾಲದಲ್ಲಿ ಮೆಲ್ಲಗೆ ಪ್ರವರ್ತಿಸುವ ಎಂದು ಇಟ್ಟುಕೊಳ್ಳಬೇಕು. ೨. ಸಂಸಾರಪ್ರವಾಹದಲ್ಲಿ ಬಿದ್ದವನಿಗೆ ಹೊರಬರುವ ಸ್ಥಳವಾದ ತಪೋವಿದ್ಯೆ ಮೊದಲಾದವುಗಳಲ್ಲಿ ಕಾಮ-ಕ್ರೋಧಾದಿಗಳನ್ನುಂಟು ಮಾಡಿ ಹೊರಬರಲು ಅವಕಾಶ ಕೊಡದಿರುವ **ಸೃಷ್ಟ್ಯಪ್ಯಯಕರೀಂ** ಸೃಷ್ಟಿ-ಸಂಹಾರಗಳಿಗೆ ಕಾರಣವಾದ **ಮಾಯಾಂ** ಶ್ರೀಹರಿಯ ಇಚ್ಛೆಯನ್ನು (ಈ ಮಾಯಾನದಿಯು ವೇಲಾಕೂಲಾಂತವೇಗಿನೀಂ ಅಂದರೆ ಪೂರ್ವತೀರ ಉತ್ತರತೀರಗಳು ಅವುಗಳ ಅಂತ ಮಧ್ಯದಲ್ಲಿ ವೇಗವುಳ್ಳ ಅಂದರೆ ಹೇಗೆ ನದಿಯು ಎರಡು ದಡಗಳ ಮಧ್ಯದಲ್ಲಿ ಹರಿಯುವದೋ ಹಾಗೆ ಭಗವಂತನ ಬಂಧಕಶಕ್ತಿ ಎಂಬ ನದಿಯು ಸೃಷ್ಟಿ-ಸಂಹಾರಗಳ ಮಧ್ಯದಲ್ಲಿದೆ. ಮತ್ತೆ ಮತ್ತೆ ಜನನ ಮರಣಗಳಿಗೆ ಕಾರಣವಾದ ವೇಗ ಉಳ್ಳದ್ದು ಎಂದು ಭಾವ) **ಮತ್ತಸ್ಯ** ವಿಷಯಾಸಕ್ತಿಯಿಂದ ಮರೆತ ೨. ಭಗವದ್ವಿಷಯಕ ಶ್ರವಣ-ಮನನಗಳನ್ನು ಮಾಡದ ಆದ್ದರಿಂದಲೇ **ತದವಿಜ್ಞಾನಾತ್** ೧. ಅದನ್ನು ತಿಳಿಯದಿರುವ ೨. ಜನನ-ಮರಣ ರೂಪ

ಸಂಸಾರವನ್ನು ಹೊಂದಿಸುವ ಭಗವದಿಚ್ಛೆಯನ್ನು ಅಭಿಮುಖ ಮಾಡಿಕೊಳ್ಳುವ ಉಪಾಯಗಳ ಜ್ಞಾನವಿಲ್ಲದ್ದರಿಂದ **ಅಸತ್ಕರ್ಮಭಿಃ** ಅಶ್ರದ್ಧೆಯಿಂದ ಮಾಡಿದ ಕಾಮಕ್ರೋಧಾದಿಗಳಿಂದ ಕಲುಷಿತವಾದ ತಪಸ್ಸು ಮೊದಲಾದ ಕರ್ಮಗಳಿಂದ **ಕಿಂ ಭವೇತ್** ಮಾಯೆಯ ನಿವೃತ್ತಿಯಾಗುವುದೇ? ಆಗಲಾರದು.

ಆಕಾಶದಿಂದ ವಾಯು ವಾಯುವಿನಿಂದ ಅಗ್ನಿ ಹೀಗೆ ಕ್ರಮವಾಗಿ ಸೃಷ್ಟಿಯು ಆಗುತ್ತದೆ. ಪೃಥ್ವಿಯು ತನಗೆ ಕಾರಣವಾದ ಜಲತತ್ತ್ವದಲ್ಲಿ ಜಲವು ತನಗೆ ಕಾರಣವಾದ ಅಗ್ನಿಯಲ್ಲಿ ಹೀಗೆ ವಿಪರೀತವಾಗಿ ಸಂಹಾರವಾಗುವುದರಿಂದ ಸೃಷ್ಟಿ-ಪ್ರಲಯ ನದಿಯು ಉಭಯತೋವಾಹ ಎರಡೂ ಕಡೆಗೆ ಹರಿಯುವದು ಎಂದು ಭಾವ. ನದಿಯಾದರೆ ಸಮುದ್ರಕ್ಕೆ ಸೇರುವ ಸ್ಥಳದಲ್ಲಿ ಸಮುದ್ರ ನೀರು ವೃದ್ಧಿಯಾದಾಗ ಹಿಂದಕ್ಕೂ ಇಲ್ಲದಿದ್ದಾಗ ಮುಂದಕ್ಕೂ ಹರಿಯುವದರಿಂದ ಎರಡೂ ಕಡೆಗೆ ಹರಿಯುವದು. ಸಾಧಾರಣ ಪ್ರವಾಹಕಾಲದಲ್ಲಿ ಸಸ್ಯಗಳ ಸೃಷ್ಟಿಗೆ ಅತಿಪ್ರವಾಹಕಾಲದಲ್ಲಿ ಸಸ್ಯನಾಶಕ್ಕೂ ಕಾರಣವಾಗುವದರಿಂದ ಸೃಷ್ಟಿ-ನಾಶಕರೀ ಎಂದು ತಿಳಿಯಬೇಕು.

**ತದವಿಜ್ಞಾಯ** ಈ ಮಾಯೆಯು ಯಾವನದ್ದೋ ಆ ಭಗವಂತನ ಮತ್ತು ಆ ಮಾಯೆಯ ತಿಳುವಳಿಕೆಯಿಲ್ಲದೆ ಎಂದರ್ಥ. ಪ್ರಸಿದ್ಧ ನದಿಯ ಸಾದೃಶ್ಯವನ್ನು **ವೇಗಿನೀಂ** ಎಂಬುದರಿಂದ ಹೇಳಿ ಅದರ ವೈಲಕ್ಷಣ್ಯವನ್ನು **ಉಭಯತೋವಾಹಾಂ** ಎಂಬ ವ್ಯಾಖ್ಯೇಯ ಪದದಿಂದ ಅದರ ವ್ಯಾಖ್ಯಾನ **ವೇಲಾಕೂಲಾಂತವೇಗಿನೀಂ** ಎಂಬುದರಿಂದ 'ಶೈಲಾ ಇವೋನ್ನತಾಃ ಸಂತಃ ಕಿಂತು ಪ್ರಕೃತಿಕೋಮಲಾಃ' ಎಂಬಲ್ಲಿಯಂತೆ ಹೇಳಿರುವರು ಎಂದಾಗಲಿ ಈ ಅಂಶದ ಅಭೂತೋಪಮಾ ಎಂದಾಗಲಿ ತಿಳಿಯಬೇಕು.

ಸಂಗಮಸ್ಥಳದಲ್ಲಿ ಭಾರಿ ಗಾಳಿಯಿಂದ ನೀರು ಹಿಂದೆ ಸರಿದಾಗ ಉಭಯತೋ ವಾಹತ್ವವು ನದಿಯಲ್ಲಿ ಕಂಡಿದೆ. ಯದ್ಯಪಿ ಬಹುವ್ರೀಹಿಯಿಂದಲೇ ಅರ್ಥ ಬರುವದು. ಆದರೂ ವೇಗಿನೀಂ ಎಂದು ನಿಂದಾರ್ಥಕ ಇನಿ ಪ್ರತ್ಯಯದಿಂದ ವೇಗಕ್ಕೆ ಅಸಹ್ಯತೆಯನ್ನು ತಿಳಿಸಿರುವರು ಎಂದು ಭಾವ. ।।೧೬।।

'ಪಂಚಪಂಚಾದ್ಭುತಗೃಹಂ' ಎಂಬುದರ ಅರ್ಥ ಹೇಳುವರು-

**ಪಂಚವಿಶಂತಿತತ್ವಾನಾಂ ಪುರುಷೋಽದ್ಭುತದರ್ಶನಃ ।**
**ಅಧ್ಯಾತ್ಮಮಬುಧಸ್ಯೇಹ ಕಿಮಸತ್ಕರ್ಮಭಿರ್ಭವೇತ್ ।।೧೭।।**

**ಪಂಚವಿಂಶತಿತತ್ವಾನಾಂ** ಇಪ್ಪತ್ತೈದು ತತ್ತ್ವಗಳ (ಹನ್ನೊಂದು ಇಂದ್ರಿಯಗಳು ಐದು ಭೂತಗಳು ಐದು ತನ್ಮಾತ್ರಾಗಳು ಪ್ರಕೃತಿ ಮಹತ್ ಅಹಂಕಾರ ಜೀವ ಇವು ಇಪ್ಪತ್ತೈದು ತತ್ತ್ವಗಳು) ಮಧ್ಯದಲ್ಲಿ **ಅದ್ಭುತದರ್ಶನಃ** ಅದ್ಭುತನಾಗಿ ಕಾಣುವ **ಪುರುಷಃ** ಗೃಹದಂತಿರುವ ಜೀವನು **ಅಧ್ಯಾತ್ಮಂ ಚ** ಅವನನ್ನು ಆಶ್ರಯಿಸಿರುವ ಇಂದ್ರಿಯಗಳು ಇವುಗಳನ್ನು **ಅಬುಧಸ್ಯ** ತಿಳಿಯದಿರುವ ಜೀವನಿಗೆ **ಅಸತ್ಕರ್ಮಭಿಃ ಕಿಂ ಭವೇತ್** 'ಓಂ ಇತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ ಮಾಮನುಸ್ಮರನ್' ಮುಂತಾದ ಸ್ಮೃತಿಗಳಲ್ಲಿ ಹೇಳಿದ ಬ್ರಹ್ಮ ವಿಷಯಕವಲ್ಲದ ಯೋಗಾಭ್ಯಾಸ ಮೊದಲಾದ ಕರ್ಮಗಳಿಂದ ವಾಯುಪ್ರಸಾದರೂಪ ಫಲವಾದೀತೇ ? ಆಗುವದಿಲ್ಲವೆಂದರ್ಥ.

ಇದರಿಂದ ಪಂಚಪಂಚ ಎಂಬುದರಿಂದ ಐದು ಐದುಗಳನ್ನು ಎಂದರೆ ಇಲ್ಲಿ ಹೇಳಿರುವ ಎರಡು ಐದುಗಳಲ್ಲದೇ ಇನ್ನೂ ಮೂರು ಐದುಗಳನ್ನು ತೆಗೆದುಕೊಳ್ಳಬೇಕೆಂದು ಸೂಚಿಸಿದಂತಾಯಿತು. ವಿಜಯಧ್ವಜರ ಪ್ರಕಾರ ಇದು.

ಚೆಟ್ಟಿ ಪ್ರಕಾರ ಮೇಲೆ ಹೇಳಿದ ಇಪ್ಪತ್ತೈದು ತತ್ತ್ವಗಳಿಗೆ **(ಆಶ್ರಯಃ)** ಆಶ್ರಯನಾದ **ಪುರುಷಃ** ಪೂರ್ಣಷಡ್ಗುಣನಾದ **ಅದ್ಭುತದರ್ಶನಃ** ಆಶ್ಚರ್ಯಕರವಾದ ಜ್ಞಾನವನ್ನುಂಟುಮಾಡುವ **ಅಧ್ಯಾತ್ಮಂ** ನಿಯಾಮಕನಾಗಿ ದೇಹೇಂದ್ರಿಯಾದಿಗಳಲ್ಲಿ ಅಧಿಷ್ಠಾತೃವಾದ ಶ್ರೀಹರಿಯನ್ನು **ಅಬುಧಸ್ಯ** ತಿಳಿಯದವನಿಗೆ **ಅಸತ್ಕರ್ಮಭಿಃ** ತಾನೇ ಸ್ವತಂತ್ರನೆಂಬ ಮಿಥ್ಯಾಭಿಮಾನದಿಂದ ಮಾಡಿದ ಕರ್ಮಗಳಿಂದ ಏನು ಫಲವಾದೀತು? ಶ್ರೀಹರಿಯು ಇಪ್ಪತ್ತೈದುತತ್ತ್ವಗಳಿಗೆ ಆಶ್ರಯನಾಗಿ ಜೀವರ ದೇಹದಲ್ಲಿದ್ದು ಜ್ಞಾನಪ್ರದನೆಂಬುದನ್ನು 'ಅಂತಸ್ಥಃ ಪುರುಷೋ ನಾಮ ಜ್ಞಾನದಃ ಸರ್ವದೇಹಿನಾಮ್ । ಬಹಿಸ್ಥ ಈಶ್ವರೋ ನಾಮ ಜ್ಞಾನಾದಿಫಲದೋ ಹರಿಃ ।' ಎಂಬ ಮಾತ್ಸ್ಯಪುರಾಣವು ತಿಳಿಸುವದು.

**ಶ್ರೀ ಸತ್ಯಧರ್ಮರ ಪ್ರಕಾರ**

ಪಂಚಭಿಃ ಮಹಾಭೂತೈಃ ಪುನಃ ಪಂಚಭಿಃ ತನ್ಮಾತ್ರಾಭಿಃ ಚತುರ್ಭಿಃ ಮಹದಹಂಕಾರಮನೋಬುದ್ಧ್ಯಾದಿಭಿಃ ದಶಭಿಃ ಇಂದ್ರಿಯೈಃ ಎಂದು 'ಪಂಚಭಿಃ ಪಂಚಭಿರ್ಬ್ರಹ್ಮ ಚತುರ್ಭಿರ್ದಶಭಿಃ'ಎಂಬ ಅನುವ್ಯಾಖ್ಯಾನದಲ್ಲಿ ಉದಾಹೃತವಾದ ಭಾಗವತದ ವಿವರಣ ರೂಪ ಸುಧಾದಲ್ಲಿ ಹೇಳಿದ ಇಪ್ಪತ್ನಾಲ್ಕು ಜೀವನೊಬ್ಬ ಹೀಗೆ ಇಪ್ಪತ್ತೈದು ತತ್ತ್ವಗಳ ಎಂದರ್ಥ. ಇದರಿಂದ ಪಂಚಪಂಚಾದ್ಭುತಗೃಹಂ ಎಂಬ

ಮೂಲದಲ್ಲಿ ಮೊದಲನೇ ಪಂಚ ಶಬ್ದ ನಕಾರಾಂತ ಎರಡನೇ ಪಂಚ ಶಬ್ದ 'ಪಂಚದ್ದಶತೌ ವರ್ಗೇ ವಾ' ಎಂದು ವರ್ಗಾರ್ಥದ ಅನ್ಯಥಾನುಪಪತ್ತಿಲಬ್ಧ ಡಪ್ರತ್ಯಯಾಂತವಾಗಿದೆ. ಆದ್ದರಿಂದ ಅದ್ಭುತಶಬ್ದಕ್ಕೆ ಪಂಚ ಚ ತೇ ಪಂಚಾಶ್ಚ ಪಂಚಂಪಚಾಃ ಪಂಚಪಂಚೈಃ ಅದ್ಭುತಂ ಪಂಚಪಂಚಾದ್ಭುತಂ ಎಂದು ಸಮಾಸ ಮಾಡಿ ಐದು ಐದು ವರ್ಗಗಳಿಂದ (ಪಂಚ ಪಂಚಕಗಳಿಂದ ಆಶ್ಚರ್ಯಕರವಾದ ಗೃಹಸ್ಥಾನೀಯವಾದ ಎಂದರ್ಥ ಮಾಡಿದಂತಾಯಿತು. ಇದರಂತೆ ಇರುವ ಸ್ಥಳದಲ್ಲಿ (ಪ್ರಪಂಚೋ ಭೇದಪಂಚಕಃ ಎಂಬ ಅನುವ್ಯಾಖ್ಯಾನವ್ಯಾಖ್ಯಾನದಲ್ಲಿ) ಪಂಚಾನಾಂ ವರ್ಗಃ ಮುಂತಾಗಿ ಆದರಂತೆ 'ನಸಂಖ್ಯೋಪಸಂಗ್ರಹಾದಪಿ ನಾನಾಭಾವಾ-ದತಿರೇಕಾಚ್ಚ' ಎಂಬ ಸೂತ್ರಭಾಷ್ಯ-ಅನುಭಾಷ್ಯ ವ್ಯಾಖ್ಯಾನ ಸುಧಾ-ತತ್ತ್ವ ಪ್ರಕಾಶಿಕಾ -ಚಂದ್ರಿಕಾ- ವಾಕ್ಯಾರ್ಥಚಂದ್ರಿಕಾಗಳಿಂದ ವಿಷಯ ತಿಳಿಯಿರಿ ಎನ್ನುತ್ತಾರೆ ಶ್ರೀಗಳು.

ಅದ್ಭುತಂ ದರ್ಶಯತೀತಿ ಅದ್ಭುತದರ್ಶನಃ ತಂ ಆಶ್ಚರ್ಯ ತೋರಿಸುವವನು. **ಅಧ್ಯಾತ್ಮಂ** ಈ ಇಪ್ಪತ್ತೈದು ತತ್ತ್ವಾತ್ಮಕ ಶರೀರದಲ್ಲಿ ತತ್ತ್ವಗಳ ಮಧ್ಯದಲ್ಲಿ ಇರುವ ಪರಮಾತ್ಮನನ್ನು ಎಂದರ್ಥ. ಪಂಚತಾಂ ಪಂಚವಿಂಶ ಎಂದು ಸಪ್ತಮಸ್ಕಂಧದಲ್ಲಿ ಹೇಳಿರುವದರಿಂದ ಜೀವನನ್ನು ಸೇರಿಸಿಕೊಂಡು ಇಪ್ಪತ್ತೈದು ತತ್ತ್ವಗಳು ಎಂದು ಹೇಳಿದ್ದು 'ಅಧ್ಯಾತ್ಮಂ ಜೀವ ಉಚ್ಯತೇ' ಎಂದು ಗೀತಾಭಾಷ್ಯದಲ್ಲಿದೆ. ಇಪ್ಪತ್ತಾರು ಎಂಬ ಪಕ್ಷದಲ್ಲಿ ಪರಮಾತ್ಮನನ್ನು ಸೇರಿಸಬೇಕು. ।।೧೭।।

'ಕ್ವಚಿದ್ಧಂಸಂ ಚಿತ್ರಕಥಂ' ಎಂಬುದಕ್ಕೆ ಉತ್ತರಿಸುವರೆಂದು ಹೇಳುವರು-

**ಐಶ್ವರಂ ಶಾಸ್ತ್ರಮುತ್ಸೃಜ್ಯ ಬಂಧಮೋಕ್ಷಾನುದರ್ಶನಮ್ ।**
**ವಿವಿಕ್ತಪದಮಜ್ಞಾತ್ವಾ ಕಿಮಸತ್ಕರ್ಮಭಿರ್ಭವೇತ್ ।।೧೮।।**

**ಬಂಧಮೋಕ್ಷಾನುದರ್ಶನಂ** ಬಂಧ-ಮೋಕ್ಷಗಳನ್ನು ತಿಳಿಸುವ ಆದ್ದರಿಂದಲೇ ಹಂಸವೆನಿಸುವ **ವಿವಿಕ್ತಪದಂ** ಎಲ್ಲಕ್ಕಿಂತಲೂ ಸಾರವಾದುದನ್ನು ಹೊಂದಲು ಅನುಕೂಲವಾದ ೨. ಪರಾಪರತತ್ತ್ವಗಳನ್ನು **ವಿವಿಚ್ಯ** (ಬೇರ್ಪಡಿಸಿ) ತಿಳಿಸಿಕೊಡುವ ೩. ಸಮಾಧಿ (ಮುಂತಾದ) **ಗುಹ್ಯದರ್ಶನಂ** ಭಾಷಾತ್ರಯಗಳಿಂದ ಕೂಡಿರುವದರಿಂದ ವಿಲಕ್ಷಣಲಕ್ಷಣಗಳುಳ್ಳ ಪದಗಳುಳ್ಳ ಅಥವಾ ಸರ್ವವೈಲಕ್ಷಣ್ಯವನ್ನು ತಿಳಿಯಲು ಸಾಧನವಾದ 'ಪದ್ಯತೇ ಅನೇನೇತಿ ಪದಂ ಸಾಧನಂ' ಎಂದು ಬೃಹದ್ಭಾಷ್ಯದಲ್ಲಿದೆ. ಅಥವಾ ನಾರಾಯಣನೆಂಬ ವಿಲಕ್ಷಣ ವಸ್ತುವು ವಿಷಯವಾಗಿರುವ **ಐಶ್ವರಂ ಶಾಸ್ತ್ರಂ**

ಶ್ರೀಹರಿಪ್ರತಿಪಾದಕವಾದ ಭಾರತಾದಿಶಾಸ್ತ್ರವನ್ನು **ಅಜ್ಞಾತ್ವಾ** ತಿಳಿಯದೇ ಇರುವವನಿಗೆ **ಉತ್ಸೃಜ್ಯ** ಶ್ರವಣಾದಿಗಳನ್ನು ಮಾಡದೇ **ಅಸತ್ಕರ್ಮಭಿಃ** ಕಾಮ್ಯಕರ್ಮಗಳಿಂದ ಬೌದ್ಧಾದಿ ಶಾಸ್ತ್ರಶ್ರವಣ ಮುಂತಾದ ಕರ್ಮಗಳಿಂದ ಬಹಿರ್ಮುಖಕರ್ಮಗಳಿಂದ **ಕಿಂ ಭವೇತ್** ಜ್ಞಾನವೆಂಬ ಫಲ ಬಂದೀತೇ? ಬರಲಾರದು.

ಪಿಠಿಕಾದಲ್ಲಿ ಹಂಸಪದವನ್ನು ವ್ಯಾಖ್ಯಾನದಲ್ಲಿ ವಿವಿಕ್ತಂ ಎಂದು ಹೇಳಿದ್ದರಿಂದ ಹಾಲು ನೀರು ಸೇರಿಸಿಟ್ಟರೆ ಹಂಸವು ಹೇಗೆ ಸಂಶೋಧಿಸಿ ಹಾಲು ಮಾತ್ರ ಸ್ವೀಕರಿಸುವಂತೆ ಭಾಷಾತ್ರಯವೇದ್ಯನಾದ ವಿಲಕ್ಷಣನಾದ ಭಗವಂತನನ್ನು ಭಾರತಾದಿ ಶಾಸ್ತ್ರಗಳು ತಿಳಿಸುವವು ಎಂದು ಲುಪ್ತೋಪಮಾ. ಭಾಷಾತ್ರಯದಿಂದ ಹೇಳುವದರಿಂದ ಚಿತ್ರಕಥನ ರೂಪವೆಂದಂತಾಯಿತು. ||೧೮||

'ಕ್ಷುರಾಂತಂ ಚ ಸ್ವಯಂ ಭ್ರಮಿಂ' ಎಂಬುದನ್ನು ಉತ್ತರಿಸುವರು-

**ಕಾಲಚಕ್ರಂ ಭ್ರಮಿಂ ತೀಕ್ಷ್ಣಂ ಸರ್ವಂ ನಿಷ್ಕರ್ಷಯಜ್ಜಗತ್ ।**
**ಸ್ವತಂತ್ರಮಬುಧೇಸ್ಯೇಹ ಕಿಮಸತ್ಕರ್ಮಭಿರ್ಭವೇತ್ ||೧೯||**

**ಭ್ರಮಿಂ** ಭ್ರಾಮಕನಾದ್ದರಿಂದ ಭ್ರಮಿ ಶಬ್ದ ವಾಚ್ಯನಾದ 'ಭ್ರಾಮಯನ್ ಸರ್ವಭೂತಾನಿ' ಎಂದಿದೆ. **ಸರ್ವಂ ಜಗತ್** ಎಲ್ಲ ಜಗತ್ತನ್ನು **ನಿಷ್ಕರ್ಷಯತ್** ಹೀಗೆಯೇ ಇರಬೇಕೆಂದು ನಿರ್ಣಯಿಸುವ **ತೀಕ್ಷ್ಣಂ** ಕತ್ತಿಯ ಅಲಗಿನಂತೆ ಹರಿತವಾದ **ಸ್ವತಂತ್ರಂ** ಶ್ರೀಹರಿಯಿಂದ ಮಾತ್ರ ಪ್ರವರ್ತಿಸಲ್ಪಡುವ **ಕಾಲಚಕ್ರಂ** ಹನ್ನೆರಡು ತಿಂಗಳುಗಳೆಂಬ ಅರ (ಹಲ್ಲು) ಗಳುಳ್ಳ (ಆದ್ದರಿಂದ ಚಕ್ರವೆನಿಸುವ) **ಕಾಲಚಕ್ರಂ** ಕಾಲಚಕ್ರವನ್ನು **ಅಬುಧಸ್ಯ** ತಿಳಿಯದವನಿಗೆ **ಇಹ** ಜೀವಲೋಕದಲ್ಲಿ **ಅಸತ್ಕರ್ಮಭಿಃ** ಆಯಾ ಕಾಲದಲ್ಲಿ ವಿಹಿತವೆಂದು ತಿಳಿಯದೆ ಮಾಡಿದ ಹಾಗೂ ಸ್ವರ್ಗಾದಿಗಳೇ ನಿತ್ಯಫಲಗಳೆಂದು ಭಾವಿಸಿ ಮಾಡಿದ ಕಾಮ್ಯಕರ್ಮಗಳಿಂದ **ಕಿಂ ಭವೇತ್** ಕಾಲ ಜಯ ರೂಪ ಫಲವಾಗುವುದೇ? ಆಗುವದಿಲ್ಲವೆಂದರ್ಥ.

**ವಿಶಿಷ್ಟಅರ್ಥ**

ಕಾಲಶ್ಚಾಸೌ ಚಕ್ರಂ ಚ ಕಾಲಚಕ್ರಂ ಭಗವಂತನನ್ನು ಎಂದರ್ಥ. 'ಕಾಲೋಸ್ಮಿ ಲೋಕ ಕ್ಷಯಕೃತ್' 'ಚಕ್ರಂ ಚಂಕ್ರಮಣಾದೇಷಃ' ಎಂದಿದೆ. ಭ್ರಮಿಂ ಎಂಬುದು ಬಿಂದ್ವಂತ ವಾದುದು. 'ಅಶನಾಯಾಂ ಹಿ ಮೃತ್ಯುಃ' ಎಂಬುದರ 'ಆಧಿಕ್ಯೇ ಅಧಿಕಂ' ಎಂಬ ಸೂತ್ರದ ಪ್ರಕಾರ ಎಂದು ಭಾಷ್ಯದಲ್ಲಿ ಹೇಳಿದ ಅಶನಾಯಾಂ ಶಬ್ದದಂತೆ. 'ತೃತೀಯೋಽತಿಶಯೇ'

ಎಂದಿರುವದರಿಂದ ಅಕಾರ ಸ್ಥಾನದಲ್ಲಿ ಇಕಾರವಿದೆ ಅತಿಶಯೇನ ಭಮತ್ ಭ್ರಮಿಂ ಬೇರೆ ಕಾಲಚಕ್ರವನ್ನು ಅತಿಯಾಗಿ ತಿರುಗಿಸುವ ಎಂದರ್ಥ.

'ಸೊಮ್ಯಾನಾಂ ಭ್ರಮಿರಸಿ' ಎಂಬ ಋಗ್ಭಾಷ್ಯದಲ್ಲಿ 'ತ್ವಂ ಭ್ರಾಮಕೋ ಮಾನುಷಾಣಾಮೃಷೀಣಾಂ' ಎಂದಿದ್ದಾರೆ. ನಭೋವಲಯಸ್ಯ ಕಾಲಚಕ್ರಗತೋ ದ್ವಾದಶಮಾಸಾನ್ ಭುಂಕ್ತೇ' ಎಂದು ಪಂಚಮಸ್ಕಂಧದಲ್ಲಿ ಹೇಳಿದೆ. ಕ್ಷುರಾಂತ ಶಬ್ದ ವ್ಯಾಖ್ಯಾನವೇ ತೀಕ್ಷ್ಣಂ ಎಂದು. ಸರ್ವಜಗತ್ಕರ್ಷಣ ಚಕ್ರದ ಕಾರ್ಯ.

**ಸ್ವತಂತ್ರಂ** 'ಪರಸ್ತ್ವೋ ಹರಿರುದ್ದಾಮಃ' ಎಂದಿರುವದರಿಂದ **ಸ್ವಃ** ಹರಿ **ತಂತ್ರ** ಅವನ ಅಧೀನವಾದ ಚಕ್ರ ಕಾಲಚಕ್ರ ಎಂದರ್ಥ. ಚಕ್ರ ವಜ್ರ ಅಂಧಕಾರ ಸಾರ ಪಾರ ಕ್ಷೀರ ಮುಂತಾಗಿ ಹೇಳಿ 'ನಪುಂಸಕಂ ಚ' ಎಂದು ಲಿಂಗಾನುಶಾಸನದಲ್ಲಿ ಹೇಳಿರುವದರಿಂದ ಚಕ್ರಶಬ್ದ ಪುಲ್ಲಿಂಗ ಎಂದಿಟ್ಟುಕೊಂಡಾಗ ಭ್ರಮಿಂ ಎಂದು ದ್ವಿತೀಯಾ ಉಪಪನ್ನವಾಗುವದು. ।।೧೯।।

'ಕಥಂ ಸ್ವಪಿತುರಾದೇಶಂ' ಎಂಬುದಕ್ಕೆ ಸದೃಶವಾದ ಆಂತರಂಗಿಕ ಅರ್ಥವನ್ನು ಹೇಳುವರು-

**ಶಾಸ್ತ್ರಸ್ಯ ಪಿತುರಾದೇಶಂ ಯೋ ನ ವೇದ ನಿವರ್ತಕಮ್ ।**
**ಕಥಂ ತದನುರೂಪಾಯ ಗುಣವಿಶ್ರಂಭ್ಯುಪಕ್ರಮೇತ್ ।।೨೦।।**

**ಯಃ** ಯಾವನು **ಪಿತುಃ** ತಂದೆಯಂತೆ ಹಿತವನ್ನು ಉಪದೇಶಿಸುವದರಿಂದ ಪಿತಾ ಎನಿಸಿಕೊಳ್ಳುವ **ಶಾಸ್ತ್ರಸ್ಯ** 'ಪ್ರಾತರುತ್ಥಾಯ ಸಂಧ್ಯಾಂ ಉಪಾಸೀತ' 'ತದ್ವಿಜಿಜ್ಞಾಸಸ್ವ ತದ್ಬ್ರಹ್ಮ' ಸಂಧ್ಯಾ-ಉಪಾಸನಾಗಳನ್ನು ತಿಳಿಸುವ **ಆದೇಶಂ** ಅಪ್ಪಣೆಯನ್ನು **ನ ವೇದ** ತಿಳಿಯುವುದಿಲ್ಲವೋ **ಸಃ** ಆ **ಗುಣವಿಶ್ರಂಭಿ** ಗುಣತ್ರಯ ವಿಶ್ವಾಸಿಯಾದ ಪುರುಷನು **ತದನುರೂಪಾಯ** ಶಾಸ್ತ್ರ ವಿಧಾನಾನುಗುಣವಾಗುವದಕ್ಕೆ **ಕಥಂ ಉಪಕ್ರಮೇತ್** ಸತ್ಕರ್ಮ ಮಾಡಲಾರಂಭಿಸಿಯಾನು? ತಿಳದವನಲ್ಲ ಆದ್ದರಿಂದ ಉಪಕ್ರಮಿಸಲಾರನೆಂದರ್ಥ.

'ಮಾತೇವ ರಕ್ಷತಿ ಪಿತೇವ ಹಿತೇ ನಿಯುಂಕ್ತೇ' ಎಂಬ ವಚನವು ಶಾಸ್ತ್ರವು ತಂದೆಯಂತೆ ಹಿತಕಾರಿಯೆಂದು ತಿಳಿಸುವದು. ೨. ಪಿತುಃ ಎರಡನೇ ಜನ್ಮಕ್ಕೆ ಕಾರಣವಾದ ಶಾಸ್ತ್ರದ **ತದನುರೂಪಾಯ** ನಿವೃತ್ತಿಮಾರ್ಗಕ್ಕೆ ಅರ್ಹನಾದವನಿಗೆ **ನಿವರ್ತಕಂ ಆದೇಶಂ** ನಿವೃತ್ತಿಮಾರ್ಗದ ಉಪದೇಶವನ್ನು **ನ ವೇದ** ಯಾವನು

ತಿಳಿಯುವದಿಲ್ಲವೋ ಆ **ಗುಣವಿಶ್ರಂಭಿ** ಗುಣಮಯವಾದ ಪ್ರವೃತ್ತಿಮಾರ್ಗದಲ್ಲಿ ವಿಶ್ವಾಸ ಉಳ್ಳ ಪುರುಷನು **ಕಥಂ ಉಪಕ್ರಮೇತ್** ನಿವೃತ್ತಿಮಾರ್ಗವನ್ನು ಹೇಗೆ ಅನುಷ್ಠಾನ ಮಾಡಲಾರಂಭಿಸಿಯಾನು? ನಿವೃತ್ತಿಮಾರ್ಗಾನುಷ್ಠಾನಾರ್ಹನಾದವನು ನಿವರ್ತಕ ಶಾಸ್ತ್ರಾಭಿಪ್ರಾಯ ತಿಳಿದು ಶ್ರೀಹರಿಯನ್ನೇ ಸೇವಿಸಬೇಕು ಹೊರತು ಪ್ರಜಾಸೃಷ್ಟಿ ಮುಂತಾದ ಪ್ರವೃತ್ತಕರ್ಮದಲ್ಲಿ ತೊಡಗಬಾರದು ಎಂದು ಅಭಿಪ್ರಾಯ. (ಚೆಟ್ಟಿ) ॥೨೦॥

**ಇತಿ ವ್ಯವಸಿತಾ ರಾಜನ್ ಹರ್ಯಶ್ವಾ ಏಕಮೇಧಸಃ ।**
**ಪ್ರಯಯುಸ್ತಂ ಪರಿಕ್ರಮ್ಯ ಪಂಥಾನಮನಿವರ್ತಕಮ್ ॥೨೦॥**

**ರಾಜನ್** ಪರೀಕ್ಷಿತನೇ **ಇತಿ ವ್ಯವಸಿತಾಃ** ಈ ರೀತಿ ನಿಶ್ಚಯವುಳ್ಳವರಾಗಿ **ಏಕಮೇಧಸಃ** ಒಂದೇ ರೀತಿಯ ಬುದ್ಧಿಯುಳ್ಳ (ಮೇಧಾ ಶಬ್ದದ ಪರ್ಯಾಯ ಮೇಧಸ್ ಶಬ್ದವಿದು) (ಏಕಚೇತಸಃ ಎಂಬ ಪಾಠವೂ ಚೇತೋಹಾರಿಯೇ) **ಹರ್ಯಶ್ವಾಃ** ಈ ಹೆಸರಿನ ದಕ್ಷಪುತ್ರರು **ತಂ** ನಾರದರನ್ನು **ಪರಿಕ್ರಮ್ಯ** ತತ್ತ್ವೋಪದೇಶಕರಾದ್ದರಿಂದ ಪ್ರದಕ್ಷಿಣೆ ಮಾಡಿ **ಅನಿವರ್ತಕಂ ಪಂಥಾನಂ** ಸಂನ್ಯಾಸವೆಂಬ ಮಾರ್ಗವನ್ನು ತಿರುಗಿಬಾರದ ಮೋಕ್ಷ ಮಾರ್ಗವನ್ನು **ಪ್ರಯಯುಃ** ದೃಢಮನಸ್ಸಿನಿಂದ ಆಶ್ರಯಿಸಿದರು.

ಪ್ರಜಾಸೃಷ್ಟಿಯಲ್ಲಿ ವಿಮುಖರಾಗಿ ಶ್ರೀಹರಿಯ ತಪಸ್ಸಿನಲ್ಲಿ ನಿರತರಾದರು. ಸನ್ಯಾಸ ತೆಗೆದುಕೊಂಡ ಮೇಲೆ ಮತ್ತೊಂದು ಆಶ್ರಮವನ್ನು ತೆಗೆದುಕೊಳ್ಳುವಂತಿಲ್ಲವಾದ್ದರಿಂದ ಅನಿವರ್ತಕವೆಂದು ಹೆಸರು. ಅನಿವರ್ತಕಂ ಎಂದರೆ ನಿವರ್ತಕ ನಿವೃತ್ತಿವುಳ್ಳ ಅಂದರೆ ನಿವರ್ತಕರಿಲ್ಲದ ಮಾರ್ಗವೆಂದೂ ಅರ್ಥ. ತಾವೆಲ್ಲರೂ ಏಕಮತಿಕರು ಆಗಮಗಳು ಇದನ್ನೇ ಹೇಳುವವು ನಿಷೇಧಕರಾದ ನರರು ಬೇರೇ ಯಾರೂ ಇಲ್ಲ ಆದ್ದರಿಂದ ಎಂದೂ ಭಾವ. ॥೨೦॥

ಪ್ರಚೇತಸರನ್ನು ಪ್ರಚೇತಸರನ್ನಾಗಿ ಮಾಡಿ (ಒಳ್ಳೆಯ ಬುದ್ಧಿಯುಳ್ಳವರನ್ನಾಗಿ ಮಾಡಿ) ನಾರದರೇನು ಮಾಡಿದರು ಎಂದು ಹೇಳುವರು-

**ಸ್ವರಬ್ರಹ್ಮಣಿ ನಿರ್ಭಾತೇ ಹೃಷೀಕೇಶಪದಾಂಬುಜೇ ।**
**ಅಖಂಡಂ ಚಿತ್ತಮಾವೇಶ್ಯ ಲೋಕಾನನ್ವಚರನ್ಮುಹುಃ ॥೨೨॥**

**ಸ್ವರಬ್ರಹ್ಮಣಿ** ಮಹತೀ ಎಂಬ ವೀಣೆಯಿಂದುಂಟಾದ ಷಡ್ಜ ಮೊದಲಾದ ಸ್ವರಗಳೆಂಬ ಗಾಂಧರ್ವವಿದ್ಯೆಯು, **ನಿರ್ಭಾತೇ** ಚೆನ್ನಾಗಿ ಪ್ರಕಾಶವಾಗಿರಲು **ಅಖಂಡಂ** ನಿರಂತರವಾಗಿ **ಹೃಷೀಕೇಶಪದಾಂಬುಜೇ** ಶ್ರೀಹರಿಯ ಪಾದಕಮಲಗಳಲ್ಲಿ **ಚಿತ್ತಂ** ಮನಸ್ಸನ್ನು **ಆವೇಶ್ಯ** ಇರಿಸಿ **ಮುನಿಃ** ನಾರದರು **ಲೋಕಾನ್** ಲೋಕಗಳನ್ನು **ಅನ್ವಚರತ್** ಸಂಚರಿಸಿದರು.

**ನಿರ್ಭಾತಂ** ಎಂಬ ಪಾಠದಲ್ಲಿ ಚಿತ್ತಕ್ಕೆ ವಿಶೇಷಣವೆಂದು ತಿಳಿಯಬೇಕು. ನಿಪುಣವಾದ ಮನಸ್ಸನ್ನು ಎಂದರ್ಥ ತಿಳಿಯಬೇಕು. **ಮುಹುಃ** ಎಂಬ ಪಾಠದಲ್ಲಿ ಪುನಃ ಪುನಃ ಸಂಚರಿಸಿದರು ಎಂದರ್ಥ.

**ವಿಶೇಷಾರ್ಥ** ಹೃಷ್ಯಃ ಕೇಶಾಃ ಅಂಶವಃ ಯಸ್ಯ ಸಃ ಹೃಷೀಕೇಶಃ **ಹೃಷೀಕೇಶ ಪದಾಬುಂಜೇ** ಎಂಬಲ್ಲಿ ಸಂತೋಷ ಜನಕವಾದ ಅಂಶಗಳುಳ್ಳವನು ಎಂದರ್ಥ. ೧೧ ನೇ ಅಧ್ಯಾಯ ೩೬ನೇ ಶ್ಲೋಕದ ಗೀತಾಭಾಷ್ಯ ಪ್ರಮೇಯದೀಪಿಕೆಗಳಲ್ಲಿ ಹೀಗೆ ಹೇಳಿದೆ. 'ಅಗ್ನೀಷೋಮಾದ್ಯಂತರ್ಯಾಮಿತಯಾ ಜಗದ್ಧರ್ಷಣಾತ್ ಹೃಷೀಕೇಶಃ ಕೇಶತ್ವಂ ತ್ವಂಶೂನಾಂ ತನ್ನಿಯಂತೃತ್ವಾದೇಃ ಪ್ರಮಾಣಂ ತು ಶಶಿಸೂರ್ಯನೇತ್ರ-ಮಿತ್ಯತ್ರೋಕ್ತಂ ಹೃಷೀಕಾಣಾಂ ಇಂದ್ರಿಯಾಣಾಂ ಈಶತ್ವಾಚ್ಚ ಹೃಷೀಕೇಶಃ 'ನ ಮೇ ಹೃಷೀಕಾಣಿ ಪತಂತ್ಯಸತ್ಪಥೇ' ಇತ್ಯಾದಿ ಪ್ರಯೋಗಾತ್ । ತೇಷಾಂ ಈಶತ್ವಂ ಚ ಯಃ 'ಪ್ರಾಣೇ ತಿಷ್ಠನ್' ಇತ್ಯಾದೌ ಸಿದ್ಧಂ ಇತರೋ ಅರ್ಥಃ ಮೋಕ್ಷಧರ್ಮೇ ಸಿದ್ಧಃ'

ಸೂರ್ಯಾಚಂದ್ರಮಸೌ ಶಶ್ವತ್ ಕೇಶೈರ್ಮೇ ಅಂಶುಸಂಜ್ಞಿತೈಃ ।
ಬೋಧಯನ್ ಸ್ಥಾಪಯಂಶ್ಚೈವ ಜಗದುತ್ಪದ್ಯತೇ ಪೃಥಕ್ ॥

ಬೋಧಯನ್ ಸ್ಥಾಪಯಂಶ್ಚೈವ ಜಗತೋ ಹರ್ಷಸಂಭವಾತ್ ।
ಅಗ್ನೀಷೋಮಕೃತೈರೇಭಿಃ ಕರ್ಮಭಿಃ ಪಾಂಡುನಂದನ ।
ಹೃಷೀಕೇಶೋಽಹಮೀಶಾನೋ ವರದೋ ಲೋಕಭಾವನಃ ॥ ಇತಿ ಗೀತಾಭಾಷ್ಯೇ

ಪ್ರಮೇಯದೀಪಿಕಾ ಹೃಷ್ಯತೇಃ ಕೀಪ್ರತ್ಯಯಃ ಹೃಷ್ಯಃ ಹರ್ಷಹೇತವಃ ಕೇಶಾಃ ಅಸ್ಯೇತಿ ಹೃಷೀಕೇಶಃ । ನಾನೇನ ಪ್ರಸಿದ್ಧೋಽರ್ಥಃ ತ್ಯಾಜ್ಯ ಇತಿ ಭಾವೇನ ತಮಪ್ಯಾಹ । ಹೃಷೀಕಾಣಾಮಿತಿ ॥

ಸತ್ಯಧರ್ಮರ ವ್ಯಾಖ್ಯಾನ- ಹೃಷೀ ಚಾಸೌ ಕಶ್ಚಾಸೌ ಈಶಶ್ಚ ಹೃಷೀಕೇಶಃ ನಿರುಕ್ತಂ ಚ ಉದ್ಯೋಗಪರ್ವಣಿ 'ಹರ್ಷಾತ್ ಸುಖಾತ್ ಸುಖೈಶ್ವರ್ಯಾತ್ ಹೃಷೀಕೇಶ ಇತ್ಯಾದಿನಾ ॥

**ಇದರ ಭಾವಾರ್ಥ** :- ಅಗ್ನಿ-ಸೋಮರಲ್ಲಿದ್ದು ಜಗತ್ತನ್ನು ಸಂತೋಷ ಪಡಿಸುವುದರಿಂದ ಪರಮಾತ್ಮ ಹೃಷೀಕೇಶನೆನಿಸುತ್ತಾನೆ. ಅಂಶಗಳಿಗೇಕೆ ಕೇಶತ್ವವೆಂದರೆ ಅವುಗಳಿಂದ ನಿಯತವಾದುದರಿಂದ. ಪ್ರಮಾಣವನ್ನು 'ಶಶಿಸೂರ್ಯನೇತ್ರಂ' ಎಂಬಲ್ಲಿ ಹೇಳಿದೆ. 'ತದಂಗಜಾಃ ಸರ್ವಸುರಾದಯೋऽಪಿ ತಸ್ಮಾತ್ ತದಂಗೇತಿ ಋಷಿಭಿಃ ಸ್ತುತಾಸ್ತೇ' ಮೋಕ್ಷಧರ್ಮ ವಚನದ ಅರ್ಥ- ಹೇ ಪಾಂಡುನಂದನನೇ ಅಂಶವೆನಿಸುವ ನನ್ನ ಕೇಶಗಳಿಂದ ಯಾವಾಗಲೂ ಸೂರ್ಯಚಂದ್ರರನ್ನು ಬೋಧಿಸುತ್ತ ಸ್ಥಾಪಿಸುತ್ತ ಜಗತ್ತು ಪ್ರತ್ಯೇಕವಾಗಿ ಜನಿಸುವದು. ಬೋಧಿಸುವದರಿಂದ ಸ್ಥಾಪಿಸುವದರಿಂದ ಜಗತ್ತಿಗೆ ಹರ್ಷ ಉಂಟಾಗುವದರಿಂದ ಅಗ್ನಿಷೋಮ ಕೃತವಾದ ಈ ಕರ್ಮಗಳಿಂದ ನಾನು ಹೃಷೀಕೇಶನು ನಿಯಾಮಕನು ವರಪ್ರದನು ಜಗದುತ್ಪಾದಕನು ಆಗಿದ್ದೇನೆ. 'ನ ಮೇ ಹೃಷೀಕಾಣಿ' ಎಂದಿರುವುದರಿಂದ ಇಂದ್ರಿಯಗಳಿಗೆ ನಿಯಾಮಕನಾದುದರಿಂದಲೂ ಹೃಷೀಕೇಶನೆನ್ನುವರು.

ಇನ್ನು ಪ್ರಮೇಯದೀಪಿಕಾದಲ್ಲಿ ಬಂದಿರುವ ವಿಷಯವು ಈ ರೀತಿಯಾಗಿದೆ. ಹೃಷ ಧಾತುವಿಗೆ ಕೀ ಪ್ರತ್ಯಯ. ಹೃಷ್ಯಃ ಎಂದರೆ ಹರ್ಷ ಕಾರಣವಾದ ಕೇಶಗಳುಳ್ಳವನು ಹೃಷೀಕೇಶ. ಇದರಿಂದ ಪ್ರಸಿದ್ಧ ಅರ್ಥ ಬಿಡಬಾರದು ಎಂಬ ಅಭಿಪ್ರಾಯದಿಂದ ಈ ಅರ್ಥವನ್ನು ಹೇಳುವರು ಹೃಷೀಕಾಣಾಂ ಎಂದು. ಇದರಿಂದ ಹೃಷೀ ಚಾಸೌ ಕಶ್ಚಾಸೌ ಈಶಶ್ಚ ಹೃಷೀಕೇಶಃ ಎಂಬಂತೆ ಉದ್ಯೋಗಪರ್ವದಲ್ಲಿ ನಿರ್ವಚನ ಮಾಡಿದೆ. ಹರ್ಷಾತ್ ಸುಖಾತ್ ಸುಖೈಶ್ವರ್ಯಾತ್ ಹೃಷೀಕೇಶಃ ಮುಂತಾಗಿ ಎಂದು ಭಾವ.

**ನಾಶಂ ನಿಶಮ್ಯ ಪುತ್ರಾಣಾಂ ನಾರದಾತ್ ಶೀಲಶಾಲಿನಾಮ್ ।**
**ಅನ್ವತಪ್ಯತ ಕಃ ಶೋಚನ್ ಸುಪ್ರಜಾಸ್ತ್ವಂ ಶುಚಾಂ ಪದಮ್ ॥೨೩॥**

**ಕಃ** ದಕ್ಷಪ್ರಜಾಪತಿಯು **ಶೀಲಶಾಲಿನಾಂ** ಒಳ್ಳೆಯ ಸ್ವಭಾವದಿಂದ ಶೋಭಿಸುವ ನಡತೆವಂತರಾದ **ಪುತ್ರಾಣಾಂ** ಹರ್ಯಶ್ವರ **ನಾರದಾತ್** ನಾರದರಿಂದ ಆದ **ನಾಶಂ** ಅದರ್ಶನವನ್ನು ಪ್ರಜಾಸೃಷ್ಟಿವಿಮುಖತೆಯನ್ನು (ನಾರದರ ಮಾತಿನಿಂದ ಹರ್ಯಶ್ವರು ಪ್ರಜಾಸೃಷ್ಟಿ ಮಾಡದೇ ಸನ್ಯಾಸಿಗಳಾದರೆಂಬುದನ್ನು) **ನಿಶಮ್ಯ** ಕೇಳಿ **ಸುಪ್ರಜಾಸ್ತ್ವಂ** ಒಳ್ಳೆ ಮಕ್ಕಳನ್ನು ಹೊಂದಿರುವಿಕೆಯು **ಶುಚಾಂ** ದುಃಖಗಳಿಗೆ **ಪದಂ** ಸ್ಥಾನವು ಎಂದು ಯೋಚಿಸಿ **ಶೋಚನ್** ದುಃಖಿಸುತ್ತ **ಅನ್ವತಪ್ಯತ** ಪಶ್ಚಾತ್ತಾಪ ಪಟ್ಟನು. ॥೨೩॥

ಸುಪ್ರಜಾಸ್ತ್ವಂ ಮುಂತಾದವು ಶುಕಾಚಾರ್ಯರ ಮಾತು.

**ಸ ಭೂಯಃ ಪಾಂಚಜನ್ಯಾಯಾಮಜೇನ ಪರಿಸಾಂತ್ವಿತಃ ।**
**ಪುತ್ರಾನಜನಯದ್ ದಕ್ಷಃ ಶಬಲಾಶ್ವಾನ್ ಸಹಸ್ರಿಣಃ ॥೨೪॥**

**ಸಃ ದಕ್ಷಃ** ಆ ದಕ್ಷಪ್ರಜಾಪತಿಯು **ಅಜೇನ** ಬ್ರಹ್ಮದೇವರಿಂದ **ಪರಿಸಾಂತ್ವಿತಃ** ಸಮಾಧಾನ ಪಡಿಸಲ್ಪಟ್ಟು **ಪಾಂಚಜನ್ಯಾಯಾಂ** ಪಾಂಚಜನ್ಯಾ ಎಂಬ ಹೆಸರಿನ ಪತ್ನಿಯಲ್ಲಿ **ಸಹಸ್ರಿಣಃ** ಸಾವಿರಸಂಖ್ಯೆಯುಳ್ಳ **ಶಬಲಾಶ್ವಾನ್ ಪುತ್ರಾನ್ ಅಜನಯತ್** ಶಬಲಾಶ್ವರೆಂಬ ಮಕ್ಕಳನ್ನು ಹುಟ್ಟಿಸಿದನು. ॥೨೪॥

**ತೇಽಪಿ ಪಿತ್ರಾ ಸಮಾದಿಷ್ಟಾಃ ಪ್ರಜಾಸರ್ಗೇ ಧೃತವ್ರತಾಃ ।**
**ನಾರಾಯಣಸರೋ ಜಗ್ಮುರ್ಯತ್ರ ಸಿದ್ಧಾಸ್ತು ಪೂರ್ವಜಾಃ ॥೨೫॥**

**ಪಿತ್ರಾ** ತಂದೆಯಿಂದ **ಪ್ರಜಾಸರ್ಗೇ** ಪ್ರಜಾಸೃಷ್ಟಿಯಲ್ಲಿ **ಸಮಾದಿಷ್ಟಾಃ** ಆಜ್ಞಪ್ತರಾದ **ತೇಽಪಿ** ಶಬಲಾಶ್ವರು **ಧೃತವ್ರತಾಃ** ವ್ರತವನ್ನು ಸ್ವೀಕರಿಸಿದವರಾಗಿ **ಯತ್ರ** ಯಾವ ಸರೋವರದಲ್ಲಿ **ಪೂರ್ವಜಾಃ** ಅಣ್ಣಂದಿರು **ಸಿದ್ಧಾಃ** ಸಿದ್ಧಿ ಪಡೆದರೋ ಅಂತಹ **ನಾರಾಯಣಸರಃ** ನಾರಾಯಣ ಸರೋವರವನ್ನು ಕುರಿತು **ಜಗ್ಮುಃ** ತೆರಳಿದರು. ॥೨೫॥

**ತದುಪಸ್ಪರ್ಶನಾದೇವ ವಿನಿರ್ಧೂತಮಲಾಶಯಾಃ ।**
**ಜಪಂತೋ ಬ್ರಹ್ಮ ಪರಮಂ ತೇಪುಸ್ತತ್ರ ಮಹತ್ತಪಃ ॥೨೬॥**

**ತತ್ರ** ಆ ಸರೋವರದಲ್ಲಿ **ತದುಪಸ್ಪರ್ಶನಾದೇವ** ಅದರ ನೀರಿನ ಸ್ನಾನಾದಿಗಳಿಂದಲೇ **ವಿನಿರ್ಧೂತಮಲಾಶಯಾಃ** ಅಂತಃಕರಣದ ಮಾಲಿನ್ಯವನ್ನು ವಿಶೇಷವಾಗಿ ಪರಿಹರಿಸಿಕೊಂಡವರಾಗಿ **ಪರಮಂ ಬ್ರಹ್ಮ** ಪರಬ್ರಹ್ಮ ಪ್ರತಿಪಾದಕವಾದ ಪ್ರಣವವನ್ನು ಅಥವಾ ಮುಂದೆ ಹೇಳುವ ಮಂತ್ರವನ್ನು **ಜಪಂತಃ** ಜಪಿಸುತ್ತ **ಮಹತ್ ತಪಃ ತೇಪುಃ** ಮಹತ್ತರವಾದ ತಪಸ್ಸನ್ನು ಮಾಡಿದರು. ॥೨೬॥

**ಅಬ್ಭಕ್ಷಾಃ ಕತಿಚಿನ್ಮಾಸಾನ್ ಕತಿಚಿದ್ವಾಯುಭೋಜನಾಃ ।**
**ಆರಾಧಯನ್ ಮಂತ್ರಮಿಮಮಭ್ಯಸಂತ ಇಡಸ್ಪತಿಮ್ ॥೨೭॥**

**ಕತಿಚಿನ್ ಮಾಸಾನ್** ಕೆಲವು ತಿಂಗಳು **ಅಬ್ಭಕ್ಷಃ** ನೀರನ್ನು ಮಾತ್ರ ಸೇವಿಸಿ **ಕತಿಚಿತ್** ಕೆಲವು ತಿಂಗಳು **ವಾಯುಭೋಜನಃ** ಗಾಳಿಯನ್ನಷ್ಟೇ ಸೇವಿಸಿ **ಇಮಂ ಮಂತ್ರಂ** ಮುಂದೆ ಹೇಳುವ ಮಂತ್ರವನ್ನು **ಅಭ್ಯಸಂತಃ** ಅಭ್ಯಾಸ ಮಾಡುವವರಾಗಿ **ಇಡಸ್ಪತಿಂ** ವಾಕ್ಪತಿಯಾದ ವಿಷ್ಣುವನ್ನು **ಆರಾಧಯನ್** ಆರಾಧಿಸಿದರು.

ಇಡಾ ಶಬ್ದ ಪರ್ಯಾಯವಾದ ಇಡಸ್ ಶಬ್ದವಿದು. 'ಇಡಾ ವಾಚಿ' ಎಂದು ವಿಶ್ವವಿದೆ. 'ಇಲಾ ಸರಸ್ವತೀ' ಎಂಬ ಮಂತ್ರವನ್ನು ವ್ಯಾಖ್ಯಾನ ಮಾಡುವಾಗ ಇಲೇಡ್ಯತ್ವಾತ್ ಎಂದು ಋಗ್ಭಾಷ್ಯದಲ್ಲಿ ಹೇಳಿರುವದರಿಂದ ಈಡ ಸ್ತುತೌ ಎಂಬ ಧಾತುವಿಗೆ ಕರ್ಮಣಿ ಡಸ್ ಪ್ರತ್ಯಯವು ಬಂದು ಆದಿವರ್ಣಕ್ಕೆ ಹ್ರಸ್ವವಾದಾಗ ಇಡಸಾಂ ಈಡ್ಯಾನಾಂ ಪತಿಂ ಎಂದು ಅರ್ಥವಾಗುವದು. ಸ್ತುತ್ಯರಾದವರಿಗೆ ಸ್ವಾಮಿ ಎಂದರ್ಥ. ॥೨೭॥

ಮಂತ್ರವನ್ನು ಹೇಳುವರು-

**ಓಂ ನಮೋ ನಾರಾಯಣಾಯ ಪುರುಷಾಯ ಮಹಾತ್ಮನೇ ।**
**ವಿಶುದ್ಧಸತ್ತ್ವಧಿಷ್ಣ್ಯಾಯ ಮಹಾಹಂಸಾಯ ಧೀಮಹಿ ॥೨೮॥**

ಓಂ ನಾಮಕ ಭಗವಂತನನ್ನು ಧೀಮಹಿ ಧ್ಯಾನ ಮಾಡೋಣ ಎಂದನ್ವಯ ಚತುರ್ಥ್ಯಂತ ಪದಗಳಿಗೆ ನಮಃ ಶಬ್ದದಿಂದ ಅನ್ವಯ.

**ನಾರಾಯಣಾಯ** ಚಿದಾನಂದದೇಹನಾದ **ಪುರುಷಾಯ** ಎಲ್ಲ ಶರೀರಗಳಲ್ಲಿಯೂ ನಿಯಾಮಕನಾಗಿರುವ **ಮಹಾತ್ಮನೇ** ಸರ್ವೋತ್ತಮತ್ವಾದಿ ಗುಣಗಳಿಗೆ ಆಶ್ರಯನಾದ (ವಿಜ) ನಿರ್ದೋಷ ಬಲ ಜ್ಞಾನ ಸ್ವರೂಪನಾದ (ಚೆಟ್ಟಿ) (ಸತ್ಯ) **ವಿಶುದ್ಧಸತ್ತ್ವಧಿಷ್ಣ್ಯಾಯ** ನಿರ್ಮಲವಾದ ಮನಸ್ಸುಳ್ಳ ಬ್ರಹ್ಮಾದಿಗಳಿಗೆ ಆಶ್ರಯನಾದ **ಮಹಾಹಂಸಾಯ** ಬಹು ನಿರ್ಮಲನಾದ ಸಾರಗ್ರಾಹಿಗಳಲ್ಲಿ ಶ್ರೇಷ್ಠನಾದ ಪರಮಹಂಸನಾದ **ಓಂ** ಸಕಲಗುಣಪರಿಪೂರ್ಣನಾದ ಶ್ರೀಹರಿಗೆ **ನಮಃ** ನಮಸ್ಕಾರಗಳನ್ನು **ಧೀಮಹಿ** ಮಾಡುತ್ತೇವೆ. ಓಂ ಧೀಮಹಿ ನಾರಾಯಣಾಯ ನಮಃ ಎಂದೂ ಅನ್ವಯ ಮಾಡಬಹುದು.

**ವಿಶಿಷ್ಟ ಅರ್ಥ**

ನಮಃ ಎಂದು ಹೇಳಿದ್ದರಿಂದಲೇ ಜೀವಬ್ರಹ್ಮಾಭೇದದಿಂದ ಉಪಾಸನೆ ಮಾಡಬಾರದೆಂದೂ ಸ್ವಾಮಿಭೃತ್ಯಭಾವದಿಂದಲೇ ಮಾಡಬೇಕೆಂದು ತಿಳಿಸಿರುವರು.

'ಮಮ ಸ್ವಾಮೀ ಹರಿರ್ನಿತ್ಯಂ ಸರ್ವಸ್ಯ ಪತಿರೇವ ಚ । ಇತಿ ಧ್ಯೇಯಃ ಸರ್ವದೈವ ಭಗವಾನ್ವಿಷ್ಣುರವ್ಯಯಃ' ಎಂದು ಅನುವ್ಯಾಖ್ಯಾನದಲ್ಲಿ ಹೇಳಿರುವುದರಿಂದ 'ಓತಮಸ್ಮಿನ್ ಜಗತ್ ಸರ್ವಂ' 'ಅತ್ಯುಚ್ಚಶ್ಚಾಖಿಲೈರ್ಗುಣೈಃ' 'ಇತ್ಯೋಮಿತಿ

ಸದೋಪಾಸ್ಯೋಽಕ್ಷರಃ ಪುರುಷೋತ್ತಮಃ' ಎಂದು ವಚನವಿರುವುದರಿಂದ ಗುಣಪೂರ್ಣನೆಂದರ್ಥ, ಸಿದ್ಧವು. 'ದೇಹೋಽಯಂ ಮೇ ಸದಾನಂದೋ ನಾಽಯಂ ಪ್ರಕೃತಿನಿರ್ಮಿತಃ । ಪರಿಪೂರ್ಣಶ್ಚ ಸರ್ವತ್ರ ತೇನ ನಾರಾಯಣಃ ಸ್ಮೃತಃ । ಈ ವಚನಾನುಸಾರ ನಾರಾಯಣ ಶಬ್ದಾರ್ಥ ಹೇಳಿದೆ.

'ಸ ವಾಽಯಂ ಪುರುಷಃ ಸರ್ವಾಸು ಪೂರ್ಷು ಪುರಿಶಯೋಽನ್ಯೇನೇನ ಕಿಂಚನಾಸಂವೃತಂ' ಎಂದು ಶ್ರುತಿ ಇದೆ. ಅದರಂತೆ ಪುರುಷ ಶಬ್ದಾರ್ಥ ಮಾಡಿದೆ. 'ಯಚ್ಚಾಪ್ನೋತಿ ಯದಾದತ್ತೇ ಯಚ್ಚಾತ್ತಿ ವಿಷಯಾನಿಹ । ಯಚ್ಚಾಸ್ಯ ಸಂತತೋ ಭಾವಸ್ತಸ್ಮಾದಾತ್ಮೇತಿ ಭಣ್ಯತೇ' ಎಂದು ಭಾರತ ವಚನಾನುಸಾರ ಮಹಾತ್ಮ ಶಬ್ದಾರ್ಥ ಮಾಡಿದೆ. 'ಬಲಜ್ಞಾನಸಮಾಹಾರಃ ಸತ್ತ್ವಮಿತ್ಯುಚ್ಯತೇ ಬುಧೈಃ' ಎಂಬ ವಚನಾನುಸಾರ ವಿಶುದ್ಧಸತ್ವಧಿಷ್ಣ್ಯ ಎಂಬುದರ ಅರ್ಥ ಮಾಡಿದೆ. 'ಪ್ರಾಪ್ಯಂ ಪ್ರಾಪ್ತಂ ಯತೋ ನಿತ್ಯಂ ಪೂರ್ಣಂ ಸರ್ವೋತ್ತಮಂ ಮಯಾ । ಅತಃ ಪರಮಹಂಸೋಽಹಂ' ಎಂದು ಭಗವದ್ವಚನಾನುಸಾರ ಮಹಾಹಂಸ ಶಬ್ದಾರ್ಥವಿದೆ.

ಮುಂದಿನ ಶ್ಲೋಕದ ಇತಿ ಶಬ್ದವನ್ನು ಸ್ವೀಕರಿಸಿ ಇತಿ ಮಂತ್ರಂ ಅಭ್ಯಸಂತಃ ಎಂದು ಪೂರ್ವ ಶ್ಲೋಕದೊಡನೆ ಅನ್ವಯ ಮಾಡಬೇಕು. ।।೨೮।।

**ಇತಿ ತಾನಪಿ ರಾಜೇಂದ್ರ ಪ್ರಜಾಸರ್ಗಧಿಯೋ ಮುನಿಃ ।**
**ಉಪೇತ್ಯ ನಾರದಃ ಪ್ರಾಹ ವಚಃಕೂಟಾನಿ ಪೂರ್ವವತ್ ।।೨೯।।**

**ರಾಜೇಂದ್ರ** ಪರೀಕ್ಷಿತನೇ **ಮುನಿಃ ನಾರದಃ** ನಾರದಮಹರ್ಷಿಗಳು **ಪ್ರಜಾಸರ್ಗಧಿಯಃ** ತಂದೆಯ ಮಾತಿನಂತೆ ಪ್ರಜೆಗಳನ್ನು ಸೃಷ್ಟಿಸುವ ಬುದ್ಧಿಯುಳ್ಳ **ತಾನಪಿ** ಶಬಲಾಶ್ವರನ್ನೂ ಸಹ **ಉಪೇತ್ಯ** ಸಮೀಪಿಸಿ **ಪೂರ್ವವತ್** ಹರ್ಯಶ್ವರಿಗೆ ಹೇಳಿದಂತೆ **ವಚಃಕೂಟಾನಿ** ಗೂಢಾರ್ಥಕ ಮಾತುಗಳನ್ನು **ಪ್ರಾಹ** ಪ್ರಜಾಸೃಷ್ಟಿಯನ್ನು ಬಿಡುವಂತೆ ಹೇಳಿದರು. ।।೨೯।।

ಬೇರೆ ಮಾತುಗಳನ್ನು ಹೇಳಿದರೆಂದು ಹೇಳುವರು-

**ದಾಕ್ಷಾಯಣಾಃ ಸಂಶ್ರುಣುತ ಗದತೋ ನಿಗಮಂ ಮಮ ।**
**ಅನ್ವಿಚ್ಛತಾನುಪದವೀಂ ಭ್ರಾತೄಣಾಂ ಭ್ರಾತೃವತ್ಸಲಾಃ ।।೩೦।।**

**ಹೇ ದಾಕ್ಷಾಯಣಾಃ** ದಕ್ಷಪುತ್ರರಾದ ಶಬಲಾಶ್ವರೇ **ಗದತಃ** ಹೇಳುತ್ತಿರುವ **ಮಮ** ನನ್ನ **ನಿಗಮಂ** ವೇದಸದೃಶವಾದ ಉಪದೇಶವನ್ನು **ಸಂಶ್ರುಣುತ** ಕೇಳಿರಿ **ಭ್ರಾತೃವತ್ಸಲಾಃ** ಅಣ್ಣಂದಿರಲ್ಲಿ ವಾತ್ಸಲ್ಯವುಳ್ಳ ನೀವು **ಭ್ರಾತೃಣಾಂ** ಅಣ್ಣಂದಿರು **ಅನುಪದವೀಂ ಚ** ಅನುಸರಿಸಿದ ಮಾರ್ಗವನ್ನು **ಅನ್ವಿಚ್ಛತ** ಬಯಸಿರಿ. ।।೩೦।।

**ಭ್ರಾತೃಣಾಂ ಪ್ರಾಯಣಂ ಭ್ರಾತಾ ಯೋಽನುತಿಷ್ಠತಿ ಧರ್ಮವಿತ್ ।**
**ಸ ಪುಣ್ಯಬಂಧುಃ ಪುರುಷೋ ಮರುದ್ಭಿಃ ಸಹ ಮೋದತೇ ।।೩೧।।**

**ಧರ್ಮವಿತ್** ಧರ್ಮವನ್ನು ತಿಳಿದ **ಯಃ ಭ್ರಾತಾ** ಯಾವ ತಮ್ಮನು **ಭ್ರಾತೃಣಾಂ** ಅಣ್ಣಂದಿರ **ಪ್ರಾಯಣಂ** ಮೋಕ್ಷಕ್ಕಾಗಿ ಮಾಡಿದ ಧರ್ಮವನ್ನು **ಅನುತಿಷ್ಠತಿ** ಆಚರಿಸುವನೋ ಅಥವಾ ಆಶ್ರಮ ಸ್ವೀಕರಿಸುವನೋ ಪ್ರಕೃಷ್ಟ ಪ್ರಯಾಣ ಮಾಡುವನೋ **ಸಃ ಪುರುಷಃ** ಆ ವ್ಯಕ್ತಿಯು **ಪುಣ್ಯಬಂಧುಃ** ಪುಣ್ಯವಂತರೆ ಬಂಧುಗಳಾಗಿವುಳ್ಳವನು ಅಥವಾ ಪುಣ್ಯವೇ ಬಂಧುವಾಗಿವುಳ್ಳವನು ಆಗಿ **ಮರುದ್ಭಿಃ ಸಹ ಮೋದತೇ** ೪೯ ಜನ ಮರುದ್ದೇವತೆಗಳೊಡನೆ ಸಂತೋಷಿಸುವನು.

'ಪ್ರಾಯಣಾಂತಮೋಂಕಾರಮಭಿಧ್ಯಾಯೀತ' ಎಂದು ಷಟ್‌ಪ್ರಶ್ನದಲ್ಲಿ ಹೇಳಿದೆ. ಕಾರಣ ಪ್ರಾಯಣ ಎಂದರೆ ಮೋಕ್ಷ ಎಂದರ್ಥ. ಇಂದ್ರನನ್ನು ಕೊಲ್ಲುವಂತಹ ಮಗನಾಗಲೆಂಬ ಪ್ರಾರ್ಥನೆಯಿಂದ ಜನಿಸಿದ ಮರುತ್ತುಗಳಿಗೆ ಇಂದ್ರನ ಸಖ್ಯವು ಜಗದ್ವಿಖ್ಯಾತವಾಗಿದೆ. ಕಾರಣ ಅನುರೂಪವಾದ ನಿದರ್ಶನವಿದು.

ಚೆಟ್ಟಿ ವಿಜಯಧ್ವಜೀಯ ಪ್ರಕಾರ ಮರುದ್ಭಿಃ ಎಂದರೆ ದೇವತೆಗಳೊಡನೆ ಎಂದರ್ಥ. 'ವೃಂದಾರಕಾ ನಿರ್ಜರಾಶ್ಚ ಮರುತೋ ಬಂಧವೋಽಮರಾಃ । ಎಂದು ಅಭಿಧಾನ ಕೊಟ್ಟಿರುವರು. ।।೩೧।।

**ಏತಾವದುಕ್ತ್ವಾ ಪ್ರಯಯೌ ನಾರದೋಽಮೋಘದರ್ಶನಃ ।**
**ತೇಽಪಿ ಚಾನ್ವಗಮನ್ಮಾರ್ಗಂ ಭ್ರಾತೃಣಾಮೇವ ಮಾರಿಷ ।।೩೨।।**

**ಮಾರಿಷ** ಆರ್ಯನೇ ಬುದ್ಧಿಯಿಂದ ಸಮುದ್ರದಂತಿರುವ ಪರೀಕ್ಷಿತನೇ **ಅಮೋಘದರ್ಶನಃ** ವ್ಯರ್ಥವಲ್ಲದ ಅತಿಶಯವಾದ ಫಲದ ಪ್ರಾಪ್ತಿಗೆ ಕಾರಣವಾದ ಜ್ಞಾನವುಳ್ಳ ಅಮೋಘವನ್ನು ತಿಳಿಸುವ ತೋರಿಸುವ **ನಾರದಃ** ನಾರದರು **ಏತಾವತ್ ಉಕ್ತ್ವಾ** ಇಷ್ಟು ಹೇಳಿ **ಪ್ರಯಯೌ** ಪ್ರಯಾಣ ಬೆಳೆಸಿದರು. **ತೇಽಪಿ** ಆ ಶಬಲಾಶ್ವರು

**ಭ್ರಾತೄಣಾಂ** ಅಣ್ಣಂದಿರ **ಮಾರ್ಗಂ** ಹಾದಿಯನ್ನೇ **ಅನ್ವಗಮತ್** ಅನುಸರಿಸಿ ಸನ್ಯಾಸಿಗಳಾದರು.

'ಆರ್ಯಸ್ತು ಮಾರಿಷಃ' 'ಮಾರಿಷಶ್ಚಾರ್ಯೇ ಮಾರಿಷಂ ಕನಕೇಽಂಬುಧೌ' ಎಂದೂ ಅಭಿಧಾನವಿದೆ. ।।೩೩।।

**ಸಧ್ರೀಚೀನಂ ಪ್ರತೀಚೀನಂ ಪರಸ್ಯಾನುಪಥಂ ಗತಾಃ ।**
**ನಾದ್ಯಾಪಿ ತೇ ನಿವರ್ತಂತೇ ಪಶ್ಚಿಮಾ ಯಾಮಿನೀರಿವ ।।೩೩।।**

**ಸಧ್ರೀಚೀನಂ** ಸಮೀಚಿನವಾದ ಶೋಭನವಾದ **ಪ್ರತೀಚೀನಂ** ಅಭಿಮುಖವಾಗಿರುವ ಒಳದೃಷ್ಟಿಯಿದ್ದವರಿಗೆ ಕಾಣುವ (ಅಂತರ್ದೃಷ್ಟಿ ಗಮ್ಯವಾದ) **ಪರಸ್ಯ** ಪರಮಾತ್ಮನಿಗೆ **ಅನುಪಥಂ** ಅನುಗುಣವಾದ ಮಾರ್ಗವನ್ನು (ಪ್ರಿಯವಾದ ಸನ್ಯಾಸವನ್ನು) **ಗತಾಃ** ಹೊಂದಿದ **ತೇ** ಆ ಶಬಲಾಶ್ವರು **ಪಶ್ಚಿಮಾಃ** ಕಳೆದು ಹೋದ **ಯಾಮಿನೀಃ ಇವ** ರಾತ್ರಿಗಳಂತೆ **ಅದ್ಯಾಪಿ** ಇಂದಿಗೂ **ನ ನಿವರ್ತಂತೇ** ಹಿಂತಿರುಗುತ್ತಿಲ್ಲ. ।।೩೩।।

ಯದ್ಯಪಿ ಹೋದ ಹಗಲೂ ತಿರುಗಿ ಬರುವದಿಲ್ಲ ಆದರೂ ರಾತ್ರಿಗಳು ಅಕರ್ಮ ಸಮಯಗಳು ಇವರಾದರೂ ಕರ್ಮದಿಂದ ನಿವೃತ್ತರು ಆದ್ದರಿಂದ ರಾತ್ರಿಯ ದೃಷ್ಟಾಂತವೇ ಸರಿಯಾದುದೆಂದು ಹೀಗೆ ಹೇಳಿರುವರು ಎಂದು ತಿಳಿಯಬೇಕು. ।।೩೩।।

**ಏತಸ್ಮಿನ್ ಕಾಲ ಉತ್ಪಾತಾನ್ ಬಹೂನ್ ಪಶ್ಯನ್ ಪ್ರಜಾಪತಿಃ ।**
**ಪೂರ್ವವನ್ನಾರದಕೃತಂ ಪುತ್ರನಾಶಮುಪಾಶೃಣೋತ್ ।।೩೪।।**

**ಏತಸ್ಮಿನ್ ಕಾಲೇ** ಈ ಸಮಯದಲ್ಲಿ **ಬಹೂನ್ ಉತ್ಪಾತಾನ್ ಪಶ್ಯನ್** ಬಹಳ ಶಕುನಗಳನ್ನು ಕಾಣುತ್ತ **ಪ್ರಜಾಪತಿಃ** ದಕ್ಷಪ್ರಜೇಶ್ವರನು **ಪೂರ್ವವತ್** ಹಿಂದಿನಂತೆ **ನಾರದಕೃತಂ** ನಾರದರು ಮಾಡಿದ **ಪುತ್ರನಾಶಂ** ಮಕ್ಕಳ ಬುದ್ಧಿಭೇದವನ್ನೇ ಸಂನ್ಯಾಸ ಸ್ವೀಕರಣವನ್ನು **ಉಪಾಶೃಣೋತ್** ಜನರಿಂದ ಕೇಳಿದನು. ।।೩೪।।

ಮಕ್ಕಳು ಸನ್ಯಾಸಿಗಳಾದುದನ್ನು ಕೇಳಿ ಪ್ರಾಯಃ ದಕ್ಷರೂ ಸನ್ಯಾಸಿಗಳಾದರು ಎಂಬ ಕಾರಣದಿಂದ ಅವರನ್ನು ಅನುಗ್ರಹಿಸಲು ನಾರದರು ಅವರ ಹತ್ತಿರ ಬಂದರು. (ದಕ್ಷೋಽಪಿ ವಿರಕ್ತಃ ಸ್ಯಾತ್ ಎಂದು ಚೆಟ್ಟಿ ವಾಕ್ಯ.)

**ಚುಕ್ರೋಧ ನಾರದಾಯಾಽಸೌ ಪುತ್ರಶೋಕವಿಮೂರ್ಛಿತಃ ।**
**ದೇವರ್ಷಿಮುಪಲಕ್ಷ್ಯಾಹ ರುಷಾ ಪ್ರಸ್ಫುರಿತಾಧರಃ ॥೩೫॥**

**ಪುತ್ರಶೋಕವಿಮೂರ್ಛಿತಃ** ಮಕ್ಕಳು ಸನ್ಯಾಸಿಗಳಾದರೆಂಬ ದುಃಖದಿಂದ ಮೋಹಿತನಾದ **ಅಸೌ** ದಕ್ಷಪ್ರಜಾಪತಿಯು **ನಾರದಾಯ ಚುಕ್ರೋಧ** ನಾರದರ ವಿಷಯದಲ್ಲಿ ಕುಪಿತನಾದನು. **ರುಷಾ** ಸಿಟ್ಟಿನಿಂದ **ಪ್ರಸ್ಫುರಿತಾಧರಃ** ನಡುಗುತ್ತಿರುವ ತುಟಿಗಳುಳ್ಳ ದಕ್ಷನು **ದೇವರ್ಷಿಂ ಉಪಲಕ್ಷ್ಯ** ನಾರದರನ್ನು ಉದ್ದೇಶಿಸಿ **ಆಹ** ಹೇಳಿದನು. ॥೩೫॥

**ದಕ್ಷ ಉವಾಚ -**

**ಅಹೋ ಅಸಾಧೋ ಸಾಧೂನಾಂ ಸಾಧುಲಿಂಗೇನ ನಸ್ತ್ವಯಾ ।**
**ಅಸಾಧ್ವಕಾರ್ಯರ್ಭಕಾಣಾಂ ಭಿಕ್ಷೋರ್ಮಾರ್ಗಃ ಪ್ರದರ್ಶಿತಃ ॥೩೬॥**

**ಅಸಾಧೋ** ಅಸಜ್ಜನನೇ **ಸಾಧುಲಿಂಗೇನ** ಜಟಾ-ಯಜ್ಞೋಪವೀತ ಮೊದಲಾದ ಸಜ್ಜನರ ಚಿಹ್ನೆ ಉಳ್ಳ **ತ್ವಯಾ** ನಿನ್ನಿಂದ **ಸಾಧೂನಾಂ** ಸ್ವಧರ್ಮದಲ್ಲಿ ಪ್ರವೃತ್ತರಾದ **ನಃ** ನಮ್ಮ **ಅರ್ಭಕಾಣಾಂ** ಮಕ್ಕಳಿಗೆ **ಭಿಕ್ಷೋಃ ಮಾರ್ಗಃ ಯಃ ಪ್ರದರ್ಶಿತಃ** ಸನ್ಯಾಸಿಗಳ ಮಾರ್ಗವೇನು ತೋರಿಸಿದಿಯೋ ಅದು **ಅಸಾಧು ಅಕಾರಿ** ಅಮಂಗಲ ಮಾಡಲ್ಪಟ್ಟಿತು.

ಅಹೋ ಅಸಾಧೋ ಎಂಬಲ್ಲಿ ಓತ್ ಎಂಬುದರಿಂದ ಪ್ರಗೃಹ್ಯ ಸಂಜ್ಞಾ ಬಂದು ಪ್ಲುತ ಪ್ರಗೃಹ್ಯಾ ಅಚಿ ನಿತ್ಯಂ ಎಂದು ಪ್ರಕೃತಿಭಾವವಾಗಿದೆ. ಕೋಪದಿಂದ ಮೈಮೇಲೆ ಎಚ್ಚರವಿಲ್ಲದೆಯೋ ಎಲ್ಲರಿಗೂ ಐಕಮತ್ಯವಿರುವದರಿಂದ ಬಹುವಚನಕ್ಕೆ ಕೃತ್ಯವಿಲ್ಲದ್ದರಿಂದ ಅಸಮಯವಾದ್ದರಿಂದ ಧಿಕ್ಕರಿಸಲೆಂದೋ ಭಿಕ್ಷೋಃ ಎಂದು ದಕ್ಷನೆಂದನು ಎಂದು ತಿಳಿಯಬೇಕು. ಮಾರ್ಗಃ ಪ್ರದರ್ಶಿತಃ ಇತಿ ಯತ್ ತತ್ ಇತಿ ಸಾಧೂನಾಂ ವೇಲಾಂ ಸ್ಥಲೀಂ ವಾ ಅವಲೋಕ್ಯ ಎಂದು ಶೇಷ. ಸಾಧುಭಿಃ ಊನಾ ತದ್ರಹಿತಾ ತಾಂ ಸಾಧೂನಾಂ ಎಂದು ಯೋಜನೆ. ಅಂದರೆ ಸಜ್ಜನರಾರೂ ಇಲ್ಲದ ಸ್ಥಳದಲ್ಲಿ ವೇಳೆಯಲ್ಲಿ ಹೀಗೆ ಮಾಡಿರುವಿ. ಯಾರಾದರೂ ಸಜ್ಜನರು ಆ ವೇಳೆಯಲ್ಲಿ ಅಲ್ಲಿದ್ದಿದ್ದರೆ ಹೀಗಾಗುತ್ತಿರಲಿಲ್ಲವೆಂದು ಭಾವ. ॥೩೬॥

'ಯತ್ಯಾಶ್ರಮೇ ತುರೀಯೇ ವೈ ಪ್ರೀತಿರ್ಮಮ ಗರೀಯಸೀ' 'ಸನ್ನ್ಯಾಸೇನ ತನುಂ ತ್ಯಜೇತ್' ಇತ್ಯಾದಿಯಾಗಿ ಗೀತಾಭಾಷ್ಯಾದಿಗಳಲ್ಲಿ ಸನ್ನ್ಯಾಸವು ಆವಶ್ಯಕವಾಗಿದೆ ಎಂದು ಉಕ್ತವಾಗಿದೆ ಆದ್ದರಿಂದ ಈ ಮಾರ್ಗದ ಉಪದೇಶವನ್ನು

ಮಾಡಿದ್ದು ತಪ್ಪು ಎಂದು ದಕ್ಷ ಯಾಕೆ ಹೇಳಿದ ಎಂದರೆ ನಿಜ ಆದರೆ ಋಣತ್ರಯಗಳನ್ನು ಕಳೆದುಕೊಳ್ಳದೇ ಸನ್ಯಾಸ ಮಹಾ ಅನರ್ಥಕರ ನನ್ನ ಮಕ್ಕಳ ಋಣತ್ರಯ ಮೋಚನವಾಗಿಲ್ಲವೆಂದು ಹೇಳುವರು.

**ಋಣೈಸ್ತ್ರಿಭಿರಮುಕ್ತಾನಾಮಮೀಮಾಂಸಿತಕರ್ಮಣಾಮ್ ।**
**ವಿಘಾತಃ ಶ್ರೇಯಸಃ ಪಾಪ ಲೋಕಯೋರುಭಯೋಃ ಕೃತಃ ॥೩೭॥**

**ಋಣೈಃ ತ್ರಿಭಿಃ ಅಮುಕ್ತಾನಾಂ** 'ಬ್ರಹ್ಮಚರ್ಯೇಣ ಋಷಿಭ್ಯಃ ಯಜ್ಞೇನ ದೇವೇಭ್ಯಃ ಪ್ರಜಯಾ ಪಿತೃಭ್ಯಃ' ಎಂದು ಶ್ರುತಿ ಇರುವದರಿಂದ ಮನುವೂ ಕೂಡ 'ಋಣಾನಿ ತ್ರೀಣ್ಯಪಾಕೃತ್ಯ ಮನೋ ಮೋಕ್ಷೇ ನಿವೇಶಯೇತ್ । ಅನಪಾಕೃತ್ಯ ಮೋಕ್ಷಂ ತು ಸೇವಮಾನೋ ವ್ರಜತ್ಯಧಃ' ಎಂದು ಹೇಳಿರುವದರಿಂದ ದೇವ ಋಷಿ ಪಿತೃ ಋಣಗಳಿಂದ ಮುಕ್ತರಾಗದ **ಅಮೀಮಾಂಸಿತಕರ್ಮಣಾಂ** ಯಜ್ಞಾದಿ ಕರ್ಮವನ್ನು ವಿಚಾರ ಮಾಡಿ ತಿಳಿಯದವರಿಗೆ **ಉಭಯೋಃ ಲೋಕಯೋಃ** ಇಹ-ಪರಲೋಕಗಳ **ಶ್ರೇಯಸಃ** ಸಂಪತ್ತಿನ **ವಿಘಾತಃ ಕೃತಃ** ನಾಶ ಮಾಡಲ್ಪಟ್ಟಿತು.

**ಹೇ ಪಾಪ** ಎಲೋ ಪಾಪಿಯೇ **ಅಸಾಧೋ ಪಾಪ ವಿಘಾತಃ ಕೃತಃ** ಮುಂತಾಗಿ ಹೇಳಿದುದು ಸಿಟ್ಟಿನ ಭರದಲ್ಲಿ ಎಂದು ತಿಳಿಯಬೇಕು. ಹೊರತು ಪಾಪ ಅಸಾಧುತ್ವ ನಾರದರಿಗೆ ಇದೆ ಎಂಬ ಅಭಿಪ್ರಾಯದಿಂದಲ್ಲ. ದಕ್ಷನು ಸ್ವಯಂ ಜ್ಞಾನಿಯೇ ಆಗಿದ್ದಾನೆ.

'ಜಾಯಮಾನೋ ಬ್ರಾಹ್ಮಣಃ ತ್ರಿಭಿಃ ಋಣೀ ಜಾಯತೇ' ಎಂದು ಹೇಳಿ ಮೇಲೆ ಹೇಳಿದಂತೆ ಬ್ರಹ್ಮಚರ್ಯ-ಯಜ್ಞ-ಪ್ರಜೆಗಳಿಂದ ಮೂರು ಋಣ ಕಳೆದುಕೊಳ್ಳುವನು ಎಂದು ಹೇಳಿದೆ. 'ಏಷ ವಾಽನೃಣೋ ಯಃ ಪುತ್ರೀ ಯಜ್ವಾ ಬ್ರಹ್ಮಚಾರೀ' ಎಂದು ಸನ್ಯಾಸಮಾರ್ಗವು ಮೋಕ್ಷಕ್ಕೆ ಕಾರಣವಾದರೂ ಋಣತ್ರಯವನ್ನು ಕಳೆದುಕೊಳ್ಳದೇ ಹೋದಲ್ಲಿ ಮಹಾ ಅನರ್ಥವಾಗುವದೆಂದು ಭಾವ. ಮೇಲೆ ಉದಾಹರಿಸಿದ ಶ್ರುತಿವಾಕ್ಯಗಳು ಋಣತ್ರಯ ಮತ್ತು ಅದರ ಮುಕ್ತಿಯನ್ನು ತಿಳಿಸುವದು. ಕರ್ಮವಿಚಾರ ಮಾಡದೇ ಇದ್ದದ್ದರಿಂದ ಋಷಿ ಋಣ ಹೋಗಿಲ್ಲ. ಆದ್ದರಿಂದಲೇ ಆದಾದ ಮೇಲೆ ಸಂಭವಿಸುವ ಪುತ್ರೋತ್ಪಾದನ ಯಜ್ಞಗಳೂ ಇಲ್ಲವಾದ್ದರಿಂದ ಪಿತೃಋಣ-ದೇವಋಣಗಳೂ ಹೋಗಿಲ್ಲ. ವಿಷಯಭೋಗವನ್ನು ತ್ಯಾಗ ಮಾಡಿದ್ದರಿಂದ ಇಹಲೋಕದಲ್ಲಿ ಶ್ರೇಯಸ್ಸಿಗೆ ವಿಘ್ನ ಧರ್ಮಾನುಷ್ಠಾನವಿಲ್ಲದ್ದರಿಂದ ಪರಲೋಕದಲ್ಲಿ ಶ್ರೇಯಸ್ಸಿಗೆ ವಿಘ್ನವೂ ಆಯಿತೆಂದರ್ಥ. ॥೩೭॥

**ಏವಂ ತ್ವಂ ನಿರನುಕ್ರೋಶೋ ಬಾಲಾನಾಂ ಮತಿಭಿದ್ಧರೇಃ ।**
**ಪಾರ್ಷದಮಧ್ಯೇ ಚರಸಿ ಯಶೊಹಾನಿರಪತ್ರಪಃ ॥೩೮॥**

**ಏವಂ** ಈ ರೀತಿ ವಿಚಾರ ಮಾಡಿದಾಗ **ಬಾಲಾನಾಂ** ಕೃತ್ಯಾಕೃತ್ಯ ವಿವೇಕವಿಲ್ಲದ ಮಕ್ಕಳ **ಮತಿಭಿತ್** ಬುದ್ಧಿ ಭೇದವನ್ನುಂಟು ಮಾಡಿದವನು **ಯಶೊಹಾ** ಅವರ ಕೀರ್ತಿಯನ್ನು ಹಾಳು ಮಾಡಿದವನು ಆದ್ದರಿಂದಲೇ **ನಿರನುಕ್ರೋಶಃ** ದಯೆಯಿಲ್ಲದವನು **ಹರೇಃ** ಶ್ರೀಹರಿಯ **ಪಾರ್ಷದಮಧ್ಯೇ** ಸೇವಕರ ಮಧ್ಯದಲ್ಲಿ **ಚರಸಿ** ಸಂಚರಿಸುವಿ **ನಿರಪತ್ರಪಃ** ನಿರ್ಲಜ್ಜನು.

**ಹರೇಃ ಯಶೋಹಾ** ಶ್ರೀಹರಿಯ ಕೀರ್ತಿ ಹಾಳು ಮಾಡುವವನು. ಅಥವಾ ಮಕ್ಕಳ ದ್ವಾರಾ ನನಗೆ ಬರುವ ಯಶಸ್ಸನ್ನು ಹಾಳು ಮಾಡಿದವ ಎಂದೂ ಅರ್ಥ.

ಶ್ರೀಹರಿಯ ಸೇವಕರು ಹೀಗೆ ಮಾಡುವದಿಲ್ಲ. ಕಾರಣ ನೀನು ಅವರ ಮಧ್ಯದಲ್ಲಿ ಸಂಚರಿಸಲು ಯೋಗ್ಯನಲ್ಲವೆಂದು ಕಾಕುಸ್ವರದಿಂದ ಸೂಚಿಸುವನು. ಅಥವಾ **ಅಚರಸಿ** ಎಂದು ಮಾಡಿ ಭಟರಂತೆ ನಡೆಯುವದಿಲ್ಲ ಎಂದೂ ಅರ್ಥ ಮಾಡಬಹುದು. ॥೩೮॥

**ನನು ಭಾಗವತಾ ನಿತ್ಯಂ ಭೂತಾನುಗ್ರಹಕಾತರಾಃ ।**
**ಋತೇ ತ್ವಾಂ ಸೌಹೃದಘ್ನಂ ವೈ ವೈರಕಾರಮವೈರಿಣಾಮ್ ॥೩೯॥**

**ಅವೈರಿಣಾಂ** ವೈರ ಇಲ್ಲದವರಲ್ಲಿ **ವೈರಕಾರಂ** ವೈರವನ್ನು ಹುಟ್ಟಿಸುವ **ಸೌಹೃದಘ್ನಂ** ತಾನೂ ಇತರರಲ್ಲಿ ಪ್ರೀತಿ ಮಾಡದೆ ಬೇರಯವರು ಮಾಡುವ ಪ್ರೀತಿಯನ್ನು ನಾಶ ಮಾಡುವವನು **ತ್ವಾಂ ಋತೇ** ನಿನ್ನನ್ನು ಬಿಟ್ಟು **ಭಾಗವತಾಃ** ಭಗವದ್ಭಕ್ತರು **ನಿತ್ಯಂ** ಯಾವಾಗಲೂ **ಭೂತಾನುಗ್ರಹಕಾತರಾಃ** ಜನರಿಗೆ ಅನುಗ್ರಹ ಮಾಡಲು ಪರವಶರಾಗಿರುವರು. **ನನು** ನಿಶ್ಚಯ. ಲಜ್ಜೆಯೇ ಇಲ್ಲದೇ ಜನರಿಗೆ ಅಹಿತ ಮಾಡುವುದರಿಂದ ನಿನಗೆ ಲಜ್ಜೆ ಬರುವುದಿಲ್ಲವೇ? ಎಂದು ಭಾವ. ॥೩೯॥

ಈ ಶ್ಲೋಕದಲ್ಲಿ ತ್ವಾಂ ಋತೇ ಎಂದಿದೆ. 'ಜ್ಞಾನಸೂರ್ಯಮೃತೇ' ಎಂಬ ಅನುವ್ಯಾಖ್ಯಾನ ವ್ಯಾಖ್ಯಾನ ಸುಧೆಯಲ್ಲಿ 'ವಿನಾ ವಾತಂ ವಿನಾ ವರ್ಷಂ' ಎಂದು ಪ್ರಯೋಗಗಳು ಕಂಡಿರುವುದರಿಂದ ವಿನಾಯೋಗ ಇದ್ದಾಗಿನಂತೆ ಋತೇ ಯೋಗವಿದ್ದಾಗಲೂ ದ್ವಿತೀಯಾ ಬರುವದು ಎಂದು ಹೇಳಿದ್ದಾರೆ. ಇದು ಪರರಿಗೂ ಸಮ್ಮತ. ಆದ್ದರಿಂದಲೇ 'ಪೃಥಗ್ವಿನಾನಾನಾಭಿರಿತಿ ಯೋಗವಿಭಾಗಃ ಕಾರ್ಯೋ<br>ದ್ವಿತೀಯಾರ್ಥ ಇತಿ' ಎಂದು ಹರದತ್ತನೂ ಹೀಗೆ ಹೇಳಿದ್ದಾನೆ. 'ಅತ್ರ ಅಸತ್ಯಪಿ

ಮಾಡಿದ್ದು ತಪ್ಪು ಎಂದು ದಕ್ಷ ಯಾಕೆ ಹೇಳಿದ ಎಂದರೆ ನಿಜ ಆದರೆ ಋಣತ್ರಯಗಳನ್ನು ಕಳೆದುಕೊಳ್ಳದೇ ಸನ್ಯಾಸ ಮಹಾ ಅನರ್ಥಕರ ನನ್ನ ಮಕ್ಕಳ ಋಣತ್ರಯ ಮೋಚನವಾಗಿಲ್ಲವೆಂದು ಹೇಳುವರು.

**ಋಣೈಸ್ತ್ರಿಭಿರಮುಕ್ತಾನಾಮಮೀಮಾಂಸಿತಕರ್ಮಣಾಮ್ ।**
**ವಿಘಾತಃ ಶ್ರೇಯಸಃ ಪಾಪ ಲೋಕಯೋರುಭಯೋಃ ಕೃತಃ ॥೩೭॥**

**ಋಣೈಃ ತ್ರಿಭಿಃ ಅಮುಕ್ತಾನಾಂ** 'ಬ್ರಹ್ಮಚರ್ಯೇಣ ಋಷಿಭ್ಯಃ ಯಜ್ಞೇನ ದೇವೇಭ್ಯಃ ಪ್ರಜಯಾ ಪಿತೃಭ್ಯಃ' ಎಂದು ಶ್ರುತಿ ಇರುವದರಿಂದ ಮನುವೂ ಕೂಡ 'ಋಣಾನಿ ತ್ರೀಣ್ಯಪಾಕೃತ್ಯ ಮನೋ ಮೋಕ್ಷೇ ನಿವೇಶಯೇತ್ । ಅನಪಾಕೃತ್ಯ ಮೋಕ್ಷಂ ತು ಸೇವಮಾನೋ ವ್ರಜತ್ಯಧಃ' ಎಂದು ಹೇಳಿರುವದರಿಂದ ದೇವ ಋಷಿ ಪಿತೃ ಋಣಗಳಿಂದ ಮುಕ್ತರಾಗದ **ಅಮೀಮಾಂಸಿತಕರ್ಮಣಾಂ** ಯಜ್ಞಾದಿ ಕರ್ಮವನ್ನು ವಿಚಾರ ಮಾಡಿ ತಿಳಿಯದವರಿಗೆ **ಉಭಯೋಃ ಲೋಕಯೋಃ** ಇಹ-ಪರಲೋಕಗಳ **ಶ್ರೇಯಸಃ** ಸಂಪತ್ತಿನ **ವಿಘಾತಃ ಕೃತಃ** ನಾಶ ಮಾಡಲ್ಪಟ್ಟಿತು.

**ಹೇ ಪಾಪ** ಎಲೋ ಪಾಪಿಯೇ **ಅಸಾಧೋ ಪಾಪ ವಿಘಾತಃ ಕೃತಃ** ಮುಂತಾಗಿ ಹೇಳಿದುದು ಸಿಟ್ಟಿನ ಭರದಲ್ಲಿ ಎಂದು ತಿಳಿಯಬೇಕು. ಹೊರತು ಪಾಪ ಅಸಾಧುತ್ವ ನಾರದರಿಗೆ ಇದೆ ಎಂಬ ಅಭಿಪ್ರಾಯದಿಂದಲ್ಲ. ದಕ್ಷನು ಸ್ವಯಂ ಜ್ಞಾನಿಯೇ ಆಗಿದ್ದಾನೆ.

'ಜಾಯಮಾನೋ ಬ್ರಾಹ್ಮಣಃ ತ್ರಿಭಿಃ ಋಣೀ ಜಾಯತೇ' ಎಂದು ಹೇಳಿ ಮೇಲೆ ಹೇಳಿದಂತೆ ಬ್ರಹ್ಮಚರ್ಯ-ಯಜ್ಞ-ಪ್ರಜೆಗಳಿಂದ ಮೂರು ಋಣ ಕಳೆದುಕೊಳ್ಳುವನು ಎಂದು ಹೇಳಿದೆ. 'ಏಷ ವಾಽನೃಣೋ ಯಃ ಪುತ್ರೀ ಯಜ್ವಾ ಬ್ರಹ್ಮಚಾರೀ' ಎಂದು ಸನ್ಯಾಸಮಾರ್ಗವು ಮೋಕ್ಷಕ್ಕೆ ಕಾರಣವಾದರೂ ಋಣತ್ರಯವನ್ನು ಕಳೆದುಕೊಳ್ಳದೇ ಹೋದಲ್ಲಿ ಮಹಾ ಅನರ್ಥವಾಗುವದೆಂದು ಭಾವ. ಮೇಲೆ ಉದಾಹರಿಸಿದ ಶ್ರುತಿವಾಕ್ಯಗಳು ಋಣತ್ರಯ ಮತ್ತು ಅದರ ಮುಕ್ತಿಯನ್ನು ತಿಳಿಸುವದು. ಕರ್ಮವಿಚಾರ ಮಾಡದೇ ಇದ್ದದ್ದರಿಂದ ಋಷಿ ಋಣ ಹೋಗಿಲ್ಲ. ಆದ್ದರಿಂದಲೇ ಅದಾದ ಮೇಲೆ ಸಂಭವಿಸುವ ಪುತ್ರೋತ್ಪಾದನ ಯಜ್ಞಗಳೂ ಇಲ್ಲವಾದ್ದರಿಂದ ಪಿತೃಋಣ-ದೇವಋಣಗಳೂ ಹೋಗಿಲ್ಲ. ವಿಷಯಭೋಗವನ್ನು ತ್ಯಾಗ ಮಾಡಿದ್ದರಿಂದ ಇಹಲೋಕದಲ್ಲಿ ಶ್ರೇಯಸ್ಸಿಗೆ ವಿಘ್ನ ಧರ್ಮಾನುಷ್ಠಾನವಿಲ್ಲದ್ದರಿಂದ ಪರಲೋಕದಲ್ಲಿ ಶ್ರೇಯಸ್ಸಿಗೆ ವಿಘ್ನವೂ ಆಯಿತೆಂದರ್ಥ. ॥೩೭॥

**ಏವಂ ತ್ವಂ ನಿರನುಕ್ರೋಶೋ ಬಾಲಾನಾಂ ಮತಿಭಿದ್ಧರೇಃ ।**
**ಪಾರ್ಷದಮಧ್ಯೇ ಚರಸಿ ಯಶೊಹಾನಿರಪತ್ರಪಃ ॥೩೮॥**

**ಏವಂ** ಈ ರೀತಿ ವಿಚಾರ ಮಾಡಿದಾಗ **ಬಾಲಾನಾಂ** ಕೃತ್ಯಾಕೃತ್ಯ ವಿವೇಕವಿಲ್ಲದ ಮಕ್ಕಳ **ಮತಿಭಿತ್** ಬುದ್ಧಿ ಭೇದವನ್ನುಂಟು ಮಾಡಿದವನು **ಯಶೊಹಾ** ಅವರ ಕೀರ್ತಿಯನ್ನು ಹಾಳು ಮಾಡಿದವನು ಆದ್ದರಿಂದಲೇ **ನಿರನುಕ್ರೋಶಃ** ದಯೆಯಿಲ್ಲದವನು **ಹರೇಃ** ಶ್ರೀಹರಿಯ **ಪಾರ್ಷದಮಧ್ಯೇ** ಸೇವಕರ ಮಧ್ಯದಲ್ಲಿ **ಚರಸಿ** ಸಂಚರಿಸುವಿ **ನಿರಪತ್ರಪಃ** ನಿರ್ಲಜ್ಜನು.

**ಹರೇಃ ಯಶೋಹಾ** ಶ್ರೀಹರಿಯ ಕೀರ್ತಿ ಹಾಳು ಮಾಡುವವನು. ಅಥವಾ ಮಕ್ಕಳ ದ್ವಾರಾ ನನಗೆ ಬರುವ ಯಶಸ್ಸನ್ನು ಹಾಳು ಮಾಡಿದವ ಎಂದೂ ಅರ್ಥ.

ಶ್ರೀಹರಿಯ ಸೇವಕರು ಹೀಗೆ ಮಾಡುವದಿಲ್ಲ, ಕಾರಣ ನೀನು ಅವರ ಮಧ್ಯದಲ್ಲಿ ಸಂಚರಿಸಲು ಯೋಗ್ಯನಲ್ಲವೆಂದು ಕಾಕುಸ್ವರದಿಂದ ಸೂಚಿಸುವನು. ಅಥವಾ **ಅಚರಸಿ** ಎಂದು ಮಾಡಿ ಭಟರಂತೆ ನಡೆಯುವದಿಲ್ಲ ಎಂದೂ ಅರ್ಥ ಮಾಡಬಹುದು. ॥೩೮॥

**ನನು ಭಾಗವತಾ ನಿತ್ಯಂ ಭೂತಾನುಗ್ರಹಕಾತರಾಃ ।**
**ಋತೇ ತ್ವಾಂ ಸೌಹೃದಘ್ನಂ ವೈ ವೈರಕಾರಮವೈರಿಣಾಮ್ ॥೩೯॥**

**ಅವೈರಿಣಾಂ** ವೈರ ಇಲ್ಲದವರಲ್ಲಿ **ವೈರಕಾರಂ** ವೈರವನ್ನು ಹುಟ್ಟಿಸುವ **ಸೌಹೃದಘ್ನಂ** ತಾನೂ ಇತರರಲ್ಲಿ ಪ್ರೀತಿ ಮಾಡದೆ ಬೇರಯವರು ಮಾಡುವ ಪ್ರೀತಿಯನ್ನು ನಾಶ ಮಾಡುವವನು **ತ್ವಾಂ ಋತೇ** ನಿನ್ನನ್ನು ಬಿಟ್ಟು **ಭಾಗವತಾಃ** ಭಗವದ್ಭಕ್ತರು **ನಿತ್ಯಂ** ಯಾವಾಗಲೂ **ಭೂತಾನುಗ್ರಹಕಾತರಾಃ** ಜನರಿಗೆ ಅನುಗ್ರಹ ಮಾಡಲು ಪರವಶರಾಗಿರುವರು. **ನನು** ನಿಶ್ಚಯ. ಲಜ್ಜೆಯೇ ಇಲ್ಲದೇ ಜನರಿಗೆ ಅಹಿತ ಮಾಡುವುದರಿಂದ ನಿನಗೆ ಲಜ್ಜೆ ಬರುವುದಿಲ್ಲವೇ? ಎಂದು ಭಾವ. ॥೩೯॥

ಈ ಶ್ಲೋಕದಲ್ಲಿ ತ್ವಾಂ ಋತೇ ಎಂದಿದೆ. 'ಜ್ಞಾನಸೂರ್ಯಮೃತೇ' ಎಂಬ ಅನುವ್ಯಾಖ್ಯಾನ ವ್ಯಾಖ್ಯಾನ ಸುಧೆಯಲ್ಲಿ 'ವಿನಾ ವಾತಂ ವಿನಾ ವರ್ಷಂ' ಎಂದು ಪ್ರಯೋಗಗಳು ಕಂಡಿರುವುದರಿಂದ ವಿನಾಯೋಗ ಇದ್ದಾಗಿನಂತೆ ಋತೇ ಯೋಗವಿದ್ದಾಗಲೂ ದ್ವಿತೀಯಾ ಬರುವದು ಎಂದು ಹೇಳಿದ್ದಾರೆ. ಇದು ಪರರಿಗೂ ಸಮ್ಮತ. ಆದ್ದರಿಂದಲೇ 'ಪೃಥಗ್ವಿನಾನಾನಾಭಿರಿತಿ ಯೋಗವಿಭಾಗಃ ಕಾರ್ಯೋ ದ್ವಿತೀಯಾರ್ಥ ಇತಿ' ಎಂದು ಹರದತ್ತನೂ ಹೀಗೆ ಹೇಳಿದ್ದಾನೆ. 'ಅತ್ರ ಅಸತ್ಯಪಿ

ಮುನಿತ್ರಯವಚನೇ ಪ್ರಯೋಗಬಾಹುಲ್ಯಾದೇವಂ ವ್ಯಾಖ್ಯಾತಂ ಎಂದು ಮತ್ತು ಋತೇ ಯೋಗವಿದ್ದಾಗ ದ್ವಿತೀಯಾ ವಿಧಿಯನ್ನು ಅವಶ್ಯ ಒಪ್ಪಲೇಬೇಕು. ನಿಮಿತ್ತಸ್ಯ ಋತೇಽಪಿ ತ್ವಾಂ ನ ಭವಿಷ್ಯಂತಿ ಸರ್ವೇ ಎಂದು ಋತೇ ಯೋಗವಿದ್ದಾಗ ದ್ವಿತೀಯಾ ಪ್ರಯೋಗ ಇರುವದರಿಂದ ಎಂಬ ಅಭಿಪ್ರಾಯದಿಂದ ಹೇಳುವರು. ವಿನಾ ವಾತಂ ಎಂದು ಸುಧಾ ಟಿಪ್ಪಣಿ ಮಾತುಗಳಿಂದಲೂ ತ್ವಾಂ ಋತೇ ಎಂದು ಪ್ರಯೋಗವಾಗುವದು ಎಂದು ತಿಳಿಯಬೇಕು.

ಉಭಯತಸೋಃ ಎಂಬ ಶ್ಲೋಕವಾರ್ತಿಕದಲ್ಲಿ 'ಅನ್ಯತ್ರಾಪಿ ದೃಶ್ಯತೇ' ಎಂದು ಹೇಳಿರುವುದರಿಂದ ಋತೇ ಯೋಗೇ ದ್ವಿತೀಯಾ ಋತೇ ದ್ವಿತಿಯಾ ಇತಿ ಚಂದ್ರ ಸೂತ್ರಾತ್ ಎಂದು ಮನೋರಮಾದಲ್ಲಿ ಹೇಳಿದೆ.

ವೈರಂಕರ ಎಂಬ ಖಶಂತ ಪಾಠವೂ ಇದೆ. ಆದರೆ ಈ ಖಶ್ ಬಾಹುಲಕವಾಗಿದೆ. ಸೌಹೃದಘ್ನಂ ಎಂಬಲ್ಲಿ ಸಂಜ್ಞಾಪೂರ್ವಕ ವಿಧಿ ಅನಿತ್ಯವಾದ್ದರಿಂದ ಹೃದ್ಭಗ ಎಂದು ಉಭಯಪದವೃದ್ಧಿಯು ಪ್ರವರ್ತಿಸದಿರುವದರಿಂದ ತದ್ಧಿತೇಷ್ವಚಾಮಾದೇಃ ಎಂಬುದರಿಂದ ಆದಿವೃದ್ಧಿಯೇ ಆಗಿದೆ. ಅರ್ಥವತಃ ಗ್ರಹಣೇ ನಾನಾರ್ಥಕಸ್ಯ ಎಂಬ ಪರಿಭಾಷೆಯು ಸ್ವಂ ರೂಪಂ ಶಬ್ದಸ್ಯ ಅಶಬ್ದಸಂಜ್ಞಾ ಎಂಬಲ್ಲಿ ರೂಪಗ್ರಹಣದಿಂದ ಜ್ಞಾಪಿತವಾಗಿದೆ. ಹೃದ್ಭಗ ಸೂತ್ರದಲ್ಲಿ ಅರ್ಥವತ್ತಾದ ತತ್ ಶಬ್ದ ಸ್ವೀಕರಿಸಿದ್ದಾರೆ. ಸುಹೃದ್ ದುರ್ಹೃದೌ ಮಿತ್ರಾಮಿತ್ರಯೋರ್ನಿಪಾತಿತೇ ಸುಹೃಚ್ಛಬ್ದಸಮುದಾಯಸ್ಯೈವ ಅರ್ಥವತ್ವೇನ ತದವಯವಹೃಚ್ಛಬ್ದಸ್ಯ ಅನರ್ಥವತ್ವಾತ್ ತಸ್ಯ ಉಭಯಪದವೃದ್ಧಿರ್ನ ಭವತಿ ಕಿಂತು ಆದಿವೃದ್ಧಿರೇವ ಎಂದು ದುರ್ಘಟವೃತ್ತಿಕಾರರು ಹೇಳಿರುವರು. ಚಾಂದ್ರರು ಹೃದ್ಭಗ ಎಂಬಲ್ಲಿ ಪ್ರತಿಪದೋಕ್ತ ಹೃತ್ ಶಬ್ದಕ್ಕೆ ಹೃಲ್ಲೇಖಯದಣಲಾಸೇಷು ಮುಂತಾಗಿ ಹೇಳಿದ ಹೃದಾದೇಶದ ಗ್ರಹಣವಲ್ಲ. ಸೌಹೃದಂ ಎಂಬಲ್ಲಿ ಮಾತ್ರ ಹೃದಾದೇಶವೇ ಎನ್ನುತ್ತಾರೆ. ಆದ್ದರಿಂದಲೇ ಕ್ಷಣಭಂಗಸೌಹೃದಃ ಎಂದು ಕುಮಾರಸಂಭವದಲ್ಲಿ ಪ್ರಯೋಗವಿದೆ. ಸೌಹೃದಂ ಎಂದಾಗುವದು. 'ನಾರದಃ ಕಲಹಪ್ರಿಯಃ' ಎಂದಿದೆ. ।।೩೯।।

'ಯದಹರೇವ ವಿರಜೇತ್ ತದಹರೇವ ಪ್ರವ್ರಜೇತ್ । ಯದಿ ವಾ ಇತರಥಾ ಬ್ರಹ್ಮಚರ್ಯಾದೇವ ಪ್ರವ್ರಜೇತ್ ಎಂದು ಶ್ರುತಿ ಇರುವುದರಿಂದ ಋಷತ್ರಯಮೋಚನ ಅತ್ಯಾವಶ್ಯಕವೇನಲ್ಲ. ಆದ್ದರಿಂದ ನಾನು ಹಿತವನ್ನೇ ಹೇಳಿರುವೆ. ನೀನು ತಪ್ಪು

ತಿಳಿದಿರುವಿ ಎಂದರೆ ಹೇಳುವನು. ವಿಷಯಗಳ ಸಂಗದಿಂದ ಕಾಮನೆ ಹೆಚ್ಚಾಗುವದು. ಕಾರಣ ವೈರಾಗ್ಯ ಉಪದೇಶ ಮಾಡಿರುವ ಎಂದರೆ ಹೇಳುವರು-

**ನೇತ್ಥಂ ಪುಂಸೋ ವಿರಾಗಃ ಸ್ಯಾತ್ ತ್ವಯಾ ಕೇವಲಿನಾ ವಿನಾ ।**
**ಮನ್ಯಸೇ ಯದ್ಯುಪಶಮಂ ಸ್ನೇಹಪಾಶನಿವರ್ತನಮ್ ॥೪೦॥**

**ಕೇವಲಿನಾ** ಸಂಧ್ಯೋಪಾಸನೆ ಮೊದಲಾದ ಕರ್ಮಗಳಿಲ್ಲದೇ ಭಗವದ್ಭಕ್ತನೆಂಬ ಅಭಿಮಾನ ಉಳ್ಳ **ತ್ವಯಾ ವಿನಾ** ನಿನ್ನನ್ನು ಬಿಟ್ಟು **ಇತ್ಥಂ** ಹೀಗೆ ಉಪದೇಶದಿಂದ (ವಿಷಯಾನುಭವವಿಲ್ಲದೇ) **ಪುಂಸಃ** ಅಧಿಕಾರಿಗೆ **ವಿರಾಗಃ** ವೈರಾಗ್ಯವು **ನ ಸ್ಯಾತ್** ಉಂಟಾಗಲಾರದು. ವಿಷಯಸ್ನೇಹದಿಂದ ರಾಗವಿಷಯೋಪಶಮದಿಂದ ಸ್ನೇಹ ನಿವೃತ್ತಿಯಾಗಿ ರಾಗನಿವೃತ್ತಿಯಾಗುವದು ಎಂದರೆ ಹೇಳುತ್ತಾರೆ. **ಉಪಶಮಂ** ವಿಷಯಾನುಭವವನ್ನೇ **ಸ್ನೇಹಪಾಶನಿವರ್ತನಂ ಮನ್ಯಸೇ** ಸ್ನೇಹಪಾಶ ನಿವರ್ತಕವೆಂದು ತಿಳಿದಿರುವದಾದರೆ **(ತದಾಽಪಿ)** ಆಗಲೂ **ಸಃ** ಉಪಶಮವು **ವ್ಯರ್ಥ ಇತಿ ಮನ್ಯೇ** ವ್ಯರ್ಥವೆಂದೇ ನಾನು ತಿಳಿಯುವೆನು.

(ಯದ್ಯಪಿ ನೀನು ಹೀಗೆ ತಿಳಿದಿರುವಿ ಆದರೂ ಕೇವಲಿನಾ ಜ್ಞಾನವಿಲ್ಲದಿದ್ದರೂ ಕೇವಲ ವೇಷಧಾರಿಯಾದ ನಿನ್ನಿಂದ **ಇತ್ಥಂ ಕೃತೇ** ಹೀಗೆ ಬುದ್ಧಿಭೇದ ಮಾಡಲ್ಪಟ್ಟರೂ **ವಿನಾ** ವಿಷಯಾನುಭವವಿಲ್ಲದೇ **ಪುಂಸಃ** ಪುರುಷನಿಗೆ **ವಿರಾಗಃ ನ ಸ್ಯಾತ್** ವೈರಾಗ್ಯವಿಲ್ಲ. ಆದಿಲ್ಲದೆ ಉಪಶಾಂತಿ ಇಲ್ಲ. ಆದಿಲ್ಲದೇ ಸ್ನೇಹಪಾಶ ನಿವೃತ್ತಿ ಇಲ್ಲ ಎಂದು ಚಿಟ್ಟಿ ಆಚಾರ್ಯರು ಅರ್ಥ ಮಾಡಿರುವರು. ॥೪೦॥

'ಕೇವಲೀ ಜ್ಞಾನಭೇದೇ ಸ್ಯಾತ್' ಎಂದು ವಿಶ್ವಕೋಶಕ್ಕೆ ಅನುಗುಣವಾಗಿ ಸತ್ಯಧರ್ಮರು **ಕೇವಲಿನಾ** ವಿಲಕ್ಷಣ ಜ್ಞಾನವುಳ್ಳ ಎಂದು ಅರ್ಥ ಮಾಡಿರುವರು.

ಸಿಟ್ಟಿನಿಂದ ನೀನು ವಿಪರೀತವಾಗಿ ಹೇಳುತ್ತಿರುವಿ. ವಿರಕ್ತಿಯಿಂದ ಸ್ನೇಹ ಮೋಹಗಳು ಕತ್ತರಿಸುವವು. ವಿರಕ್ತಿಯಿಂದ ಮಂಗಳವಾಗುತ್ತದೆ ಎಂದರೆ ಹಾಗಲ್ಲ ಹೀಗೆ ಬಲಾತ್ಕಾರದಿಂದ ಬಾಳೆಕಾಯಿಯನ್ನು ಹಣ್ಣು ಮಾಡಿದಂತೆ ಇದು ಅತ್ಯಾವಶ್ಯಕವಲ್ಲ ಎಂದು ಹೇಳುವರೆಂದರ್ಥ ಮಾಡಿರುವರು. ॥೪೦॥

ವ್ಯರ್ಥವೇಕೆಂದು ಹೇಳುತ್ತಾರೆ-

**ನಾನುಭೂಯ ನ ಜಾನಾತಿ ಪುಮಾನ್ ವಿಷಯತೀಕ್ಷ್ಣತಾಮ್ ।**
**ನಿರ್ವಿದ್ಯತೇ ಸ್ವಯಂ ತಸ್ಮಾನ್ನ ತಥಾ ಭಿನ್ನಧೀಃ ಪರೈಃ ॥೪೧॥**

**ಪುಮಾನ್** ಪುರುಷನು (ಪ್ರಸ್ತುತರಾದ್ದರಿಂದ ಹೀಗೆ ಹೇಳಿದ್ದಾರೆ) ಅಧಿಕಾರಿಯು ಎಂದರ್ಥ **ನಾನುಭೂಯ** ವಿಷಯಗಳನ್ನು ಅನುಭವಿಸದೇ **ವಿಷಯತೀಕ್ಷ್ಣತಾಂ** ವಿಷಯಗಳಿಗಿರುವ ಸಂಸಾರ ಹೊಂದಿಸುವ ಸಾಮರ್ಥ್ಯವನ್ನು ದುಃಖಕಾರಣತ್ವವನ್ನು **ನ ಜಾನಾತಿ** ತಿಳಿಯುವದಿಲ್ಲ. ಆದ್ದರಿಂದ ಅವುಗಳ ಭೋಗ ಮೊದಲಿಗೆ ಬೇಕು. ಹಾಗಾದರೆ ವಿಷಯಗಳ ತೀಕ್ಷ್ಣತೆಯು ಜ್ಞಾನ-ವೈರಾಗ್ಯಗಳನ್ನು ತಂದುಕೊಡುವದೇ ಎಂದರೆ ಹೇಳುತ್ತಾರೆ. **ಯಥಾ** ಹೇಗೆ **ಸ್ವಯಂ** ವಿಷಯಾನುಭವದಿಂದ ಅದರ ತೀಕ್ಷ್ಣತೆಯನ್ನು ತಿಳಿದು ಮತ್ತೊಬ್ಬರ ಉಪದೇಶವಿಲ್ಲದೇಯೇ **ತಸ್ಮಾತ್** ಆ ವಿಷಯ ಸಮೂಹದಿಂದ **ನಿರ್ವಿದ್ಯತೇ** ವಿರಕ್ತನಾಗುವನೋ **ತಥಾ** ಹಾಗೆ **ಪರೈಃ** ಮತ್ತೊಬ್ಬರಿಂದ **ಭಿನ್ನಧೀಃ** ಭೋಧಿಸಲ್ಪಟ್ಟ ಬುದ್ಧಿಯುಳ್ಳವನಾದರೂ ವಿಷಯತೀಕ್ಷ್ಣತೆ ಅರಿಯದಿರುವದರಿಂದ **ನ ನಿರ್ವಿದ್ಯತೇ** ವಿರಕ್ತನಾಗುವದಿಲ್ಲ. ಅನುಭವಿಸದೇ ವಿಷಯಗಳು ದುಃಖಕರವೆಂದು ತಿಳಿಯುವದಿಲ್ಲ. ಆದ್ದರಿಂದ ತಿಳಿದು ವಿರಕ್ತನಾಗುವಂತೆ ಕೇಳಿ ವಿರಕ್ತನಾಗುವದಿಲ್ಲ. **ಪರೈಃ** ಎಂದಿದ್ದರಿಂದ ಅನೇಕ ಜನ ಸೇರಿ ಉಪದೇಶ ಆಗುವದಿಲ್ಲವೆಂದು ಭಾವ.

ಮೊದಲೇ ನೀನು ಹುಷಾರಾಗಿರಬೇಕಿತ್ತು ಎಂದರೆ ತಟ್ಟನೆ ಹೀಗೆ ಮಾಡಬಾರದು ಕ್ಷಮಿಸಬೇಕು ಎಂದು ಸುಮ್ಮನಿದ್ದೆ ಎಂದು ಹೇಳುವನು-

**ಯನ್ನಸ್ತ್ವಂ ಕರ್ಮಬಂಧಾನಾಂ ಸಾಧೂನಾಂ ಗೃಹಮೇಧಿನಾಮ್ ।**
**ಕೃತವಾನಸಿ ದುರ್ಮರ್ಷಂ ವಿಪ್ರಿಯಂ ತವ ಮರ್ಷಿತಮ್ ।।೪೨।।**

**ತ್ವಂ** ನೀನು **ಕರ್ಮಬಂಧಾನಾಂ** ಪ್ರಜಾಸೃಷ್ಟಿಯಲ್ಲಿ ನಿಯುಕ್ತರಾದ **ಸಾಧೂನಾಂ** ಧರ್ಮಪರರಾದ **ಗೃಹಮೇಧಿನಾಂ** ಗೃಹಸ್ಥರಾದ **ನಃ** ನಮಗೆ **ದುರ್ಮರ್ಷಂ** ಸಹಿಸಲಾಗದ **ವಿಪ್ರಿಯಂ** ವಿರೋಧವನ್ನು **ಕೃತವಾನ್ ಅಸಿ** ಮಾಡಿರುವಿ **ಇತಿ ಯತ್** ಎಂಬುದೇನಿದೆಯೋ **ತವ ತತ್** ಆ ನಿನ್ನ ಕೆಲಸವು **ಮರ್ಷಿತಂ** ನಮ್ಮಿಂದ ಸಹಿಸಲ್ಪಟ್ಟಿದೆ. ಕ್ಷಮಿಸಿರುವೆವು ಎಂದರ್ಥ. ।।೪೨।।

ಮತ್ತೆ ಹೀಗೆ ಯಾವ ಪ್ರಜಾಭಿಲಾಷೆಯನ್ನು ತಡೆಯಲಾರೆವೆಂದು ಕೋಪದ ಫಲ ಹೇಳುವರು-

**ತಂತುಕೃತ್ತನಯಾನಾಂ ತ್ವಮಭದ್ರಮಚರಃ ಪುನಃ ।**
**ತಸ್ಮಾಲ್ಲೋಕೇಷು ತೇ ಮೂಢ ನ ಭವೇದ್ ಭ್ರಮತಃ ಪದಮ್ ।।೪೩।।**

**ತ್ವಂ** ನೀನು **ಪುನಃ** ಮತ್ತೆ **ತಂತುಕೃತ್ತನಯಾನಾಂ** ಸಂತತಿಯನ್ನು ಮಾಡಬೇಕೆಂದಿದ್ದ ಮಕ್ಕಳಿಗೆ **ಅಭದ್ರಂ** ಐಹಿಕ ಸುಖಾನುಭವಕ್ಕೆ ವಿರುದ್ಧವಾದುದನ್ನು **ಅಚರಃ** ಮಾಡಿರುವಿ **ತಸ್ಮಾತ್** ಆದ್ದರಿಂದ **ಮೂಢ** ನಮ್ಮ ಇಷ್ಟ ವಿರುದ್ಧ ಬೋಧಿಸಿದ **ಮೂರ್ಖ** ನಾರದನೇ **ಲೋಕೇಷು** ಲೋಕಗಳಲ್ಲಿ **ಭ್ರಮತಃ** ಸಂಚರಿಸುವ **ತೇ** ನಿನಗೆ **ಪದಂ** ಒಂದು ಕಡೆ ನಿವಾಸಸ್ಥಾನವು **ನ ಭವೇತ್** ಇಲ್ಲದೆ ಹೋಗಲಿ. ಮೊದಲನೆ ಅಪರಾಧ ಕ್ಷಮಿಸಿದೆ ಎರಡನೆಯದನ್ನು ಕ್ಷಮಿಸಲಾರೆ ಎಂದು ಭಾವ.

ಈ ರೀತಿಯಾಗಿ ತಪ್ತನಿಂದ ಶಪ್ತನಾಗಿ ಪ್ರತಿಶಪಿಸಿದನೇ ಎಂದರೆ ಅಧಿಕಾರಿ ವಿಶೇಷರಾದ ನಾರದರನ್ನು ದ್ವಾರೀಕರಿಸಿ ಭಾಗವತರ ಸ್ವಭಾವವಿದು ಎಂದು 'ಹನುಮಾನಬ್ಧಿಮತರದ್ ದುಷ್ಕರಂ ಕಿಂ ಮಹಾತ್ಮನಾಂ' ಎಂದು ಆಲಂಕಾರಿಕೋಕ್ತ ಸಾಮಾನ್ಯಾರ್ಥಾಂತರನ್ಯಾಸಮುಖದಿಂದ ಹೇಳುವರು.

**ಶ್ರೀಶುಕ ಉವಾಚ -**

> **ಪ್ರತಿಜಗ್ರಾಹ ತದ್ ಬಾಢಂ ನಾರದಃ ಸಾಧುಸಮ್ಮತಃ ।**
> **ಏತಾವಾನ್ ಸಾಧುವಾದೋ ಹಿ ತಿತಿಕ್ಷೇತೇಶ್ವರಃ ಸ್ವಯಮ್ ।।೪೪।।**

।। ಇತಿ ಶ್ರೀಮದ್ಭಾಗವತೇ ಷಷ್ಠಸ್ಕಂಧೇ ಪಂಚಮೋಽಧ್ಯಾಯಃ ।।

**ಸ್ವಯಂ ಸಾಧುಸಮ್ಮತಃ** ತಾವು ಸಜ್ಜನರಿಗೆ ಅಭಿಮತರು ಮಂಗಳದೇವತೆಯಾದ ನಾರದರು **ಈಶ್ವರಃ ಅಪಿ** ಪ್ರತಿಶಾಪ ಕೊಡಲು ಸಮರ್ಥರಾದರೂ **ತತ್** ಆ ದಕ್ಷರು ಕೊಟ್ಟ ಶಾಪವನ್ನು **ಬಾಢಂ ಇತಿ** ಆಗಲಿ ಎಂದು **ಪ್ರತಿಜಗ್ರಾಹ** ಸ್ವೀಕರಿಸಿದರು. ಪ್ರತಿಶಾಪ ಕೊಡಲಿಲ್ಲ. **ಸ್ವಯಮೀಶ್ವರಃ ಅಪಿ** ತಾನು ಸಮರ್ಥನಾದರೂ **ತಿತಿಕ್ಷೇತ** ಸಹಿಸಬೇಕೆಂಬುದು ಏನುಂಟೋ **ಏತಾವಾನ್ ಸಾಧುವಾದಃ** ಸಜ್ಜನರ ಸ್ವಭಾವವುಇಷ್ಟೇ ಆಗಿದೆ. **ಹಿ** ಎಂಬುದರಿಂದ ಸಾಧೂನಾಂ ಭೂಷಣಂ ಕ್ಷಮಾ ನಾರದರಿಗಿಂತ ದಕ್ಷರು ತಾರತಮ್ಯದಲ್ಲಿ ಉತ್ತಮರಾದ್ದರಿಂದ ಪ್ರತಿಶಾಪ ಕೊಟ್ಟು ಸ್ವೋತ್ತಮರ ಆಗ್ರಹವನ್ನು ನಾರದರೂ ಸಂಪಾದಿಸಲಿಲ್ಲ. ದಕ್ಷರು ಶಪಿಶಿಸಿದರೂ ಕೂಡ ನಾರದರು ಮಾತ್ರ ಮೃದುತನದಿಂದ ಆಗಲಿ ಎಂದು ಒಪ್ಪಿ ಬಿಟ್ಟರು. ಇದು ಸಜ್ಜನರ ಸ್ವಭಾವ ಎಂದು ತಾತ್ಪರ್ಯ. ।।೪೪।।

ಇಲ್ಲಿಗೆ ಐದನೇ ಅಧ್ಯಾಯವು ಮುಗಿಯಿತು

★★★★★

# ಅಥ ಶ್ರೀಮದ್ಭಾಗವತೇ - ಷಷ್ಠಸ್ಕಂಧೇ

## ಷಷ್ಠೋऽಧ್ಯಾಯಃ

**ಅಧ್ಯಾಯಸಾರಾಂಶ**

ವಿಶ್ವಾಳಲ್ಲಿ ವಿಶ್ವೇದೇವತೆಗಳು ಜನಿಸಿದರು. ಆ ವಿಶ್ವೇದೇವತೆಗಳಿಗೆ ಯಾವ ಮಕ್ಕಳೂ ಆಗಲಿಲ್ಲ. ಸಾಧ್ಯಾಳಲ್ಲಿ ಸಾಧ್ಯಗಣ ಎಂಬ ಪುತ್ರನಾದನು. ಆ ಸಾಧ್ಯಗಣನಿಗೆ ಅರ್ಥಸಿದ್ಧಿ ಎಂಬ ಮಗನು ಜನಿಸಿದನು.

ಮರುತ್ವತಿ ಎಂಬುವವಳಿಗೆ ಮರುತ್ವಾನ್ ಮತ್ತು ಜಯಂತ ಎಂಬ ಮಕ್ಕಳಾದರು. ಮುಹೂರ್ತಾಳಿಗೆ ಮುಹೂರ್ತಾಭಿಮಾನಿಗಳಾದ ಮೌಹೂರ್ತಿಕರು ಮಕ್ಕಳಾದರು. ಈ ಮೌಹೂರ್ತಿಕದೇವತೆಗಳು ಆಯಾ ಕಾಲದಲ್ಲಿ ಜನರು ಮಾಡಿರುವ ಅವರವರ ಕರ್ಮಗಳಿಗೆ ಅನುಗುಣವಾಗಿ ಫಲವನ್ನು ನೀಡುತ್ತಾರೆ.

ಸಂಕಲ್ಪಾ ಎಂಬುವವಳಿಗೆ ಸಂಕಲ್ಪನು ಜನಿಸಿದನು. ಈ ಸಂಕಲ್ಪನಿಗೆ ಕಾಮನೆಂಬ ಪುತ್ರನು ಜನಿಸಿದನು. ವಸು ಎಂಬುವವಳಿಗೆ ದ್ರೋಣ, ಪ್ರಾಣ, ಧ್ರುವ, ಅರ್ಕ, ಅಗ್ನಿ, ದೋಷ, ವಸ್ತು, ವಿಭಾವಸು ಎಂಬ ಹೆಸರಿನ ಎಂಟುಜನ ವಸುಗಳು ಮಕ್ಕಳಾಗಿ ಜನಿಸಿದರು.

ಅಭಿಮತಿಯು ದ್ರೋಣ ಎಂಬ ವಸುವಿನ ಪತ್ನಿಯು. ಇವಳು ಅಭಿಮಾನಕ್ಕೆ ಅಭಿಮಾನಿನಿಯಾಗಿದ್ದಾಳೆ. ಇವಳಿಗೆ ಹರ್ಷ-ಶೋಕ-ಭಯ ಮುಂತಾದ ಅಂತಃಕರಣಪ್ರಭೇದಗಳಿಗೆ ಅಭಿಮಾನಿಗಳಾದ ದೇವತೆಗಳು ಜನಿಸಿದರು.

ಪ್ರಾಣನಿಗೆ ಊರ್ಜಸ್ವತೀ ಎಂಬ ಭಾರ್ಯೆಯಲ್ಲಿ ಸಹ-ಆಯು-ಪರೋಜವ ಎಂಬ ಮೂರು ಜನ ಮಕ್ಕಳಾದರು. ಧ್ರುವನಿಗೆ ಧರಣೀ ಎಂಬ ಹೆಂಡತಿಯಲ್ಲಿ ಪುರಗಳಿಗೆ ಅಭಿಮಾನಿಗಳು ಮಕ್ಕಳಾದರು. ಅರ್ಕ ಎಂಬ ವಸುವಿನ ಪತ್ನಿಯಾದ ವಾಸನಾ ಎಂಬುವವಳಿಗೆ ತರ್ಷ ಮುಂತಾದವರು ಮಕ್ಕಳಾದರು. ಅಗ್ನಿಗೆ ಧಾರಾ ಎಂಬ ಹೆಂಡತಿಯಲ್ಲಿ ದ್ರವಿಣಕ ಮುಂತಾದವರು ಮಕ್ಕಳಾದರು.

ಸ್ಕಂದ ಮುಖ್ಯವಾಗಿ ರುದ್ರದೇವರ ಪುತ್ರ. ಅಗ್ನಿಯ ಮಗನೂ ಎಂದು ಹೇಳುತ್ತಾರೆ. ಕೃತ್ತಿಕೆಯ ಬೆಳೆಸಿದ್ದರಿಂದ ಕೃತ್ತಿಕಾಪುತ್ರನೆನಿಸಿದ್ದಾನೆ. ವಿಶಾಖಾದಿಗಳು ಸ್ಕಂದನಿಗೆ ಮಕ್ಕಳಾದರು. ದೋಷನೆಂಬ ವಸುವಿನ ಹೆಂಡತಿ ಶರ್ವರೀ. ಇವಳಲ್ಲಿ ಶಿಂಶುಮಾರನು ಮಗನಾಗಿ ಜನಿಸಿದ. ಈ ಶಿಂಶುಮಾರನು ಸಾಕ್ಷಾತ್ ಪರಮಾತ್ಮನೇ ಆಗಿದ್ದಾನೆ. ವಸ್ತುವಿನ ಹೆಂಡತಿಯು ಆಂಗಿರಸೀ. ಕೃತೀ ಎಂಬುವವಳ ಪತಿಯಾದ ಶಿಲ್ಪಾಚಾರ್ಯನಾದ ವಿಶ್ವಕರ್ಮನು ಆಂಗಿರಸಿಯ ಮಗನಾಗಿ ಜನಿಸಿದನು.

ಆ ವಿಶ್ವಕರ್ಮನಿಂದ ಚಾಕ್ಷುಷಮನ್ವಂತರಕ್ಕೆ ಅಭಿಮಾನಿಯಾದವನು ಜನಿಸಿದನು. ಆ ಮನುವಿಗೆ ವಿಶ್ವೇಶ ಮುಂತಾದವರು ಮಕ್ಕಳಾದರು.

ಉಷಾ ಎಂಬುವವಳು ವಿಭಾವಸುವಿನ ಹೆಂಡತಿ. ಆ ಉಷಾಳಲ್ಲಿ ವ್ಯಷ್ಟ-ರೋಚಿಷ -ಆತಪ ಎಂಬ ಮೂರು ಜನ ಮಕ್ಕಳು ಜನಿಸಿದರು. ಆತಪನಿಂದ ಪಂಚಯಾಮಾತ್ಮಕವಾದ ದಿವಸಕ್ಕೆ ಅಭಿಮಾನಿಯಾದವನು ಮಗನಾದನು. ಈ ದಿವಸನ ಪ್ರೇರಣೆಯಿಂದಲೇ ಪ್ರಾಣಿಗಳು ತಮ್ಮ ತಮ್ಮ ವ್ಯಾಪಾರಗಳನ್ನು ಎಚ್ಚರಿಕೆಯಿಂದ ಮಾಡುತ್ತಾರೆ.

ಭೂತನ ಪತ್ನಿಯು ಭೂತಾ ಎಂಬುವವಳು. ಭೂತನು ದಕ್ಷಪ್ರಜಾಪತಿಯ ಅಳಿಯ. ಭೂತನಿಂದ ಭೂತಾಳಲ್ಲಿ ರೈವತ, ಅಜ, ಭವ, ಭೀಮ, ವಾಮ, ಉಗ್ರ, ವೃಷಾಕಪಿ, ಅಜೈಕಪಾತ್, ಅಹಿರ್ಬುಧ್ನ, ಬಹೂರೂಪ, ಮಹಾನ್ ಎಂದು ಪ್ರಧಾನರಾದ ಹನ್ನೊಂದು ರುದ್ರರು ಮಕ್ಕಳಾದರು.

ಭೂತನ ಮತ್ತೊಬ್ಬ ಪತ್ನಿಯಾದ ಸುರೂಪಾಳಲ್ಲಿ ಕೋಟಿ ಕೋಟಿ ರುದ್ರಗಣಗಳು ಮತ್ತು ಘೋರರಾದ ಪ್ರೇತ-ವಿನಾಯಕಾದಿಗಳು ಜನಿಸಿದರು.

ಆಂಗಿರಸ ಪ್ರಜಾಪತಿಯ ಹೆಂಡತಿಯು ಸ್ವಧಾ. ಇವಳು ಪಿತೃಗಳನ್ನು ಮಕ್ಕಳನ್ನಾಗಿ ಪಡೆದಳು. ಸತೀ ಎಂಬ ಮತ್ತೊಬ್ಬ ಪತ್ನಿಯು ಅಥರ್ವವೇದಾಭಿಮಾನಿಯಾದ ಅಥರ್ವಾಂಗಿರಸ ಎಂಬ ಮಗನನ್ನು ಪಡೆದಳು.

ಕೃಶಾಶ್ವರ ಪತ್ನಿಯಾದ ಅರ್ಚಿಯು ಧೂಮಕೇತುವನ್ನು ಮಗನನ್ನಾಗಿ ಪಡೆದಳು. ಕೃಶಾಶ್ವರ ಮತ್ತೊಬ್ಬ ಪತ್ನಿಯಾದ ಧಿಷಣಾಳಿಗೆ ಮನುವಾದ ದೇವಲನು ಮಗನಾಗಿ ಜನಿಸಿದನು. ಕೃಶಾಶ್ವರಿಗೆ ವೇದಶಿರಾ ಎಂಬುದು ಮತ್ತೊಂದು ಹೆಸರಾಗಿದೆ.

ವಿನತಾ-ಕದ್ರೂ-ಪತಂಗೀ-ಯಾಮಿನೀ ಎಂಬ ನಾಲ್ಕು ಜನರು ಕಶ್ಯಪರ ಪತ್ನಿಯರು. ಇವರಲ್ಲಿ ವಿನತೆಯು ಶ್ರೀಹರಿಯ ವಾಹನವಾದ ಗರುಡನನ್ನು, ಸೂರ್ಯನ ಸಾರಥಿಯಾದ ಅರುಣನನ್ನೂ ಹೆತ್ತಳು. ಕದ್ರೂ ಅನೇಕ ಸರ್ಪಗಳಿಗೆ ತಾಯಿಯಾದಳು. ಪತಂಗಿಯು ಹಕ್ಕಿಗಳನ್ನು ಹೆತ್ತಳು. ಯಾಮಿನಿಯು ರೆಕ್ಕೆ ಹುಳಗಳನ್ನು ಪಡೆದಳು.

ಕೃತ್ತಿಕಾ ಮೊದಲಾದ ಇಪ್ಪತ್ತೇಳು ನಕ್ಷತ್ರಗಳಿಗೆ ಅಭಿಮಾನಿಗಳಾದವರು ಚಂದ್ರನ ಪತ್ನಿಯರು. ಆದರೆ ಚಂದ್ರನು ಮಾತ್ರ ರೋಹಿಣಿಯಲ್ಲಿಯೇ ಅತಿಯಾಗಿ ಆಸಕ್ತನಾದ. ಉಳಿದವರನ್ನು ಉದಾಸೀನ ಮಾಡಿದ. ಈ ಕಾರಣಕ್ಕಾಗಿ ದಕ್ಷರ ಶಾಪದಿಂದ ಕ್ಷಯರೋಗ ಪೀಡಿತನಾದ.

ಕೃತ್ತಿಕಾದಿ ಪತ್ನಿಯರಲ್ಲಿ ಚಂದ್ರನಿಂದ ಸಂತಾನವಾಗಲೇ ಇಲ್ಲ. ತನ್ನ ತಪ್ಪನ್ನು ತಿಳಿದು ಚಂದ್ರನು ದಕ್ಷಪ್ರಜಾಪತಿಯನ್ನು ಸಂತೋಷಪಡಿಸಿದ. ದಕ್ಷನ ಪ್ರಸಾದದಿಂದ ಕೃಷ್ಣಪಕ್ಷದಲ್ಲಿ ಕಳೆದುಕೊಂಡ ಕಲೆಗಳನ್ನೆಲ್ಲ ಮತ್ತೆ ಪಡೆದುಕೊಂಡ.

ಅದಿತಿ, ದಿತಿ, ದನು, ಕಾಷ್ಠಾ, ಅರಿಷ್ಟಾ, ಸುರಸಾ, ಇಲಾ, ಮುನಿ, ಕ್ರೋಧವಶಾ, ತಾಮ್ರಾ, ಸುರಭಿ, ಸರಮಾ, ತಿಮಿ ಹೀಗೆ ಹದಿಮೂರು ಜನ ಕಶ್ಯಪರ ಪತ್ನಿಯರು.

ಇವರಲ್ಲಿ ತಿಮಿಗೆ ಜಲಚರ ಪ್ರಾಣಿಗಳು ಜನಿಸಿದವು. ಸರಮಾ ಎಂಬುವವಳಿಗೆ ಹುಲಿ, ಬೆಕ್ಕು, ಚಿರತೆ, ನಾಯಿ, ಸಿಂಹ ಮುಂತಾದ ಪ್ರಾಣಿಗಳು ಜನಿಸಿದವು. ಸುರಭಿ ಎಂಬುವವಳಿಗೆ ಎಮ್ಮೆಗಳು, ಹಸುಗಳು, ಎರಡು ಗೊರಸಿನ ಪ್ರಾಣಿಗಳು ಜನಿಸಿದವು. ತಾಮ್ರಾ ಎಂಬುವವಳಿಗೆ ಗಿಡಗ, ಹದ್ದು ಮುಂತಾದ ಪಕ್ಷಿಗಳು ಜನಿಸಿದವು. ಮುನಿ ಎಂಬುವವಳಿಗೆ ಅಪ್ಸರಾಸ್ತ್ರೀಯರು ಜನಿಸಿದರು.

ಕಚ್ಚುವ ಸ್ವಭಾವವಿರುವ ಸರ್ಪ ಮುಂತಾದವುಗಳು ಕ್ರೋಧವಶಾಳ ಮಕ್ಕಳಾಗಿ ಜನಿಸಿದವು. ಎಲ್ಲ ವೃಕ್ಷಗಳು ಇಲಾಗೆ ಜನಿಸಿದವು. ಯಾತುಧಾನರು ಸುರಸಾಳ ಮಕ್ಕಳಾದರು. ಗಂಧರ್ವರು ಅರಿಷ್ಟಾಳಲ್ಲಿ ಜನಿಸಿದರು. ಒಂದು ಗೊರಸಿನ ಕುದುರೆ

ಮುಂತಾದ ಪ್ರಾಣಿಗಳು ಕಾಷ್ಠಾ ಎಂಬುವವಳಿಗೆ ಜನಿಸಿದವು. ದನುವಿಗೆ ಅರವತ್ತೊಂದು ಜನ ದಾನವರು ಮಕ್ಕಳಾದರು.

ದ್ವಿಮೂರ್ಧಾ, ಶಂಬರ, ಅರಿಷ್ಟ, ಹಯಗ್ರೀವ, ವಿಭಾವಸು, ಅಯೋಮುಖ, ಶಂಕುಶಿರ, ಸ್ವರ್ಭಾನು, ಕಪಿಲ, ಅರುಣ, ಪುಲೋಮ, ವೃಷಪರ್ವ, ಏಕಚಕ್ರ, ಅನುತಾಪನ, ಧೂಮ್ರಕೇಶ, ವಿರೂಪಾಕ್ಷ, ವಿಪ್ರಚಿತ್ತಿ, ದುರ್ಜಯ ಹೀಗೆ ಹದಿನೆಂಟು ಜನ ದನುವಿನ ಅರವತ್ತೊಂದು ಮಕ್ಕಳಲ್ಲಿ ಪ್ರಧಾನರಾಗಿದ್ದಾರೆ.

ಇವರಲ್ಲಿ ಸ್ವರ್ಭಾನುವಿನ ಮಗಳಾದ ಸುಪ್ರಭಾಳನ್ನು ನಮುಚಿಯು ವಿವಾಹವಾದನು. ವೃಷಪರ್ವನ ಮಗಳಾದ ಶರ್ಮಿಷ್ಠಾಳನ್ನು ನಹುಷಚಕ್ರವರ್ತಿಯ ಮಗನಾದ ಯಯಾತಿಯು ಮದುವೆಯಾದನು.

ವಿಭಾವಸುಗೆ ವೈಶ್ವಾನರನೆಂದು ಮತ್ತೊಂದು ಹೆಸರು. ಇವನಿಗೆ ಉಪದಾನವೀ, ಹಯಶಿರಾ, ಪುಲೋಮಾ ಮತ್ತು ಕಾಲಿಕಾ ಎಂಬ ಹೆಣ್ಣುಮಕ್ಕಳಾದರು. ಇವರೆಲ್ಲರೂ ಸುಂದರಿಯರು.

ಇವರಲ್ಲಿ ಉಪದಾನವಿಯನ್ನು ಹಿರಣ್ಯಾಕ್ಷನು, ಕ್ರತು ಎಂಬುವವನು ಹಯಶಿರಾಳನ್ನು ವಿವಾಹವಾದರು. ಪುಲೋಮಾ ಮತ್ತು ಕಾಲಿಕಾ ಇವರು ಯದ್ಯಪಿ ದಾನವಿಯರು. ಆದರೂ ಬ್ರಹ್ಮದೇವರಿಂದ ಆಜ್ಞೆಯಿಂದ ಕಶ್ಯಪರು ಪುಲೋಮಾ ಮತ್ತು ಕಾಲಿಕಾರನ್ನು ವಿವಾಹವಾದರು. ಕಶ್ಯಪರಿಂದ ಪುಲೋಮಾಳಲ್ಲಿ ಮತ್ತು ಕಾಲಿಕಾಳಲ್ಲಿ ಅರವತ್ತು ಸಾವಿರ ಜನ ಮಕ್ಕಳು ಜನಿಸಿದರು. ಇವರೆಲ್ಲರೂ ಯಜ್ಞಗಳಿಗೆ ವಿಘ್ನಮಾಡುತ್ತಿದ್ದರು. ಮತ್ತು ಯುದ್ಧದಲ್ಲಿ ಮಹಾ ಕುಶಲರು. ಅರ್ಜುನನೊಬ್ಬನೇ ಇವರನ್ನೆಲ್ಲ ಸಂಹರಿಸಿದ.

ಕಶ್ಯಪರಿಂದ ದನುವಿನಲ್ಲಿ ಜನಿಸಿದವನೇ ವಿಪ್ರಚಿತ್ತಿ. ವಿಪ್ರಚಿತ್ತಿಯಿಂದ ಸಿಂಹಿಕಾಳಲ್ಲಿ ನೂರ ಒಂದು ಜನ ಮಕ್ಕಳಾದರು. ಇವರಲ್ಲಿ ಹಿರಿಯ ರಾಹು. ನೂರು ಜನ ಕೇತುಗಳು. ಈ ರಾಹುವೇ ನವಗ್ರಹಗಳಲ್ಲಿ ಒಂದು ಗ್ರಹವಾದ. ಈ ವಿಷಯವನ್ನು ಅಷ್ಟಮಸ್ಕಂಧವು ಸ್ಪಷ್ಟಪಡಿಸುತ್ತದೆ.

ಕಶ್ಯಪರಿಂದ ಅದಿತಿಯಲ್ಲಿ ಜನಿಸಿದವರ ವಿವರವನ್ನು ತಿಳಿಯುವುದರಿಂದ ಶ್ರೇಯಸ್ಸಾಗುತ್ತದೆ. ಈ ಅದಿತಿಯಲ್ಲಿ ಕ್ರೀಡಾದಿಗುಣಸಂಪನ್ನನಾದ ಪರಮಾತ್ಮನು ವಾಮನನಾಗಿ ಅವತರಿಸಿದ.

ವಿವಸ್ವಾನ್, ಅರ್ಯಮಾ, ಪೂಷಾ, ತ್ವಷ್ಟಾ, ಸವಿತಾ, ಭಗ, ಧಾತಾ, ವಿಧಾತಾ, ವರುಣ, ಮಿತ್ರ, ಶಕ್ರ, ಉರುಕ್ರಮ, ಇವರು ಹನ್ನೆರಡು ಜನ ಅದಿತಿಯ ಮಕ್ಕಳು. ದ್ವಾದಶಾದಿತ್ಯರೆಂದು ಲೋಕದಲ್ಲಿ ಪ್ರಸಿದ್ಧರಾಗಿದ್ದಾರೆ.

ಇವರಲ್ಲಿ ವಿವಸ್ವಾನ್ ಎಂಬ ಆದಿತ್ಯನ ಹೆಂಡತಿ ಸಂಜ್ಞಾ. ಮಹಾಭಾಗ್ಯಸಂಪನ್ನಳು. ಇವಳಲ್ಲಿಯೇ ವೈವಸ್ವತ ಮನು ಜನಿಸಿದನು. ಯಮ-ಯಮುನಾ ಎಂಬ ಅವಳಿಯೂ ಇವಳಿಗೆ ಜನಿಸಿತು. ಇವಳೇ ಕಾರಣಾಂತರದಿಂದ ಹೆಣ್ಣುಕುದುರೆಯಾದಳು. ಸೂರ್ಯನೂ ಕುದುರೆಯ ವೇಷವನ್ನು ಧರಿಸಿದ. ಅಶ್ವರೂಪದಲ್ಲಿರುವ ಈ ದಂಪತಿಗಳಿಗೆ ಅಶ್ವಿನೀದೇವತೆಗಳು ಮಕ್ಕಳಾದರು. ಇವರು ದೇವಲೋಕದ ವೈದ್ಯರಾದರು.

ಸೂರ್ಯನ ಮತ್ತೊಬ್ಬ ಹೆಂಡತಿ ಛಾಯಾ. ಸೂರ್ಯನಿಂದ ಛಾಯೆಯು ಶನ್ಯೈಶ್ಚರ ಮತ್ತು ಸಾವರ್ಣಿಮನುವನ್ನು ಮಕ್ಕಳನ್ನಾಗಿ ಪಡೆದಳು. ತಪತೀ ಎಂಬ ಹೆಣ್ಣು ಮಗಳನ್ನೂ ಪಡೆದಳು. ಈ ತಪತಿಯನ್ನು ಸಂವರಣ ಎಂಬ ರಾಜನು ಪತ್ನಿಯನ್ನಾಗಿ ಸ್ವೀಕರಿಸಿದನು.

ಅರ್ಯಮಾ ಎಂಬ ಆದಿತ್ಯನಿಗೆ ಮಾತೃಕಾ ಎಂಬ ಹೆಂಡತಿಯಲ್ಲಿ ಚರ್ಷಣಿ ಎಂಬ ಹೆಸರಿನ ಮಕ್ಕಳಾದರು. ಬ್ರಹ್ಮದೇವರು ಈ ಚರ್ಷಣಿಗಳ ಮೂಲಕವೇ ಮನುಷ್ಯ ಜಾತಿಯನ್ನು ಸೃಷ್ಟಿಸಿದರು.

ಪೂಷಾ ಎಂಬ ಸೂರ್ಯನಿಗೆ ಮಕ್ಕಳಾಗಲಿಲ್ಲ. ದಕ್ಷನ ಮೇಲೆ ಕುಪಿತನಾದ ರುದ್ರದೇವರನ್ನು ನೋಡಿ ಹಲ್ಲು ಕಾಣಿಸುವಂತೆ ಹಾಸ್ಯ ಮಾಡಿದ್ದನು. ಆದರ ಫಲವಾಗಿ ಹಲ್ಲುಮುರಿದವನಾದ. ಹೀಗಾಗಿ ಕೇವಲ ಹಿಟ್ಟನ್ನು ಮಾತ್ರ ತಿನ್ನುವಂತಾದನು.

ತ್ವಷ್ಟಾ ಎಂಬ ಸೂರ್ಯನ ಪತ್ನಿಯು ರಚನಾ. ಇವಳು ದೈತ್ಯರ ತಂಗಿಯು. ಇವರಿಗೆ ಸನ್ನಿವೇಶ ಮತ್ತು ವಿಶ್ವರೂಪರೆಂಬ ಮಹಾಪರಾಕ್ರಮಶಾಲಿಗಳಾದ ಮಕ್ಕಳಾದರು.

ಸಭೆಯಲ್ಲಿ ಇಂದ್ರನು ಮಾಡಿದ ಅವಮಾನದಿಂದ ನೊಂದ ಬೃಹಸ್ಪತ್ಯಾಚಾರ್ಯರು ದೇವತೆಗಳನ್ನು ಪರಿತ್ಯಜಿಸಿದರು. ಆ ಸಂದರ್ಭದಲ್ಲಿ ತಮ್ಮ ವೈರಿಗಳಾದ ದೈತ್ಯರ ತಂಗಿಯಾದ ರಚನೆಯ ಮಗನಾದ ವಿಶ್ವರೂಪಾಚಾರ್ಯರನ್ನೇ ಗುರುಗಳೆಂದು ಸ್ವೀಕರಿಸಿದರು.

★★★★★

ಸದಸಜ್ಜನರ ತಾರತಮ್ಯಜ್ಞಾನವೂ ಭಗವಂತನ ಮಾಹಾತ್ಮ್ಯಜ್ಞಾನಕ್ಕೆ ಉಪಯುಕ್ತವೆಂಬ ಅಭಿಪ್ರಾಯದಿಂದ ದಕ್ಷಪತ್ನಿಯಾದ ಅಸಿಕ್ನಿಯ ಪ್ರಸೂತಿಪ್ರಸರವನ್ನು (ಪ್ರಜಾವಿಸ್ತಾರ) ವಿಸ್ತರಿಸುವರು. ನಾರದರು ಎರಡು ಸಲ ಗಂಡಸು ಮಕ್ಕಳನ್ನು ಸನ್ಯಾಸಿಗಳಾಗುವಂತೆ ಮಾಡಿದ್ದನ್ನು ಕಂಡು ಹೆದರಿದ ದಕ್ಷ ಮನಸ್ಸಿನಲ್ಲಿ ವಿಚಾರಮಾಡಿ ನಾರದರು ವಿರೋಧ ಮಾಡದಂತೆ ಕಾರ್ಯ ಸಾಧಿಸಲು ಏನು ಮಾಡಿದನೆಂದು ಹೇಳುತ್ತಾರೆ-

**ಶ್ರೀಶುಕ ಉವಾಚ -**

**ತತಃ ಪ್ರಾಚೇತಸೋಽಸಿಕ್ನ್ಯಾಮನುನೀತಃ ಸ್ವಯಂಭುವಾ ।**
**ಷಷ್ಟಿಂ ಸಂಜನಯಾಮಾಸ ದುಹಿತೄಃ ಪಿತೃವತ್ಸಲಾಃ ॥೧॥**

**ತತಃ** ಅನಂತರ, **ಸ್ವಯಂಭುವಾ** ಬ್ರಹ್ಮದೇವರಿಂದ, **ಅನುನೀತಃ** ಸಾಂತ್ವನ ಮಾಡಲ್ಪಟ್ಟ, **ಪ್ರಾಚೇತಸಃ** ದಕ್ಷಪ್ರಜಾಪತಿಯು, **ಅಸಿಕ್ನ್ಯಾಂ** ಅಸಿಕ್ನೀ ಎಂಬ ತನ್ನ ಪತ್ನಿಯಲ್ಲಿ, **ಪಿತೃವತ್ಸಲಾಃ** ತಂದೆಯಲ್ಲಿ ಪ್ರೀತಿಯುಳ್ಳ, **ಷಷ್ಟಿಂ** ಅರವತ್ತು, **ದುಹಿತೄಃ** ಹೆಣ್ಣು ಮಕ್ಕಳನ್ನು, (ಸತಿಯನ್ನು ಬಿಟ್ಟು ಸೃಷ್ಟಿಗೆ ಉಪಯುಕ್ತರಾದವರ ಸಂಖ್ಯೆ ಇದು) **ಸಂಜನಯಾಮಾಸ** ಹುಟ್ಟಿಸಿದನು.

'ಸ್ತ್ರೀಣಾಂ ಪ್ರದಾನಕರ್ಮೈವ ಯಥೋಪನಯನಂ ತಥಾ' 'ಪುತ್ರಾತ್ ಶತಗುಣಂ ಪುತ್ರೀ ಯದಿ ಪಾತ್ರೇ ಪ್ರದೀಯತೇ' ಎಂದು ಸ್ತ್ರೀಯರಿಗೆ ವಿವಾಹವೇ ಉಪನಯನವಿದ್ದಂತೆ. ಪಾತ್ರನಿಗೆ ವಿವಾಹ ಮಾಡಿಕೊಟ್ಟರೆ ಪುತ್ರಿಯು ಪುತ್ರನಿಗಿಂತ ನೂರು ಪಟ್ಟು ಮೇಲೆಂದು ಹೇಳಿರುವದರಿಂದ ದಕ್ಷಪ್ರಜಾಪತಿಯು ನ್ಯಾಯದಿಂದ ಕನ್ಯಾದಾನ ಮಾಡಿದನೆಂದು ಹೇಳುವರು.

**ದದೌ ಸ ದಶ ಧರ್ಮಾಯ ಕಶ್ಯಪಾಯ ತ್ರಯೋದಶ ।**
**ಕಾಲಸ್ಯ ನಯನೇ ಯುಕ್ತಾಃ ಸಪ್ತವಿಂಶತಿಮಿಂದವೇ ॥**
**ಭೂತಾಂಗಿರಃಕೃಶಾಶ್ವೇಭ್ಯೋ ದ್ವೇ ದ್ವೇ ತಾರ್ಕ್ಷ್ಯಾಯ ಚಾಪರಾಃ ॥೨॥**

**ಸಃ** ದಕ್ಷಪ್ರಜಾಪತಿಯು, **ಧರ್ಮಾಯ** ಯಮಧರ್ಮನಿಗೆ, **ದಶ** ಹತ್ತು ಜನರನ್ನು, **ಕಶ್ಯಪಾಯ** ಕಶ್ಯಪರಿಗೆ, **ತ್ರಯೋದಶ** ಹದಿಮೂರು ಜನರನ್ನು, **ಕಾಲಸ್ಯ ನಯನೇ ಯುಕ್ತಾಃ** ಕಾಲವನ್ನು ಕಳೆಯಲು ತಿಳಿಯಲು ಯೋಗ್ಯರಾದ ವಿನಿಯುಕ್ತರಾದ, **ಸಪ್ತವಿಂಶತಿಂ** ಇಪ್ಪತ್ತೇಳು ಜನರನ್ನು, **ಇಂದವೇ** ಚಂದ್ರನಿಗೆ, **ಭೂತ, ಅಂಗಿರ,**

**ಕೃಶಾಶ್ವೇಭ್ಯಃ** ಈ ಹೆಸರಿನ ಮೂರು ಜನರಿಗೆ, **ದ್ವೇ ದ್ವೇ** ಇಬ್ಬಿಬ್ಬರನ್ನು, **ಅಪರಾಃ** ಉಳಿದ, **ದ್ವೇ ದ್ವೇ** ಇಬ್ಬರು ಇಬ್ಬರನ್ನು ಅಂದರೆ ನಾಲ್ಕು ಜನರನ್ನು, **ತಾರ್ಕ್ಷಾಯ** ಕಶ್ಯಪರಿಗೆ, **ದದೌ** ದಾನ ಮಾಡಿದನು.

ಧರ್ಮಾಯ ಮುಂತಾದ ಸ್ಥಳದಲ್ಲಿ ಪರಸ್ವತ್ವಾಪಾದನರೂಪ ಒಂದು ದಳದಿಂದಲೇ ಚತುರ್ಥೀ ಉಪಪನ್ನವಾಗುವದು. ನ ಮಮ ಎಂಬ ಸ್ವಸ್ವತ್ವನಿವೃತ್ತಿ ಮಾಡಬಾರದೆಂದು ನಿಬಂಧಕಾರರು ಹೇಳಿರುವರು.

ತಾರ್ಕ್ಷ್ಯ ಎನ್ನುವ ಹೆಸರು ತಂದೆ ಕಶ್ಯಪ ಮಗ ಗರುಡ ಇಬ್ಬರಿಗೂ ಇದೆ ಎಂದು ಪ್ರಯೋಗದಿಂದ ತಿಳಿದು ಬರುವದು. 'ಅಥ ತಾರ್ಕ್ಷ್ಯಸುತೋ ಜ್ಞಾತ್ವಾ' ಎಂದು ಅಷ್ಟಮಸ್ಕಂಧದಲ್ಲಿ, 'ತಾರ್ಕ್ಷ್ಯಪುತ್ರ ಇವೋರಗಾನ್ ಎಂದು ಏಳನೇ ಸ್ಕಂಧದಲ್ಲಿ 'ತಾರ್ಕ್ಷ್ಯಪುತ್ರಃ ಸುಧಾಮಿವ' ಎಂದು ಬೇರೆಡೆಯಲ್ಲಿ, 'ಗರುತ್ಮಾನ್ ಗರುಡಸ್ತಾರ್ಕ್ಷ್ಯಃ' ಎಂದು ಅಮರದಲ್ಲಿ ಹೇಳಿರುವದರಿಂದ ಕಶ್ಯಪನಿಗೂ ಗರುಡನಿಗೂ ಇದು ಸಂಜ್ಞೆಯಾಗಿದೆ. **ಕಶ್ಯಪಾಯ ತ್ರಯೋದಶ, ತಾರ್ಕ್ಷ್ಯಾಯ ಚಾಪರಾಃ** ಎಂದು ಬೇರೆ ಬೇರೆ ಹೇಳಿದ್ದು ವಿವಾಹಕ್ರಮ ವಿವಕ್ಷೆಯಿಂದ. ಕಾರಣ ಹದಿನೇಳು ಜನರನ್ನು ಕಶ್ಯಪನಿಗೆ ಕೊಟ್ಟನು ಎಂದು ಒಂದೇ ಸಲ ಹೇಳಲಿಲ್ಲ.।।೨।।

ತಾರ್ಕ್ಷಾಯ ಎಂದರೆ ಅರಿಷ್ಟನೇಮಿ ಎಂಬವರಿಗೆ ಎಂದು ಚಿಟ್ಟಿ ಆಚಾರ್ಯರು ವ್ಯಾಖ್ಯಾನಿಸಿದ್ದಾರೆ.

**ನಾಮಧೇಯಾನ್ಯಮೂಷಾಂ ತ್ವಂ ಸಾಪತ್ಯಾನಾಂ ಚ ಮೇ ಶೃಣು ।**
**ಯಾಸಾಂ ಪ್ರಸೂತಿಪ್ರಭವೈರ್ಲೋಕಾ ಆಪೂರಿತಾಸ್ತ್ರಯಃ ।।೩।।**

**ತ್ವಂ** ನೀನು, **ಮೇ** ನನ್ನಿಂದ, **ಸಾಪತ್ಯಾನಾಂ** ಪುತ್ರಪೌತ್ರರಿಂದ ಸಹಿತರಾದ, **ಅಮೂಷಾಂ** ಇವರ, **ನಾಮಧೇಯಾನಿ** ಹೆಸರುಗಳನ್ನು, **ಶ್ರುಣು** ಕೇಳು, **ಯಾಸಾಂ** ಯಾರ, **ಪ್ರಸೂತಿಪ್ರಭವೈಃ** ಮಕ್ಕಳು ಮೊಮ್ಮಕ್ಕಳು ಮುಂತಾದವರಿಂದ, **ತ್ರಯಃ ಲೋಕಾಃ** ಮೂರು ಲೋಕಗಳು, **ಆಪೂರಿತಾಃ** ತುಂಬಿರುವವು. ।।೩।।

ಶ್ರುಣು ಎಂದು ಹೇಳಿದ್ದರಿಂದ ತನಗೆ ಹೇಳುವ ಇಚ್ಛೆಯಿದೆ ಎಂದು ಧ್ವನಿತವಾಗುವದು.

**ಭಾನುರ್ಲಂಬಾ ಕಕುಬ್ ಜಾಮಿರ್ವಿಶ್ವಾ ಸಾಧ್ಯಾ ಮರುತ್ವತೀ ।**
**ವಸುರ್ಮುಹೂರ್ತಾ ಸಂಕಲ್ಪಾ ಧರ್ಮಪತ್ನ್ಯಃ ಸುತಾನ್ ಶ್ರುಣು ॥೪॥**

**ಭಾನುಃ, ಲಂಬಾ, ಕಕುಬ್, ಜಾಮಿ, ವಿಶ್ವಾ, ಸಾಧ್ಯಾ, ಮರುತ್ವತೀ, ವಸು, ಮುಹೂರ್ತಾ ಸಂಕಲ್ಪಾ** ಈ ಹತ್ತು ಜನ **ಧರ್ಮಪತ್ನ್ಯಃ** ಯಮಧರ್ಮನ ಹೆಂಡತಿಯರು, **ಸುತಾನ್** ಅವರ ಮಕ್ಕಳನ್ನು, **ಶ್ರುಣು** ಕೇಳು. ॥೪॥

**ಭಾನೋಸ್ತು ವೇದಋಷಭ ಇಂದ್ರಸೇನಸ್ತತೋ ನೃಪಃ ।**
**ವಿದ್ಯೋತ ಆಸೀಲ್ಲಂಬಾಯಾಸ್ತತಶ್ಚ ಸ್ತನಯಿತ್ನವಃ ॥೫॥**

**ನೃಪ** ರಾಜನೇ, **ಭಾನೋಃ** ಭಾನು ಎಂಬವಳಿಂದ, **ವೇದಋಷಭಃ** ವೇದ ಋಷಭನು, **ತತಃ** ವೇದಋಷಭನಿಂದ, **ಇಂದ್ರಸೇನಃ** ಇಂದ್ರಸೇನನು, **ಆಸೀತ್** ಜನಿಸಿದನು. **ಲಂಬಾಯಾಃ** ಲಂಬಾಳಿಂದ, **ವಿದ್ಯೋತಃ** ಮಿಂಚುಗಳಿಗೆ ಅಭಿಮಾನಿಯಾದ ವಿದ್ಯೋತನು, **ತತಃ** ವಿದ್ಯೋತನಿಂದ, **ಸ್ತನಯಿತ್ನವಃ** ಗುಡುಗುಗಳಿಗೆ ಅಭಿಮಾನಿಗಳು ಮಕ್ಕಳಾದರು. ॥೫॥

**ಕಕುಭಃ ಸಂಕಟಶ್ಚಾಸೀತ್ ಕೀಕಟಸ್ತನಯೋ ಯತಃ ।**
**ಭುವೋ ದುರ್ಗಾಣಿ ಯಾಮೇಯಾಃ ಸ್ವರ್ಗೋ ನಂದಿಸ್ತತೋಽಭವತ್॥**

**ಕಕುಭಃ** ಕಕುಪ್ ಎಂಬುವಳಿಗೆ, **ಸಂಕಟಃ** ಸಂಕಟಾಭಿಮಾನಿಯು, **ಆಸೀತ್** ಮಗನಾದನು, **ಯತಃ** ಯಾವ ಸಂಕಟನಿಂದ, **ಕೀಕಟಃ** ಕೀಕಟನೆಂಬುವನು, **ತನಯಃ** ಮಗನು, **ಜಾತಃ** ಹುಟ್ಟಿದನು. **ಭುವಃ** ಭೂಮಿಯ ಮೇಲಿನ, **ದುರ್ಗಾಣಿ** ಅಗಮ್ಯಸ್ಥಾನಗಳ ಅಭಿಮಾನಿಗಳು, **ಜಾಮೇಯಾಃ** ಜಾಮಿಯ ಮಕ್ಕಳು, **ಸ್ವರ್ಗಃ** ಸ್ವರ್ಗಾಭಿಮಾನಿದೇವತೆಯೂ, ಜಾಮಿಪುತ್ರನೇ, **ತತಃ** ಸ್ವರ್ಗನಿಂದ, **ನಂದಿಃ ಅಭವತ್** ನಂದಿಯು ಜನಿಸಿದನು. ॥೬॥

**ವಿಶ್ವೇದೇವಾಸ್ತು ವಿಶ್ವಾಯಾಮಪ್ರಜಾಂಸ್ತಾನ್ ಪ್ರಚಕ್ಷತೇ ।**
**ಸಾಧ್ಯೋ ಗಣಸ್ತು ಸಾಧ್ಯಾಯಾಮರ್ಥಸಿದ್ಧಿಸ್ತು ತತ್ಸುತಃ ॥೭॥**

**ವಿಶ್ವಾಯಾಂ** ವಿಶ್ವಾಳಲ್ಲಿ, **ವಿಶ್ವೇ ದೇವಾಃ** ವಿಶ್ವೇದೇವತೆಗಳು, (ರೂಢ ಶಬ್ದ) **ಆಸನ್** ಜನಿಸಿದರು. **ತಾನ್** ವಿಶ್ವೇದೇವತಗಳನ್ನು, **ಅಪ್ರಜಾನ್** ಮಕ್ಕಳಿಲ್ಲದವರೆಂದು, **ಪ್ರಚಕ್ಷತೇ** ಬಲ್ಲವರು ಹೇಳುವರು. **ಸಾಧ್ಯಾಯಾಂ** ಸಾಧ್ಯಾಳಲ್ಲಿ, **ಸಾಧ್ಯೋ ಗಣಃ** ಸಾಧ್ಯಗಣನು ಮಗನಾದನು, **ತತ್ಸುತಃ** ಸಾಧ್ಯಗಣನ ಮಗನು, **ಅರ್ಥಸಿದ್ಧಿಃ** ಅರ್ಥಸಿದ್ಧಿಯು. ॥೭॥

**ಮರುತ್ವಾಂಶ್ಚ ಜಯಂತಶ್ಚ ಮರುತ್ವತ್ಯಾಂ ಬಭೂವತುಃ ।**
**ಜಯಂತೋ ವಾಸುದೇವಾಂಶ ಉಪೇಂದ್ರ ಇತಿ ಯಂ ವಿದುಃ॥೮॥**

**ಮರುತ್ವತ್ಯಾಂ** ಮರುತ್ವತಿಯಲ್ಲಿ, **ಮರುತ್ವಾನ್** ಮರುತ್ವಂತನು ಮತ್ತು, **ಯಂ** ಯಾವನನ್ನು, **ಉಪೇಂದ್ರ ಇತಿ ವಿದುಃ** ವಿದ್ವಾಂಸರು ಉಪೇಂದ್ರನೆಂದು ತಿಳಿದಿರುವರೋ, ಆ **ವಾಸುದೇವಾಂಶಃ** ವಾಸುದೇವನ ಅಂಶವುಳ್ಳ, **ಜಯಂತಃ** ಜಯಂತನೂ, **ಬಭೂವತುಃ** ಜನಿಸಿದರು. ಇಲ್ಲಿ ಹೇಳಿದ ಉಪೇಂದ್ರನು ಅದಿತಿ ಪುತ್ರನಲ್ಲ ಬೇರೆ. ॥೮॥

**ಮೌಹೂರ್ತಿಕಾ ದೇವಗಣಾ ಮುಹೂರ್ತಾಯಾಶ್ಚ ಜಜ್ಞಿರೇ ।**
**ಯಥಾಫಲಂ ಪ್ರಯಚ್ಛಂತಿ ಭೂತಾನಾಂ ಸ್ವಸ್ವಕಾಲಜಮ್ ॥೯॥**

**ಮುಹೂರ್ತಾಯಾಃ** ಮುಹೂರ್ತಾ ಎಂಬುವಳಿಂದ, **ಮೌಹೂರ್ತಿಕಾಃ** ಮುಹೂರ್ತಾಭಿಮಾನಿಗಳಾದ, **ದೇವಗಣಾಃ** ದೇವತೆಗಳ ಸಮೂಹಗಳು, **ಜಜ್ಞಿರೇ** ಜನಿಸಿದರು. ಇವರು **ಭೂತಾನಾಂ** ಜನರಿಗೆ, **ಸ್ವಸ್ವಕಾಲಜಂ ಫಲಂ** ತಮ್ಮ ತಮ್ಮ ಕಾಲದಲ್ಲಿ ಮಾಡಿದ ಕರ್ಮದ ಫಲವನ್ನು, **ಯಥಾ ಪ್ರಯಚ್ಛಂತಿ** ಚೆನ್ನಾಗಿ ಕೊಡುವರು. ಅನುಗುಣವಾಗಿ ಕೊಡುವರು. ತದ್ವೇದೇತ್ಯರ್ಥೇ ಉಕ್ಥಾದಿತ್ವಾಟ್ಠಕ್ ಪ್ರತ್ಯಯದಿಂದ ಮೌಹೂರ್ತಿಕ ಎಂದಾಗಿದೆ. ॥೯॥

**ಸಂಕಲ್ಪಾಯಾಶ್ಚ ಸಂಕಲ್ಪಃ ಕಾಮಃ ಸಂಕಲ್ಪಜಃ ಸ್ಮೃತಃ ।**
**ವಸವೋಽಷ್ಟೌ ವಸೋಃ ಪುತ್ರಾಸ್ತೇಷಾಂ ನಾಮಾನಿ ಮೇ ಶೃಣು ॥೧೦॥**

**ಸಂಕಲ್ಪಾಯಾಃ** ಸಂಕಲ್ಪಾಳಿಂದ, **ಸಂಕಲ್ಪಃ** ಸಂಕಲ್ಪನು ಜನಿಸಿದನು. **ಕಾಮಃ** ಕಾಮನು, **ಸಂಕಲ್ಪಜಃ ಸ್ಮೃತಃ** ಸಂಕಲ್ಪನಿಂದ ಜನಿಸಿದವನೆಂದು ಹೇಳಲ್ಪಟ್ಟಿದೆ. **ವಸೋಃ** ವಸು ಎಂಬುವಳಿಗೆ, **ಅಷ್ಟೌ ವಸವಃ** ಎಂಟು ಜನ ವಸುಗಳು, **ಪುತ್ರಾಃ** ಮಕ್ಕಳು, **ತೇಷಾಂ** ವಸುಗಳ, **ನಾಮಾನಿ** ಹೆಸರುಗಳನ್ನು, **ಮೇ** ನನ್ನಿಂದ, **ಶ್ರುಣು** ಕೇಳು. ( ಶ್ರೀ ಸತ್ಯಧರ್ಮರು ಮನವೋಽಷ್ಟೌ ಎಂದು ಪಾಠವಿಟ್ಟು ಕೊಂಡಂತಿದೆ) **ಅಷ್ಟೌ ಮನವಃ ತೇಷಾಂ ಮನೂನಾಂ** ಎಂದು ಮುದ್ರಿತ ವ್ಯಾಖ್ಯಾನ ಪುಸ್ತಕದಲ್ಲಿದೆ.) ವಸು ಎಂಬುವವಳು ಎಂಟನೆಯವಳಾಗಿದ್ದಾಳೆ. ಅವಳನ್ನು ಯಾಕೆ ಕೊನೆಯಲ್ಲಿ ಹೇಳಿದ್ದಾರೆ. ಇನ್ನು ಕೊನೆಗೆ ಹೇಳಲು ಏನೋ ಒಂದು ಕಾರಣವಿದೆ ಎಂದಾದರೆ ನಿರ್ದೇಶ ಮಾಡುವಾಗಲೇ ಏಕೆ ಕೊನೆಗೆ ನಿರ್ದೇಶಸಲಿಲ್ಲ ಎಂದರೆ ಎರಡು ಪ್ರಯೋಜನಗಳು

ಇರುವದರಿಂದ ಡೋಲಾಯಮಾನವಾದ ಮನಸ್ಸುಳ್ಳ ವ್ಯಾಸರು ಈ ರೀತಿ ಹೇಳಿರುವರು. ಮೊದಲು ಉತ್ಪತ್ತಿಕ್ರಮ, ಕನ್ಯಾವಿತರಣಕ್ರಮವನ್ನು ಆಲೋಚಿಸಿ ನಿರ್ದೇಶ ಮಾಡಿರುವರು. ಸೂಚೀಕಟಾಹನ್ಯಾಯದಿಂದ ವಸುವಂಶ ವಿಸ್ತೃತವಾದುದರಿಂದ ಕೊನೆಗೆ ಹೇಳಿರುವರು ಎಂದು ಸಮಾಧಾನ ತಿಳಿಯಬೇಕು. ॥೧೦॥

**ದ್ರೋಣಃ ಪ್ರಾಣೋ ಧ್ರುವೋಽರ್ಕೋಽಗ್ನಿರ್ದೋಷೋ ವಸ್ತುರ್ವಿಭಾವಸುಃ ।**
**ದ್ರೋಣಸ್ಯಾಭಿಮತೇಃ ಪತ್ನ್ಯಾ ಹರ್ಷಶೋಕಭಯಾದಯಃ ॥೧೧॥**

ದ್ರೋಣ, ಪ್ರಾಣ, ಧ್ರುವ, ಅರ್ಕ, ಅಗ್ನಿ, ದೋಷ, ವಸ್ತು, ವಿಭಾವಸು ಹೀಗೆ ಎಂಟು ಹೆಸರುಗಳು. **ದ್ರೋಣಸ್ಯ** ದ್ರೋಣನಿಗೆ **ಪತ್ನ್ಯಾಃ** ಹೆಂಡತಿಯಾದ **ಅಭಿಮತೇಃ** ಅಭಿಮಾನಕ್ಕೆ ಅಭಿಮಾನಿಯಾದುದರಿಂದ ಅಭಿಮತಿ ಎಂಬುವಳಿಂದ **ಹರ್ಷಶೋಕಭಯಾದಯಃ** ಹರ್ಷ ಶೋಕ, ಭಯ ಮುಂತಾದ ಅಂತಃಕರಣ ಪ್ರಭೇದಗಳು ಅವುಗಳ ದೇವತೆಗಳು ಪುತ್ರರು ಆದರು.

**ಪ್ರಾಣಸ್ಯೋರ್ಜಸ್ವತೀ ಭಾರ್ಯಾ ಸಹ ಆಯುಃ ಪರೋಜವಃ ।**
**ಧ್ರುವಸ್ಯ ಭಾರ್ಯಾ ಧರಣೀ ತ್ವಸೂತ ವಿವಿಧಾಃ ಪುರಃ ॥೧೨॥**

**ಪ್ರಾಣಸ್ಯ ಚ** ಪ್ರಾಣನಿಗೆ, **ಊರ್ಜಸ್ವತೀ ಭಾರ್ಯಾ** ಊರ್ಜಸ್ವತೀ ಎಂಬುವವಳು ಹೆಂಡತಿಯು, **ಸಹಃ ಆಯುಃ ಪರೋಜವಃ** ಎಂಬ ಮೂರು ಮಕ್ಕಳು, **ಧ್ರುವಸ್ಯ** ಧ್ರುವನಿಗೆ, **ಧರಣೀ** ಧರಣೀ ಎಂಬುವವಳು, **ಭಾರ್ಯಾ** ಹೆಂಡತಿಯು, **ವಿವಿಧಾಃ ಪುರಃ ಅಸೂತ** ಅನೇಕ ರೀತಿಯ ಪುರಗಳನ್ನು ಅಭಿಮಾನಿಗಳನ್ನು ಹೆತ್ತಳು. ॥೧೨॥

**ಅರ್ಕಸ್ಯ ವಾಸನಾ ಭಾರ್ಯಾ ಪುತ್ರಾಸ್ತರ್ಷಾದಯಃ ಸ್ಮೃತಾಃ ।**
**ಅಗ್ನೇರ್ಭಾರ್ಯಾ ವಸೋರ್ಧಾರಾ ಪುತ್ರಾ ದ್ರವಿಣಕಾದಯಃ ॥೧೩॥**

**ಅರ್ಕಸ್ಯ** ಅರ್ಕ ಎಂಬುವನಿಗೆ, **ವಾಸನಾ** ವಾಸನಾ ಎಂಬುವವಳು, **ಭಾರ್ಯಾ** ಹೆಂಡತಿಯು, **ತರ್ಷಾದಯಃ** ತರ್ಷ ಮುಂತಾದವರು, **ಪುತ್ರಾಃ ಸ್ಮೃತಾಃ** ಮಕ್ಕಳೆಂದು ಹೇಳಲ್ಪಟ್ಟಿರುವರು. **ವಸೋಃ** ವಸು ಎಂಬುವವಳ ಮಗನಾದ, **ಅಗ್ನೇಃ** ಅಗ್ನಿಗೆ, **ಭಾರ್ಯಾ** ಪತ್ನಿಯು, **ಧಾರಾ** ಧಾರಾ ಎಂಬುವವಳು, **ದ್ರವಿಣಕಾದಯಃ ಪುತ್ರಾಃ** ದ್ರವಿಣಕ ಮುಂತಾದವರು ಮಕ್ಕಳು.

ಅಗ್ನಿಪತ್ನಿಯಾದ ಸ್ವಾಹಾಳಿಗೆ ಧಾರಾ ಎಂಬುದು ಮತ್ತೊಂದು ಹೆಸರು ಎನ್ನುತ್ತಾರೆ ಶ್ರೀಗಳು. **ವಸೋರ್ಧಾರಾ** ಎಂದೇ ಹೆಸರು ಎಂದು ಚೆಟ್ಟಿ ಆಚಾರ್ಯರ ವ್ಯಾಖ್ಯಾನ. ।।೧೩।।

**ಸ್ಕಂದಶ್ಚ ಕೃತ್ತಿಕಾಪುತ್ರೋ ಯೇ ವಿಶಾಖಾದಯಸ್ತತಃ ।**
**ದೋಷಸ್ಯ ಶರ್ವರೀ ಪುತ್ರಃ ಶಿಂಶುಮಾರೋ ಹರೇಃ ಕಲಾ ।।೧೪।।**

**ಸ್ಕಂದಶ್ಚ** ಸ್ಕಂದನೂ ಕೂಡ ಅಗ್ನಿಪುತ್ರನು, (ಏ) **ಕೃತ್ತಿಕಾಪುತ್ರಶ್ಚ** ಕೃತ್ತಿಕೆಯ ಮಗನೂ ಸಹ, 'ತಂ ಕಾರ್ತಿಕೇಯಂ ಗಾಂಗೇಯಂ ಆಗ್ನೇಯಂ ಚ ಪ್ರಚಕ್ಷತೇ' ಎಂದಿದೆ ಎನ್ನುತ್ತಾರೆ ಶ್ರೀಗಳು. ಕೃತ್ತಿಕಾಪುತ್ರನೆಂಬುದು ಔಪಚಾರಿಕ. ಕೃತ್ತಿಕೆಯು ಧಾತ್ರಿಯಷ್ಟೇ. ಮುಖ್ಯವಾಗಿ ಸ್ಕಂದನು ರುದ್ರಪುತ್ರನು. **ಯೇ ವಿಶಾಖಾದಯಃ** ವಿಶಾಖಾದಿಗಳು, **ತತಃ** ಸ್ಕಂದನಿಂದ ಜನಿಸಿದವರು. **ದೋಷಸ್ಯ** ದೋಷನ ಪತ್ನಿಯಾದ **ಶರ್ವರೀಪುತ್ರಃ** ಶರ್ವರಿಯ ಮಗನು, **ಶಿಂಶುಮಾರಃ** ಶಿಂಶುಮಾರನು, **ಹರೇಃ ಕಲಾ** ಶ್ರೀಹರಿಯ ಸಾಕ್ಷಾದಭಿನ್ನಾಂಶನು. ಸ್ಕಂದನು ಕೃತ್ತಿಕಾಳಲ್ಲಿ ಹುಟ್ಟಿದ ಅಗ್ನಿಪುತ್ರ ಎನ್ನುತ್ತಾರೆ ಚೆಟ್ಟಿ ಆಚಾರ್ಯರು. ಷಾಣ್ಮಾತುರ ಅಗ್ನಿಭೂ ಎಂದು ಪ್ರಸಿದ್ಧಿ ಇದೆ. ।।೧೪।।

**ವಸೋರಾಂಗಿರಸೀಪುತ್ರೋ ವಿಶ್ವಕರ್ಮಾ ಕೃತೀಪತಿಃ ।**
**ತತೋ ಮನುಶ್ಚಾಕ್ಷುಷೋಽಭೂದ್ ವಿಶ್ವೇಶಾದ್ಯಾ ಮನೋಃ ಸುತಾಃ ।।**

**ವಸೋಃ** ವಸ್ತುವಿಗೆ, **ಆಂಗಿರಸೀಪುತ್ರಃ** ಆಂಗಿರಸೀ ಎಂಬ ಪತ್ನಿಯಲ್ಲಿ ಜನಿಸಿದ ಮಗನು, **ಕೃತೀಪತಿಃ ವಿಶ್ವಕರ್ಮಾ** ಕೃತೀ ಎಂಬುವವಳ ಗಂಡನಾದ ಅಥವಾ, **ಕೃತೀನಾಂ** ಕ್ರಿಯೆಗಳ, **ಇಃ** ಇಚ್ಛೆಗೆ, **ಪತಿಃ** ಪ್ರಭುವಾದ, 'ಪ್ರವೋ ಭ್ರಿಯಂತ ಇಂದವಃ' ಎಂಬ ಋಗ್ಭಾಷ್ಯಟೀಕಾಗಳಲ್ಲಿ 'ಇಷ್ಟದಾನಾತ್ತಥೇಂದವಃ' ಇಂದು ಶಬ್ದಂ ಸೋಮೇಷು ಮನೋವೃತ್ತಿಷು ವ್ಯಾಖ್ಯಾತಿ. 'ಇಷ್ಟೇತಿ' ಇಕಾರಃ ಕಾಮವಾಚೀ ಇಂ ಕಾಮಂ ದದಾತೀತಿ ಇಂದವಃ ಎಂದು ಹೇಳಿದ್ದಾರೆ. ಆಂಗಿರಸೀ ಎಂಬುವವಳು ವಸ್ತುವಿನ ಪತ್ನಿ. **ಕೃತೀ** ಕರ್ಮಗಳಲ್ಲಿ ನಿಪುಣನು, **ಪತಿಃ** ಶಿಲ್ಪಚಾರ್ಯನು. ಕೃತ್ಯಾಃ ಪತಿಃ ಎಂಬುದಾಗಿ ಸಮಸ್ತಪದವೂ ಇದೆಂದು ತಿಳಿಯಬಹುದು. ಅಂತು ಶಿಲ್ಪಿಗಳ ಕುಲಾಚಾರ್ಯನಾದ ವಿಶ್ವಕರ್ಮಾ ವಿಶ್ವಕರ್ಮನು, **ಪುತ್ರಃ** ಮಗನು, **ತತಃ** ವಿಶ್ವಕರ್ಮನಿಂದ, **ಚಾಕ್ಷುಷಃ ಮನುಃ ಅಭೂತ್** ಚಾಕ್ಷುಷಮನ್ವಂತರಾಭಿಮಾನಿಯು ಜನಿಸಿದನು. **ವಿಶ್ವೇಶಾದ್ಯಾಃ** ವಿಶ್ವೇಶ ಮುಂತಾದವರು, **ಮನೋಃ** ಮನುವಿನ, **ಸುತಾಃ** ಮಕ್ಕಳು. ।।೧೫।।

**ವಿಭಾವಸೋರಸೂತೋಷಾ ವ್ಯುಷ್ಟಂ ರೋಚಿಷಮಾತಪಮ್ ।**
**ಪಂಚಯಾಮೋಽಥ ಭೂತಾನಿ ಯೇನ ಜಾಗ್ರತಿ ಕರ್ಮಸು ॥೧೬॥**

**ವಿಭಾವಸೋಃ** ವಿಭಾವಸುವಿನಿಂದ, **ಉಷಾ** ಉಷಾ ಎಂಬ ಹೆಂಡತಿಯು, **ವ್ಯುಷ್ಟಂ, ರೋಚಿಷಂ , ಆತಪಂ,** ವ್ಯುಷ್ಟ ರೋಚಿಷ ಆತಪರೆಂಬ ಮೂರು ಮಕ್ಕಳನ್ನು **ಅಸೂತ** ಪ್ರಸವಿಸಿದಳು. **ಅಥ** ಆತಪನಿಂದ, **ಪಂಚಯಾಮಃ** ದಿವಸವು, **ಜಾತಃ** ಹುಟ್ಟಿತು. **ಯೇನ** ಯಾವ ದಿವಸದಿಂದ (ಹಗಲಿನಿಂದ) **ಭೂತಾನಿ** ಪ್ರಾಣಿಗಳು, **ಕರ್ಮಸು** ತಮ್ಮ ಕಾರ್ಯಗಳಲ್ಲಿ, **ಜಾಗ್ರತಿ** ಎಚ್ಚರಗೊಳ್ಳುವವು.

ಇಲ್ಲಿ ಎಲ್ಲ ಕಡೆಗೂ ಆತಪ ಮುಂತಾದ ಶಬ್ದಗಳಿಂದ ಅಭಿಮಾನಿಗಳನ್ನೂ ಅಭಿಮನ್ಯಮಾನ ಪದಾರ್ಥಗಳನ್ನು ಸ್ವೀಕರಿಸಬೇಕು. ನಾಲ್ಕು ಯಾಮಗಳು ಪಶ್ಚಿಮ ಅಪಶ್ಚಿಮ ಅರ್ಧಯಾಮ ಸೇರಿ ಒಂದು ಯಾಮ ಹೀಗೆ ಐದು ಯಾಮ ಹಗಲಿಗೆ ಕಾರಣ. ರಾತ್ರಿಗೆ ತ್ರಿಯಾಮ ಎಂದು ಹೆಸರು. ಪ್ರದೋಷ ಪ್ರತ್ಯೂಷಗಳು ಹಗಲಿಗೆ ಸೇರಿದವು. ॥೧೬॥

**ಭೂತಸ್ಯ ಭಾರ್ಯಾ ಭೂತಾಯಾ ರುದ್ರಾ ಏಕಾದಶ ಸ್ಮೃತಾಃ ।**
**ಸುರೂಪಾಸೂತ ಭೂತಸ್ಯ ಭಾರ್ಯಾ ರುದ್ರಾಂಶ್ಚ ಕೋಟಿಶಃ ॥೧೭॥**

**ಭೂತಸ್ಯ** ದಕ್ಷಪ್ರಜಾಪತಿಯು ಅಳಿಯಂದಿರಾದ ಭೂತಪ್ರಜೇಶ್ವರರಿಗೆ ೨ನೇ ಶ್ಲೋಕದಲ್ಲಿ 'ಭೂತೋಽಂಗಿರಃಕೃಶಾಶ್ವೇಭ್ಯಃ ದ್ವೌ ದ್ವೌ' ಎಂದು ಹೇಳಿದೆ. **ಭೂತಾಯಾಃ** ಭೂತಾ ಎಂಬ ಪತ್ನಿಯಿಂದ **ಏಕಾದಶ ರುದ್ರಾಃ** ಹನ್ನೊಂದು ಜನ ರುದ್ರರು, **ಸ್ಮೃತಾಃ** ಮಕ್ಕಳೆಂದು ಹೇಳಲ್ಪಟ್ಟಿದೆ. **ಭೂತಸ್ಯ ಭಾರ್ಯಾ ಸುರೂಪಾ** ಭೂತನ ಹೆಂಡತಿ ಸುರೂಪಾಳು **ಕೋಟಿಶಃ ರುದ್ರಾನ್ ಅಸೂತ** ಕೋಟಿ ಕೋಟಿ ರುದ್ರರನ್ನು ಪಡೆದಳು.

**ರೈವತೋಽಜೋ ಭವೋ ಭೀಮೋ ವಾಮ ಉಗ್ರೋ ವೃಷಾಕಪಿಃ ।**
**ಅಜೈಕಪಾದಹಿರ್ಬುಧ್ನ್ಯೋ ಬಹುರೂಪೋ ಮಹಾನಿತಿ ॥೧೮॥**

**ರುದ್ರಾಂಶ್ಚ ಪಾರ್ಷದಾಂಶ್ಚಾನ್ಯಾನ್ ಘೋರಾನ್ ಪ್ರೇತವಿನಾಯಕಾನ್॥**

ರೈವತ, ಅಜ, ಭವ, ಭೀಮ, ವಾಮ, ಉಗ್ರ, ವೃಷಾಕಪಿ, ಅಜೈಕಪಾತ್, ಅಹಿರ್ಬುಧ್ನ, ಬಹೂರೂಪ, ಮಹಾನ್, ಎಂದು ಪ್ರಧಾನರಾದ ಹನ್ನೊಂದು ರುದ್ರರು ಭೂತಾಳ ಮಕ್ಕಳೆಂದು, ವಿದ್ಧಿ ತಿಳಿ. ರುದ್ರಾನ್ ಚ ಪಾರ್ಷದಾನ್ ಚ ಅನ್ಯಾನ್

ಘೋರಾನ್ ಪ್ರೇತವಿನಾಯಕಾನ್ ರುದ್ರನ ಪಾರ್ಷದರಾದ, ಘೋರರಾದ, ಪ್ರೇತವಿನಾಯಕಾದಿಗಳು ಮತ್ತೊಬ್ಬ ಹೆಂಡತಿಯಲ್ಲಿ ಜನಿಸಿದವರೆಂದು ತಿಳಿ. ।। ।।೧೮।।

**ಪ್ರಜಾಪತೇರಾಂಗಿರಸಃ ಸ್ವಧಾ ಪತ್ನೀ ಪಿತೄನಥ ।**
**ಅಥರ್ವಾಂಗಿರಸಂ ವೇದಂ ಪುತ್ರತ್ವೇ ಚಾಕರೋತ್ಸತೀ ।।೧೯।।**

**ಆಂಗೀರಸಃ ಪ್ರಜಾಪತೇಃ** ಆಂಗಿರಸ ಪ್ರಜಾಪತಿಯ, **ಪತ್ನೀ** ಹೆಂಡತಿಯಾದ, **ಸ್ವಧಾ** ಸ್ವಧಾ ಎಂಬುವವಳು, **ಪಿತೄನ್** ಪಿತೃಗಳನ್ನು, **ಅಸೂತ** ಹೆತ್ತಳು. **ಸತೀ** ಸತೀ ಎಂಬ ಪತ್ನಿಯು, **ಅಥರ್ವಾಂಗಿರಸಂ, ವೇದಂ** ಅರ್ಥವಾಂಗೀರಸನನ್ನು ವೇದಾಭಿಮಾನಿಯನ್ನು, **ಪುತ್ರತ್ವೇ ಆಕರೋತ್** ಮಗನನ್ನಾಗಿ ಮಾಡಿಕೊಂಡಳು. ಅಥರ್ವವೇದಾಭಿಮಾನಿಯನ್ನು ಮಗನನ್ನಾಗಿ ಪಡೆದಳೆಂದು ಭಾವ. **ಅಥ** ಸ್ವಧಾ ಪಿತೃಗಳನ್ನು ಪಡೆದ ನಂತರ, ।।೧೯।।

**ಕೃಶಾಶ್ವೋऽರ್ಚಿಷಿ ಭಾರ್ಯಾಯಾಂ ಧೂಮಕೇತುಮಜೀಜನತ್ ।**
**ಧಿಷಣಾಯಾಂ ವೇದಶಿರಾ ದೇವಲಂ ಚ ಸುತಂ ಮನುಮ್ ।।೨೦।।**

**ಕೃಶಾಶ್ವಃ** ಕೃಶಾಶ್ವರು, **ಭಾರ್ಯಾಯಾಂ ಅರ್ಚಿಷಿ** ಅರ್ಚಿ ಎಂಬ ಹೆಂಡತಿಯಲ್ಲಿ, **ಧೂಮಕೇತುಂ** ಧೂಮಕೇತುವನ್ನು, **ಅಜೀಜನತ್** ಹುಟ್ಟಿಸಿದರು. **ವೇದಶಿರಾಃ** ಕೃಶಾಶ್ವರು, **ಧಿಷಣಾಯಾಂ** ಧಿಷಣಾ ಎಂಬ ಪತ್ನಿಯಲ್ಲಿ, **ಮನುಂ ದೇವಲಂ ಸುತಂ ಚ** ಮನುವಾದ ದೇವಲನೆಂಬ ಮಗನನ್ನು ಪಡೆದರು. ವೇದಶಿರಾ ಎಂಬುದು ಕೃಶಾಶ್ವರ ಮತ್ತೊಂದು ಹೆಸರಾಗಿದೆ ಎಂದು ತಿಳಿಯಬೇಕು. ।।೨೦।।

**ತಾರ್ಕ್ಷ್ಯಸ್ಯ ವಿನತಾ ಕದ್ರೂಃ ಪತಂಗೀ ಯಾಮಿನೀ ಇತಿ ।**
**ಪತಂಗ್ಯಸೂತ ಪತಗಾನ್ ಯಾಮಿನೀ ಶಲಭಾನಥ।।೨೧।।**

**ವಿನತಾಸೂತ ಗರುಡಂ ಸಾಕ್ಷಾದ್ ಯಜ್ಞೇಶವಾಹನಮ್ ।**
**ಸೂರ್ಯಸೂತಮನೂರುಂ ಚ ಕದ್ರೂರ್ನಾಗಾನನೇಕಶಃ।।೨೨।।**

**ತಾರ್ಕ್ಷಸ್ಯ** ಕಶ್ಯಪರಿಗೆ, **ವಿನತಾ, ಕದ್ರೂಃ, ಪತಂಗೀ, ಯಾಮಿನೀ ಇತಿ** ಎಂದು (ಚತಸ್ರಃ ಭಾರ್ಯಾಃ) ನಾಲ್ಕು ಜನ ಪತ್ನಿಯರು, **ಪತಂಗೀ** ಪತಂಗಿಯು, **ಪತಗಾನ್** ಹಕ್ಕಿಗಳನ್ನು, **ಅಸೂತ** ಹಡೆದಳು. **ಯಾಮಿನೀ** ಯಾಮಿನಿಯು, **ಶಲಭಾನ್ ಅಸೂತ** ರೆಕ್ಕೆ ಹುಳುಗಳನ್ನು ಪಡೆದಳು. **ಅಥ** ನಂತರ, **ವಿನತಾ** ವಿನತೆಯು, **ಸಾಕ್ಷಾದ್ ಯಜ್ಞೇಶವಾಹನಂ** ಮುಖ್ಯ ಯಜ್ಞನಿಯಾಮಕನಾದ ಶ್ರೀಮನ್ನಾರಾಯಣನ ವಾಹನನಾದ, **ಗರುಡಂ** ಗರುಡನನ್ನು, **ಸೂರ್ಯಸೂತಂ** ಸೂರ್ಯನ ಸಾರಥಿಯಾದ,

**ಅನೂರುಂ ಚ** ತೊಡೆಗಳಿಲ್ಲದ ಅರುಣನನ್ನೂ, **ಅಸೂತ** ಹೆತ್ತಳು. **ಕದ್ರೂಃ** ಕದ್ರೂಳಾದರೂ, **ಅನೇಕಶಃ ನಾಗಾನ್** ಬಹು ರೀತಿಯ ನಾಗಗಳನ್ನು ಹೆತ್ತಳು.

ಯಾಮಿನೀ ಇತಿ ಎಂದು ಸಂಧಿ ಇಲ್ಲದೆ ಹೇಳಿ ಒಂದೇ ವಿಧವಾದ ಸಂತತಿ ಹೇಳುವುದಿಲ್ಲವೆಂದೂ ಸೂಚಿಸಿರುವರು. ।।೨೦-೨೨।।

ಅನೂರುಂ ಸೂರ್ಯಸೂತಂ ಎಂಬ ಪದಗಳು ಅವನ ಹೆಸರನ್ನು ಸ್ವರೂಪವನ್ನು ತಿಳಿಸುವವು. 'ಸೂರ್ಯಸೂತೋಽರುಣೋಽನೂರುಃ' ಎಂದು ಅಮರವಿದೆ. 'ಕದ್ರುಕಮಂಡಲ್ವೋಃ' ಎಂಬುವ ಸೂತ್ರದಿಂದ ಊಙ್ ಪ್ರತ್ಯಯವು ಬರುತ್ತದೆ. ।।೨೨।।

**ಕೃತ್ತಿಕಾದೀನಿ ನಕ್ಷತ್ರಾಣೀಂದೋಃ ಪತ್ನ್ಯಸ್ತು ಭಾರತ ।**
**ದಕ್ಷಶಾಪಾತ್ಸೋಽನಪತ್ಯಸ್ತಾಸು ಯಕ್ಷ್ಮಗ್ರಹಾರ್ದಿತಃ ।।**
**ಪುನಃ ಪ್ರಸಾದ್ಯ ತಂ ಸೋಮಃ ಕಲಾ ಲೇಭೇ ಕ್ಷಯೇಧಿತಾಃ ।।೨೩।।**

**ಭಾರತ** ಪರೀಕ್ಷಿತನೇ, **ಕೃತ್ತಿಕಾದೀನಿ ನಕ್ಷತ್ರಾಣಿ** ಕೃತ್ತಿಕಾ ಮುಂತಾದ ಇಪ್ಪತ್ತೇಳು ನಕ್ಷತ್ರಗಳು, **ಇಂದೋಃ** ಚಂದ್ರನ, **ಪತ್ನ್ಯಃ** ಪತ್ನಿಯರು, **ದಕ್ಷಶಾಪಾತ್** ರೋಹಿಣಿಯಲ್ಲಿ ಮಾತ್ರ ಆಸಕ್ತನಾಗಿ ಉಳಿದವರನ್ನು ಉದಾಸೀನ ಮಾಡಿದ್ದಕ್ಕಾಗಿ ದಕ್ಷರು ನೀಡಿರುವ ಶಾಪದಿಂದ, **ಯಕ್ಷ್ಮಗ್ರಹಾರ್ದಿತಃ** ಕ್ಷಯರೋಗದಿಂದ ಪೀಡಿತನಾಗಿ, (ರಾಜರೋಗವೆಂಬ ಪಿಶಾಚ ಪೀಡಿತನಾಗಿ) **ತಾಸು** ಆ ಪತ್ನಿಯರಲ್ಲಿ, **ಅನಪತ್ಯಃ** ಮಕ್ಕಳಿಲ್ಲದವನಾದನು. **ಸೋಮಃ** ಚಂದ್ರನು, **ಪುನಃ** ಮತ್ತೆ, **ತಂ** ದಕ್ಷ ಪ್ರಜಾಪತಿಯನ್ನು, **ಪ್ರಸಾದ್ಯ** ಸಂತೋಷಪಡಿಸಿ, **ಕ್ಷಯೇಧಿತಾಃ ಕಲಾಃ ತು ಲೇಭೇ** ಕೃಷ್ಣಪಕ್ಷದಲ್ಲಿ ಕ್ಷೀಣವಾಗಿ ಶುಕ್ಲ ಪಕ್ಷದಲ್ಲಿ ವೃದ್ಧಿಯಾಗುವ ಕಲೆಗಳನ್ನೇ ಪಡೆದನು. ಮಕ್ಕಳನ್ನು ಪಡೆಯಲಿಲ್ಲ.

**ವಿಶಿಷ್ಟ ಅರ್ಥ**

ಕ್ಷಯೈಧಿತಾಃ ಎಂದು ಹೇಳಲು ಬರುವಾಗ ಕ್ಷಯೇಧಿತಾಃ ಎಂದು ಹೇಳಿದ್ದರಿಂದ ಇಂದುವಿಗೆ ವೃದ್ಧಿಯು ಸಾರ್ವಕಾಲಿಕವಲ್ಲ ಎಂದಾಗಲಿ ಹಿಂದಿನ ಅನರ್ಥಾತಿಶಯಕ್ಕಿಂತ ಇದು ಒಂದು ಗುಣವೆಂದಾಗಲಿ ಪರರೂಪವೆಂದಾಗಲಿ ಸೂಚಿಸಿರುವರು ಎಂದು ತಿಳಿಯಬೇಕು. 'ಕ್ಷಯೋ ರೋಗಾಂತರೇ ವೇಶ್ಮಕಲ್ಪಾಂತಾಪಚಯೇಷು' ಎಂದು ವಿಶ್ವವಿದೆ. 'ರೋಗರಾಜಃ ಕ್ಷಯೇ ವೇಶ್ಮ' ಎಂದು ರಭಸ. 'ಕ್ಷಯೇ ದಿತಾಃ' ಎಂದು

ಕೆಲವು ಕಡೆ ಪಾಠವಿದೆ. ಅದು ಸರಲವಲ್ಲ. ಆದರೂ **ಕ್ಷಯೇ** ಕೃಷ್ಣಪಕ್ಷದಲ್ಲಿ, **ದಿತಾಃ** ಅವಖಂಡಿತಾಃ ಎಂದು ಅರ್ಥ ಮಾಡಬಹುದು. ದೋ ಅವಖಂಡನೇ ಎಂದು ಧಾತು ಇದೆ. **ಅಕ್ಷಯೇ** ಶುಕ್ಲಪಕ್ಷದಲ್ಲಿ, **ಕಲಾಃ ಲೇಭೇ** ಕಲೆಗಳನ್ನು ಪಡೆದನು, ಎಂದು ಅನ್ವಯಾರ್ಥ ಮಾಡಬಹುದು.

'ರೋಹಿಣ್ಯಾಮಧಿಕಂ ಪ್ರೀತಿಮಾನಭೂತ್' ಎಂದಾರಂಭಿಸಿ, 'ದಕ್ಷಶ್ಚೈನಮಬ್ರವೀತ್ ಸಮಂ ವರ್ತಯಸಿ' ಎಂಬಲ್ಲಿ ವರೆಗೆ ಮೋಕ್ಷಧರ್ಮದಲ್ಲಿ ಹೇಳಿದ ಶಾಪ. ಅಲ್ಲಿ ಹೇಳಿದ ಅದರ ಮೋಕ್ಷ ವ್ಯವಸ್ಥೆಯಿಂದ ಹೇಳಿದೆ.

'ಋಷಯಃ ಸೋಮಮಬ್ರುವನ್ ಕ್ಷೀಯಸೇ ಯಕ್ಷ್ಮಣಾ' ಪಶ್ಚಿಮಸ್ಯಾದಿಶ್ಯಸ್ತಿ ಸಮುದ್ರೇ ಹಿರಣ್ಯಸರಸ್ತೀರ್ಥಂ ತತ್ರ ಗತ್ವಾ ಆತ್ಮಾನಮಭಿಷೇಚಯಸ್ವ' ಎಂದಾರಂಭಿಸಿ 'ತದಸ್ಯ ಶಶಲಕ್ಷ್ಮ ವಿಮಲಮಭವತ್' ಎಂಬಲ್ಲಿ ವರೆಗೆ ಎಂದು ಹೇಳಿದ್ದನ್ನು ಅನುಸಂಧಾನ ಮಾಡಲೇಬೇಕು. ದಕ್ಷನು ಇದನ್ನು ಅನುಮೋದಿಸಿದನು. ಕಾರಣ ಪುನಃ ಪ್ರಸಾದ್ಯ ಎಂಬುದರ ವಿರೋಧವಿಲ್ಲ. ।।೨೩।।

> **ಶೃಣು ನಾಮಾನಿ ಲೋಕಾನಾಂ ಮಾತೄಣಾಂ ಶಂಕರಾಣಿ ಚ ।**
> **ಅಥ ಕಶ್ಯಪಪತ್ನೀನಾಂ ಯತ್ಪ್ರಸೂತಮಿದಂ ಜಗತ್ ।।೨೪।।**

**ಅಥ** ಇನ್ನು ಮುಂದೆ, **ಇದಂ** ಈ ಪ್ರತ್ಯಕ್ಷಸಿದ್ಧವಾದ, **ಜಗತ್** ಪ್ರಾಣಿ ಸಮೂಹಾತ್ಮಕ ಪ್ರಪಂಚವು, **ಯತ್ಪ್ರಸೂತಂ** ಯಾವ ಕಶ್ಯಪರ ಹೆಂಡತಿಯರಿಂದ ಪ್ರಸವಿಲ್ಪಟ್ಟಿತ್ತೋ, **ತಾಸಾಂ ಲೋಕಾನಾಂ** ಆ ಜನರ, **ಮಾತೄಣಾಂ** ತಾಯಿಯರಾದ, **ಕಶ್ಯಪಪತ್ನೀನಾಂ** ಕಶ್ಯಪಪ್ರಜೇಶ್ವರರ, ಹಿಂದೆ ಹೇಳಿದ ನಾಲ್ಕು ಜನರನ್ನು ಬಿಟ್ಟು ಉಳಿದ ಹೆಂಡತಿಯರ, **ಶಂಕರಾಣಿ** ಸುಖಕರಗಳಾದ, **ನಾಮಾನಿ ಚ** ಹೆಸರುಗಳನ್ನು, **ಶೃಣು** ಕೇಳು. ।।೨೪।।

> **ಅದಿತಿರ್ದಿತಿರ್ದನುಃ ಕಾಷ್ಠಾ ಅರಿಷ್ಟಾ ಸುರಸಾ ಇಲಾ ।**
> **ಮುನಿಃ ಕ್ರೋಧವಶಾ ತಾಮ್ರಾ ಸುರಭಿಃ ಸರಮಾ ತಿಮಿಃ ।।೨೫।।**

ಅದಿತಿ, ದಿತಿ, ದನು, ಕಾಷ್ಠಾ ಅರಿಷ್ಟಾ, ಸುರಸಾ, ಇಲಾ, ಮುನಿ, ಕ್ರೋಧವಶಾ, ತಾಮ್ರಾ, ಸುರಭಿ, ಸರಮಾ, ತಿಮಿ, ಹೀಗೆ ೧೩ ಜನ ಕಶ್ಯಪರ ಪತ್ನಿಯರು.

ಸುರಸಾ ಇಲಾ ಎಂಬಲ್ಲಿ ವಿವಕ್ಷಾ ಇಲ್ಲದ್ದರಿಂದ ಸಂಧಿಯಾಗಿಲ್ಲ. ಪರಸ್ಪರ ವೈಲಕ್ಷಣ್ಯ ತಿಳಿಸಲು ಸಂಧಿಕಾರ್ಯವಾಗಿಲ್ಲ. ।।೨೫।।

ಸೂಚೀಕಟಾಹನ್ಯಾಯವನ್ನನುಸರಿಸಿ ಸ್ವಲ್ಪವಾದುದರಿಂದ ತಿಳಿಯಲು ಸುಲಭವಾಗುವದೆಂದು ಕೊನೆಯಲ್ಲಿ ಹೇಳಿದವರಿಂದ ಹಿಡಿದು ಹಿಂದೆ ಹಿಂದಿನವರ ಸಂತತಿಯನ್ನು ಹೇಳುತ್ತಾರೆ. ಕೊನೆಗೆ ಹೇಳಿದ ತಿಮಿಯನ್ನು ಮೊದಲು ಹೇಳಿದುದು ಕೆಲವರನ್ನು ಬಿಟ್ಟಿದ್ದು ಸ್ವತಂತ್ರರಾದ್ದರಿಂದ ಎನ್ನುತ್ತಾರೆ ಶ್ರೀಗಳು.

**ತಿಮೇರ್ಯಾದೋಗಣಾ ಆಸನ್ ಶ್ವಾಪದಾಃ ಸರಮಾಸುತಾಃ ।**
**ಸುರಭೇರ್ಮಹಿಷಾ ಗಾವೋ ಯೇ ಚಾಽನ್ಯೇ ದ್ವಿಷಫಾ ನೃಪ ।**
**ತಾಮ್ರಾಯಾ ಶ್ಯೇನಗೃಧ್ರಾದ್ಯಾ ಮುನೇರಪ್ಸರಸಾಂ ಗಣಾಃ ॥೨೬॥**

**ನೃಪ** ರಾಜನೇ, **ತಿಮೇಃ** ತಿಮಿ ಎಂಬುವಳಿಂದ, **ಯಾದೋಗಣಾಃ** ಎಲ್ಲ ಜಲಚರ ಪ್ರಾಣಿಗಳು, **ಆಸನ್** ಹುಟ್ಟಿದವು. **ಶ್ವಾಪದಾಃ** ಮಾಂಸಾಹಾರಿಗಳಾದ ಕ್ರೂರವಾದ ಕಾಡು ಪ್ರಾಣಿಗಳು, ನಾಯಿಯಂತೆ ಕಾಲಿರುವ ಅರ್ಥಾತ್ ಹುಲಿ, ಬೆಕ್ಕು, ಚಿರತೆ, ನಾಯಿ, ಸಿಂಹ ಮುಂತಾದವುಗಳು, **ಸರಮಾಸುತಾಃ** ಸರಮಾ ಎಂಬುವಳ ಮಕ್ಕಳು, **ಮಹಿಷಾಃ** ಎಮ್ಮೆಗಳು, **ಗಾವಃ** ಹಸುಗಳು, **ಅನ್ಯೇ** ಇನ್ನುಳಿದ **ಯೇ ಚ ದ್ವಿಶಫಾಃ** ಎರಡು ಗೊರಸಿನ ಪ್ರಾಣಿಗಳಿವೆಯೋ, **ತೇ ಸರ್ವೇ** ಅವೆಲ್ಲವೂ, **ಸುರಭೇಃ** ಸುರಭಿ ಎಂಬುವಳಿಂದ, **ಆಸನ್** ಜನಿಸಿದವು. **ತಾಮ್ರಾಯಾಃ** ತಾಮ್ರಾ ಎಂಬುವಳಿಗೆ, **ಶ್ಯೇನಗೃಧ್ರಾದ್ಯಾಃ** ಗಿಡಗ ಹದ್ದು ಮುಂತಾದವು, **ಮುನೇಃ** ಮುನಿ ಎಂಬುವಳಿಗೆ, **ಅಪ್ಸರಸಾಂ ಗಣಾಃ** ಅಪ್ಸರಾಸ್ತ್ರೀಯರ ಸಮೂಹಗಳು ಜನಿಸಿದವು. ॥೨೬॥

**ದಂದಶೂಕಾದಯಃ ಸರ್ಪಾ ರಾಜನ್ ಕ್ರೋಧವಶಾತ್ಮಜಾಃ ।**
**ಇಲಾಯಾ ಭೂರುಹಾಃ ಸರ್ವೇ ಯಾತುಧಾನಾಶ್ಚ ಸೌರಸಾಃ ॥೨೭॥**

**ರಾಜನ್** ರಾಜನೇ, **ದಂದಶೂಕಾದಯಃ ಸರ್ಪಾಃ** ಕಚ್ಚುವ ಸ್ವಭಾವವಿರುವ ಸರ್ಪ ಮುಂತಾದವುಗಳು, **ಕ್ರೋಧವಶಾತ್ಮಜಾಃ** ಕ್ರೋಧವಶಾಳ ಮಕ್ಕಳು, **ಇಲಾಯಾಃ** ಇಲಾಳಿಗೆ, **ಭೂರುಹಾಃ ಸರ್ವೇ** ಎಲ್ಲ ಗಿಡಗಳು ಜನಿಸಿದರು. **ಯಾತುಧಾನಾಃ** ಯಾತುಧಾನರು, **ಸೌರಸಾಃ** ಸುರಸಾಳ ಮಕ್ಕಳು. ॥೨೭॥

**ಅರಿಷ್ಟಾಯಾಶ್ಚ ಗಂಧರ್ವಾಃ ಕಾಷ್ಠಾಯಾ ದ್ವಿಶಫೇತರಾಃ ।**
**ಸುತಾ ದನೋರೇಕಷಷ್ಟಿಸ್ತೇಷಾಂ ಪ್ರಾಧಾನಿಕಾನ್ ಶೃಣು ॥೨೮॥**

**ಅರಿಷ್ಟಾಯಾಃ** ಅರಿಷ್ಟಾಳಿಗೆ, **ಗಂಧರ್ವಾಃ** ಗಂಧರ್ವರು, **ಕಾಷ್ಠಾಯಾಃ** ಕಾಷ್ಠಾಳಿಗೆ, **ದ್ವಿಶಫೇತರಾಃ** ಒಂದು ಗೊರಸಿನ ಕುದುರೆ ಮುಂತಾದವುಗಳು, **ಸುತಾಃ** ಮಕ್ಕಳು,

**ದನೋಃ** ದನುವಿಗೆ, **ಏಕಷಷ್ಟಿಃ** ಅರವತ್ತೊಂದು ಜನ ಹುಟ್ಟಿದರು, **ತೇಷಾಂ** ಅವರಲ್ಲಿ **ಪ್ರಾಧಾನಿಕಾನ್** ಮುಖ್ಯರಾದವರನ್ನು, **ಶೃಣು** ಕೇಳು.

ಇಲ್ಲಿ ದ್ವಿಶಫಾಃ ಇತರೇ ಯೇಭ್ಯಸ್ತೇ ಎಂದು ಬಹುವ್ರೀಹಿ ಆದ್ದರಿಂದ ಸರ್ವನಾಮತೆ ಇಲ್ಲ. ।।೨೮।।

**ದ್ವಿಮೂರ್ಧಾ ಶಂಬರೋಽರಿಷ್ಟೋ ಹಯಗ್ರೀವೋ ವಿಭಾವಸುಃ ।**
**ಅಯೋಮುಖಃ ಶಂಕುಶಿರಾಃ ಸ್ವರ್ಭಾನುಃ ಕಪಿಲೋಽರುಣಃ ।।೨೯।।**

**ಪುಲೋಮಾ ವೃಷಪರ್ವಾ ಚ ಏಕಚಕ್ರೋಽನುತಾಪನಃ ।**
**ಧೂಮ್ರಕೇಶೋ ವಿರೂಪಾಕ್ಷೋ ವಿಪ್ರಚಿತ್ತಿಸ್ತು ದುರ್ಜಯಃ ।।೩೦।।**

ದ್ವಿಮೂರ್ಧಾ, ಶಂಬರ, ಅರಿಷ್ಟ, ಹಯಗ್ರೀವ, ವಿಭಾವಸು, ಅಯೋಮುಖ, ಶಂಕುಶಿರ, ಸ್ವರ್ಭಾನು, ಕಪಿಲ, ಅರುಣ, ಪುಲೋಮ, ವೃಷಪರ್ವ, ಏಕಚಕ್ರ, ಅನುತಾಪನ, ಧೂಮ್ರಕೇಶ, ವಿರೂಪಾಕ್ಷ, ವಿಪ್ರಚಿತ್ತಿ, ದುರ್ಜಯ ಹೀಗೆ ಹದಿನೆಂಟು ಜನ ಪ್ರಧಾನರಾಗಿದ್ದಾರೆ. ।।೩೦।।

**ಸ್ವರ್ಭಾನೋಃ ಸುಪ್ರಭಾಂ ಕನ್ಯಾಮುವಾಹ ನಮುಚಿಃ ಕಿಲ ।**
**ವೃಷಪರ್ವಣಸ್ತು ಶರ್ಮಿಷ್ಠಾಂ ಯಯಾತಿರ್ನಾಹುಷೋ ಬಲೀ ।।೩೧।।**

**ಸ್ವರ್ಭಾನೋಃ** ಸ್ವರ್ಭಾನುವಿನ, **ಸುಪ್ರಭಾಂ ಕನ್ಯಾಂ** ಸುಪ್ರಭಾ ಎಂಬ ಮಗಳನ್ನು, **ನಮುಚಿಃ ಉವಾಹ ಕಿಲ** ನಮುಚಿಯು ಮದುವೆಯಾದನಷ್ಟೇ, **ವೃಷಪರ್ವಣಃ** ವೃಷಪರ್ವನ ಮಗಳಾದ, **ಶರ್ಮಿಷ್ಠಾಂ** ಶರ್ಮಿಷ್ಠಾಳನ್ನು, **ನಾಹುಷಃ** ನಹುಷ ಚಕ್ರವರ್ತಿಯ ಮಗನಾದ, **ಬಲೀ** ಬಲಿಷ್ಠನಾದ, **ಯಯಾತಿಃ** ಯಯಾತಿಯು, **ಉವಾಹ ಕಿಲ** ಮದುವೆಯಾದನಷ್ಟೇ. ।।೩೧।।

**ವೈಶ್ವಾನರಸುತಾಯಾಶ್ಚ ಚತಸ್ರಶ್ಚಾರುದರ್ಶನಾಃ ।**
**ಉಪದಾನವೀ ಹಯಶಿರಾಃ ಪುಲೋಮಾ ಕಾಲಿಕಾ ತಥಾ ।।೩೨।।**

**ವೈಶ್ವಾನರಸುತಾಃ** ದನುವಿನ ಮಗನಾದ ವೈಶ್ವಾನರ (ವಿಭಾವಸು) ನ ಮಕ್ಕಳು, **ಚಾರುದರ್ಶನಾಃ** ಸುಂದರಿಯರಾದ, ಉಪದಾನವೀ ಹಯಶಿರಾ ಪುಲೋಮಾ ತಥಾ ಹಾಗೂ ಕಾಲಿಕಾ ಎಂಬ, **ಚತಸ್ರಃ** ನಾಲ್ಕು ಜನ, **ಯಾಃ** ಏನಿರುವರೋ, ।।೩೨।।

**ಉಪದಾನವೀಂ ಹಿರಣ್ಯಾಕ್ಷಃ ಕ್ರತುರ್ಹಯಶಿರಾಂ ನೃಪ ।**
**ಪುಲೋಮಾಂ ಕಾಲಿಕಾಂ ಚ ದ್ವೇ ವೈಶ್ವಾನರಸುತೇ ನೃಪ ॥೩೩॥**

**ಉಪಯೇಮೇ ಚ ಭಗವಾನ್ ಕಶ್ಯಪೋ ಬ್ರಹ್ಮಚೋದಿತಃ ।**
**ಪೌಲೋಮಾಃ ಕಾಲಿಕೇಯಾಶ್ಚ ದಾನವಾ ಯುದ್ಧಶಾಲಿನಃ ॥೩೪॥**

(ತಾಸಾಂ ಅವರಲ್ಲಿ) **ಉಪದಾನವೀಂ** ಉಪದಾನವಿಯನ್ನು, **ಹಿರಣ್ಯಾಕ್ಷಃ** ಹಿರಣ್ಯಾಕ್ಷನು, **ಕ್ರತುಃ** ಕ್ರತು ಎಂಬುವನು, **ಹಯಶಿರಾಂ** ಹಯಶಿರಾಳನ್ನು, **ಉವಾಹ** ಮದುವೆಯಾದನು. **ನೃಪ** ರಾಜನೇ, **ಪುಲೋಮಾಂ ಕಾಲಿಕಾಂ ಚ ದ್ವೇ ವೈಶ್ವಾನರಸುತೇ** ವೈಶ್ವಾನರನ ಮಕ್ಕಳಾದ ಪುಲೋಮಾ ಕಾಲಿಕಾ ಎಂಬೀ ಇಬ್ಬರನ್ನು, **ಬ್ರಹ್ಮಚೋದಿತಃ** ಬ್ರಹ್ಮದೇವರಿಂದ ಪ್ರೇರಿತರಾದ, **ಕಶ್ಯಪಃ** ಕಶ್ಯಪ ಋಷಿಗಳು, **ಉಪಯೇಮೇ** ಮದುವೆಯಾದರು. **ಪೌಲೋಮಾಃ** ಪುಲೋಮಾಪುತ್ರರು **ಕಾಲಿಕೇಯಾಶ್ಚ** ಕಾಲಿಕಾನ ಮಕ್ಕಳು, **ದಾನವಾಃ** ದಾನವರು, (ದನುವಿನ ಮರಿ ಮಕ್ಕಳು) **ಯುದ್ಧಶಾಲಿನಃ** ಯುದ್ಧದಲ್ಲಿ ಕುಶಲರು, **ಆಸನ್** ಆದರು. ॥೩೩-೩೪॥

**ತಯೋಃ ಷಷ್ಟಿಸಹಸ್ರಾಣಿ ಯಜ್ಞಘ್ನಾಂಸ್ತೇ ಪಿತುಃ ಪಿತಾ ।**
**ಜಘಾನ ಸ್ವರ್ಗತೋ ರಾಜನ್ನೇಕ ಇಂದ್ರಪ್ರಿಯಂಕರಃ ॥೩೫॥**

**ತಯೋಃ** ಪುಲೋಮಾ-ಕಾಲಿಕೇಯರ ಮಕ್ಕಳಾದ, **ಯಜ್ಞಘ್ನಾನ್** ಯಜ್ಞವನ್ನು ನಾಶ ಮಾಡುವ, **ಷಷ್ಟಿಸಹಸ್ರಾಣಿ** ಅರವತ್ತು ಸಾವಿರ ಸಂಖ್ಯಾಕರಾದ, **ತಾನ್** ಆ ದಾನವರನ್ನು, **ಸ್ವರ್ಗತಃ** ಸ್ವರ್ಗಕ್ಕೆ ಹೋದ, **ತೇ** ನಿನ್ನ, **ಪಿತುಃ** ತಂದೆಯಾದ ಅಭಿಮನ್ಯುವಿನ, **ಪಿತಾ** ತಂದೆಯಾದ ಅರ್ಜುನನು, **ಇಂದ್ರಪ್ರಿಯಂಕರಃ** ಇಂದ್ರನಿಗೆ ಪ್ರಿಯವನ್ನುಂಟು ಮಾಡುವನಾಗಿ, **ಏಕಃ** ಒಬ್ಬನೇ, **ಜಘಾನ** ಕೊಂದನು.

ದಾನವ ಸ್ತ್ರೀಯರನ್ನು ಕಶ್ಯಪರು ಮದುವೆಯಾಗಲು ಕಾರಣ, **ಬ್ರಹ್ಮಚೋದಿತಃ** ಎಂಬುದು (ಕಃ ಪ್ರಜಾಪತಿಃ ತಂ ಪಶ್ಯತೀತಿ ಕಶ್ಯಪಃ ವರ್ಣವಿಪರ್ಯಯಾತ್) **ಪಿತಾಮಹಃ** ಎಂದು ಸಣ್ಣ ಶಬ್ದ ಹೇಳಿದರೂ ಅರ್ಥವಾಗುವಾಗ **ಪಿತುಃ ಪಿತಾ** ಎಂದು ಹೇಳಿದ್ದರಿಂದ ಪರೀಕ್ಷಿತನು ತನ್ನ ತಂದೆಯು ವಿರೋಚನಾದಿಗಳಂತೆ ಯಾವನೊ ಒಬ್ಬ ಎಂದು ಕಳವಳಗೊಂಡು ನನ್ನ ಮುಖ ನೋಡದಿರಲೆಂದು ಅವನನ್ನು ಸಮಾಧಾನ ಪಡಿಸಿರುವರು ಶುಕಾಚಾರ್ಯರು ಎಂದು ತಿಳಿಯಬೇಕು. ॥೩೫॥

ಕಶ್ಯಪಪುತ್ರನಾದ ವಿಪ್ರಚಿತ್ತಿ ಎಂಬ ದಾನವನ ಸಂತತಿ ಹೇಳುವರು-

**ವಿಪ್ರಚಿತ್ತಿಃ ಸಿಂಹಿಕಾಯಾಂ ಶತಂ ಚೈಕಮಜೀಜನತ್ ।**
**ರಾಹುಜ್ಯೇಷ್ಠಂ ಕೇತುಶತಂ ಗ್ರಹತ್ವಂ ಯ ಉಪಾಗತಃ ॥೩೬॥**

**ವಿಪ್ರಚಿತ್ತಿಃ** ವಿಪ್ರಚಿತ್ತಿಯು, **ಸಿಂಹಿಕಾಯಾಂ** ಸಿಂಹಿಕಾ ಎಂಬುವಳಲ್ಲಿ, **ಶತಂ ಚೈಕಂ** ನೂರಾ ಒಂದು ಜನರನ್ನು, **ಅಜೀಜನತ್** ಹುಟ್ಟಿಸಿದನು. **ರಾಹುಜ್ಯೇಷ್ಠಂ** ರಾಹುವೇ ಹಿರಿಯನಾಗಿ ಉಳ್ಳ ಅಂದರೆ ಅವರಲ್ಲಿ ರಾಹು ಹಿರಿಯನೆಂದರ್ಥ. **ಕೇತುಶತಂ** ಕೇತುಗಳ ನೂರನ್ನು ಶರೀರವಿವಕ್ಷೆಯಿಂದ ಹೀಗೆ ಹೇಳಿದ್ದು, **ಯಃ** ಯಾವ ರಾಹುವು, **ಗ್ರಹತ್ವಂ ಉಪಾಗತಃ** ಗ್ರಹನಾದನು. ಇದನ್ನು ಎಂಟನೇ ಸ್ಕಂಧದಲ್ಲಿ ಸ್ಪಷ್ಟಪಡಿಸುವರು.

(ಸ್ವರ್ಭಾನು ಎಂಬ ದಾನವ ದೇವತೆಗಳ ಮಧ್ಯದಲ್ಲಿ ಕುಳಿತು ಅಮೃತಪಾನ ಮಾಡಲು ಪ್ರಯತ್ನಿಸಿದಾಗ ಅಮೃತ ಗಂಟಲಲ್ಲಿ ಇಳಿಯುವದೊರೊಳಗೆ ಶ್ರೀಹರಿಯು ಕುತ್ತಿಗೆ ಕತ್ತರಿಸಿದನು ಕುತ್ತಿಗೆ ರಾಹು, ಕಬಂಧವು ಕೇತು ಶುಭೋದ ಸಮುದ್ರದಲ್ಲಿ ಅಮರವಾಯಿತು ಎಂದಿದೆ.) ॥೩೬॥

**ಅಥಾತಃ ಶ್ರೂಯತಾಂ ವಂಶೋ ಯೋऽದಿತೇರನುಪೂರ್ವಶಃ ।**
**ಯತ್ರ ನಾರಾಯಣೋ ದೇವಃ ಸ್ವಾಂಶೇನಾವತರದ್ವಿಭುಃ ॥೩೭॥**

**ಅಥ** ಮುಂದೆ, **ಅತಃ** ಶ್ರೇಯಸ್ಸಿಗೆ ಸಾಧನವಾದ್ದರಿಂದ, **ಅದಿತೇಃ** ಅದಿತಿದೇವಿಯ, **ಯಃ** ಯಾವ, **ವಂಶಃ** (ಆಸ್ತಿ) ವಂಶ ಇದೆಯೋ, **ಸಃ** ಅದು, **ಅನುಪೂರ್ವಶಃ** ಕ್ರಮವಾಗಿ, **ಶ್ರೂಯತಾಂ** ಕೇಳಲ್ಪಡಲಿ, **ಯತ್ರ** ಯಾವ ಅದಿತಿಯ ವಂಶದಲ್ಲಿ, **ದೇವಃ** ಕ್ರೀಡಾದಿಗುಣವಿಶಿಷ್ಟನಾದ, **ವಿಭುಃ** ವ್ಯಾಪ್ತನಾದ, **ನಾರಾಯಣಃ** ನಾರಾಯಣನು, **ಸ್ವಾಂಶೇನ** ತನ್ನ ಸ್ವರೂಪಾಂಶದಿಂದ, **ಅವತರತ್** ವಾಮನನಾಗಿ ಅವತರಿಸಿದನು, ಆ ವಂಶವಿಸ್ತಾರವನ್ನು ಕೇಳಿರಿ ಎಂದು ಅನ್ವಯ.

**ವಿವಸ್ವಾನರ್ಯಮಾ ಪೂಷಾ ತ್ವಷ್ಟಾऽಥ ಸವಿತಾ ಭಗಃ ।**
**ಧಾತಾ ವಿಧಾತಾ ವರುಣೋ ಮಿತ್ರಶ್ಶಕ್ರ ಉರುಕ್ರಮಃ ॥೩೮॥**

ವಿವಸ್ವಾನ್, ಅರ್ಯಮಾ, ಪೂಷಾ, ತ್ವಷ್ಟಾ, ಸವಿತಾ, ಭಗ, ಧಾತಾ, ವಿಧಾತಾ, ವರುಣ, ಮಿತ್ರ, ಶಕ್ರ, ಉರುಕ್ರಮ, ಇವರು ಹನ್ನೆರಡು ಜನ ಅದಿತಿಯ ಮಕ್ಕಳು. (ದ್ವಾದಶ ಆದಿತ್ಯರು.) ॥೩೮॥

**ವಿವಸ್ವತಃ ಶ್ರಾದ್ಧದೇವಂ ಸಂಜ್ಞಾऽಸೂಯತ ವೈ ಮನುಮ್ ।**
**ಮಿಥುನಂ ಚ ಮಹಾಭಾಗಾ ಯಮಂ ದೇವಂ ಯಮೀಂ ತಥಾ ॥೩೯॥**

**ವಿವಸ್ವತಃ** ವಿವಸ್ವಾನ್ ಎಂಬ ಸೂರ್ಯನಿಂದ, **ಮಹಾಭಾಗಾ** ಅದೃಷ್ಟ ಶಾಲಿಯಾದ, **ಸಂಜ್ಞಾ** ಸಂಜ್ಞಾ ಎಂಬ ಹೆಂಡತಿಯು, **ಶ್ರಾದ್ಧದೇವಂ ಮನುಂ** ವೈವಸ್ವತ ಮನುವನ್ನು, **ಚ** ಮತ್ತು **ಯಮಂ ದೇವಂ** ಯಮಧರ್ಮನನ್ನು, **ಅಥ ಯಮೀಂ** ಯಮೀ ಎಂಬುವ, **ಮಿಥುನಂ** ಹೆಣ್ಣು-ಗಂಡು ಅವಳಿಯನ್ನು **ಅಸೂಯತ** ಪ್ರಸವಿಸಿದಳು. ॥೩೯॥

**ಸೈವ ಭೂತ್ವಾऽಥ ವಡವಾ ನಾಸತ್ಯೌ ಸುಷುವೇ ಭುವಿ ।**
**ಛಾಯಾ ಶನೈಶ್ಚರಂ ಲೇಭೇ ಸಾವರ್ಣಿಂ ಚ ಮನುಂ ತತಃ ॥**
**ಕನ್ಯಾಂ ಚ ತಪತೀಂ ಯಾ ವೈ ವವ್ರೇ ಸಂವರಣಂ ಪತಿಮ್ ॥೪೦॥**

**ಸಾ ಏವ** ಆ ಸಂಜ್ಞಾಳೇ, **ವಡವಾ ಭೂತ್ವಾ** ಹೆಣ್ಣು ಕುದುರೆಯಾಗಿ, **ಭುವಿ** ಭೂಮಿಯಲ್ಲಿದ್ದವಳಾಗಿ, **ನಾಸತ್ಯೌ ಸುಷುವೇ** ಅಶ್ವಿನೀದೇವತೆಗಳನ್ನು ಹೆತ್ತಳು, ಅಥವಾ **ಭುವಿ** ಭೂಮಿಯಲ್ಲಿ ರೋಗವಿಲ್ಲದೇ ಇರುವದಕ್ಕಾಗಿ ವೈದ್ಯರಾದವರನ್ನು ಎಂದರ್ಥ. ಅಥವಾ **ಭುವಿ** ಮತ್ತೆ ಮಕ್ಕಳನ್ನು ಪಡೆಯುವ ಸಂದರ್ಭ ಒದಗಿದಾಗ ಎಂದೂ ಅರ್ಥ, **ವೈ** ಪ್ರಸಿದ್ಧ.

ಛಾಯಾ ಎಂಬ ಮತ್ತೊಬ್ಬ ಹೆಂಡತಿಯು **ಶನೈಶ್ವರಂ** ಶನೈಶ್ಚರನನ್ನು, **ಸಾವರ್ಣಿಂ ಮನುಂ** ಸಾವರ್ಣಿ ಎಂಬ ಮನುವನ್ನು, **ಚ** ಮತ್ತು, **ತಪತೀಂ ಕನ್ಯಾಂ** ತಪತೀ ಎಂಬ ಕನ್ಯೆಯನ್ನೂ, **ತತಃ** ವಿವಸ್ವಾನ್ ಎಂಬ ಸೂರ್ಯನಿಂದ, **ಲೇಭೇ** ಮಕ್ಕಳಾಗಿ ಪಡೆದಳು, **ಯಾ** ಯಾವ ತಪತಿಯು, **ಸಂವರಣಂ ಪತಿಂ ವವ್ರೇ** ಸಂವರಣ ಎಂಬ ರಾಜನನ್ನು ಗಂಡನನ್ನಾಗಿ ಸ್ವೀಕರಿಸಿದಳು. ॥೪೦॥

ಸಂಜ್ಞಾಳು ಸೂರ್ಯನ ತಾಪ ತಡೆಯಲಾಗದೇ ತನ್ನಂತೆ ಪ್ರತಿಕೃತಿಯನ್ನು ಸೃಷ್ಟಿಸಿ ಪತಿಯನ್ನು ಬಿಟ್ಟು ತಂದೆಯ ಮನೆಗೆ ಹೋದಳು. ಆ ಪ್ರತಿಕೃತಿಯೇ ಛಾಯಾ. ಸಂಜ್ಞೆಯಂತೆಯೇ ಛಾಯಾ ಇರುವುದರಿಂದ ಬಹುಕಾಲ ಸೂರ್ಯನಿಗೆ ತಿಳಿಯಲಿಲ್ಲ. ತನಗೆ ಮಕ್ಕಳು ಜನಿಸಿದಾಗ ವೈಷಮ್ಯ ಮಾಡುವದನ್ನು ತಿಳಿದು ಯಮನು ತಂದೆಗೆ ಹೇಳಿದ. ಇವಳು ಸಂಜ್ಞೆಯಲ್ಲ ಎಂಬುದನ್ನು ಸೂರ್ಯ ತಿಳಿದುಕೊಂಡ. ತನ್ನ ಮಾವನ ಮನೆಗೆ ಹೊರಟ. ಈ ಮೊದಲೇ ತನ್ನಲ್ಲಿ ಬಂದಿರುವ ಮಗಳಾದ ಸಂಜ್ಞೆಗೆ ಸೂಕ್ತವಾದ

ಬುದ್ಧಿವಾದವನ್ನು ಹೇಳಿದ ತಂದೆ. ತಂದೆಯ ಮಾತನ್ನು ಕೇಳದೇ ಪತಿಯ ಮನೆಗೂ ಹೋಗದೇ, ತಂದೆಯ ಮನೆಯಲ್ಲಿ ಇರಲಾಗದೇ ತನ್ನನ್ನು ತಾನು ಸಂರಕ್ಷಿಸಿಕೊಳ್ಳುವುದಕ್ಕಾಗಿ ಕುದುರೆಯ ರೂಪದಿಂದ ಸಂಚರಿಸುತ್ತಿದ್ದಳು. ಅದನ್ನರಿತು ಸೂರ್ಯನು ಗಂಡು ಕುದುರೆಯಾಗಿ ಬೆನ್ನಟ್ಟಿದಾಗ ತಿರುಗಿ ನಿಂತ ಹೆಣ್ಣು ಕುದುರೆಯ ಮೂಗಿನಲ್ಲಿ ರೇತಃಸೇಚನ ಮಾಡಿದಾಗ ಜನಿಸಿದವರು ಅಶ್ವಿನೀ ದೇವತೆಗಳು ಎಂದು ಮಹಾಭಾರತದಲ್ಲಿದೆ.

**ಅರ್ಯಮ್ಣೋ ಮಾತೃಕಾ ಪತ್ನೀ ತಯೋಶ್ಚರ್ಷಣಯಃ ಸುತಾಃ ।**
**ಯತ್ರ ವೈ ಮಾನುಷೀ ಜಾತಿರ್ಬ್ರಹ್ಮಣಾ ಚೋಪಕಲ್ಪಿತಾ ॥೪೧॥**

**ಅರ್ಯಮ್ಣಃ** ಅರ್ಯಮಾ ಎಂಬ ಸೂರ್ಯನಿಗೆ, **ಮಾತೃಕಾ** ಮಾತೃಕಾ ಎಂಬುವ, **ಪತ್ನೀ** ಹೆಂಡತಿಯು, **ತಯೋಃ** ಅವರಿಬ್ಬರಿಗೆ, **ಚರ್ಷಣಯಃ** ಪ್ರಜೆಗಳು, **ಸುತಾಃ** ಮಕ್ಕಳು, **ಯತ್ರ** ಪ್ರಜಾಸಾಮಾನ್ಯದಲ್ಲಿ, **ಮಾನುಷೀ ಜಾತಿಃ** ಜ್ಞಾನವುಳ್ಳ ಪುರುಷ ಜಾತಿಯು, **ಬ್ರಹ್ಮಣಾ** ಬ್ರಹ್ಮದೇವರಿಂದ, **ಉಪಕಲ್ಪಿತಾ** ಸೃಷ್ಟಿಸಲ್ಪಟ್ಟಿತು.

'ಓಮಾಸಶ್ಚರ್ಷಣೀಧೃತಃ' ಎಂಬ ಋಗ್ಭಾಷ್ಯಟೀಕಾ ಟಿಪ್ಪಣಿಯಲ್ಲಿ 'ಪ್ರಜಾಶ್ಚರ್ಷಣಯಃ ಪ್ರೋಕ್ತಾ ನೈಘಂಟುಕೈಃ' 'ಮನುಷ್ಯಾ ನರೋ ಧವೋ ಜಂತವೋ ವಿಶಃ ಕ್ಷಿತಯಃ ಕೃಷ್ಟಯಃ ಚರ್ಷಣಯಃ ಇತ್ಯಾದಿ ಪಂಚವಿಂಶತಿ ಸಂಖ್ಯಾಕೇಷು ಮನುಷ್ಯನಾಮಸು ಚರ್ಷಣಿಶಬ್ದಃ ಪಠಿತಃ' ಎಂದಿದ್ದಾರೆ. 'ಪುರುಷತ್ವೇ ವಾ ವಿಸ್ತರಾಮಾತ್ರೇತೀತಿ' ಎಂದು ಕೆಲವರು ನಿಘಂಟು ಹುಡುಕುವ ಸಂಕಟವನ್ನು ತ್ರುಟಿತ ಗೊಳಿಸಿರುವರು. ಆದ್ದರಿಂದ ತೋಷವೆನ್ನುತ್ತಾರೆ ಶ್ರೀಗಳು. ॥೪೧॥

**ಪೂಷಾऽನಪತ್ಯಃ ಪಿಷ್ಟಾದೋ ಭಗ್ನದಂತೋऽಭವತ್ಪುರಾ ।**
**ಯೋऽಸೌ ದಕ್ಷಾಯ ಕುಪಿತಂ ಜಹಾಸ ವಿವೃತದ್ವಿಜಃ ॥೪೨॥**

**ಪೂಷಾ** ಎಂಬ ಸೂರ್ಯನು, **ಅನಪತ್ಯಃ** ಮಕ್ಕಳಿಲ್ಲದವನು, **ಪಿಷ್ಟಾದಃ** ಹಿಟ್ಟನ್ನು ಮಾತ್ರ ತಿನ್ನುವವನು, **ಪುರಾ** ಹಿಂದೆ, **ಭಗ್ನದಂತಃ** ಹಲ್ಲು ಮುರಿಸಿಕೊಂಡವನು, **ಯಃ ಅಸೌ** ಯಾವ ಇವನು, **ದಕ್ಷಾಯ ಕುಪಿತಂ** ದಕ್ಷನ ಮೇಲೆ ಸಿಟ್ಟಾದ ರುದ್ರನನ್ನು ಕಂಡು, **ವಿವೃತದ್ವಿಜಃ** ಹಲ್ಲು ಕಾಣುವಂತೆ ಜಹಾಸ ನಕ್ಕನು.

ಈ ಕಥೆ ಚತುರ್ಥಸ್ಕಂಧದಲ್ಲಿ ಬಂದಿದೆ ಅಲ್ಲಿ ತಿಳಿಯುವದು. ॥೪೨॥

**ತ್ವಷ್ಟುರ್ದೈತ್ಯಾನುಜಾ ಭಾರ್ಯಾ ರಚನಾ ನಾಮ ಕನ್ಯಕಾ ।**
**ಸನ್ನಿವೇಶಸ್ತಯೋ ಜಜ್ಞೇ ವಿಶ್ವರೂಪಶ್ಚ ವೀರ್ಯವಾನ್ ॥೪೩॥**

**ತ್ವಷ್ಟುಃ** ತ್ವಷ್ಟಾ ಎಂಬ ಸೂರ್ಯನಿಗೆ, **ದೈತ್ಯಾನುಜಾ** ದಿತಿಪುತ್ರರ ತಂಗಿಯಾದ **ರಚನಾ ನಾಮ ಕನ್ಯಕಾ** ರಚನಾ ಎಂಬ ಹೆಸರಿನ ಕನ್ಯೆಯು, **ಭಾರ್ಯಾ** ಹೆಂಡತಿಯು, **ತಯೋಃ** ತ್ವಷ್ಟಾ-ರಚನೆಯರಿಗೆ, **ತಯಾ** ಎಂಬ ಪಾಠದಲ್ಲಿ ರಚನೆಯಿಂದ ಎಂದರ್ಥ, **ಸನ್ನಿವೇಶಃ** ಸನ್ನಿವೇಶ ಎಂಬುವವನು, **ವೀರ್ಯವಾನ್** ಪರಾಕ್ರಮಿಯಾದ, **ವಿಶ್ವರೂಪಶ್ಚ** ವಿಶ್ವರೂಪನೆಂಬುವವನು, **ಜಜ್ಞೇ** ಹುಟ್ಟಿದನು, ಹೀಗೆ ಪ್ರತ್ಯೇಕ ಸಂಬಂಧ. ॥೪೩॥

**ತಂ ವವ್ರಿರೇ ಸುರಗಣಾಃ ಸ್ವಸ್ರೀಯಂ ದ್ವಿಷತಾಮಪಿ ।**
**ವಿಮತೇನ ಪರಿತ್ಯಕ್ತಾ ಗುರುಣಾಂಗಿರಸೇಽನಯತ್ ॥೪೪॥**

॥ ಇತಿ ಶ್ರೀಮದ್ಭಾಗವತೇ ಷಷ್ಠಸ್ಕಂಧೇ ಷಷ್ಠೋಽಧ್ಯಾಯಃ ॥

**ಯತ್** ಯಾವ ಕಾರಣ, **ವಿಮತೇನ** ಮುಂದೆ ಹೇಳುವ ಕಾರಣದಿಂದ ಮನಸ್ಸಿಲ್ಲದ ಅಥವಾ ಅವಮಾನಿತರಾದ, **ಗುರುಣಾ ಆಂಗೀರಸೇನ** ಅಂಗಿರಸನ ಪುತ್ರರಾದ ಬೃಹಸ್ಪತ್ಯಾಚಾರ್ಯರಿಂದ, **ಪರಿತ್ಯಕ್ತಾಃ** ಬಿಡಲ್ಪಟ್ಟರೋ, **ತಸ್ಮಾತ್** ಆ ಕಾರಣದಿಂದ, **ಸುರಗಣಾಃ** ದೇವತೆಗಳು, **ದ್ವಿಷತಾಂ ಅಪಿ ಸ್ವಸ್ರೀಯಂ** ತಮ್ಮ ವೈರಿಗಳಿಗೂ ತಮಗೂ ತಂಗಿಯ ಮಗನಾದ, (ಇಬ್ಬರೂ ಕಶ್ಯಪರ ಮಕ್ಕಳೇ ಭಿನ್ನೋದರರು) **ತಂ** ವಿಶ್ವರೂಪಾಚಾರ್ಯರನ್ನು, **ಗುರುಣಾ** ಶತ್ರುಗಳನ್ನು ಸೋಲಿಸಬೇಕೆಂಬ ಕಾರ್ಯಭಾರದಿಂದ, **ಗುರುಣಾ** ಗುರುತ್ವೇನ ಗುರುವಾಗಿ, **ವವ್ರಿರೇ** ಸ್ವೀಕರಿಸಿದರು.

'ಮುಕ್ತೋಪಸೃಪ್ಯವತ್' 'ನೇಹನಾಸ್ತೀತಿವತ್' ಗುರುಣಾ ಎಂದರೆ ಗುರುತ್ವೇನ ಎಂದು ಭಾವಪ್ರಧಾನ ನಿರ್ದೇಶವೆಂದು ತಿಳಿಯಬೇಕು.

ಮೇಲಿನ ಶ್ಲೋಕದಲ್ಲಿ ಪರಿತ್ಯಕ್ತಃ ಎಂಬ ಪಾಠವು ಮುಂದಿನ ಅಧ್ಯಾಯದ ಪರಿತ್ಯಕ್ತಾಃ ಸುರಾಃ ಶಿಷ್ಯಾಣಾಂ ಅಕ್ರಮಂ ಎಂದು ಮುಂದಿನ ಶ್ಲೋಕದಲ್ಲಿ ಪಾದಗಳಲ್ಲಿ ಹೇಳಿದ್ದನ್ನು ತಿಳಿದು ಪರಿತ್ಯಕ್ತವಾಗಿದೆ ಎನ್ನುತ್ತಾರೆ ಶ್ರೀಗಳು.

ಇಲ್ಲಿಗೆ ಆರನೆಯ ಅಧ್ಯಾಯವು ಮುಗಿಯಿತು.

★★★★★

# ಅಥ ಶ್ರೀಮದ್ಭಾಗವತೇ - ಷಷ್ಠಸ್ಕಂಧೇ

# ಸಪ್ತಮೋऽಧ್ಯಾಯಃ

**ಅಧ್ಯಾಯಸಾರಾಂಶ**

ಪರೀಕ್ಷಿತ ಪ್ರಶ್ನೆ ಮಾಡಿದ. ಶುಕಾಚಾರ್ಯರೇ ! ಬೃಹಸ್ಪತಿಗಳು ದೇವತೆಗಳನ್ನು ಯಾಕೆ ಪರಿತ್ಯಜಿಸಿದರು. ಗುರುಗಳಾದ ಬೃಹಸ್ಪತ್ಯಾಚಾರ್ಯರ ವಿಷಯಲ್ಲಿ ಶಿಷ್ಯರಾದ ದೇವತೆಗಳು ಮಾಡಿದ ಅಪರಾಧವಾದರೂ ಏನು? ಈ ವಿಷಯವನ್ನು ನೀವು ನನಗೆ ತಿಳಿಸಬೇಕು.

ಶುಕಾಚಾರ್ಯರು ಉತ್ತರಿಸಿದರು. ಮೂರುಲೋಕವೆಲ್ಲ ಇಂದ್ರನಾದ ಪುರಂದರನ ಐಶ್ವರ್ಯವಾಗಿತ್ತು. ಅಷ್ಟೆಲ್ಲ ಐಶ್ವರ್ಯವನ್ನು ಕಂಡ ಇಂದ್ರ ಮತ್ತನಾದ. ಸನ್ಮಾರ್ಗವನ್ನು ಪರಿತ್ಯಜಿಸಿದ.

ಅದೊಂದು ದಿವ. ದೇವೇಂದ್ರ ಸಭೆ ಸೇರಿಸಿದ. ಆ ಸಭೆಯಲ್ಲಿ ದೇವತೆಗಳು, ಗಂಧರ್ವರು, ಸಿದ್ಧರು, ಚಾರಣರು, ಮುನಿಗಳೆಲ್ಲರೂ ಇಂದ್ರನನ್ನು ಸ್ತುತಿಸಿದರು. ಛತ್ರ-ಚಾಮರ-ವ್ಯಜನಾದಿಗಳಿಂದ ದೇವೇಂದ್ರನನ್ನು ಪರಿಚಾರಕರು ಸೇವಿಸುತ್ತಿದ್ದರು. ಸಿಂಹಾಸನದ ಅರ್ಧಭಾಗದಲ್ಲಿ ಶಚೀದೇವಿಯು ವಿರಾಜಮಾನಳಾಗಿದ್ದಳು.

ಇದೇ ಸಮಯದಲ್ಲಿ ಬೃಹಸ್ಪತ್ಯಾಚಾರ್ಯರು ಸಭೆಯನ್ನು ಪ್ರವೇಶಿಸಿದರು. ಪ್ರವೇಶಿಸುತ್ತಿರುವ ಗುರುಗಳನ್ನು ಕಂಡರೂ ಕಾಣದವನಂತೆ ಇಂದ್ರನು ಆಸನದಿಂದ ಏಳಲಿಲ್ಲ. ಎದುರಾಗಿ ಬರಲೂ ಇಲ್ಲ. ಇಂದ್ರನು ಮಾಡಿದ ಈ ಅವಮಾನವನ್ನು ಗುರುಗಳು ಬೃಹಸ್ಪತ್ಯಾಚಾರ್ಯರು ಸಹಿಸಲಿಲ್ಲ. ಈ ಸಮಯದಲ್ಲಿ ಇಂದ್ರನು




ಐಶ್ವರ್ಯದ ಮದದಲ್ಲಿ ತೇಲಿಯಾಡುತ್ತಿದ್ದಾನೆ ಎಂಬುದನ್ನು ಗಮನಿಸಿದರು. ಬಂದಂತೆಯೇ ತಮ್ಮ ಮನೆಗೆ ತೆರಳಿದರು.

ಬಂದ ಗುರುಗಳು ತಿರುಗಿ ಹೋದಮೇಲೆಯೇ ಇಂದ್ರನಿಗೆ ಜ್ಞಾನೋದಯ-ವಾಯಿತು. ತನ್ನನ್ನು ತಾನು ನೆರೆದ ಆ ಸಭೆಯಲ್ಲಿಯೇ ನಿಂದಿಸಿಕೊಂಡ. ನಾನು ಅತ್ಯಲ್ಪ. ಐಶ್ವರ್ಯದ ಮದದಿಂದ ಮತ್ತನಾದೆ. ಬಂದ ಗುರುಗಳನ್ನೂ ಗಮನಿಸಲಿಲ್ಲ. ಅವರಿಗೆ ಮಾಡಬೇಕಾದ ಉಪಚಾರಗಳನ್ನು ಮಾಡಲಿಲ್ಲ. ನಾನು ಮಾಡಿರುವ ಈ ಕಾರ್ಯದಿಂದ ನನಗೆ ಜಗುಪ್ಸೆ ಬರುತ್ತಿದೆ. ರಾಜಯೋಗ್ಯನಾದ ಸಿಂಹಾಸನವನ್ನೇರಿದವ ಯಾರಿಗೂ ಸನ್ಮಾನವನ್ನು ಮಾಡಬೇಕಿಲ್ಲ ಎಂಬುದು ಯೋಗ್ಯವಾದ ವಚನವಲ್ಲ. ಪಂಡಿತಮ್ಮನ್ಯಮಾನರು ಹೇಳುವ ಈ ಮಾತಿನಲ್ಲಿ ವಿಶ್ವಾಸವಿಟ್ಟು ಗುರುಗಳನ್ನು ಅನಾದರ ಮಾಡಿದರೇ ಮಹಾನ್ ಅನರ್ಥವಾಗುತ್ತದೆ. ಈ ವಿಷಯದಲ್ಲಿ ಸಂದೇಹವಿಲ್ಲ. ಆದ್ದರಿಂದ ಬುದ್ಧಿವಂತನಾದವನು ಈ ಮಾತಿನಲ್ಲಿ ವಿಶ್ವಾಸವನ್ನಿಡಬಾರದು. ತಾನು ಯಾವ ಹುದ್ದೆಯಲ್ಲಿಯೇ ಇರಲಿ ಗುರುಗಳು ಸದಾ ಪೂಜ್ಯರಾಗಿದ್ದಾರೆ. ಈ ವಿಷಯವನ್ನು ಗಮನಿಸದೇ ನಾನು ಗುರುಗಳನ್ನು ಸಭೆಯಲ್ಲಿಯೇ ಧಿಕ್ಕರಿಸಿದೆ. ನಾನು ಮಾಡಿದ ತಪ್ಪನ್ನು ನಾನೇ ಸರಿಪಡಿಸಿಕೊಳ್ಳುತ್ತೇನೆ. ಶಾಂತರಾದ, ದಾಂತರಾದ ಗುರುಗಳ ಪಾದಗಳಿಗೆರಗುತ್ತೇನೆ. ಅವರಿಗೆ ವಿನೀತನಾಗುತ್ತೇನೆ. ಅವರ ಪ್ರಸಾದ ಪ್ರಾಪ್ತಿಯಾಗುವಂತೆ ಮಾಡಿಕೊಳ್ಳುತ್ತೇನೆ. ಎಂದುಕೊಂಡು ದೇವತೆಗಳಿಂದ ಕೂಡಿಕೊಂಡು ಗುರುಗಳ ಮನೆಗೆ ಇಂದ್ರದೇವ ಹೊರಟ.

ಮನೆಯಲ್ಲಿ ಗುರುಗಳು ಕಾಣಲೇ ಇಲ್ಲ. ಇಂದ್ರನಿಗೆ ಭಯವಾಯಿತು. ಖೇದವೂ ಆಯಿತು. ಗುರು-ಶಿಷ್ಯರ ಈ ಕಲಹ ಕಲಹಪ್ರಿಯರಾದ ದೈತ್ಯರಿಗೆ ತಿಳಿಯಿತು. ಸ್ವರ್ಗವನ್ನು ಗೆಲ್ಲಲು ಇದು ಸರಿಯಾದ ಕಾಲವೆಂದು ಬಗೆದರು. ತಮ್ಮ ಗುರುಗಳಾದ ಶುಕ್ರಾಚಾರ್ಯರಿಗೆ ಶರಣಾದರು. ಶುಕ್ರಾಚಾರ್ಯರ ಸಮ್ಮತಿಯಿಂದ ಯುದ್ಧವನ್ನು ಮಾಡಿದರು. ಗುರುಪ್ರಸಾದವನ್ನು ಪಡೆದ ದೈತ್ಯರು ಗುರುಪ್ರಸಾದರಹಿತರಾದ ದೇವತೆಗಳನ್ನು ಸುಲಭವಾಗಿ ಗೆದ್ದರು.

ಸೋತಿರುವ ಇಂದ್ರಾದಿಗಳೆಲ್ಲ ಬ್ರಹ್ಮದೇವರಿಗೆ ಶರಣು ಹೋದರು. ದೇವತೆಗಳ ಅವಸ್ಥೆಯನ್ನು ಕಂಡು ಬ್ರಹ್ಮದೇವರು ದಯಾಯುಕ್ತರಾದರು. ದೇವತೆಗಳನ್ನು ಸಮಾಧಾನಪಡಿಸಿದರು. ದೇವತೆಗಳಿಗೆ ಹೇಳಿದರು.

ದೇವತೆಗಳೇ ! ಅತೀವ ಅಮಂಗಲವಾದ ಕಾರ್ಯವನ್ನು ನೀವು ಮಾಡಿರುವಿರಿ. ಐಶ್ವರ್ಯದ ಮದದಿಂದ ಗುರುಗಳ ಅವಮಾನವನ್ನು ಮಾಡಿರುವಿರಿ. ಈ ದೋಷದಿಂದಲೇ ನಿಮಗೆ ಪರಾಭವವಾಗಿದೆ.

ಈ ಹಿಂದೆ ಗುರುಗಳ ಅವಗ್ರಹದಿಂದಲೇ ಕ್ಷೀಣರಾದ ದೈತ್ಯರು ಈಗ ಗುರುಗಳ ಪ್ರಸಾದದಿಂದಲೇ ಅಭಿವೃದ್ಧಿಯನ್ನು ಪಡೆದಿದ್ದಾರೆ. ಗುರುಗಳ ಅನುಗ್ರಹವನ್ನು ಪಡೆದಿರುವ ದೈತ್ಯರು ನನ್ನ ಸ್ಥಾನವನ್ನೂ ಸಂಪಾದಿಸಲು ಸಮರ್ಥರಾಗುತ್ತಾರೆ. ನಿನ್ನ ಸ್ಥಾನ ಎಷ್ಟರದ್ದು? ಆದ್ದರಿಂದ ನೀವೀಗ ಗುರುಗಳ ನೆರಳಲ್ಲಿಯೇ ಮುಂದುವರೆಯಬೇಕು. ಬೃಹಸ್ಪತ್ಯಾಚಾರ್ಯರು ಅದೃಶ್ಯರಾಗಿದ್ದಾರೆ. ಆದ್ದರಿಂದ ತ್ವಷ್ಟಾ-ರಚನೆಯರ ಪುತ್ರರಾದ ವಿಶ್ವರೂಪಾಚಾರ್ಯರನ್ನು ಸದ್ಯಕ್ಕೆ ಗುರುಗಳನ್ನಾಗಿ ಸ್ವೀಕರಿಸಿರಿ. ಅವರ ನೇತೃತ್ವದಲ್ಲಿ ಮತ್ತೆ ಅಲ್ಪಕಾಲದಲ್ಲಿಯೇ ದೈತ್ಯರನ್ನು ಗೆಲ್ಲುತ್ತೀರಿ. ಮತ್ತೆ ನಿಮ್ಮ ತ್ರೈಲೋಕ್ಯಸಾಮ್ರಾಜ್ಯವನ್ನು ಪಡೆಯುತ್ತೀರಿ. ಆದರೆ ವಿಶ್ವರೂಪಾಚಾರ್ಯರ ಕರ್ಮಗಳನ್ನು ಕ್ಷಮಿಸುತ್ತಾ ಅವರನ್ನು ಪೂಜಿಸುತ್ತಿದ್ದರೆ ಮಾತ್ರ ನಿಮ್ಮ ಕಾರ್ಯವನ್ನು ಸಾಧಿಸುತ್ತಾರೆ. ಈ ವಿಷಯದಲ್ಲಿ ಮತ್ತೊಂದು ಉಪಾಯವಿಲ್ಲ.

ಬ್ರಹ್ಮದೇವರು ಇಷ್ಟು ಹೇಳಿದ ಕೂಡಲೇ ದೇವತೆಗಳೆಲ್ಲ ವಿಶ್ವರೂಪರ ಹತ್ತಿರ ಹೋದರು. ಇನ್ನು ಗುರುಗಳಾಗಿಲ್ಲವಾದ್ದರಿಂದ ಬಂಧುವೆಂದು ಆಲಿಂಗಿಸಿಕೊಂಡರು. ಪ್ರಾರ್ಥಿಸಿದರು.

ವತ್ಸ ವಿಶ್ವರೂಪಾ! ನಿನ್ನ ಆಶ್ರಮಕ್ಕೆ ನಾವು ಅತಿಥಿಗಳಾಗಿ ಬಂದಿದ್ದೇವೆ. ನಿನಗೆ ಭದ್ರವಾಗಲಿ. ನಿಮ್ಮ ತಂದೆಯು ತ್ವಷ್ಟಾ ಅದಿತಿಪುತ್ರನಾಗಿದ್ದಾನೆ. ನಮಗೆ ತಮ್ಮನು. ಆದ್ದರಿಂದ ನಾವು ನಿಮಗೆ ಪಿತೃಗಳು. ಮಗನಾದ ನೀನು ನಮ್ಮ ಮನೋರಥವನ್ನು ಪೂರ್ಣಮಾಡಬೇಕು. ಸ್ವಯಂ ಗೃಹಸ್ಥನಾಗಿ ಮಕ್ಕಳನ್ನು ಪಡೆದಿದ್ದರೂ ತಮ್ಮ ತಮ್ಮ ತಂದೆ-ತಾಯಿಗಳ ಸೇವೆಯನ್ನು ಪ್ರತಿಯೊಬ್ಬರೂ ಮಾಡಲೇಬೇಕು. ಬ್ರಹ್ಮಚಾರಿಯನ್ನೂ ಅಗತ್ಯವಾಗಿ ಪಿತೃಸೇವೆಯನ್ನು ಮಾಡಬೇಕು.

ಅಲ್ಲದೇ ಪಿತ್ರಾದಿಗಳ ಸೇವೆಯನ್ನು ಮಾಡುವುದರಿಂದ ರುದ್ರಾದಿದೇವತೆಗಳ ಪೂಜೆಯನ್ನು ಮಾಡಿದಂತಾಗುತ್ತದೆ. ತತ್ತ್ವೋಪದೇಶಕರಾದ ಆಚಾರ್ಯರಲ್ಲಿ ಚತುರ್ಮುಖ ಬ್ರಹ್ಮ ಸನ್ನಿಹಿತರಾಗಿರುತ್ತಾರೆ. ತಂದೆಯಲ್ಲಿ ರುದ್ರ, ಅಣ್ಣನಲ್ಲಿ ಇಂದ್ರ, ಅತಿಥಿಗಳಲ್ಲಿ ಯಮಧರ್ಮ, ತಾಯಿಯಲ್ಲಿ ಪೃಥಿವಿಯು, ಅಕ್ಕಳಿಲ್ಲಿ ದಯಾ

ಅಭ್ಯಾಗತರಲ್ಲಿ ಅಗ್ನಿಯು ಸನ್ನಿಹಿತರಾಗಿರುತ್ತಾರೆ. ಇವರ ಸೇವೆ ಮಾಡುವುದರಿಂದ ಆಯಾ ದೇವತೆಗಳು ಪೂಜಿತರಾಗಿ ಪ್ರೀತರಾಗುತ್ತಾರೆ. ಶುಭವಾದ ಆಶೀರ್ವಾದಗಳನ್ನು ಮಾಡುತ್ತಾರೆ. ಅವರ ಆಶೀರ್ವಾದಗಳೇ ಸಂಸಾರಿಯಾದವರಿಗೆಲ್ಲ ತಾರಕವಾಗುತ್ತದೆ.

ನಾವೀಗ ಶತ್ರುಗಳಿಂದ ಪೀಡಿತರಾಗಿದ್ದೇವೆ. ಆ ಪೀಡೆಯನ್ನು ನೀನೇ ಪರಿಹರಿಸಬೇಕು. ನಿಮ್ಮನ್ನು ಗುರುಗಳನ್ನಾಗಿ ನಾವು ಸ್ವೀಕರಿಸುತ್ತೇವೆ. ನೀವು ನಮಗೆ ಪುರೋಹಿತರಾಗಿರಿ. ನಿಮ್ಮ ಮಾರ್ಗದರ್ಶನದಲ್ಲಿಯೇ ಮತ್ತೆ ನಾವು ತ್ರೈಲೋಕ್ಯಸಾಮ್ರಾಜ್ಯವನ್ನು ಪಡೆಯುತ್ತೇವೆ.

ನಾವೆಲ್ಲರೂ ನಿಮಗೆ ನಮಸ್ಕರಿಸುತ್ತೇವೆ. ನಿಮ್ಮನ್ನು ಗೌರವಿಸುತ್ತೇವೆ. ವಯಸ್ಸು ಮಾತ್ರ ಜ್ಯೇಷ್ಠತ್ವಕ್ಕೆ ಕಾರಣವಾಗುವುದಿಲ್ಲ. ಬ್ರಹ್ಮಾಭಿಜ್ಞಾನದಿಂದಲೇ ಬ್ರಾಹ್ಮಣರು ಹಿರಿಯರಾಗುತ್ತಾರೆ. ಆದ್ದರಿಂದ ಸಣ್ಣವನಾಗಿದ್ದರೂ ನಿನಗೆ ನಮಸ್ಕರಿಸುವುದು ತಪ್ಪಾಗುವುದಲ್ಲ. ಇಷ್ಟೇ ಅಲ್ಲದೇ ಪ್ರಯೋಜನವಿರುವಾಗ ಹಿರಿಯರಾಗಿದ್ದರೂ ಕನಿಷ್ಠರಿಗೆ ನಮಸ್ಕಾರಮಾಡುವುದು ನಿಷಿದ್ಧವೇನಲ್ಲ.

ದೇವತೆಗಳ ಮಾತುಗಳನ್ನಾಲಿಸಿದ ವಿಶ್ವರೂಪ ಹೇಳಿದ. ಪೌರೋಹಿತ್ಯವನ್ನು ಮಾಡುವವರಿಂದ ಅಯಾಜ್ಯಯಾಜನ-ಅಸತ್ಪ್ರತಿಗ್ರಹಾದಿಗಳು ಅನಿವಾರ್ಯವಾಗಿ ನಡೆದುಹೋಗುತ್ತವೆ. ಹೀಗಾಗಿ ಸ್ವಾರ್ಜಿತಪುಣ್ಯವನ್ನು ನಾಶ ಮಾಡುತ್ತದೆ. ಅಂತಹ ಪೌರೋಹಿತ್ಯವನ್ನು ನಾನು ಹೇಗೆ ಸ್ವೀಕರಿಸಲಿ? ಅಲ್ಲದೇ ನಾನೀಗ ಶಿಲೋಂಛವೃತ್ತಿಯಿಂದ ಜೀವನವನ್ನು ನಡೆಸುತ್ತಿದ್ದೇನೆ. ಸಂತೃಪ್ತವಾದ ಜೀವನವನ್ನು ನಡೆಸುತ್ತಿದ್ದೇನೆ. ಪಂಚಮಹಾಯಜ್ಞಗಳನ್ನು, ಅಗ್ನಿಹೋತ್ರಾದಿವಿಹಿತವಾದ ಕರ್ಮಗಳನ್ನು ಮಾಡುತ್ತಿದ್ದೇನೆ. ಹೀಗೆ ಜೀವನವನ್ನು ಮಾಡುತ್ತಿರುವ ನಾನು ಗರ್ಹಣೀಯವಾದ ಪೌರೋಹಿತ್ಯವನ್ನು ಹೇಗೆ ಸ್ವೀಕರಿಸಲಿ?

ಆದರೆ ಗುರುಗಳು ನೀವು ಬಂದು ಕೇಳುತ್ತಿದ್ದೀರಿ. ಆದ್ದರಿಂದ ನಿಮ್ಮ ಮಾತನ್ನು ಧಿಕ್ಕರಿಸುವುದು ಮಹಾ ಅನರ್ಥಕ್ಕೆ ಕಾರಣವಾಗುತ್ತದೆ. ಪೌರೋಹಿತ್ಯದಿಂದ ಬರುವ ಅನರ್ಥಕ್ಕಿಂತಲೂ ಅತಿಶಯವಾದ ಅನರ್ಥ ಗುರ್ವಾಜ್ಞಾಧಿಕ್ಕಾರದಿಂದ ಆಗುತ್ತದೆ. ಇದರ ಎಚ್ಚರ ನನಗೆ ಇದೆ. ಹೀಗಾಗಿ ನಿಮ್ಮ ಆಜ್ಞೆಯನ್ನು ಧಿಕ್ಕರಿಸುವುದಿಲ್ಲ. ನನಗೆ ತಿಳಿದಂತೆ ಯಥಾಶಕ್ತಿ ಪೌರೋಹಿತ್ಯವನ್ನು ಮಾಡಿ ನಿಮ್ಮನ್ನು ಸಂತೋಷಪಡಿಸುತ್ತೇನೆ.

ವಿಶ್ವರೂಪ ಈ ರೀತಿಯಾಗಿ ಪ್ರತಿಜ್ಞೆ ಮಾಡಿದ. ಪೌರೋಹಿತ್ಯವನ್ನು ಮಾಡಿದ. ಶುಕ್ರರಿಂದ ಉಪದಿಷ್ಟವಾದ ವಿದ್ಯೆಯಿಂದ ಪರಿರಕ್ಷಿತವಾದ ಅಸುರ ಸಂಪತ್ತನ್ನು ವೈಷ್ಣವವಿದ್ಯೆಯಿಂದ ದೇವತೆಗಳಿಗೆ ಲಭ್ಯವಾಗುವಂತೆ ಮಾಡಿದ. ಕಳೆದು ಹೋದ ಎಲ್ಲ ಐಶ್ವರ್ಯವನ್ನೂ ಮತ್ತೆ ಇಂದ್ರನಿಗೆ ಬರುವಂತೆ ಮಾಡಿದ. ವಿಶ್ವರೂಪಾಚಾರ್ಯರು ಉಪದೇಶಿಸಿದ ಆ ವೈಷ್ಣವವಿದ್ಯೆಯಿಂದ ಪರಿರಕ್ಷಿತನಾದ ಇಂದ್ರ ಯುದ್ಧವನ್ನು ಮಾಡಿ ದೈತ್ಯರನ್ನೆಲ್ಲ ಸೋಲಿಸಿದ. ಆ ವೈಷ್ಣವವಿದ್ಯೆ ಮತ್ತಾವುದೂ ಅಲ್ಲ. ಅದುವೇ ನಾರಾಯಣವರ್ಮ.

★★★★★

'ಗುರುಪ್ರಸಾದೋ ಬಲವಾನ್' 'ಗುರುದ್ವಾರಾ ಪ್ರಸಾದಕೃತ್' 'ಆಚಾರ್ಯಾದ್ಧ್ಯೇವ ವಿದ್ಯಾ ವಿದಿತಾ ಸಾಧಿಷ್ಠಾ' ಹರೌ ರುಷ್ಟೇ ಗುರುಸ್ತ್ರಾತಾ ಗುರೌ ರುಷ್ಟೇ ನ ಕಶ್ಚನ' ಮುಂತಾದ ಪ್ರಮಾಣಗಳಿರುವುದರಿಂದ ಭಕ್ತಿ-ಜ್ಞಾನಾದಿಗಳ ಸಮುನ್ನತಿಗಾಗಿ ಗುರುಗಳ ಅನುಗ್ರಹವೇ ಬಲಿಷ್ಠವಾದುದು ಅದಿಲ್ಲದಿದ್ದರೆ ಕೂಡಲೇ ಅನರ್ಥವಾಗುವದು. ಆದ್ದರಿಂದ ಜ್ಞಾನಜಯಾದಿಗಳನ್ನು ಸಂಪಾದಿಸಬೇಕೆಂಬುವವನು ಕನಸಿನಲ್ಲಿಯೂ ಗುರುಗಳಿಗೆ ಅವಮಾನ ಮಾಡಬಾರದು. ಅವರ ಅನುಗ್ರಹಕ್ಕಾಗಿ ಯಾವಾಗಲೂ ಮರ್ಯಾದೆಯಿಂದ ಅವರನ್ನು ಸೇವಿಸಬೇಕು. ಹೀಗಿರುವಾಗ ದೇವತೆಗಳು ಬೃಹಸ್ಪತ್ಯಾಚಾರ್ಯರಿಗೆ ಅನಾದರ ಮಾಡಿ ಅವರಿಲ್ಲದೇ ಹಾಗೇ ಇದ್ದರೋ? ಅಥವಾ ಅವರನ್ನು ಅನಾದರಿಸಿ ಬೇರೊಬ್ಬ ಮಾನ್ಯರಾದವರನ್ನು ಸ್ವೀಕರಿಸಿದರೋ? ಅಥವಾ ನೀನು ಹಾಕಿದ್ದನ್ನೇ ತಿನ್ನುತ್ತೇನೆ ಬಾಗಿಲು ತೆಗೆ ರಮಣಿಯೇ ಎಂದು ಪತಿಯು ಹೇಳಿದಂತೆ, ಬೃಹಸ್ಪತಿಗಳನ್ನು ಸಮಾಧಾನ ಪಡಿಸಿ ನಿನ್ನಲ್ಲಿಯೇ ವಿಶ್ವಾಸ ಇಟ್ಟಿದ್ದೇವೆ ಎಂದು ಬಹಳವಾಗಿ ಪ್ರಾರ್ಥಿಸಿ ಆ ತಾರಾಪತಿಗಳನ್ನೇ ಮನೆಗೆ ಕರೆತಂದರೋ? ಎಂಬ ಸಂದೇಹವನ್ನು ನಿವಾರಿಸಲು ಮೊದಲಿಗೆ ಈ ರೀತಿ ಗುರುಪರಿತ್ಯಾಗ ಎಂದೂ ಎಲ್ಲೂ ಕಾಣದ್ದು ಕಾರಣವಿಲ್ಲದೇ ಆಗಿರಲಾರದು. ಆದ್ದರಿಂದ ಆ ಕಾರಣವೇನೆಂದು ಪರೀಕ್ಷಿತನು ಕೇಳುತ್ತಿದ್ದಾನೆ.

**ರಾಜೋವಾಚ -**

**ಯಸ್ಯ ಹೇತೋಃ ಪರಿತ್ಯಕ್ತಾ ಆಚಾರ್ಯೇಣಾತ್ಮನಃ ಸುರಾಃ ।**
**ಏತದಾಚಕ್ಷ್ವ ಭಗವನ್ ಶಿಷ್ಯಾಣಾಮಕ್ರಮಂ ಗುರೌ ॥೧॥**

**ಭಗವನ್** ಪೂಜ್ಯರಾದ ಶುಕಾಚಾರ್ಯರೇ, **ಸುರಾಃ** ದೇವತೆಗಳು, **ಆತ್ಮನಃ** ತಮ್ಮ, **ಆಚಾರ್ಯೇಣ** ಪುರೋಹಿತರಾದ ಬೃಹಸ್ಪತ್ಯಾಚಾರ್ಯರಿಂದ, **ಯಸ್ಯ ಹೇತೋಃ** ಯಾವ ಕಾರಣಕ್ಕಾಗಿ, **ಪರಿತ್ಯಕ್ತಾಃ** ಬಿಡಲ್ಪಟ್ಟರು, **ಏತತ್** ಇದನ್ನು, **ಆಚಕ್ಷ್ವ** ಹೇಳಿರಿ ಅಂದರೆ, **ಗುರೌ** ಬೃಹಸ್ಪತ್ಯಾಚಾರ್ಯರಲ್ಲಿ, **ಶಿಷ್ಯಾಣಾಂ** ಶಿಷ್ಯರಾದ ದೇವತೆಗಳ, **ಅಕ್ರಮಂ** ಅಪರಾಧವನ್ನು, **ಆಚಕ್ಷ್ವ** ಹೇಳಿರಿ.

**ವಿಶಿಷ್ಟ ಅರ್ಥ**

ಎರಡನೇ ಸ್ಕಂಧದ 'ಯಯಾ ಸಂಧಾರಯೇತ್' ಎಂಬ ಶ್ಲೋಕದ ವ್ಯಾಖ್ಯಾನ ಮಾಡುವಾಗ ಶ್ರೀಮತ್ ತಾತ್ಪರ್ಯದಲ್ಲಿ ಯಚ್ಛಬ್ದಃ ಪ್ರಶ್ನೇ 'ಯತಶ್ಚೋದೇತಿ ಸೂರ್ಯಃ' ಇತ್ಯಾದಿವತ್ । ಯಚ್ಛಬ್ದಸ್ತು ಪರಾಮರ್ಶೇ ಪ್ರಶ್ನಾರ್ಥೇ ಚಾಽಪಿ ಭಣ್ಯತೇ ಇತ್ಯಭಿಧಾನಾತ್' ಎಂದು ಹೇಳಿದ್ದಾರೆ. 'ಯತಸ್ತದುದಿತಂ ಮಾನಂ' ಎಂಬ ಅನುವ್ಯಾಖ್ಯಾನ ವ್ಯಾಖ್ಯಾನ ಮಾಡುವಾಗ ಯತಃ ಯತ್ಕಾರಣಂ ಬೇರೆ ಸ್ಥಳದಲ್ಲಿ ತತ್ಕಸ್ಯ ಹೇತೋಃ ಎಂದು ನಿಮಿತ್ತಕಾರಣಹೇತುಷು ಸರ್ವಾಸಾಂ ಪ್ರಾಯದರ್ಶನಂ ಮುಂತಾಗಿ ಸುಧಾ ಆದರ ವ್ಯಾಖ್ಯಾನಗಳಿರುವದರಿಂದ ಯಸ್ಯ ಹೇತೋಃ ಎಂದಾಗುವದು. ಆತ್ಮನಃ ತಮ್ಮ ಎಂದರ್ಥ. ಆತ್ಮಶಬ್ದವು ಏಕವಚನಾಂತವಾಗಿದ್ದರೂ ಬಹುವಚನ ವಿಶೇಷಣವಾಗುವದು. ಇನ್ನು ಎಲ್ಲಿ ಆತ್ಮನಾಂ ಎಂದು ಬಹವಚನವಿರುವದೋ ಅದೂ ಗುಣವೇ. ಆದ್ದರಿಂದ ಜಾತ್ಯೇಕವಚನ ಮುಂತಾಗಿ ವಿವೇಚಿಸಲು ಪ್ರಯತ್ನಿಸಬೇಕು. 'ಅಹಂಕಾರಾತ್ಮನೇ ಗರುಡಶೇಷರುದ್ರೇಭ್ಯಃ' ಎಂದು ಮುಂತಾಗಿ ಪ್ರಯೋಗವಿದೆ. ಆತ್ಮನಃ ಮನಸಃ ಮನಃಪೂರ್ವಕ ಪರಿತ್ಯಕ್ತರು ಎಂದನ್ವಯ. ಶಿಷ್ಯಾಣಾಂ ಅಕ್ರಮಂ ಎಂದು ಹೇಳುವ ರಾಜನ ಅಭಿಪ್ರಾಯ ಶಿಷ್ಯರು ಗುರುಗಳ ಆದೇಶದಲ್ಲಿರಬೇಕು. ಕಾರಣ ಇದು ದೇವತೆಗಳ ಮೌಢ್ಯವೆಂದು ನಿಗೂಢವಾದ ಆಶಯವಾಗಿದೆ.

ಉತ್ತರ ಹೇಳುವರು. ಇಲ್ಲಿ ಎಂಟು ಶ್ಲೋಕಗಳಿಗೆ ಏಕಾನ್ವಯ-

**ಶ್ರೀಶುಕ ಉವಾಚ -**

**ಇಂದ್ರಸ್ತ್ರಿಭುವನೈಶ್ವರ್ಯಮದೋಲ್ಲಂಘಿತಸತ್ಪಥಃ ।**
**ಮರುದ್ಭಿರ್ವಸುಭೀ ರುದ್ರೈರಾದಿತ್ಯೈರ್ಋಭುಭಿರ್ನೃಪ ॥೨॥**

**ನೃಪ** ಪರೀಕ್ಷಿತನೇ, **ಇಂದ್ರಃ** ಇಂದ್ರದೇವರು **ತ್ರಿಭುವನ** ಮೂರು ಲೋಕಗಳ **ಐಶ್ವರ್ಯಮದ** ಅಧಿಕಾರದ ಗರ್ವದಿಂದ **ಉಲ್ಲಂಘಿತಸತ್ಪಥಃ** ಸಜ್ಜನರ ಮಾರ್ಗವನ್ನು

ಬಿಟ್ಟವರಾಗಿ, ಮದಕ್ಕೆ ಕಾರಣವನ್ನು, ಸಜ್ಜನ ಮಾರ್ಗೋಲ್ಲಂಘನವನ್ನು ಹೇಳುವರು. **ಸಃ** ಇಂದ್ರದೇವರು **ಮರುದ್ಭಿಃ** ಮರುದ್ಗಣಗಳಿಂದ **ವಸುಭಿಃ** ವಸುಗಣಗಳಿಂದಲೂ **ರುದ್ರೈಃ** ರುದ್ರಗಣಗಳಿಂದಲೂ **ಆದಿತ್ಯೈಃ** ಆದಿತ್ಯರಿಂದಲೂ **ಋಭುಭಿಃ** ಋಭುಗಳಿಂದಲೂ, ।।೨।।

ರುದ್ರರಕ್ಕಿಂತ ಮೊದಲು ಮರುತ್ತುಗಳನ್ನು ಹೇಳಿದ್ದು ಮುಂದೆ ಅವರ ಸೌಮ್ಯ ಸಂಪಾದನೆ ಉಪಪಾದನಾನುಸಾರ ಅಥವಾ ವೈರಿಗಳನ್ನು ಇಂದ್ರನು ಸ್ವಾಧೀನ ಮಾಡಿಕೊಂಡನು ಎಂಬ ಅದ್ಭುತತೆ ತಿಳಿಸಲು ಎಂದು ತಿಳಿಯಬೇಕು.

**ವಿಶ್ವೇದೇವೈಶ್ಚ ಸಾಧ್ಯೈಶ್ಚ ನಾಸತ್ಯಾಭ್ಯಾಂ ಪರಿಶ್ರಿತಃ ।**
**ಸಿದ್ಧಚಾರಣಗಂಧರ್ವೈರ್ಮುನಿಭಿರ್ಬ್ರಹ್ಮವಾದಿಭಿಃ ।।೩।।**

**ವಿಶ್ವೇದೇವೈಃ** ವಿಶ್ವೇದೇವತೆಗಳಿಂದಲೂ **ಸಾಧ್ಯೈಃ** ಸಾಧ್ಯರಿಂದಲೂ **ನಾಸತ್ಯಾಭ್ಯಾಂ** ಅಶ್ವೀನೀದೇವತೆಗಳಿಂದಲೂ **ಸಿದ್ಧಚಾರಣಗಂಧರ್ವೈಃ** ಸಿದ್ಧರು ಚಾರಣರು ಗಂಧರ್ವರುಗಳಿಂದಲೂ **ಬ್ರಹ್ಮವಾದಿಭಿಃ ಮುನಿಭಿಃ** ಶ್ರೀಹರಿಯ ವಿಷಯವನ್ನು ಚರ್ಚಿಸುವ ಋಷಿಗಳಿಂದಲೂ **ಪರಿಶ್ರಿತಃ** ಆಶ್ರಯಿಸಲ್ಪಟ್ಟವರಾಗಿ, ।।೩।।

**ವಿದ್ಯಾಧರಾಪ್ಸರೋಭಿಶ್ಚ ಕಿನ್ನರೈಃ ಪತಗೋರಗೈಃ ।**
**ನಿಷೇವ್ಯಮಾಣೋ ಭಗವಾಂಸ್ತೂಯಮಾನಶ್ಚ ಭಾರತ ।।೪।।**

**ಭಾರತ** ಪರೀಕ್ಷಿತನೇ **ಭಗವಾನ್** ಪೂಜ್ಯರಾದ ಇಂದ್ರರು **ವಿದ್ಯಾಧರಾಪ್ಸರೋಭಿಃ** ವಿದ್ಯಾಧರರಿಂದ ಅಪ್ಸರಾ ಸ್ತ್ರೀಯರಿಂದ **ಕಿನ್ನರೈಃ** ಕಿನ್ನರರಿಂದ **ಪತಗೈಃ** ಹಕ್ಕಿಗಳಿಂದ **ಚ** ಮತ್ತು **ಉರಗೈಃ** ಸರ್ಪಗಳಿಂದ **ನಿಷೇವ್ಯಮಾಣಃ** ಸೇವಿಸಲ್ಪಟ್ಟು **ಸ್ತೂಯಮಾನಃ** ಸ್ತೋತ್ರ ಮಾಡಲ್ಪಟ್ಟು,

**ಉಪಗೀಯಮಾನೋ ಲಲಿತಮಾಸ್ಥಾನಾಧ್ಯಾಸನಾಶ್ರಿತಃ ।**
**ಪಾಂಡುರೇಣಾತಪತ್ರೇಣ ಚಂದ್ರಮಂಡಲಚಾರುಣಾ ।।೫।।**

**ಲಲಿತಂ** ಸುಂದರವಾಗಿ **ಉಪಗೀಯಮಾನಃ** ಗಾನಮಾಡಲ್ಪಟ್ಟವರಾಗಿ **ಆಸ್ಥಾನಾಧ್ಯಾಸನಾಶ್ರಿತಃ** ಸುಧರ್ಮಾ ಎಂಬ ಸಭಾಸ್ಥಾನದಲ್ಲಿರುವ ಸಿಂಹಾಸನದಲ್ಲಿ ಕುಳಿತವರಾಗಿ **ಚಂದ್ರಮಂಡಲಚಾರುಣಾ** ಚಂದ್ರನ ಮಂಡಲದಂತೆ ಸುಂದರವಾದ, ಅಥವಾ ಚಂದ್ರ ಮಂಡಲಕ್ಕಿಂತ ಸುಂದರವಾದ, ಎರಡನೆಯ ಅರ್ಥದಲ್ಲಿ ಚಂದ್ರನಂತೆ

ಕಲಂಕವಿಲ್ಲವೆಂಬ ಭಾವ ವ್ಯಕ್ತವಾಗುವದು. **ಪಾಂಡುರೇಣ ಆತಪತ್ರೇಣ** ಶ್ವೇತಚ್ಛತ್ರದಿಂದಲೂ, ।।೫।।

**ಯುಕ್ತಶ್ಚಾನ್ಯೈಃ ಪಾರಮೇಷ್ಠ್ಯೈಶ್ಚಾಮರವ್ಯಜನಾದಿಭಿಃ ।**
**ವಿರಾಜಮಾನಃ ಪೌಲೋಮ್ಯಾ ಸಹಾರ್ಧಾಸನಯಾ ಭೃಶಮ್ ।।೬।।**

**ಚಾಮರವ್ಯಜನಾದಿಭಿಃ** ಚಾಮರಗಳಿಂದ, ಬೀಸಣಿಕೆಗಳಿಂದಲೂ **ಅನ್ಯೈಃ** ಬೇರೆ **ಪಾರಮೇಷ್ಠ್ಯೈಃ** ಶ್ರೇಷ್ಠವಾದ ಮಹಾರಾಜತ್ವವನ್ನು ತೋರಿಸುವ ಚಿಹ್ನೆಗಳಿಂದ **ಯುಕ್ತಃ** ಕೂಡಿದವನಾಗಿ **ಅರ್ಧಾಸನಯಾ** ಸಿಂಹಾಸನದ ಅರ್ಧದಲ್ಲಿ ಕುಳಿತಿರುವ **ಪೌಲೋಮ್ಯಾ ಸಹ** ಶಚೀದೇವಿಯೊಂದಿಗೆ **ಭೃಶಂ** ಬಹಳವಾಗಿ **ವಿರಾಜಮಾನಃ** ಪ್ರಕಾಶಮಾನರಾಗಿ, ।।೬।।

**ಸ ಯದಾ ಪರಮಾಚಾರ್ಯಂ ದೇವಾನಾಮಾತ್ಮನಶ್ಚ ಹ ।**
**ನಾಭ್ಯನಂದತ ಸಂಪ್ರಾಪ್ತಂ ಪ್ರತ್ಯುತ್ಥಾನಾಸನಾದಿಭಿಃ ।।೭।।**

**ವಾಚಸ್ಪತಿಂ ಮುನಿವರಂ ಸುರಾಸುರನಮಸ್ಕೃತಮ್ ।**
**ನೋಚ್ಚಚಾಲಾಸನಾದಿಂದ್ರಃ ಪಶ್ಯನ್ನಪಿ ಸಮಾಗತಮ್ ।।೮।।**

**ಸಃ** ಇಂದ್ರದೇವರು **ದೇವಾನಾಂ** ದೇವತೆಗಳಿಗೂ **ಚ** ಮತ್ತು **ಆತ್ಮನಃ** ತನಗೂ **ಪರಮಾಚಾರ್ಯಂ** ಶ್ರೇಷ್ಠಗುರುಗಳಾದ **ಮುನಿವರಂ** ಮುನಿಶ್ರೇಷ್ಠರಾದ **ಸುರಾಸುರನಮಸ್ಕೃತಂ** ದೇವತೆಗಳಿಂದಲೂ ದೈತ್ಯರಿಂದಲೂ ನಮಸ್ಕರಿಸಲ್ಪಟ್ಟ **ಸಂಪ್ರಾಪ್ತಂ** ಸಭೆಗೆ ಬಂದ **ವಾಚಸ್ಪತಿಂ** ಬೃಹಸ್ಪತ್ಯಾಚಾರ್ಯರನ್ನು **ಯದಾ** ಯಾವಾಗ **ಪ್ರತ್ಯುತ್ಥಾನಾಸನಾದಿಭಿಃ** ಎದುರಾಗಿ ಹೋಗಿ ಆಸನ ನೀಡುವುದೇ ಮೊದಲಾದವುಗಳಿಂದ **ನ ಅಭ್ಯನಂದತ್** ಸಂತೋಷದಿಂದ ಪೂಜಿಸಲಿಲ್ಲವೋ **ಸಮಾಗತಂ** ಬಂದವರನ್ನು **ಪಶ್ಯನ್ ಅಪಿ** ನೋಡಿಯೂ **ಆಸನಾತ್ ನ ಉಚ್ಚಚಾಲ** ಸಿಂಹಾಸನದಿಂದ ಕದಲಲಿಲ್ಲವೋ, ।।೭-೮।।

ಮೇಲಿನ ಎರಡು ಶ್ಲೋಕಗಳಲ್ಲಿ ಹೇಳಿದ ಪ್ರತಿಯೊಂದೂ ಗೌರವಕ್ಕೆ ಕಾರಣವಾಗಿರುವಾಗ ಎಲ್ಲ ಒಂದು ಕಡೆಗೆ ಸೇರಿದಾಗ ಇವರನ್ನು ಭಜಿಸುವದೇ ಯುಕ್ತ. ತ್ಯಜಿಸುವದಲ್ಲ. ಇದು ದೇವತೆಗಳ ಮಹಾಮೋಹ ಎಂದು ತಿಳಿಸಲು **ವಾಚಸ್ಪತಿಂ ಪರಮಾಚಾರ್ಯಂ** ಮುಂತಾದ ಅನೇಕ ವಿಶೇಷಣವಿತ್ತಿರುವರು. ಇದರಂತೆ ಇಂದ್ರನು

ಅನಾದರ ಮಾಡಲು ಕಾರಣವಾದ ಮದಕ್ಕೆ ಕಾರಣವಾದ ವಿಶೇಷಣಗಳನ್ನು ಇಂದ್ರನಿಗಿತ್ತಿರುವರು. ||೯||

**ತತೋ ನಿರ್ಗತ್ಯ ಸಹಸಾ ಕವಿರಾಂಗಿರಸಃ ಪ್ರಭುಃ ।**
**ಆಯಯೌ ಸ್ವಗೃಹಂ ತೂಷ್ಣೀಂ ವಿದ್ವಾನ್ ಶ್ರೀಮದವಿಕ್ರಿಯಾಮ್ ||೯||**

**(ತದಾ** ಆಗ) **ಕವಿಃ** ಜ್ಞಾನಿಗಳಾದ **ಪ್ರಭುಃ** ಸಮರ್ಥರಾದ **ಆಂಗಿರಸಃ** ಅಂಗಿರಸರ ಪುತ್ರರಾದ ಬೃಹಸ್ಪತ್ಯಾಚಾರ್ಯರು **ಶ್ರೀಮದವಿಕ್ರಿಯಾಂ ವಿದ್ವಾನ್** ಐಶ್ವರ್ಯಮದದ ವಿಕಾರವಿದೆಂದು ತಿಳಿದವರಾಗಿ **ಸಹಸಾ** ಕೂಡಲೇ **ತತಃ** ಸಭೆಯಿಂದ **ನಿರ್ಗತ್ಯ** ಹೊರಬಂದು **ತೂಷ್ಣೀಂ** ಸುಮ್ಮನೇ **ಸ್ವಗೃಹಂ** ತಮ್ಮ ಮನೆಯನ್ನು ಕುರಿತು **ಆಯಯೌ** ಹೊರಟು ಹೋದರು.

ಅಂದರೆ ಈ ಅನಾದರ ಸ್ವಾಭಾವಿಕವಲ್ಲ ಸಮಯ ಬಂದಾಗ ದಯ ಮಾಡಬೇಕೆಂದು ಮನಸ್ಸಿನಲ್ಲಿಟ್ಟುಕೊಂಡು ಶಾಪವನ್ನು ಕೊಡಲಿಲ್ಲವೆಂದು ಭಾವ. **ಶ್ರೀಮತಃ ಅಪಿ ಅವಿಕ್ರಿಯಾಂ ವಿದ್ವಾನ್** ಶ್ರೀಮಂತನಾದರೂ ಮುಂದೆ ಆಗುವ ವಿಕಾರರಾಹಿತ್ಯವನ್ನು ತಿಳಿದು ಎಂದು ಹೀಗೂ ಅರ್ಥ. ||೯||

ಯದ್ಯಪಿ ಬೃಹಸ್ಪತ್ಯಾಚಾರ್ಯರಿಗಿಂತ ಇಂದ್ರನು ತಾರತಮ್ಯದಲ್ಲಿ ಉತ್ತಮನು ಆದರೂ ಪುರೋಹಿತರಾದ್ದರಿಂದ ಸಭಾಮರ್ಯಾದೆಗಾಗಿ ಗೌರವಿಸಬೇಕಿತ್ತು.

**ತರ್ಹ್ಯೇವ ಪ್ರತಿಬುದ್ಧ್ಯೇಂದ್ರೋ ಗುರುಹೇಲನಮಾತ್ಮನಃ ||**
**ಗರ್ಹಯಾಮಾಸ ಸದಸಿ ಸ್ವಯಮಾತ್ಮಾನಮಾತ್ಮನಾ ||೧೦||**

ಇಂದ್ರನು, **ತರ್ಹ್ಯೇವ** ಯಾವಾಗ ಗುರುಗಳು ಸಭಾತ್ಯಾಗ ಮಾಡಿದರೋ ಆ ಕ್ಷಣದಲ್ಲೇ **ಆತ್ಮನಃ** ತಾವು ಮಾಡಿದ **ಗುರುಹೇಲನಂ** ಗುರುಗಳ ಅವಮಾನವನ್ನು **ಪ್ರತಿಬುಧ್ಯ** ಸ್ಮರಿಸಿಕೊಂಡು **ಸ್ವಯಂ** ತಾನೇ **ಆತ್ಮಾನಂ** ತನ್ನನ್ನು **ಆತ್ಮನಾ** ತನ್ನಿಂದಲೇ ಮನಸ್ಸಿನಿಂದ **ಸದಸಿ** ಯಾವ ಸಭೆಯಲ್ಲಿ ಅವಮಾನಿಸಿದನೋ ಅದೇ ಸಭೆಯಲ್ಲಿ **ಗರ್ಹಯಾಮಾಸ** ನಿಂದಿಸಿಕೊಂಡನು.

ಇದರಿಂದ ಅಂಗಡಿ ಬೀದಿಯಲ್ಲಿ ಕಾಲಿನಿಂದ ಒದ್ದು ಏಕಾಂತದಲ್ಲಿ ಕಾಲು ಹಿಡಿಯುವ ದುರ್ನೀತಿಯನ್ನು ವಿನೀತನಾದ ಇಂದ್ರನು ಅನುಸರಿಸಲಿಲ್ಲ ಎಂಬ ವಿಷಯವನ್ನು ಪರೋಕ್ಷತಃ ಬೃಹಸ್ಪತ್ಯಾಚಾರ್ಯರು ಕೇಳಿ ಅನುಗ್ರಹ ಮಾಡಬಹುದು ಎಂದು ಇಂದ್ರನ ಮಾನಸ ಅಭಿಪ್ರಾಯ ಧ್ವನಿತವಾಗುವುದು. ||೧೦||

ತನ್ನನ್ನು ನಿಂದಿಸಿಕೊಂಡದ್ದನ್ನೇ ವಿವರಿಸುವರು-

**ಅಹೋ ಬತ ಮಯಾऽಸಾಧು ಕೃತಂ ವೈ ದಭ್ರಬುದ್ಧಿನಾ ।**
**ಯನ್ಮಯೈಶ್ವರ್ಯಮತ್ತೇನ ಗುರುಃ ಸದಸಿ ಕಾತ್ಕೃತಃ ॥೧೧॥**

**ದಭ್ರಬುದ್ಧಿನಾ** ಅಲ್ಪಮತಿಯಾದ 'ದಭ್ರಂ ಕೃಶಂ ತನು' ಇತ್ಯಮರಃ, **ಐಶ್ವರ್ಯಮತ್ತೇನ** ತ್ರಿಲೋಕಾಧಿಪತ್ಯದ ಮದ ಉಳ್ಳ **ಮಯಾ** ನನ್ನಿಂದ **ಗುರುಃ** ಗುರುಗಳು **ಸದಸಿ** ಸಭೆಯಲ್ಲಿ **ಕಾತ್ಕೃತಃ** ತಿರಸ್ಕರಿಸಲ್ಪಟ್ಟರು **ಯತ್** ಯಾವ ಕಾರಣ **ತತಃ** ಆದ್ದರಿಂದ **ಮಯಾ** ನನ್ನಿಂದ **ಅಸಾಧು ಕೃತಂ** ಅನುಚಿತವಾದುದು ಮಾಡಲ್ಪಟ್ಟಿತು **ಅಹೋ ಬತ** ಅಲ್ಲವೇ.

ಹೀಗೆ ಅನ್ವಯಿಸಿದ್ದರಿಂದ **ಮಯಾ** ಎಂಬ ಶಬ್ದ ಹೆಚ್ಚಾಗಲಾರದು. ಅಥವಾ 'ಯನ್ಮಯೈಶ್ವರ್ಯಂ' ಎಂಬುದು ಸಮಸ್ತಪದ. ಯಃ ಮಯಃ ಪ್ರಧಾನಂ ಯಸ್ಯ ತತ್ ಯನ್ಮಯಂ ಯನ್ಮಯಂ ಚ ತತ್ ಐಶ್ವರ್ಯಂ ಚ ತೇನ ಮತ್ತೇನ ಎಂದು ಮಾಡಬಹುದು. ಅಂದರೆ ಯಾವ ಪರಮಾತ್ಮಸ್ವಾಮಿಕ ಐಶ್ವರ್ಯದಲ್ಲಿ ನನ್ನ ಸ್ವಾಮಿಕವೆಂಬ ಮದ ಉಳ್ಳ ಎಂದರ್ಥ. ॥೧೧॥

**ಕೋ ಗೃಧ್ಯೇತ್ ಪಂಡಿತೋ ಲಕ್ಷ್ಮೀಂ ತ್ರಿವಿಷ್ಟಪಪತೇರಪಿ ।**
**ಯಯಾऽಹಮಾಸುರಂ ಭಾವಂ ನೀತೋऽದ್ಯ ವಿಬುಧೇಶ್ವರಃ ॥೧೨॥**

**ವಿಬುಧೇಶ್ವರಃ ಅಪಿ** ಸಾತ್ತ್ವಿಕರಾದ ದೇವತೆಗಳಿಗೆ ಒಡೆಯನಾದರೂ **ಅಹಂ** ನಾನು **ಯಯಾ** ಯಾವುದರಿಂದ **ಅದ್ಯ** ಇಂದು **ಆಸುರಭಾವಂ ನೀತಃ** ಅಸುರರ ದುಷ್ಟ ಸ್ವಭಾವವನ್ನು (ಗುರುಗಳನ್ನು ಗೌರವಿಸದಿರುವದನ್ನು) ಹೊಂದಿಸಲ್ಪಟ್ಟೆನೋ ಅಂತಹ **ತ್ರಿವಿಷ್ಟಪಪತೇಃ** ಸ್ವರ್ಗಾಧಿಪತಿಯ **ಲಕ್ಷ್ಮೀಂ** ಐಶ್ವರ್ಯವನ್ನು **ಕಃ ಪಂಡಿತಃ** ಯಾವ ಜ್ಞಾನಿಯು **ಗೃಧ್ಯೇತ್** ಇಚ್ಛಿಸಿಯಾನು. ಅಂಗೀಕರಿಸಿಯಾನು? ಯಾರೂ ಅಂಗೀಕರಿಸಲಾರರು ಎಂದು ಭಾವ.

'ಸಂಖ್ಯಾವಾನ್ ಪಂಡಿತಃ ಕವಿಃ' ಇತ್ಯಮರಃ । ತಾರಕಾದಿಃ ಅಥವಾ ಪಂಡತೇಃ ಗತ್ಯರ್ಥೇ ಕ್ತಃ ಇಟ್. ॥೧೨॥

ಸಿಂಹಾಸನವನ್ನೇರದಿರುವ ಸಾಮಾನ್ಯ ಜನರಿಗೆ ಪ್ರತ್ಯುತ್ಥಾನಾದಿಗಳನ್ನು ಜ್ಞಾನಿಗಳು ಹೇಳಿರುವರು. ನೀನಾದರೂ ಪಟ್ಟಾಭಿಷಿಕ್ತರಲ್ಲಿ ಶ್ರೇಷ್ಠನು. ಆದ್ದರಿಂದ ನೀನಗೇನು ಚಿಂತೆ

ಎಂದರೆ ಹೀಗೆ ಹೇಳುವವರು ಸರಿಯಾದ ಜ್ಞಾನಿಗಳಲ್ಲ ಎಂದು ಎರಡು ಶ್ಲೋಕದಿಂದ ಹೇಳುವರು-

**ಯೇ ಪಾರಮೇಷ್ಠ್ಯಧಿಷಣಮಧಿತಿಷ್ಠನ್ನ ಕಂಚನ ।**
**ಪ್ರತ್ಯುತ್ತಿಷ್ಠೇದಿತಿ ಬ್ರೂಯುರ್ಧರ್ಮಂ ತೇ ನ ಪರಂ ವಿದುಃ ॥೧೩॥**

**ಯೇ** ಯಾರು **ಪಾರಮೇಷ್ಠ್ಯಧಿಷಣಂ ಅಧಿತಿಷ್ಠನ್** ರಾಜಸಿಂಹಾನದಲ್ಲಿ ಕುಳಿತವನು **ನ ಕಂಚನ ಪ್ರತ್ಯುತ್ತಿಷ್ಠೇತ್** ಯಾರನ್ನೂ ಗೌರವಿಸಬೇಕಾಗಿಲ್ಲ **ಇತಿ** ಎಂದು **ಬ್ರೂಯುಃ** ಹೇಳುವರೋ **ತೇ** ಅವರು **ಪರಂ ಧರ್ಮಂ ನ ವಿದುಃ** ಉತ್ತಮವಾದ ಧರ್ಮವನ್ನು ತಿಳಿದಿಲ್ಲ. **ಧಿಷಣಂ** ಬೃಹಸ್ಪತ್ಯಾಚಾರ್ಯ ಮುಂತಾದವರನ್ನು ಕುರಿತು ಎಂದೂ ಅರ್ಥ ಮಾಡಬಹುದು.

ಊರ್ಧ್ವಂ ಪ್ರಾಣಾ ಹ್ಯುತ್ಕ್ರಾಮಂತಿ ಯೂನಃ ಸ್ಥವಿರ ಆಗತೇ ।
ಪ್ರತ್ಯುತ್ಥಾನಾಭಿವಾದಾಭ್ಯಾಂ ಪುನಸ್ತಾನ್ ಪ್ರತಿಪದ್ಯತೇ ॥

ಎಂದಿದೆ. ವಿದುಃ ಎಂಬ ಬಹುವಚನದಿಂದ 'ಶತಮಪಿ ಅಂಧಾನಾಂ ನ ಪಶ್ಯತಿ' ಎಂಬ ನ್ಯಾಯ ಸೂಚಿಸುವರು. ॥೧೩॥

**ತೇಷಾಂ ಕುಪಥದ್ರಷ್ಟ್ರೄಣಾಂ ಪತತಾಂ ತಮಸಿ ಹ್ಯಧಃ ।**
**ಯೇ ಶ್ರದ್ದಧ್ಯುರ್ವಚಸ್ತೇ ವೈ ಮಜ್ಜಂತ್ಯಶ್ಮಪ್ಲವಾ ಇವ ॥೧೪॥**

**ಕುಪಥದ್ರಷ್ಟ್ರೄಣಾಂ** ಕೆಟ್ಟ ಮಾರ್ಗವನ್ನು ಕಂಡುಕೊಂಡ ಆದ್ದರಿಂದಲೇ **ಅಧಃ ತಮಸಿ ಪತತಾಂ** ತಮಸ್ಸಿನಲ್ಲಿ ಕೆಳಗೆ ಬೀಳುವ **ತೇಷಾಂ** ಸಿಂಹಾಸನದಲ್ಲಿ ಕುಳಿತವರು **ವಚಃ** ಪಂಡಿತಮಾನಿಗಳ ಪ್ರತ್ಯುತ್ಥಾನ ಮಾಡಬೇಕಿಲ್ಲವೆಂಬ ಮಾತನ್ನು **ಯೇ** ಯಾರು **ಶ್ರದ್ದಧ್ಯುಃ** ನಂಬುವರೋ **ತೇ** ಅವರು **ಅಶ್ಮಪ್ಲವಾಃ ಇವ ಮಜ್ಜಂತಿ** ಕಲ್ಲಿನ ದೋಣಿಯಲ್ಲಿ ಕುಳಿತವನು ದೋಣಿಯೊಡನೆ ಮುಳುಗುವಂತೆ ನಿಶ್ಚಯವಾಗಿ ತಮಸ್ಸಿನಲ್ಲಿ ಮುಳುಗುವನು. **ವೈ** ಇದು ಪ್ರಮಾಣಪ್ರಸಿದ್ಧ. ॥೧೪॥

**ಅಥಾಹಮಮರಾಚಾರ್ಯಮಗಾಧಧಿಷಣಂ ದ್ವಿಜಮ್ ।**
**ಪ್ರಸಾದಯಿಷ್ಯೇ ನಿಶಠಃ ಶೀರ್ಷ್ಣಾ ತಚ್ಚರಣಂ ಸ್ಪೃಶನ್ ॥೧೫॥**

**ಅಥ** ನಾನು ಮಾಡಿದ ಕಾರ್ಯ ಅನರ್ಥಕ್ಕೆ ಕಾರಣವಾದುರಿಂದ **ಶಠಃ ಅಪಿ** ಮೊದಲು ಶಾಠ್ಯವನ್ನು ಪ್ರಕಟಿಸಿದವನಾದರೂ **ಅಹಂ** ನಾನು **ತಚ್ಚರಣಂ ಸ್ಪೃಶನ್**

ಅವರ ಕಾಲನ್ನು ಹಿಡಿದು ನಮಸ್ಕರಿಸಿ **ಶೀರ್ಷ್ಣಾ** ತಲೆಯಿಂದ **ಅಗಾಧಧಿಷಣಂ** ಗಂಭೀರವಾದ ಬುದ್ಧಿಯುಳ್ಳ **ದ್ವಿಜಂ** ಬ್ರಾಹ್ಮಣರಾದ **ಅಮರಾಚಾರ್ಯಂ** ಸುರಗುರುಗಳಾದ ಬೃಹಸ್ಪತ್ಯಾಚಾರ್ಯರನ್ನು **ಪ್ರಸಾದಯಿಷ್ಯೇ** ಪ್ರಸನ್ನೀಕರಿಸಿಕೊಳ್ಳುವೆನು. ||೧೫||

ನಿಶಠಃ ಎಂಬ ಪಾಠದಲ್ಲಿ ನ ಶಠಃ ನಿಶಠಃ ಶಠಭಿನ್ನಃ ಅಶಠಃ ಶಠರಹಿತನಾದ ಎಂದು ಅರ್ಥ ಮಾಡಬಹುದು. ಅತಿಶಠಃ ಎಂಬ ಪಾಠದಲ್ಲಿ ಶಠರನ್ನು ಮೀರಿದವನು ಎಂದು ಅರ್ಥ ಮಾಡಬಹುದು. ಆದ್ದರಿಂದ ಅತಿಶಠಃ ನಿಶಠಃ ಎಂದೂ ಮಾಡಬಹುದು. ||೧೫||

**ಏವಂ ಚಿಂತಯತಸ್ತಸ್ಯ ಮಘೋನೋ ಭಗವಾನ್ ಗೃಹಾತ್ ।**
**ಬೃಹಸ್ಪತಿರ್ಗತೋಽದೃಷ್ಟಾಂ ಗತಿಮಧ್ಯಾತ್ಮಮಾಯಯಾ ||೧೬||**

**ತಸ್ಯ ಮಘೋನಃ** ಆ ಇಂದ್ರನು **ಏವಂ ಚಿಂತಯತಃ ಸತಃ** ಈ ರೀತಿ ವಿಚಾರ ಮಾಡುತ್ತಿರಲು **ಭಗವಾನ್** ಮುಂದಾಗುವದನ್ನು ತಿಳಿದ **ಬೃಹಸ್ಪತಿಃ** ಬೃಹಸ್ಪತ್ಯಾಚಾರ್ಯರು **ಗೃಹಾತ್** ಮನೆಯಿಂದ **ಅಧ್ಯಾತ್ಮಮಾಯಯಾ** ಯೋಗ ಸಾಮರ್ಥ್ಯದಿಂದ **ಅದೃಷ್ಟಾಂ ಗತಿಂ ಗತಃ** ಯಾರಿಗೂ ಕಾಣದಿರುವ ಸ್ಥಿತಿಯನ್ನು ಹೊಂದಿದರು. ಮನೆಯಲ್ಲಿದ್ದರೂ ಯಾರಿಗೂ ಕಾಣದಾದರೆಂದು ಭಾವ.

**ವಿಶಿಷ್ಟ ಅರ್ಥ**

ಅಧ್ಯಾತ್ಮಮಾಯಯಾ ಎಂಬ ಪದದ ಸ್ವಾರಸ್ಯದಿಂದ ಗೃಹಾತ್ ಎಂದರೆ ಗೃಹೇ ಅತತೀತಿ ಗೃಹಾತ್, ಅತತೇಃ ಕ್ವಿಪ್ ಮನೆಯಲ್ಲಿಯೇ ಸಂಚರಿಸುವ ಎಂದರ್ಥ. ಮನೆಯಿಂದ ಹೊರಗೆ ಹೋಗಿ ಕಾಣಿಸದಿರಲು ಯೋಗಸಾಮರ್ಥ್ಯ ಬೇಕಿಲ್ಲ. ಆದ್ದರಿಂದ ಅದನ್ನು ಹೇಳಬೇಕಿರಲಿಲ್ಲ. ಕಾರಣ ಹೀಗೂ ಅರ್ಥ.

ಕಾಮಾಚ್ಚ ಎಂಬಲ್ಲಿ ರಾಜಾ ಪೌತ್ರಾಯಣಃ ಶೋಕಾತ್ ಶೂದ್ರಃ ಎಂಬಲ್ಲಿಯಂತೆ ಗೃಹಾತ್ ಎಂಬ ಶಬ್ದವು. ಶೋಕೇನ ಅತತೀತಿ ಶೋಕಾತ್ ಕಾಮೇನ ಅತತೀತಿ ಕಾಮಾತ್ ಎಂದೇ ಅಲ್ಲಿ ಅಭಿಪ್ರೇತವಾಗಿದೆ. ಅಲ್ಲಿಯೂ ಈ ರೀತಿ ಅರ್ಥಮಾಡದಿದ್ದರೆ 'ಅನುವಮಾ ಕಾಮಚಾರಿಣೀ' ಎಂಬ ಅನುವ್ಯಾಖ್ಯಾನಕ್ಕೆ 'ಶುಗಸ್ಯ ತದನಾದರಶ್ರವಣಾತ್ ತದಾದ್ರವಣಾತ್ ಸೂಚ್ಯತೇ' ಎಂಬಲ್ಲಿ ತತ್ತ್ವಪ್ರಕಾಶಿಕೆಯಲ್ಲಿ ಉದಾಹೃತವಾದ

**ರಾಜಾ ಪೌತ್ರಾಯಣಃ ಶೋಕಾಚ್ಛೂದ್ರೇತಿ ಮುನಿನೋದಿತಃ ।**
**ಪ್ರಾಣವಿದ್ಯಾಮವಾಪ್ಯಾಸ್ಮಾತ್ ಪರಂ ಧರ್ಮಮವಾಪ್ತವಾನ್ ॥**

ಎಂಬ ಪಾದ್ಮವಚನಕ್ಕೆ ಭಾವಭೋದದಲ್ಲಿ ಸ್ಮೃತೌ ಶೋಕಾದಿತ್ಯಸ್ಯ ಶೋಕೇನ ಆದ್ರವಣಾದಿತ್ಯರ್ಥಃ ವಾಕ್ಯದಲ್ಲಿ ದ್ರವಣ ಕೇಳಿ ಬರುವದರಿಂದ ಉನ್ಮೂಲತ್ವ ವಿಸಂವಾದಾದಿಗಳು ಬರಬೇಕಾಗುವದು ಕಾರಣ ಹೀಗೆ ಅರ್ಥ.

ಅಥವಾ 'ಲ್ಯಬ್‌ಲೋಪನಿಮಿತ್ತಾ ಪಂಚಮೀ' ಗೃಹಂ ಅಧಿಷ್ಠಾಯ ಚಿಂತಯತಃ ಎಂದಾದರೂ ಅನ್ವಯ ಮಾಡಬಹುದು. ಮನೆಯಲ್ಲಿ ಕುಳಿತು ವಿಚಾರ ಮಾಡುವಾಗ ಎಂದರ್ಥ. ॥೧೬॥

**ಗುರೋರ್ನಾಧಿಗತಃ ಸಂಜ್ಞಾಂ ಪರೀಕ್ಷನ್ಭಗವಾನ್ ಸ್ವರಾಟ್ ।**
**ಧ್ಯಾಯನ್ ಧಿಯಾ ಸುರೈರ್ಯುಕ್ತಃ ಶರ್ಮ ನಾಲಭತಾತ್ಮನಃ ॥೧೭॥**

**ಭಗವಾನ್** ಪೂಜ್ಯರಾದ **ಸ್ವರಾಟ್** ಸ್ವೇನ ರಾಜತೇ ಇತಿ ಸ್ವರಾಟ್ ತಮ್ಮಿಂದಲೇ (ಸ್ವತಂತ್ರನಾದ ಭಗವಂತನಿಂದ) ಶೋಭಿಸುವ ಇಂದ್ರದೇವರು, (ಹೀಗೆ ಮಾಡದಿದ್ದಲ್ಲಿ ಸ್ವಾರಾಡ್ ಎಂದಾಗುವದು ಹಾಗಾದರೆ ಛಂದೋಭಂಗವಾಗುವದು. ಆದ್ದರಿಂದಲೇ 'ಸ್ವಾರಾಣ್ಣಮುಚಿಸೂದನಃ' ಎಂದು ಅಮರವಿದೆ. **ಧಿಯಾ** ಬುದ್ಧಿಯಿಂದ **ಧ್ಯಾಯನ್** ವಿಚಾರ ಮಾಡುತ್ತ **ಪರೀಕ್ಷನ್** ಹುಡುಕಿಯೂ **ಗುರೋಃ** ಬೃಹಸ್ಪತಿಗಳ **ಸಂಜ್ಞಾಂ** ಜ್ಞಾನವನ್ನು ನ **ಅಧಿಗತಃ** ಹೊಂದಲಿಲ್ಲ **ಸುರೈಃ ಯುಕ್ತಃ** ದೇವತೆಗಳಿಂದ ಕೂಡಿಕೊಂಡು **ಆತ್ಮನಃ** ತಮಗೆ **ಶರ್ಮ** ಸುಖವನ್ನು ನ **ಅಲಭತ** ಹೊಂದಲಿಲ್ಲ. ॥೧೭॥

**ತಚ್ಛ್ರುತ್ವೈವಾಸುರಾಃ ಸರ್ವೇ ಆಶ್ರಿತ್ಯೌಶನಸಂ ಮತಮ್ ।**
**ದೇವಾನ್ ಪ್ರತ್ಯುದ್ಯಮಂ ಚಕ್ರುರ್ದುರ್ಮದಾ ಆತತಾಯಿನಃ ॥೧೮॥**

**ತತ್** ಬೃಹಸ್ಪತ್ಯಾಚಾರ್ಯರು ವಿಮುಖರಾದುದನ್ನು **ಶ್ರುತ್ವಾ** ಏವ ಕೇಳಿದೊಡನೆ **ಔಶನಸಂ ಮತಂ ಆಶ್ರಿತ್ಯ** ಶುಕ್ರಾಚಾರ್ಯರ ಅಭಿಪ್ರಾಯವನ್ನಾಶ್ರಯಿಸಿ **ದುರ್ಮದಾಃ** ದುಷ್ಟ ಮದದಿಂದ ಕೂಡಿದ **ಸರ್ವೇ ಅಸುರಾಃ** ಎಲ್ಲ ದೈತ್ಯರು **ಆತತಾಯಿನಃ** ಶಸ್ತ್ರಪಾಣಿಗಳಾಗಿ **ದೇವಾನ್ ಪ್ರತಿ ಉದ್ಯಮಂ ಚಕ್ರುಃ** ದೇವತೆಗಳ ಮೇಲೆ ಯುದ್ಧದ ಪ್ರಯತ್ನ ಮಾಡಿದರು. ॥೧೮॥

ಅಗ್ನಿದೋ ಗರದಶ್ಚೈವ ಶಸ್ತ್ರಪಾಣಿರ್ಧನಾಪಹಾ ।
ಕ್ಷೇತ್ರದಾರಾಪಹರ್ತಾ ಚ ಷಡೇತೇ ಹ್ಯಾತತಾಯಿನಃ ॥ ಎಂದು ಸ್ಮೃತಿ ಇದೆ.

**ತೈರ್ವಿಸೃಷ್ಟೇಷುಭಿಸ್ತೀಕ್ಷ್ಣೈರ್ನಿರ್ಭಿನ್ನಾಂಗೋರುಬಾಹವಃ ।**
**ಬ್ರಹ್ಮಾಣಂ ಶರಣಂ ಜಗ್ಮುಃ ಸಹೇಂದ್ರಾ ನತಕಂಧರಾಃ ॥೧೯॥**

**ತೈಃ** ಅಸುರರಿಂದ **ತೀಕ್ಷ್ಣೈಃ** ಚೂಪಾದ **ವಿಸೃಷ್ಟೇಷುಭಿಃ** ಬಿಡಲ್ಪಟ್ಟ ಬಾಣಗಳಿಂದ **ನಿರ್ಭಿನ್ನಾಂಗೋರುಬಾಹವಃ** ಕತ್ತರಿಸಲ್ಪಟ್ಟ ತಲೆ, ಎದೆ, ಭುಜಗಳುಳ್ಳ ದೇವತೆಗಳು **ಸಹೇಂದ್ರಾಃ** ಇಂದ್ರಸಹಿತರಾಗಿ **ನತಕಂಧರಾಃ** ಕುತ್ತಿಗೆಯನ್ನು ಕೆಳಗೆ ಮಾಡಿದವರಾಗಿ **ಬ್ರಹ್ಮಾಣಂ ಶರಣಂ ಜಗ್ಮುಃ** ಬ್ರಹ್ಮದೇವರನ್ನು ಮೊರೆ ಹೋದರು. ॥೧೯॥

**ತಾಂಸ್ತಥಾಽಭ್ಯರ್ದಿತಾನ್ ವೀಕ್ಷ್ಯ ಭಗವಾನಾತ್ಮಭೂರಜಃ ।**
**ಕೃಪಯಾ ಪರಯಾ ದೇವ ಉವಾಚ ಪರಿಸಾಂತ್ವಯನ್ ॥೨೦॥**

**ಭಗವಾನ್** ಪೂಜ್ಯರಾದ **ಆತ್ಮಭೂಃ** ಪರಮಾತ್ಮನಿಂದ ಜನಿಸಿದ **ಅಜಃ** ಬ್ರಹ್ಮದೇವರು, (ಒಂದು ಯೌಗಿಕಪದ ಮತ್ತೊಂದು ರೂಢಪದವೆಂದು ತಿಳಯಬೇಕು. ಇಲ್ಲವಾದರೆ ಪೌನರುಕ್ತ್ಯ ಬರುವದು) ಅಥವಾ ಆತ್ಮನಃ ತಮ್ಮ ಭೂಃ ಸ್ಥಾನವು ಯಸ್ಯ ಸಃ ಆತ್ಮಭೂಃ ಎಂದರೆ ಸತ್ಯಲೋಕಸ್ಥಿತರಾಗಿ ಎಂದೂ ಅರ್ಥ, ವಿಶ್ವರೂಪಾಚಾರ್ಯ ಸಂವರಣ ಮಾತ್ರದಿಂದ ನಿವಾರಣೀಯವಾದ ಆಪತ್ತಿಗೆ ವಾಸುದೇವ ನಿವಾಸಗಮನದ ಅಪೇಕ್ಷೆ ಕಾರಣವಲ್ಲವಾದ್ದರಿಂದ **ಆತ್ಮಭೂಃ** ಎಂದಿದ್ದಾರೆ. 'ಭೂಃ ಸ್ಥಾನಮಾತ್ರೇ' ಎಂದು ವಿಶ್ವವಿದೆ. **ತಥಾ** ಆ ರೀತಿ **ಅಭ್ಯರ್ದಿತಾನ್ ತಾನ್** ದುಃಖಿತರಾದ ದೇವತೆಗಳನ್ನು **ವೀಕ್ಷ್ಯ** ನೋಡಿ **ಪರಯಾ ಕೃಪಯಾ** ಬಹಳ ದಯೆಯಿಂದ **ಪರಿಸಾಂತ್ವಯನ್** ಸಮಾಧಾನ ಪಡಿಸುತ್ತ **ದೇವಃ** ಬ್ರಹ್ಮದೇವರು **ಉವಾಚ** ಮಾತನಾಡಿದರು. ॥೨೦॥

**ಬ್ರಹ್ಮೋವಾಚ -**

**ಅಹೋ ಬತ ಸುರಶ್ರೇಷ್ಠಾ ಹ್ಯಭದ್ರಂ ವಃ ಕೃತಂ ಮಹತ್ ।**
**ಬ್ರಹ್ಮಿಷ್ಠಂ ಬ್ರಾಹ್ಮಣಂ ದಾಂತಮೈಶ್ವರ್ಯಾನ್ನಾಭ್ಯನಂದತ ॥೨೧॥**

**ಸುರಶ್ರೇಷ್ಠಾಃ** ದೇವತೋತ್ತಮರೇ **ವಃ ಕೃತಂ** ನೀವು ಮಾಡಿದ ಕರ್ಮವು **ಯತ್** ಯಾವ **ಬ್ರಹ್ಮಿಷ್ಠಂ** ತಪೋನಿಷ್ಠನಾದ **ಬ್ರಾಹ್ಮಣಂ** ಜಾತ್ಯಾ ಬ್ರಾಹ್ಮಣನಾದ, ಅಥವಾ ಅಪರೋಕ್ಷಜ್ಞಾನಿಯಾದ **ದಾಂತಂ** ಇಂದ್ರಿಯನಿಗ್ರಹ ಉಳ್ಳ ಬೃಹಸ್ಪತ್ಯಾಚಾರ್ಯರನ್ನು **ಐಶ್ವರ್ಯಾತ್ ನ ಅಭ್ಯನಂದತ** ಸಂಪತ್ತಿನ ಮದದಿಂದ ಗೌರವಿಸಲಿಲ್ಲ ಅದು **ಮಹತ್ ಅಭದ್ರಂ** ದೊಡ್ಡ ಅಮಂಗಲವು.

ಶಾಪವನ್ನು ಕೊಡದೇ ಹೋದುದರಿಂದ ನೀವು ಇಷ್ಟು ಅನುಭವಿಸಬೇಕಾಯಿತು ಎಂದು ಮಾರ್ಮಿಕವಾಗಿ ದಾ್ಂತಂ ಎಂಬ ವಿಶೇಷಣದಿಂದ ಹೇಳಿರುವರು. ।।೨೦।।

**ತಸ್ಯಾಯಮನಯಸ್ಯಾಸೀತ್ಪರೇಭ್ಯೋ ವಃ ಪರಾಭವಃ ।**
**ಪ್ರಕ್ಷೀಣೇಭ್ಯಃ ಸ್ವವೈರಿಭ್ಯಃ ಸಮೃದ್ಧಾನಾಂ ಚ ಯತ್ಸುರಾಃ ।।೨೧।।**

**ಹೇ ಸುರಾಃ** ಎಲೋ ದೇವತೆಗಳೇ **ಸಮೃದ್ಧಾನಾಂ ಚ** ಸಂಪದ್ಭರಿತರಾಗಿದ್ದರೂ **ವಃ** ನಿಮಗೆ **ಪ್ರಕ್ಷೀಣೇಭ್ಯಃ** ಸಂಪತ್ತಿಲ್ಲದ **ಸ್ವವೈರಿಭ್ಯಃ** ನಿಮ್ಮಿಂದ ವಧ್ಯರಾದ **ಪರೇಭ್ಯಃ** ಶತ್ರುಗಳಿಂದ **ಯತ್ ಪರಾಭವಃ** ಯಾವ ಈ ಸೋಲಾಯಿತೋ ಅದು **ತಸ್ಯ ಅನಯಸ್ಯ** ಆ ಅನ್ಯಾಯಕ್ಕೆ ಫಲವಾಗಿ ಆಯಿತು.

**ವಿಶಿಷ್ಟ ಅರ್ಥ**

ಪರೇಭ್ಯಃ ಈಗ ಉಚ್ಚರಾದ, ಸ್ವವೈರಿಭ್ಯಃ ಸು ಅವೈರಿಭ್ಯಃ ವೈರರಹಿತರಾದ ಪರೇಭ್ಯಃ ಶತ್ರುಗಳಿಂದ ಎಂದು ಅರ್ಥ. ಅಯಮನಯಸ್ಯ ಸಕಾಶಾತ್ ಸಮೃದ್ಧಾನಾಂ ಪ್ರಾಕ್ ಮೊದಲು ಅಸದೃಶವಾದ ನ್ಯಾಯದಿಂದ ಸಮೃದ್ಧರಾದ ಎಂದೂ ಅರ್ಥ. ಆಯಮನಯಸ್ಯ ನಿತ್ಯಕರ್ಮವೆಂದು ಮಾಡಿದ ನ್ಯಾಯದಿಂದ ಸಮೃದ್ಧರಾದ ಎಂದು ಆವೃತ್ತಿ ಮಾಡಿ ಸಮೃದ್ಧಿ ಪ್ರಯೋಜಕವೆಂದು ತಿಳಿಯಬಹುದು. 'ಯಮಃ ಶರೀರ ಸಾಧನಾಪೇಕ್ಷೇ ನಿತ್ಯಕರ್ಮಣಿ' ಎಂದು ವಿಶ್ವವಿದೆ.

ದೈತ್ಯರು ಮೊದಲು ಕ್ಷೀಣರಾದರೂ ನೀವು ನ್ಯಾಯವಾಗಿ ವರ್ತಿಸಿ ಸಮೃದ್ಧರಾದರೂ ಈಗ ಅನ್ಯಾಯ ಮಾಡಿ ಅವರು ಮೇಲೆ ಬಂದು ನಿಮ್ಮನ್ನು ಸೋಲಿಸಲು ಎಡೆಮಾಡಿ ಕೊಟ್ಟಿರಿ ಎಂದು ಭಾವ. ।।೨೨।।

**ಮಘವನ್ ದ್ವಿಷತಃ ಪಶ್ಯ ಪ್ರಕ್ಷೀಣಾನ್ ಗುರ್ವತಿಕ್ರಮಾತ್ ।**
**ಸಂಪ್ರತ್ಯುಪಚಿತಾನ್ ಭೂಯಃ ಕಾವ್ಯಮಾರಾಧ್ಯ ಭಕ್ತಿತಃ ।।೨೩।।**
**ಆದದೀರನ್ ನಿಲಯನಂ ಮಮಾಪಿ ಭೃಗುದೇವತಾಃ ।।೨೪।।**

**ಮಘವನ್** ಇಂದ್ರನೇ **ಗುರ್ವತಿಕ್ರಮಾತ್** ಗುರುಗಳಾದ ಶುಕ್ರಾಚಾರ್ಯರನ್ನು ಅತಿಕ್ರಮಿಸಿದ್ದರಿಂದ **ಪ್ರಕ್ಷೀಣಾನ್** ಕ್ಷಯ ಹೊಂದಿದ **ಭೂಯಃ** ಮತ್ತೆ **ಭಕ್ತಿತಃ** ಭಕ್ತಿಯಿಂದ **ಕಾವ್ಯಂ** ಶುಕ್ರಾಚಾರ್ಯರನ್ನು **ಆರಾಧ್ಯ** ಆರಾಧಿಸಿ **ಸಂಪ್ರತಿ** ಈಗ **ಉಪಚಿತಾನ್** ಸಂಪತ್ಸಮೃದ್ಧರಾದ **ದ್ವಿಷತಃ** ಶತ್ರುಗಳನ್ನು **ಪಶ್ಯ** ನೋಡು.

ಅಪಚಯಕ್ಕೂ ಉಪಚಯಕ್ಕೂ ಗುರುತಿರಸ್ಕಾರ ಪುರಸ್ಕಾರಗಳೇ ಕಾರಣವೆಂದು ಭಾವ. ಇದಕ್ಕೆ ದೃಷ್ಟಾಂತ ಶತ್ರುಗಳಾದ ದೈತ್ಯರು. ಅವರ ಉಪಚಯವನ್ನೇ ತಿಳಿಸುವರು.

**ಭೃಗುದೇವತಾಃ** ಶುಕ್ರಾಚಾರ್ಯರೇ ದೇವತೆಗಳಾಗಿ ಉಳ್ಳ ಇವರು **ಮಮ ನಿಲಯನಂ ಅಪಿ ಆದದೀರನ್** ನನ್ನ ಮನೆಯಾದ ಸತ್ಯಲೋಕವನ್ನೂ ಕಿತ್ತುಕೊಳ್ಳುವರು.

ತಾವು ಮುಂದೆ ಹೇಳುವ ಕಾರ್ಯದಲ್ಲಿ ಪ್ರೋತ್ಸಾಹಕ್ಕಾಗಿ ಈ ರೀತಿಯಾಗಿ ಹೇಳಿದ್ದಾರೆ. ಈ ರೀತಿಯಾಗಿ ಅರ್ಥ ಮಾಡುವುದು ತ್ರಿವಿಷ್ಟಪಂ ಕಿಂ ಗಣಯಂತಿ ಎಂದು ಮುಂದೆ ಹೇಳುವ ಕೈಮುತ್ಯಕ್ಕೂ ಸಮನ್ವಯವಾಗುತ್ತದೆ. ಆದ್ದರಿಂದ ಈ ಅರ್ಥವು ಅತ್ಯಂತ ಸುಂದರವಾದದ್ದು. ॥೨೩॥

**ತ್ರಿವಿಷ್ಟಪಂ ಕಿಂ ಗಣಯಂತ್ಯಭೇದ್ಯ-**
**ಮಂತ್ರಾ ಭೃಗೂಣಾಮನುಶಿಕ್ಷಿತಾರ್ಥಾಃ ।**
**ನ ವಿಪ್ರಗೋವಿಂದಗವೀಶ್ವರಾಣಾಂ**
**ಭವಂತ್ಯಭದ್ರಾಣಿ ನರೇಶ್ವರಾಣಾಮ್ ॥೨೪॥**

**ಭೃಗೂಣಾಂ ಅನುಶಿಕ್ಷಿತಾರ್ಥಾಃ** ಶುಕ್ರಾಚಾರ್ಯರಿಂದ ತಿಳಿಸಲ್ಪಟ್ಟ ಅರ್ಥಗಳುಳ್ಳ ಅಂದರೆ ಶುಕ್ರಾಚಾರ್ಯರ ಶಿಷ್ಯರು **ಅಭೇದ್ಯಮಂತ್ರಾಃ** ಭೇದಿಸಲಾಗದ ಅಥರ್ವಣ ಮಂತ್ರಗಳುಳ್ಳವರಾಗಿ ಅಥವಾ ಅಭೇದ್ಯವಾದ ರಹಸ್ಯ ಉಳ್ಳವರಾಗಿ, 'ಮಂತ್ರೋ ವೇದ ಪ್ರೇಭೇದೇ ಸ್ಯಾದ್ದೇವಾದೀನಾಂ ಪ್ರಸಾದನೇ ಗುಪ್ತವಾದೇ ಚ' ಎಂದು ವಿಶ್ವವಿದೆ. ಅಮೋಘಮಂತ್ರಾಃ ಎಂದೂ ಕೆಲವು ಕಡೆ ಇದೆ. ಆಗಲೂ ವ್ಯರ್ಥವಾಗದ ಮಂತ್ರಗಳುಳ್ಳವರು ಎಂದೇ ಅರ್ಥವನ್ನಿಟ್ಟುಕೊಳ್ಳಬೇಕು. ಅಭೇದ್ಯಂ ಮಂತ್ರಾಃ ಎಂದು ಪಾಠವೂ ಇದೆ. ಆವಾಗ ಅಭೇದ್ಯಂ ಎಂಬುದು ತ್ರಿವಿಷ್ಟಪಕ್ಕೆ ವಿಶೇಷಣವೆಂದು ತಿಳಿಯಬೇಕು. **ಅಭೇದ್ಯಂ** ಅನ್ಯರಿಗೆ ಅಭೇದ್ಯವಾದ **ತ್ರಿವಿಷ್ಟಪಂ** ಸ್ವರ್ಗವನ್ನು **ಗಣಯಂತಿ ಕಿಂ** ಲೆಕ್ಕಿಸುವರೇ? ಅನಾಯಾಸವಾಗಿ ಕಿತ್ತಿಕೊಳ್ಳುವರೆಂದು ಭಾವ. ಸಾಮಾನ್ಯ ನ್ಯಾಯದಿಂದ ತಾವು ಹೇಳುವುದನ್ನು ದೃಢಪಡಿಸುವರು. **ವಿಪ್ರಗೋವಿಂದಗವೀಶ್ವರಾಣಾಂ** ಬ್ರಾಹ್ಮಣರು, ಗರುಡಧ್ವಜನು, ಆಕಳುಗಳು ಯಾರಿಗೆ ಈಶ್ವರರಾಗಿರುವರೋ ಅಂತಹ **ನರೇಶ್ವರಾಣಾಂ** ರಾಜರಿಗೆ **ಅಭದ್ರಾಣಿ** ಅಮಂಗಳಗಳು **ನ ಭವಂತಿ** ಆಗಲಾರವು.

ಈಗ ನಿಮಗೆ ಗುರುಗಳ ಅಪಮಾನದಿಂದ ಇಂತಹ ಗತಿ, ಗುರುಭಜನದಿಂದ ಅವರಿಗೆ ವಿಜಯ ಎಂಬುದನ್ನು ಅನ್ವಯ ವ್ಯತಿರೇಕ ಸೂಚಿತ. ಗೋವಿಂದನು ವಿಪ್ರ ಗೋಗಳಿಗೆ ಅಭಯ ಪ್ರದನಾದ್ದರಿಂದ ಮಧ್ಯದಲ್ಲಿ ಹೇಳಿರುವರು. 'ಅಲ್ಪಾಚ್‌ತರಂ ಪೂರ್ವಂ' ಎಂಬ ನಿಯಮ. 'ಆನ್ಮಹತಃ ಸಮಾನಾಧಿಕರಣಜಾತಿಯಯೋಃ' 'ಸಮುದ್ರಾಭ್ರಾದ್ಘಃ' ಮುಂತಾದ ಪ್ರಯೋಗವಿರುವದರಿಂದ ಅನಿತ್ಯವಾದುದರಿಂದಾಗಲಿ 'ಬಹುಷು ಅನಿಯಮಃ' ಎಂದಿರುವುದರಿಂದಾಗಲಿ ಗೋವನ್ನು ಕೊನೆಗೆ ಹೇಳಿದ್ದು ಯುಕ್ತ. ಪ್ರಸ್ತುತವಾದುದರಿಂದ ವಿಪ್ರ ಎಂದು ಮೊದಲು ಹೇಳಿದ್ದು. ಗಾಃ ವೇದಾದಿಶಬ್ದಗಳನ್ನು, ಗಾಃ ಆಕಳುಗಳನ್ನು, ವಿಂದತಿ ಹೊಂದಿ ಇರುತ್ತಾನೆ ಆದ್ದರಿಂದ ಭಗವಂತ ಗೋವಿಂದ ಎನಿಸಿದ್ದಾನೆ. ಬ್ರಾಹ್ಮಣರಲ್ಲಿ ಭಕ್ತಿಯು ಗೋವಿಂದನಲ್ಲಿಯ ಭಕ್ತಿಯನ್ನು ಬಿಟ್ಟು ಇರಲಾರದು ಎಂದು ತಿಳಿಸಲು ವಿಪ್ರಗೋವಿಂದ ಎಂದು ಒಟ್ಟಿಗೆ ಹೇಳಿರುವರು. ಅದು ತಾರತಮ್ಯದಿಂದ ಕೂಡಿದಾಗ ಶುಭಕರವೆಂದು ತಿಳಿಸಲು ಗೋವನ್ನು ಸೇರಿಸಿದ್ದಾರೆ.

ಇಷ್ಟು ಆಯಾಸಪಟ್ಟು ಬಂದವರಿಗೆ ಅನ್ಯಾಯದ ಫಲವಿದು ಎಂದು ಸತ್ಕರಿಸಿದ್ದಾಯಿತು ಮುಂದೆ ಗತಿ ಏನು ಎಂದರೆ ಹೇಳುವರು-

**ತದ್ವಿಶ್ವರೂಪಂ ಭಜತಾಶು ವಿಪ್ರಂ**
**ತಪಸ್ವಿನಂ ತ್ವಾಷ್ಟ್ರಮಥಾತ್ಮವಂತಮ್ ।**
**ಸಭಾಜಿತೋಽರ್ಥಾನ್ ಸ ವಿಧಾಸ್ಯತೇ ವೋ**
**ಯದಿ ಕ್ಷಮಿಷ್ಯಧ್ವಮುತಾಸ್ಯ ಕರ್ಮ ॥೨೬॥**

**ತತ್** ಗುರ್ವನುಗ್ರಹವೇ ಶ್ರೇಯಸ್ಕರವಾದುದರಿಂದ **ಆಶು** ಬೇಗನೇ, (ಆಲಸ್ಯಾದಮೃತಂ ವಿಷಂ ಎಂದಿರುವದರಿಂದ) **ವಿಪ್ರಂ** ಬ್ರಾಹ್ಮಣನಾದ **ತಪಸ್ವಿನಂ** ತಪಸ್ವಿಯಾದ **ಅಥ** ಮತ್ತು **ಆತ್ಮವಂತಂ** ಮನಸ್ವಿಯಾದ, ಪರಮಾತ್ಮ ಜ್ಞಾನಿಯಾದ **ತ್ವಾಷ್ಟ್ರಂ** ತ್ವಷ್ಟೃ ಪುತ್ರನಾದ **ವಿಶ್ವರೂಪಂ** ವಿಶ್ವರೂಪಾಚಾರ್ಯನನ್ನು **ಭಜತ** ಸೇವಿಸಿರಿ **ಸಃ** ವಿಶ್ವರೂಪಾಚಾರ್ಯರು **ಯದಿ ಅಸ್ಯ ಕರ್ಮ ಕ್ಷಮಿಷ್ಯಧ್ವಂ** ಅವರು ಮಾಡಿದ ಅಸುರ ಪಕ್ಷಪಾತವನ್ನು (ಆಂತರಂಗಿಕವಾದುದನ್ನು) ಕ್ಷಮಿಸಿದ್ದಾದರೆ **ಉಪ** ನಂತರ **ವಃ** ನಿಮಗೆ **ಸಭಾಜಿತಾರ್ಥಾನ್** ಜನರಿಂದ ಸಮ್ಮಾನಿತವಾದ ಅಭೀಷ್ಟಗಳನ್ನು **ವಿಧಾಸ್ಯತೇ** ಕೊಡುವನು. ಸಭಾಜಿತಃ ಎಂಬ ಪಾಠದಲ್ಲಿ ನಿಮ್ಮಿಂದ ಸನ್ಮಾನಿತನಾದ ಎಂದರ್ಥ.

**ವಿಶಿಷ್ಟ ಅರ್ಥ**

**ಅಥ** ಎಂಬುದರಿಂದ ತಪಸ್ವಿತ್ವಾದಿ ಗುಣಕ್ಕಿಂತ ಆತ್ಮಜ್ಞಾನವು ಉತ್ತಮ ಗುಣವೆಂದು ಅದಕ್ಕಿಂತ ಕಲ್ಯಾಣಗುಣ ಬೇರೊಂದಿಲ್ಲವೆಂದೂ **ಅರ್ಥಾನ್** ಎಂಬ ಬಹುವಚನದಿಂದ ಒಂದೇ ಪ್ರಯೋಜನವಲ್ಲ ಅಪೇಕ್ಷಿತವಾದ ಎಲ್ಲ ಪ್ರಯೋಜನಗಳನ್ನೂ ಹೊಂದಬಹುದೆಂದೂ **ವಿಧಾಸ್ಯತೇ** ಎಂದುದರಿಂದ ಈಗಷ್ಟೇ ಅಲ್ಲ ಮುಂದೆಯೂ ನಿಮ್ಮ ಇಷ್ಟಗಳನ್ನು ಸಾಧಿಸಿಕೊಡುವಲ್ಲಿ ವಿಶ್ವರೂಪಾಚಾರ್ಯನೊಬ್ಬನೇ ಸಮರ್ಥನೆಂದೂ ಸೂಚಿಸಿರುವರು. **ಯದಿ** ಎಂಬುದರಿಂದ ದೇವತೆಗಳು ವಿಶ್ವರೂಪಾಚಾರ್ಯರನ್ನು ಗೌರವಿಸುವ ರೀತಿಯನ್ನು ಹೇಳಿರುವರು.

ಸನ್ನಿವೇಶನೆಂಬ ತ್ವಷ್ಟೃವಿನ ಎರಡನೇ ಮಗನಲ್ಲವೆಂದು ತಿಳಿಸಲು ವಿಶ್ವರೂಪಂ ಎಂದಿದ್ದಾರೆ. ಅವನನ್ನು ಸ್ವೀಕರಿಸಲು ಬೇಕಾದ ಗುಣಗಳನ್ನು ತಪಸ್ವಿನಂ ಮುಂತಾಗಿ ಹೇಳಿದ್ದಾರೆ. ಅರ್ಥಾತ್ ಬೃಹಸ್ಪತಿ ಆಚಾರ್ಯರನ್ನು ಪ್ರಸನ್ನೀಕರಿಸುವ ಸಮಯ ಇದಲ್ಲವೆಂದು ಸೂಚಿಸಿರುವರು. ।।೨೫।।

**ಶ್ರೀಶುಕ ಉವಾಚ -**

**ತ ಏವಮುದಿತಾ ರಾಜನ್ ಬ್ರಹ್ಮಣಾ ವಿಗತಜ್ವರಾಃ ।**
**ಋಷಿಂ ತ್ವಾಷ್ಟ್ರಮುಪವ್ರಜ್ಯ ಪರಿಷ್ವಜ್ಯೇದಮಬ್ರುವನ್ ।।೨೭।।**

**ರಾಜನ್** ಪರೀಕ್ಷಿತನೇ **ಬ್ರಹ್ಮಣಾ** ಬ್ರಹ್ಮದೇವರಿಂದ **ಏವಂ** ಈ ರೀತಿಯಾಗಿ **ಉದಿತಾಃ** ಹೇಳಿಸಿಕೊಳ್ಳಲ್ಪಟ್ಟ **ತೇ** ದೇವತೆಗಳು **ವಿಗತಜ್ವರಾಃ** ಸಂತಾಪ ಕಳೆದವರಾಗಿ **ತ್ವಾಷ್ಟ್ರಂ ಋಷಿಂ** ತ್ವಷ್ಟೃ ಪುತ್ರರಾದ ವಿಶ್ವರೂಪಾಚಾರ್ಯರನ್ನು **ಉಪವ್ರಜ್ಯ** ಸಮೀಪಿಸಿ **ಪರಿಷ್ವಜ್ಯ** ಆಲಿಂಗಿಸಿ **ಇದಂ ಅಬ್ರುವನ್** ಮುಂದೆ ಹೇಳಿದಂತೆ ಹೇಳಿದರು.

ಇನ್ನೂ ಆಚಾರ್ಯರಾಗಿ ವರಿಸಿಲ್ಲವಾದ್ದರಿಂದ ಆಲಿಂಗನ ಯುಕ್ತವಾದುದು.

**ದೇವಾ ಊಚುಃ -**

**ವಯಂ ತೇಽತಿಥಯಃ ಪ್ರಾಪ್ತಾ ಆಶ್ರಮಂ ಭದ್ರಮಸ್ತು ತೇ ।**
**ಕಾಮಃ ಸಂಪಾದ್ಯತಾಂ ತಾತ ಪಿತೄಣಾಂ ಸಮಯೋಚಿತಃ ।।೨೭।।**

**ಅತಿಥಯಃ** ನಿನ್ನಿಂದ ಆಹೂತರಾಗದೆ ಬರುವ ಅತಿಥಿಗಳಾಗಿ **ವಯಂ** ನಾವು ಸೋದರಮಾಮಂದಿರಾದವರು **ತೇ** ನಿನ್ನ **ಆಶ್ರಮಂ** ವಾಸಸ್ಥಳಕ್ಕೆ **ಪ್ರಾಪ್ತಾಃ** ಬಂದಿದ್ದೇವೆ

**ತೇ** ನಿನಗೆ **ಭದ್ರಂ ಅಸ್ತು** ಕಲ್ಯಾಣ ಆಗಲಿ **ತಾತ** ಮಗೂ **ಪಿತ್ರ್ಯಾಣಾಂ** ನಿನ್ನ ತಂದೆಯಂತೆ ಗೌರವಾರ್ಹರಾದ ನಮ್ಮ **ಸಮಯೋಚಿತಃ** ಈ ಕಾಲಕ್ಕೆ ತಕ್ಕ **ಕಾಮಃ** ಅಪೇಕ್ಷೆಯು **ಸಂಪಾದ್ಯತಾಂ** ಪೂರೈಸಲ್ಪಡಲಿ.

ವಿಶ್ವರೂಪನ ತಂದೆಯಾದ ತ್ವಷ್ಟಾ ದೇವತೆ ಅದಿತಿಪುತ್ರ. ಆದ್ದರಿಂದ ದೇವತೆಗಳು ವಿಶ್ವರೂಪಾಚಾರ್ಯರಿಗೆ ಪಿತೃವ್ಯ ಪಿತೃ ಸಮರಾಗಿದ್ದಾರೆ. ದಿತಿಯ ಮಗಳಾದ ರಚನಾ ವಿಶ್ವರೂಪ ಪತ್ನಿ ಭಿನ್ನೋದರರಾದವರು, ಅವಳ ಅಣ್ಣಂದಿರೆ ದೇವತೆಗಳು. ಹೀಗಾಗಿ ವಿಶ್ವರೂಪಾಚಾರ್ಯರಿಗೆ ದೇವತೆಗಳು ಸೋದರಮಾವಂದಿರೂ ಅಹುದು.

**ಪುತ್ರಾಣಾಂ ಹಿ ಪರೋ ಧರ್ಮಃ ಪಿತೃಶುಶ್ರೂಷಣಂ ಸತಾಮ್ ।**
**ಅಪಿ ಪುತ್ರವತಾಂ ಬ್ರಹ್ಮನ್ ಕಿಮುತ ಬ್ರಹ್ಮಚಾರಿಣಾಮ್ ॥೨೮॥**

**ಸತಾಂ ಪುತ್ರಾಣಾಂ** ಒಳ್ಳೆ ಮಕ್ಕಳಿಗೆ **ಪಿತೃಶುಶ್ರೂಷಣಂ** ತಂದೆಯ ಸೇವೆಯು **ಪರೋ ಧರ್ಮಃ** ಮುಖ್ಯಧರ್ಮವು **ಪುತ್ರವತಾಂ ಅಪಿ ಪುತ್ರಾಣಾಂ** ಮಕ್ಕಳನ್ನು ಪಡೆದು ಪಿತೃಋಣದಿಂದ ಮುಕ್ತರಾದ ಮಕ್ಕಳಿಗೂ ಇದು ಧರ್ಮ ಅಂದ ಮೇಲೆ **ಬ್ರಹ್ಮನ್** ವಿಶ್ವರೂಪನೇ **ಕಿಮುತ ಬ್ರಹ್ಮಚಾರಿಣಾಂ** ಪುತ್ರೋತ್ಪಾದನೆ ಮಾಡದಿರುವದರಿಂದ ಪಿತೃಋಣ ಮೋಚನವಾಗದ ಬ್ರಹ್ಮಚಾರಿಗಳಾದ ಮಕ್ಕಳಿಗೆ ಇದು ಮುಖ್ಯಧರ್ಮವೆಂದು ಬೇರೆ ಹೇಳಬೇಕಿಲ್ಲ. ಕೈಮುತ್ಯಸಿದ್ಧ. ಕಂಸಾದಿಗಳಂಥವರ ವ್ಯಾವೃತ್ತಿಗೆ ಸತಾಂ ಎಂದಿರುವರು. ॥೨೮॥

**ಆಚಾರ್ಯೋ ಬ್ರಹ್ಮಣೋ ಮೂರ್ತಿಃ ಪಿತಾ ಮೂರ್ತಿಃ ಪ್ರಜಾಪತೇಃ ।**
**ಭ್ರಾತಾ ಮರುತ್ಪತೇರ್ಮೂರ್ತಿರ್ಮಾತಾ ಸಾಕ್ಷಾತ್ ಕ್ಷಿತೇಸ್ತನುಃ ॥೩೦॥**

**ಆಚಾರ್ಯಃ** ಉಪನಯನ ಮಾಡಿ ವೇದಗಳನ್ನು ಕಲಿಸಿದವನು, 'ಶಿಷ್ಯಂ ಅಧ್ಯಾಪಯತಿ ಯಃ ಕೃತ್ವೋಪನಯನಾದಿಕಮ್ । ಸಹ ಕಲ್ಪರಹಸ್ಯಾಭ್ಯಾಮಾಚಾರ್ಯಃ ಸ ನಿಗದ್ಯತೇ' ಎಂದಿದೆ. **ಬ್ರಹ್ಮಣಃ ಚತುರ್ಮುಖಸ್ಯ ಮೂರ್ತಿಃ** ಬ್ರಹ್ಮದೇವರ ಮುಖ್ಯ ಅಧಿಷ್ಠಾನನಾಗಿದ್ದಾನೆ. (ಗುರುಃ ಬ್ರಹ್ಮಾऽಖಿಲಸ್ಯ) **ಪಿತಾ** ತಂದೆಯು **ಪ್ರಜಾಪತೇಃ** ರುದ್ರದೇವರ ಅಧಿಷ್ಠಾನನು **ಭ್ರಾತಾ** ಅಣ್ಣನು **ಮರುತ್ಪತೇಃ** ವಾಯುದೇವರ ಇಂದ್ರನ **ಮೂರ್ತಿಃ** ಅಧಿಷ್ಠಾನನಾಗಿದ್ದಾನೆ. **ಸಾಕ್ಷಾತ್ ಮಾತಾ** ಪಡೆದ ತಾಯಿಯು **ಕ್ಷಿತೇಃ ತನುಃ** ಭೂದೇವಿಗೆ ಅಧಿಷ್ಠಾನಳು.

'ಪ್ರಜಾಪತಿಃ ಶಿವಃ ಸ್ಥಾಣುರುಮೇಶೊ ವೃಷವಾಹನಃ' ಎಂದು ಅಭಿಧಾನವಿದೆ. ಭೂಮಿಯು ಎಲ್ಲವನ್ನು ಸಹಿಸುವಳು. ತಾಯಿಯು ಕೂಡ ಕಾಲಿನಿಂದ ಒದೆಯುವದೇ ಮುಂತಾದ ಎಲ್ಲ ದುರ್ವರ್ತನವನ್ನು ಸಹಿಸುವಳು ಕಾರಣ ಅಲ್ಪಳಲ್ಲ. ಆದ್ದರಿಂದ ಸಾಕ್ಷಾತ್ ತಾನು ಭೂಮಿಗೆ ಸಮಾನಳಾದ ಶರೀರಳು. 'ಸಾಕ್ಷಾತ್ ಪ್ರತ್ಯಕ್ಷತುಲ್ಯಯೋಃ' ಎಂದಿದೆ.

**ದಯಾಯಾ ಭಗಿನೀ ಮೂರ್ತಿರ್ಧರ್ಮಸ್ಯಾತ್ಮಾಽತಿಥಿಃ ಸ್ವಯಮ್ ।**
**ಅಗ್ನೇರಭ್ಯಾಗತೋ ಮೂರ್ತಿಃ ಸರ್ವಭೂತಾನಿ ಚಾತ್ಮನಃ ॥೩೦॥**

**ಭಗಿನೀ** ಅಕ್ಕ **ದಯಾಯಾಃ** ದಯಾಭಿಮಾನಿ ದೇವತೆಗೆ **ಮೂರ್ತಿಃ** ಅಧಿಷ್ಠಾನಳು **ಅತಿಥಿಃ** ಕುಲ-ಗೋತ್ರ ತಿಳಿಯದೇ ಆ ಕ್ಷಣದಲ್ಲಿಯೇ ಬಂದವನು **ಸ್ವಯಂ** ಸಾಕ್ಷಾತ್ **ಧರ್ಮಸ್ಯ** ಯಮಧರ್ಮನ **ಆತ್ಮಾ** ಅಧಿಷ್ಠಾನನು **ಅಭ್ಯಾಗತಃ** ಬಾಂಧವರು ಕುಲ-ಗೋತ್ರ ತಿಳಿದು ಗ್ರಾಮಾಂತರದಿಂದ ಬಂದವರು **ಅಗ್ನೇಃ ಮೂರ್ತಿಃ** ಅಗ್ನಿಗೆ ಅಧಿಷ್ಠಾನರು **ಸರ್ವಭೂತಾನಿ** ಎಲ್ಲ ಪ್ರಾಣಿಗಳೂ **ಆತ್ಮನಃ** ಪರಮಾತ್ಮನ **ಮೂರ್ತಿಃ** ಅಧಿಷ್ಠಾನರು, 'ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾಂತರಾತ್ಮಾ' 'ತ್ರೀನ್ ಲೋಕಾನ್ ವ್ಯಾಪ್ಯ ಭೂತಾತ್ಮಾ' ಮುಂತಾದ ಶ್ರುತಿ-ಸ್ಮೃತಿಗಳಿವೆ. ಅಂತೂ ಆಚಾರ್ಯ ಮುಂತಾದವರನ್ನು ಪೂಜಿಸುವದರಿಂದ ಅಲ್ಲಿ ಸನ್ನಿಹಿತರಾದ ಬ್ರಹ್ಮಾದಿದೇವತೆಗಳು ಪ್ರೀತರಾಗುವರೆಂದು ಭಾವ. ।।೩೦।।

**ತಸ್ಮಾತ್ಪಿತೄಣಾಮಾರ್ತಾನಾಮಾರ್ತಿಂ ಪರಪರಾಭವಾಮ್ ।**
**ತಪಸಾಽಪನಯಂಸ್ತಾತ ಸಂದೇಶಂ ಕರ್ತುಮರ್ಹಸಿ ॥೩೧॥**

**ತಸ್ಮಾತ್** ಪಿತೃಪೂಜೆಯಿಂದ ದೇವತೆಗಳ ಪ್ರೀತಿಯಾಗುವುದರಿಂದ **ಪಿತೄಣಾಂ** ತಂದೆಗಳಾದ ನಮ್ಮ **ಪರಪರಾಭವಾಂ** ಶತ್ರುಗಳಿಂದ ಉಂಟಾದ ಸೋಲೆಂಬ **ಆರ್ತಿಂ** ದುಃಖವನ್ನು **ತಪಸಾ** ತಪಃಸಾಮರ್ಥ್ಯದಿಂದ **ಅಪನಯನ್** ದೂರೀಕರಿಸಿ **ತಾತ** ಮಗೂ **ಸಂದೇಶಂ** ನಮ್ಮ ಆಜ್ಞೆಯನ್ನು **ಕರ್ತುಂ ಅರ್ಹಸಿ** ಪಾಲಿಸಲು ಯೋಗ್ಯನಾಗಿರುವಿ.

**ವೃಣೀಮಹೇ ತ್ವೋಪಾಧ್ಯಾಯಂ ಬ್ರಹ್ಮಿಷ್ಠಂ ಬ್ರಾಹ್ಮಣಂ ಗುರುಮ್ ।**
**ಯಥಾಂಜಸಾ ವಿಜೇಷ್ಯಾಮಃ ಸಪತ್ನಾಂಸ್ತವ ತೇಜಸಾ ॥೩೨॥**

**ಯಥಾ** ಹೇಗೆ **ತವ** ನಿನ್ನ **ತೇಜಸಾ** ಸಾಮರ್ಥ್ಯದಿಂದ **ಸಪತ್ನಾನ್** ಶತ್ರುಗಳನ್ನು **ಅಂಜಸಾ** ಸಂಪೂರ್ಣವಾಗಿ **ವಿಜೇಷ್ಯಾಮಃ** ಗೆಲ್ಲುವವೋ **ತಥಾ** ಹಾಗೆ **ಬ್ರಹ್ಮಿಷ್ಠಂ**

ಶ್ರೀಹರಿನಿಷ್ಠನಾದ **ಬ್ರಾಹ್ಮಣಂ** ಬ್ರಹ್ಮಜ್ಞಾನಿಯಾದ **ಗುರುಂ** ಗುರುವಾದ **ತ್ವಾಂ** ನಿನ್ನನ್ನು, (ಚಿಕ್ಕವನಾದರೂ) **ಉಪಾಧ್ಯಾಯಂ** ಪುರೋಹಿತನನ್ನಾಗಿ **ವೃಣೀಮಹೇ** ಸ್ವೀಕರಿಸುತ್ತೇವೆ. ಇದೇ ನಮ್ಮ ಸಂದೇಶ. ।।೩೨।।

ನಿಮಗೆ ನಾನು ಪುರೋಹಿತನಾದರೆ ಚಿಕ್ಕವನಾದ ನನಗೆ ನಮಸ್ಕರಿಸುವಿರಿ ಅದು ನಿಂದಿತ ಎಂದರೆ ಹೇಳುವರು-

**ನ ಗರ್ಹಯಂತಿ ಹ್ಯರ್ಥೇಷು ಯವಿಷ್ಠಾಂಘ್ರ್ಯಭಿವಾದನಮ್ ।**
**ಛಂದೋಭ್ಯೋಽನ್ಯತ್ರ ನ ಬ್ರಹ್ಮನ್ ವಯೋಜ್ಯೈಷ್ಠ್ಯಸ್ಯ ಕಾರಣಮ್ ।।**

**ಅರ್ಥೇಷು** ಪ್ರಯೋಜನಕ್ಕಾಗಿ **ಯವಿಷ್ಠಾಂಘ್ರ್ಯಭಿವಾದನಂ** ಚಿಕ್ಕವರ ಕಾಲಿಗೆರಗುವದನ್ನು **ನ ಗರ್ಹಯಂತಿ** ಶಾಸ್ತ್ರ ತಿಳಿದವರು ನಿಂದಿಸುವದಿಲ್ಲ. **ಹಿ** ಇದು ಶಾಸ್ತ್ರಸಿದ್ಧವಾಗಿದೆ. ಅಲ್ಲದೇ **ಛಂದೋಭ್ಯಃ ಅನ್ಯತ್ರ** ವೇದಜ್ಞಾನವಿಲ್ಲದೇ **ವಯಃ** ಕೇವಲ ವಯಸ್ಸು **ಜ್ಯೈಷ್ಠ್ಯಸ್ಯ** ಹಿರಿಯತನಕ್ಕೆ **ನ ಕಾರಣಂ** ಪ್ರಯೋಜಕವಲ್ಲ. ವೇದಗಳೇ ಮುಖ್ಯ ಕಾರಣ, ವೇದಗಳು ಇದ್ದಾಗ ವಯಸ್ಸೂ ಕಾರಣ **ಬ್ರಹ್ಮನ್** ವಿಶ್ವರೂಪನೇ, ನೀನು ವೇದಜ್ಞನಾದ್ದರಿಂದ ನಮಗಿಂತ ಹಿರಿಯನೆಂದು ಅಭಿಪ್ರಾಯ. ಛಂದೋಭ್ಯಃ ಎಂಬ ಪದದಿಂದ ವೇದಾರ್ಥಜ್ಞಾನ ತೆಗೆದುಕೊಳ್ಳಬೇಕು. ಪಾಂಡವರು ಧೌಮ್ಯಾಚಾರ್ಯರಿಗೆ ನಮಸ್ಕರಿಸಿರುವದು ಕಂಡಿದೆ. ಅಥವಾ ಛಂದೋಭ್ಯಃ ಅನ್ಯತ್ರ ಅಂದರೆ ಲಕ್ಷಣಯಾ ವೇದಾಧಿಕಾರ ಉಳ್ಳ ತ್ರೈವರ್ಣಿಕರಿಂದ ಭಿನ್ನರಾದ ಶೂದ್ರಾದಿಗಳಲ್ಲಿ ವಯಃ ಜ್ಯೈಷ್ಠ್ಯಸ್ಯ ಕಾರಣಂ ವಯಸ್ಸು ಹಿರಿತನಕ್ಕೆ ಕಾರಣವೆಂಬುದನ್ನು **ನೋ ಗರ್ಹಯಂತಿ** ನಿಂದಿಸುವದಿಲ್ಲ ಅದು ಸಮ್ಮತ. ಬ್ರಾಹ್ಮಣರಲ್ಲಿ ಜ್ಞಾನವೆಂಬ ಗುಣವೇ ಶ್ರೇಷ್ಠತೆಗೆ ಕಾರಣ. 'ಸರ್ವಾ ದೇವತಾ ವೇದವಿದಿ ಬ್ರಾಹ್ಮಣೇ ವಸಂತಿ' ಮುಂತಾಗಿ ಇದೆ. ಗುಣವಂತನಾದ ಕನಿಷ್ಠನಿಗೂ ದೊಡ್ಡವರು ನಮಸ್ಕರಿಸುವದು ಯುಕ್ತ. ಶಂತನು ಮುಂತಾದವರಲ್ಲಿ ಕಂಡಿದೆ. 'ಗುಣಜ್ಯೇಷ್ಠಶ್ಚ ಶಂತನುಃ' ಎಂದು ಆಚಾರ್ಯರು ಹೇಳಿರುವರು. ।।೩೩।।

**ಋಷಿರುವಾಚ -**

**ಅಭ್ಯರ್ಥಿತಃ ಸುರಗಣೈಃ ಪೌರೋಹಿತ್ಯೇ ಮಹಾತಪಾಃ ।**
**ಸ ವಿಶ್ವರೂಪಸ್ತಾನಾಹ ಪ್ರಸನ್ನಃ ಶ್ಲಕ್ಷ್ಣಯಾ ಗಿರಾ ।।೩೪।।**

**ಸುರಗಣೈಃ** ದೇವತೆಗಳ ಸಮೂಹಗಳಿಂದ **ಪೌರೋಹಿತ್ಯೇ** ಪೌರೋಹಿತ್ಯ ಮಾಡಲು **ಅಭ್ಯರ್ಥಿತಃ** ಯಾಚಿತರಾದ **ಮಹಾತಪಾಃ** ದೊಡ್ಡ ತಪಸ್ವಿಯಾದ **ಸಃ ವಿಶ್ವರೂಪಃ** ಆ ವಿಶ್ವರೂಪಾಚಾರ್ಯರು **ಪ್ರಸನ್ನಃ** ಸಂತುಷ್ಟರಾಗಿ **ಶ್ಲಕ್ಷ್ಣಯಾ** ಮಧುರವಾದ **ಗಿರಾ** ಮಾತುಗಳಿಂದ **ತಾನ್ ಆಹ** ದೇವತೆಗಳಿಗೆ ಹೇಳಿದರು. ।।೩೪।।

**ವಿಶ್ವರೂಪ ಉವಾಚ -**

**ವಿಗರ್ಹಿತಂ ಧರ್ಮಶೀಲೈರ್ಬ್ರಹ್ಮವರ್ಚ ಉಪವ್ಯಯಮ್ ।**
**ಕಥಂ ನು ಮದ್ವಿಧೋಽನಾಥಾಃ ಲೋಕೇಶೈರಭಿಯಾಚಿತಃ ।।**
**ಪ್ರತ್ಯಾಖ್ಯಾಸ್ಯತಿ ತಚ್ಛಿಷ್ಯಃ ಸ ಏವ ಸ್ವಾರ್ಥ ಉಚ್ಯತೇ ।।೩೫।।**

**ಹೇ ನಾಥಾಃ** ಒಡೆಯರೇ **ಧರ್ಮಶೀಲೈಃ** ಕೇವಲ ಧಾರ್ಮಿಕ ಕಾರ್ಯಮಾಡುವ ಸ್ವಭಾವದ ಧಾರ್ಮಿಕರಿಂದ **ವಿಗರ್ಹಿತಂ** ಶ್ವಾನಯೋನಿಗೆ ಕಾರಣವೆಂದು ನಿಂದಿತವಾದ ಏಕೆಂದರೆ **ಬ್ರಹ್ಮವರ್ಚ ಉಪವ್ಯಯಂ** ಬ್ರಹ್ಮ ವರ್ಚಸ್ಸಿನ ನಾಶಕವಾದ (ಪೌರೋಹಿತ್ಯದಲ್ಲಿ ದುಷ್ಪ್ರತಿಗ್ರಹ ಅವರ್ಜನೀಯ ಆದ್ದರಿಂದ ವರ್ಚಸ್ಸಿನ ನಾಶವಾಗುವದೆಂದು ಭಾವ.) ಅಥವಾ **ಬ್ರಹ್ಮ** ತಪಸ್ಸು **ವರ್ಚಃ** ಕಾಂತಿ ಅವುಗಳ ನಾಶಕ ಅಥವಾ **ವರ್ಚಸಃ** ರೂಪದ **ಉಪವ್ಯಯಃ** ನಾಶಕ, ಬ್ರಹ್ಮಣಃ ವರ್ಚ ಉಪವ್ಯಯಃ ಯಸ್ಮಾತ್ ಎಂದರೆ ಬ್ರಹ್ಮ ರೂಪನಾಶಕವಾದುದೆಂದರ್ಥ. ಪೌರೋಹಿತ್ಯವನ್ನು **ಲೋಕೇಶೈಃ** ಲೋಕಪಾಲಕರಿಂದ **ಅಭಿಯಾಚಿತಃ** ಆದರದಿಂದ ಯಾಚಿಸಲ್ಪಟ್ಟು **ಮದ್ವಿಧಃ** ನನ್ನಂಥವನು **ಕಥಂ ಪ್ರತ್ಯಾಖ್ಯಾಸ್ಯತಿ** ಹೇಗೆ ನಿರಾಕರಿಸುವನು **ಯಃ ಶಿಷ್ಯಃ** ಯಾವನು ಶಾಸನ ಮಾಡಲು ಅನುಕೂಲವಾದ ಸಂಬಂಧವುಳ್ಳವನು ನಿನಗೇನು ನಿರಾಕರಿಸು ಎಂದರೆ **ಸ ಏವ** ನಿರಾಕರಿಸುವದು ಸ್ವಾರ್ಥವಾಗುವದು. ಅಥವಾ **ತಚ್ಛಿಷ್ಯಃ** ಎಂಬ ಪಾಠದಲ್ಲಿ ಲೋಕೇಶರ ಶಿಕ್ಷಣಾರ್ಹನಾದ ನಾನು ಹೇಗೆ ನಿರಾಕರಿಸಲು ಸಾಧ್ಯ ನಿರಾಕರಿಸಲಾಗದು. ಬೇರೆಯವರ ಕೆಲಸ ನಿರಾಕರಣ ಮಾಡು ಎಂದರೆ **ಸ ಏವ ಸ್ವಾರ್ಥ ಉಚ್ಯತೇ** ನಿರಾಕರಿಸದಿರುವದೇ ಶಿಷ್ಯನಿಗೆ ಪ್ರಯೋಜನಕಾರಿ ಎಂದು ಹೇಳಲ್ಪಟ್ಟಿದೆ.

ಬ್ರಹ್ಮವರ್ಚಸ್ಸು ನಾಶವಾಗುವದರಿಂದ ಧರ್ಮಶೀಲರಿಂದ ಪೌರೋಹಿತ್ಯವು ನಿಂದಿತವಾಗಿದ್ದರೂ ನಾನು ನಿಮ್ಮ ಶಿಷ್ಯನೆಂದು ಹೇಳಿದ ಮೇಲೆ ಗುರುಗಳ ಆಜ್ಞೆಯನ್ನು ಉಲ್ಲಂಘಿಸಿದರೆ ದೋಷ ಬರುವದು ಎಂದಂತಾಯಿತು. ದೋಷ ತಪ್ಪಿಸಿಕೊಳ್ಳುವದು ಶಿಷ್ಯನ ಸ್ವಾರ್ಥ, ಆದ್ದರಿಂದ ನನ್ನ ಪ್ರಯೋಜನಕ್ಕಾಗಿಯೂ ನಾನು ತಿರಸ್ಕರಿಸುವಂತಿಲ್ಲ.

'ಪೌರೋಹಿತ್ಯಂ ಚಾರ್ಚಕತ್ವಂ ಮಾಠಾಪತ್ಯಂ ತಥೈವ ಚ । ಯಃ ಕರೋತಿ ಸ ದೇವ್ಯೋऽಪಿ ಶ್ವಾನಯೋನಿಂ ಸಮಶ್ನುತೇ' ಎಂದು ಕರ್ಮವಿಪಾಕ ಗ್ರಂಥದಲ್ಲಿ ಹೇಳಿದೆ. ।।೩೫।।

ಪೌರೋಹಿತ್ಯದಿಂದ ಧನ ಬರುವದು. ಆದರಿಂದ ಧರ್ಮ ಮಾಡಬಹುದು. ನಿರ್ಧನಿಕ ಧರ್ಮ ಮಾಡುಲಾಗುವದಿಲ್ಲವಲ್ಲವೆ? ಆದ್ದರಿಂದಲೇ ಪೌರೋಹಿತ್ಯದಿಂದ ಜನರು ಸಂತೋಷ ಪಡುವರು. ಬರೀ ಔಪಚಾರಿಕ ಮಾತೇಕೆ? ನಿನ್ನ ಜೀವನೋಪಾಯವಾದರೂ ಏನು? ಎಂದರೆ ಈವರೆಗೆ ಹೀಗೆ ಜೀವಿಸಿದೆನೆಂದು ಹೇಳುವರು-

**ಅಕಿಂಚನಾನಾಂ ಹಿ ಧನಂ ಶಿಲೋಂಛನಂ**
**ಸ ತೇನ ನಿರ್ವರ್ತಿತಸಾಧುಸತ್ಕ್ರಿಯಃ ।**
**ಕಥಂ ವಿಗರ್ಹ್ಯಂ ತು ಕರೋಮ್ಯಧೀಶ್ವರಾಃ**
**ಪೌರೋಧಸಂ ಹೃಷ್ಯತಿ ಯೇನ ದುರ್ಮತಿಃ ।।೩೬।।**

**ಹೇ ಅಧೀಶ್ವರಾಃ** ಲೋಕಪಾಲಕರೇ **ಶಿಲೋಂಛನಂ** ಗದ್ದೆಯ ಮಾಲಿಕನು ಉದಾಸೀನ ಮಾಡಿ ಬಿಟ್ಟ ಒಂದೊಂದೆ ತೆನೆಯನ್ನು ತೆಗೆದುಕೊಳ್ಳುವದು ಶಿಲವೃತ್ತಿ, ಕೈಜಾರಿಬಿದ್ದ ಕಾಳುಗಳನ್ನಾರಿಸುವದು ಉಂಛವೃತ್ತಿ ಇವುಗಳು **ಅಕಿಂಚನಾನಾಂ** ಶ್ರೀಹರಿಯನ್ನು ಬಿಟ್ಟು ಬೇರೆ ಯಾವದೂ ಇಲ್ಲದ, 'ಅರ್ಥೇ ನಾರಾಯಣೋ ದೇವಃ ಸರ್ವಮನ್ಯತ್ ತದರ್ಥಕಂ' ಎಂಬ ಅನುಸಂಧಾನ ಉಳ್ಳವರಿಗೆ ಭಗವದ್ಭಕ್ತರಿಗೆ **ಧನಂ ಹಿ** ಧರ್ಮಸಾಧನ ಹಣವಷ್ಟೇ **ತೇನ** ಆ ಶಿಲೋಂಛ ವೃತ್ತಿಗಳಿಂದ **ನಿರ್ವರ್ತಿತ-ಸಾಧುಸತ್ಕ್ರಿಯಃ** ಸಾಧುಗಳ ಸತ್ಯವಾದ (ನಿತ್ಯವಾದ) ಅಗ್ನಿಹೋತ್ರಾದಿಗಳನ್ನು ಚೆನ್ನಾಗಿ ಮಾಡಿಕೊಂಡು ಬರುತ್ತಿರುವ **ಸಃ** ನಾನು **ಯೇನ** ಯಾವ ಪೌರೋಹಿತ್ಯ ವೃತ್ತಿಯಿಂದ **ದುರ್ಮತಿಃ** ಅಮಂಗಲ ಬುದ್ಧಿಯುಳ್ಳವನು, ಸಂಸಾರನಿರ್ವಾಹ ಮಾಡದೇ, ದುಃಖಿತವಾದ ಬುದ್ಧಿಯುಳ್ಳವನು **ಹೃಷ್ಯತಿ** ಹರ್ಷಗೊಳ್ಳುವನೋ **ತತ್** ಅಂತಹ **ವಿಗರ್ಹ್ಯಂ** ಶಾಸ್ತ್ರನಿಂದಿತವಾದ **ಪೌರೋಧಸಂ** ಪುರೋಹಿತವೃತ್ತಿಯನ್ನು **ಕಥಂ ತು ಕರೋಮಿ** ಹೇಗೆ ತಾನೆ ಮಾಡಲಿ. ಪ್ರತಿಗ್ರಹಾದಿಗಳಿಂದ ಜೀವಿಸದ ನಾನು ಆ ಬಗೆಯ ಜೀವನಕ್ಕೆ ಹೇಗೆ ಮನಸ್ಸು ಮಾಡಲಿ ಎಂದು ಅಭಿಪ್ರಾಯ. ।।೩೬।।

ಇಷ್ಟು ಕಷ್ಟಪಟ್ಟು ಬಂದವರಿಗೆ ನಿರಾಶೆಯೇ ಪ್ರಾಯಃ ಎಂದುಕೊಂಡ ದೇವತೆಗಳ ಶಂಕೆ ಪರಿಹರಿಸಿ ಪ್ರೋತ್ಸಾಹಿಸುವರು ವಿಶ್ವರೂಪಾಚಾರ್ಯರು-

**ತಥಾಽಪಿ ನ ಪ್ರತಿಬ್ರೂಯಾಂ ಗುರುಭಿಃ ಪ್ರಾರ್ಥಿತಂ ಕಿಯತ್ ।**
**ಭವತಾಂ ಪ್ರಾರ್ಥಿತಂ ಸರ್ವಂ ಪ್ರಾಣೈರರ್ಥೈಶ್ಚ ಸಾಧಯೇ ॥೩೭॥**

**ತಥಾಪಿ** ಆದರೂ **ನ ಪ್ರತಿಬ್ರೂಯಾಂ** ನಾನೇನು ಪ್ರತಿಯಾಗಿ ಮಾತನಾಡುವದಿಲ್ಲ **ಗುರುಭಿಃ** ಹಿರಿಯರಾದ ನಿಮ್ಮಿಂದ **ಪ್ರಾರ್ಥಿತಂ** ಬೇಡಿದುದಾದರೂ **ಕಿಯತ್** ಎಷ್ಟು ಮಹಾ, ಅತ್ಯಲ್ಪವೇ ಎಂದು ಭಾವ. ನೀವು ಕೇಳಿದ್ದು ಅಲ್ಪವೆಂದು ಒಂದು ಕಡೆ ಧಿಕ್ಕಾರದ ಮಾತು, ಮತ್ತೊಂದು ಕಡೆ ಮಾಡುವದಿಲ್ಲವೆಂದು ಹೇಳುವದಿಲ್ಲವೆಂದು ಗೌರವ ಪ್ರದರ್ಶನ ಅಂದ ಮೇಲೆ ನಿರ್ಣಯವೇನು? ಎಂದರೆ ಹೇಳುವರು. **ಭವತಾಂ ಪ್ರಾರ್ಥಿತಂ ಸರ್ವಂ** ನಿಮ್ಮಿಂದ ಅಪೇಕ್ಷಿತವಾದ ಎಲ್ಲವನ್ನು ಕೇಳಿದ್ದಕ್ಕಿಂತ ಹೆಚ್ಚಿನದನ್ನೂ **ಪ್ರಾಣೈಃ** ನನ್ನ ಪ್ರಾಣಗಳಿಂದಲೂ **ಅರ್ಥೈಃ** ನನ್ನ ಸರ್ವಸ್ವದಿಂದಲೂ **ಸಾಧಯೇ** ಸಾಧಿಸಿ ಕೊಡುವೆನು. ಪೌರೋಹಿತ್ಯ ಮಾತ್ರವಲ್ಲ ಎಲ್ಲ ಕಾರ್ಯ ಮಾಡುವೆನೆಂದು ಭಾವ.

**ವಿಶಿಷ್ಟ ಅರ್ಥ**

ಕಿಯತ್ ಎಂಬ ಪದದಿಂದ ತನ್ನ ಎಲ್ಲ ಸಾಮರ್ಥ್ಯ ಉಪಯೋಗಿಸದೇ ಈ ಕಾರ್ಯ ಶಕ್ಯವೆಂದು ಸೂಚಿಸುವರು.

ಪ್ರಾರ್ಥಿತಂ ಪ್ರಗತಂ ಅರ್ಥಿತಂ ಪ್ರಾರ್ಥಿತಂ ನೀವು ಸಂಕಲ್ಪಿಸದಿರುವದನ್ನೂ ಎಂದರ್ಥ. ಹೀಗೆ ಮಾಡಿದ್ದರಿಂದ ಪ್ರಾರ್ಥಿತಪದ ಪುನರುಕ್ತವಾಗಲಿಲ್ಲ. ಸಾಧಯೇ ಆಧಿಸಹಿತನಾದ ಆಧಿ ಎಂದರೆ ಮನೋವ್ಯಥೆ ಎಂದರ್ಥ. ಸಾಧಿ ಎಂದರೆ ಮನೋವ್ಯಥೆಯಿಂದ ಸಹಿತನಾದ ಮಹೇಂದ್ರನಿಗೂ ಎಂದರ್ಥ. ಮುಂದೆ ಹೇಳುವ ಪ್ರಕಾರ ಮರಣಕಾರಣವೆಂದು ಸೂಚಿಸಲು ಪ್ರಾಣೈಃ ಎಂದು ಮೊದಲು ಹೇಳಿದ್ದು.

**ಶ್ರೀಶುಕ ಉವಾಚ -**

**ತೇಭ್ಯ ಏವಂ ಪ್ರತಿಶ್ರುತ್ಯ ವಿಶ್ವರೂಪೋ ಮಹಾತಪಾಃ ।**
**ಪೌರೋಹಿತ್ಯಂ ತತಶ್ಚಕ್ರೇ ಪರಮೇಣ ಸಮಾಧಿನಾ॥೩೮॥**

**ತೇಭ್ಯಃ** ದೇವತೆಗಳಿಗೆ **ಏವಂ** ಈ ರೀತಿಯಾಗಿ **ಪ್ರತಿಶ್ರುತ್ಯ** ಪ್ರತಿಜ್ಞೆಮಾಡಿ **ತತಃ** ಅನಂತರ **ಮಹಾತಪಾಃ** ತಪಸ್ವಿಯಾದ **ವಿಶ್ವರೂಪಃ** ವಿಶ್ವರೂಪಾಚಾರ್ಯರು **ಪರಮೇಣ ಸಮಾಧಿನಾ** ಮಹಾ ಪ್ರಯತ್ನದಿಂದ ಏಕಾಗ್ರತೆಯಿಂದ **ಪೌರೋಹಿತ್ಯಂ ಚಕ್ರೇ** ಪೌರೋಹಿತ್ಯವನ್ನು ಮಾಡಿದರು. ॥೩೮॥

**ಸುರದ್ವಿಷಾಂ ಶ್ರಿಯಂ ಗುಪ್ತಾಮೌಶನಸ್ಯಾಪಿ ವಿದ್ಯಯಾ ।**
**ಆಚ್ಛಿದ್ಯಾದಾನ್ಮಹೇಂದ್ರಾಯ ವೈಷ್ಣವ್ಯಾ ವಿದ್ಯಯಾ ವಿಭುಃ ॥೪೦॥**

**ಔಶನಸ್ಯಾ** ಶುಕ್ರಸಂಬಂಧಿಯಾದ **ವಿದ್ಯಯಾ** ವಿದ್ಯೆಯಿಂದ **ಗುಪ್ತಾಂ ಅಪಿ** ರಕ್ಷಿತವಾಗಿದ್ದರೂ **ಸುರದ್ವಿಷಾಂ** ಅಸುರರ **ಶ್ರಿಯಂ** ಸಂಪತ್ತನ್ನು **ವಿಭುಃ** ಸಮರ್ಥರಾದ ವಿಶ್ವರೂಪಾಚಾರ್ಯರು **ವೈಷ್ಣವ್ಯಾ ವಿದ್ಯಯಾ** ವಿಷ್ಣು ದೇವತಾಕವಾದ ನಾರಾಯಣ ಕವಚದಿಂದ **ಆಚ್ಛಿದ್ಯ** ಬಲಾತ್ಕಾರದಿಂದ ಕಿತ್ತುಕೊಂಡು **ಮಹೇಂದ್ರಾಯ** ಇಂದ್ರನಿಗೆ **ಅದಾತ್** ಕೊಟ್ಟರು.

ಮೇಲಿನ **ವಿದ್ಯಯಾ** ಎಂಬುದೇ ಅನ್ವಯವಾಗುವಾಗ ಮತ್ತೆ ವಿದ್ಯಯಾ ಎಂದು ಹೇಳಿ ಯಾವ ವಿದ್ಯೆಯಿಂದ ತಾನು ಜ್ಞಾನಿಯು ವಿಭುವು ಆದನೋ ಆವೈಷ್ಣವ ವಿದ್ಯೆಯಿಂದ ಎಂದೂ ಸೂಚಿಸಿರುವರು.

**ಯಯಾ ಗುಪ್ತಃ ಸಹಸ್ರಾಕ್ಷೋ ಜಿಗ್ಯೇ ಸುರಚಮೂರ್ವಿಭುಃ ।**
**ತಾಂ ಪ್ರಾಹ ಸ ಮಹೇಂದ್ರಾಯ ವಿಶ್ವರೂಪ ಉದಾರಧೀಃ ॥೪೧॥**

**ಯಯಾ** ಯಾವ ವಿದ್ಯೆಯಿಂದ **ಗುಪ್ತಃ** ರಕ್ಷಿತನಾದ **ಸಹಸ್ರಾಕ್ಷಃ** ಇಂದ್ರನು **ವಿಭುಃ** ಸಮರ್ಥನಾದ **ಅಸುರಚಮೂಃ** ದೈತ್ಯರ ಸೈನ್ಯವನ್ನು **ಜಿಗ್ಯೇ** ಗೆದ್ದನೋ **ತಾಂ** ಆ ವಿದ್ಯೆಯನ್ನು **ಉದಾರಧೀಃ** ಉದಾರ ಮನಸ್ಸಿನ **ಸಃ ವಿಶ್ವರೂಪಃ** ಆ ವಿಶ್ವರೂಪಾಚಾರ್ಯರು **ಮಹೇಂದ್ರಾಯ** ಇಂದ್ರನಿಗೆ **ಪ್ರಾಹ** ಹೇಳಿದರು.

**ಯಾಂ ಪ್ರವಿಶ್ಯಾಸುರಾನ್ ಶಶ್ವತ್ ಕಕ್ಷ್ಯಾಂ ನಾರಾಯಣಾತ್ಮಿಕಾಮ್ ।**
**ಅಜೈಷೀದ್ ವೃಷಭಸ್ತಾತ ಸಿಂಹಃ ಕ್ಷುದ್ರಮೃಗಾನಿವ॥೪೨॥**

॥ ಇತಿ ಶ್ರೀಮದ್ಭಾಗವತೇ ಷಷ್ಠಸ್ಕಂಧೇ ಸಪ್ತಮೋಽಧ್ಯಾಯಃ ॥

**ತಾತ** ಪರೀಕ್ಷಿತನೇ **ಯಾಂ** ಯಾವ **ನಾರಾಯಣಾತ್ಮಿಕಾಂ** ನಾರಾಯಣನ ಸ್ವರೂಪವಾದ **ಕಕ್ಷ್ಯಾಂ** ಕವಚವನ್ನು (ರಕ್ಷೆಯನ್ನು) **ಪ್ರವಿಶ್ಯ** ಪ್ರವೇಶಿಸಿ **ವೃಷಭಃ** ಶ್ರೇಷ್ಠರಾದ ಇಂದ್ರದೇವರು **ಸಿಂಹಃ** ಸಿಂಹವು **ಕ್ಷುದ್ರಮೃಗಾನಿವ** ಸಣ್ಣ ಪ್ರಾಣಿಗಳನ್ನು ಜಯಿಸುವಂತೆ **ಶಶ್ವತ್** ಸರ್ವಕಾಲದಲ್ಲಿಯೂ **ಅಸುರಾನ್** ದೈತ್ಯರನ್ನು **ಅಜೈಷೀತ್** ಜಯಿಸಿದರೋ, ಅಂತಹ ವಿದ್ಯೆಯನ್ನು ಉಪದೇಶಿಸಿದರು ಎಂದನ್ವಯ. ॥೪೧॥

ಇಲ್ಲಿಗೆ ಏಳನೇ ಅಧ್ಯಾಯವು ಮುಗಿಯಿತು

# ಅಥ ಶ್ರೀಮದ್ಭಾಗವತೇ - ಷಷ್ಠಸ್ಕಂಧೇ

# ಅಷ್ಟಮೋಽಧ್ಯಾಯಃ

**ಅಧ್ಯಾಯ ಸಾರ**

ಪರೀಕ್ಷಿತ ಹೇಳಿದ. ಪೂಜ್ಯರಾದ ಶುಕಾಚಾರ್ಯರೇ ! ನಾರಾಯಣವರ್ಮದಿಂದ ಪರಿರಕ್ಷಿತನಾಗಿ ಇಂದ್ರನು ಅಸುರರನ್ನು ಜಯಿಸಿ ತ್ರೈಲೋಕ್ಯಸಂಪತ್ತನ್ನು ಮತ್ತೆ ಪಡೆದ. ಅಂತಹ ನಾರಾಯಣವರ್ಮವನ್ನು ನನಗೆ ಉಪದೇಶ ಮಾಡಿರಿ.

ಶುಕಾಚಾರ್ಯರು ಹೇಳಿದರು. ಇಂದ್ರ ವಿಶ್ವರೂಪಾಚಾರ್ಯರನ್ನು ಪುರೋಹಿತರನ್ನಾಗಿ ವರಿಸಿದ. ಇಂದ್ರದೇವರ ಪ್ರಾರ್ಥನೆಯಂತೆ ನಾರಾಯಣ-ವರ್ಮವನ್ನು ಉಪದೇಶಮಾಡಿದ. ಅದನ್ನು ಏಕಾಗ್ರಮನಸ್ಕನಾಗಿ ಶ್ರವಣಮಾಡು.

ಅನಾವೃಷ್ಟ್ಯಾದಿರೂಪವಾದ ದೈವಭಯವು, ಉನ್ಮಾದಾದಿರೂಪವಾದ ಭೂತಭಯಗಳು, ಕುಷ್ಠ-ಭಗಂಧರಾದಿರೂಪವಾದ ದೈಹಿಕಭಯಗಳು ಪ್ರಾಪ್ತವಾದಾಗ ಅವುಗಳ ಪರಿಹಾರಕ್ಕಾಗಿ ನಾರಾಯಣಕವಚವನ್ನು ಬಂಧನ ಮಾಡಿಕೊಳ್ಳಬೇಕು.

ಈ ನಾರಾಯಣವರ್ಮವನ್ನು ಜಪಿಸುವವನು ಪರಮಶುದ್ಧನಾಗಬೇಕು. ಕೈ-ಕಾಲುಗಳನ್ನು ತೊಳೆದುಕೊಳ್ಳಬೇಕು. ಆಚಮನವನ್ನು ಮಾಡಬೇಕು. ಪವಿತ್ರವನ್ನು ಕೈಯಲ್ಲಿ ಧರಿಸಬೇಕು. ಉತ್ತರಕ್ಕೆ ಮುಖ ಮಾಡಿ ಕುಳಿತುಕೊಳ್ಳಬೇಕು. ಅಷ್ಟಾಕ್ಷರದಿಂದ ಅಂಗನ್ಯಾಸವನ್ನು ಮಾಡಿಕೊಳ್ಳಬೇಕು. ದ್ವಾದಶಾಕ್ಷರದಿಂದ ಕರನ್ಯಾಸವನ್ನು ಮಾಡಿಕೊಳ್ಳಬೇಕು.

ಮತ್ತು ವಿಷ್ಣುಷಡಕ್ಷರಮಂತ್ರದಿಂದ ಹೃದಯಾದಿನ್ಯಾಸವನ್ನು ಮಾಡಕೊಳ್ಳಬೇಕು. ನಂತರ ಈ ನಾರಾಯಣವರ್ಮರೂಪವಾದ ಮಂತ್ರವನ್ನು ಪಠಿಸಬೇಕು.

ಗರುಡಾರೂಢನಾಗಿದ್ದಾನೆ ಪರಮಾತ್ಮ. ಸೃಷ್ಟ್ಯಾದ್ಯಷ್ಟಕರ್ತೃವಾಗಿದ್ದಾನೆ. ಅಷ್ಟಬಾಹುಗಳಿಂದ ವಿರಾಜಿನ್ನಾಗಿದ್ದಾನೆ. ಆ ಅಷ್ಟ ಬಾಹುಗಳಲ್ಲಿ ಶಂಖ-ಚಕ್ರ-ಖಡ್ಗ-ಚರ್ಮ-ಗದಾ-ಬಾಣ-ಧನುಃ-ಪಾಶಗಳನ್ನು ಧರಿಸಿದ್ದಾನೆ. ಇಂತಹ ಪರಮಾತ್ಮ ಸರ್ವತ್ರ ಸರ್ವರಿಂದ ಸಂರಕ್ಷಿಸಲಿ.

ಮತ್ಸ್ಯರೂಪಿಯಾದ ಪರಮಾತ್ಮ ನೀರಿನಲ್ಲಿ ಜಲಚರಪ್ರಾಣಿಗಳಿಂದ ವರುಣಪಾಶದಿಂದ ಸಂರಕ್ಷಿಸಲಿ. ಸ್ಥಲದಲ್ಲಿ ವಟುವಾದ ವಾಮನ, ಆಕಾಶದಲ್ಲಿ ವಿಶ್ವರೂಪಿಯಾದ ತ್ರಿವಿಕ್ರಮ ನನ್ನನ್ನು ಸಂರಕ್ಷಿಸಲಿ.

ದುರ್ಗಮವಾದ ಪ್ರದೇಶಗಳಲ್ಲಿ ನರಸಿಂಹ, ಮಾರ್ಗದಲ್ಲಿ ವರಾಹ, ಪರ್ವತದ ಶಿಖರಗಳಲ್ಲಿ ಪರಶುರಾಮ, ಪ್ರವಾಸದಲ್ಲಿ ದಾಶರಥಿ ಶ್ರೀರಾಮ, ಎಲ್ಲ ವಿಧವಾದ ಪ್ರಮಾದಗಳಿಂದ ನಾರಾಯಣ, ಉನ್ಮಾದದಿಂದ ಹಾಸ್ಯಕ್ರೀಡಾಗದಂತೆ ನರಾವಿಷ್ಟನಾದ ನರರೂಪಿಯಾದ ಪರಮಾತ್ಮ, ಶ್ರೀಹರಿಸ್ಮರಣವೈಕಲ್ಯರೂಪವಾದ ಪ್ರಮಾದದಿಂದ ದತ್ತರೂಪಿಯಾದ ಪರಮಾತ್ಮ, ಕರ್ಮರೂಪವಾ ಬಂಧನದಿಂದ ಕಪಿಲ ರೂಪಿಯಾದ ಪರಮಾತ್ಮ ನನ್ನನ್ನು ಸಂರಕ್ಷಿಸಲಿ.

ಅಯೋಗ್ಯವಾದ ಸ್ತ್ರೀ-ಮದ್ಯಾದಿವಿಷಯಗಳ ಸೇವನೆಯಿಂದ ಸನತ್ಕುಮಾರ, ಮಾರ್ಗಮಧ್ಯದಲ್ಲಿಯ ದೇವಾಲಯಗಳಲ್ಲಿಯ ದೇವತೆಗಳಿಗೆ ಗೌರವಿಸದೇ ಹೋದ ಪಾಪದಿಂದ ಹಯಗ್ರೀವ, ವಿಷ್ಣುಪರಿವಾರ ಎಂದು ಚಿಂತಿಸದೇ ಪ್ರಧಾನವಾಗಿ ದೇವತೆಗಳನ್ನು ಪೂಜಿಸುವುದರಿಂದ ಬಂದ ಪಾಪದಿಂದ ಮಹಿದಾಸ, ಅಶೇಷನರಕಗಳಿಂದ ಕೂರ್ಮನು ನನ್ನನ್ನು ಸಂರಕ್ಷಿಸಲಿ.

ಶಾರೀರಿಕರೋಗಗಳಿಗೆ ಕಾರಣವಾದ ಅಪಥ್ಯದಿಂದ ಧನ್ವಂತರಿ, ಶೀತೋಷ್ಣ ಮೊದಲಾದ ದ್ವಂದ್ವಭಯದಿಂದ ಋಷಭ, ನಶ್ವರಸ್ವರ್ಗಾದಿಲೋಕದಿಂದ ಯಜ್ಞ, ಕ್ರುದ್ಧವಾದ ಸರ್ಪಗಣಗಳಿಂದ ಬಲರಾಮನಲ್ಲಿ ಆವಿಷ್ಟನಾದ ಶುಕ್ಲಕೇಶರೂಪಿಯಾದ ಪರಮಾತ್ಮ, ಅಜ್ಞಾನ-ವಿಪರೀತಜ್ಞಾನಗಳಿಂದ ವೇದವ್ಯಾಸ, ಪಾಷಂಡಶಾಸ್ತ್ರಗಳ ಶ್ರವಣದಿಂದ ಬುದ್ಧ, ಕಲಿಮಲದಿಂದ ಕಲ್ಕಿಯು ನನ್ನನ್ನು ಸಂರಕ್ಷಿಸಲಿ.

ಪ್ರಾತಃಕಾಲದಲ್ಲಿ ಕೇಶವನು ಗದಾಧಾರಿಯಾಗಿ ನನ್ನನ್ನು ರಕ್ಷಿಸಲಿ. ಸಂಗವಕಾಲದಲ್ಲಿ ಗೋವಿಂದ, ಯಾವಾಗಲೂ ನಾರಾಯಣ, ಮಧ್ಯಾಹ್ನದಲ್ಲಿ ವಿಷ್ಣು, ಅಪರಾಹ್ಣದಲ್ಲಿ ಮಧುಸೂದನ, ಸಾಯಂಕಾಲ ಮಾಧವ, ರಾತ್ರಿಭೋಜನಕಾಲದಲ್ಲಿ ಹೃಷೀಕೇಶ,

ನಿಶೀಥಕ್ಕಿಂತಲೂ ಪೂರ್ವಕಾಲದಲ್ಲಿ ಮತ್ತು ನಿಶೀಥದಲ್ಲಿ ಪದ್ಮನಾಭನೊಬ್ಬನೇ ನನ್ನನ್ನು ಸಂರಕ್ಷಿಸಲಿ.

ಅರುಣೋದಯದಲ್ಲಿ ಜನಾರ್ದನ, ಸಂಧ್ಯಾಸಮೀಪವರ್ತಿಯಾದ ಕಾಲದಲ್ಲಿ ದಾಮೋದರ, ಪ್ರಭಾತದಲ್ಲಿ ಕಾಲಮೂರ್ತಿಯು ನನ್ನನ್ನು ಕಾಪಾಡಲಿ.

ಹೇ ಚಕ್ರವೇ! ಅಗ್ನಿಯು ಒಣಗಿದ ಅರಣ್ಯವನ್ನು ದಹಿಸುವಂತೆ ನನ್ನ ಶತ್ರುಗಳನ್ನು ನೀನು ಸಂಹರಿಸು. ಹೇ ಗದೆಯೇ ! ನೀನು ಕೂಷ್ಮಾಂಡಾದಿ ಗ್ರಹಗಳನ್ನು, ನನ್ನ ಶತ್ರುಗಳನ್ನು ಪುಡಿ ಪುಡಿ ಮಾಡಿಹಾಕು. ಎಲೈ ಶಂಖವೇ ! ಶ್ರೀಕೃಷ್ಣಪರಮಾತ್ಮನಿಂದ ಪೂರಿತವಾದ ನೀನು ಶತ್ರುಗಳ ಹೃದಯಗಳಲ್ಲಿ ಭೀತಿಯನ್ನು ಹುಟ್ಟಿಸುತ್ತಾ ಯಾತುಧಾನಾದಿಗಳನ್ನು ನನ್ನ ಶತ್ರುಗಳನ್ನು ದೂರ ದೂರ ಓಡಿಸು. ಹೇ ಚರ್ಮವೇ ! ಶತ್ರುಸೈನ್ಯವನ್ನು ಛೇದಿಸುತ್ತಾ ಹೋಗು. ಪಾಪಿಗಳಾದ ನಮ್ಮ ಪಾಪಗಳನ್ನು ಪರಿಹರಿಸು.

ಷಡ್ಗುಣ್ಯೈಶ್ವರ್ಯಸಂಪನ್ನನಾದ ನರಸಿಂಹನು ಶತ್ರುಭೀಕರವಾದ ಧ್ವನಿಯಿಂದ ಸಜ್ಜನರ ಭಯವನ್ನು ಪರಿಹರಿಸುತ್ತಾ ಎಲ್ಲ ಕಡೆ ನನ್ನನ್ನು ಸಂರಕ್ಷಿಸಲಿ.

ಹೇ ಇಂದ್ರನೇ ! ಇದು ನಾರಾಯಣಕವಚ. ನಿನಗೆ ಉಪದೇಶ ಮಾಡಿದ್ದೇನೆ. ಈ ನಾರಾಯಣಕವಚದಿಂದ ನೀನು ಬದ್ಧನಾಗು. ನಿಶ್ಚಿತವಾಗಿಯೂ ಶತ್ರುಗಳನ್ನು ಸುಲಭವಾಗಿ ಜಯಿಸುತ್ತಿ.

ಯಾರು ಈ ಕವಚವನ್ನು ಎಲ್ಲ ಕಾಲದಲ್ಲಿಯೂ ಪಠಿಸುತ್ತಾರೋ ಅವನು ಸಿದ್ಧಪುರುಷ. ಅವನು ಯಾರನ್ನು ಕಣ್ಣಿನಿಂದ ನೋಡುವನೋ, ತನ್ನ ಪಾದಗಳಿಂದ ಯಾರನ್ನು ಸ್ಪರ್ಶಮಾಡುತ್ತಾನೋ ಅವನು ಎಲ್ಲ ಭಯಗಳಿಂದ ಪ್ರಮುಕ್ತನಾಗುತ್ತಾನೆ.

ಈ ವಿದ್ಯೆಯನ್ನು ಧರಿಸಿದವರಿಗೆ ರಾಜ-ಕಳ್ಳ-ಗ್ರಹಾದಿಗಳಿಂದ ಭಯಗಳು ಬರಲಾರವು. ಯಾವ ವ್ಯಾಧಿಗಳಿಂದಲೂ ಯಾವ ಪ್ರಸಂಗದಲ್ಲಿಯೂ ಪೀಡಿತನಾಗಲಾರ.

ಹಿಂದಕ್ಕೆ ಕುಶಿಕಗೋತ್ರೋತ್ಪನ್ನನಾದ ಬ್ರಾಹ್ಮಣನೊಬ್ಬ ಈ ಕವಚವನ್ನು ಜಪಿಸಿ ಸಿದ್ಧನಾಗಿದ್ದ. ನಿರ್ಜಲ ಪ್ರದೇಶದಲ್ಲಿ ಯೋಗದಿಂದ ತನ್ನ ಶರೀರವನ್ನು ಪರಿತ್ಯಜಿಸಿದ. ಒಂದು ಬಾರಿ ಚಿತ್ರರಥನೆಂಬ ಮಹಾಬಲಶಾಲಿಯಾದ ಗಂಧರ್ವ ಸ್ತ್ರೀಯರಿಂದ ಪರಿವೃತನಾಗಿ ವಿಮಾನದಿಂದ ಸಂಚರಿಸುತ್ತಾ ಇದ್ದ. ಈ ಬ್ರಾಹ್ಮಣನ ಅಸ್ಥಿಗಳ ಮೇಲೆ

ಆಕಾಶದಲ್ಲಿ ಹೋಗುವ ಪ್ರಸಂಗ ಅವನಿಗೆ ಬಂತು. ಆದರೆ ಈ ಅಸ್ಥಿಗಳನ್ನು ದಾಟಲಾಗಲಿಲ್ಲ. ಅಲ್ಲಿಂದಲೇ ಅಂಗನೆಯರಿಂದ ಕೂಡಿಕೊಂಡು ವಿಮಾನಸಹಿತವಾಗಿಯೇ ಕೆಳಗೆ ಬಿದ್ದ. ವಾಲಖಿಲ್ಯಋಷಿಗಳಿಂದ ಕಾರಣವನ್ನು ತಿಳಿದುಕೊಂಡ. ನಾರಾಯಣವರ್ಮದ ಸಾಮರ್ಥ್ಯವನ್ನು ಪ್ರತ್ಯಕ್ಷವಾಗಿ ಅನುಭವಿಸಿ ವಿಸ್ಮಿತನಾದ. ಆ ಬ್ರಾಹ್ಮಣನ ಅಸ್ಥಿಗಳನ್ನು ಪೂರ್ವಸರಸ್ವತಿಯಲ್ಲಿ ವಿಸರ್ಜಿಸಿದ. ಸ್ನಾನ ಮಾಡಿ ತನ್ನ ಮನೆಗೆ ಹೊರಟು ಹೋದ.

ಯಾರು ಈ ನಾರಾಯಣವರ್ಮವನ್ನು ಕೇಳುತ್ತಾರೋ, ಯಾರು ಉಪದೇಶಮಾಡುತ್ತಾರೋ, ಯಾರು ಈ ನಾರಾಯಣವರ್ಮವನ್ನು ಧರಿಸುತ್ತಾರೋ ಅವರು ಎಲ್ಲ ವಿಧವಾದ ಭಯಗಳಿಂದ ಮುಕ್ತರಾಗುತ್ತಾರೆ. ಈ ನಾರಾಯಣವರ್ಮವನ್ನು ಪಠಿಸಿದ ಇಂದ್ರ ದೈತ್ಯರನ್ನು ಅನಾಯಾಸವಾಗಿ ಜಯಿಸಿದ. ತ್ರೈಲೋಕ್ಯಲಕ್ಷ್ಮಿಯನ್ನು ಮತ್ತೆ ಪಡೆದು ಸುಖಿಯಾದ.

★★★★★

ಅಕಾಮನಾಗಲಿ ಸರ್ವಕಾಮನಾಗಲಿ ಮೋಕ್ಷಕಾಮನಾಗಲಿ ಶ್ರೀಹರಿಯನ್ನು ಪೂಜಿಸಬೇಕು ಎಂದು ಹೇಳಿದ್ದನ್ನು ಈ ಅಧ್ಯಾಯದಲ್ಲಿ ವಿವರಿಸುತ್ತಾರೆ. ಹಿಂದಿನ ಅಧ್ಯಾಯದಲ್ಲಿ ತಿಳಿಸಿದ್ದ ನಾರಾಯಣಕವಚವೆಂಬ ಸ್ತೋತ್ರವನ್ನು ಲೋಕೋಪಕಾರಕ್ಕಾಗಿ ವಿಸ್ತಾರವಾಗಿ ಹೇಳಲು ರಾಜರು ಪ್ರಶ್ನಿಸುವರು.

ಈ ಮಂತ್ರವೇ ಸಾಧನವಾಗಿ ಉಳ್ಳ ತನ್ನ ಅಜ್ಜನ ಅಂಶಿಯಾದ ಇಂದ್ರನ ಮಾಹಾತ್ಮ್ಯವನ್ನು ಕೇಳಿದ ರಾಜರಿಗೆ ವರ್ಣಿಸಲ್ಪಟ್ಟ ಈ ವರ್ಮದಿಂದ ಮಾಡುವ ಕ್ರಿಯೆಗಳಿಂದ ಬಾಹ್ಯಶತ್ರುಗಳ ಸಂಹಾರಾದಿಗಳಿಲ್ಲದಿದ್ದರೂ ಮರಣೋನ್ಮುಖನಾದ ತನಗೆ ಉಪದೇಶದ ನೆಪದಿಂದ ತನ್ನ ಆಜ್ಞಾಧಾರಿಗಳಾದ ಇತರರನ್ನು ಉದ್ಧಾರ ಮಾಡಲು ಈ ಪ್ರಶ್ನೆ ಯುಕ್ತವೆಂದು ತಿಳಿದ ಪರೀಕ್ಷಿತನು ಶುಕಾಚಾರ್ಯರನ್ನು ಪ್ರಶ್ನಿಸುವನೆಂದು ಹೇಳುವರು-

**ರಾಜೋವಾಚ -**

> **ಯಯಾ ಗುಪ್ತಃ ಸಹಸ್ರಾಕ್ಷಃ ಸವಾಹಾನ್ ರಿಪುಸೈನಿಕಾನ್ ।**
> **ಕ್ರೀಡನ್ನಿವ ವಿನಿರ್ಜಿತ್ಯ ತ್ರಿಲೋಕ್ಯಾ ಬುಭುಜೇ ಶ್ರಿಯಮ್ ॥೧॥**




**ಯಯಾ** ಯಾವ ವರ್ಮದಿಂದ **ಗುಪ್ತಃ** ರಕ್ಷಿತನಾದ **ಸಹಸ್ರಾಕ್ಷಃ** ಇಂದ್ರನು **ಸವಾಹಾನ್** ವಾಹನಸಹಿತರಾದ **ರಿಪುಸೈನಿಕಾನ್** ಶತ್ರುಸೈನಿಕರನ್ನು **ಕ್ರೀಡನ್ನಿವ** ಆಟವಾಡುವಂತೆ ಅನಾಯಾಸವಾಗಿ **ವಿನಿರ್ಜಿತ್ಯ** ಗೆದ್ದು **ತ್ರಿಲೋಕ್ಯಾಃ ಶ್ರಿಯಂ** ಮೂರು ಲೋಕಸಂಬಂಧಿಯಾದ ಸಂಪತ್ತನ್ನು **ಬುಭುಜೇ** ಅನುಭವಿಸಿದನು. ।।೧।।

**ವಿಶಿಷ್ಟ ಅರ್ಥ**

ಅಪಕಾರ ಮಾಡದೆ ಅಸುರರನ್ನು ಸಂಹರಿಸಿದರೆ ಸುರರಿಗೆ ಅಕೌಶಲತೆ ಎಂಬ ಸಂಶಯವನ್ನು ಪರಿಹರಿಸಲು ಹೀಗೆ ಅರ್ಥ ಮಾಡುವರು. ಸವಾಹಾನ್ ಸವಾನ್ ತಮ್ಮ ಉದ್ದೇಶದಿಂದ ಮಾಡಿದ ಯಜ್ಞಗಳನ್ನು ಆಹರಂತೀತಿ, ಹಾಪಯಂತೀತಿ, ಸವಾಹಾಃ ತಾನ್ ಸವಾಹಾನ್ ಕಿತ್ತು ಕೊಳ್ಳುವ ಅಥವಾ ಬಿಡಿಸುವ ಅಸುರರನ್ನು ಎಂದರ್ಥ. ಹರತೇಃ ಜಹಾತೇರ್ವಾ ಆಜಪೂರ್ವಾಡ್ಡಃ, ಹರತೇಃ ಜಹಾತೇರ್ವಾ ಡಃ । ದ್ವಾವಪಿ ಆಜಪೂರ್ವೌ ಎಂದು ಸ್ವಾಹಾ ಶಬ್ದ ವ್ಯಾಖ್ಯಾನ ಮಾಡುವಾಗ ಸುಧೆಯಲ್ಲಿ ಹೇಳಿದೆ. 'ಸ್ವಾಹಾ ಯಜ್ಞಂ' ಎಂಬ ಋಗ್ಭಾಷ್ಯ-ಟೀಕಾಗಳಲ್ಲಿ ಸ್ವಾಹಾ ಸ್ವಭಾಗಗತಿಮಾನ್ ಸ್ಮೃತೇಃ । ಸ್ವಭಾಗಗತಿಮಾನ್ ಮುಂತಾಗಿ ಹೇಳಿದೆ. ।।೧।।

**ಭಗವಂಸ್ತನ್ಮಮಾಖ್ಯಾಹಿ ವರ್ಮ ನಾರಾಯಣಾತ್ಮಕಮ್ ।**
**ಯಥಾತತಾಯಿನಃ ಶತ್ರೂನ್ ಯೇನ ಗುಪ್ತೋಽಜಯನ್ ಮೃಧೇ ।।೨।।**

**ಭಗವನ್** ಪೂಜ್ಯರೇ **ತತ್** ಆ **ನಾರಾಯಣಾತ್ಮಕಂ** ನಾರಾಯಣ ದೇವತಾಕವಾದ, 'ತಥಾ ಪ್ರಾಣಾತ್ಮಕೌ' ಎಂಬ ಭಾಷ್ಯದ ತತ್ತ್ವಪ್ರಕಾಶಿಕೆಯಲ್ಲಿ 'ಪ್ರಾಣಾತ್ಮಕೌ ಪ್ರಾಣದೈವತ್ಯೌ' ಎಂದು ವ್ಯಾಖ್ಯಾನಿಸಿದ್ದಾರೆ. ಔಪಚಾರಿಕವಾಗಿ ನಾರಾಯಣ ಸ್ವರೂಪವಾದ **ವರ್ಮ** ಕವಚವನ್ನು **ಮಮ** ನನಗೆ **ಆಖ್ಯಾಹಿ** ಹೇಳಿರಿ. **ಯೇನ** ಯಾವ ವರ್ಮದಿಂದ **ಗುಪ್ತಃ** ರಕ್ಷಿತನಾಗಿ **ಯಥಾ** ಯಾವ ರೀತಿಯಿಂದ **ಆತತಾಯಿನಃ** ಶಸ್ತ್ರಧಾರಿಗಳಾದ **ಶತ್ರೂನ್** ಶತ್ರುಗಳನ್ನು **ಮೃಧೇ** ಯುದ್ಧದಲ್ಲಿ **ಅಜಯತ್** ಗೆದ್ದರೋ **ತತ್** ಆ ಪ್ರಕಾರವನ್ನೂ ಹೇಳಿರಿ. **ಯೇನ** ಜ್ಞಾನಿಯಾದ ಪ್ರಾಚೀನ ಗುರುವಿನಿಂದ **ಗುಪ್ತಃ** ರಕ್ಷಿತನಾಗಿ **ಮೃಧೇ** ಯುದ್ಧದಲ್ಲಿ **ಆತತಾಯಿನಃ ಶತ್ರೂನ್ ಅಜಯತ್ ತಯಾ ವಿನಿರ್ಜಿತ್ಯ ಶ್ರಿಯಂ ಬುಭುಜೇ** ಇತ್ಯನ್ವಯಃ ಶತ್ರುಗಳನ್ನು ಗೆದ್ದನು ಆದರಿಂದ ಸಂಪತ್ತನ್ನು ಅನುಭವಿಸಿದನು ಎಂದರ್ಥ.

**ಆತ ತಾಯಿನಃ** ಎಂದು ಭೇದ ಮಾಡಿಕೊಳ್ಳಬೇಕು. **ಜಯನ್ ಸನ್** ಗೆಲ್ಲುತ್ತಾ **ತಾಯಿನಃ** ವ್ಯಾಪ್ತರಾದ **ಶತ್ರೂನ್** ಶತ್ರುಗಳನ್ನು ಕುರಿತು **ಆತ** ಬಂದನು, 'ಅತ ಸಾತತ್ಯಗಮನೇ' ಧಾತುವಿನ ಲಿಟ್, ಇದರಿಂದ ಶತ್ರುಪದ ಅಥವಾ ಆತತಾಯಿ ಪದ ಯಾವುದಾದರೊಂದು ಸಾಕು ಎಂದು ಶಂಕಿಸುವವರ ಉತ್ಕಂಠೆಯು ಉತ್ಸಾಹವು ಕುಂಠಿತವಾಯಿತು. ಪುನರುಕ್ತಿಯು ಪರಿಹೃತವಾಯಿತು ಎಂದು ಅಭಿಪ್ರಾಯ. ಸುಧಾ ಅದರ ಟಿಪ್ಪಣಿಯಲ್ಲಿ 'ಪ್ರದೀಪಸ್ಯೇವ ನಿರ್ವಾಣಂ ವಿಮೋಕ್ಷಸ್ತಸ್ಯ ತಾಯಿನಃ' ಎಂಬಲ್ಲಿ ತಾಯಿನಃ ವಿಸ್ತಾರಿಣಃ 'ತಾಯ್ ಸಂತಾನಪಾಲನಯೋಃ' ತಾಯಿನಃ ಸಂತನ್ಯಮಾನಸ್ಯ ಎಂದು ಹೇಳಿದೆ.

**ತನ್ಮಮಾಖ್ಯಾ ಹಿ** ಎಂದು ಭೇದವನ್ನು ಮಾಡಿಕೊಳ್ಳಬೇಕು. 'ಕಿಮಾರ್ದ್ರಕವಣಿಜಃ ವಹಿತ್ರಚಿಂತಯಾ' ಹಸಿಶುಂಠಿಯ ವ್ಯಾಪಾರಿಗೆ ಹಡಗಿನ ಚಿಂತೆ ಏಕೆ? ಎಂಬಂತೆ ಸಂಸಾರಿಯಾದ ನನಗೆ ಈ ವಿಷಯದಲ್ಲಿ ಮನಸ್ಸಿಲ್ಲವೆಂದಲ್ಲವೆಂದು ಈ ಮಾತಿನಿಂದ ಹೇಳುತ್ತಿದ್ದಾರೆ. **ಹಿ** ಯಾವ ಕಾರಣ ನಿಮಗೆ **ತನ್ಮಮಾಖ್ಯಾ** ತಸ್ಮಿನ್ ಪ್ರವಚನದಲ್ಲಿ ಮಮ ಮಮತಾ ಯಸ್ಯ ಸಃ ತನ್ಮಮಃ ಎಂಬ ಆಖ್ಯಾ ಖ್ಯಾತಿಯು ಇದೆಯೋ ತತ್ ತಸ್ಮಾದ್ ಆಖ್ಯಾಹಿ ಪ್ರವಚನಾಸಕ್ತರೆಂದು ಪ್ರಸಿದ್ಧಿ ಇದೆ ಆದ್ದರಿಂದ ಈ ವಿಷಯವನ್ನು ಹೇಳಿರಿ ಎಂದು ಅರ್ಥವನ್ನು ಈ ಮಾತಿಗೆ ತಿಳಿಯಬೇಕು ಎಂದು ಸ್ವಾಮಿಗಳು ಹೇಳುತ್ತಾರೆ.

**ಶ್ರೀಶುಕ ಉವಾಚ –**

> **ವೃತಃ ಪುರೋಹಿತಸ್ತ್ವಾಷ್ಟ್ರೋ ಮಹೇಂದ್ರಾಯಾನುಪೃಚ್ಛತೇ ।**
> **ನಾರಾಯಣಾಖ್ಯಂ ವರ್ಮಾಹ ತದಿಹೈಕಮನಾಃ ಶೃಣು ॥೩॥**

**ಪುರೋಹಿತೋ ವೃತಃ** ಪುರೋಹಿತನಾಗಿ ವರಿಸಲ್ಪಟ್ಟ **ತ್ವಾಷ್ಟ್ರಃ** ವಿಶ್ವರೂಪಾಚಾರ್ಯನು **ಅನುಪೃಚ್ಛತೇ** ವಿನಯದಿಂದ ಪ್ರಶ್ನಿಸಿದ **ಮಹೇಂದ್ರಾಯ** ಇಂದ್ರದೇವರಿಗೆ **ನಾರಾಯಣಾಖ್ಯಂ ವರ್ಮ ಆಹ** ನಾರಾಯಣ ವರ್ಮವನ್ನು ಹೇಳಿದರು **ತತ್** ಅದನ್ನು **ಇಹ** ಇಲ್ಲಿ **ಏಕಮನಾಃ** ಏಕಾಗ್ರಮನಸ್ಸಿನಿಂದ **ಶೃಣು** ಕೇಳು. ॥೩॥

ನಾರಾಯಣವರ್ಮ ಜಪಕ್ಕೆ ಅಂಗವನ್ನು ಪರಿಕರ ಸಹಿತವಾಗಿ ಧೌತಾಂಘ್ರಿಪಾಣಿಃ ಮೊದಲು ಮಾಡಿ ವಿಷ್ಣವೇ ನಮಃ ಎಂಬಲ್ಲಿಯ ವರೆಗೆ ಎಂಟು ಶ್ಲೋಕಗಳಿಂದ ಸ್ಪಷ್ಟಪಡಿಸುವರು.

**ವಿಶ್ವರೂಪ ಉವಾಚ -**

> **ಧೌತಾಂಘ್ರಿಪಾಣಿರಾಚಮ್ಯ ಸಪವಿತ್ರ ಉದಙ್ಮುಖಃ ।**
> **ಕೃತಸ್ವಾಂಗಕರನ್ಯಾಸಃ ಮಂತ್ರಾಭ್ಯಾಂ ವಾಗ್ಯತಃ ಶುಚಿಃ ॥೪॥**

**ಧೌತಾಂಘ್ರಿಪಾಣಿಃ** ಕೈ-ಕಾಲುಗಳನ್ನು ತೊಳೆದುಕೊಂಡವನಾಗಿ **ಆಚಮ್ಯ** ಆಚಮನ ಮಾಡಿ **ಸಪವಿತ್ರಃ** ಪವಿತ್ರವನ್ನು ಧರಿಸಿದವನಾಗಿ **ಉದಙ್ಮುಖಃ** ಉತ್ತರಾಭಿಮುಖವಾಗಿ ಕುಳಿತು **ಮಂತ್ರಾಭ್ಯಾಂ** ಅಷ್ಟಾಕ್ಷರ-ದ್ವಾದಶಾಕ್ಷರ ಮಂತ್ರಗಳಿಂದ **ಕೃತಸ್ವಾಂಗಕರನ್ಯಾಸಃ** ತನ್ನ ಅಂಗಗಳಲ್ಲಿ ಕರಗಳಲ್ಲಿ ದೇವತೆಗಳನ್ನು ಇರಿಸಿಕೊಂಡು, (ಇದ್ದಾರೆಂದು ಚಿಂತಿಸಿ) **ವಾಗ್ಯತಃ** ಮಾತನಾಡಬಾರದವರೊಡನೆ ಮಾತನಾಡದೇ, ವಾಙ್ನಿಯಮ ಉಳ್ಳವನಾಗಿ **ಶುಚಿಃ** ಅಂತರ್ಬಾಹ್ಯ ಶುದ್ಧಿ ಉಳ್ಳವನಾಗಿ, ॥೪॥

> **ನಾರಾಯಣಮಯಂ ವರ್ಮ ಸನ್ನಹ್ಯೇದ್ಭಯ ಆಗತೇ ।**
> **ದೈವಭೂತಾತ್ಮಕರ್ಮಭ್ಯೋ ನಾರಾಯಣಮಯಃ ಪುಮಾನ್ ॥೫॥**

**ದೈವ** ಮಾರಿಕಾದಿಗಳಿಂದುಂಟಾದ ಅಥವಾ ಅನಾವೃಷ್ಟಿ ಮುಂತಾದ **ಭೂತ** ಧಾತುವಿಕಾರದಿಂದುಂಟಾದ ಹುಟ್ಟು ಮುಂತಾದ ಅಥವಾ ರಾಕ್ಷಸರಿಂದ ಬಂದ **ಆತ್ಮಕರ್ಮ** ತಾನು ಮಾಡಿದ ಪ್ರಾಚೀನಕರ್ಮದಿಂದ ಬಂದ ಅಪಸ್ಮಾರ ಮೊದಲಾದ ದೈಹಿಕವಾದ **ಭಯೇ** ಭಯವು **ಆಗತೇ** ಬಂದಿರಲು ಅಥವಾ **ಆ ಆಗತೇ** ನಿಶ್ಚಯವಾಗಿ ಮುಂದೆ ಬರುವುದಿದ್ದಾಗ ಎಂದರ್ಥ. 'ವರ್ತಮಾನೇಽಗತಃ' ಎಂಬ ಅನುವ್ಯಾಖ್ಯಾನ ವ್ಯಾಖ್ಯಾನ ಮಾಡುವಾಗ ಸುಧೆಯಲ್ಲಿ ಆಗತೇ ಅನಾಗತೇ ಎಂದು ಟಿಪ್ಪಣಿಯಲ್ಲಿ 'ನ ಚ ತತ್ರ ಭವಿಷ್ಯತೀತ್ಯೇತಸ್ಯ ಕಥಂ ಲಾಭಃ' ಇತ್ಯತ ಆಹ ಆಗತೇ ಅನಾಗತೇತಿ' ಎಂದು ಹೇಳಿದೆ.

ವರ್ತಮಾನಸಾಮೀಪ್ಯಾದ್ವರ್ತಮಾನವದ್ವ್ಯಪದೇಶಃ ಎಂದು ಹೇಳಿರುವದರಿಂದ ಆಗತೇ ಎಂದಿರುವರು.

**ನಾರಾಯಣಮಯಂ** ವಿಶೇಷವಾಗಿ ನಾರಾಯಣನ ಸಾನ್ನಿಧ್ಯ ಪ್ರಾಪಕವಾದ ನಾರಾಯಣನೇ ಪ್ರಧಾನ ದೇವತೆಯಾಗಿ ಉಳ್ಳ **ವರ್ಮ** ಕವಚವನ್ನು **ನಾರಾಯಣಮಯಃ** ನಾರಾಯಣನೇ ಸರ್ವೋತ್ತಮನೆಂಬ ಜ್ಞಾನ ಉಳ್ಳ **ಪುಮಾನ್** ಅಧಿಕಾರಿಯು **ಸನ್ನಹ್ಯೇತ್** ಕಟ್ಟಿಕೊಳ್ಳಬೇಕು.

**ಮಯಂ ಪ್ರಧಾನಮುದ್ದಿಷ್ಟಂ ಪ್ರಾಧಾನ್ಯಂ ಯೈರ್ಹರೇರ್ಮತಮ್ ।**
**ಭಗವನ್ಮಯಾಸ್ತೇ ವಿಜ್ಞೇಯಾಸ್ತೇ ಮುಚ್ಯಂತೇ ನ ಚಾಪರೇ ।। ಎಂದಿದೆ. ।।೫।।**

ಅಷ್ಟಾಕ್ಷರ ಸ್ವರೂಪವನ್ನು ತಿಳಿಸುತ್ತ ಪಾದಾದ್ಯಂಗಗಳಲ್ಲಿ ಆದರ ಅಕ್ಷರಗಳ ನ್ಯಾಸವನ್ನು ಪಾದಯೋಃ ಎಂದು ಒಂದೂವರಿ ಶ್ಲೋಕದಿಂದ ಹೇಳುತ್ತಾರೆ-

**ಪಾದಯೋರ್ಜಾನುನೋರೂರ್ವೋರುದರೇ ಹೃದ್ಯಥೋರಸಿ ।**
**ಮುಖೇ ಶಿರಸ್ಯಾನುಪೂರ್ವ್ಯಾದೋಂಕಾರಾದೀನಿ ವಿನ್ಯಸೇತ್ ।।೬।।**

**ಓಂ ನಮೋ ನಾರಾಯಣಾಯೇತಿ ವಿಪರ್ಯಯಮಥಾಪಿ ವಾ।।**

ಓಂ ನಮೋ ನಾರಾಯಣಾಯ ಎಂಬ ಮಂತ್ರಕ್ಕೆ ಮೊದಲೂ ಕೊನೆಗೂ ಓಂಕಾರವನ್ನು ಸೇರಿಸಿಕೊಂಡು ಓಂಕಾರ ಮೊದಲಾದ ಮಂತ್ರಾಕ್ಷರಗಳನ್ನು **ಆನುಪೂರ್ವ್ಯಾತ್** ಕ್ರಮವಾಗಿ ಸಂಪ್ರದಾಯಾನುಸಾರ **ಪಾದಯೋಃ** ಪಾದಗಳಲ್ಲಿ **ಜಾನುನೋಃ** ಮೊಳಕಾಲುಗಳಲ್ಲಿ **ಊರ್ವೋಃ** ತೊಡೆಗಳಲ್ಲಿ **ಉದರೇ** ಹೊಟ್ಟೆಯಲ್ಲಿ **ಹೃದಿ** ಹೃದಯದಲ್ಲಿ **ಅಥ** ಮತ್ತು **ಉರಸಿ** ವಕ್ಷಃಸ್ಥಳದಲ್ಲಿ **ಮುಖೇ** ಮುಖದಲ್ಲಿ **ಶಿರಸಿ** ತಲೆಯಲ್ಲಿ **ವಿನ್ಯಸೇತ್** ನ್ಯಾಸ ಮಾಡಿಕೊಳ್ಳಬೇಕು. ಇದು ಸಂಹಾರನ್ಯಾಸ. **ವಿಪರ್ಯಯಂ ವಾ** ಶಿರಸ್ಸಿನಿಂದ ಪ್ರಾರಂಭಿಸಿ ಪಾದ ಪರ್ಯಂತವಾಗಲಿ **ವಿನ್ಯಸೇತ್** ನ್ಯಾಸ ಮಾಡಿಕೊಳ್ಳಬೇಕು. ಇದಕ್ಕೆ ಸೃಷ್ಟಿನ್ಯಾಸವೆಂದು ಹೆಸರು. **ಅಥಾಪಿ** ಮತ್ತು ಸ್ಥಿತಿನ್ಯಾಸವನ್ನೂ ಮಾಡಬೇಕು.

ಇಲ್ಲಿರುವ ವಾಕಾರವು ವಿಕಲ್ಪಾರ್ಥಕವಲ್ಲ. ಸಮುಚ್ಚಯಾರ್ಥಕ. ಎಲ್ಲ ಆಶ್ರಮದವರೂ ಮೂರೂ ಬಗೆಯ ನ್ಯಾಸಗಳನ್ನು ಮಾಡಬೇಕೆಂದು ಹೇಳಿದೆ.

ಸೃಷ್ಟಿಸ್ಥಿತಿಲಯನ್ಯಾಸಾಃ ಪ್ರಾತಿಲೋಮ್ಯಾನುಲೋಮತಃ ।
ಸ್ಥಿತ್ಯಂತಾ ಏವ ವರ್ಣಾನಾಂ ಶ್ರೇಷ್ಠಾ ಏವ ಚತುರ್ದಶ ।
ಸಂಹೃತ್ಯಂತಾ ಮೋಕ್ಷಿಣಾ ಚ ಏಕವಿಂಶತಿರೇವ ವಾ ।। ತಂ.ಸಾ.೪.೧೩೧-೧೩೨

ಪ್ರಣವ ಸಂಪುಟಿತಗಳಾದ ಒಂದೊಂದು ಅಕ್ಷರಗಳನ್ನು ಮಂತ್ರಶಾಸ್ತ್ರದಲ್ಲಿ ಹೇಳಿದ ಕ್ರಮದಿಂದ ನ್ಯಾಸ ಮಾಡಬೇಕೆಂದಿದೆ. ಅಂದರೆ ಉದಾಹರಣೆಗೆ ಪ್ರಣವ ಮಂತ್ರದ ವರ್ಣನ್ಯಾಸ ಓಂ ಅಂ ಓಂ ವಿಶ್ವಾಯ ನಮಃ ಶಿರಸಿ, ಓಂ ಉಂ ಓಂ ತೈಜಸಾಯ ನಮಃ ನಾಭೌ, ಓಂ ಮಂ ಓಂ ಪ್ರಾಜ್ಞಾಯ ನಮಃ ಹೃದಯೇ, ಮುಂತಾಗಿ. ಎಂದು ಚೆಟ್ಟಿವ್ಯಾಖ್ಯಾನಕಾರರು ತಿಳಿಸುತ್ತಾರೆ.

ಇವರ ಪ್ರಕಾರ ಓಂ ಓಂ ಓಂ ವಿಶ್ವಾಯ ನಮಃ ಶಿರಸಿ, ಓಂ ನಂ ಓಂ ತೈಜಸಾಯ ನಮಃ ನೇತ್ರಯೋಃ, ಮುಂತಾಗಿ ಅಷ್ಟಾಕ್ಷರ ನ್ಯಾಸ ಮಾಡಬೇಕು. ಪ್ರಚಲಿತ ಗ್ರಂಥದಲ್ಲಿ ಪ್ರಣವ ವರ್ಣನ್ಯಾಸದಂತೆ ಅಷ್ಟಾಕ್ಷರ ವರ್ಣನ್ಯಾಸ ಇಲ್ಲ. ಮೊದಲು ಮಾತ್ರ ಓಂಕಾರ ಹೇಳಿ ವರ್ಣನ್ಯಾಸ ಕೊಟ್ಟಿರುವರು.

ಅಂಗನ್ಯಾಸವನ್ನು ಹೇಳಿ ಕರನ್ಯಾಸವನ್ನು ಹೇಳುವರು-

**ಓಂ ನಮೋ ನಾರಾಯಣಾಯೇತಿ ವಿಪರ್ಯಯಮಥಾಽಪಿ ವಾ ।**
**ಕರನ್ಯಾಸಂ ತತಃ ಕುರ್ಯಾದ್ ದ್ವಾದಶಾಕ್ಷರವಿದ್ಯಯಾ ॥೭॥**

**ತತಃ** ಅಂಗನ್ಯಾಸ ಮಾಡಿಕೊಂಡ ಮೇಲೆ **ದ್ವಾದಶಾಕ್ಷರವಿದ್ಯಯಾ** ಆದ್ಯಂತಗಳಲ್ಲಿ ಓಂಕಾರದಿಂದ ಕೂಡಿದ ಓಂ ನಮೋ ಭಗವತೇ ವಾಸುದೇವಾಯ ಎಂಬ ಮಂತ್ರದಿಂದ **ಅಂಗುಲ್ಯಂಗುಷ್ಠಪರ್ವಸು** ಬಲಗೈ ಹೆಬ್ಬೆರಳಿನಿಂದ ಪ್ರಾರಂಭಿಸಿ ಎಡಗೈ ಕೊನೆಯ ಬೆರಳುಗಳ ವರೆಗೆ ಹತ್ತು ಬೆರಳುಗಳಲ್ಲಿ ಎರಡು ಕೈಗಳ ಹೆಬ್ಬೆರಳುಗಳ ಎರಡು ಪರ್ವಗಳಲ್ಲಿಯೂ ಒಟ್ಟು ಹನ್ನೆರಡು ಸ್ಥಾನಗಳಲ್ಲಿ **ಪ್ರಣವಾದಿ** ಓಂಕಾರದಿಂದಾರಂಭಿಸಿ **ಯಕಾರಾಂತಂ** ಯಕಾರದವರೆಗೂ **ಕರನ್ಯಾಸಂ** ಕರನ್ಯಾಸವನ್ನು **ಕುರ್ಯಾತ್** ಮಾಡಿಕೊಳ್ಳಬೇಕು ಎಂದು ಚೆಟ್ಟಿ ವ್ಯಾಖ್ಯಾನ.

**ಸತ್ಯಧರ್ಮರು**

ಬಲತರ್ಜನಿಯಿಂದ ಆರಂಭಿಸಿ ಎಡ ತರ್ಜನಿವರೆಗೆ ಬೆರಳುಗಳಲ್ಲಿ ಎಂಟು ಅಕ್ಷರಗಳನ್ನು (ಇಟ್ಟು) ನ್ಯಾಸ ಮಾಡಿ, ಎರಡು ಅಂಗುಷ್ಠಗಳ ಎರಡೆರಡು ಪರ್ವಗಳಲ್ಲಿ ಉಳಿದ ನಾಲ್ಕು ಅಕ್ಷರಗಳ ನ್ಯಾಸ ಮಾಡಬೇಕೆಂದು ಹೇಳುತ್ತಾರೆ.

ಓಂ ಓಂ ಓಂ ಕೇಶವಾಯ ನಮಃ ಶಿರಸಿ , ಓಂ ನಂ, ಓಂ ನಾರಾಯಣಾಯ ನಮಃ ನೇತ್ರಯೋಃ , ಓಂ ಮಂ ಓಂ ಮಾಧವಾಯ ನಮಃ ನಾಸಯೋಃ ಮುಂತಾಗಿ ಅಂಗನ್ಯಾಸ.

ಇದರಂತೆ ಕರನ್ಯಾಸ ಓಂ ಓಂ ಓಂ ಅಂಗುಷ್ಠಾಭ್ಯಾಂ ನಮಃ, ಓಂ ನಂ ಓಂ ತರ್ಜನೀಭ್ಯಾಂ ನಮಃ, ಓಂ ಮಂ ಓಂ ಮಧ್ಯಮಾಭ್ಯಾಂ ನಮಃ, ಓಂ ಭಂ ಓಂ ಅನಾಮಿಕಾಭ್ಯಾಂ ನಮಃ, ಓಂ ಗಂ ಓಂ ಕನಿಷ್ಠಿಕಾಭ್ಯಾಂ ನಮಃ, ಓಂ ವಂ ಓಂ, ಓಂ ತೇಂ ಓಂ, ಓಂ ವಾಂ ಓಂ, ಓಂ ಸುಂ ಓಂ, ಓಂ ದಂ ಓಂ, ಓಂ ವಾಂ ಓಂ, ಓಂ ಯಂ ಓಂ, ಈ ರೀತಿ ಎಡಗೈಬೆರಳು ಮತ್ತು ಪರ್ವಗಳಲ್ಲಿ ನ್ಯಾಸ ಮಾಡಬೇಕು.

ದ್ವಾದಶಾಕ್ಷರ ಎಂಬಲ್ಲಿ ವಿಶೇಷಣ ಸಮಾಸ. ದ್ವಾದಶ ಚ ತಾನಿ ಅಕ್ಷರಾಣಿ ಚ ದ್ವಾದಶಾಕ್ಷರಾಣಿ ತೈಃ ಸಹಿತಾ ದ್ವಾದಶಾಕ್ಷರಾ ದ್ವಾದಶಾಕ್ಷರಾ ಚ ಸಾ ವಿದ್ಯಾ ಚ ದ್ವಾದಶಾಕ್ಷರವಿದ್ಯಾ ಎಂದು. ಅಕ್ಷರೈಃ ಸಹಿತಾ ವಿದ್ಯಾ ಅಕ್ಷರವಿದ್ಯಾ ದ್ವಾದಶಭಿಃ ಅಕ್ಷರವಿದ್ಯಾ ದ್ವಾದಶಾಕ್ಷರವಿದ್ಯಾ ತಯಾ ಎಂದಾಗಲಿ ಮಾಡಬಹುದು.

ನಾರಾಯಣವರ್ಮವೆಂಬ (ಶರ್ಮಸಿದ್ಧಿ) ಹೆಸರಿಗೆ ಅನ್ವರ್ಥತೆಗಾಗಿಯೂ ಅಧಿಕವರ್ಣಗಳಿರುವದರಿಂದಲೂ ನಾರಾಯಣಮಂತ್ರ, ವಾಸುದೇವಮಂತ್ರಗಳನ್ನು ಹೇಳಿ

… … …. … … … . ಕಾವಷೇಯಾ ವದಂತಿ ಹಿ ।
ಮೌನೇನ ವಿಷ್ಣುಶಬ್ದಾರ್ಥಂ ಧ್ಯಾಯಂತೋ ವಾಚಮೇವ ವಾ ॥

ಜುಹುಮೋ ವಿಷ್ಣುನಾಮಾಖ್ಯಾಂ ಜಪಂತೋ ಮಂತ್ರಮೇವ ವಾ ।
ನಮಸ್ಕಾರಸಮಾಯುಕ್ತಂ ಜುಹುಮಃ ಪ್ರಾಣಮತ್ರ ಹಿ ॥
ಕಿಮನ್ಯೈರ್ಬಹುಭಿಃ ಕಾರ್ಯೈರೇತಸ್ಯೇವಾಧಿಕತ್ವತಃ ॥

ಏತದರ್ಥಾನುಸಂಧಾನಪೂರ್ವಂ ವೇದಾನಥಾಽಪಿ ವಾ ।
ಅಧೀಮಹೇ ಯಜಾಮೋ ವಾ ನಾನ್ಯಥಾ ತು ಕಥಂಚನ ॥

ಏಷ ಏವ ಹಿ ಸರ್ವೇಷಾಂ ವೇದಾನಾಮರ್ಥ ಈರಿತಃ ।
ವಿಷ್ಣುನಾಮೋದಿತೋ ಯೋಽರ್ಥಸ್ತದ್ವ್ಯಾಖ್ಯಾನ್ಯದ್ಯತೋಽಖಿಲಮ್ ॥

ಮುಂತಾಗಿ ಐತರೇಯಭಾಷ್ಯದಲ್ಲಿ ಉದಾಹರಿಸಿದ ಪ್ರಮಾಣ ಪ್ರಮಿತವಾದ ಸಕಲ ವೇದಾರ್ಥತ್ವ ಮಹಿಮೆಯುಳ್ಳ ವಿಷ್ಣುಮಂತ್ರವನ್ನು ಈಗ ಹೇಳುವರು.

**ಪ್ರಣವಾದಿಯಕಾರಾಂತಮಂಗುಲ್ಯಂಗುಷ್ಠಪರ್ವಸು ।**
**ನ್ಯಸೇದ್ ಹೃದಯ ಓಂಕಾರಂ ವಿಕಾರಮನು ಮೂರ್ಧನಿ ॥೮॥**

**ಷಕಾರಂ ತು ಭ್ರುವೋರ್ಮಧ್ಯೇ ಣಕಾರಂ ಶಿಖಯಾ ದಿಶೇತ್ ।**
**ವೇಕಾರಂ ನೇತ್ರಯೋರ್ಯುಂಜ್ಯಾನ್ನಕಾರಂ ಸರ್ವಸಂಧಿಷು ॥೯॥**

**ಮಕಾರಮಸ್ತ್ರಮುದ್ದಿಶ್ಯ ಮಂತ್ರಮೂರ್ತಿರ್ಭವೇದ್ ಬುಧಃ ।**
**ಸವಿಸರ್ಗಂ ಫಡಂತಂ ತು ಸರ್ವದಿಕ್ಷು ವಿನಿರ್ದಿಶೇತ್ ॥೧೦॥**

ವಿಷ್ಣುಮಂತ್ರದಿಂದ ಷಡಂಗನ್ಯಾಸ ಹೇಳುವರು. ಷಕಾರ ಣ ಕಾರಗಳನ್ನು ಬೇರ್ಪಡಿಸಿ ನ್ಯಾಸ.

**ಬುಧಃ** ಆಯಾ ಅಕ್ಷರಾಭಿಮಾನಿ ದೇವತೆಗಳ ಸ್ಮರಣೆಯುಳ್ಳ ಜ್ಞಾನಿಯು **ಓಂಕಾರಂ** ಓಂಕಾರಾಭಿಮಾನಿಯನ್ನು **ಹೃದಯೇ** ಹೃದಯದಲ್ಲಿ ನ್ಯಾಸ ಮಾಡಿಕೊಳ್ಳಬೇಕು. **ಅನು** ಅನಂತರ **ಅನು ಓಂಕಾರಂ** ಪ್ರತ್ಯೇಕವಾಗಿ ಓಂಕಾರವನ್ನು ಸೇರಿಸಿಕೊಂಡು **ಮೂರ್ಧನಿ** ಶಿರಸ್ಸಿನಲ್ಲಿ ಅಥವಾ **ಅನುಮೂರ್ಧನಿ** ಹಣೆಯ ಮೇಲೆ **ವಿಕಾರಂ** ವಿ ಎಂಬ ಅಕ್ಷರಾಭಿಮಾನಿಯನ್ನು ನ್ಯಾಸ ಮಾಡಿಕೊಳ್ಳಬೇಕು. **ಭ್ರುವೋಃ ಮಧ್ಯೇ** ಹುಬ್ಬುಗಳ ನಡುವೆ **ಷಕಾರಂ ತು** ಷಕಾರ ಎಂಬ ಅಕ್ಷರಾಭಿಮಾನಿಯನ್ನು ನ್ಯಾಸ ಮಾಡಿಕೊಳ್ಳಬೇಕು. **ಶಿಖಯಾ** ತಲೆಕೂದಲಿನಲ್ಲಿ **ಣಕಾರಂ** ಣ ಎಂಬ ಅಕ್ಷರದ ದೇವತೆಯನ್ನು **ದಿಶೇತ್** ನ್ಯಾಸ ಮಾಡಿಕೊಳ್ಳಬೇಕು. **ನೇತ್ರಯೋಃ** ಕಣ್ಣುಗಳಲ್ಲಿ **ವೇಕಾರಂ** ವೇ ಎಂಬ ಅಕ್ಷರಾಭಿಮಾನಿಯನ್ನು **ಯುಂಜ್ಯಾತ್** ಸೇರಿಸಬೇಕು. **ಸರ್ವಸಂಧಿಷು** ಎಲ್ಲ ಸಂಧಿಗಳಲ್ಲಿಯೂ **ನಕಾರಂ** ನ ಎಂಬ ಅಕ್ಷರದಿಂದ ಪ್ರತಿಪಾದ್ಯನಾದ ಶ್ರೀಹರಿಯ ರೂಪವನ್ನು **ಯುಂಜ್ಯಾತ್** ಸೇರಿಸಬೇಕು. **ಸವಿಸರ್ಗಂ** ವಿಸರ್ಗ ಸಹಿತವಾಗಿ **ಮಕಾರಂ** ಮಕಾರವನ್ನು **ಫಡಂತಂ** ಫಟ್ ಶಬ್ದಾಂತವಾಗಿ **ಅಸ್ತ್ರಂ ಉದ್ದಿಶ್ಯ ತು** ಅಂದರೆ ಮಃ ಅಸ್ತ್ರಾಯ ಫಟ್ ಎಂದು ಅಸುರನಿರಾಸವನ್ನುದ್ದೇಶಿಸಿ **ಸರ್ವದಿಕ್ಷು** ಎಲ್ಲದಿಕ್ಕುಗಳಲ್ಲಿಯೂ **ವಿನಿರ್ದಿಶೇತ್** ಹೇಳಬೇಕು. (ಏವಂ) ಹೀಗೆ ಅಂಗನ್ಯಾಸ ಕರನ್ಯಾಸ ಮತ್ತು ಷಡಂಗ ನ್ಯಾಸಗಳಿಂದ **ಮಂತ್ರಮೂರ್ತಿಃ** ಮಂತ್ರದೇವತಾ ಸನ್ನಿಧಾನ ಉಳ್ಳ ದೇಹ ಉಳ್ಳವನು **ಭವೇತ್** ಆಗುವನು. **ಅಂತಂ** ರಾಕ್ಷಸರ ನಾಶಕರವಾದ ಫಟ್ ಎಂಬ ಅಕ್ಷರವನ್ನು **ತಂ** ಮಕಾರವನ್ನು, ಫಟ್ ಎಂಬ ಅಕ್ಷರವನ್ನು, ಸ್ವಾಹಾ ವಿಸರ್ಜನಿಯಸಹಿತಂ ಎಂದು ಅರ್ಥ ಮಾಡಿರುವರು (ವಿಜಯ) (ಅಸ್ತ್ರಾಯ ಫಟ್ ಸ್ವಾಹಾ ಎಂದು ತೋರುವದು) ವಿಸರ್ಗಸಹಿತ ಮಕಾರ, ಸ್ವಾಹಾಸಹಿತ ಫಟ್‌ಕಾರವೆಂದು ಕ್ರಮವಾಗಿ ತಿಳಿಯಬೇಕು. ||೧೦||

ಷಕಾರಂ ತು ಭ್ರುವೋರ್ಮಧ್ಯೇ ಣಕಾರಣಂ ಶಿಖಯಾ ದಿಶೇತ್ ಎಂಬಲ್ಲಿವರೆಗೆ ಪದಾತ್ಮಕ ವಿಷ್ಣುಮಂತ್ರ ಹೇಳಿ ಕ್ಷ ಕಾರ ಣಕಾರ ಬೇರೆ ಬೇರೆ ಹೇಳಿದ್ದರಿಂದ 'ವಿಷ್ಣವೇ ನಮಃ' ಎಂದು ಮಂತ್ರಾಕಾರ ತಿಳಿಯದಿರಲೆಂದು ಮಂತ್ರವನ್ನು ಸಂಹಿತಾಕಾರವಾಗಿ ಹೇಳುವರು.

## ಓಂ ವಿಷ್ಣವೇ ನಮಃ

'ಓಂ ವಿಷ್ಣವೇ ನಮಃ' ಎಂಬುದು ಮಂತ್ರವು. ಅದನ್ನು ಹೇಳಿ ಅನಂತರ ಧ್ಯೇಯವಾದ ದೇವತಾ ಪ್ರಕಾರವನ್ನು ಹೇಳುತ್ತಾರೆ-

**ಇತ್ಯಾತ್ಮಾನಂ ಪರಂ ಧ್ಯಾಯೇದ್ ಧ್ಯೇಯಂ ಷಟ್ಛಕ್ತಿಭಿರ್ಯುತಮ್ ।**
**ವಿದ್ಯಾತೇಜಸ್ತಪೋಮೂರ್ತಿರಿಮಂ ಮಂತ್ರಮುದಾಹರೇತ್ ॥೧೧॥**

**ಷಟ್‌ಶಕ್ತಿಭಿಃ ಯುತಂ** ಭಗವಚ್ಛಬ್ದ ವಾಚ್ಯವಾದ ಐಶ್ವರ್ಯ ಮುಂತಾದ ಆರು ಶಕ್ತಿಗಳಿಂದ ಅಥವಾ ಉತ್ಸಾಹ, ಪ್ರಭು, ಮಂತ್ರ, ಶಾಸನ (ಜ್ಞಾನ) ಕ್ರಿಯಾ ಮತ್ತು ಇಚ್ಛಾಶಕ್ತಿಗಳಿಂದ ಕೂಡಿರುವ **ಧ್ಯೇಯಂ** ಧ್ಯಾನಮೂರ್ತಿಯಾದ **ಪರಂ ಆತ್ಮಾನಂ** ಪರಮಾತ್ಮನಾದ ಶ್ರೀಹರಿಯನ್ನು **ವಿದ್ಯಾತೇಜಸ್ತಪೋಮೂರ್ತಿಃ ಸನ್** ಶ್ರೀಹರಿಯ ಮತ್ತು ತನ್ನ ಜ್ಞಾನ, ರೂಪ, ವಿದ್ಯೆ, ಬ್ರಹ್ಮವರ್ಚಸ್ಸು, ಶತ್ರು ಸಂತಾಪನ ಶಕ್ತಿ, ಇವುಗಳಿಂದ ಕೂಡಿದವನಾಗಿ ದೇಹ ಉಳ್ಳವನಾಗಿ **ಇಮಂ ಮಂತ್ರಂ** ಮುಂದೆ ಹೇಳುವ ಮಂತ್ರವನ್ನು **ಉದಾಹರೇತ್** ಪಠಿಸಬೇಕು. ಇದರಿಂದ ಅಧಿಕಾರ ಸಂಪತ್ತು ಹೇಳಿದಂತಾಯಿತು.

'ಈಶ್ವರಸ್ಯಾತ್ಮನಶ್ಚಾಽಪಿ ಜ್ಞಾನಂ ವಿದ್ಯಾ ಇಹೋಚ್ಯತೇ' ಶ್ರುತಮಧ್ಯಯನಂ ಶೀಲಂ ತಪ ಇತ್ಯುಚ್ಯತೇ ಬುಧೈಃ' ಎಂದು ಹೇಳಿದೆ. ಈ ಮಂತ್ರ ಪಠಿಸಬೇಕು. ಆದರಿಂದ ವಿದ್ಯಾ ತಪ ತೇಜೋಮೂರ್ತಿಯಾಗುವನು ಎಂದು ಚೆಟ್ಟಿಯವರು ಹೀಗೂ ಅರ್ಥ ಮಾಡಿರುವರು.

### ಶ್ರೀ ಸತ್ಯಧರ್ಮರ ವಿಶಿಷ್ಟ ಅರ್ಥ

'ಯದ್ಧಿ ಸಂಧಿಂ ವಿವರ್ತಯೇತ್' ಮುಂತಾದ ಐತರೇಯೋಪನಿಷದ್ಭಾಷ್ಯದಲ್ಲಿ ಹೀಗೆ ಹೇಳಿದೆ. 'ಷಣಯೋಃ ಸಂಧಿಕರಣಾತ್ ಸಂಹಿತಾಧ್ಯಯನಂ ಭವೇತ್' ವಿಷಣುಂ ತ್ವಿತಿ ಯೋ ಬ್ರೂಯಾತ್ ಪದಾಧ್ಯಾಯೀ ಭವೇತ ಸಃ । ಸಂಧ್ಯುಕ್ತಿಶ್ಚ ವಿಭಾಗಶ್ಚ ದ್ವಯಂ ವ್ಯಾಪ್ತಂ ಕ್ರಮೇಣ ತು । ತಸ್ಮಾದ್ವಿಧಾಽಪಿ ವಚನಾತ್ ಕ್ರಮಾಧ್ಯಾಯೀ ಭವೇತ ಸಃ । ಭೋಗವೃದ್ಧಿಂ ಚ ಯೋ ಮೋಕ್ಷೇ ಇಚ್ಛೇದ್ವೈಷ್ಣವ ಇತ್ಯಸೌ । ಮೋಕ್ಷಕಾಮೋ ವಿಷಣವೇ ದ್ವಯಕಾಮೋ ದ್ವಯಂ ಪಠೇತ್ । ವಿಷ್ಣು ನಾಮಾತ್ಮಕತ್ವಾಚ್ಚಾಥ ಸಂಹಿತಪದಕ್ರಮಾಃ । ಸರ್ವವೇದಸ್ಥಿತಾ ಮೋಕ್ಷತದ್ಭೋಗದ್ವಯ ಸಾಧಕಾಃ । ಜ್ಞಾನಮೇವ ಸರ್ವೇಷಾಂ' ಮುಂತಾಗಿ ಗ್ರಂಥ ಮುಗಿಯುವವರೆಗೆ.

'ಣಕಾರಂ ಚ ಷಕಾರಂ ಚ' ಎಂಬ ಅನುವ್ಯಾಖ್ಯಾನ ಸುಧಾದಲ್ಲಿ 'ಣಕಾರೋ ಬಲಂ ಷಕಾರಃ ಪ್ರಾಣ ಆತ್ಮಾ ಇತಿ ವಿಷ್ಣುನಾಮಗತೌ ಣಕಾರಷಕಾರೌ ಪರಮೇಶ್ವರ ಬಲಚೇಷ್ಟಾಪ್ರತಿಪಾದಕೌ ವದನ್ ವೇದೋಽನಂತರಂ ಸ ಯೋ ಹ ಏತೌ ಣಕಾರಷಕಾರಾವನುಸಂಹಿತಾ ಋಚೋ ವೇದ ಇತಿ ಋಚಾಂ ಅನುಸಂಹಿತಂ ಸರ್ವಸಂಹಿತಾಸು ಣಕಾರಷಕಾರೌ ಯೋ ವೇದ ಣಕಾರವತ್ ತತ್ಸಂಹಿತಾಭಿಃ ಪ್ರತಿಪಾದ್ಯೋ ಯೋಽರ್ಥಃ ಸ ಏವ ಸರ್ವತ್ರ ಪೂರ್ವೋತ್ತರವರ್ಣತತ್ಸಂಹಿತಾಭಿಃ ಪ್ರತಿಪಾದ್ಯತೇ' ಎಂದು ಹೇಳಿದ್ದರಿಂದ ಈ ಮಂತ್ರವು ಆಚಾರ್ಯರು ತಂತ್ರಸಾರದಲ್ಲಿ ಉದಾಹರಿಸಿದ ಮಂತ್ರದಿಂದ ಭಿನ್ನವಾದ ಈ ಮಂತ್ರಕ್ಕೆ ಮಾತ್ರ ಓಂಕಾರ ಸೇರಿ ಸಪ್ತಾಕ್ಷರತೆ ಇದೆ. ತಂತ್ರಸಾರೋಕ್ತವಾದುದಕ್ಕೆ ಷಡಕ್ಷರತೆ ಇದೆ.

**ವಿಷ್ಣುಶ್ಚಬ್ದಶ್ಚತುರ್ಥ್ಯಂತೋ ಹೃದಯೇತಃ ಷಡಕ್ಷರಃ ।**
**ತಾರವತ್ ಸರ್ವಮಸ್ಯಾಪಿ ಶ್ಯಾಮೋ ಧ್ಯೇಯೋ ಹರಿಃ ಸ್ವಯಮ್ ।**
**ವರ್ಣಾ ಏವ ಷಡಂಗಾನಿ ಷಣಯೋರ್ಭೇದಯೋಗತಃ ॥**

ಎಂಬುದರ ಟೀಕಾದಲ್ಲಿ ಇಲ್ಲಿ ಷಡಕ್ಷರ ಎಂದು ಹೇಳಿದ್ದರಿಂದ ವ್ಯಾಸರು ಭಾಗವತದಲ್ಲಿ ಹೇಳಿದ ವಿಷ್ಣುಮಂತ್ರವು ಓಂಕಾರ ಸಾಹಿತ್ಯದಿಂದ ಸಪ್ತಾಕ್ಷರವು ನ್ಯಸೇದ್ಧೃದಯ ಓಂಕಾರಂ ಮುಂತಾಗಿ ಓಂಕಾರದ ಏಳು ವರ್ಣಗಳಿಗೆ ನ್ಯಾಸ ಹೇಳಿರುವದರಿಂದ ಅಷ್ಟಮಹಾಮಂತ್ರಗಳಲ್ಲಿ ಹೇಳಿದ ವಿಷ್ಣುಮಂತ್ರ ಓಂಕಾರ ರಹಿತ ಭಾಗವತದಲ್ಲಿ ಹೇಳಿದ್ದರಿಂದ ಭಿನ್ನ ಆರು ಅಕ್ಷರದ್ದು ಎಂದು ಹೇಳಿದಂತಾಯಿತು. ಹೇಗೆ ವಿಶ್ವಾಮಿತ್ರಗಾಯತ್ರೀ, ಬ್ರಹ್ಮಗಾಯತ್ರೀ ಮಂತ್ರಗಳಿಗೆ ವ್ಯಾಹೃತಿಸಾಹಿತ್ಯ ಅಸಾಹಿತ್ಯಗಳಿಂದ ಭಿನ್ನವಾದುವುಗಳಲ್ಲಿ ಅಷ್ಟಮಹಾಮಂತ್ರಗಳಲ್ಲಿ ವ್ಯಾಹೃತಿ ರಹಿತವಾದದ್ದನ್ನೇ ಸ್ವೀಕರಿಸಿರುವರೋ ಹಾಗೆ ಓಂಕಾರಸಾಹಿತ್ಯ ಅಸಾಹಿತ್ಯಗಳಾದ ವಿಷ್ಣು ಮಂತ್ರಗಳಲ್ಲಿ ಅಷ್ಟಮಹಾಮಂತ್ರಗಳಲ್ಲಿ ಓಂಕಾರ ರಹಿತವಾದದ್ದನ್ನೇ ಸ್ವೀಕರಿಸಿರುವರು ಎಂದು ವ್ಯಾಖ್ಯಾನಿಸಿರುವರು ಎನ್ನುತ್ತಾರೆ.

ಷಟ್‌ಶಕ್ತಿಭಿಃ ಎಂಬುದಕ್ಕೆ ಮಕಾರರೂಪ ಅಸ್ತ್ರ ಬಿಟ್ಟು ಇತರ ಆರು ವರ್ಣಗಳ ಜಾಗ್ರದಾದ್ಯವಸ್ಥಾ ವ್ಯವಸ್ಥಾಪಕ ಶಕ್ತಿಗಳಿಂದ ಎಂದು ಅರ್ಥ ಮಾಡಿರುವರು. ಆತ್ಮಾನಂ ಎಂಬ ಪದವು ಇದ್ದಲ್ಲಿಯೇ ಇದ್ದು ಶುದ್ಧವಿಶೇಷ್ಯ ಪರವಾಗಿ ಸ್ವರಸವಲ್ಲ. ಹೇಗೆಂದರೆ 'ದೀಪ್ತಾನಲಾರ್ಕದ್ಯುತಿಮಪ್ರಮೇಯಂ' ಎಂಬುದನ್ನು ಪ್ರಮೇಯದೀಪಿಕಾದಲ್ಲಿ (ಅ) ಪ್ರಮೇಯತ್ವವನ್ನು ದ್ಯುತಿಯಲ್ಲಿ ಅನ್ವಯಿಸಿದಂತೆ ಇಲ್ಲಿ ಆತ್ಮ ಪದವು ಷಟ್‌ಶಕ್ತಿ

ಪದದಿಂದ ಅನ್ವಯಿಸುವದು. ಆತ್ಮ ಷಟ್‌ಶಕ್ತಿಭಿರ್ಯುತಂ ಎಂದು ಯೋಗ್ಯತಯಾ ಅರ್ಥವಾಗುವದು. ಅದರಿಂದ ಷಟ್‌ಶಕ್ತಿಗಳಿಗೆ ಅಭೇದ ಹೇಳಿದಂತಾಗುವದು. ಅದರಿಂದ ತೃತೀಯಾದಿಂದ ಪ್ರಾಪ್ತ ಭೇದಶಂಕಾ ಬಾಧಿತವೆಂದು ತಿಳಿಸುವದು.

ವಿದ್ಯಾ ಎಂದರೆ ಜ್ಞಾನವೆಂದಾಗಲಿ, ಇಲ್ಲಿ ಹೇಳಿದ ಜ್ಞಾನಸಾಧನವಾಗಲಿ ಆಗಬಹುದು. ಸುಧೆಯಲ್ಲಿ ಯಥಾರ್ಥಜ್ಞಾನತತ್ಸಾಧನಯೋಃ ವಿದ್ಯಾಶಬ್ದಸ್ಯ ಯೋಗ ರೂಢಿಭ್ಯಾಂ ಪ್ರವೃತ್ತತ್ವಾತ್ ಭಾವಕರಣಯೋಃ ಕೃಪಿ ಕ್ರಮಾದರ್ಥದ್ವಯಂ ಬೋಧ್ಯಂ ಎಂದಿದೆ. ತಪಃ ಎಂದರೆ ದೇವತೆಯ ಸೌಮುಖ್ಯ ಸಂಪಾದನ ಕಾಲಶಕ್ತಿ ಎಂದರ್ಥ ಮಾಡಿರುವರು. ।।೧೧।।

**ಓಂ ಹರಿರ್ವಿದಧ್ಯಾನ್ಮಮ ಸರ್ವರಕ್ಷಾಂ**
**ನ್ಯಸ್ತಾಂಘ್ರಿಪದ್ಮಃ ಪತಗೇಂದ್ರಪೃಷ್ಠೇ ।**
**ದರಾರಿಚರ್ಮಾಸಿಗದೇಷುಚಾಪಪಾಶಾನ್**
**ದಧಾನೋಽಷ್ಟಗುಣೋಽಷ್ಟಬಾಹುಃ ।।೧೨।।**

ಇಲ್ಲಿಂದ ಆರಂಭಿಸಿ 'ಸ್ವತೇಜಸಾ ಗ್ರಸ್ತಸಮಸ್ತತೇಜಾಃ' ಎಂಬಲ್ಲಿಯ ವರೆಗೆ ಕವಚವಾಗಿದೆ. **ಪತಗೇಂದ್ರಪೃಷ್ಠೇ** ಗರುಡನ ಬೆನ್ನಿನ ಮೇಲೆ **ನ್ಯಸ್ತಾಂಘ್ರಿಪದ್ಮಃ** ಇರಿಸಿದ ಪದ್ಮದಂತಿರುವ ಪಾದಗಳುಳ್ಳ ಗರುಡಾರೂಢನಾದ **ದರ** ಶಂಖ **ಅರಿ** ಚಕ್ರ **ಚರ್ಮ** ಗುರಾಣಿ **ಅಸಿ** ನಂದಕವೆಂಬ ಖಡ್ಗ **ಗದಾ** ಕೌಮೋದಕೀಗದಾ **ಇಷು** ವಾಯ್ವಾತ್ಮಕ ಬಾಣ **ಚಾಪ** ಶಾರ್ಙಧನುಷ್ಯ **ಪಾಶಾನ್** ಶತ್ರುಗಳನ್ನು ಬಂಧಿಸುವ ರಜ್ಜು ಇವುಗಳನ್ನು **ದಧಾನಃ** ಧರಿಸಿರುವ **ಅಷ್ಟಬಾಹುಃ** ಎಂಟುಕೈಗಳುಳ್ಳ **ಅಷ್ಟಗುಣಃ** ಅಣಿಮಾದಿ ಅಷ್ಟಗುಣ ಉಳ್ಳ ಸೃಷ್ಟ್ಯಾದಿ ಅಷ್ಟ ಗುಣಗಳುಳ್ಳ, ವ್ಯಾಪ್ತವಾದ ಗುಣವುಳ್ಳ (ಪೂರ್ಣವಾದ ಗುಣಗಳುಳ್ಳ) 'ಅಶೂ ವ್ಯಾಪ್ತೌ' ಎಂದು ಧಾತು ಇದೆ. ಆದ್ದರಿಂದ ವ್ಯಾಪ್ತವಾದ ಗುಣ ಉಳ್ಳವನು ಎಂಬ ಅರ್ಥ ಬರುತ್ತದೆ. **ಹರಿಃ** ಶ್ರೀಹರಿಯು **ಸರ್ವರಕ್ಷಾಂ** ಎಲ್ಲ ದೇಶ-ಕಾಲಗಳಲ್ಲಿ ಎಲ್ಲ ಆಪತ್ತುಗಳಿಂದ ರಕ್ಷಣೆಯನ್ನು **ವಿದಧ್ಯಾತ್** ಮಾಡಲಿ.

'ಅಶ ಭೋಜನೇ' ಎಂಬ ಧಾತುವಿನಿಂದ ನಿಷ್ಪನ್ನವಾದ ಅಷ್ಟಶಬ್ದಕ್ಕೆ ಭೋಜನ ಮಾಡುವ ಅರ್ಥಾತ್ ಸ್ವೀಕರಿಸುವ ಗುಣ ಎಂದೂ ಅರ್ಥ. ಶ್ರೀಹರಿಯು ಶುಭವನ್ನೇ ಸ್ವೀಕರಿಸುವನು ಅಶುಭವನ್ನು ಸ್ವೀಕರಿಸುವದಿಲ್ಲ 'ಶುಭಂ ಪಿಬತ್ಯಸೌ ನಿತ್ಯಂ ನಾಽಶುಭಂ ಸ ಹರಿಃ ಕ್ವಚಿತ್' ಎಂದು ಪ್ರಮಾಣವಿದೆ. ಆದ್ದರಿಂದ ಅಷ್ಟಗುಣಃ ಎಂಬ ಪದಕ್ಕೆ ಶುಭಗುಣವುಳ್ಳವನೆಂದೂ ಅರ್ಥ.

**ವಿಶಿಷ್ಟ ಅರ್ಥ**

ಹರಿಃ 'ಇಡೋಪಹೂತಂ ಗೇಹೇಷು ಹರೇ ಭಾಗಂ ಕ್ರತುಷ್ವಹಮ್ । ವರ್ಣೋ ಮೇ ಹರಿತಃ ಶ್ರೇಷ್ಠಃ ತಸ್ಮಾದ್ಧರಿರಿತಿ ಸ್ಮೃತಃ । ಇತಿ ಮೋಕ್ಷಧರ್ಮೇ' ಎಂದು ಗೀತಾಭಾಷ್ಯದಲ್ಲಿ ಹೇಳಿರುವದರಿಂದ ಯಜ್ಞ ಭಾಗಹಾರಿಯಾದುದರಿಂದ ಹರಿತವರ್ಣ ಇರುವದರಿಂದ **ಹರಿ** ಶಬ್ದವಾಚ್ಯನಾದವನೆಂದರ್ಥ. ಆದರೆ ಯಜ್ಞಭಾಗ ಹರಣ (ಸ್ವೀಕಾರ) ಎಲ್ಲ ದೇವತೆಗಳಿಗೂ ಇದೆ ಆದ್ದರಿಂದ ಹರಿ ಎಂದರೆ ಎಲ್ಲ ದೇವತೆಗಳಾಗ ಬಹುದು ಅಥವಾ ವಾಯು ಎಂದು ಅರ್ಥವಾಗುವದು ಇದನ್ನು ಪರಿಹರಿಸಲು ನ್ಯಸ್ತಾಂಘ್ರಿಪದ್ಮಃ ಪತಗೇಂದ್ರಪೃಷ್ಠೇ ಎಂದು ಹೇಳಿದರು. ಗರುಡವಾಹನತ್ವ ಬೇರೆಯವರಿಗೆ ಇಲ್ಲ. ಇಲ್ಲಿ ಪಕ್ಷಿಶ್ರೇಷ್ಠ ಹಂಸ ಆಗಬಹುದು. ಆದರ ಮೇಲೆ ಕುಳಿತವ ಪದ್ಮಾಸನನಾಗಬಹುದು. ಎಂಬ ಶಂಕೆಗೆ ಉತ್ತರಿಸಲು ನ್ಯಸ್ತಾಂಘ್ರೀ ಚ ಪದ್ಮಾ ಚ ಪುರತಃ ಯೇನ ಸಃ ಎಂದು ಮಾಡಿದರೆ ರಮೆಯನ್ನು ಮುಂದೆ ಕೂಡಿಸಿಕೊಂಡ ಪಕ್ಷಿಶ್ರೇಷ್ಠದಲ್ಲಿದ್ದವನೆಂದರೆ ಪಕ್ಷಿಶ್ರೇಷ್ಠ ಹಂಸವಲ್ಲ ನ್ಯಸ್ತಾಂಘ್ರಿಪದ್ಮ ಪದ್ಮಾಸನನೂ ಅಲ್ಲ. ಕಿಂತು ಕಂತುಪಿತನಾದ ನಾರಾಯಣನೇ ಎಂದು ಹೇಳಿದಂತಾಯಿತು. ಆಂತರಂಗಿಕವಾಗಿ ಪ್ರಾಮಾಣಿಕಗಳಾದ ಎಲ್ಲ ಗುಣಗಳಿಂದ ಪೂರ್ಣ ಎಂಬ ಅರ್ಥವಿದ್ದರೂ ಮುಖ್ಯತಃ ಅಷ್ಟಗುಣ ಎಂದು ಹೇಳಿದ್ದು ಎಲ್ಲ ಗುಣಗಳೂ ಏತನ್ಮೂಲಕವಾದ್ದರಿಂದ ಸಜ್ಜನರಿಗೆ ಸ್ವತ ಏವ ತಿಳಿಯುವವು. ಅಸಜ್ಜನರಿಗೆ ಈಶ್ವರನಲ್ಲಿ ಎಂಟೇ ಗುಣವೆಂದು ದುಷ್ಟನಿಬಂಧನ ಬರೆಯಲು ಸಾಧ್ಯವಾಗಲೆಂದು ಮೋಹಪಡಿಸಲು ಅಷ್ಟಗುಣ ಎಂದು ಹೇಳಿದ್ದಾರೆ ಎಂದು ತಿಳಿಯಬೇಕು. ।।೧೨।।

**ಜಲೇಷು ಮಾಂ ರಕ್ಷತು ಮತ್ಸ್ಯಮೂರ್ತಿಃ**
**ಯಾದೋಗಣೇಭ್ಯೋ ವರುಣಸ್ಯ ಪಾಶಾತ್ ।**
**ಸ್ಥಲೇ ಚ ಮಾಯಾವಟುವಾಮನೋಽವ್ಯಾತ್**
**ತ್ರಿವಿಕ್ರಮಃ ಖೇಽವತು ವಿಶ್ವರೂಪಃ** ।।೧೩।।

**ಮತ್ಸ್ಯಮೂರ್ತಿಃ** ಮೀನಿನಂತೆ ಶರೀರವುಳ್ಳ, ಸ್ವಯಂ ಸಂತೋಷದಿಂದಿರುವ, ಇತರರಿಗೆ ಸಂತೋಷ ಪಡಿಸುವನಾದ್ದರಿಂದ ಮತ್ಸ್ಯನಾಮಕನಾದ, ಮದಿ ಹರ್ಷೇ ಎಂಬ ಧಾತುವಿಗೆ ಅತನ್ವಜ್ ಎಂದು ಉಣಾದಿ ಸ್ಯ ಪ್ರತ್ಯಯ. ಅಥವಾ ಮಥ್ನಾತೀತಿ ಮತ್ ಎಂದರೆ ಅಸುರ, ತಂ ಸ್ಯತಿ ನಾಶ ಮಾಡುವನಾದ್ದರಿಂದ ಮತ್ಸ್ಯ, ಮಥಿ ಹಿಂಸಾಯಾಂ ಎಂದು ಧಾತು ಇದೆ 'ಶಿರೋ ಮಮಂಥ ತರಸಾ' ಎಂದು

ಪ್ರಯೋಗವೂ ಇದೆ. ಅಥವಾ ಮಥಿತ್ವಾ ಸರತೀತಿ ಮತ್ಸ್ಯಃ ಮೀನ ಎಂಬರ್ಥದಲ್ಲಿ ನೀರನ್ನು ಕಲಕಿ ಸಂಚರಿಸುವ ಎಂದರ್ಥ. ಮಂಥ ವಿಲೋಡನೇ ಎಂದು ಧಾತು ಇದೆ 'ಸೃ ಗತೌ' ಎಂಬ ಧಾತುವಿಗೆ ಡ್ಯ ಪ್ರತ್ಯಯದಿಂದ ಸ್ಯ ಎಂದಾಗಿದೆ. ಸರಣವೆಂದರ್ಥ **ಜಲೇಷು** ನೀರಿನಲ್ಲಿ ಪಾಚಿಯಲ್ಲಿ **ಯಾದೋಗಣೇಭ್ಯಃ** ಜಲಚರ ಪ್ರಾಣಿಗಳ ಸಮೂಹದಿಂದ **ವರುಣಸ್ಯ ಪಾಶಾತ್** ವರುಣನ ಪಾಶದಿಂದ **ಮಾಂ ರಕ್ಷತು** ನನ್ನನ್ನು ರಕ್ಷಿಸಲಿ **ಮಾಯಾವಟುಃ ವಾಮನಃ** ಇಚ್ಛೆಯಿಂದ ಬ್ರಹ್ಮಚಾರಿ ರೂಪ ಧರಿಸಿದ ವಾಮನ ನಾಮಕ ಶ್ರೀಹರಿಯು **ಸ್ಥಲೇ** ಭೂತಲದಲ್ಲಿ **ಅವ್ಯಾತ್** ರಕ್ಷಿಸಲಿ. **ವಿಶ್ವರೂಪಃ** ಅವನೇ ವ್ಯಾಪ್ತವಾದ ರೂಪವುಳ್ಳ ವಿಶ್ವವೇ ಶರೀರವಾಗಿವುಳ್ಳ **ತ್ರಿವಿಕ್ರಮಃ** ತ್ರಿವಿಕ್ರಮನು **ಖೇ** ಆಕಾಶದಲ್ಲಿ **ಅವತು** ರಕ್ಷಿಸಲಿ.

ಯಾದೋಗಣಗಳೇ ವರುಣ ಪಾಶ ಆದರಿಂದ ಎಂಬ ವ್ಯಾಖ್ಯಾನವು ಯಾವ ಪ್ರಮಾಣವನ್ನೂ ಕೊಡದಿರುವದರಿಂದ ವಿಚಾರಣೀಯವೆನ್ನುತ್ತಾರೆ ಶ್ರೀಗಳು. ಅಭಿಮಾನಿದೇವತೆಗಳನ್ನು ಎಲ್ಲೆಡೆ ಒಪ್ಪುತ್ತೇವೆ. ಈ ಪಾಶ ಚೇತನವೆಂಬ ವಾದವು ಪಾಶವು ವರುಣ ಮಾತ್ರ ಧಾರ್ಯವಾದುದಲ್ಲವಾದರಿಂದಲೂ ಅನುಪಪನ್ನವಾಗಿದೆ. 'ಮಹೋದರೋ ಗಜಮುಖಃ ಪಾಶದಂತಾಂಕುಶಃ' ಎಂದು ಗಣೇಶನಿಗೂ, 'ಪಾಶ ಭೃತಶ್ಚ ತದ್ಭಟಾನ್' ಎಂಬಲ್ಲಿ ಯಮದೂತರಿಗೂ ಇಲ್ಲಿಯೇ ಭಗವಂತನಿಗೂ ಹೇಳಿದೆ. ದಶಮಸ್ಕಂಧದಲ್ಲಿ 'ಪಾಶೋದ್ಯತಕರಃ ಪಾಯಾತ್ । ತತ್ರ ಕಾಶ್ಯಪಪುತ್ರಸ್ಯ ಕಂಠೇ ಪಾಶಂ ಜಲೇಶ್ವರಃ' ಮುಂತಾಗಿ ಹೇಳಿರುವದರಿಂದ ಚೇತನವಾಗಲು ಸಾಧ್ಯವಿಲ್ಲ. ಅಚೇತನವೇ ಆಗಬೇಕು. ಪಾಶಧಾರಿ ವರುಣ ಮಾತ್ರವಾದರೆ ಆ ಪಾಶ ಜಲಚರರೂಪವಾಗಬಹುದು. ಉಳಿದವರಿಗೆ ಅದು ಪಾಶ ಹೇಗಾದಿತು. ಅಮರವ್ಯಾಖ್ಯಾನದಲ್ಲಿ ಭಾನುದೀಕ್ಷಿತರು ಯಾ ಪ್ರಾಪಣೇ ಬಾಹುಲಕಾದ್ವಸುನ್ ಪಾಶೋಽಸ್ಯ ಅಸ್ತಿ ಎಂದು ತೋರಿಸಿರುವರೇ ಹೊರತು ಪಾಶಕ್ಕೂ ಯಾದಸ್ ಗಳಿಗೂ ಐಕ್ಯ ಹೇಳಿಲ್ಲ. ಕಾರಣ ಅದು ಸರಿಯಲ್ಲ. ವರುಣಪಾಶಕ್ಕೆ ಸಿಕ್ಕಿದವನು ಸಾಯುವದು ನಿಶ್ಚಿತವಾದ್ದರಿಂದ ಆದರ ಪರಿಹಾರಕ್ಕಾಗಿ ಪ್ರತ್ಯೇಕ ಹೇಳಿರುವರು ಎಂದು ತಿಳಿಯಬೇಕು ಎಂದು ವಿಜಯಧ್ವಜರು ಮತ್ತು ಚಿಟ್ಟಿ ಆಚಾರ್ಯರು ಹೇಳುತ್ತಾರೆ. ।।೧೩।।

**ದುರ್ಗೇಷ್ವಟವ್ಯಾಜಿಮುಖಾದಿಷು ಪ್ರಭುಃ**
**ಪಾಯಾನ್ನೃಸಿಂಹೋಽಸುರಯೂಥಪಾರಿಃ ।**

**ವಿಮುಂಚತೋ ಯಸ್ಯ ಮಹಾಟ್ಟಹಾಸಂ**
**ದಿಶೋ ವಿನೇದುರ್ನ್ಯಪತಂಶ್ಚ ಗರ್ಭಾಃ** ॥೧೪॥

**ದುರ್ಗೇಷು** ಪರ್ವತಗಳಲ್ಲಿ **ಅಟವ್ಯಾಜಿಮುಖೇಷು** ಕಾಡು-ಯುದ್ಧ ಮೊದಲಾದವುಗಳಲ್ಲಿ ಅಥವಾ ಆಜಿಶ್ಚ ಮುಖಂ ಚ ಆದಿನಶ್ಚ ತೇಷು **ಆಜಿ** ಯುದ್ಧ **ಮುಖಂ** ಗಮನವಿಶೇಷದಲ್ಲಿ **ಆದಿನಃ** ರಾಕ್ಷಸರುಗಳಲ್ಲಿಯೂ 'ಮುಖಂ ನಿಸ್ಸರಣೇ' ಎಂದು ವಿಶ್ವವಿದೆ. 'ಆದಿನೋ ರಾಕ್ಷಸಾಃ ಪ್ರೋಕ್ತಾಃ' ಎಂದು ದಶಮತಾತ್ಪರ್ಯದಲ್ಲಿ ಹೇಳಿದೆ. ಮಖ ಎಂದು ವಿಜಯಧ್ವಜರ ಪಾಠವಿದೆ. ಯಜ್ಞ ಮುಂತಾದವುಗಳಲ್ಲಿ ಎಂದು ಅರ್ಥ. **ದುರ್ಗೇಷು** ಸಂಕಟಗಳಲ್ಲಿ, ಎಂದರ್ಥ, **ಅಸುರಯೂಥಪಾರಿಃ** ದೈತ್ಯರ ಸಂಘಕ್ಕೆ ಒಡೆಯನಾದ ಹಿರಣ್ಯಕಶಿಪುವಿನ ಶತ್ರುವಾದ **ಪ್ರಭುಃ** ಸಮರ್ಥನಾದ, ಮತ್ತು **ಯಸ್ಯ** ಯಾವನು **ಮಹಾಟ್ಟಹಾಸಂ ವಿಮುಂಚತಃ** ಗಹಗಹಿಸಿ ನಗುತ್ತಿರಲು **ದಿಶಃ ವಿನೇದುಃ** ದಿಕ್ಕುಗಳು ಪ್ರತಿಧ್ವನಿಸಿದವು **ಗರ್ಭಾಃ** ಅಸುರಸ್ತ್ರೀಯರ ಗರ್ಭಗಳು **ನ್ಯಪತನ್** ಬಿದ್ದವು ಅಂತಹ **ನೃಸಿಂಹಃ** ನೃಸಿಂಹರೂಪಿ ಶ್ರೀಹರಿಯು **ಪಾಯಾತ್** ರಕ್ಷಿಸಲಿ.

**ದುರ್ಗೇಷು** ಕೋಟೆ-ಕೊತ್ತಲುಗಳಲ್ಲಿ **ಪ್ರಭುಃ** ಪೃಥು ಮೊದಲಾದವರಲ್ಲಿ ಆವಿಷ್ಟನಾದ ರಾಜರಾಜೇಶ್ವರ ರೂಪವು **ಅವತು** ರಕ್ಷಿಸಲಿ ಎಂದು ಭಿನ್ನ ರೂಪ ಪರವೆಂದೂ ಮಾಡಬಹುದು. 'ಯೂಥನಾಥಸ್ತು ಯೂಥಪಃ' ಎಂದಿರುವದರಿಂದ ಆತನಿಗೆ ಪರ್ಯಾಯವಾದ ಯೂಥ ಶಬ್ದ ಉಪಯೋಗಿಸಿದ್ದರಿಂದ ನರಸಿಂಹ ಹಿಂಸಕನು, ಆನೆ ಎನಿಸಿದ ಹಿರಣ್ಯನು ಹಿಂಸ್ಯನು. ಆದ್ದರಿಂದ ಅನುರೂಪತೆ ಧ್ವನಿತವಾಗುವದು. ಸಪ್ತಮಸ್ಕಂಧದಲ್ಲಿ 'ನೃಸಿಂಹಂ ಪ್ರತಿ ದೈತ್ಯಕುಂಜರಃ' ಎಂದು ಹೇಳಿದೆ. ॥೧೪॥

**ರಕ್ಷತ್ವಸೌ ಮಾಽಧ್ವನಿ ಯಜ್ಞಕಲ್ಪಃ**
**ಸ್ವದಂಷ್ಟ್ರಯೋನ್ನೀತಧರೋ ವರಾಹಃ ।**
**ರಾಮೋಽದ್ರಿಕೂಟೇಷ್ವಥ ವಿಪ್ರವಾಸೇ**
**ಸಲಕ್ಷ್ಮಣೋಽವ್ಯಾದ್ ಭರತಾಗ್ರಜೋ ಮಾಮ್** ॥೧೫॥

**ಸ್ವದಂಷ್ಟ್ರಯಾ** ತನ್ನ ಕೊರೆ ಹಲ್ಲಿನಿಂದ **ಉನ್ನೀತಧರಃ** ಭೂಮಿಯನ್ನು ಮೇಲೆತ್ತಿ ತಂದ **ಯಜ್ಞಕಲ್ಪಃ** ೧. ತನ್ನ ಅವಯವಗಳಿಂದ ಯಜ್ಞಗಳನ್ನು ಸೃಷ್ಟಿಸಿದ ೨. ವಿಷ್ಣುವಿಗೆ ಸಮಾನನಾದ ಅಂದರೆ ವಿಷ್ಣುವೇ ಆದ **ಅಸೌ** ಪ್ರಸಿದ್ಧನಾದ **ವರಾಹಃ** ವರಾಹ

ರೂಪಿಯಾದ ಪರಮಾತ್ಮನು **ಮಾ** ನನ್ನನ್ನು **ಅಧ್ವನಿ** ಮಾರ್ಗದಲ್ಲಿ **ರಕ್ಷತು** ರಕ್ಷಿಸಲಿ. ಅಥವಾ **ಮಾಧ್ವನಿ** ವಿರುದ್ಧ ಮಾರ್ಗದಲ್ಲಿ **ರಕ್ಷತು** ಅಲ್ಲಿ ಹೋಗದಂತೆ ರಕ್ಷಿಸಲಿ. ಸಂಸ್ಥಾನವಿಶೇಷದಲ್ಲಿ ಎಂದೂ ಅರ್ಥ. 'ಅಧ್ವಾ ವರ್ತ್ಮನಿ ಸಂಸ್ಥಾನೇ' ಎಂದು ವಿಶ್ವವಿದೆ. **ರಾಮಃ** ಪರಶುರಾಮನು **ಅದ್ರಿಕೂಟೇಷು** ಪರ್ವತಗಳಲ್ಲಿ **ಅಥ** ಮತ್ತು **ವಿಪ್ರವಾಸೇ** ಬ್ರಾಹ್ಮಣರಲ್ಲಿರುವಾಗ ಅವರಲ್ಲಿ ಅಪರಾಧ ಮಾಡದಂತೆ **ರಕ್ಷತು** ರಕ್ಷಿಸಲಿ, 'ಆಸ್ತೇಽದ್ಯ ಮಹೇಂದ್ರೌ' ಎಂದು ನವಮಸ್ಕಂಧದಲ್ಲಿ ಹೇಳಿರುವದರಿಂದ ಮಹೇಂದ್ರವೇ ಮನೆಯಾಗಿವುಳ್ಳವನ ಮತ್ತು ಬ್ರಾಹ್ಮಣನೂ ಆದ್ದರಿಂದ ಹೀಗೆ ಪ್ರಾರ್ಥನೆ. **ಅದ್ರಿಕೂಟೇಷು** ಪರ್ವತಗಳಲ್ಲಿ **ಅಥ** ಮತ್ತು **ವಿಪ್ರವಾಸೇ** ಅನೇಕ ರೀತಿಯ ಪ್ರವಾಸದಲ್ಲಿ **ಭರತಾಗ್ರಜಃ** ಭರತನ ಅಣ್ಣನಾದ **ರಾಮಃ** ದಶರಥಪುತ್ರನಾದ ಶ್ರೀರಾಮಚಂದ್ರನು **ಸಲಕ್ಷ್ಮಣಃ** ಲಕ್ಷ್ಮಣನಿಂದ ಕೂಡಿದವನಾಗಿ **ಅವ್ಯಾತ್** ರಕ್ಷಿಸಲಿ. ಇವನು ಚಿತ್ರಕೂಟ ಪರ್ವತದಲ್ಲಿ ಅಡವಿಯಲ್ಲಿ ಪ್ರವಾಸ ಮಾಡಿದವನು.

'ವಿಪ್ರವಾಸೇ ಪ್ರವಾಸೇ ಬಲರಾಮಃ ಭಾರ್ಗವಃ' ಎಂದು ಸತ್ಯಧರ್ಮರ ಟಿಪ್ಪಣಿಯಿದೆ. ಬಲಕಾರ್ಯ ಮಾಡಿದ ರಾಮ ಬಲರಾಮ ಅಂದರೆ ಭಾರ್ಗವ ಹೀಗೆ ಅಭಿಪ್ರಾಯವೆನಿಸುವದು. ಹೊರತು ಕೃಷ್ಣಾಗ್ರಜ ಅಲ್ಲ. ಭಾರ್ಗವರಾಮ ವ್ಯಾವೃತ್ತಿಗೆ ಸಲಕ್ಷ್ಮಣಃ ಎಂದಿದ್ದಾರೆ. ಈ ಸಲಕ್ಷ್ಮಣನು ಯಾವದೋ ಚಿಹ್ನೆ ಧರಿಸಿದ ಯಾವನೋ ರಾಮನಲ್ಲ ಎನ್ನಲು **ಭರತಾಗ್ರಜಃ** ಎಂದಿದ್ದಾರೆ. ಆ ಭರತಾಗ್ರಜ ಲಕ್ಷ್ಮಣನಲ್ಲವೆಂದು ತಿಳಿಸಲು ಸಲಕ್ಷ್ಮಣಃ ಎಂದಿದ್ದಾರೆ ಎಂದು ತಿಳಿಯಬೇಕು. ।।೧೫।।

**ಮಾಮುಗ್ರಧನ್ವಾ ಅಖಿಲಪ್ರಮಾದಾತ್**
**ನಾರಾಯಣಃ ಪಾತು ನರಶ್ಚ ಹಾಸಾತ್ ।**
**ದತ್ತಸ್ತ್ವಯೋಗಾದಥ ಯೋಗನಾಥಃ**
**ಪಾಯಾದ್ಗುಣೇಶಃ ಕಪಿಲಃ ಕರ್ಮಬಂಧಾತ್ ।।೧೬।।**

**ಉಗ್ರಧನ್ವಾ** ದೈತ್ಯಭಯಂಕರವಾದ ಧನುಸ್ಸನ್ನು ಧರಿಸಿದ **ನಾರಾಯಣಃ** ನಾರಾಯಣರೂಪಿಯು **ಅಖಿಲಪ್ರಮಾದಾತ್** ಶ್ರೀಹರಿಯ ವಿಸ್ಮರಣೆ ಮತ್ತು ಅನ್ಯಥಾಜ್ಞಾನ ಮುಂತಾದವುಗಳಿಂದ **ಮಾಂ** ನನ್ನನ್ನು **ಪಾತು** ರಕ್ಷಿಸಲಿ **ನರಃ ಚ** ನರನಲ್ಲಿ ಆವಿಷ್ಟನಾದ ನರನಾಮಕ ಶ್ರೀಹರಿಯು **ಹಾಸಾತ್** ಉನ್ಮಾದದಿಂದುಂಟಾಗುವ (ಹುಚ್ಚು) ನಗುವಿನಿಂದ **ಪಾತು** ಕಾಪಾಡಲಿ **ಅಥ** ಮತ್ತು **ಯೋಗನಾಥಃ**

ಅಷ್ಟಾಂಗಯೋಗ ಪ್ರವರ್ತಕನಾದ **ದತ್ತಃ** ದತ್ತಾತ್ರೇಯ ರೂಪಿಯು **ಅಯೋಗಾತ್** ಯೋಗಭ್ರಂಶದಿಂದ ನಾರಾಯಣ ಸ್ಮರಣೆ ಮುಂತಾದ ಉಪಾಯವಿಲ್ಲದಿರುವದರಿಂದ **ಮಾಂ** ನನ್ನನ್ನು **ಪಾಯಾತ್** ಸಂರಕ್ಷಿಸಲಿ. **ಗುಣೇಶಃ** ಗುಣತ್ರಯ ನಿಯಾಮಕನಾದ **ಕಪಿಲಃ** ಕಪಿಲರೂಪಿಯು **ಕರ್ಮಬಂಧಾತ್** ತ್ರಿಗುಣ ನಿಮಿತ್ತಕವಾಗಿ ಬಂದ ಕರ್ಮ ಫಲಲೇಪವೆಂಬ ಬಂಧನದಿಂದ **ಪಾಯಾತ್** ರಕ್ಷಿಸಲಿ. ।।

'ಸದಾ ವಿಷ್ಣೋರನ್ಯಥಾಜ್ಞಾನವರ್ಜನಮ್ । ಶಾಸ್ತ್ರಾಭ್ಯಾಸಃ ಸದೋದ್ಯೋಗಾತ್ ಶ್ರವಣಾಚ್ಚ ವಿಚಾರತಃ । ನಿಷಿದ್ಧಕರ್ಮಣಾಂ ತ್ಯಾಗಃ ಸ್ವಧರ್ಮಸ್ಯ ಕೃತಿಃ ಸದಾ । ಅಪ್ರಮಾದ ಇತಿ ಪ್ರೋಕ್ತಃ ।' ಎಂದಿದೆ. 'ವಿಷ್ಣೋರ್ವಾಯೋರನಂತಸ್ಯ ತ್ರಿಭಿರಂಶೈರ್ನರಃ ಸ್ಮೃತಃ । ಎಂಬ ವಚನದಿಂದ ನರನಲ್ಲಿ ವಿಷ್ಣುವಿನ ಆವೇಶವಿದೆ ಎಂದು ತಿಳಿಯಬೇಕು. । ಈ ಗ್ರಂಥ ವೇದತುಲ್ಯವಾಗಿದೆ ಎಂದು ತಿಳಿಸಲು ಉಗ್ರಧನ್ವಾ ಅಖಿಲ ಎಂಬಲ್ಲಿ ಸವರ್ಣದೀರ್ಘಸಂಧಿಯನ್ನು ಮಾಡಲಿಲ್ಲ. ನಿಖಿಲ ಎಂಬ ಪಾಠವೇ ಬಹಳ ಕಡೆ ಇದೆ. ಕೆಲವೆಡೆ ಅಖಿಲ ಎಂಬ ಪಾಠ. ಆಗ ಈ ಗತಿ.

**ಸನತ್ಕುಮಾರೋಽವತು ಕಾಮದೇವಾತ್**
**ಹಯಶೀರ್ಷೋ ಮಾಂ ಪಥಿ ದೇವಹೇಲನಾತ್ ।**
**ದೇವರ್ಷಿವರ್ಯಃ ಪುರುಷಾಂತರಾರ್ಚನಾತ್**
**ಕೂರ್ಮೋ ಹರಿರ್ಮಾಂ ನಿರಯಾದಶೇಷಾತ್** ।।೧೭।।

**ಸನತ್ಕುಮಾರಃ** ಚತುರ್ಮುಖ ಸುತ ಸನತ್ಕುಮಾರನಲ್ಲಿ ಆವಿಷ್ಟನಾದ ಬ್ರಹ್ಮಚಾರಿಯಾದ ಸನತ್ಕುಮಾರ ನಾಮಕ ಶ್ರೀಹರಿಯು **ಕಾಮದೇವಾತ್** ಮಾದಕವಾದ ದುಷ್ಟ ಕಾಮದಿಂದ **ಮಾಂ** ನನ್ನನ್ನು **ಅವತು** ರಕ್ಷಿಸಲಿ **ಹಯಶೀರ್ಷಃ** ಹಯಗ್ರೀವ ರೂಪೀ ಶ್ರೀಹರಿಯು **ಪಥಿ ದೇವಹೇಲನಾತ್** ಹಾದಿಯಲ್ಲಿ ಇರುವ ದೇವತೆಗಳು ಗುರುಗಳು ಮುಂತಾದವರಿಗೆ ನಮಸ್ಕರಿಸದೆ ಓಡುವದೆಂಬ ಅಸತ್ಕಾರ್ಯದಿಂದ, (ಸಾಧನ ಮಾರ್ಗದಲ್ಲಿ) **ದೇವರ್ಷಿವರ್ಯಃ** ಬ್ರಹ್ಮಾದಿ ದೇವತೆಗಳಿಗೂ ಋಷಿಗಳಿಗೂ ಶ್ರೇಷ್ಠನಾದ ಮಹಿದಾಸರೂಪಿಯು **ಪುರುಷಾಂತರಾರ್ಚನಾತ್** ವಿಷ್ಣು ಪರಿವಾರವೆಂದಲ್ಲದೇ ಪ್ರಧಾನವಾಗಿ ಬ್ರಹ್ಮಾದಿಗಳನ್ನು ಪೂಜಿಸುವದರಿಂದ ಮತ್ತು ಶ್ರೀಹರಿಗೆ ಅರ್ಪಿಸದ ಅರ್ಚನಾರೂಪ ಕರ್ಮದಿಂದ ಹಾಗೂ ಅವನ ಸ್ಮರಣೆ ಇಲ್ಲದೆ ಮಾಡುವ ಅರ್ಚನೆಯಿಂದ ನನ್ನನ್ನು ಕಾಪಾಡಲಿ.

**ಕೂರ್ಮೋ ಹರಿಃ** ಕೂರ್ಮರೂಪಿ ಶ್ರೀಹರಿಯು **ಅಶೇಷಾತ್ ನಿರಯಾತ್** ಎಲ್ಲ ನರಕಗಳಿಂದ **ಅವತು** ರಕ್ಷಿಸಲಿ ಅಥವಾ **ನಿರಯಾತ್** ನರಕಪ್ರಾಪಕವಾದ **ನಿರಯಾತ್** ಆಲಸ್ಯದಿಂದ, ರಯ ಎಂದರೇ ವೇಗ ಎಂದು ಅರ್ಥ. ನಿ ಎಂದರೆ ನಿಷೇಧ. ರಯದ ನಿಷೇಧ ಎಂದರೆ ಆಲಸ್ಯ ಎಂದು ಅರ್ಥವಾಗುವುದು. 'ನಿರ್ನಿಷೇಧೇ' ಇತಿ ವಿಶ್ವಃ. ನಿರಯಾತ್ ದುರ್ದೈವದಿಂದ ಎಂದೂ ಅರ್ಥ.

ಈ ಶ್ಲೋಕದಲ್ಲಿ ಸನತ್‌ಕುಮಾರ ಎಂದರೆ ಸನಕಾದಿ ನಾಲ್ವರಲ್ಲಿ ಸೇರಿದ ಬ್ರಹ್ಮಪುತ್ರನೆಂದೂ ಕಾಮದೇವ ಎಂದರೆ ರತಿಪತಿ ಎಂದೂ ಭ್ರಮ ಬರುವದು ಕಾಮ ಎಂದರೆ ಸತ್ ಕಾಮವೋ ಅಸತ್ ಕಾಮವೋ ಎಂದೂ ಸಂದೇಹಬರುವದು. ಕಾರಣ ಮೊದಲನೆ ಪಾದವನ್ನು ಅನುವಾದ ಮಾಡಿ ಪ್ರಮಾಣದಿಂದಲೇ ಭ್ರಮ-ಸಂದೇಹಗಳನ್ನು ನಿವಾರಿಸುತ್ತಾ ವ್ಯಾಖ್ಯಾನಿಸುವರು.

ತಾತ್ಪರ್ಯ

ಸನತ್ಕುಮಾರೋಽವತು ಕಾಮದೇವಾತ್ ।

ಸನತ್ಕುಮಾರನಾಮಾ ತು ಬ್ರಹ್ಮಚರ್ಯವಪುಃ ಹರಿಃ ।
ಸನತ್ಕುಮಾರಮಪರಂ ಬ್ರಹ್ಮಪುತ್ರಂ ವಿವೇಶ ಯಃ ।
ಸ ಮಾಂ ಯೋಗ್ಯೇತರಾತ್ ಕಾಮಾತ್ ಪಾತು ವಿಶ್ವೇಶ್ವರಃ ಪ್ರಭುಃ ॥ಇತಿ ಚ॥

'ದೇವರ್ಷಿವರ್ಯಃ ಪುರುಷಾಂತರಾರ್ಚನಾತ್' ಎಂಬಲ್ಲಿ ದೇವರ್ಷಿ ಎಂದರೆ ನಾರದರು, ಪುರಷಾಂತರಾರ್ಚನಾತ್ ಎಂದರೆ ಅವರನ್ನು ಬಿಟ್ಟು ಬೇರೆಯವರ ಪೂಜೆ ಹೀಗೆ ಅನ್ಯಥಾಜ್ಞಾನ ಬರುವದು. ಕಾರಣ ಅದನ್ನು ನಿವಾರಿಸಲು ಅನುವಾದ ಮಾಡಿ ಪ್ರಮಾಣದಿಂದ ಅದರ ಅರ್ಥ ಹೇಳುವರು.

ತಾತ್ಪರ್ಯ

ದೇವರ್ಷಿವರ್ಯಃ ಪುರುಷಾಂತರಾರ್ಚನಾತ್ ।

'ವಿಷ್ಣೋರಪರಿವಾರತ್ವದೃಷ್ಟ್ಯಾ ದೇವಾಂತರಾರ್ಚನಾತ್ ।
ಮಹಿದಾಸೋ ದೇವಋಷಿಃ ಪಾತು ಮಾಂ ವಿಷ್ಣುರವ್ಯಯಃ ।
ತದನರ್ಪಿತಕರ್ಮಭ್ಯಃ ತದಸ್ಮರಣತಸ್ತಥಾ ॥ -ಇತಿ ಚ ತಂತ್ರಭಾಗವತೇ

ಸನತ್ಕುಮಾರೋऽವತು ಕಾಮದೇವಾತ್ ಎಂಬ ವಾಕ್ಯಕ್ಕೆ ಸನತ್ಕುಮಾರನೆಂದು ಹೆಸರುಳ್ಳ ಬ್ರಹ್ಮಚಾರಿಯ ವ್ರತಾನುಷ್ಠಾನ ಉಳ್ಳ ಯಾವ ಶ್ರೀಹರಿಯ ಭಗವದ್ರೂಪ ಸನತ್ಕುಮಾರನಿಂದ ಭಿನ್ನನಾದ ಬ್ರಹ್ಮಪುತ್ರನಾದ ಸನತ್ಕುಮಾರನನ್ನು ಪ್ರವೇಶಿಸಿರುವನೋ ಅಂತಹ ಸರ್ವೇಶ್ವರನಾದ ಶ್ರೀಹರಿಯು ಅಯೋಗ್ಯಕಾಮನೆಗಳಲ್ಲಿ ಮನಸ್ಸು ಹೋಗದಂತೆ ಮಾಡಿ ರಕ್ಷಿಸಲಿ. 'ದೇವರ್ಷಿವರ್ಯಃ ಪುರುಷಾಂತರಾರ್ಚನಾತ್' ಎಂಬ ವಾಕ್ಯಕ್ಕೆ ಬ್ರಹ್ಮಾದಿದೇವತೆಗಳಿಗಿಂತ ಋಷಿಗಳಿಗಿಂತಲೂ ಶ್ರೇಷ್ಠನಾದ ನಾಶರಹಿತನಾದ ಮಹಿದಾಸರೂಪಿ ಶ್ರೀಹರಿಯು, ಬ್ರಹ್ಮಾದಿಗಳನ್ನು ಶ್ರೀಹರಿಯ ಪರಿವಾರವೆಂದು ತಿಳಿಯದೇ ಉತ್ತಮರೆಂದು (ಪ್ರಧಾನವಾಗಿ) ತಿಳಿದು ಮಾಡಿದ ಪೂಜೆಯಿಂದಲೂ, ಶ್ರೀಹರಿಗೆ ಅರ್ಪಿಸದ ಯಜ್ಞಾದಿಗಳ ಕರ್ಮಗಳಿಂದಲೂ ಶ್ರೀಹರಿಯನ್ನು ಸ್ಮರಿಸದಿರುವದರಿಂದಲೂ ರಕ್ಷಿಸಲಿ.

ಮಾಡಿದ ಕರ್ಮಗಳನ್ನು ಪರಮಾತ್ಮನಿಗೆ ಸಮರ್ಪಿಸಬೇಕು. ಸಮರ್ಪಿಸಲು ಮರೆತರೆ ಅನರ್ಥವಾಗುವುದು. ಆ ವಿಸ್ಮರಣೆಯಿಂದ ನನ್ನನ್ನು ರಕ್ಷಿಸಲಿ. ಅಂದರೆ ಕರ್ಮಗಳನ್ನು ಮಾಡಿದ ಮೇಲೆ ಅವುಗಳನ್ನು ಸಮರ್ಪಿಸುವ ಬುದ್ಧಿಯನ್ನು ನೀಡಲಿ ಎಂದು ಅರ್ಥ.

ದೇವಯತಿ ಮಾದಯತೀತಿ ದೇವಃ ತಸ್ಮಾತ್ ಅಂದರೆ ಮದಕಾರಿ ದುಷ್ಟ ಕಾಮದಿಂದ ಎಂದರ್ಥ ಮಾಡಿದಂತಾಯಿತು. ದಿವ್ ಧಾತು ಸ್ತು ಮೋದ ಮದ ಮುಂತಾಗಿ ಅರ್ಥವಿದೆ. ಅರ್ಚನ ಶಬ್ದದಿಂದ ಭಗವತ್ಸಮರ್ಪಣ ಅಸಮರ್ಪಣಗಳನ್ನು ಉಪಲಕ್ಷಣಯಾ ಸ್ವೀಕರಿಸಿದ್ದಾರೆ. ಆ ಅರ್ಚನಾತ್ ಎಂದು ಆಙ್ ಪ್ರಶ್ಲೇಷ ಮಾಡಿದರೆ ಆ ಸಮ್ಯಕ್ ಅಪರಿವಾರದೃಷ್ಟ್ಯಾ ಇತಿ ಯಾವತ್ ಋಷಿಗಳಿಗಿಂತಲೂ ಎಂಬುದಕ್ಕೆ ಸಮಾನಾರ್ಥವಾಗುವದು. ।।೧೭।।

**ಧನ್ವಂತರಿರ್ಭಗವಾನ್ ಪಾತ್ವಪಥ್ಯಾದ್**
**ದ್ವಂದ್ವಾದ್ಭಯಾದೃಷಭೋ ನಿರ್ಜಿತಾತ್ಮಾ ।**
**ಯಜ್ಞಶ್ಚ ಲೋಕಾದುತ ತತ್ಕೃತಾನ್ನೋ**
**ಬಲೋ ಗಣಾತ್ಕ್ರೋಧವಶಾದಹೀಂದ್ರಃ ।।೧೮।।**

**ಭಗವಾನ್** ಸಮಗ್ರ ಐಶ್ವರ್ಯ ಶಾಲಿಯಾದ **ಧನ್ವಂತರಿಃ** ಧನ್ವಂತರಿರೂಪಿಯು **ಅಪಥ್ಯಾತ್** ದೇಹಕ್ಕೆ ರೋಗ ತಂದು ಕೊಡುವ ಅಹಿತ ಆಹಾರ ಸೇವನೆಯಿಂದ **ಪಾತು**

ರಕ್ಷಿಸಲಿ. ಧನ್ವಂ ಪಾಪಂ ತರತೀತಿ **ಧನ್ವಂತರಿಃ** ಭಗವಂತನು ಪಾಪವನ್ನು ತರಣ ಮಾಡುವುದೆಂದರೆ ಅದರ ಸಂಬಂಧವಿಲ್ಲದಿರುವದು. ಅಥವಾ ಧನ್ವಂ ತಾರಯತಿ ಇತರಾನ್ ಇತಿ ಧನ್ವಂತರಿಃ ಅಂದರೆ ಇತರರ ಪಾಪ, ಪಾಪಜನ್ಯ ರೋಗವನ್ನು ಪರಿಹರಿಸುವ ಎಂದರ್ಥ. ಧನ್ವಂ ಎಂಬಲ್ಲಿ ದ್ವಿತೀಯಾಕ್ಕೆ ಲೋಪವಾಗದಿರುವದು ಆರ್ಷ. ಫಲೇ 'ಗ್ರಹಿರಾತ್ಮಂಭರಿಶ್ಚ' ಎಂದು ಚಕಾರಾತ್ ಕುಕ್ಷಿಂಭರಿ ಎಂಬಂತೆ ಮುಮಾಗಮವೆಂದಾದರೂ ತಿಳಿಯಬೇಕು. **ನಿರ್ಜಿತಾತ್ಮಾ** ಇಂದ್ರಿಯ ನಿಗ್ರಹ ಉಳ್ಳ **ಋಷಭಃ** ನಾಭಿಯ ಸುತನಾಗಿ ಅವತರಿಸಿದ ಋಷಭ ನಾಮಕ ಶ್ರೀಹರಿಯು **ದ್ವಂದ್ವಾತ್ ಭಯಾತ್** ಶೀತೋಷ್ಣಾದಿ ದ್ವಂದ್ವಗಳ ಭಯದಿಂದ **ಪಾತು** ಕಾಪಾಡಲಿ **ಯಜ್ಞಃ** ಆಕೂತಿಪುತ್ರನಾದ ಯಜ್ಞನಾಮಕ ಯಾಗಪ್ರವರ್ತಕನಾದ ಶ್ರೀಹರಿಯು **ತತ್ಕೃತಾತ್** ಯಜ್ಞದ ಫಲವಾಗಿ ಬರುವ **ಲೋಕಾತ್** ಅನಿತ್ಯವಾದ ಸ್ವರ್ಗಾದಿಲೋಕಗಳಿಂದ ಅಥವಾ **ಲೋಕಾತ್** ದುರ್ಜನರಾದ ರಾಕ್ಷಸರೇ ಮುಂತಾದವರಿಂದ **ತತ್ಕೃತಾತ್** ಅವರು ಮಾಡುವ ಉಪದ್ರವದಿಂದ ಮೊದಲು ಅವರ ಸಂಪರ್ಕಬೇಡವೆಂದೂ ಕಥಂಚಿತ್ ಬಂದರೆ ಅವರ ನಾಶ ಪ್ರಾರ್ಥನೆ ಎಂದು ತಿಳಿಯಬೇಕು.

'ರಕ್ಷೋಭಿರುಗ್ರೈಃ ಸಂಪ್ರಾಪ್ತಃ ಖಾದಿತುಂ ಮೋಚಿತಸ್ತದಾ । ಸ್ತೋತ್ರಂ ಶ್ರುತ್ವೈವ ಯಜ್ಞೇನ ತಾನ್ ಹತ್ವಾವಧ್ಯತಾಂ ಗತಾನ್' ಮುಂತಾಗಿ ಈಶಾವಾಸ್ಯಭಾಷ್ಯದಲ್ಲಿ ಹೇಳಿದೆ. **ನಃ** ನಮ್ಮನ್ನು **ಪಾತು** ಕಾಪಾಡಲಿ **ಬಲಃ** ಬಲರಾಮನು **ಅಹೀಂದ್ರಃ** ಶೇಷಾಂಶನು ಅಂದರೆ ಬಲರಾಮನಲ್ಲಿ ಆವಿಷ್ಟನಾದ ಶ್ವೇತಕೇಶಾತ್ಮಕನು **ಕ್ರೋಧವಶಾತ್ ಗಣಾತ್** ಸರ್ಪಗಣದಿಂದ **ಪಾತು** ಕಾಪಾಡಲಿ. ।।೧೮।।

ಶಂಖಚಕ್ರಭೃದೀಶೇಶಃ ಶ್ವೇತವರ್ಣೋ ಮಹಾಭುಜಃ ।
ಆವಿಷ್ಟಃ ಶ್ವೇತಕೇಶಾತ್ಮಾ ಶೇಷಾಂಶಂ ರೋಹಿಣೇಸುತಮ್ ।।

ಎಂದು ಮಹಾವಾರಾಹದಲ್ಲಿದೆ.

ಶೇಷದೇವಃ ಸಹಸ್ರಾಕ್ಷಃ ಸಹಸ್ರಾಂಘ್ರಿಶಿರೋಭುಜಃ ।
ಬಲಃ ಶಕ್ತೌ ಬಲೋ ರಾಮೇ ಬಲಿಷ್ಠೇ ಚ ಬಲಃ ಸ್ತಥಾ ।।

ಎಂದು ಅಭಿಧಾನವಿದೆ. 'ಧರ್ಮಪಥ್ಯರ್ಥನ್ಯಾಯಾದನಪೇತ ಇತಿ ಯತ್' ಎಂಬುದರಿಂದ ಯತ್ ಪ್ರತ್ಯಯ, ನ ಪಥ್ಯಂ ಅಪಥ್ಯಮ್. ।।೧೮।।

**ದ್ವೈಪಾಯನೋ ಭಗವಾನಪ್ರಬೋಧಾದ್**
**ಬುದ್ಧಸ್ತು ಪಾಷಂಡಗಣಾತ್ ಪ್ರಮಾದಾತ್ ।**
**ಕಲ್ಕೀ ಕಲೇಃ ಕಾಲಮಲಾತ್ ಪ್ರಪಾತು**
**ಧರ್ಮಾವನಾಯೋರುಕೃತಾವತಾರಃ** ॥೧೯॥

**ಭಗವಾನ್** ಪೂರ್ಣೈಶ್ವರ್ಯನಾದ **ದ್ವೈಪಾಯನಃ** ದ್ವೀಪವೇ ಆಶ್ರಯವಾಗಿ ಉಳ್ಳ ಪರಾಶರಪುತ್ರರಾದ ವೇದವ್ಯಾಸರೂಪೀ ಶ್ರೀಹರಿಯು **ಅಪ್ರಬೋಧಾತ್** ಶಾಸ್ತ್ರವಿಷಯಕ ಅಜ್ಞಾನದಿಂದ **ಉರು** ಮತ್ತೆ ಮತ್ತೆ **ಪ್ರಪಾತು** ರಕ್ಷಿಸಲಿ ವೇದವ್ಯಾಸರು ಸಚ್ಛಾಸ್ತ್ರ ಪ್ರವಕ್ತ್ರಾಚಾರ್ಯರಾದ್ದರಿಂದ **ಸಂಪ್ರಮೋಹಾತ್** ಎಂಬ ಪಾಠದಲ್ಲಿ ಮಿಥ್ಯಾಜ್ಞಾನದಿಂದ ಅಧರ್ಮೇಚ್ಛೆಯಿಂದ ಎಂದರ್ಥ. 'ಸಂಪ್ರಮೋಹೋऽಧರ್ಮಕಾಮಿತಾ' ಎಂದು ವಚನವಿದೆ. 'ಮೋಹಶ್ಚೈವ ವಿಪರ್ಯಯಃ' ಎಂದು ಭಾರತದಲ್ಲಿ ಹೇಳಿದೆ. **ಬುದ್ಧಃ ತು** ಬುದ್ಧ ನಾಮಕ ಶ್ರೀಹರಿಯು **ಪಾಷಂಡಗಣಾತ್** ಪಾಶುಪತ ಜಿನಾದಿಗಳಿಂದ **ಪ್ರಮಾದಾತ್** ಮನಸ್ಸಿನ ಅನವಧಾನತೆಯಿಂದ ಅಥವಾ **ಪಾಷಂಡಗಣಾತ್ ಪ್ರಮಾದಾತ್** ಪಾಷಂಡಿಗಳ ಸಹವಾಸದಿಂದಾಗುವ ಪ್ರಮಾದದಿಂದ ಎಂದರ್ಥ. ಪ್ರಮಾಯಾ ಅದಃ ಪ್ರಮಾದಃ ತಸ್ಮಾತ್ ಪಾಷಂಡಗಣಕ್ಕೆ ವಿಶೇಷಣ (ಪ್ರಮಾದ್ಯತೀತಿ ಪ್ರಮಾದಃ ತಸ್ಮಾತ್) ಅನ್ಯಥಾಜ್ಞಾನಸಾಧಕ ಉಪದೇಶ ಮಾಡುವ ಪಾಷಂಡಗಣದಿಂದ ಎಂದರ್ಥ. 'ಬೌದ್ಧಪಾಶುಪತಾದ್ಯಾಸ್ತು ಪಾಷಂಡಾ ಇತಿ ಕೀರ್ತಿತಾಃ' ಎಂದು ವಚನವಿದೆ. **ಧರ್ಮಾವನಾಯ** ಧರ್ಮರಕ್ಷಣೆಗಾಗಿ **ಕೃತಾವತಾರಃ** ಅವತಾರ ಮಾಡಿದ **ಕಲ್ಕೀ** ಕಲ್ಕಿರೂಪಿಯು **ಕಾಲಮಲಾತ್** ಕಾಲದ ಮಲವೆಂದು ಕರೆಯಲ್ಪಡುವ **ಕಲೇಃ** ಕಲಿಯುಗದಿಂದ ಕಲಿಯುಗ ಪ್ರಭಾವದಿಂದ **ಉರು** ಮತ್ತೆ ಮತ್ತೆ (ವಿಜ) **ಪ್ರಪಾತು** ರಕ್ಷಿಸಲಿ. **ಉರುಕೃತಾವತಾರಃ** ಎಂದು ಸಮಸ್ತ ಪದವೆಂದು ಇಟ್ಟುಕೊಂಡಾಗ' ಮಹತ್ತರವಾದ ಅವತಾರಮಾಡಿದ ಎಂದರ್ಥ.

(ಟಿಪ್ಪಣಿ) ಸತ್ಯಧರ್ಮರು- **ಕಲೇಃಕಾಲಮಲಾತ್** ಎಂಬುದು ಒಂದೇ ಪದ. ಷಷ್ಠಿಗೆ ಅಲುಕ್ ಆಕ್ರೋಶೇ ಕಲಿಸ್ವಾಮಿಕವಾದ ಯಾವ ಕಾಲವಿದೆಯೋ ಅದಕ್ಕೆ ಪ್ರಯೋಜಕವಾದ ಮಲ ಎಂದರೆ ಪಾಪ ಅದರಿಂದ ರಕ್ಷಿಸಲಿ ಎಂದರ್ಥ. ಯವನರನ್ನು ಸಂಹರಿಸಿ ಧರ್ಮವನ್ನು ರಕ್ಷಿಸಲು **ಉರುಕೃತಾವತಾರಃ ಉರುಭಿಃ** ಬ್ರಹ್ಮಾದಿಗಳಿಂದ **ಕೃತಾವತಾರಃ** ಮಾಡಲ್ಪಟ್ಟ ಪ್ರಾರ್ಥನಾದಿಕರ್ಮದಿಂದ ಅವತಾರವುಳ್ಳ ಪಾತು ಎಂದರೆ ಸಾಕಾಗಿರಲು ಪ್ರಪಾತು ಎಂದು ಹೇಳಿದ್ದರಿಂದ ಮಲ ಎಂಬ ಪದದ ಆನುಕೂಲ್ಯದಿಂದ

ಕ್ಷಾಲನೋಪಯೋಗಿ ಪ್ರಪಾರೂಪತೆಯನ್ನು ಕಲ್ಕಿಗೆ ಧ್ವನಿತ ಪಡಿಸಿರುವರು. 'ಪ್ರಪಾಪಾನೀಯಶಾಲಿಕಾ' ಎಂದು ಅಮರವಿದೆ. ಕೊಳೆ ತೊಳೆಯಲು ನೀರು ಇದ್ದಂತೆ ಎಂದರ್ಥ. ಪ್ರಪಾವದಾಚರತು ಪ್ರಪಾತು. ಕಾಲಮಲಂ ಪ್ರಾಪ್ಯ ಪ್ರಪಾತು ಲ್ಯಬ್ ಲೋಪನಿಮಿತ್ತಾ ಪಂಚಮೀ. ದ್ವೀಪೋಽಯನಂ ಯಸ್ಯ ಸಃ ದ್ವೀಪಾಯನಃ ಪರಾಶರಃ ತಸ್ಯ ಅಪತ್ಯಂ ಋಷ್ಯಂಧಕೇತ್ಯಣ್ । ಅನಂತರಾಪತ್ಯೇಽಪಿ ದ್ವೈಪಾಯನವದ್ಯ-ಞಿಯೋಶ್ಚ ಇತಿ ಫಕ್ ಸ್ಯಾತ್ । ತದಪಿ ನ ಅನಂತರಾಪತ್ಯೇ ಫಕೋಽದರ್ಶನಾತ್ । ದ್ವೀಪಮಯನಂ ಯಸ್ಯ ಸಃ ದ್ವೀಪಾಯನಃ ತಸ್ಯ ಅಪತ್ಯಂ ಷ್ಯಞಿ ದ್ವೈಪಾಯನಃ ಇತಿ ಭಾನುದೀಕ್ಷಿತಲೇಖನಾತ್ ॥

ಹಗಲು ರಾತ್ರಿಗಳನ್ನು ಐದೈದು ಭಾಗ ಮಾಡಿ ಆರಾರು ಘಳಿಗೆಯ ಹನ್ನೆರಡು ಕಾಲಗಳನ್ನು ಮಾಡಿ ಒಂದೊಂದು ಕಾಲಕ್ಕೆ ಒಬ್ಬೊಬ್ಬ ದೇವನನ್ನು ರಕ್ಷಿಸೆಂದು ಪ್ರಾರ್ಥಿಸುವರು-

**ಮಾಂ ಕೇಶವೋ ಗದಯಾ ಪ್ರಾತರವ್ಯಾದ್**
**ಗೋವಿಂದ ಆಸಂಗವ ಆತ್ತವೇಣುಃ ।**
**ನಾರಾಯಣಃ ಪಾತು ಸದಾತ್ತಶಕ್ತಿ**
**ರ್ಮಧ್ಯಂದಿನೇ ವಿಷ್ಣುರರೀಂದ್ರಪಾಣಿಃ ॥೨೦॥**

**ಗದಯಾ** (ಸಹಿತಃ) ಗದೆಯಿಂದ **ಕೇಶವಃ** ಕೇಶವನು **ಪ್ರಾತಃ** ಪ್ರಾತಃ ಕಾಲದಲ್ಲಿ **ಅವ್ಯಾತ್** ರಕ್ಷಿಸಲಿ. **ಆತ್ತವೇಣುಃ** ಕೊಳಲನ್ನು ಧರಿಸಿದ **ಗೋವಿಂದಃ** ಶ್ರೀಕೃಷ್ಣನು ಗೋವಿಂದನು **ಆಸಂಗವೇ** ಸಂಗವ ಕಾಲವನ್ನು ಹಿಡಿದು (ಅಭಿವ್ಯಾಪ್ಯ) **ಮಾಂ** ನನ್ನನ್ನು **ಅವ್ಯಾತ್** ರಕ್ಷಿಸಲಿ. (ಪಕ್ಷಿಗಳು ಹಾರಾಡುವ ಕಾಲ ಸಂಗವಕಾಲ, ಕೊಟ್ಟಿಗೆಗಳಿಂದ ಹೊರಟ ಹಸುಗಳು ಮಂದೆ (ಗುಂಪು)ಯಾಗಿ ಒಂದು ಕಡೆ ಸೇರುವ ಕಾಲ ಆಸಂಗವ ಕಾಲವೆಂದು ಹೆಸರು. (ವಿಜಯಧ್ವಜರು) **ಆತ್ತಶಕ್ತಿಃ** ಶಕ್ತ್ಯಾಯುಧ ಧರಿಸಿದ, ಲಕ್ಷ್ಮೀಸಹಿತನಾದ ಸ್ವರೂಪಶಕ್ತಿಯಿಂದ ಕೂಡಿದ **ನಾರಾಯಣಃ** ನಾರಾಯಣನು **ಪ್ರಾಹ್ಣೇ** ಸಂಗವ ಮಧ್ಯಾಹ್ನದ ಮಧ್ಯಕಾಲದಲ್ಲಿ ಅಥವಾ ಮುನಿಮತ ಭೇದದಿಂದ ಮೂರು ವಿಧ ಪೂರ್ವಾಹ್ಣದಲ್ಲಿ, (**ಸದಾ** ಯಾವಾಗಲೂ) **ಪಾತು** ರಕ್ಷಿಸಲಿ **ಮಧ್ಯಂದಿನೇ** ಮಧ್ಯಾಹ್ನ ಕಾಲದಲ್ಲಿ **ಅರೀಂದ್ರಪಾಣಿಃ** ಚಕ್ರಧಾರಿಯಾದ ಅಥವಾ ಶತ್ರುಗಳನ್ನು ವಶಪಡಿಸಿಕೊಂಡ (ಅರೀಂದ್ರಾಃ ಮಹಾವೈರಿಣಃ ಪಾಣೌ ಯಸ್ಯ ಸಃ) **ವಿಷ್ಣುಃ** ವಿಷ್ಣುವು **ಅವ್ಯಾತ್** ರಕ್ಷಿಸಲಿ.

ಇಲ್ಲಿ ಒಂದು ಸಂದೇಹ

ಛಾಂದೋಗ್ಯ ದ್ವಿತೀಯಾಧ್ಯಾಯದಲ್ಲಿ 'ಯತ್ ಪುರೋಡಯಾತ್ ಸ ಹಿಂಕಾರಃ' ಎಂದು ಉಪನಿಷದ್ಭಾಷ್ಯದಲ್ಲಿ 'ಉದಯಾತ್ ಪೂರ್ವಮೇವಾಽಸೌ ಭವೇತ್ ಪ್ರದ್ಯುಮ್ನ ನಾಮಕಃ । ಪಶ್ಚಾಧ್ಧಾರಸ್ತದಾತ್ಮಾಽಸೌ ವಾಸುದೇವಸ್ತಥೋದಯೇ । ಆಶ್ರಯಶ್ಚ ನೃಣಾಂ ತತ್ರ ವರಾಹಃ ಸಂಗವೇ ತು ಸಃ । ತತ್ರ ಪಕ್ಷ್ಯಾಶ್ರಯೋ ವಿಷ್ಣುಃ ತಥಾ ನಾರಾಯಣಾಭಿಧಃ । ಮಧ್ಯಂದಿನೇ ಸ ಆಧಾರೋ ದೇವಾನಾಂ ಚ ತತಃ ಪರಮ್ । ಅನಿರುದ್ಧಃ ಸ ಆಧಾರೋ ಗರ್ಭಸ್ಥನಾಂ ಸದೈವ ಹಿ । ತತಃ ಪರಂ ನೃಸಿಂಹಾಖ್ಯಃ ಸ ಆರಣ್ಯಾಶ್ರಯೋ ಮತಃ । ಅಥಾಸ್ತಮಿತವೇಲಾಯಾಂ ಸ ಸಂಕರ್ಷಣ ಈರಿತಃ । ಆಶ್ರಯಃ ಸ ಪಿತೄಣಾಂ ಚ ಸಪ್ತಾತ್ಮಕಮುಪಾಸ್ಯಕಮ್ । ಪ್ರಾಪ್ನೋತಿ ಪರಮಂ ಸ್ಥಾನಂ ಮುಕ್ತಃ ಸಂಸಾರಸಾಗರಾತ್ ।। ಇತಿ ಚ ।। ಎಂದು ಹೇಳಿರುವುದರಿಂದ ಇಲ್ಲಿ ಹನ್ನೆರಡು ಕಾಲ ಹೇಳುವದು ಮತ್ತು ಭಗವಂತನ ರೂಪಗಳಿಗೆ ಬೇರೆ ಸ್ಥಾನಗಳನ್ನು ಹೇಳಿದ್ದು ಏಕೆ ಎಂದರೆ, ತಿಳಿದುಕೊಳ್ಳುವವರು ಬೇರೆಯಾದ್ದರಿಂದಲೂ 'ವಿನಿರ್ಜಿತ್ಯ ಮೃಧೇಽಸುರಾನ್'ಎಂದೂ 'ಮುಕ್ತಃ ಸಂಸಾರಸಾಗರಾತ್' ಎಂದು ಫಲ ವೈಲಕ್ಷಣ್ಯದಿಂದಲೂ ಭಗವದ್ರೂಪಗಳಲ್ಲಿ ವಿಶೇಷವಿಲ್ಲದಿರುವದರಿಂದಲೂ ಬೇರೆ ಬೇರೆ ರೀತಿ ಹೇಳಿರುವರು. ಅಲ್ಲಿಯೇ 'ನ ರೂಪಾಣಾಂ ವಿಶೇಷೋಽಸ್ತಿ ಗುಣತೋ ನಾಮತೋಽಪಿ ವಾ' ಎಂದು ಹೇಳಿದೆ.

'ಗೋ ಗಣೇಶೇ ದಿಗ್ಬಾಣೇ' ಎಂದು ವಿಶ್ವವಿರುವದರಿಂದ, ಪಕ್ಷಿಣಃ ಸಂಯುಜ್ಯಂತೇ ಗವಿ ಗಣೇಶಾಭಿಮನ್ಯಮಾನ ಆಕಾಶದಲ್ಲಿ ಆಕಾಶ ವಿಶೇಷ ದಿಕ್ಕುಗಳಲ್ಲಿ ಆದ್ದರಿಂದ ಸಂಗವ ಎಂದರ್ಥ.

ಇಲ್ಲಿ ಮುನಿಮತ ಭೇದದಿಂದ ಹಗಲಿನ ಐದು ರೀತಿ ಹೇಳಲ್ಪಟ್ಟಿದೆ. ಕಾಲಮಾಧವದಲ್ಲಿ ಹೀಗಿದೆ. 'ದ್ವಿಧಾ, ತ್ರೇಧಾ, ಚತುರ್ಧಾ, ಪಂಚಧಾ, ಪಂಚದಶಧಾ ವಾ ಅಹಃಸು ವಿಭಜ್ಯತೇ ಪಂಚಮತಭೇಧಾ ಇತಿ । ಇವುಗಳಲ್ಲಿ ದ್ವೇಧಾ ವಿಭಾಗ ಸ್ಕಾಂದದಲ್ಲಿ ತೋರಿಸಲ್ಪಟ್ಟಿದೆ. 'ಆವರ್ತನಾತ್ತು ಪೂರ್ವಾಹ್ಣೋ ಹ್ಯಪರಾಹ್ಣಸ್ತತಃ ಪರಃ ಇತಿ ಚ । ಆವರ್ತನಂ ಮಧ್ಯಾಹ್ನಸ್ತ್ರೇಧಾ ವಿಭಾಗೋಽಪಿ ತತ್ರೈವೋಕ್ತಃ ।

ಊರ್ಧ್ವಂ ಸೂರ್ಯೋದಯಾತ್ ಪ್ರೋಕ್ತಂ ಮೂಹೂರ್ತಾನಾಂ ಚ ಪಂಚಕಮ್ ।
ಪೂರ್ವಾಹ್ಣಃ ಪಂಚಕಃ ಪ್ರೋಕ್ತೋ ಮಧ್ಯಾಹ್ನಸ್ತು ತತಃ ಪರಮ್ ।
ಅಪರಾಹ್ಣಸ್ತತಃ ಪ್ರೋಕ್ತೋ ಮುಹೂರ್ತಾನಾಂ ಚ ಪಂಚಕಮ್ ।।

ಎಂದು. ಚತುರ್ಧಾ ವಿಭಾಗಸ್ತು ಗಾಲವೇನೋಕ್ತಃ,

ಪೂರ್ವಾಹ್ಣಃ ಪಂಚಕಃ ಪ್ರೋಕ್ತೋ ಮಧ್ಯಾಹ್ನಃ ಪ್ರಹರಂ ತಥಾ ।
ಆತೃತೀಯಾದಪರಾಹ್ಣಃ ಸಾಯಾಹ್ನಶ್ಚ ತತಃ ಪರಮ್ ।

ಎಂದು ಐದು ವಿಭಾಗವನ್ನು ವ್ಯಾಸರು ಹೇಳಿರುವರು.

ಮುಹೂರ್ತಾತ್ರಿತ್ರಯಂ ಪ್ರಾತಸ್ತಾವಾನೇವ ತು ಸಂಗವಃ ।
ಮಧ್ಯಾಹ್ನಸ್ತ್ರಿಮುಹೂರ್ತಂ ಸ್ಯಾದಪರಾಹ್ಣಶ್ಚ ತಾದೃಶಃ ।
ಸಾಯಾಹ್ನಸ್ತ್ರಿಮೂಹೂರ್ತಸ್ತು ಸರ್ವಕರ್ಮಸು ಗರ್ಹಿತಃ ॥

ಹದಿನೈದು ವಿಭಾಗವನ್ನು ಶಂಖನು ಹೇಳಿರುವನು.

ಶಾಸ್ತ್ರೈತ್ರಶ್ಚ ಮೈತ್ರಶ್ಚ ತಥಾ ಸಾಲಕಟಃ ಸ್ಮೃತಃ ।
ಸಾವಿತ್ರಶ್ಚ ಜಯಂತಶ್ಚ ಗಾಂಧರ್ವಃ ಕುತಪಸ್ತಥಾ ॥

ರೋಹಿಣಶ್ಚ ವಿರಿಂಚಶ್ಚ ವಿಜಿತ್ಯೋ ನೈರ್ಋದಸ್ತಥಾ ।
ಮಹೇಂದ್ರೋ ವರುಣಶ್ಚೈವ ಭೇದಾಃ ಪಂಚದಶ ಸ್ಮೃತಾಃ ॥

ಈ ರೀತಿ ಮುನಿಗಳು ನಾಲ್ಕು ಹಗಲಿನ ಭಾಗಗಳಲ್ಲಿ ರಾತ್ರಿಯಲ್ಲಿ ಪ್ರದೋಷ ಮುಂತಾದವುಗಳಲ್ಲಿ ರಕ್ಷಣೆ ಪ್ರಾರ್ಥಿಸುವರು.

ಹಗಲಿನ ವಿಭಾಗದ ವಿಷಯದಲ್ಲಿ ಧರ್ಮಶಾಸ್ತ್ರಗಳು ಬೇರೆ ಬೇರೆ ರೀತಿಯನ್ನು ಹೇಳುತ್ತಿವೆ. ಎರಡು ಭಾಗ ಎಂಬ ಮತದಲ್ಲಿ ಸೂರ್ಯನು ತಿರುಗುವವರೆಗೂ ಪೂರ್ವಾಹ್ಣ ಅನಂತರ ಅಪರಾಹ್ಣ ಮೂರುಭಾಗ ಎಂಬ ಮತದಲ್ಲಿ ಮಧ್ಯಾಹ್ನವನ್ನು ಸೇರಿಸಿರುವರು. ಆಗ ಸೂರ್ಯೋದಯದಿಂದ ಹತ್ತು ಘಳಿಗೆ ಅಪರಾಹ್ಣ ಅನಂತರ ಹತ್ತು ಘಳಿಗೆ ಮಧ್ಯಾಹ್ನ ಅನಂತರ ಹತ್ತು ಘಳಿಗೆ ಪೂರ್ವಾಹ್ಣ. ಗಾಲವರು ನಾಲ್ಕು ಭಾಗಮಾಡಿ ಮೊದಲು ಒಂದೂವರೆ ಜಾವವನ್ನು ಪೂರ್ವಾಹ್ಣವೆಂದೂ ಅನಂತರ ಒಂದು ಜಾವ ಮಧ್ಯಾಹ್ನವೆಂದೂ ಅನಂತರ ಅರ್ಧಜಾವ ಅಪರಾಹ್ಣವೆಂದೂ ಅನಂತರದ ಜಾವಕ್ಕೆ ಸಾಯಾಹ್ನವೆಂದೂ ಕರೆದಿರುವರು. (ಒಂದು ಜಾವ ಮೂರು ಘಂಟೆ) ವ್ಯಾಸರ ಮತದಂತೆ ಹಗಲು ಐದು ಭಾಗ ಮೊದಲು ಆರು ಘಳಿಗೆ ಪ್ರಾತಃ ಕಾಲ ಎರಡನೇ ಆರು ಘಳಿಗೆ ಸಂಗವ ಕಾಲ, ಮೂರನೇ ಆರು ಘಳಿಗೆ ಮಧ್ಯಾಹ್ನ, ಮುಂದಿನ ಆರು ಘಳಿಗೆ ಅಪರಾಹ್ಣ ಅದರ ಮುಂದಿನ ಆರು ಘಳಿಗೆ ಸಾಯಾಹ್ನ. ಇದು ಯಾವ ಕೆಲಸಕ್ಕೂ ಉತ್ತಮವಲ್ಲ. ಹಗಲನ್ನು ಹದಿನೈದು ವಿಭಾಗಮಾಡಿ

 

ಶಂಖರು ಶಾಸ್ತ್ರ ಚೈತ್ರ, ಮೈತ್ರ, ಸಾಲ, ಕಟ, ಸಾವಿತ್ರ, ಜಯಂತ, ಗಾಂಧರ್ವ, ಕುತಪ, ರೋಹಿಣ, ವಿರಿಂಚ, ವಿಜಿತ್ಯ, ನೈರ್ಋಧ, ಮಹೇಂದ್ರ, ವರುಣ, ಎಂದು ಹಗಲಿನ ವಿಭಾಗವನ್ನು ಕರೆದಿರುವರು. ಹೀಗೆ ಎರಡು ಮುಂತಾಗಿ ನಾಲ್ಕು ರಾತ್ರಿ ಭಾಗಗಳಲ್ಲಿಯೂ ರಕ್ಷಣೆಯನ್ನು **ಮಾಂ ಕೇಶವಃ** ಮುಂತಾಗಿ ಮೂರು ಶ್ಲೋಕಗಳಿಂದ ಪ್ರಾರ್ಥಿಸಿದ್ದಾರೆ ಎಂದು ತಿಳಿಯಬೇಕು. ।।೨೦।।

**ದೇವೋಽಪರಾಹ್ಣೇ ಮಧುಹೋಗ್ರಧನ್ವಾ**
**ಸಾಯಂ ತ್ರಿಧಾಮಾಽವತು ಮಾಧವೋ ಮಾಮ್ ।**
**ದೋಷೇ ಹೃಷೀಕೇಶ ಉತಾರ್ಧರಾತ್ರೇ**
**ನಿಶೀಥ ಏಕೋಽವತು ಪದ್ಮನಾಭಃ ।।೨೦।।**

**ಉಗ್ರಧನ್ವಾ** ಭಯಂಕರವಾದ ಶಾರ್ಙಧನುಸ್ಸನ್ನು ಧರಿಸಿರುವ **ಮಧುಹಾ ದೇವಃ** ಮಧುಸೂದನನು **ಅಪರಾಹ್ಣೇ** ಅಪರಾಹ್ಣ ಕಾಲದಲ್ಲಿ **ಮಾಂ** ನನ್ನನ್ನು **ಅವತು** ಕಾಪಾಡಲಿ **ತ್ರಿಧಾಮಾ** ಅನಂತಾಸನ-ಶ್ವೇತದ್ವೀಪ-ವೈಕುಂಠಗಳೆಂಬ ಮೂರು ಮನೆಗಳುಳ್ಳ **ಮಾಧವಃ** ಮಾಧವನು **ಸಾಯಂ** ಸಾಯಂಕಾಲದಲ್ಲಿ ನನ್ನನ್ನು ಕಾಪಾಡಲಿ. **ದೋಷೇ** ರಾತ್ರಿ ಭೋಜನಕಾಲದಲ್ಲಿ, (ವಿಜ) ದೋಷಾ ಅಸ್ತಿ ಪ್ರಾರಭ್ಯತ್ವೇನ ಅತ್ರ ಇತಿ ದೋಷಃ ಪ್ರದೋಷಃ ತಸ್ಮಿನ್ ಅಂದರೆ ಪ್ರದೋಷ ಕಾಲದಲ್ಲಿ **ಹೃಷೀಕೇಶಃ** ಹೃಷೀಕೇಶನು **ಅವತು** ರಕ್ಷಿಸಲಿ. ದೋಷಾ ಎಂದು ಹೇಳಲು ಬರುವಾಗ ದೋಷೇ ಎಂದು ಹೇಳಿದ್ದರಿಂದ ಇಂದ್ರಿಯಗಳು ಮಾಡಿದ ದುರ್ವಿಷಯ ದ್ರವಣರೂಪ ದೋಷವಿದ್ದರೂ ಎಂಬರ್ಥ ಧ್ವನಿತವಾಗುವದು) 'ದೋಷಾ ನಕ್ತಂ ಚ ರಜನೀ' ಎಂದು ಅಮರವಿದೆ. **ಅರ್ಧರಾತ್ರೇ** ರಾತ್ರಿಯ ಅರ್ಧದಲ್ಲಿ **ಉಪ** ಮತ್ತು **ನಿಶೀಥೇ** ಹದಿನೈದು ಘಳಿಗೆಯನ್ನಾರಂಭಿಸಿ ಅಪರರಾತ್ರವರೆಗೆ **ಏಕಃ ಪದ್ಮನಾಭಃ ಅವತು** ಒಬ್ಬನೇ ಪದ್ಮನಾಭನು ರಕ್ಷಿಸಲಿ. ಅರ್ಧರಾತ್ರಿಗೂ ನಿಶೀಥಕ್ಕೂ ಬಹಳ ವ್ಯವಧಾನವಿಲ್ಲದ್ದರಿಂದ ಏಕಸ್ವಾಮ್ಯ ಹೇಳಿರುವರು. ನಿಶೀಥದ ಪೂರ್ವಯಾಮವೇ ಅರ್ಧರಾತ್ರ. ರಾತ್ರಿ ಎಂದು ಸಾಮಾನ್ಯ ಹೇಳುವಾಗ ದೋಷ ಶಬ್ದವು ಅವ್ಯಯ ಅಥವಾ ಸ್ತ್ರೀಲಿಂಗ. ರಾತ್ರಿಯ ಒಂದು ಕಾಲ ವಿಶೇಷ ಹೇಳುವಾಗ ಪುಲ್ಲಿಂಗ. ।।೨೦।।

**ಶ್ರೀವತ್ಸಲಕ್ಷ್ಮಾಽಪರರಾತ್ರ ಈಶಃ**
**ಪ್ರತ್ಯೂಷ ಈಶೋಽಸಿಧರೋ ಜನಾರ್ದನಃ ।**

**ದಾಮೋದರೋಽವ್ಯಾದನುಸಂಧ್ಯಂ ಪ್ರಭಾತೇ**
**ವಿಷ್ಣುಃ ಶ್ರೀಮಾನ್ ಭಗವಾನ್ ಕಾಲಮೂರ್ತಿಃ ॥೨೨॥**

**ಅಪರರಾತ್ರೇ** ಮಧ್ಯರಾತ್ರಿ ಮತ್ತು ನಿಶೀಥಗಳ ನಂತರದ ಕಾಲದಲ್ಲಿ **ಈಶಃ** ನಿಯಾಮಕನಾದ, ಸಮರ್ಥನಾದ, ಲಕ್ಷ್ಮೀಸುಖಪ್ರದನಾದ, ಯಾಃ ಶಂ ಯಸ್ಮಾತ್ ಸಃ ಈಶಃ **ಶ್ರೀವತ್ಸಲಕ್ಷ್ಮಾ** ಶ್ರೀವತ್ಸವೇ ಚಿಹ್ನವಾಗಿ ಉಳ್ಳ ಶ್ರೀಹರಿಯು ಕಾಪಾಡಲಿ, (ಶ್ರೀಧರನೆಂದರ್ಥ). **ಈಶಃ** ಸಮರ್ಥನಾದ **ಅರಿಧರಃ** ನಂದಕವೆಂಬ ಖಡ್ಗಧಾರಿಯಾದ **ಜನಾರ್ದನಃ** ಜನಾರ್ದನ ರೂಪಿಯು **ಪ್ರತ್ಯೂಷೇ** ಅರುಣೋದಯ ಕಾಲದಲ್ಲಿ ಕಾಪಾಡಲಿ. ಅಹರ್ಮುಖದಲ್ಲಿ, 'ಪ್ರತ್ಯೂಷೋಽಹರ್ಮುಖಂ' ಎಂದು ಅಮರ. ಸ್ತ್ರೀವಿಶ್ಲೇಷ (ವಿಯೋಗ) ದಿಂದ ಏಳಲು ಇಚ್ಛೆಯಿಲ್ಲದ ಪುರುಷನನ್ನು, ಊಷತಿ ದಹಿಸುವದು ಆದ್ದರಿಂದ ಅದಕ್ಕೆ ಊಷ ಎಂದು ಹೆಸರು. 'ಉಷ ದಾಹೇ' **ದಾಮೋದರಃ** ಪ್ರಸಿದ್ಧನಾದ ಶ್ರೀಕೃಷ್ಣ ಹಗ್ಗದಿಂದ ಕಟ್ಟಿಸಿಕೊಂಡವ 'ದಾಮಾತ್ ಸಿದ್ಧಿಂ ಪರೀಪ್ಸಂತೋ ಮಾಂ ಜನಾ ಕಾಮಯಂತಿ ಹಿ ದಿವಂ ಚೋರ್ವೀಂ ಚ ಮಧ್ಯಂ ಚ ತಸ್ಮಾದ್ದಾಮೋದರೋಽಸ್ಮ್ಯಹಂ ॥ ಎಂದು ಮೋಕ್ಷಧರ್ಮದಲ್ಲಿ ಹೇಳಿದೆ. ಇವನು **ಅನುಸಂಧ್ಯಂ** ಸಂಧಿಕಾಲದಲ್ಲಿ ಕಾಪಾಡಲಿ **ಪ್ರಭಾತೇ** ಸೂರ್ಯೋದಯ ಸಮೀಪಕಾಲದಲ್ಲಿ **ಭಗವಾನ್** ಐಶ್ವರ್ಯ ಶಾಲಿಯಾದ **ಶ್ರೀಮಾನ್** ಕಾಂತಿಯುತನಾದ **ಕಾಲಮೂರ್ತಿಃ** ಸರ್ವಗುಣಾತ್ಮಕ ದೇಹವುಳ್ಳ ಪ್ರಾತಃ ಎಂದಾರಂಭಿಸಿ ಪ್ರಭಾತೇ ಎಂಬಲ್ಲಿವರೆಗೆ ಹೇಳಿದ ಕಾಲಾಕಾರನಾದ ಜ್ಞಾನಾತ್ಮಕ ದೇಹನಾದ ಎಲ್ಲ ಭಗವದ್ಧರ್ಮವನ್ನು ಕಾಲ ಶಬ್ದ ಹೇಳುವುದರಿಂದ ಕಲ ಬಂಧನೆ ಕಲ ಜ್ಞಾನೇ ಕಲ ಕಾಮಧೇನುಃ ಎಂದು ಇರುವದರಿಂದ ಕಾಮಧೇನುವಿನಂತೆ ಸರ್ವಾರ್ಥವಾಚಕವಾಗಿದೆ. **ವಿಷ್ಣುಃ** ವಿಷ್ಣುವು ರಕ್ಷಿಸಲಿ. ಇಲ್ಲಿ ಶ್ರೀಮಾನ್ ಭಗವಾನ್ ಎಂಬ ಪಾಠವೇ ಒಳ್ಳೆಯದು. ವಿಶ್ವೇಶ್ವರ ಭಗವಾನ್ ಎಂಬುದಲ್ಲ. ಮೊದಲು ವಿಷ್ಣವೇ ನಮಃ ಎಂದು ಆರಂಭಿಸಿದ್ದರಿಂದ ಕೊನೆಗೂ ಅದೇ ನಾಮ ತೆಗೆದುಕೊಂಡರೆ ಸಂಪುಟೀಕರಣ-ವಾಗುವದು. ಆದ್ದರಿಂದ ವಿಷ್ಣುಃ ಶ್ರೀಮಾನ್ ಎಂದಿರುವರು.

ಟಿಪ್ಪಣಿ - **ವಿಷ್ಣುಃ** ವಾಸುದೇವನು, 'ವಿಷ್ಣುರ್ಯೋನಿಂ ಕಲ್ಪಯತು' ಎಂಬಲ್ಲಿ 'ಯೋನಿಕ್ಲೃಪ್ತಿಃ ವಾಸುದೇವಾತ್' ಎಂದು ವಿಷ್ಣುಶಬ್ದಕ್ಕೆ ವಾಸುದೇವ ಎಂದು ಆಚಾರ್ಯರು ವ್ಯಾಖ್ಯಾನಿಸಿದ್ದಾರೆ. ಮಧ್ಯಂದಿನೇ ವಿಷ್ಣುಃ ಎಂದು ವಿಷ್ಣುರೂಪ ಹಿಂದೆ ಹೇಳಿ ಆಗಿದೆ ಎನ್ನುತ್ತಾರೆ.

'ದರಾರಿಚರ್ಮಾ' ಎಂದು ಆಯುಧಧಾರಿ ಎಂದೇನು ರೂಪಕ್ಕೆ ವಿಶೇಷಣ ನೀಡಿರುವರೋ ಅದರಿಂದ ಅವುಗಳನ್ನೂ ಪ್ರಾರ್ಥಿಸಿದಂತಾಯಿತು ಆದರೂ ಪರಕೃತಕೃತಿಯು (ದೈತ್ಯರ ಪರಾಜಯ) ಆಯುಧಗಳ ಅಧೀನವಾದುದರಿಂದ ಪ್ರಾತಿಸ್ವಿಕವಾಗಿಯೂ ಸಮ್ಮುಗ್ಧವಾಗಿಯೂ ಆಯುಧಗಳನ್ನು ಸಂಬೋಧಿಸಿ ಅದರ ಕಾರ್ಯವನ್ನು ಪ್ರಾರ್ಥಿಸಬೇಕೆಂದು ಹೇಳುವರು-

**ಚಕ್ರಂ ಯುಗಾಂತಾನಲತಿಗ್ಮನೇಮಿ**
**ಭ್ರಮತ್ ಸಮಂತಾದ್ಭಗವತ್ಪ್ರಯುಕ್ತಮ್ ।**
**ದಂದಗ್ಧಿ ದಂದಗ್ಧ್ಯರಿಸೈನ್ಯಮಾಶು**
**ಕಕ್ಷಂ ಯಥಾ ವಾತಸಖೋ ಹುತಾಶಃ** ॥೨೩॥

**ಯುಗಂತಾನಲತಿಗ್ಮನೇಮಿ** ಪ್ರಳಯಕಾಲದ ಬೆಂಕಿಯಂತೆ ತೀಕ್ಷ್ಣವಾದ ಹಲ್ಲುಗಳುಳ್ಳ **ಚಕ್ರಂ** ಚಕ್ರವು ಇದು ಅದರ ಸ್ವರೂಪ, ಅದನ್ನು ಸಂಬೋಧಿಸಿ ಎಲೈ ಚಕ್ರವೇ ನೀನು, **ಭಗವತ್ಪ್ರಯುಕ್ತಂ ಸತ್** (ಪ್ರಮುಕ್ತಂ) ಶ್ರೀಹರಿಯಿಂದ ಪ್ರಯೋಗಿಸಲ್ಪಟ್ಟು **ಸಮಂತಾತ್** ಎಲ್ಲ ಕಡೆಯಲ್ಲಿಯೂ **ಭ್ರಮತ್** ತಿರುಗುತ್ತಾ **ಅರಿಸೈನ್ಯಂ** ಶತ್ರುಸೈನ್ಯವನ್ನು **ಯಥಾ** ಹೇಗೆ **ವಾತಸಖಾ** ಗಾಳಿಯ ಸಹಾಯ ಪಡೆದ **ಹುತಾಶಃ** ಅಗ್ನಿಯು (ಹುತಂ ಅಶ್ನಾತೀತಿ) **ಕಕ್ಷಂ** ಒಣ ಹುಲ್ಲನ್ನು **ದಂದಗ್ಧಿ** ಸುಡುವದೋ **ತಥಾ** ಹಾಗೆ **ಆಶು** ಬೇಗನೆ **ದಂದಗ್ಧಿ** ಅತಿಶಯವಾಗಿ ಸುಡು. ಇದರಿಂದ 'ಸುದರ್ಶನ ಮಹಾಜ್ವಾಲ ಸೂರ್ಯಕೋಟಿಸಮ-ಪ್ರಭ । ಅಜ್ಞಾನಾಂಧಸ್ಯ ಮೇ ನಿತ್ಯಂ ವಿಷ್ಣೋರ್ಮಾರ್ಗಂ ಪ್ರದರ್ಶಯ' ಎಂಬುದನ್ನು ಆರ್ಥಿಕವಾಗಿ ಸೂಚಿಸಿದಂತಾಯಿತು.

ಅರಿಸೈನ್ಯವನ್ನು ಜಾಗ್ರತೆಯಾಗಿ ಸುಡುವದು ಎಂದು ಸಂಬೋಧನೆಯಿಲ್ಲದೆಯೂ ಅರ್ಥ ಮಾಡಿರುವರು. ಆ ಅರ್ಥದಲ್ಲಿ ಚಕ್ರದ ಸ್ವಭಾವವೇ ಇದಾದ್ದರಿಂದ ಅದನ್ನು ಸುಡು ಎಂದು ಪ್ರಾರ್ಥಿಸಬೇಕಿಲ್ಲವೆಂದು ಅಭಿಪ್ರಾಯ.

**ಸತ್ಯಧರ್ಮರ ವಿಶಿಷ್ಟ ಅರ್ಥ**

ಹಿಂದೆ ದರಾರಿ ಎಂದು ಶಂಖವನ್ನು ಮೊದಲು ಹೇಳಿರುವದರಿಂದ ಇಲ್ಲಿ ಏಕೆ ಚಕ್ರವನ್ನು ಮೊದಲು ಹೇಳಿದ್ದು ಎಂದರೆ ಇಲ್ಲಿ ಒಂದು ವಿಶೇಷವಿದೆ. ಅದೇನೆಂದರೆ ಪೂರ್ವಂ ಹರೇಶ್ಚಕ್ರಮಭೂದ್ಧಿ ದುರ್ಗಾ ತಮಃಸ್ಥಿತಾ ಶ್ರೀರಿತಿ ಯಾಂ ವದಂತಿ । ಸತ್ವಾತ್ಮಿಕಾ ಶಂಖವರಂ ರಮ್ಯೈವ ಖಡ್ಗಂ ದುರ್ಗಾತ್ಮಿಕಾ ಸೈವ ಚ ಚರ್ಮನಾಮ್ನೀ'

ಎಂದು ಶ್ರೀಮದಾಚಾರ್ಯರು ತಾತ್ಪರ್ಯನಿರ್ಣಯ ಮೂರನೇ ಅಧ್ಯಾಯದಲ್ಲಿ ಹೇಳಿರುವದರಿಂದ ಶಂಖ-ಚಕ್ರಗಳಿಗೆ ಅಭಿಮಾನಿಕೃತ ವಿಶೇಷವಿಲ್ಲವೆಂದು ತಿಳಿಸಲು. ಆಮೇಲೆ ಹೇಳಿದ ಚಕ್ರವನ್ನು ಇಲ್ಲಿ ಮೊದಲು ಹೇಳುವದು ಅಲ್ಲಿ ಶಂಖ ಮೊದಲು ಹೇಳುವದು ಯುಕ್ತವೇ. ಇಲ್ಲಿ ಶಂಖವನ್ನು ಅನಂತರ ಹೇಳುವದು ಚಕ್ರವನ್ನು ಮೊದಲು ಹೇಳುವದು 'ವರಾದ್ರಥಾಂಗತ್ವಮವಾಪ ಕಾಮಃ । ತತ್ಸೂನುತಾಮಾಪ ಚ ಸೋऽನಿರುದ್ಧೋ ಬ್ರಹ್ಮೋದ್ಭವಃ ಶಂಖತನುಃ ಪುಮಾತ್ಮಾ' ಎಂದು ಹೇಳಿರುವದರಿಂದಲೂ ಕಾಮ ಚಕ್ರಾಭಿಮಾನಿ ಮತ್ತು ಕೃಷ್ಣ ಪುತ್ರ ಪ್ರದ್ಯಮ್ನನು. ಬ್ರಹ್ಮನಿಂದ ಜನಿಸಿದ ಅನಿರುದ್ಧ ಎಂಬ ದೇವನೇ ಪ್ರದ್ಯುಮ್ನನ ಮಗನಾಗಿ ಜನಿಸಿದ. ಇವನು ಪುರುಷ ಜೀವರಿಗೆ ಅಭಿಮಾನಿ. ಮತ್ತು ಚಕ್ರ ಮೊದಲು ಶಂಖಾಭಿಮಾನಿ ಶಂಖ ಎಂದು ಹೆಸರು. ಕಾಮಾಭಿಮನ್ಯಮಾನ ಚಕ್ರ ಮೊದಲು ಹೇಳಿದ್ದು ಅನಿರುದ್ಧಾಭಿಮಾನಿಕವಾದ್ದರಿಂದ ಶಂಖವನ್ನು ನಂತರ ಹೇಳಿದ್ದು ಉಚಿತ. ಅಥವಾ ಎಲ್ಲ ಆಯುಧಗಳೂ ಸ್ವರೂಪಭೂತವಾದವುಗಳೇ ಇವೆ ಎಂದು ತಿಳಿಸಲೂ ಹೀಗೂ ಹಾಗೂ ಹೇಳಿರುವರೆಂದೂ ತಿಳಿಯಬೇಕು. 'ಪ್ರಾಚೀ ದಿಗ್ ಜಹೂಃ ಸಹಮಾನಾ ದಕ್ಷಿಣಾ ರಾಜ್ಞೀ ನಾಮ ಪ್ರತೀಚೀ' ಎಂಬುದರ ಛಾಂದೋಗ್ಯಭಾಷ್ಯದಲ್ಲಿ 'ಸಹಮಾನೇತಿ ಸಂಪ್ರೋಕ್ತೋ ಮಾನಂ ವೇದಾತ್ಮಕಂ ಯತಃ । ಶಂಖೋ ವೇದಾತ್ಮಕಃ ಶಂಖಸಹಿತೋ ದಕ್ಷಿಣಾಧರಃ । ಜುಹೋತಿ ಚಕ್ರೇಣ ಶತ್ರೂನಿತ್ಯಥವಾ ಜುಹೂಃ । ಪ್ರತೀಚೀ ದಿಗ್ಧಯಿತಸ್ತಸ್ಯ ವಾಮಬಾಹುಸ್ತೋತ್ತರಃ । ರಾಜ್ಞೀತ್ಯುಕ್ತಗದಾಯುಕ್ತೇಃ' ಎಂದು ಹೇಳಿದ್ದು ಅಭಿಮಾನಿ ವಿವಕ್ಷೆಯಿಂದ ಎಂದು ತಿಳಿಯಬೇಕು.

ಹಿಂದೆ ಶಂಖ ಮೊದಲು ಹೇಳಿ ಚಕ್ರ ಅನಂತರ ಹೇಳಲು ಮೊದಲು ಶಂಖಧ್ವನಿ ಕೇಳಿ ಅಳಿದು ಉಳಿದವರನ್ನು ಸಂಹರಿಸುವದು ಚಕ್ರ ಎಂಬ ಅಭಿಪ್ರಾಯದಿಂದ ಇಲ್ಲಿ ಚಕ್ರ ಮೊದಲು ಹೇಳಲು ಶ್ರೇಷ್ಠಸಂಹಾರಕವೆಂಬ ಶ್ರೇಷ್ಠ ಕೆಲಸ ಚಕ್ರದ್ದಾದ್ದರಿಂದ ಎಂಬ ವಿಶೇಷವನ್ನು ತಿಳಿಯಬಹುದು. ಹೇ ಚಕ್ರಂ ಎಂಬುದು ಸಂಬುದ್ಧ್ಯಂತವು. ಉಪಕ್ರಮ ಉಪಸಂಹಾರಗಳಲ್ಲಿ ಹಾಗೆಯೇ ಹೇಳಿದ್ದಾರೆ. ಹಾಗಾದರೆ ಅವ್ ಹೇಗೆ ಕೇಳಿಬರುವದು ಎನ್ನಬೇಡಿ. ಅದು ಲೋಪವಾಗದೆ ಸಂಬುದ್ಧ್ಯಂತವಾಗಬಹುದು. ಈ ವಿಷಯವನ್ನು ಸುಧಾ-ವಾಕ್ಯಾರ್ಥಚಂದ್ರಿಕಾ-ನ್ಯಾಯವಿವರಣ- ಭಾವಭೋಧಗಳಿಂದ ತಿಳಿಯುವದು. 'ಕವ ರಕ್ಷಣೇ' ಇತ್ಯತಃ ಕವಚಂ ಕವ ರಕ್ಷಣೇ ಇತ್ಯಸ್ಯ ಧಾತೋ ರೂಪಂ ಕವಚಮಿತ್ಯೇತದಿತ್ಯರ್ಥಃ । ಕವತೇರಚ್ ಇತ್ಯೇತಾವಾನ್ ಪ್ರತ್ಯಯಃ ಕವತಿ ರಕ್ಷತೀತಿ ಕವಚಂ । ಎಂದು ಸುಧಾದಲ್ಲಿ ಹೇಳಿದೆ.

**ಶೇಷವಾಕ್ಯಾರ್ಥಚಂದ್ರಿಕಾ.**

'ನನು ಕವತಿ ರೂಪತ್ವೇ ಕವತೇಃ ಕರ್ತರಿ ಪಚಾದ್ಯಚಿ ಸತಿ ಕವೇತಿ ಭವಿತವ್ಯಂ, ತತ್ಕಥಂ ಕವಚಂ ಇತಿ ರೂಪನಿಷ್ಪತ್ತಿಃ ಇತ್ಯತಃ, 'ಉಣಾದಯೋ ಬಹುಲಂ' ಇತಿ ಬಹುಲಗ್ರಹಣಾತ್ ಅಚ ಇತ್ಯೇತಾವತಿ ಪ್ರತ್ಯಯೇ ತತ್ಸಿದ್ಧಿರಿತ್ಯಾಶಯೇನ ಆಹ ಕವತೇರಿತಿ । ಅಚ ಇತ್ಯೇತಾವಾನಿತ್ಯಚ ಅವ್ ಇತ್ಯೇತಾವಾನಿತ್ಯರ್ಥಃ । ಪ್ರಯೋಜನಾಭಾವಾತ್ ನ ಮಕಾರಸ್ಯ ಇತ್ಸಂಜ್ಞಾ । ತತಶ್ಚ ಮಾಂತತ್ವಾತ್ ಕೃನ್ಮೇಜಂತಃ ಇತ್ಯವ್ಯಯತ್ವಮಿತಿ ಧ್ಯೇಯಮ್ । ಯದ್ವಾ ಅಚ ಇತ್ಯೇತಾವಾನೇವ ಪ್ರತ್ಯಯಃ ತಥಾ ಚ ಕವಚ ಸು. ಇತಿ ಸ್ಥಿತೇ, ಲೋಪಾತ್ ಪರತ್ವಾತ್ ಅತೋಽಮ್ ಇತ್ಯಮಿ ಕೃತೇ ಪರತ್ವಾತ್ ನಿತ್ಯತ್ವಾತ್ ಚ ಅಮಿ ಪೂರ್ವರೂಪತ್ವೇ ಚ ಕೃತೇ ತಸ್ಯ ಅಂತವದ್ಭಾವೇ ತದ್ಹ್ರಸ್ವವತ್ ಪರಸ್ಯ ಸಂಬುದ್ಧೇಃ ಸಂಬಂಧಿನೋ ಮಕಾರಸ್ಯ ಹೇ ಜ್ಞಾನ ಇತ್ಯಾದಿವತ್ 'ಏಙ್ ಹ್ರಸ್ವಾತ್' ಇತಿ ಪ್ರಾಪ್ತಸ್ಯ ಲೋಪಸ್ಯ ಬಾಹುಲಿಕಾನ್ನಿವೃತ್ತೌ ಕವಚಂ ಇತಿ ಸಂಬುದ್ಧ್ಯಂತರೂಪಸಿದ್ಧಿಃ' ಎಂದಿದೆ ಎನ್ನುತ್ತಾರೆ ಶ್ರೀಗಳು.

ಮತ್ತು ರಿಪು ಶತ್ರು ಮುಂತಾದ ಪದವನ್ನಿಡದೇ ಅರಿಪದವಿಡುವದರಿಂದ ಚಿತ್ರಾಂಗದನಂತೆ ನಿನಗೂ ಇದು ಆವಶ್ಯಕ ಎಂದು ಧ್ವನಿ ಸೂಚಿತವಾಗುವದು. ಚಿತ್ರಾಂಗದ ಗಂಧರ್ವನಿಗೂ, ಚಿತ್ರಾಂಗದ ರಾಜನಿಗೂ ಹೆಸರಿಗಾಗಿ ಜಗಳವಾದ ಕಥೆ ಪುರಾಣ ಪ್ರಸಿದ್ಧವಾಗಿದೆ. ।।೨೩।।

ಚಕ್ರವನ್ನು ಹೇಳಿದ ನಂತರ ಶಂಖವನ್ನು ಹೇಳಬೇಕಾಗಿದ್ದರೂ ವಾಯುಸಖಃ ಎಂದು ಹಿಂದಿನ ಶ್ಲೋಕದಲ್ಲಿ ಹೇಳಿದ್ದರಿಂದ 'ಗದಾ ತು ವಾಯುರ್ಬಲಸಂವಿದಾತ್ಮಾ' ಎಂದು ನಿರ್ಣಯದಲ್ಲಿ ಹೇಳಿರುವದರಿಂದ ವಾಯು ಅಭಿಮನ್ಯಮಾನವಾದುದರಿಂದ ಪ್ರಸಂಗ ಸಂಗತಿಯಿಂದ ಗದೆಯನ್ನು ಹೇಳುವರು.

**ಗದೇಽಶನಿಸ್ಪರ್ಶನವಿಸ್ಫುಲಿಂಗೇ**
**ನಿಷ್ಪಿಂಡಿ ನಿಷ್ಪಿಂಡ್ಯಜಿತಪ್ರಿಯಾಽಸಿ ।**
**ಕೂಷ್ಮಾಂಡವೈನಾಯಕಯಕ್ಷರಕ್ಷೋ**
**ಭೂತಗ್ರಹಾಂಶ್ಚೂರ್ಣಯ ಚೂರ್ಣಯಾರೀನ್ ।।೨೪।।**

**ಅಶನಿಸ್ಪರ್ಶನವಿಸ್ಫುಲಿಂಗೇ** ವಜ್ರಾಯುಧದಂತೆ ತಾಪಕರಗಳಾದ ಅಗ್ನಿಕಣಗಳುಳ್ಳ ಅಥವಾ ವಜ್ರಗಳ ತಿಕ್ಕಾಟದಿಂದುಂಟಾದ ಬೆಂಕಿಯ ಕಿಡಿಗಳಂತೆ ಕಿಡಿಗಳುಳ್ಳ ಅಥವಾ

ಎಂದು ಶ್ರೀಮದಾಚಾರ್ಯರು ತಾತ್ಪರ್ಯನಿರ್ಣಯ ಮೂರನೇ ಅಧ್ಯಾಯದಲ್ಲಿ ಹೇಳಿರುವದರಿಂದ ಶಂಖ-ಚಕ್ರಗಳಿಗೆ ಅಭಿಮಾನಿಕೃತ ವಿಶೇಷವಿಲ್ಲವೆಂದು ತಿಳಿಸಲು. ಆಮೇಲೆ ಹೇಳಿದ ಚಕ್ರವನ್ನು ಇಲ್ಲಿ ಮೊದಲು ಹೇಳುವದು ಅಲ್ಲಿ ಶಂಖ ಮೊದಲು ಹೇಳುವದು ಯುಕ್ತವೇ. ಇಲ್ಲಿ ಶಂಖವನ್ನು ಅನಂತರ ಹೇಳುವದು ಚಕ್ರವನ್ನು ಮೊದಲು ಹೇಳುವದು 'ವರಾದ್ರಥಾಂಗತ್ವಮವಾಪ ಕಾಮಃ । ತತ್ಸೂನುತಾಮಾಪ ಚ ಸೋಽನಿರುದ್ಧೋ ಬ್ರಹ್ಮೋದ್ಭವಃ ಶಂಖತನುಃ ಪುಮಾತ್ಮಾ' ಎಂದು ಹೇಳಿರುವದರಿಂದಲೂ ಕಾಮ ಚಕ್ರಾಭಿಮಾನಿ ಮತ್ತು ಕೃಷ್ಣ ಪುತ್ರ ಪ್ರದ್ಯುಮ್ನನು. ಬ್ರಹ್ಮನಿಂದ ಜನಿಸಿದ ಅನಿರುದ್ಧ ಎಂಬ ದೇವನೇ ಪ್ರದ್ಯುಮ್ನನ ಮಗನಾಗಿ ಜನಿಸಿದ. ಇವನು ಪುರುಷ ಜೀವರಿಗೆ ಅಭಿಮಾನಿ. ಮತ್ತು ಚಕ್ರ ಮೊದಲು ಶಂಖಾಭಿಮಾನಿ ಶಂಖ ಎಂದು ಹೆಸರು. ಕಾಮಾಭಿಮನ್ಯಮಾನ ಚಕ್ರ ಮೊದಲು ಹೇಳಿದ್ದು ಅನಿರುದ್ಧಾಭಿಮಾನಿಕವಾದ್ದರಿಂದ ಶಂಖವನ್ನು ನಂತರ ಹೇಳಿದ್ದು ಉಚಿತ. ಅಥವಾ ಎಲ್ಲ ಆಯುಧಗಳೂ ಸ್ವರೂಪಭೂತವಾದವುಗಳೇ ಇವೆ ಎಂದು ತಿಳಿಸಲೂ ಹೀಗೂ ಹಾಗೂ ಹೇಳಿರುವರೆಂದೂ ತಿಳಿಯಬೇಕು. 'ಪ್ರಾಚೀ ದಿಗ್ ಜಹೂಃ ಸಹಮಾನಾ ದಕ್ಷಿಣಾ ರಾಜ್ಞೀ ನಾಮ ಪ್ರತೀಚೀ' ಎಂಬುದರ ಛಾಂದೋಗ್ಯಭಾಷ್ಯದಲ್ಲಿ 'ಸಹಮಾನೇತಿ ಸಂಪ್ರೋಕ್ತೋ ಮಾನಂ ವೇದಾತ್ಮಕಂ ಯತಃ । ಶಂಖೋ ವೇದಾತ್ಮಕಃ ಶಂಖಸಹಿತೋ ದಕ್ಷಿಣಾಧರಃ । ಜುಹೋತಿ ಚಕ್ರೇಣ ಶತ್ರೂನಿತ್ಯಥವಾ ಜುಹೂಃ । ಪ್ರತೀಚೀ ದಿಗ್ದಯಿತಸ್ತಸ್ಯ ವಾಮಬಾಹುಸ್ತೋತ್ತರಃ । ರಾಜ್ಞೀತ್ಯುಕ್ತಗದಾಯುಕ್ತೇಃ' ಎಂದು ಹೇಳಿದ್ದು ಅಭಿಮಾನಿ ವಿವಕ್ಷೆಯಿಂದ ಎಂದು ತಿಳಿಯಬೇಕು.

ಹಿಂದೆ ಶಂಖ ಮೊದಲು ಹೇಳಿ ಚಕ್ರ ಅನಂತರ ಹೇಳಲು ಮೊದಲು ಶಂಖಧ್ವನಿ ಕೇಳಿ ಅಳಿದು ಉಳಿದವರನ್ನು ಸಂಹರಿಸುವದು ಚಕ್ರ ಎಂಬ ಅಭಿಪ್ರಾಯದಿಂದ ಇಲ್ಲಿ ಚಕ್ರ ಮೊದಲು ಹೇಳಲು ಶ್ರೇಷ್ಠಸಂಹಾರಕವೆಂಬ ಶ್ರೇಷ್ಠ ಕೆಲಸ ಚಕ್ರದ್ದಾದ್ದರಿಂದ ಎಂಬ ವಿಶೇಷವನ್ನು ತಿಳಿಯಬಹುದು. ಹೇ ಚಕ್ರಂ ಎಂಬುದು ಸಂಬುದ್ಧ್ಯಂತವು. ಉಪಕ್ರಮ ಉಪಸಂಹಾರಗಳಲ್ಲಿ ಹಾಗೆಯೇ ಹೇಳಿದ್ದಾರೆ. ಹಾಗಾದರೆ ಅಮ್ ಹೇಗೆ ಕೇಳಿಬರುವದು ಎನ್ನಬೇಡಿ. ಅದು ಲೋಪವಾಗದೆ ಸಂಬುದ್ಧ್ಯಂತವಾಗಬಹುದು. ಈ ವಿಷಯವನ್ನು ಸುಧಾ-ವಾಕ್ಯಾರ್ಥಚಂದ್ರಿಕಾ-ನ್ಯಾಯವಿವರಣ- ಭಾವಭೋಧಗಳಿಂದ ತಿಳಿಯುವದು. 'ಕವ ರಕ್ಷಣೇ' ಇತ್ಯತಃ ಕವಚಂ ಕವ ರಕ್ಷಣೇ ಇತ್ಯಸ್ಯ ಧಾತೋ ರೂಪಂ ಕವಚಮಿತ್ಯೇತದಿತ್ಯರ್ಥಃ । ಕವತೇರಚ್ ಇತ್ಯೇತಾವಾನ್ ಪ್ರತ್ಯಯಃ ಕವತಿ ರಕ್ಷತೀತಿ ಕವಚಂ । ಎಂದು ಸುಧಾದಲ್ಲಿ ಹೇಳಿದೆ.

**ಶೇಷವಾಕ್ಯಾರ್ಥಚಂದ್ರಿಕಾ.**

'ನನು ಕವತಿ ರೂಪತ್ವೇ ಕವತೇಃ ಕರ್ತರಿ ಪಚಾದ್ಯಚಿ ಸತಿ ಕವೇತಿ ಭವಿತವ್ಯಂ, ತತ್ಕಥಂ ಕವಚಂ ಇತಿ ರೂಪನಿಷ್ಪತ್ತಿಃ ಇತ್ಯತಃ, 'ಉಣಾದಯೋ ಬಹುಲಂ' ಇತಿ ಬಹುಲಗ್ರಹಣಾತ್ ಅಚ ಇತ್ಯೇತಾವತಿ ಪ್ರತ್ಯಯೇ ತತ್ಸಿದ್ಧಿರಿತ್ಯಾಶಯೇನ ಆಹ ಕವತೇರಿತಿ । ಅಚ ಇತ್ಯೇತಾವಾನಿತ್ಯಚ ಅಮ್ ಇತ್ಯೇತಾವಾನಿತ್ಯರ್ಥಃ । ಪ್ರಯೋಜನಾಭಾವಾತ್ ನ ಮಕಾರಸ್ಯ ಇತ್ಸಂಜ್ಞಾ । ತತಶ್ಚ ಮಾಂತತ್ವಾತ್ ಕೃನ್ಮೇಜಂತಃ ಇತ್ಯವ್ಯಯತ್ವಮಿತಿ ಧ್ಯೇಯಮ್ । ಯದ್ವಾ ಅಚ ಇತ್ಯೇತಾವಾನೇವ ಪ್ರತ್ಯಯಃ ತಥಾ ಚ ಕವಚ ಸು. ಇತಿ ಸ್ಥಿತೇ, ಲೋಪಾತ್ ಪರತ್ವಾತ್ ಅತೋಽಮ್ ಇತ್ಯಮಿ ಕೃತೇ ಪರತ್ವಾತ್ ನಿತ್ಯತ್ವಾತ್ ಚ ಅಮಿ ಪೂರ್ವರೂಪತ್ವೇ ಚ ಕೃತೇ ತಸ್ಯ ಅಂತವದ್ಭಾವೇ ತದ್‌ಹ್ರಸ್ವವತ್ ಪರಸ್ಯ ಸಂಬುದ್ಧೇಃ ಸಂಬಂಧಿನೋ ಮಕಾರಸ್ಯ ಹೇ ಜ್ಞಾನ ಇತ್ಯಾದಿವತ್ 'ಏಙ್ ಹ್ರಸ್ವಾತ್' ಇತಿ ಪ್ರಾಪ್ತಸ್ಯ ಲೋಪಸ್ಯ ಬಾಹುಲಿಕಾನ್ನಿವೃತ್ತೌ ಕವಚಂ ಇತಿ ಸಂಬುದ್ಧ್ಯಂತರೂಪಸಿದ್ಧಿಃ' ಎಂದಿದೆ ಎನ್ನುತ್ತಾರೆ ಶ್ರೀಗಳು.

ಮತ್ತು ರಿಪು ಶತ್ರು ಮುಂತಾದ ಪದವನ್ನಿಡದೇ ಅರಿಪದವಿಡುವದರಿಂದ ಚಿತ್ರಾಂಗದನಂತೆ ನಿನಗೂ ಇದು ಆವಶ್ಯಕ ಎಂದು ಧ್ವನಿ ಸೂಚಿತವಾಗುವದು. ಚಿತ್ರಾಂಗದ ಗಂಧರ್ವನಿಗೂ, ಚಿತ್ರಾಂಗದ ರಾಜನಿಗೂ ಹೆಸರಿಗಾಗಿ ಜಗಳವಾದ ಕಥೆ ಪುರಾಣ ಪ್ರಸಿದ್ಧವಾಗಿದೆ. ।।೨೩।।

ಚಕ್ರವನ್ನು ಹೇಳಿದ ನಂತರ ಶಂಖವನ್ನು ಹೇಳಬೇಕಾಗಿದ್ದರೂ ವಾಯುಸಖಃ ಎಂದು ಹಿಂದಿನ ಶ್ಲೋಕದಲ್ಲಿ ಹೇಳಿದ್ದರಿಂದ 'ಗದಾ ತು ವಾಯುರ್ಬಲಸಂವಿದಾತ್ಮಾ' ಎಂದು ನಿರ್ಣಯದಲ್ಲಿ ಹೇಳಿರುವದರಿಂದ ವಾಯು ಅಭಿಮನ್ಯಮಾನವಾದುದರಿಂದ ಪ್ರಸಂಗ ಸಂಗತಿಯಿಂದ ಗದೆಯನ್ನು ಹೇಳುವರು.

**ಗದೇಽಶನಿಸ್ಪರ್ಶನವಿಸ್ಫುಲಿಂಗೇ**
**ನಿಷ್ಪಿಂಡಿ ನಿಷ್ಪಿಂಡ್ಯಜಿತಪ್ರಿಯಾಽಸಿ ।**
**ಕೂಷ್ಮಾಂಡವೈನಾಯಕಯಕ್ಷರಕ್ಷೋ**
**ಭೂತಗ್ರಹಾಂಶ್ಚೂರ್ಣಯ ಚೂರ್ಣಯಾರೀನ್ ।।೨೪।।**

**ಅಶನಿಸ್ಪರ್ಶನವಿಸ್ಫುಲಿಂಗೇ** ವಜ್ರಾಯುಧದಂತೆ ತಾಪಕರಗಳಾದ ಅಗ್ನಿಕಣಗಳುಳ್ಳ ಅಥವಾ ವಜ್ರಗಳ ತಿಕ್ಕಾಟದಿಂದುಂಟಾದ ಬೆಂಕಿಯ ಕಿಡಿಗಳಂತೆ ಕಿಡಿಗಳುಳ್ಳ ಅಥವಾ

ಸಿಡಿಲಿನ ತಾಪದಂತೆ ದುಃಸಹಗಳಾದ ಅಗ್ನಿಯ ಕಣಗಳುಳ್ಳ **ಗದೇ** ಕೌಮೋದಕಿಯೇ ನೀನು **ಅಜಿತಪ್ರಿಯಾ ಅಸಿ** ಯಾರಿಂದಲೂ ಗೆಲ್ಲಲಾಗದ ಶ್ರೀಹರಿಯ ಪ್ರಿಯಳಾಗಿರುವೆ. ಕೂಷ್ಮಾಂಡ ವಿನಾಯಕ, ಯಕ್ಷ, ರಾಕ್ಷಸ, ಭೂತ, ಗ್ರಹಗಳನ್ನು **ನಿಷ್ಪಿಂಡಿ** ಸಂಪೂರ್ಣವಾಗಿ ಪುಡಿ ಮಾಡು **ಅರೀನ್** ಶತ್ರುಗಳನ್ನು **ಚೂರ್ಣಯ** ಪುಡಿಮಾಡು. ಎಲ್ಲ ಕಡೆ ದ್ವಿರುಕ್ತಿಯು ಶೀಘ್ರತೆಯನ್ನು ತಿಳಿಸುತ್ತದೆ. **ಅಜಿತಪ್ರಿಯಾ** ಎಂಬುದರಿಂದ ನಿನಗೆಂದೂ ಸೋಲಿಲ್ಲವೆಂದು ತಿಳಿಸುವರು. ಅಜಿತನಿಗೆ ಪರಾಜಿತಪ್ರಿಯತೆ ಉಚಿತವಲ್ಲವಷ್ಟೇ. 'ರಾಜೀಯುಕ್ತ ಗದಾಯುಕ್ತೋ ರಾಜ್ಞೀನಾಮ' ಎಂದು ಛಾಂದೋಗ್ಯಭಾಷ್ಯದಲ್ಲಿ ಹೇಳಿದ್ದೀರಿ. ಕೌಮೋದಕೀ ರಾಜೀ ಎಂದು ಒಂದಕ್ಕೇ ಹೆಸರು ಎಂದು ತಿಳಿಸಲು ಕೇವಲ ಗದೆ ಎಂದಿರುವರು. 'ಸ್ಪರ್ಶನೋ ಮಾರುತೇ ಸ್ಪರ್ಶದಾನಯೋಃ ಸ್ಪರ್ಶನಂ ಮತಂ' ಎಂದು ವಿಶ್ವ. 'ದಂಭೋಲಿರಶನಿರ್ದ್ವಯೋಃ । ತ್ರಿಷು ಸ್ಫುಲಿಂಗೋಽಗ್ನಿಕಣಃ' ಎಂದೂ ಅಮರವಿದೆ. ।।೨೪।।

> **ತ್ವಂ ಯಾತುಧಾನಪ್ರಮಥಪ್ರೇತಮಾತೃ-**
> **ಪಿಶಾಚವಿಪ್ರಗ್ರಹಘೋರದೃಷ್ಟೀನ್ ।**
> **ದರೇಂದ್ರ ವಿದ್ರಾವಯ ಕೃಷ್ಣಪೂರಿತೋ**
> **ಭೀಮಸ್ವನೋಽರೀನ್ ಹೃದಯಾನಿ ಕಂಪಯನ್ ।।೨೫।।**

**ಹೇ ದರೇಂದ್ರ** ಶಂಖಶ್ರೇಷ್ಠವಾದ ಪಾಂಚಜನ್ಯವೇ **ಕೃಷ್ಣಪೂರಿತಃ** ಶ್ರೀಹರಿಯಿಂದ ಊದಲ್ಪಟ್ಟ **ತ್ವಂ** ನೀನು **ಭೀಮಸ್ವನಃ ಸನ್** ಭಯಂಕರ ಧ್ವನಿ ಉಳ್ಳದ್ದಾಗಿ **ಯಾತುಧಾನ** ರಾಕ್ಷಸ ವಿಶೇಷರು **ಪ್ರಮಥ** ರುದ್ರಪಾರ್ಷದರು **ಪ್ರೇತ** ಭೂತವಿಶೇಷ **ಮಾತೃ** ಗಣದೇವತೆಗಳು **ಪಿಶಾಚ** ಪಿಶಾಚರು **ವಿಪ್ರಗ್ರಹ** ಬ್ರಹ್ಮರಾಕ್ಷಸರು **ಘೋರದೃಷ್ಟೀನ್** ಕ್ರೂರನೋಟವುಳ್ಳ ಇವರನ್ನು ಅಥವಾ ಇವರಂತೆ ಕ್ರೂರನೋಟವುಳ್ಳ ಬೇರೆ ಎಲ್ಲರನ್ನೂ **ಅರೀನ್** ಶತ್ರುಗಳನ್ನು **ಹೃದಯಾನಿ ಕಂಪಯನ್** ಅವರ ಎದೆ ನಡುಗಿಸುತ್ತ **ವಿದ್ರಾವಯ** ಓಡಿಸು.

**ಘೋರದೃಷ್ಟೀನ್** ಎಂಬುದು ವಿಪ್ರಗ್ರಹ ವಿಶೇಷವಾಗಲಿ ಅಥವಾ ವಾಲಿಯಂತೆ ಕೇವಲ ದೃಷ್ಟಿ ಹಾಕುವದರಿಂದ ಇತರರ ಬಲವನ್ನು ಆಕರ್ಷಿಸುವ ಶಕ್ತಿಯುಳ್ಳ ಉಗ್ರಗ್ರಹ ವಿಶೇಷ ಎಂದೂ ಮಾಡಬಹುದು. ಪಲಾಯನವು ಎದೆ ನಡುಗುವುದರ ಕಾರ್ಯವಾದ್ದರಿಂದ ಮೊದಲು ನಡುಗಿಸು ನಂತರ ಓಡಿಸು ಎಂದರ್ಥ. ಅಥವಾ ಇತರ ಸರ್ಪವಿಲಕ್ಷಣಗಳಾದ ಕ್ರೂರ ದೃಷ್ಟಿಯುಳ್ಳ ಸರ್ಪಗಳಿಂದ ಎಂದೂ ಅರ್ಥ.

ಆದಿಪರ್ವದಲ್ಲಿ ಗರುಡ ಅಮೃತ ಅಪಹರಣ ಮಾಡುವ ಸಂದರ್ಭದಲ್ಲಿ 'ಚತುರ್ವ್ಯಷ್ಟೌ ಮಹಾವೀರ್ಯೌ ನಿತ್ಯಕ್ರುದ್ಧೌ ತರಸ್ವಿನೌ । ತಯೋರೇಕೋಽಪಿ ಯಂ ಪಶ್ಯೇತ್ ಸ ತೂರ್ಣಂ ಭಸ್ಮಸಾದ್ ಭವೇತ್ । ಎಂದು ಹೇಳಿದೆ. ।।೨೫।।

ಸ್ವನಃ ಎಂದದ್ದರಿಂದ 'ಪಾಂಚಜನ್ಯ ನಿಜಧ್ವಾನಧ್ವಸ್ತಪಾತಕಸಂಚಯ । ಪಾಹಿ ಮಾಂ ಪಾಪಿನಂ ಘೋರಸಂಸಾರಾರ್ಣವಪಾತಿನಮ್ । ಎಂಬ ಮಂತ್ರವನ್ನು ಸೂಚಿಸುವರು. ।।೨೫।।

**ತ್ವಂ ತಿಗ್ಮಧಾರಾಸಿವರಾರಿಸೈನ್ಯ-**
**ಮೀಶಪ್ರಯುಕ್ತೋ ಮಮ ಛಿಂಧಿ ಛಿಂಧಿ ।**
**ಚಕ್ಷೂಂಷಿ ಚರ್ಮನ್ ಶತಚಂದ್ರ ಛಾದಯ**
**ದ್ವಿಷಾಮಘಂ ನೋ ಹರ ಪಾಪಚಕ್ಷುಷಾಮ್ ।।೨೬।।**

**ತಿಗ್ಮಧಾರ** ಹರಿತವಾದ ಅಲಗುಳ್ಳ **ಅಸಿವರ** ಖಡ್ಗ ಶ್ರೇಷ್ಠನಾದ ನಂದಕವೇ **ತ್ವಂ** ನೀನು **ಮಮ** ನನ್ನ **ಅರಿಸೈನ್ಯಂ** ಶತ್ರುಸೈನ್ಯವನ್ನು **ಛಿಂಧಿ ಛಿಂಧಿ** ಶೀಘ್ರವಾಗಿ ಕತ್ತರಿಸು. **ಹೇ ಶತಚಂದ್ರಚರ್ಮನ್** ನೂರು ಚಂದ್ರಾಕಾರ ಮಂಡಲಗಳುಳ್ಳದ್ದರಿಂದ ಶತಚಂದ್ರವೆಂಬ ಹೆಸರುಳ್ಳ ಗುರಾಣಿಯೇ **ಪಾಪಚಕ್ಷುಷಾಂ** ಕೆಟ್ಟ ಕಣ್ಣುಗಳುಳ್ಳ **ದ್ವಿಷಾಂ** ಶತ್ರುಗಳ **ಚಕ್ಷೂಂಷಿ** ಕಣ್ಣುಗಳನ್ನು **ಛಾದಯ** ಮುಚ್ಚು **ನಃ ಅಘಂ ಹರ** ನಮ್ಮ ಪಾಪವನ್ನು ಪರಿಹರಿಸು.

ಪಟ್ಟಿಶದಂತೆ ಎರಡೂ ಕಡೆಗೆ ಅಲಗು ಇಲ್ಲದ್ದರಿಂದ ತನ್ನ ರಕ್ಷಣವೆಂಬ ಅರ್ಥಕಾರ್ಯಕಾರಿಯಾದುದರಿಂದ ಖಡ್ಗ ಮತ್ತು ಚರ್ಮಗಳನ್ನು ಒಟ್ಟಿಗೆ ಹೇಳಿದ್ದಾರೆ. 'ಸಂಬುದ್ಧೌ ನಪುಂಸಕಾನಾಂ ನಲೋಪೋ ವಾ ವಾಚ್ಯಃ' ಎಂಬ ವಾರ್ತಿಕವಿರುವದರಿಂದ ನಲೋಪವಾಗಿಲ್ಲ.

ಇಲ್ಲಿ ಚಕ್ರಾದ್ಯಾಯುಧಗಳಲ್ಲಿ ಇರುವ ಚಕ್ರಾದಿನಾಮಕ ಭಗವಂತನನ್ನು ಸ್ವೀಕರಿಸಬೇಕು. ಅವನೇ ಅಲ್ಲಲ್ಲಿದ್ದು ಅವುಗಳ ಶಕ್ತಿಗೆ ಉದ್ಬೋಧಕನಾಗಿ ಮುಖ್ಯವಾಗಿ ಫಲ ಕೊಡುವವನು. ಇದನ್ನೇ 'ಚಕ್ರಂ ಚಂಕ್ರಮಣಾದ್ವಿಷ್ಣುರ್ವರ್ಜನಾದ್ವಜ್ರ ಉಚ್ಯತೇ । ಖಂಡನಾತ್ ಖಡ್ಗ ಇತ್ಯುಕ್ತೋ ಹೇತಿನಾಮಾ ಸ್ವಯಂ ಹರಿಃ । ತತ್ರ ತತ್ರ ಸ್ಥಿತೋ ವಿಷ್ಣುಃ ತತ್ತಚ್ಛಕ್ತೀಃ ಪ್ರಬೋಧಯನ್ । ಏಕ ಏವ ಮಹಾಶಕ್ತಿಃ ಕುರುತೇ ಸರ್ವಮಂಜಸಾ । ಎಂದು ಹೇಳಿದೆ.

**ಯನ್ನೋ ಭಯಂ ಗ್ರಹೇಭ್ಯೋಽಭೂತ್ ಕೇತುಭ್ಯೋ ನೃಭ್ಯ ಏವ ಚ ।**
**ಸರೀಸೃಪೇಭ್ಯೋ ದಂಷ್ಟ್ರಿಭ್ಯೋ ಭೂತೇಭ್ಯೋಽಘೇಭ್ಯ ಏವ ಚ ॥೨೭॥**

**ಸರ್ವಾಣ್ಯೇತಾನಿ ಭಗವನ್ನಾಮರೂಪಾಸ್ತ್ರಕೀರ್ತನಾತ್ ।**
**ಪ್ರಯಾಂತು ಸಂಕ್ಷಯಂ ಸದ್ಯೋ ಯೇಽನ್ಯೇ ಶ್ರೇಯಃಪ್ರತೀಪಕಾಃ ॥೨೮॥**

**ನಃ** ನಮಗೆ **ಗ್ರಹೇಭ್ಯಃ** ಸೂರ್ಯಾದಿ ಗ್ರಹಗಳಿಂದ ಪೂತನಾದಿಗಳಿಂದ, ರಣೋದ್ಯೋಗಿಗಳಿಂದಲೂ 'ಗ್ರಹೋ ರಣೋದ್ಯಮೇ ಸೂರ್ಯಪೂತನಾದೌ ಚ' ಎಂದು ವಿಶ್ವವಿದೆ. **ಕೇತುಭ್ಯಃ** ಉಲ್ಕಾಪಾತಗಳಿಂದ, ಧೂಮಕೇತುಗಳಿಂದ, (ಗ್ರಹ ಶಬ್ದದಿಂದ ಕೇತುಗ್ರಹವನ್ನು ಸ್ವೀಕರಿಸಿ ಆಗಿದೆ ಆದ್ದರಿಂದ ಹೀಗೆ ಅರ್ಥ ಹೇಳಬೇಕು) **ನೃಭ್ಯಃ** ದುಷ್ಟಮಾನವರಿಂದ **ಅನೃಭ್ಯಃ** ರಾಕ್ಷಸರಿಂದ 'ಸಭಾ ರಾಜಾ ಮನುಷ್ಯ' ಎಂಬ ಸೂತ್ರವೃತ್ತಿಯಲ್ಲಿ ಅಮನುಷ್ಯಶಬ್ದೋ ರಕ್ಷಃಪಿಶಾಚಾನಾಹ ಎಂದು ಹೇಳಿದೆ. **ಸರೀಸೃಪೇಭ್ಯಃ** ಸರ್ಪಗಳಿಂದಲೂ **ದಂಷ್ಟ್ರಿಭ್ಯಃ** ಆಡವಿಹಂದಿಗಳಿಂದ, 'ವರಾಹಃ ಸೂಕರೋ ದಂಷ್ಟ್ರೀ ಘೋಣೀ ಸ್ತಬ್ಧರೋಮಾ' ಎಂದು ಅಮರವಿದೆ. ಮುಳ್ಳುಹಂದಿ ಶಿಖಾದಿ ಕೊರೆಹಲ್ಲಿನಿಂದ ಕಿತ್ತು ತಿನ್ನುವ ಕ್ರೂರಪ್ರಾಣಿಗಳಿಂದ **ಅಘೇಭ್ಯಃ** ಪಾಪಗಳಿಂದ ಅಥವಾ ಪಾಪಿಗಳಿಂದ **ಭೂತೇಭ್ಯಃ** ಇತರ ಪ್ರಾಣಿಗಳಿಂದ ಅಥವಾ ಪಾಪಿಗಳಿಂದ **ಯತ್** ಯಾವ **ಭಯಂ ಅಭೂತ್** ಭಯವು ಬಂದಿದೆಯೋ **ಯೇ ಅನ್ಯೇ ಶ್ರೇಯಃ ಪ್ರತೀಪಕಾಃ** ಯಾರು ಇನ್ನುಳಿದ ನಮಗೆ ಊಹಿಸಲಾಗದ ಅಹಿತಮಾಡುವ ಶ್ರೇಯಸ್ಸಿಗೆ ವಿರೋಧಿಗಳೋ **ಏತಾನಿ ಸರ್ವಾಣಿ** ಇವರೆಲ್ಲರೂ **ಭಗವನ್ನಾಮರೂಪಾಸ್ತ್ರಕೀರ್ತನಾತ್** ಶ್ರೀಹರಿಯ ನಾಮವೆಂಬ ಅಸ್ತ್ರವನ್ನು ಹೇಳುವದರಿಂದಲೇ **ಸದ್ಯಃ** ಕ್ಷಣದಲ್ಲಿಯೇ **ಸಂಕ್ಷಯಂ** ಸಂಪೂರ್ಣನಾಶವನ್ನು **ಪ್ರಯಾಂತು** ಹೊಂದಲಿ. ॥೨೭-೨೮॥

**ಗರುಡೋ ಭಗವಾಂಸ್ತೋತ್ರಸ್ತೋಮಶ್ಛಂದೋಮಯಃ ಪ್ರಭುಃ ।**
**ರಕ್ಷತ್ವಶೇಷಕೃಚ್ಛ್ರೇಭ್ಯಃ ವಿಷ್ವಕ್ಸೇನಃ ಸ್ವನಾಮಭಿಃ ॥೨೯॥**

**ಸ್ತೋತ್ರಸ್ತೋಮಃ** ಬೃಹದ್ರಥಂತರ ಮೊದಲಾದ ಸಾಮಕ್ಕೆ ಆಧಾರವಾದ ಋಕ್‌ಗಳ ಸಮೂಹಕ್ಕೆ ಅಭಿಮಾನಿಯಾದ ಸ್ತೋಭ ಎಂಬ ಪಾಠದಲ್ಲಿ ಗಾನ ಪೂರಕ ಅಕ್ಷರಗಳೆಂದರ್ಥ. **ಛಂದೋಮಯಃ** ವೇದಪ್ರತಿಪಾದ್ಯನಾದ, ವೇದಾಭಿಮಾನಿಯಾದ **ಪ್ರಭುಃ** ಸಮರ್ಥರಾದ **ಭಗವಾನ್** ಪೂಜ್ಯರಾದ **ಗರುಡಃ** ಗರುಡದೇವರು **ಅಶೇಷಕೃಚ್ಛ್ರೇಭ್ಯಃ** ಎಲ್ಲಕಷ್ಟಗಳಿಂದಲೂ **ರಕ್ಷತು** ರಕ್ಷಿಸಲಿ **ವಿಷ್ವಕ್ಸೇನಃ** ಶ್ರೀಹರಿಗೆ

ನಿವೇದಿತವಾದುದನ್ನು ತಿನ್ನುವ ದ್ವಾರಪಾಲಕನಾದ ವಿಷ್ವಕ್ಸೇನನು, ಸರ್ವತ್ರ ಸೇನೆಯುಳ್ಳ ಶ್ರೀಹರಿಯು **ಸ್ವನಾಮಭಿಃ** ತನ್ನ ಅಂತರ್ಯಾಮಿ ಸ್ವಾಮಿ ಶ್ರೀಹರಿಯ ನಾಮಗಳಿಂದಲೂ **ರಕ್ಷತು** ಕಾಪಾಡಲಿ.

**ವಿಶಿಷ್ಟ ಅರ್ಥ.**

'ವಾಯ್ವನಂತರಂ ಶಿವಾದಯಃ' ಎಂದು ಋಗ್ಭಾಷ್ಯದಲ್ಲಿ ಹೇಳಿರುವದರಿಂದ, ಛಂದೋಮಯೇನ ಗರುಡೇನ ಎಂದು ಅಷ್ಟಮದಲ್ಲಿಯೂ ಹೇಳಿರುವುದರಿಂದ ವೇದವೇದ್ಯನೆಂದು ಹೇಳಿರುವರು. ಸ್ವನಾಮಭಿಃ ಎಂದರೆ ಸ್ವಸ್ವಾಮಿನಾಮಭಿಃ ಎಂದು ಅರ್ಥ ಮಾಡಿದೆ. ಸ್ವಾಖ್ಯೋ ಭಾವಃ ಎಂದು ಗೀತಾಭಾಷ್ಯ ಪ್ರಮೇಯದೀಪಿಕಾದಲ್ಲಿ ಹೇಳಿದೆ. ಆದರೂ ಸ್ವಶಬ್ದಕ್ಕೆ ಆತ್ಮೀಯ ಎಂಬ ಅರ್ಥವಿರುವುದರಿಂದ ಆತ್ಮೀಯನಾದ್ದರಿಂದ ಈಶ್ವರ ಪ್ರಸಕ್ತಿ ಎನ್ನಬಾರದು 'ದ್ವಿಷ್ಠೋ ಯದ್ಯಪಿ ಸಂಬಂಧಃ ಷಷ್ಠ್ಯುತ್ಪತ್ತಿಃ ಪ್ರಧಾನತಃ' ಎಂದು ವಚನವಿರುವುದರಿಂದ ಶ್ರೀಹರಿಗೆ ಆತ್ಮೀಯತ್ವವಿಲ್ಲ.

ಷಷ್ಠ್ಯಂತಾತ್ ಖಲು ಅಯಂ ಛಃ ಇತ್ಯುಕ್ತೇಃ ಈ ರೀತಿ ಸಮಾಸ ಮಾಡಿದರೆ ಗರುಡನಿಗೆ ಪ್ರಾಧಾನ್ಯ ಪ್ರಸಕ್ತವಾಯಿತಲ್ಲ ಎಂದರೆ (ಮಮ) ನಾಮ ಸ್ವಾಮಿ ಮುಂತಾದವುಗಳಂತೆ ಸಂಬಂಧ ಸಾಮಾನ್ಯ ಷಷ್ಠೀ ಆಶ್ರಯಣದಿಂದ ಪ್ರತೀತವಾದ ಪ್ರಧಾನತ್ವವು ತದ್ವಾಹನತ್ವಸಂಬಂಧದಿಂದ ಹೋಗಿ ಬಿಡುವುದು.

ಸ್ವನಾಮಭಿಃ ಕ್ಷಿಪ ಮುಂತಾದ ನಾಮಗಳಿಂದ ಅಥವಾ ಸ್ವಶಬ್ದವಾಚ್ಯನಾದ ಎಂದಾಗಲಿ ಅರ್ಥ. **ಅಶೇಷಕೃಚ್ಛ್ರೇಭ್ಯಃ** ಸಮಸ್ತಪಾಪಗಳಿಂದಲೂ ತಾಪಗಳಿಂದಲೂ ಎಂದರ್ಥ. 'ಕೃಚ್ಛ್ರಂ ಕಷ್ಟಸಂತಾಪಯೋಃ' ಎಂದು ವಿಶ್ವವಿದೆ. ಶೇಷಾದಿಕೃತ ಕಷ್ಟದಿಂದ ರಕ್ಷಣ ತನ್ನಷ್ಟಕ್ಕೆ ತಾನೇ ಪ್ರಾರ್ಥನೆ ಇಲ್ಲದೇ ಪಕ್ಷಿಯಿಂದ ಆಗುವುದು. ಆದ್ದರಿಂದಲೇ ಇತರಕಷ್ಟಗಳಿಂದ ರಕ್ಷಣೆ ಪ್ರಾರ್ಥನೀಯವೆಂದು ವ್ಯಾಸರು ಈ ರೀತಿ ವಿನ್ಯಾಸದಿಂದ ಸೂಚಿಸುವರು. 'ತತ್ಪಕ್ಷವಾತಸ್ಪರ್ಶಾದ್ಧಿ ಕೇವಲಂ ವಿನಷ್ಟ ಏಷಾಂ ಸ ಉರಂಗಬಂಧಃ' ಎಂದು ಆಚಾರ್ಯರು ಹೇಳಿರುವರು. ।।೨೯।।

**ಸರ್ವಾಪದ್ಭ್ಯೋ ಹರೇರ್ನಾಮರೂಪಯಾನಾಯುಧಾನಿ ನಃ ।**
**ಬುದ್ಧೀಂದ್ರಿಯಮನಃಪ್ರಾಣಾನ್ ಪಾಂತು ಪಾರ್ಷದಭೂಷಣಾಃ ।।೩೦।।**

**ಹರೇಃ** ಶ್ರೀಹರಿಯ **ನಾಮ** ನಾರಾಯಣಾದಿ ನಾಮಗಳು **ರೂಪ** ಮತ್ಸ್ಯಾದಿ ಅವತಾರಗಳು **ಯಾನ** ಗರುಡನು, (ರಥ) **ಆಯುಧಾನಿ** ಚಕ್ರಾದಿಗಳು

**ಪಾರ್ಷದಭೂಷಣಾಃ** ದ್ವಾರಪಾಲಕ ಶ್ರೇಷ್ಠರು ಅಥವಾ ದ್ವಾರಪಾಲಕರು ಮತ್ತು ಒಡವೆಗಳೂ **ನಃ** ನಮ್ಮನ್ನು **ಸರ್ವಾಪದ್ಭ್ಯಃ** ಎಲ್ಲ ಕಷ್ಟಗಳಿಂದ ಕಾಪಾಡಲಿ ಮತ್ತು **ನಃ** ನಮ್ಮ **ಬುದ್ಧೀಂದ್ರಿಯಮನಃಪ್ರಾಣಾನ್** ಬುದ್ಧಿ ಇಂದ್ರಿಯ ಮನಸ್ಸು ಪ್ರಾಣಗಳನ್ನು **ಪಾಂತು** ಕಾಪಾಡಲಿ.

ವಿಜಯಧ್ವಜರು ಪುಲ್ಲಿಂಗ ಪ್ರಯೋಗ ಮಾಡಿ ಭೂಷಣಗಳಿಗೂ ಜ್ಞಾನವಿದೆ ಎಂದು ಸೂಚಿಸಿರುವರು 'ತತ್ಕಂಠಗಂ ಕೌಸ್ತುಭಮಾಸ ಧಾತಾ' ಎಂದು ಹೇಳಿದೆ. ಬ್ರಹ್ಮದೇವರೇ ಕೌಸ್ತುಭ ಮಣಿಯಾಗಿದ್ದಾರೆ ಎಂದರ್ಥ. ಲಿಂಗವ್ಯತ್ಯಾಸ ಛಾಂದಸ ಎಂದು ಚೆಟ್ಟಿ ಆಚಾರ್ಯರು ಹೇಳುತ್ತಾರೆ.

**ಶ್ರೀಸತ್ಯಧರ್ಮರ ವಿಶಿಷ್ಟ ಅರ್ಥ**

ಭೂಷ್ಯಂತೇ ಏಭಿರಿತಿ ಭೂಷಣಾಃ ಕರಣೇ ಲ್ಯುಟ್ ಪ್ರತ್ಯಯ ಮಾಡಿದಾಗಲೂ 'ಕೊಸಾವನುಮಾನೋ ನಾಮ' ಎಂದು ಮಹಾಭಾಷ್ಯದಲ್ಲಿ ಹೇಳಿರುವದರಿಂದ ಭೂಷಣ ಶಬ್ದವು ಮೂರು ಲಿಂಗವಾಗಿದೆ. ಭೂಷಯಂತೀತಿ ಭೂಷಣಾಃ ಣ್ಯಾಸಶ್ರಂಥೋ ಯುಚ್ ಎಂಬ ಸೂತ್ರದಿಂದ ಯುಚ್ ಪ್ರತ್ಯಯ ಮಾಡಿದಾಗ 'ಬಹವಃ ಕರ್ಮಕಾರಣಾಃ ಸಂತಿ' ಎಂದು ಗೀತಾಭಾಷ್ಯ ಮುಂತಾದಲ್ಲಿ ಹೇಳಿರುವದರಿಂದ ಸ್ತ್ರೀಲಿಂಗವಾಗುವದು. ಇದನ್ನು ಅಯನ ಶಬ್ದೋಽಧಿಕರಣೇ ತ್ರಿಲಿಂಗಃ ಇತಿ ಪುಲ್ಲಿಂಗತೋಪಪತ್ತೇಃ ಎಂದು ವಿಸ್ತರಿಸಿರುವರು. ನನ್ವತ್ರ ಪ್ರಮಾಣಶಬ್ದೋ ಭಾವಸಾಧನಃ ಕರಣಸಾಧನೋ ವಾ ಆದ್ಯೇಽಪಿ ಪಿಪೀಲಿಕಾಲಿಪಿಃ ಪ್ರಮಾಣಂ ಇತಿ ಸಾಮಾನಾಧಿಕರಣ್ಯಂ ಸ್ಯಾತ್ ದ್ವಿತೀಯೇ ತು ಪ್ರಮಾಣೇಭವಿತವ್ಯಂ ಮುಂತಾಗಿ ಎರಡು ಸ್ಥಳಗಳಲ್ಲಿ ಸುಧಾದಲ್ಲಿ ತಿಳಿಯಬಹುದು. ಯದ್ಯಪಿ ಕ್ರುಧಮಂಡಾರ್ಥೇಭ್ಯಶ್ಚ ಎಂದು ಪುಲ್ಲಿಂಗದಲ್ಲೇ ಯುಚ್ ವಿಹಿತವಾಗಿದೆ. ಆದರೂ ಧತ್ತೇ ಶಕ್ತೀಃ ಚ ಎಂದು ಶಕ್ತಿ ಪದದ ಶಕ್ತಿಯಿಂದ ಹೀಗೆ ವ್ಯಾಖ್ಯಾನಿಸಿದೆ. ಪಾರ್ಷದರ ಜೊತೆಗೆ ಹೇಳಿದ್ದರಿಂದ ಮತ್ತು ಭೂಷಣಾಃ ಎಂದು ನಿರ್ದೇಶ ಮಾಡಿದ್ದರಿಂದ ಇವುಗಳಿಗೆ ಚೇತನತೆ ತಿಳಿಯುವದು. ಅಭಿಮಾನಿಗಳಿಗೆ ಸ್ತ್ರೀಪುಂಸಕತ್ವವು ಧ್ವನಿತವಾಗುವದು. 'ರಮ್ಯೆವ ಬಹುರೂಪಿಣೀ' 'ತತ್ಕಂಠಗಂ ಕೌಸ್ತುಭಮಾಸ ಧಾತಾ' ಮುಂತಾಗಿ ಹೇಳಿದೆ. ರಮಾ ಸ್ತ್ರೀ, ಧಾತಾ ಪುರುಷ ಎನ್ನುತ್ತಾರೆ. ।।೩೦।।

**ಯಥಾ ಹಿ ಭಗವಾನೇವ ವಸ್ತುತಃ ಸದಸಚ್ಚ ಯತ್ ।**
**ಸತ್ಯೇನಾನೇನ ತೇ ಸರ್ವೇ ಯಾಂತು ನಾಶಮುಪದ್ರವಾಃ ।।೩೧।।**

**ಯಥಾ** ಹೇಗೆ **ಸದಸತ್** ಮೂರ್ತ ಮತ್ತು ಅಮೂರ್ತವಾದ ಕಾರ್ಯಕಾರಣ ರೂಪವಾದ **ಯತ್** ಯಾವ ಜಗತ್ತು **ವಸ್ತುತಃ** ಪಾರಮಾರ್ಥಿಕವಾಗಿ **ಭಗವಾನೇವ** ಆ ಜಗತ್ತಿನ ನಿಯಾಮಕನಾದ್ದರಿಂದ ಜಗದ್ರೂಪನೆಂಬುದು ಭಗವಂತನಿಂದ ನಿಯಮ್ಯವೆಂಬುದು **ಹಿ** 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ಶ್ರುತಿ ಪ್ರಸಿದ್ಧವಾಗಿ ಸತ್ಯವೋ **ಅನೇನ** 'ತತ್ಸೃಷ್ಟ್ವಾ ತದೇವಾನುಪ್ರಾವಿಶತ್ ತದನುಪ್ರವಿಶ್ಯ ಸಚ್ಚ ತ್ಯಚ್ಚಾಭವತ್' ಎಂಬ ಶ್ರುತಿ ವಿಹಿತವಾಗಿ ಎಲ್ಲಿಯೂ ಸುಳ್ಳಾಗದಿರುವ **ಸತ್ಯೇನ** ಸತ್ಯದಿಂದ, ಸತ್ಯವೆಂದು ತಿಳಿದಿರುವದರಿಂದ **ನಃ** ನಮ್ಮ **ಸರ್ವೇ** ಎಲ್ಲ **ಉಪದ್ರವಾಃ** ತೊಂದರೆಗಳೂ **ನಾಶಂ** ನಾಶವನ್ನು **ಯಾಂತು** ಹೊಂದಲಿ. ಚ 'ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ । ಯದನುಗ್ರಹತಃ ಸಂತಿ ನ ಸಂತಿ ಯದುಪೇಕ್ಷಯಾ' ಎಂಬ ವಾಕ್ಯವೂ ಹರಿನಿಯಮ್ಯವೆಂದು ತಿಳಿಸುವದು. ಏವಕಾರದಿಂದ ಸದಸನ್ನಿಯಾಮಕತಯಾ, ಸದಸದ್ರೂಪ ಉಚ್ಯತೇ ಸತ್ಯೇನಾನೇನ ಮಾಂ ದೇವಃ ಪಾತು ವಿಷ್ಣುಃ ಚತುರ್ಭುಜಃ । ಎಂಬ ವಾಕ್ಯವನ್ನು ಸ್ಮರಣೆಗೆ ತಂದುಕೊಟ್ಟಿರುವರು. 'ಯಥೇಶ್ವರಶ್ಚ ಜೀವಶ್ಚ ಸತ್ಯಭೇದೌ ಪರಸ್ಪರಮ್ । ತೇನ ಸತ್ಯೇನ ಮಾಂ ದೇವಾಸ್ತ್ರಾಯಂತು ಸಹ ಕೇಶವಾಃ । ಎಂಬ ಗುಹಾಧಿಕರಣಭಾಷ್ಯದಲ್ಲಿ ಉದಾಹರಿಸಿದ ವಾಕ್ಯವನ್ನು ಟೀಕಾಕೃತ್ಪಾದರು ಇದೆ ನ್ಯಾಯದಿಂದ ವ್ಯಾಖ್ಯಾನ ಮಾಡಿರುವದನ್ನು ನೋಡಬಹುದು. ವಿಜಯಧ್ವಜರು ಚೆಟ್ಟಿಯವರು ಈ ರೀತಿಯಾಗಿ ವ್ಯಾಖ್ಯಾನ ಮಾಡಿದ್ದಾರೆ.

**ಶ್ರೀ ಸತ್ಯಧರ್ಮರ ಪ್ರಕಾರ ತಾತ್ಪರ್ಯಾನುಸಾರಿ ಅರ್ಥ**

'ಯಥಾ ಹಿ ಭಗವಾನೇವ' ಎಂಬ ಶ್ಲೋಕದಲ್ಲಿ ಭಗವಂತನು ತನ್ನಿಂದ ತಾನು ಹೇಗೆ ಅಭಿನ್ನನೋ ಅದರಂತೆ ಈ ಸದಸತ್ ಪದಾರ್ಥಗಳು ವಸ್ತುತಃ ಭಿನ್ನವಲ್ಲ ಎಂಬ ಅನ್ಯಥಾ ಜ್ಞಾನವನ್ನು ಹೋಗಲಾಡಿಸಲು ತಾವು ಅನುವಾದ ಮಾಡಿ ಪ್ರಮಾಣದಿಂದ ವ್ಯಾಖ್ಯಾನಿಸುವರು.

ತಾತ್ಪರ್ಯ

ಯಥಾ ಹಿ ಭಗವಾನೇವ ಸದಸನ್ನಿಯಾಮಕತಯಾ ಸದಸದ್ರೂಪ ಉಚ್ಯತೇ ।
ಸತ್ಯೇನಾನೇನ ಮಾಂ ದೇವಃ ಪಾತು ವಿಷ್ಣುಶ್ಚತುರ್ಭುಜಃ ।।ಇತಿ ಚ।।

ಏಕ ಏವ ಪರೋ ವಿಷ್ಣುಃ ಭೂಷಾಹೇತಿಧ್ವಜೇಷ್ವಜಃ ।

**ತತ್ತಚ್ಛಕ್ತಿಸ್ವರೂಪೇಣ ಸ್ವಯಮೇವ ವ್ಯವಸ್ಥಿತಃ ।**
**ಸತ್ಯೇನಾನೇನ ಮಾಂ ದೇವಃ ಪಾತು ಸರ್ವೇಶ್ವರೋ ಹರಿಃ ।।ಇತಿ ।।**

ಶ್ರೀಹರಿಯೇ ಮೂರ್ತಾಮೂರ್ತ ವಸ್ತುಗಳಿಗೆ ನಿಯಾಮಕನಾಗಿ ಸದಸದ್ರೂಪನೆನಿಸುತ್ತಾನೆ. ಈ ಜಗನ್ನಿಯಾಮಕತ್ವ ಜ್ಞಾನದಿಂದ ನಾಲ್ಕು ಭುಜಗಳುಳ್ಳ ಶ್ರೀಹರಿಯು ನನ್ನನ್ನು ರಕ್ಷಿಸಲಿ ಎಂದು ಭಾವ.

ಸರ್ವೋತ್ತಮನಾದ ಶ್ರೀ ಭಗವಂತನೇ ಭೂಷಣ, ಆಯುಧ, ಧ್ವಜಗಳಲ್ಲಿ ಭೂಷಣಾದಿಗಳಿಗೆ ಸತ್ತಾದಿಪ್ರದನಾಗಿ ಇರುತ್ತಾನೆ. ಇದನ್ನು ತಿಳಿಯುವದರಿಂದ ಸರ್ವೇಶ್ವರನಾದ ಶ್ರೀಹರಿಯು ನನ್ನನು ರಕ್ಷಿಸುತ್ತಾನೆ ಎಂದು ಭಾವ.

**ವಿಶಿಷ್ಟ ಅರ್ಥ**

'ಮೂರ್ತಂ ಸದಿತಿ ಸಂಪ್ರೋಕ್ತಮಮೂರ್ತಮಸದುಚ್ಯತೇ' ಎಂದಿರುವದರಿಂದ ಮೂರ್ತಾಮೂರ್ತನಿಯಾಮಕನೆಂದರ್ಥ. ವಾಯು ಮತ್ತು ಆಕಾಶ ಅಸತ್ ಆಗಿವೆ. ಪೃಥಿವೀ-ಜಲ-ತೇಜಸ್ಸು ಸತ್ ಆಗಿವೆ.

ಸತ್ಯೇನ ಭುಜವನ್ನೆತ್ತಿ ಶಪಥ ಮಾಡುವದರಿಂದ ಎಂದರ್ಥ. 'ಸತ್ಯಂ ತು ಶಪಥೇ ತಥ್ಯೇ' ಎಂದು ವಿಶ್ವವಿದೆ. 'ಸತ್ಯಂ ಸತ್ಯಂ ಪುನಃ ಸತ್ಯಂ ಉದ್ಧೃತ್ಯ ಭುಜಮುಚ್ಯತೇ । ವೇದಶಾಸ್ತ್ರಾತ್ ಪರಂ ನಾಽಸ್ತಿ ನ ದೈವಂ ಕೇಶವಾತ್ಪರಮ್ । ಎಂದು ಆಚಾರ್ಯರು ಶಪಥ ಮಾಡಿದ್ದಾರೆ. ಶಪಥ ಮಾಡಿದರೆ ನಿನ್ನ ಭುಜ ಭಂಜನವಾದೀತು ಎಂದು ಧ್ವನಿತವಾದ ಆಕ್ಷೇಪಕ್ಕೆ ಯತಃ ಚತುರ್ಭುಜಃ ತಥಾ ನ ಕುರ್ಯಾತ್ ಚತುರ್ಭುಜನಾದುದರಿಂದ ನನ್ನ ಭುಜ ಭಂಜನ ಮಾಡಲಾರ ಎಂದು ಧ್ವನಿತ ಉತ್ತರ ತಿಳಿಯಬೇಕು.

ಯಥಾ ತನ್ನಂತೆ, ಚತುರ್ಭುಜಃ ಮುಕ್ತನಾಗಿ ಸಾರೂಪ್ಯ ಹೊಂದುವಂತೆ, ಮಾಂ ಪಾತು ಹೀಗೂ ಅನ್ವಯ ಮಾಡಬಹುದು. ವಸ್ತುತಃ ಭಾವಪ್ರಧಾನನಿರ್ದೇಶ ವಸ್ತುತ್ವತಃ ಶಕ್ತನಾದ್ದರಿಂದ ಎಂದರ್ಥ. 'ಅವಸ್ತ್ವಶಕ್ತಮುದ್ದಿಷ್ಟಂ ಶಕ್ತಂ ವಸ್ತ್ವಿತಿ ಭಣ್ಯತೇ । ತಸ್ಮಾದೇಕಂ ಪರಂ ಬ್ರಹ್ಮ ವಸ್ತುಶಬ್ದೋದಿತಂ ಸದಾ' ಎಂದು ಏಕಾದಶ ತಾತ್ಪರ್ಯದಲ್ಲಿದೆ. ವಸ್ತು ಅಪ್ರತಿಹತಂ ನಿತ್ಯಂ ಸ್ಕಾಂದೇ ಚ, 'ವಾಸನಾದ್ವಸನಾದ್ವಸ್ತು ನಿತ್ಯಾಪ್ರತಿಹತತ್ವತಃ । ವಾಸೇನೇದಂ ಯತಸ್ತುನ್ನಮತಸ್ತದ್ಬ್ರಹ್ಮ ಶಬ್ದ್ಯತೇ' ಎಂದು ಪ್ರಥಮತಾತ್ಪರ್ಯದಲ್ಲಿಯೂ ಹೇಳಿದೆ. ಸದಸನ್ನಿಯಮನ ಸಮರ್ಥನಾದುದರಿಂದ




ಎಂದರ್ಥ. ಇದರಿಂದ ಸದಸನ್ನಿಯಾಮಕತಯಾ ಎಂದು ಪ್ರಮಾಣದಲ್ಲಿ ವ್ಯಾಖ್ಯಾನ ಮಾಡಲು ಮೂಲದಲ್ಲಿಯ ವಸ್ತುತಃ ಎಂಬ ಪದವು ಮೂಲವೆಂದು ತಿಳಿಸಿದಂತಾಯಿತು. ಭಗವಂತನು ಯಥಾ ಹೇಗೆ ವಸ್ತುತೋ ವಸ್ತು ಪಾರಮಾರ್ಥಿಕ ಸತ್ಯನೋ, ತಥಾ ಹಾಗೆ, ಸದಸದಪಿ ವಸ್ತು ಪಾರಮಾರ್ಥಿಕವು, ಭೂಷಣಾಯುಧ ಲಿಂಗಾಖ್ಯಾ ಧತ್ತೇ ಶಕ್ತೀಃ ಎಂಬ ೩೨ನೇ ಶ್ಲೋಕದಲ್ಲಿ ಭೂಷಣಾದಿ ಪದಾಭಿಧೇಯತ್ವವನ್ನು ಮಾತ್ರ ಭಗವಂತನಿಗೆ ಹೇಳುತ್ತದೆ. ಅದೂ ಕೂಡ ಔಪಚಾರಿಕವಾಗಿ ಎಂಬ ಅನ್ಯಥಾ ಪ್ರತೀತಿಯನ್ನು ನಿವಾರಿಸಲು ಪ್ರಮಾಣ ಹೇಳುವದರಿಂದಲೇ ಆದರ ತಾತ್ಪರ್ಯ ಹೇಳುವರು ಏಕ ಏವ ಎಂದು. ಏಕಃ ಮುಖ್ಯನು, ಅದ್ವಿತೀಯನು ಅಜಃ ಉತ್ಪತ್ತಿರಹಿತನು, ಪರೋಕ್ಷಃ ಭಿನ್ನನು ಉತ್ತಮನೂ, ಭೂಷಾ ಭೂಷಣನು, ಹೇತಿ ಆಯುಧ, ಧ್ವಜಃ ಪತಾಕವು, ಲಿಂಗಂ ಚಿಹ್ನವು, 'ಲಿಂಗಂ ಚಿಹ್ನೇऽನುಮಾನೇ ಚ' ಎಂದು ವಿಶ್ವವಿದೆ. ಇವುಗಳಲ್ಲಿ ತತ್ತಚ್ಛಕ್ತಿಸ್ವರೂಪೇಣ ತಾಸ್ತಾಶ್ಚ ಶಕ್ತಯಃ ಯೇನ ತತ್ ತತ್ತಚ್ಛಕ್ತಿ, ತತ್ತಚ್ಛಕ್ತಿ ಚ ತತ್ ಸ್ವರೂಪಂ ಚ ತೇನ ಎಂದು ವಿಗ್ರಹ. ಅವುಗಳಿಗೆ ಸತ್ತಾಪ್ರದನಾಗಿರುವನು. ಆದ್ದರಿಂದ ಭೂಷಣಾಯುಧಲಿಂಗ ಎಂಬ ಆಖ್ಯಾ ಹೆಸರನ್ನು ಧತ್ತೇ ಧರಿಸುವನು. ಮೂಲದಲ್ಲಿಯ ಲಿಂಗ ಪದ ವ್ಯಾಖ್ಯಾನವೇ ಧ್ವಜವೆಂಬುದು. ॥೩೧॥

ಹಾಗಾದರೆ ಆಯಾ ಸ್ಥಾನದಲ್ಲಿರುವವನಿಗೆ ಭೇದ ಬರಬೇಕಲ್ಲ ಎಂದರೆ ಹೇಳುವರು. ಭೂಷಣಗಳು ಅಚೇತನಗಳು. ಅವುಗಳಿಗೆ ಚೇತನರಂತೆ ಬೇಡಿದುದನ್ನು ಕೊಡುವ ಸಾಮರ್ಥ್ಯವೆಲ್ಲಿದೆ ಎಂದು ಶಂಕಿಸಿ ಅವುಗಳಲ್ಲಿ ಆಯಾ ಕಾರ್ಯ ಮಾಡುವ ಶಕ್ತಿ ಸ್ವರೂಪನಾಗಿ ಶ್ರೀಹರಿಯು ಇರುವದು ಹೇಗೆ ಸತ್ಯವೋ, ಆ ಸತ್ಯ ತಿಳಿದಿದ್ದರಿಂದ ಶ್ರೀಹರಿಯು ನಮ್ಮನ್ನು ಕಾಪಾಡಲಿ ಎಂದು ಇಲ್ಲಿ ಹೇಳುವರು.

**ಯಥೈಕಾತ್ಮ್ಯಾನುಭಾವೇನ ವಿಕಲ್ಪರಹಿತಃ ಸ್ವಯಮ್ ।**
**ಭೂಷಣಾಯುಧಲಿಂಗಾಖ್ಯಾ ಧತ್ತೇ ಶಕ್ತೀಃ ಸ್ವಮಾಯಯಾ ॥೩೨॥**

**ಯಥಾ** ಹೇಗೆ **ಐಕಾತ್ಮ್ಯಾನುಭಾವೇನ** ಆಯಾ ವಸ್ತುಗಳಲ್ಲಿರುವ ರೂಪಗಳಿಗೆ ಏಕತ್ವಾನುಸಂಧಾನದಿಂದ ಮತ್ತು ಮುಖ್ಯತ್ವ-ಸ್ವಾತಂತ್ರ್ಯಾದಿಗಳಿಂದ **ವಿಕಲ್ಪರಹಿತಃ** ಸ್ವಗತಭೇದರಹಿತನಾಗಿ **ಸ್ವಮಾಯಯಾ** ತನ್ನ ಇಚ್ಛೆಯಿಂದ ಸ್ವರೂಪಶಕ್ತಿಯಿಂದ **ಸ್ವಯಂ** ತಾನೇ **ಭೂಷಣಾಯುಧಲಿಂಗಾಖ್ಯಾಃ** ಒಡವೆ-ಆಯುಧ-ಚಿಹ್ನ ಇವುಗಳಲ್ಲಿದ್ದು ಆಯಾ

ಶಬ್ದಗಳಿಂದ ಕರೆಯಲ್ಪಡುವ **ಶಕ್ತೀಃ** ರೂಪಗಳನ್ನು **ಸ್ವಯಂ** ತಾನಾಗಿಯೇ **ಧತ್ತೇ** ಸ್ವೀಕರಿಸುವನು.

ಇಲ್ಲಿ ನಿಜಮಾಯಯಾ ಎನ್ನದೇ ಸ್ವಮಾಯಯಾ ಎಂದುದರಿಂದ ಸು ಅತ್ಯಂತವಾಗಿ ನ ವಿದ್ಯತೆ ಮಾಯಾ ಯಸ್ಯಾಂ ಎಂಬ ಅರ್ಥವನ್ನು ಅನಾಯಾಸವಾಗಿ ಸೂಚಿಸಿರುವರು. ಎಲ್ಲ ಪದಾರ್ಥಗಳಲ್ಲಿರುವವನಿಗೆ ಭೇದವಿಲ್ಲವೆಂಬುದು 'ಓಂ ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ ಓಂ' ಎಂಬ ಸೂತ್ರ ಸಿದ್ಧವಾದುದು.

ಐಕಾತ್ಮ್ಯಾನುಭಾವೇನ ಏಕಸ್ವಾಮ್ಯಪ್ರಭಾವದಿಂದ ಎಂದಾಗಲಿ ನಿಶ್ಚಯದಿಂದ ಎಂದಾಗಲಿ ಅರ್ಥ 'ಅನುಭಾವಃ ಪ್ರಭಾವೇ ಸ್ಯಾನ್ನಿಶ್ಚಯೇ' ಎಂದು ವಿಶ್ವವಿದೆ. ಐಕಾತ್ಮ್ಯ ಎಂದರೆ ತಾದಾತ್ಮ್ಯವಲ್ಲ. ತಾದಾತ್ಮ್ಯಜ್ಞಾನಿಗಳಿಗೆ ಅನಿಪುಣತೆಯನ್ನು ಹೇಳಿರುವದರಿಂದ ತತ್ತ್ವನಿರ್ಣಯ ಮೂಲ ಟೀಕಾಗಳಲ್ಲಿ ಹೀಗೆ ಹೇಳಿದೆ. 'ಐಕಾತ್ಮ್ಯಂ ನಾಮ ಯದಿದಂ ಕೇಚಿದ್ಬ್ರೂಯುರನೈಪುಣಾಃ' ಎಂದಾರಂಭಿಸಿ 'ತೇಷಾಂ ತಮಃಶರೀರಾಣಾಂ ತಮ ಏವ ಪರಾಯಣಂ' ಎಂಬಲ್ಲಿವರೆಗೆ ಟೀಕಾ. ಐಕಾತ್ಮ್ಯಮಿತಿ । ಏಕಶ್ಚಾಸೌ ಆತ್ಮಾ ಚ ತಸ್ಯ ಭಾವಃ ಐಕಾತ್ಮ್ಯಂ ಸರ್ವಾತ್ಮನಾಂ ಬ್ರಹ್ಮೈಕ್ಯಂ ಇತಿ ಯಾವತ್ । ಯದ್ಯೈಕಾತ್ಮ್ಯಂ ನಾಮ ಇದಂ ಅನೈಪುಣಾಃ ಅವಿದ್ಯಮಾನನೈಪುಣಾಃ ಕೇಚಿದ್ ಬ್ರೂಯುಃ ಮುಂತಾಗಿ. ವಿಕಲ್ಪರಹಿತಃ ಭ್ರಾಂತಿರಹಿತನು ಎಂದೂ ಅರ್ಥ. 'ವಿಕಲ್ಪೋ ಭ್ರಾಂತಿಪಕ್ಷಯೋಃ' ಎಂದು ವಿಶ್ವವಿದೆ. ।।೩೨।।

**ತೇನೈವ ಸತ್ಯಮಾನೇನ ಸರ್ವಜ್ಞೋ ಭಗವಾನ್ ಹರಿಃ ।**
**ಪಾತು ಸರ್ವೈಃ ಸ್ವರೂಪೈರ್ನಃ ಸದಾ ಸರ್ವತ್ರ ಸರ್ವಗಃ ।।೩೩।।**

**ತೇನೈವ ಸತ್ಯಮಾನೇನ** ಅದೇ ಸತ್ಯವೆಂಬ ಪ್ರಮಾಣದಿಂದ, ಸತ್ಯತೆಯ ಜ್ಞಾನದಿಂದ, ನನ್ನ ಶಪಥ ಜ್ಞಾನದಿಂದ **ಸರ್ವಜ್ಞಃ** ಮುಖ್ಯ ಸರ್ವಜ್ಞನಾದ **ಸರ್ವಗಃ** ಎಲ್ಲ ವಸ್ತುಗಳಲ್ಲಿರುವ **ಸರ್ವೈಃ ರೂಪೈಃ ಚ** ತನ್ನ ಎಲ್ಲ ಅಂದರೆ ಆವಿಷ್ಟ ಅನಾವಿಷ್ಟ ರೂಪಗಳಿಂದ **ನಃ** ನಮ್ಮನ್ನು **ಸದಾ** ಯಾವಾಗಲೂ **ಸರ್ವತ್ರ** ಎಲ್ಲ ಸ್ಥಳದಲ್ಲಿಯೂ **ಪಾತು** ರಕ್ಷಿಸಲಿ **ಭಗವಾನ್** ಐಶ್ವರ್ಯಶಾಲಿಯು **ಸರ್ವತ್ರಸರ್ವಗಃ** ಎಂಬುದು ಒಂದೇ ಪದ. ಸರ್ವಾನ್ ತ್ರಾಯತೇ ಇತಿ ಸರ್ವತ್ರಃ ಸ ಚಾಸೌ ಸರ್ವಗಶ್ಚ ಎಂದು ವಿಗ್ರಹ. ಎಲ್ಲರನ್ನು ರಕ್ಷಿಸುವ, ಸರ್ವರಲ್ಲಿರುವ ಎಂದರ್ಥ. 'ಪದ್ಮಶಂಖಾಂಬರಾದಿ ಚ'

'ಕಿರೀಟಕಟಕಾದ್ಯಾ ಯೇಽಪ್ಯಲಂಕಾರಾ ಮಮ ಶ್ರಿಯಃ' ಇತ್ಯಾದ್ಯಾಃ ಸ್ವತ್ವರೂಪಾಃ ಸ್ಯುಃ ನಿತ್ಯಾ ಅನಾದಯ ಏವ ತೇ । (ನಿತ್ಯಾನಿ) ಚಕ್ರಾದೀನ್ಯಾಯುಧಾನಿ ಚ, 'ರಜೋೀರಾಗೇಣ ತೇಷು ಸ್ಯಾತ್ ಕಾಲೇ ಕಾಲೇ ಪ್ರದೀಯತೇ । ಸ್ವಭಾವಾದ್ವಿವಿಧಾಕಾರಃ' ಮುಂತಾದ ವಿಷ್ಣುರಹಸ್ಯದಿಂದ ಆಯುಧಗಳು ಚೇತನಗಳು ಶುದ್ಧಸಾತ್ವಿಕಗಳೆಂದಾಗಲಿ 'ಭೂಷಣಾನಿ ದ್ವಿಧಾ ಭೂತ್ವಾ' ಎಂಬ ಆಚಾರ್ಯರ ಮಾತಿನಿಂದಲೂ ತಿಳಿಯುವದು. ಕೆಲವು ಸಾಂಪ್ರದಾಯಿಕರು ಭಗವಂತನ ಸ್ವರೂಪಭೂತ ಆಯುಧಗಳು ಬೇರೆ ಆಯುಧಗಳೂ ಇವೆ. ಈ ವಿಷಯದಲ್ಲಿ ಸಪ್ತಮಸ್ಕಂಧದಲ್ಲಿ 'ನಿಜೇತರಾಯುಧಪ್ರವೇಕವಿದ್ರಾವಿತದೈತ್ಯದಾನವಂ' ಮುಂತಾಗಿ ಹೇಳಿದೆ ಎನ್ನುತ್ತಾರೆ. ಇದರಿಂದ ಭೂಷಣಗಳು ಜಡಗಳಾದ್ದರಿಂದ ಫಲದಾನ ಅನುಪಪನ್ನ ಎಂಬ ಶಂಕೆ ನಿವಾರಿತವಾಯಿತು. ।।೩೩।।

ಶ್ರೀಹರಿಗೂ ಇತರ ಜನರಂತೆ ಜನನಾದಿಗಳಿದ್ದರೆ ಸ್ವಾಮಿತ್ವವು ಸಮಾನವೆಂದಾಗುವದಿಲ್ಲ ಅಲ್ಲದೇ ಸ್ಥಾನ ಆಖ್ಯಾನ (ಹೆಸರು) ಗಳಲ್ಲಿ ವೈಚಿತ್ರ್ಯ ಹೇಗೆ ಸಂಭಾವಿತ ಎಂಬ ಸಂಶಯವನ್ನು ನಿವಾರಿಸುತ್ತ ಕಂಬದಿಂದ ಸಂಭವಿಸಿದ ನರಸಿಂಹನನ್ನು 'ನೃಸಿಂಹಾದಿಕಮನ್ಯಚ್ಚ ದುರಿತಾದಿನಿವೃತ್ತಯೇ' ಎಂಬ ಪ್ರಮಾಣಾನುಸಾರ ಪ್ರಾರ್ಥನೀಯನಾದುದರಿಂದ ಇದಕ್ಕೆ ಅನುಗುಣವುಳ್ಳವನನ್ನಾಗಿ ಪೂಜನೀಯನೆಂದು ಹೇಳುವರು-

**ವಿದಿಕ್ಷು ದಿಕ್ಷೂರ್ಧ್ವಮಧಃ ಸಮಂತಾದಂತರ್ಬಹಿರ್ಭಗವಾನ್ನಾರಸಿಂಹಃ ।**
**ಪ್ರಹಾಪಯಂಲ್ಲೋಕಭಯಂ ಸ್ವನೇನ ಸ್ವತೇಜಸಾ ಗ್ರಸ್ತಸಮಸ್ತತೇಜಾಃ ।।**

**ಯಃ** ಯಾವ **ಭಗವಾನ್** ಭಗವಂತನು **ಸ್ವತೇಜಸಾ** ತನ್ನ ಕಾಂತಿಯಿಂದ **ಗ್ರಸ್ತ ಸಮಸ್ತತೇಜಾಃ** ಸೂರ್ಯ ಮೊದಲಾದವರೆಲ್ಲರ ತೇಜಸ್ಸನ್ನು ಅಭಿಭವ ಗೊಳಿಸಿದ (ಕಾಣದಂತೆ ಮಾಡಿದ) **ಭಗವಾನ್ ನಾರಸಿಂಹಃ** ಸಮಗ್ರ ಐಶ್ವರ್ಯಶಾಲಿಯಾದ ನರಸಿಂಹದೇವರು **ಲೋಕಭಯಂ** ಸಜ್ಜನರ ಭಯವನ್ನು, ಅವರಿಗೆ ಬಂದ ಭೂತಭೀತಿಯನ್ನು **ಸ್ವನೇನ** ತನ್ನ ಗರ್ಜನದಿಂದ **ಪ್ರಹಾಪಯನ್** ಪರಿಹರಿಸುವವನಾಗಿ **ದಿಕ್ಷು** ದಿಕ್ಕುಗಳಲ್ಲಿ **ವಿದಿಕ್ಷು** ಕೋಣಗಳಲ್ಲಿ, (ವಿದಿಕ್ಷು) **ಊರ್ಧ್ವಂ** ಮೇಲೆ **ಅಧಃ** ಕೆಳಗೆ **ಸಮಂತಾತ್** ಎಲ್ಲ ಕಡೆಗೆ **ಅಂತಃ** ಒಳಗೆ **ಬಹಿಃ** ಹೊರಗೆ **ನಃ** ನಮ್ಮನ್ನು **ಪಾತು** ರಕ್ಷಿಸಲಿ.

ಹಿಂದೆ 'ದುರ್ಗೇಷು' ಎಂಬ ಶ್ಲೋಕದಲ್ಲಿ ಪ್ರಾರ್ಥಿತನಾಗಿದ್ದರೂ ಮತ್ತೆ ಪ್ರಾರ್ಥಿಸಿರುವದು ಈ ರೂಪದಿಂದ ಎಲ್ಲ ಪಾಪಗಳನ್ನು ಪರಿಹರಿಸುವಲ್ಲಿ ಅತಿಶಯ ಸಾಮರ್ಥ್ಯ ತೋರಿಸಿರುವದರಿಂದ ಎಂದು ತಿಳಿಯಬೇಕು. ।।೩೪।।

**ಮಘವನ್ನಿದಮಾಖ್ಯಾತಂ ವರ್ಮ ನಾರಾಯಣಾತ್ಮಕಮ್ ।**
**ವಿಜೇಷ್ಯಸ್ಯಂಜಸಾ ಯೇನ ದಂಶಿತೋಽಸುರಯೂಥಪಾನ್ ।।೩೫।।**

**ಹೇ ಮಘವನ್** ಧನವಂತನೇ ಯಜ್ಞಾದಿಗಳುಳ್ಳವನೆಂದರ್ಥ ಕೀರ್ತಿಯುಳ್ಳವನೆ ಮಘಪತಿಯೇ ಇಂದ್ರನೇ **ಇದಂ** ಈ **ನಾರಾಯಣಾತ್ಮಕಂ** ನಾರಾಯಣ ಸ್ವರೂಪವಾದ **ವರ್ಮ** ಕವಚವು **ಆಖ್ಯಾತಂ** ಹೇಳಲ್ಪಟ್ಟಿತು. **ಯೇನ** ಯಾವ ಈ ಕವಚದಿಂದ **ದಂಶಿತಃ** ಸಂಬದ್ಧನಾದ, ಅಥವಾ **ಯೇನ** ಯಾವ ನಾರಾಯಣತ್ಮಕವಾದ **ದಂಶಿತಃ** ಕವಚದಿಂದ ಆವೃತನಾದ, 'ದಂಶಿತೋ ವರ್ಮಿತೇಽಪಿ ಚ' ಎಂದು ವಿಶ್ವ ಇದೆ. ನೀನು **ಅಂಜಸಾ** ಸಂಪೂರ್ಣವಾಗಿ **ಅಸುರಯೂಥಪಾನ್** ದೈತ್ಯರ ಸೇನಾನಾಯಕರನ್ನು **ವಿಜೇಷ್ಯಸಿ** ಗೆಲ್ಲುವಿ.

**ವಿಶಿಷ್ಟ ಅರ್ಥ**

'ತಂ ವಾ ಏತಂ ಮಖವಂತಂ ಸಂತಂ ಮಘವಾನಿತ್ಯಾಚಕ್ಷತೇ । ಪರೋಕ್ಷೇಣ ಪರೋಕ್ಷಪ್ರಿಯಾ ಇವ ಹಿ ದೇವಾಃ ಪ್ರತ್ಯಕ್ಷದ್ವಿಷಃ । ತೇಭಿರಿಂದ್ರ ಚೋದಯ ದಾತವೇ ಮಘಂ । ತನ್ನ ಆಯಾತು ಮಘಾಯ ಮಘಮನು ಪ್ರಾಯತ್ಸಿ ಆಮಾಮೇತು ಮಘಂ' ಮುಂತಾದ ಶ್ರುತಿಗಳಿಂದ ಪತೇ ಎಂಬುದು ಮತುಬರ್ಥ ಸಂಬಂಧದ ವಿವರಣವು. ತೃತೀಯಾ ಅತಿಶಯೇ ಎಂದಿರುವದರಿಂದ ಖ ಕಾರಕ್ಕೆ ಘ ಕಾರ ಎಂದು ಕರ್ಮನಿರ್ಣಯಟೀಕಾದಲ್ಲಿ ಹೇಳಿದೆ. ।।೩೫।।

**ಏತದ್ ಧಾರಯಮಾಣಸ್ತು ಯಂ ಯಂ ಪಶ್ಯತಿ ಚಕ್ಷುಷಾ ।**
**ಪದಾ ವಾ ಸಂಸ್ಪೃಶೇತ್ಸದ್ಯಃ ಸಾಧ್ವಸಾತ್ಸ ವಿಮುಚ್ಯತೇ ।।೩೬।।**

**ಏತತ್** ಈ ಕವಚವನ್ನು **ಧಾರಯಮಾಣಃ** ಧರಿಸಿರುವವನು, ವಿದ್ಯಾ ಸಿದ್ಧಿಯುಳ್ಳವನೆಂದರ್ಥ **ಯಂ ಯಂ** ಯಾರು ಯಾರನ್ನು **ಚಕ್ಷುಷಾ** ಕಣ್ಣಿನಿಂದ **ಪಶ್ಯತಿ** ನೋಡುವನೋ **ವಾ** ಅಥವಾ **ಪದಾ** ಕಾಲಿನಿಂದ **ಸಂಸ್ಪೃಶೇತ್** ಮುಟ್ಟುವನೋ **ಸಃ** ಅವನು **ಸಾಧ್ವಸಾತ್** ಭಯದಿಂದ **ಸದ್ಯಃ** ಕೂಡಲೇ **ವಿಮುಚ್ಯತೇ** ಮುಕ್ತನಾಗುತ್ತಾನೆ. ಇವನ ಕಣ್ಣಿಗೆ ಬಿದ್ದವನಿಗೆ ಇವನ ಸ್ಪರ್ಶವಾದವನಿಗೆ ಭಯವಿಲ್ಲವೆಂದ ಮೇಲೆ ಇವನಿಗೆ ಭಯವಿಲ್ಲವೆಂದೇನು ಹೇಳುವುದು. ಸಿದ್ಧವೆಂದು ಭಾವ. ।।೩೬।।

ಈ ಶ್ಲೋಕದಲ್ಲಿ ಹೇಳಿದ ಈ ವಿದ್ಯಾಧಾರಣೆಯ ಫಲವು ಬಹುಶಃ ಈ ವಿದ್ಯೆ ಧಾರಣ ಮಾಡಿದರೂ ಕಂಡು ಬರುವುದಿಲ್ಲ. ಆದ್ದರಿಂದ ಇದನ್ನು ನಂಬುವುದು ಹೇಗೆ ಎಂದರೆ ಅನ್ವಯ-ವ್ಯತಿರೇಕಗಳಿಂದ ಬೇರೊಂದು ನಿಮಿತ್ತದಿಂದ ಕೆಲವು ಸ್ಥಳದಲ್ಲಿ ಕಾರ್ಯಕಾರಣ ಭಾವಕ್ಕೆ ವ್ಯಭಿಚಾರ ಬಂದಿದೆ ಎಂದು ತಿಳಿಸುವ ಪ್ರಮಾಣದಿಂದಲೇ ಶಂಕಿಸುವವನನ್ನು ಮೂಕನಾಗಿಸುವರು.

ತಾತ್ಪರ್ಯ

ಗುರು ಶಿಷ್ಯಯೋರಯೋಗ್ಯತ್ವಾತ್ ಗುರುವೃತ್ತೇರಪೂರ್ತಿತಃ ।
ಅಪ್ರಸಾದಾದ್ಗುರೋರ್ವಿದ್ಯಾ ನ ತಥೋಕ್ತಫಲಪ್ರದಾ ॥ಇತಿ ಚ

ವಿದ್ಯಾಃ ಕರ್ಮಾಣಿ ಚ ಸದಾ ಗುರೋಃ ಪ್ರಾಪ್ತಾಃ ಫಲಪ್ರದಾಃ ।
ಅನ್ಯಥಾ ನೈವ ಫಲದಾಃ ಪ್ರಸನ್ನೋಕ್ತಾಃ ಫಲಪ್ರದಾಃ ॥ ಇತಿ ಚ ತಂತ್ರಸಾರೇ

**ಭಾವಾರ್ಥ**

ಗುರು-ಶಿಷ್ಯರಿಗೆ ಮಂತ್ರಸಿದ್ಧಿ ಮಾಡಿಕೊಳ್ಳುವ ಯೋಗ್ಯತೆ ಇಲ್ಲದಿರುವುದರಿಂದಲೂ, ಸ್ವಯಂ ಶಿಷ್ಯನಾದವನು ಗುರುಗಳ ಸೇವೆಯನ್ನು ಪೂರ್ಣವಾಗಿ ಮಾಡದಿರುವುದ-ರಿಂದಲೂ, ಗುರುಗಳು ಪ್ರಸನ್ನರಾಗದಿದ್ದುದರಿಂದಲೂ ವಿದ್ಯೆಯು ಯಥೋಕ್ತವಾದ ಫಲಜನಕವಾಗುವುದಿಲ್ಲ. ಹೊರತು ಮಂತ್ರಕ್ಕೆ ಸಾಮರ್ಥ್ಯವಿಲ್ಲವೆಂದಲ್ಲ.

ಅಯೋಗ್ಯತ್ವಾತ್ ವ್ಯಭಿಚಾರಾದಿ ಅನಾಚಾರದಿಂದ, ಗುರುವೃತ್ತೇಃ ಗುರೋಃ ವೃತ್ತೇಃ, ಗುರೌ ವೃತ್ತೇಃ, ಗುರೋಃ ಅಪ್ರಸಾದಾತ್ ಪ್ರಸನ್ನರಾಗದಿರುವುದರಿಂದ, ಪ್ರಸನ್ನ ಗೊಳಿಸದಿದ್ದುದರಿಂದ ಎಂದೂ ಅರ್ಥ.

ಗುರೋಃ ಯೋಗ್ಯನಾದ ಗುರುವಿನ ಎಂದರ್ಥ. ಗುರು-ಶಿಷ್ಯರಿಬ್ಬರಲ್ಲಿ ಯಾರೊಬ್ಬರು ಅಯೋಗ್ಯರಾಗಿದ್ದರೂ ಮಂತ್ರಗಳು ಯಥೋಕ್ತಫಲಜನಕ-ವಾಗುವುದಿಲ್ಲ. ಪ್ರಸನ್ನೋಕ್ತಾಃ ಪ್ರಸನ್ನೇನ ಪ್ರಸನ್ನಾಯ ಸಮಾಹಿತಮನಸ್ಕನಾದವನು ಸಮಾಹಿತಮನಸ್ಕನಾದವನನ್ನು ಕುರಿತು ಹೇಳಿದ ವಿದ್ಯೆಯು ಫಲಜನಕವಾಗುತ್ತದೆ ಎಂದು ಅಭಿಪ್ರಾಯ. 'ಪ್ರಸನ್ನಚೇತಸೋ ಹ್ಯಾಶು ಬುದ್ಧಿಃ ಪರ್ಯವತಿಷ್ಠತಿ' ಎಂದಿದೆ. ಕಾರಣ ಬ್ರಾಹ್ಮಣದಲ್ಲಿ ಹೀಗಿದೆ.

ನೈವಂ ವಿದುಷಾಯಾಂತೇವಾಸಿನಾವನ್ಯೋನ್ಯಸ್ಮೈ ದ್ರುಹ್ಯಾತಾಂ ಯೋ ದ್ರುಹ್ಯತಿ ಭ್ರಶ್ಯತೇ ಸ್ವರ್ಗಾಲ್ಲೋಕಾದಿತಿ ॥೩೬॥

**ನ ಕುತಶ್ಚಿದ್ಭಯಂ ತಸ್ಯ ವಿದ್ಯಾಂ ಧಾರಯತೋ ಭವೇತ್ ।**
**ರಾಜದಸ್ಯುಗ್ರಹಾದಿಭ್ಯೋ ವ್ಯಾಧ್ಯಾದಿಭ್ಯಶ್ಚ ಕರ್ಹಿಚಿತ್ ॥೩೭॥**

**ವಿದ್ಯಾಂ** ನಾರಾಯಣ ಕವಚವನ್ನು **ಧಾರಯತಃ** ಅಭ್ಯಾಸಮಾಡಿದವನಿಗೆ **ರಾಜದಸ್ಯುಗ್ರಹಾದಿಭ್ಯಃ** ರಾಜರಿಂದ, ಕಳ್ಳರಿಂದ, ಪಿಶಾಚಾದಿಗಳಿಂದಾಗಲಿ **ವ್ಯಾಧ್ಯಾದಿಭ್ಯಃ** ರೋಗಾದಿಗಳಿಂದಲೂ **ಕುತಶ್ಚಿತ್** ಇವಾವುದರಿಂದಲೂ, ಅಥವಾ ಬೇರೆ ಯಾವ ಊಹಿಸಿದವುಗಳಿಂದಲೂ **ಕರ್ಹಿಚಿತ್** ಎಂದಿಗೂ **ಭಯಂ ನ ಭವೇತ್** ಭಯವಾಗಲಾರದು.

ಈ ವಿದ್ಯೆಯನ್ನು ಹೇಗಾದರೂ ಮಾಡಿ ಸಂಪಾದಿಸಲೇಬೇಕು ಎಂದು ಬುದ್ಧಿಯನ್ನು ಹುಟ್ಟಿಸಲು ಒಂದು ಕಥೆ ಹೇಳುವರು.

**ಇಮಾಂ ವಿದ್ಯಾಂ ಪುರಾ ಕಶ್ಚಿತ್ ಕೌಶಿಕೋ ಧಾರಯನ್ ದ್ವಿಜಃ ।**
**ಯೋಗಧಾರಣಯಾ ಸ್ವಾಂಗಂ ಜಹೌ ಸ ಮರುಧನ್ವನಿ ॥೩೮॥**

**ಪುರಾ** ಹಿಂದೆ **ಇಮಾಂ ವಿದ್ಯಾಂ** ನಾರಾಯಣಕವಚವನ್ನು **ಧಾರಯನ್** ಧರಿಸಿದ **ಕಶ್ಚಿತ್** ಒಬ್ಬ **ಕೌಶಿಕಃ** ಕುಶಿಕಗೋತ್ರದಲ್ಲಿ ಜನಿಸಿದ **ದ್ವಿಜಃ** ಬ್ರಾಹ್ಮಣನು ಇದನ್ನು **ಸಃ** ಅವನು **ಮರುಧನ್ವನಿ** ನೀರಿಲ್ಲದ ಗುಡ್ಡಗಾಡು ಪ್ರದೇಶದಲ್ಲಿ **ಯೋಗಧಾರಣಯಾ** ಯೋಗಾಭ್ಯಾಸದಿಂದ **ಸ್ವಾಂಗಂ** ತನ್ನ ದೇಹವನ್ನು **ಜಹೌ** ಬಿಟ್ಟನು. 'ಸಮಾನೌ ಮರುಧನ್ವಾನೌ' ಎಂಬ ಅಮರವ್ಯಾಖ್ಯಾನದಲ್ಲಿ ಮ್ರಿಯಂತೇ ಭೂತಾನೀತಿ, ಬೃ ಮೃ ಶೀತ್ಯುಃ । ಧವಿರ್ಗತ್ಯರ್ಥಃ । ಯುವೃಷೀತಿ ಕನಿನ್ । ಎಂದು ವ್ಯಾಖ್ಯಾನಿಸಿ, 'ಮರುರ್ನಾ ಗಿರಿಧನ್ವನೋಃ । ಧನ್ವಾ ತು ಮರುದೇಶೇ ನಾ ಕ್ಲೀಬೇ ಚಾಽಪಿ ಸ್ಥಲೇಽಪಿ ಚ' ಎಂದು ಅಭಿಧಾನವಿರುವದರಿಂದ ನಿರ್ಜಲಾಚಲಪ್ರದೇಶೋ ವಾ ತಾದೃಶಸ್ಥಲಂ ವಾ ಎಂದು ತಿಳಿಯಬೇಕು. ಇದರಿಂದ ಈ ಮಂತ್ರವೆಂಬ (ತನುತ್ರ) ಕವಚ ಉಳ್ಳವನಿಗೆ ಕ್ಷೇತ್ರವೇ ಬೇಕೆಂದಿಲ್ಲ ಮಂತ್ರಕ್ಕೆನೇ ತನ್ನನ್ನು ಧರಿಸಿದವರ ದ್ವಾರಾ ಪವಿತ್ರಗೊಳಿಸುವ ಸ್ವರಸಸುಂದರತೆ ತಿಳಿದು ಬರುವದು. ಯೋಗಾರೂಢನಾದವನಿಗೆ ನೀರು ಬೇಕಿಲ್ಲವೆಂದು ಭಾವ. ಅಥವಾ ಮೊದಲು ಆ ಪ್ರದೇಶ ನಿರ್ಜಲವಾಗಿತ್ತು. ಮುನಿವಾಸಾನಂತರ ನೀರು ತುಂಬಿತ್ತು ಎಂದು ತಾತ್ಪರ್ಯ ತಿಳಿಯಬಹುದು. ಇಲ್ಲವಾದರೆ ಮಂತ್ರ ಮಾಹಾತ್ಮ್ಯವರ್ಣನ ಸುಳ್ಳಾದೀತು. ಮುಂದೆ ಅಸ್ಥಿಗಳು ಹಾಗೆ ಇದ್ದವೆಂದು ಹೇಳುವುದರಿಂದ ನೀರು ಇರಲೇ ಇಲ್ಲ ಎಂದು ಹೇಳುವುದೇ ಯುಕ್ತ

ಎನ್ನುವುದು ಸರಿಯಲ್ಲ. ಇವನು ಒಬ್ಬನೇ ಇರುವುದರಿಂದಲೂ ನೀರಲ್ಲಿ ಹಾಕಲು ನೋಡುವವರಿಲ್ಲದ್ದರಿಂದಲೂ ಮಹಾನದಿ ತೀರವಲ್ಲದ್ದರಿಂದಲೂ ಅಸ್ಥಿಯ ಅಸ್ತಿತ್ವಕ್ಕೆ ಸ್ಪಷ್ಟಿ ಹೇಳಬೇಕಿಲ್ಲವೆಂದು ಭಾವ. ।।೩೮।।

**ತಸ್ಯೋಪರಿ ವಿಮಾನೇನ ಗಂಧರ್ವಪತಿರೇಕದಾ ।**
**ಯಯೌ ಚಿತ್ರರಥಃ ಸ್ತ್ರೀಭಿರ್ವೃತೋ ಯತ್ರ ದ್ವಿಜಕ್ಷಯಃ ।।೩೯।।**

**ಏಕದಾ** ಒಂದು ಸಲ **ಸ್ತ್ರೀಭಿಃ ವೃತಃ** ಹೆಂಡತಿಯರಿಂದ ಕೂಡಿದ **ಗಂಧರ್ವಪತಿಃ** ಗಂಧರ್ವರಾಜನಾದ **ಚಿತ್ರರಥಃ** ಚಿತ್ರರಥನು **ಯತ್ರ** ಯಾವ ಸ್ಥಳದಲ್ಲಿ **ದ್ವಿಜಕ್ಷಯಃ** ಬ್ರಾಹ್ಮಣ ಮರಣವಾಗಿತ್ತೋ **ತತ್ರ** ಅಲ್ಲಿ **ಉಪರಿ** ಮೇಲೆ ಅಥವಾ **ತಸ್ಯೋಪರಿ** ಆ ಸ್ಥಳದ ಮೇಲೆ **ವಿಮಾನೇನ** ವಿಮಾನದಿಂದ **ಯಯೌ** ಹಾದು ಹೋದನು. ।।೩೯।।

**ಸಾಂಗನೋ ನ್ಯಪತತ್ಸದ್ಯಃ ಸವಿಮಾನೋ ಹ್ಯವಾಕ್ಶಿರಾಃ ।**
**ವಿದ್ಯಾಮಿಮಾಂ ಧಾರಯತೋ ಮೃತಸ್ಯಾಸ್ಥಿವಿಲಂಘನಾತ್ ।।೪೦।।**

**ಸದ್ಯಃ** ಆಗಲೇ **ಸಾಂಗನಃ** ಸ್ತ್ರಿಯರಿಂದ ಕೂಡಿಕೊಂಡು **ಅವಾಕ್‌ಶಿರಃ** ತಲೆಕೆಳಗಾಗಿ **ಸವಿಮಾನಃ** ವಿಮಾನಸಹಿತವಾಗಿ **ನ್ಯಪತತ್** ಬಿದ್ದನು ನಮಸ್ಕಾರ ಮಾಡದೇ ಹೋದುದುರಿಂದ ಈ ರೀತಿ ಬೀಳುವುದು ನ್ಯಾಯ ಪ್ರಾಪ್ತವೇ. ಉತ್ತರಾರ್ಧ ಪ್ರಕ್ಷಿಪ್ತವೆಂದು ಪ್ರೇಕ್ಷಾವಂತರು ಹೇಳುವರು. **ಯತ್ರ ದ್ವಿಜಕ್ಷಯಃ** ತಸ್ಯ ಉಪರಿ ಎಂದು ಹೇಳಿದ ಮೇಲೆ ಮತ್ತೆ ಈ ರೀತಿ ಹೇಳಬೇಕಿಲ್ಲ. ಕಾರಣ ಅದನ್ನು ವ್ಯಾಖ್ಯಾನಿಸಿಲ್ಲವೆನ್ನುತ್ತಾರೆ ಶ್ರೀಗಳು. **ಮೃತಸ್ಯ** ಸತ್ತು ಹೋದ ಆ ಬ್ರಾಹ್ಮಣನ **ಅಸ್ಥಿ ವಿಲಂಘನಾತ್** ಎಲುಬುಗಳನ್ನು ದಾಟಿದ ಕಾರಣ ಎಂದರ್ಥ.) ।।೪೦।।

**ಸ ವಾಲಖಿಲ್ಯವಚನಾದಸ್ಥೀನ್ಯಾದಾಯ ವಿಸ್ಮಿತಃ ।**
**ಪ್ರಾಸ್ಯ ಪ್ರಾಚೀಸರಸ್ವತ್ಯಾಂ ಸ್ನಾತ್ವಾ ಧಾಮ ಸ್ವಮನ್ವಗಾತ್ ।।೪೧।।**

**ವಿಸ್ಮಿತಃ** ಹೀಗೆ ಏಕಾಯಿತೆಂದು ಆಶ್ಚರ್ಯ ಪಟ್ಟ **ಸಃ** ಆ ಚಿತ್ರರಥನು **ವಾಲಖಿಲ್ಯವಚನಾತ್** ವಾಲಖಿಲ್ಯರ ಮಾತಿನಂತೆ **ಅಸ್ಥೀನಿ** ಎಲುಬುಗಳನ್ನು **ಆದಾಯ** ತೆಗೆದುಕೊಂಡು **ಪ್ರಾಚೀಸರಸ್ವತ್ಯಾಂ** ಪೂರ್ವಕ್ಕೆ ಹರಿಯುವ ಸರಸ್ವತೀ ನದಿಯಲ್ಲಿ **ಪ್ರಾಸ್ಯ** ಹಾಕಿ **ಸ್ನಾತ್ವಾ** ಸ್ನಾನಮಾಡಿ **ಸ್ವಂ ಧಾಮ** ತನ್ನ ಮನೆಗೆ **ಅನ್ವಗಾತ್** ಹೋದನು.

ಅಥವಾ ಈ ಅಪರಾಧದಿಂದ ನಷ್ಟವಾದ ತೇಜಸ್ಸನ್ನು ಮತ್ತೆ ಹೊಂದಿದನು. 'ತೇಜಃ ಸ್ವರೂಪಂ ಚ ಗೃಹಂ ಪ್ರಾಜ್ಞೈರ್ಧಾಮೇತಿ ಗೀಯತೇ' ಎಂದಿದೆ. ಅಧಿಕ ಪಾವಿತ್ರ್ಯ ಬಂತೆಂದು ಅರ್ಥ.

**ವಾಲಖಿಲ್ಯವಚನಾತ್** ತನಗೆ ಯಾಕೆ ತೇಜಸ್ಸು ನಷ್ಟವಾಯಿತು ಎಂದು ಚಿತ್ರರಥ ವಾಲಖಿಲ್ಯರಿಗೆ ಪ್ರಶ್ನೆಮಾಡಿದ. ಕೌಶಿಕಬ್ರಾಹ್ಮಣನ ಅಸ್ಥಿಗಳನ್ನು ಲಂಘನ ಮಾಡಿದ್ದರಿಂದ ನಿನಗೆ ಈ ರೀತಿಯಾದ ದುರವಸ್ಥೆಯು ಪ್ರಾಪ್ತವಾಗಿದೆ. ಆ ಅಸ್ಥಿಗಳನ್ನು ಸುಸ್ಥಾನದಲ್ಲಿ ಹಾಕಿದರೆ ನಿನ್ನ ದುರವಸ್ಥೆ ದೂರವಾಗುವದು ಎಂದು ವಾಲಖಿಲ್ಯರು ಉತ್ತರ ನೀಡಿದರು. ವಾಲಖಿಲ್ಯವಚನಾತ್ ಎಂಬುದರಿಂದ ಈ ವೃತ್ತಾಂತವು ಸೂಚಿತವಾಗುವುದು. ।।೪೦।।

**ಯ ಇದಂ ಶೃಣುಯಾತ್ಕಾಲೇ ಯೋ ಧಾರಯತಿ ಚಾದೃತಃ ।**
**ತಂ ನಮಸ್ಯಂತಿ ಭೂತಾನಿ ಮುಚ್ಯತೇ ಸರ್ವತೋ ಭಯಾತ್ ।।೪೨।।**

**ಯಃ** ಯಾವನು **ಇದಂ** ಇದನ್ನು **ಕಾಲೇ** ವಿಹಿತವಾದ ಕಾಲದಲ್ಲಿ **ಶೃಣುಯಾತ್** ಕೇಳುವನೋ **ಯಃ ಚ** ಯಾವನಾದರೂ **ಆದೃತಃ** ಭಕ್ತಿಭರಿತನಾಗಿ **ಧಾರಯತಿ** ಈ ವಿದ್ಯೆಯನ್ನು ಸಿದ್ಧಿ ಮಾಡಿಕೊಂಡಿರುವನೋ **ತಂ** ಅವನನ್ನು **ಭೂತಾನಿ** ಎಲ್ಲ ಪ್ರಾಣಿಗಳು **ನಮಸ್ಯಂತಿ** ನಮಸ್ಕರಿಸುವವು. ಅವನು **ಸರ್ವತೋ ಭಯಾತ್** ಎಲ್ಲ ಭಯಗಳಿಂದ **ಮುಚ್ಯತೇ** ಮುಕ್ತನಾಗುವನು. ಸಂಸಾರದಿಂದಲೂ ಮುಕ್ತನಾಗುವನು. ।।೪೨।।

**ಏತಾಂ ವಿದ್ಯಾಮಧಿಗತೋ ವಿಶ್ವರೂಪಾಚ್ಛತಕ್ರತುಃ ।**
**ತ್ರೈಲೋಕ್ಯಲಕ್ಷ್ಮೀಂ ಬುಭುಜೇ ವಿನಿರ್ಜಿತ್ಯ ಮೃಧೇಽಸುರಾನ್ ।।೪೩।।**

।। ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಷಷ್ಠಸ್ಕಂಧೇ ಅಷ್ಟಮೋಽಧ್ಯಾಯಃ ।।

**ವಿಶ್ವರೂಪಾತ್** ಪ್ರಸನ್ನರಾದ ವಿಶ್ವರೂಪಾಚಾರ್ಯರಿಂದ **ಏತಾಂ ವಿದ್ಯಾಂ** ಈ ನಾರಾಯಣ ಕವಚವನ್ನು **ಅಧಿಗತಃ** ಉಪದೇಶದಿಂದ ಪಡೆದವನಾಗಿ **ಶತಕ್ರತುಃ** ಇಂದ್ರನು **ಮೃಧೇ** ಯುದ್ಧದಲ್ಲಿ **ಅಸುರಾನ್** ದೈತ್ಯರನ್ನು **ವಿನಿರ್ಜಿತ್ಯ** ಸಂಪೂರ್ಣವಾಗಿ ಗೆದ್ದು **ತ್ರೈಲೋಕ್ಯಲಕ್ಷ್ಮೀಂ ಬುಭುಜೇ** ಮೂರು ಲೋಕದ ಆಧಿಪತ್ಯವನ್ನು ಅನುಭವಿಸಿದನು.

ಇಲ್ಲಿಗೆ ಎಂಟನೇ ಅಧ್ಯಾಯವು ಮುಗಿಯಿತು.

## ಅಥ ಶ್ರೀಮದ್ಭಾಗವತೇ - ಷಷ್ಠಸ್ಕಂಧೇ

## ನವಮೋಽಧ್ಯಾಯಃ

**ಅಧ್ಯಾಯ ಸಾರ**

ವಿಶ್ವರೂಪಾಚಾರ್ಯರಿಗೆ ಮೂರು ಮುಖಗಳಿದ್ದವು. ಒಂದು ಮುಖದಿಂದ ಸೋಮಪಾನಮಾಡುತ್ತಿದ್ದರು. ಮತ್ತೊಂದು ಮುಖದಿಂದ ಸುರಾಪಾನ ಮಾಡುತ್ತಿದ್ದರು. ಮಗದೊಂದು ಮುಖದಿಂದ ಅನ್ನವನ್ನು ತಿನ್ನುತ್ತಿದ್ದರು.

ತಾವು ಯಜ್ಞವನ್ನು ಮಾಡುವಾಗ ಪ್ರತ್ಯಕ್ಷವಾಗಿ ದೇವತೆಗಳಿಗೆ ಹವಿಸ್ಸನ್ನು ನೀಡುತ್ತಿದ್ದರು. ತಾಯಿಯ ಮೇಲಿನ ಸ್ನೇಹದಿಂದ ಪರೋಕ್ಷವಾಗಿ ದೈತ್ಯರಿಗೂ ಹವಿರ್ಭಾಗವನ್ನು ನೀಡುತ್ತಿದ್ದರು. ದೇವತೋದ್ದೇಶವಾಗಿ ಆಹುತಿಯನ್ನು ಸಮರ್ಪಿಸುವುದೇ ಯಾಗ. ಇಂತಹ ಯಾಗದಲ್ಲಿ ದೈತ್ಯರಿಗೆ ಆಹುತಿಯನ್ನು ಸಮರ್ಪಿಸುವುದು ದೇವತೆಗಳ ಅವಮಾನವೇ ಆಗಿದೆ.

ಈ ಅವಮಾನವನ್ನು ದೇವತೆಗಳು ಸಹಿಸಲಿಲ್ಲ. ಇಂದ್ರ ಕ್ರುದ್ಧನಾದ. ವಿಶ್ವರೂಪಾಚಾರ್ಯರ ತಲೆಗಳನ್ನು ಕತ್ತರಿಸಿದ. ಆವಾಗ ಸೋಮವನ್ನು ಕುಡಿಯುವ ತಲೆಯು ಕಪಿಂಜಲವೆಂಬ ಹಕ್ಕಿಯಾಯಿತು. ಸುರಾಪಾನ ಮಾಡುವ ಶಿರಸ್ಸು ಕಲವಿಂಕವೆಂಬ ಪಕ್ಷಿಯಾಯಿತು. ಅನ್ನವನ್ನು ತಿನ್ನುವ ತಲೆಯು ತಿತ್ತಿರಿಪಕ್ಷಿಯಾಯಿತು.

ಇಂದ್ರ ಅಪರೋಕ್ಷಜ್ಞಾನಿ. ಈ ಬ್ರಹ್ಮಹತ್ಯೆಯಿಂದ ಇಂದ್ರನಿಗೆ ಏನೂ ಆಗುವುದಿಲ್ಲ. ಈ ಪಾಪವನ್ನು ಪರಿಹರಿಸಿಕೊಳ್ಳಲು ಸಮರ್ಥ ಇಂದ್ರ. ಆದರೂ ಲೋಕಾಪವಾದವು ತನಗೆ ಬರಬಾರದೆಂದು ಯೋಚಿಸಿದ. ಬ್ರಹ್ಮಹತ್ಯೆಯನ್ನು ಸ್ವೀಕರಿಸಿದ. ಒಂದು ವರ್ಷ

ಕಳೆಯಿತು. ಬ್ರಹ್ಮಹತ್ಯಾ ಪಾಪವನ್ನು ಕಳೆದುಕೊಳ್ಳುವುದಕ್ಕಾಗಿ ಆ ಪಾಪವನ್ನು ನಾಲ್ಕು ಭಾಗ ಮಾಡಿದ. ಭೂಮಿ-ಜಲ-ವೃಕ್ಷ-ಸ್ತ್ರೀಯರಿಗೆ ಈ ಪಾಪಗಳನ್ನು ಹಂಚಿದ.

ಅಗಿದಾಗ ತನ್ನಷ್ಟಕ್ಕೆ ತಾನೇ ಪೂರ್ಣವಾಗಬೇಕೆಂಬ ವರವನ್ನು ಪಡೆಯುವ ಮೂಲಕ ಬ್ರಹ್ಮಹತ್ಯೆಯ ಒಂದು ಭಾಗವನ್ನು ಭೂಮಿಯು ಸ್ವೀಕರಿಸಿತು. ಉಪ್ಪಿನಿಂದ ತುಂಬಿದ ಪ್ರದೇಶದ ರೂಪದಲ್ಲಿ ಈ ಬ್ರಹ್ಮಹತ್ಯೆಯು ಭೂಮಿಯಲ್ಲಿ ಕಾಣುತ್ತದೆ. ಈ ಪ್ರದೇಶವು ಅಧ್ಯಯನಾದಿಗಳಿಗೆ ನಿಷಿದ್ಧವಾಗಿದೆ.

ಛಿನ್ನವಾದರೂ ಮತ್ತೆ ಬೆಳೆಯಬೇಕೆಂಬ ವರವನ್ನು ಪಡೆದು ಎರಡನೆಯ ಭಾಗವನ್ನು ವೃಕ್ಷಗಳು ಸ್ವೀಕರಿಸಿದವು. ಅಂಟಿನ ರೂಪದಲ್ಲಿ ಆ ಬ್ರಹ್ಮಹತ್ಯೆಯು ವೃಕ್ಷಗಳಲ್ಲಿ ಕಾಣಿಸಿಕೊಳ್ಳುತ್ತದೆ. ಆದ್ದರಿಂದ ಈ ಅಂಟು ತಿನ್ನಲು ನಿಷಿದ್ಧವಾಗಿದೆ.

ನಿರಂತರ ವಿಷಯಗಳನ್ನು ಸೇವಿಸುವ ಅಭಿಲಾಷೆ ತಮಗಿರಬೇಕು, ರಜೋದರ್ಶನವಿಲ್ಲದಿರುವಾಗಲೂ ಸಂಭೋಗಮಾಡಲು ಸಮರ್ಥರಾಗಬೇಕು ಎಂಬ ವರವನ್ನು ಪಡೆದು ಸ್ತ್ರೀಯರು ಬ್ರಹ್ಮಹತ್ಯೆಯ ಒಂದು ಭಾಗವನ್ನು ಸ್ವೀಕರಿಸಿದರು. ಆ ಸ್ತ್ರೀಯರಲ್ಲಿ ಪ್ರತಿತಿಂಗಳೂ ರಜೋರೂಪದಿಂದ ಈ ಬ್ರಹ್ಮಹತ್ಯೆಯು ಕಾಣಿಸಿಕೊಳ್ಳುತ್ತದೆ. ಆದ್ದರಿಂದ ಆ ಕಾಲವು ಸಂಭೋಗಕ್ಕೆ ನಿಷಿದ್ಧವಾಗಿದೆ.

ಪಂಚಭೂತಗಳಲ್ಲಿ ತನ್ನ ಭಾಗವೇ ಅಧಿಕವಾಗಿರಬೇಕೆಂಬ ವರವನ್ನು ಪಡೆದು ಜಲವು ಬ್ರಹ್ಮಹತ್ಯೆಯ ಒಂದಂಶವನ್ನು ಸ್ವೀಕರಿಸಿದವು. ಆ ಜಲದಲ್ಲಿ ಗುಳ್ಳೆ ಮತ್ತು ನೊರೆಯ ರೂಪದಲ್ಲಿ ಬ್ರಹ್ಮಹತ್ಯೆಯು ಕಾಣಿಸಿಕೊಳ್ಳುತ್ತದೆ. ಹೀಗಾಗಿ ಫೇನಯುಕ್ತವಾದ ಜಲ ಆಚಮನಾದಿಗಳಿಗೆ ಅಯೋಗ್ಯವಾಗಿದೆ.

ಮಗನಾದ ವಿಶ್ವರೂಪನನ್ನು ಕಳೆದುಕೊಂಡ ತ್ವಷ್ಟಾ ಕ್ರುದ್ಧನಾದ. ಇಂದ್ರನನ್ನು ಸಂಹರಿಸುವ ಮಗನಾಗಬೇಕೆಂದು ಯಾಗ ಮಾಡಿದ. ಆದರೆ ಆ ಯಾಗದಲ್ಲಿ ಸ್ವರವ್ಯತ್ಯಾಸವಾಯಿತು. ಆ ಅಪರಾಧದಿಂದ ಇಂದ್ರನಿಂದ ಸಂಹೃತನಾಗುವ ವೃತ್ರಾಸುರನ ಜನ್ಮವಾಯಿತು. ಲೋಕಕ್ಷಯಕಾರಕನಾದ ವೃತ್ರಾಸುರ ಆ ಯಜ್ಞಕುಂಡದಿಂದ ಉತ್ಪನ್ನನಾದ.

ಪ್ರತಿನಿತ್ಯವೂ ಕಲ್ಪಿಸಿಕೊಳ್ಳಲೂ ಆಗದಷ್ಟು ಎತ್ತರ ಮತ್ತು ಅಗಲ ಆ ವೃತ್ರಾಸುರನು ಬೆಳೆಯುತ್ತಿದ್ದನು. ತನ್ನ ತ್ರಿಶೂಲದಲ್ಲಿ ಭೂಮ್ಯಾಕಾಶಗಳನ್ನು ಚುಚ್ಚಿಕೊಂಡು ನರ್ತನ




ಮಾಡುತ್ತಿದ್ದನು. ಅತಿಘೋರವಾದ ಆ ರೂಪವನ್ನು ಕಂಡು ಜನರೆಲ್ಲ ದಶದಿಕ್ಕುಗಳಿಗೆ ಓಡಿ ಹೋದರು.

ಅವನಿಂದ ಎಲ್ಲ ಲೋಕಗಳು ಆವೃತವಾದವು. ಆದ್ದರಿಂದ ಎಲ್ಲರೂ ಅವನನ್ನು ವೃತ್ರ ಎಂದು ಹೆಸರಿಸಿದರು. ಎಲ್ಲ ದೇವತೆಗಳೂ ತಮ್ಮ ತಮ್ಮ ಅಸ್ತ್ರಗಳಿಂದ ಆ ವೃತ್ರನನ್ನು ಸಂಹರಿಸಲು ಪ್ರಯತ್ನ ಮಾಡಿದರು. ಆ ಎಲ್ಲ ಅಸ್ತ್ರಗಳನ್ನೂ ವೃತ್ರಾಸುರ ನೀರಿನಂತೆ ನುಂಗಿಹಾಕಿದ. ವೃತ್ರನ ಈ ಪರಾಕ್ರಮವನ್ನು ಕಂಡು ದೇವತೆಗಳು ಆಶ್ಚರ್ಯಚಕಿತರಾದರು. ಖಿನ್ನರೂ ಆದರು. ಆದಿಪುರುಷನಾದ ಶ್ರೀಹರಿಯನ್ನು ಭಕ್ತಿಯಿಂದ ತುತಿಸಿದರು. ಪ್ರಾರ್ಥಿಸಿದರು.

ಹೇ ಭಗವನ್ ! ಈ ವೃತ್ರಾಸುರ ನಮ್ಮೆಲ್ಲ ಆಯುಧಗಳನ್ನು, ಅಸ್ತ್ರಗಳನ್ನು ನಾಶಪಡಿಸಿದ್ದಾನೆ. ಇವನನ್ನು ನೀನೇ ಸಂಹರಿಸಬೇಕು. ಶರಣಾಗತರಾದ ನಮ್ಮನ್ನು ಪರಿರಕ್ಷಿಸಬೇಕು.

ದೇವತೆಗಳಿಂದ ಸ್ತುತನಾದ ಪರಮಾತ್ಮ ಹೇಳಿದ. ನೀವು ಮಾಡಿದ ಸ್ತೋತ್ರದಿಂದ ನಾನು ಸಂತುಷ್ಟನಾಗಿದ್ದೇನೆ. ನಾನು ಸಂತುಷ್ಟನಾದರೆ ದುರ್ಲಭವಾದದ್ದು ಈ ಪ್ರಕೃತಿಯಲ್ಲಿಯೇ ಇಲ್ಲ. ಹೇ ಇಂದ್ರ ! ನಿನಗೆ ಮಂಗಳವಾಗಲಿ. ನೀನು ದೇವತೆಗಳಿಂದ ಸಹಿತನಾಗಿ ದಧೀಚಿ ಋಷಿಗಳ ಹತ್ತಿರ ಹೋಗು. ವಿದ್ಯಾ-ವ್ರತ-ತಪಸ್ಸುಗಳಿಂದ ಅವರ ದೇಹ ಪರಮಪವಿತ್ರವಾಗಿದೆ. ಅತ್ಯಂತ ದೃಢವಾಗಿದೆ. ಆ ಶರೀರವನ್ನು ಯಾಚಿಸು.

ದಧೀಚಿಋಷಿಗಳ ಇತಿಹಾಸವನ್ನು ನಾನು ನಿನಗೆ ಹೇಳುತ್ತೇನೆ. ಕೇಳು.

ವೈದ್ಯರೆಂಬ ಕಾರಣಕ್ಕೆ ಅಶ್ವಿನೀದೇವತೆಗಳನ್ನು ದೇವತೆಗಳು ದೂರವಿಟ್ಟಿದ್ದರು. ಅವರು ದಧೀಚಿಗಳ ಹತ್ತಿರ ವಿದ್ಯಾಭ್ಯಾಸಕ್ಕೆ ಹೋದರು. ಅಶ್ವಿನೀದೇವತೆಗಳಿಗೆ ಬ್ರಹ್ಮವಿದ್ಯೆಯನ್ನು ಪ್ರವರ್ಗ್ಯಕರ್ಮವನ್ನೂ ಉಪದೇಶಿಸಿದರು. ಅಶ್ವದ ತಲೆಯನ್ನು ಧರಿಸಿ ಉಪದೇಶಿಸಿದ್ದರಿಂದ ಆ ವಿದ್ಯೆ ಅಶ್ವಶಿರ ಎಂಬ ಹೆಸರಿನಿಂದ ಪ್ರಸಿದ್ಧವಾಯಿತು. ಈ ವಿದ್ಯೆಯನ್ನು ಅಭ್ಯಾಸಮಾಡಿದ ಅಶ್ವಿನೀದೇವತೆಗಳು ದೇವತೆಗಳಂತೆ ಅಮರರಾದರು.

ಆಥರ್ವಣರಾದ ದಧೀಚಿಗಳು ಅಂಗೋಪಾಂಗಸಹಿತವಾದ ಈ ನಾರಾಯಣಕವಚವನ್ನು ಅಧ್ಯಯನಮಾಡಿ ತ್ವಷ್ಟನಿಗೆ ಉಪದೇಶಮಾಡಿದರು. ತ್ವಷ್ಟ

ವಿಶ್ವರೂಪನಿಗೆ ಉಪದೇಶಿಸಿದ. ಆ ವಿದ್ಯೆಯನ್ನೇ ನೀನು ವಿಶ್ವರೂಪನಿಂದ ಪಡೆದಿರುವೆ. ಈ ಕವಚವು ನನ್ನ ಸ್ವರೂಪವಾಗಿದೆ. ಆದ್ದರಿಂದ ಅಭೇದ್ಯವಾಗಿದೆ. ಈ ವಿದ್ಯೆಯ ಸಾರವಾಗಿದೆ ದಧೀಚಿಗಳ ಶರೀರ. ಆದ್ದರಿಂದ ಆ ದೇಹವನ್ನು ಯಾಚನೆ ಮಾಡು. ನೀನು ಯಾಚಿಸಿದಾಗ ದಧೀಚಿಗಳು ದೇಹವನ್ನು ನಿಮಗೆ ನೀಡುತ್ತಾರೆ. ನಿರಾಕರಿಸುವುದಿಲ್ಲ. ಆ ದಧೀಚಿಗಳ ಶರೀರದಿಂದ ವಿಶ್ವಕರ್ಮನು ಶ್ರೇಷ್ಠವಾದ ಆಯುಧವನ್ನು ನಿರ್ಮಿಸುತ್ತಾನೆ. ಆ ಆಯುಧದಿಂದ ನೀನು ವೃತ್ರಾಸುರನನ್ನು ಸಂಹರಿಸು. ವೃತ್ರನ ಸಂಹಾರವಾದಾಗ ಅವನು ನುಂಗಿಹಾಕಿದ ನಿಮ್ಮೆಲ್ಲರ ಅಸ್ತ್ರಗಳು ಮತ್ತೆ ನಿಮಗೆ ಸಿಗುತ್ತವೆ. ಯಾವುದೇ ವಿಚಾರ ಮಾಡದೇ ನಾನು ಹೇಳಿದ ಮಾತನ್ನು ಕೇಳಿರಿ. ನನ್ನ ಭಕ್ತರನ್ನು ಪೀಡಿಸಲು ಯಾರೂ ಸಮರ್ಥರಲ್ಲ. ಈ ವಿಷಯವನ್ನು ಎಚ್ಚರದಲ್ಲಿಟ್ಟುಕೊಳ್ಳಿ ಎಂದು ಹೇಳಿದ. ಪರಮಾತ್ಮ ಅದೃಶ್ಯನಾದ.

★★★★★

ಬ್ರಹ್ಮಾದಿ ದೇವತೆಗಳಿಂದ ಅಪರಿಹಾರ್ಯವಾದ ಆಪತ್ಪರಿಹಾರಕತ್ವ ಮಹಿಮೆಯನ್ನು ಮೂರು ಹೊತ್ತು ಪ್ರತಿನಿತ್ಯ ಕೇಳಿ ಅಭಿವೃದ್ಧವಾದ ಅಸದೃಶ ಭಕ್ತಿಯಿಂದ ಕೂಡಿದವನಿಗೆ ಆ ಭಕ್ತಿ ಎಂಬ ಕೊಡಲಿಯು ಮುಮುಕ್ಷುವಿನ ಕೈಯಲ್ಲಿರುವದು ಸಂಸಾರವೆಂಬ ವೃಕ್ಷವನ್ನು ಬೇರು ಸಹಿತ ಕಿತ್ತು ಹಾಕಲು ಸಮರ್ಥವೆಂದು ಈ ಅಧ್ಯಾಯದಲ್ಲಿ ಹೇಳುವರು.

ಮೊದಲಿಗೆ 'ಯದಿ ಕ್ಷಮಿಷ್ಯಧ್ವಮುತಾಸ್ಯ ಕರ್ಮ' ಎಂದು ಬ್ರಹ್ಮದೇವರು ಹೇಳಿದ್ದರೂ ರಚನಾ ಹೇಳಿದ ಪ್ರಕಾರ ವಿರೋಚನನಲ್ಲಿ ವಿಶ್ವಾಸವುಳ್ಳ ವಿಶ್ವರೂಪಾಚಾರ್ಯರು ಅನುಚಿತ ಕಾರ್ಯಮಾಡಿದರೆಂದು ಸಹಿಸಲಾಗದ ಇಂದ್ರದೇವನು 'ಗುರೋರಪ್ಯವಲಿಪ್ತಸ್ಯ ಕಾರ್ಯಾಕಾರ್ಯಮಜಾನತಃ । ಉತ್ಪಥೇ ವರ್ತಮಾನಸ್ಯ ಕಾರ್ಯಂ ಭವತಿ ಶಾಸನಂ' ಎಂದು ಅನುಶಾಸನವಿರುವುದರಿಂದ ಆತ್ಯಂತಿಕವಾಗಿ ಅಂತೇವಾಸಿಯಾಗಿರಲು ಶಿಷ್ಯನಾಗಿರಲು ಮನಸ್ಸಿಲ್ಲದೇ ಹೀಗೆ ಶಾಸನ ಮಾಡಿದರೆಂದು ಶುಕಾಚಾರ್ಯರು ಹೇಳುವರೆಂದು ಹೇಳುವರು.

ವಿಶ್ವರೂಪಾಚಾರ್ಯರ ತಾಯಿ, 'ತ್ವಷ್ಟುಃ ದೈತ್ಯಾನುಜಾ ಭಾರ್ಯಾ ರೋಚನಾ ನಾಮ ಕನ್ಯಕಾ' (೭-೨೩) ರೋಚನಾ ಎಂಬುವವಳು ರಚನಾ ಎಂದೂ ಪಾಠಾಂತರವಿರಬೇಕು.

 

ಬೀಜದೋಷ ಕಾರ್ಯದಲ್ಲಿ ಬರುವದೇ ಎಂದು ತಿಳಿಸಲು ವಿಶ್ವರೂಪಾಚಾರ್ಯರು ಬ್ರಾಹ್ಮಣರಾದರೂ ತಾಯಿಯಾದ ರಚನೆಯಿಂದ ಹುಟ್ಟಿದುದರಿಂದ ದೋಷಿಗಳಾಗಿ ಅಸುರಪಕ್ಷಪಾತ ತೋರಿಸಿದರೆಂದು ಹೇಳುತ್ತಾರೆ-

**ಶ್ರೀಶುಕ ಉವಾಚ -**

**ತಸ್ಯಾಸನ್ ವಿಶ್ವರೂಪಸ್ಯ ಶಿರಾಂಸಿ ತ್ರೀಣಿ ಭಾರತ ।**
**ಸೋಮಪೀಥಂ ಸುರಾಪೀಥಮನ್ನಾದಮಿತಿ ಶುಶ್ರುಮಃ ॥೧॥**

**ಹೇ ಭರತ** ಪರೀಕ್ಷಿತನೇ **ತಸ್ಯ** ಆ ವಿಶ್ವರೂಪಾಚಾರ್ಯರಿಗೆ **ಸೋಮಪೀಥಂ** ಸೋಮಪಾನ ಮಾಡುವ **ಸುರಾಪೀಥಂ** ಮದ್ಯಪಾನ ಮಾಡುವ **ಅನ್ನಾದಂ** ಅನ್ನ ತಿನ್ನುವ **ಇತಿ** ಎಂದು **ತ್ರೀಣಿ** ಮೂರು **ಶಿರಾಂಸಿ** ತಲೆಗಳು **ಆಸನ್** ಇದ್ದವು ಎಂದು **ಶುಶ್ರುಮಃ** ಕೇಳಿರುವೆವು. 'ಗುರವಶ್ಚೈವ, ಶಿಕ್ಷಣೀಯೇಷು ಭಾವೇಷು ಶಿಕ್ಷಣೆಯಾಃ ಪ್ರಯತ್ನತಃ । ಉನ್ಮಾದೇ ಬಂಧನಾರದ್ಯೈರ್ವಾ ತಾಡನಂ ನ ಗುರೋಃ ಕ್ವಚಿತ್' ಎಂದು ಗೀತಾತಾತ್ಪರ್ಯ ಮುಂತಾದವುಗಳಲ್ಲಿ ಗುರುಗಳಿಗೆ ಹೊಡೆಯಬಾರದು ಎಂದು ಹೇಳಿದ ಮಾತುಗಳು ಪಾಪರಹಿತ ಗುರುಪರವೆಂದು ತಿಳಿಯಬೇಕು. ಆದ್ದರಿಂದಲೇ ಮುಂದೆ ಮತ್ತು ಶ್ರುತಿಯಲ್ಲಿಯೂ 'ಬ್ರಹ್ಮಹತ್ಯಾಸಹಸ್ರಾಚ್ಚ ಗುರುಹತ್ಯಾ ವಿಶಿಷ್ಯತೇ' ಎಂದು ಶಾಸ್ತ್ರವಿದ್ದರೂ ಬ್ರಹ್ಮಹತ್ಯೆಯನ್ನು ಅಂಜಲಿಯಿಂದ ಸ್ವೀಕರಿಸಿದನೆಂದು ಇಷ್ಟೇ ಹೇಳುವರು.

ಶುಶ್ರುಮಃ ಎಂಬುದರಿಂದ ಈ ವಿಷಯ ಶ್ರುತಿಯಲ್ಲಿದೆ ಎಂದು ಹೇಳಿರುವರು. ವಿಸರ್ಗವಿಲ್ಲದ ಪಾಠ ಸರಳ. ೧೦ ವರೆ ಶ್ಲೋಕದಿಂದ ವ್ಯಾಖ್ಯೇಯವಾದ ಶ್ರುತಿಯು ಎರಡನೆಯ ಅಷ್ಟಕ ಐದನೇ ಪ್ರಶ್ನದಲ್ಲಿದೆ. 'ವಿಶ್ವರೂಪೋ ವೈ ತ್ವಾಷ್ಟ್ರಃ ಪುರೋಹಿತೋ ದೇವಾನಾಮಾಸೀತ್ । ಸ್ವಸ್ರೀಯೋ ಅಸುರಾಣಾಂ ತಸ್ಯ ತ್ರೀಣಿ ಶೀರ್ಷಾಣ್ಯಾಸನ್ ಸೋಮಪೀಥಂ ಸುರಾಪಾನಂ ಅನ್ನಾವಸನಂ ಸ ಪ್ರತ್ಯಕ್ಷಂ ದೇವೇಭ್ಯೋ ಭಾಗಮವದತ್ ಪರೋಕ್ಷಂ ಅಸುರೇಭ್ಯಃ । ಸರ್ವಸ್ಮೈ ವೈ ಪ್ರತ್ಯಕ್ಷಭಾಗಂ ವದಂತಿ ಯಸ್ಮಾ ಏವ ಪರೋಕ್ಷಂ ವದಂತಿ ತಸ್ಯ ಭಾಗಃ ಉದಿತಃ ಸೋಽಸ್ಮಾದಿಂದ್ರೋ ಬಿಭೇದೀದೃಕ್ ವೈ ರಾಷ್ಟ್ರಂ ವಿಪರ್ಯಾವರ್ತತೀತಿ ತಸ್ಯ ವಜ್ರಮಾದಾಯ ಶೀರ್ಷಾಣ್ಯಚ್ಛಿನತ್ ಯತ್ಸೋಮಪಾನಮಾಸೀತ್ ಸ ಕಪಿಂಜಲೋಽಭವತ್ ಯತ್ ಸುರಾಪಾನಂ ಸ ಕಲವಿಂಕಃ ಯದನ್ನಾದನಂ ಸ ತಿತ್ತಿರಿಃ ಇತಿ ತಸ್ಯ ಅಂಜಲಿನಾ

ಬ್ರಹ್ಮಹತ್ಯಾಮುಪಾಗೃಹ್ಣಾತ್ ತಾಂ ಸಂವತ್ಸರಂ ಅಭಿಭಸ್ತಂ ಭೂತಾನ್ಯಭ್ಯಕ್ರೋಶನ್ ಬ್ರಹ್ಮನ್ನಿತಿ ಸ ಪೃಥಿವೀಂ ಉಪಾಸೀದದಸ್ಯೈ ಬ್ರಹ್ಮಹತ್ಯಾಯೈ ತೃತೀಯಂ ಪ್ರಗೃಹಾಣೇತಿ ನಾಽಬ್ರವೀತ್ ವರಂ ವೃಣೇ ಖಾತಾತ್ ಪರಾಭವಿಷ್ಯತೀಮನ್ಯೇ ತತೋ ಮಾ ಪರಾಭೂವಂ ಇತಿ ಪುರಾತಃ' ಇತ್ಯಾದಿಕಾ ।।೧।।

ಅಸುರಪಕ್ಷಪಾತವನ್ನು ಎರಡು ಶ್ಲೋಕದಿಂದ ತಿಳಿಸುತ್ತಾರೆ-

**ಸ ವೈ ಬರ್ಹಿಷಿ ದೇವೇಭ್ಯೋ ಭಾಗಂ ಪ್ರತ್ಯಕ್ಷಮುಚ್ಚಕೈಃ ।**
**ಅದದಾದ್ ಯಸ್ಯ ಪಿತರೋ ದೇವಾಸ್ತಂ ಪ್ರಶ್ರಯನ್ ನೃಪ ।।೨।।**

**ನೃಪ** ರಾಜನೇ **ಯಸ್ಯ** ಯಾವ ವಿಶ್ವರೂಪಾಚಾರ್ಯರಿಗೆ **ದೇವಾಃ** ದೇವತೆಗಳು **ಪಿತರಃ** ಪಿತೃಸ್ಥಾನಿಯರೋ **ಸಃ** ಆ ವಿಶ್ವರೂಪಾಚಾರ್ಯರು **ಬರ್ಹಿಷಿ** ಯಜ್ಞದಲ್ಲಿ **ಪ್ರತ್ಯಕ್ಷಂ** ಎಲ್ಲರಿಗೂ ಕಾಣುವಂತೆ **ಸಪ್ರಶ್ರಯಂ** ವಿನಯದಿಂದ **ದೇವೇಭ್ಯಃ** ಇಂದ್ರಾದಿದೇವತೆಗಳಿಗೆ **ಭಾಗಂ** ಹವಿಸ್ಸನ್ನು **ಉಚ್ಚಕೈಃ** ಗಟ್ಟಿಯಾಗಿ ಎಲ್ಲರಿಗೂ ಕೇಳುವಂತೆ, 'ಇಂದ್ರಾಯ ಸ್ವಾಹಾ ಇಂದ್ರಾಯ ಇದಂ' ಎಂದು ಮಂತ್ರ ಹೇಳುತ್ತಾ **ಅದಾತ್** ಕೊಟ್ಟನು. **ಅವದತ್** ಎಂಬ ಪಾಠದಲ್ಲಿ ಹೇಳಿದರೆಂದರ್ಥ. (ಇಂದ್ರ ಆಗಚ್ಛ ಮುಂತಾಗಿ) **ತಂ** ಅದನ್ನು **ದೇವಾಃ** ದೇವತೆಗಳು **ಪ್ರಶ್ನಯನ್** ಕೇಳಿದರು. ।।೨।।

**ಸ ಏವ ಹಿ ದದೌ ಭಾಗಂ ಪರೋಕ್ಷಮಸುರಾನ್ ಪ್ರತಿ ।**
**ಯಜಮಾನೋಽವಹದ್ಭಾಗಂ ಮಾತೃಸ್ನೇಹವಶಾನುಗಃ ।।೩।।**

**ಸಃ ಏವ** ಯಾವನು ಪ್ರತ್ಯಕ್ಷವಾಗಿ ದೇವತೆಗಳಿಗೆ ಭಾಗವನ್ನು ಕೊಟ್ಟನೋ ಅದೇ **ಯಜಮಾನಃ** ವಿಶ್ವರೂಪಾಚಾರ್ಯರೇ **ಪರೋಕ್ಷಂ** ಯಾರಿಗೂ ಕಾಣದಂತೆ **ಅಸುರಾನ್ ಪ್ರತಿ** ದೈತ್ಯರಿಗೆ **ಭಾಗಂ** ಹವಿಸ್ಸನ್ನು **ದದೌ** ಕೊಟ್ಟನು. ಏಕೆಂದರೆ **ಮಾತೃಸ್ನೇಹವಶಾನುಗಃ** ತಾಯಿಯಾದ ರಚನೆಯ ಸ್ನೇಹಕ್ಕೆ ಒಳಗಾಗಿ, ಅಸುರರನ್ನು ಅನುಸರಿಸುವವನಾಗಿ **ಭಾಗಂ ಅವಹತ್** ಏನೋ ಉಪಾಯದಿಂದ ಅವರಿಗೆ ತಲುಪಿಸಿದನು.

**ಮಾತೃಸ್ನೇಹವಶಾನುಗಃ** ತಾಯಿಯ ಸ್ನೇಹಪಾತ್ರರಾದ ಸೋದರಮಾವಂದಿರನ್ನು ಅನುಸರಿಸಿ ಹೀಗೂ ಅರ್ಥ. **ಯಜಮಾನಃ** ದೇವತೆಗಳನ್ನು ಸೇವಿಸುವವರಾದರೂ ಎಂದು ಅರ್ಥ.

**ತದ್ದೇವಹೇಲನಂ ತಸ್ಯ ಧರ್ಮಾಲೀಕಂ ಸುರೇಶ್ವರಃ ।**
**ಆಲಕ್ಷ್ಯ ತರಸಾ ಭೀತಸ್ತಚ್ಛೀರ್ಷಾಣ್ಯಚ್ಛಿನದ್ರುಷಾ ॥೪॥**

**ಸುರೇಶ್ವರಃ** ಇಂದ್ರನು **ತಸ್ಯ** ವಿಶ್ವರೂಪಾಚಾರ್ಯರ **ದೇವಹೇಲನಂ** ದೇವತೆಗಳ ತಿರಸ್ಕಾರವನ್ನು, (ದೇವತೆಗಳಿಗೆ ಅಶ್ರೇಯಸ್ಕರವಾದ) **ತತ್** ಆ **ಧರ್ಮಾಲೀಕಂ** ಧರ್ಮದೋಷವನ್ನು, ಧರ್ಮದಲ್ಲಿ ಮೋಸವನ್ನು **ಆಲಕ್ಷ್ಯ** ನೋಡಿ **ಭೀತಃ** ಇತನು ನನ್ನನ್ನೂ ಕೊಂದಾನು ಎಂದು ಹೆದರಿ **ರುಷಾ** ಸಿಟ್ಟಿನಿಂದ **ತಚ್ಛೀರ್ಷಾಣಿ** ಅವನ ತಲೆಗಳನ್ನು **ತರಸಾ** ಶೀಘ್ರದಲ್ಲಿ **ಅಚ್ಛಿನತ್** ಕತ್ತರಿಸಿದನು.

ಹಿಂದೆ ಉದಾಹರಿಸಿದ ಶ್ರುತಿಯಲ್ಲಿ 'ಈದೃಗ್ವ್ಯೈ ರಾಷ್ಟ್ರಂ ಪರ್ಯಾವರ್ತಯತಿ' ಎಂದು ಹೇಳಿದ್ದನ್ನು ಮೂಲವಾಗಿಟ್ಟುಕೊಂಡು ಭಾರತದಲ್ಲಿ ಉದ್ಯೋಗಪರ್ವದಲ್ಲಿ ಇಂದ್ರವಿಜಯದಲ್ಲಿ ಧರ್ಮಶಲ್ಯ ಸಂವಾದದಲ್ಲಿಯೂ ಭಯ ಕಾರಣವು ಹೇಳಲ್ಪಟ್ಟಿದೆ. ಇಂದ್ರಪದ ಅಪಹಾರ ಕಾಮನೆಯೂ ಉಪಲಕ್ಷಣವಿದ್ದಂತೆ ಅಲ್ಲಿಯೂ ಈ ಪ್ರಕಾರ ಉಪಲಕ್ಷಣೀಯ ಎಂದು ತಿಳಿಯಬೇಕು. ಅಲ್ಲಿ ಶಲ್ಯ ಹೇಳಿದ ಮಾತು,

ಶೃಣು ರಾಜನ್ ಪುರಾವೃತ್ತಮಿತಿಹಾಸಂ ಪುರಾತನಮ್ ।
ಸಭಾರ್ಯೇಣ ಯಥಾ ಪ್ರಾಪ್ತಂ ದುಃಖಮಿಂದ್ರೇಣ ಭಾರತ ॥

ತ್ವಷ್ಟಾ ಪ್ರಜಾಪತಿರ್ಯ ಆಸೀದ್ದೇವಶ್ರೇಷ್ಠೋ ಮಹತಪಾಃ ।
ಸ ಪುತ್ರಂ ವೈ ಅಂಗಿರಸಮೀಂದ್ರದ್ರೋಹಾತ್ ಕಿಲಾಸೃಜತ್ ॥

ಐಂದ್ರಂ ಸಂಪ್ರಾರ್ಥಯಂ ಜ್ಞಾನಂ ವಿಶ್ವರೂಪೋ ಮಹಾದ್ಯುತಿಃ ।
ವಿಷಾದಮಗಮಚ್ಛಕ್ರ ಇಂದ್ರೋಽಯಂ ಮಾ ಭವೇದಿತಿ ॥

ಮುಂತಾಗಿ ಮೋಕ್ಷಧರ್ಮದಲ್ಲಿ 'ತೇ ದೇವಾಃ ಸೇಂದ್ರಾಃ ಬ್ರಹ್ಮಾಣಮಭಿಜಗ್ಮುಃ' ಎಂದಾರಂಭಿಸಿ, 'ಬ್ರಹ್ಮಾಸ್ಥಿಸಂಭೂತೇನ ವಿಷ್ಣುಪ್ರವಿಷ್ಟೇನ ಇಂದ್ರೋ ವಿಶ್ವರೂಪಂ ಜಘಾನ' ಎಂದು ದಧೀಚಿಯ ಅಸ್ಥಿಗಳಿಂದ ವಜ್ರಾಯುಧ ತಯಾರಿಸುವದು ಅದರಿಂದ ವಿಶ್ವರೂಪನನ್ನು ಸಂಹರಿಸಿದುದನ್ನು ಹೇಳಿದ್ದು ಇಲ್ಲಿ ವೃತ್ರನನ್ನು ಕೊಲ್ಲುವಾಗ ವಜ್ರಾಯುಧ ಹೇಳಿದ್ದು ಕಲ್ಪಭೇದ ಒಂದರಿಂದಲೇ ಸಮಾಧೇಯವಾಗಿದೆ. ಮಾತೃಸ್ನೇಹವಶಾನುಗಃ ಎಂದುದರಿಂದಲೂ ಮೋಕ್ಷಧರ್ಮದಲ್ಲಿ ಹೇಳಿದ ರೀತಿಯನ್ನು ಇಲ್ಲಿ ಅನುಸಂಧಾನ ಮಾಡಲು ಸೂಚಿಸುವರು ಅಲ್ಲಿ ಹೀಗಿದೆ.

'ಅಥ ಹಿರಣ್ಯಕಕಶಿಪುಂ ಪುರಸ್ಕೃತ್ಯ ವಿಶ್ವರೂಪಮಾತರಂ ಸ್ವಸಾರಂ ಆಸುರೀ ವರಮಯಾಚತ । ಹೇ ಸ್ವಸ್ಸೋ ಅಯಂ ತೇ ಪುತ್ರಃ ತ್ವಾಷ್ಟ್ರಃ ವಿಶ್ವರೂಪಃ ತ್ರಿಶಿರಃ ದೇವಾನಾಂ ಪುರೋಹಿತಃ । ಪ್ರತ್ಯಕ್ಷಂ ದೇವೇಭ್ಯಃ ಭಾಗಂ ಅಹರತ್ ಪರೋಕ್ಷಮಸ್ಮಾಕಂ ತತೋ ದೇವಾ ಅವರ್ಧಂತ ವಯಂ ಕ್ಷೀಯಾಮಃ ತದೇನಂ ತ್ವಂ ವಾರಯಿತುಮರ್ಹಸಿ ತಥಾ ಯಥಾ ಅಸ್ಮಾನ್ ಭಜೇದಿತಿ । ಅಥ ವಿಶ್ವರೂಪನಂದನಂ ವನಮುಪಗತಂ ಮಾತಾ ಉವಾಚ । ಪುತ್ರ ಕಿಂ ಪರಪಕ್ಷವರ್ಧನಃ ತ್ವಂ ಮಾತುಲಪಕ್ಷಂ ನಾಶಯಸಿ ನಾರ್ಹಸ್ಯೇವಂ ಕರ್ತುಂ ಇತಿ । ಸ ವಿಶ್ವರೂಪಃ ಮಾತುರ್ವಾಕ್ಯಂ ಅನತಿಕ್ರಮಣೀಯಮಿತಿ ಸಂಪೂಜ್ಯ ಹಿರಣ್ಯಕಶಿಪುಂ ಆಗಾತ್ । ಅಥ ವಿಶ್ವರೂಪಃ ಮಾತೃಪಕ್ಷವರ್ಧನೋಽಭೂತ್' ಎಂದು ಮುಂತಾಗಿ ಇದೆ. ।।೪।।

**ಸೋಮಪೀಥಂ ತು ಯತ್ತಸ್ಯ ಶಿರ ಆಸೀತ್ಕಪಿಂಜಲಃ ।**
**ಕಲವಿಂಕಃ ಸುರಾಪೀಥಮನ್ನಾದಂ ಯತ್ಸ ತಿತ್ತಿರಿಃ ।।೫।।**

**ತಸ್ಯ** ವಿಶ್ವರೂಪಾಚಾರ್ಯರ **ಯತ್ ಸೋಮಪೀಥಂ ಶಿರಃ** ಯಾವ ಸೋಮಪೀಥವೆಂಬ ತಲೆ ಇತ್ತೋ ಅದು **ಕಪಿಂಜಲಃ ಆಸೀತ್** ಕಪಿಂಜಲ ಎಂಬ ಹಕ್ಕಿಯಾಯಿತು **ಸುರಾಪೀಥಂ** ಸುರಾಪೀಥವು **ಕಲವಿಂಕಃ** ಕಲವಿಂಕವೆಂಬ ಪಕ್ಷಿಯಾಯಿತು **ಅನ್ನಾದಂ** ಅನ್ನಾದವೆಂಬ ತಲೆಯು **ತಿತ್ತಿರಿಃ** ತಿತ್ತಿರಿ ಪಕ್ಷಿಯಾಯಿತು.

**ಕಪಿಂಜಲ** ಜಾತಕ ಪಕ್ಷಿ **ಕಲವಿಂಕ** ಹಳದಿ ತಲೆಯ ಗುಬ್ಬಚ್ಚಿ **ತಿತ್ತಿರಿ** ಕವುಜಗ ಹಕ್ಕಿ. ।।೫।।

**ಬ್ರಹ್ಮಹತ್ಯಾಮಂಜಲಿನಾ ಜಗ್ರಾಹ ಯದಪೀಶ್ವರಃ ।**
**ಸಂವತ್ಸರಾಂತೇ ತದಘಂ ಭೂತಾಶಂಸಾವಿಶುದ್ಧಯೇ ।।**
**ಭೂಮ್ಯಂಬುದ್ರುಮಯೋಷಿದ್ಭ್ಯಶ್ಚತುರ್ಧಾ ವ್ಯಭಜದ್ಧರಿಃ ।।೬।।**

**ಯದಪಿ** ಯದ್ಯಪಿ **ಈಶ್ವರಃ** ಬ್ರಹ್ಮಹತ್ಯಾದೋಷವನ್ನು ನಿವಾರಿಸಿಕೊಳ್ಳಲು ಸಮರ್ಥರು **ತಥಾಪಿ** ಆದರೂ **ಹರಿಃ** ಇಂದ್ರದೇವರು **ಬ್ರಹ್ಮಹತ್ಯಾಂ** ಬ್ರಹ್ಮಹತ್ಯಾ ದೋಷವನ್ನು **ಅಂಜಲಿನಾ** ಬೊಗಸೆಯಿಂದ **ಜಗ್ರಾಹ** ಸ್ವೀಕರಿಸಿದರು. **ಸಂವತ್ಸರಾಂತೇ** ಸ್ವೀಕರಿಸಿ ಒಂದು ವರ್ಷದ ನಂತರ ಕೊನೆಯಲ್ಲಿ **ಭೂತಾಶಂಸಾವಿಶುದ್ಧಯೇ** ಲೋಕಾಪವಾದವನ್ನು ಕಳೆದುಕೊಳ್ಳಲು, ಭೂತಹಿಂಸೆಯ ಪಾಪ ಶೋಧನೆಗಾಗಿ **ಹರಿಃ** ಇಂದ್ರದೇವರು, ಅವರ ಅಂತರ್ಯಾಮಿ ಶ್ರೀಹರಿಯು **ತತ್ ಅಘಂ** ಆ ಪಾಪವನ್ನು

**ಭೂಮ್ಯಂಬುದ್ರುಮಯೋಷಿದ್ಭ್ಯಃ** ನೆಲ, ನೀರು, ಮರ, ಹೆಂಗಸು ಇವರುಗಳಿಗೆ, **ಚತುರ್ಧಾ ವ್ಯಭಜತ್** ನಾಲ್ಕಾಗಿ ವಿಭಾಗ ಮಾಡಿ ಹಂಚಿದರು. ಜನರು ಬ್ರಹ್ಮಹತ್ಯಾ ಮಾಡಿದವನೆಂದು ಆಕ್ರೋಶ ಮಾಡಿದರು. ಅದಕ್ಕೆ ಹೆದರಿ ಹೀಗೆ ಮಾಡಿದನು. ।।೬।।

**ಭೂಮಿಸ್ತುರೀಯಂ ಜಗ್ರಾಹ ಖಾತಪೂರವರೇಣ ವೈ ।**
**ಈರಣಂ ಬ್ರಹ್ಮಹತ್ಯಾಯಾ ರೂಪಂ ಭೂಮೌ ಪ್ರದೃಶ್ಯತೇ ।।೭।।**

**ಖಾತಪೂರವರೇಣ** ತನ್ನಲ್ಲಿ ಮಾಡಿದ ಹಳ್ಳವು ತಾನಾಗಿಯೇ ತುಂಬುವ ವರವನ್ನು ಇಂದ್ರನಿಂದ ಪಡೆಯುವ ಮೂಲಕ **ಭೂಮಿಃ** ಭೂಮಿಯು **ತುರೀಯಂ** ಬ್ರಹ್ಮಹತ್ಯೆಯ ನಾಲ್ಕನೇ ಒಂದು ಭಾಗವನ್ನು **ಜಗೃಹೇ** ತೆಗೆದುಕೊಂಡನು. **ವೈ** ಇದು ಶಾಸ್ತ್ರ ಸಿದ್ಧ **ಭೂಮೌ** ಭೂಮಿಯಲ್ಲಿ **ಬ್ರಹ್ಮಹತ್ಯಾಯಾಃ ರೂಪಂ** ಸ್ವೀಕರಿಸಿದ ಬ್ರಹ್ಮಹತ್ಯೆಯ ರೂಪವಾಗಿ **ಈರಣಂ** ಉಪ್ಪಿನಿಂದ ತುಂಬಿದ ಜವಳು ಭೂಮಿಯು **ಪ್ರದೃಶ್ಯತೇ** ಇಂದಿಗೂ ಕಾಣುವದು. ಆದ್ದರಿಂದ ಅಂಥ ಸ್ಥಳದಲ್ಲಿ ಅಧ್ಯಯನ ಮೊದಲಾದವು ನಿಷಿದ್ಧ.

'ಈರಣಂ ಶೂನ್ಯಮೂಷರಂ' ಎಂದು ಅಮರವಿದೆ. 'ಈರಣಂ ಶೂನ್ಯಭಾಗಃ' ಇತ್ಯಜಯ ಇತಿ ಭಾನುಃ । ತತ್ಸಾನ್ಥೇನ ಜಯಾದಿಕಂ ಸ್ಥಾನೇ ಇತ್ಯಭಿಪ್ರಾಯಃ ।

**ತುರೀಯಂ ಛೇದರೋಹೇಣ ವರೇಣ ಜಗೃಹುರ್ದ್ರುಮಾಃ ।**
**ತೇಷಾಂ ನಿರ್ಯಾಸರೂಪೇಣ ಬ್ರಹ್ಮಹತ್ಯಾ ಪ್ರದೃಶ್ಯತೇ ।।೮।।**

**ದ್ರುಮಾಃ** ಗಿಡಗಳು **ಛೇದರೋಹೇಣ ವರೇಣ** ಕತ್ತರಿಸಿದರೂ ಮತ್ತೆ ಬೆಳೆಯಬೇಕೆಂಬ ವರದಿಂದ **ತುರೀಯಂ** ನಾಲ್ಕನೇ ಒಂದು ಭಾಗವನ್ನು **ಜಗೃಹುಃ** ಸ್ವೀಕರಿಸಿದವು. **ಬ್ರಹ್ಮಹತ್ಯಾ** ಬ್ರಹ್ಮಹತ್ಯೆಯು **ನಿರ್ಯಾಸರೂಪೇಣ** ರಂಧ್ರ ಮಾಡಿದಾಗ ಹೊರಬರುವ ದ್ರವದ ರೂಪದಲ್ಲಿ, (ಅಂಟು ಹಾಲು ಮುಂತಾಗಿ) **ತೇಷಾಂ** ಅವುಗಳಲ್ಲಿ **ಪ್ರದೃಶ್ಯತೇ** ಕಂಡುಬರುವದು. ಆದ್ದರಿಂದ ಅಂಟು ನಿಷಿದ್ಧ ಎಂದು ಆಚಾರವಂತರು ಹೇಳುವರು.

ತುರೀಯತೆಯನ್ನು 'ಅಂತೇಷು ರೇಮಿರೇ ಧೀರಾ ನ ತೇ ಮಧ್ಯೇಷು ರೇಮಿರೇ' ಎಂಬಲ್ಲಿಯಂತೆ ನಿರೂಪಿಸುವ ಆಯಾ ಅರ್ಥಕ್ಕೆ ಉಳಿದ ಮೂರರ ಅಪೇಕ್ಷೆಯಿಂದ ಎಂದು ತಿಳಿಯಬೇಕು.

'ನಿರ್ಯಾಸೋಽಪಿ ಕಷಾಯೋಽಸ್ತ್ರೀ' ಎಂದು ಅಮರವಿದೆ. ನಿರ್ಯಾಸ ಕಷಾಯಗಳಿಗೆ ಪರಸ್ಪರ ವಾಚ್ಯವಾಚಕ ಭಾವವಿರುವದರಿಂದ ಈ ಅಮರ ಅನುದಾಹರಣೀಯವಲ್ಲ. ।।೮।।

**ಶಶ್ವತ್ಕಾಮವರೇಣಾಂಹಸ್ತುರೀಯಂ ಜಗೃಹುಃ ಸ್ತ್ರಿಯಃ ।**
**ರಜೋರೂಪೇಣ ತಾಸ್ವಂಹೋ ಮಾಸಿ ಮಾಸಿ ಪ್ರದೃಶ್ಯತೇ ।।೯।।**

**ಸ್ತ್ರಿಯಃ** ಹೆಣ್ಣು ಮಕ್ಕಳು **ಶಶ್ವತ್ಕಾಮವರೇಣ** ೧. ಯಾವಾಗಲೂ ವಿಷಯಗಳನ್ನು ಸೇವಿಸುವ ಅಭಿಲಾಷೆ ಇರಲಿ ಎಂಬ ವರದಿಂದ, ೨. ರಜೋದರ್ಶನವಿಲ್ಲದಿದ್ದಾಗಲೂ ಅಂದರೆ ಗರ್ಭಧಾರಣೆಯಾದ ಮೇಲೆಯೂ ಪ್ರಸವಪರ್ಯಂತ ಸಂಭೋಗಾಸಕ್ತಿ ಇರಬೇಕೆಂಬ ವರದಿಂದ **ತುರೀಯಂ ಅಂಹಃ** ನಾಲ್ಕನೇ ಒಂದು ಭಾಗವನ್ನು, ಪಾಪವನ್ನು **ಜಗೃಹುಃ** ಸ್ವೀಕರಿಸಿದರು. **ತಾಸು** ಆ ಸ್ತ್ರೀಯರಲ್ಲಿ **ಮಾಸಿ ಮಾಸಿ** ಪ್ರತಿ ತಿಂಗಳುಗಳಲ್ಲಿಯೂ **ರಜೋರೂಪೇಣ** ರಜಸ್ಸಿನ ಸ್ರಾವರೂಪದಲ್ಲಿ **ಅಂಹಃ** ಆ ಪಾಪವು **ಪ್ರದೃಶ್ಯತೇ** ಇಂದಿಗೂ ಕಂಡು ಬರುವದು.

ಆದ್ದರಿಂದ ರಜೋದರ್ಶನವಾದ ಮೂರುದಿನ ಸ್ತ್ರೀಸಂಗಾದಿಗಳನ್ನು ನಿಷೇಧಿಸಿದೆ. ಮೊದಲು ಚಾರ್ವಂಗಿಯರೂ ಅರ್ವಾದಿಗಳಂತೆಯೇ ಇದ್ದರು. ಈಗ ದೇವೇಂದ್ರನ ವರದಿಂದ ಹೀಗಿದ್ದಾರೆ. ಅಂದರೆ ವರ್ಷಕ್ಕೆ ಒಮ್ಮೆಯೇ ಗರ್ಭಧಾರಣೆಗಾಗಿ ಸಂಭೋಗ, ನಂತರ ಇಲ್ಲವೆಂದೇ ಹಿಂದೆ ವ್ಯವಸ್ಥೆ ಇತ್ತು. ಈಗ ವರದಿಂದ ಅನಂತರವೂ ಸಂಭೋಗಾಸಕ್ತಿ ಇರುವದು ಎಂದು ಭಾವ. ।।೯।।

**ದ್ರವ್ಯಭೂಯೋವರೇಣಾಪಸ್ತುರೀಯಂ ಜಗೃಹುರ್ಮಲಮ್ ।**
**ತಾಸು ಬುದ್ಬುದಫೇನಾಭ್ಯಾಂ ದೃಷ್ಟಂ ತದ್ಧರಿಕಿಲ್ಬಿಷಮ್ ।।೧೦।।**

**ಆಪಃ** ನೀರುಗಳು **ದ್ರವ್ಯಭೂಯೋವರೇಣ** ಪಂಚಭೂತಗಳಲ್ಲಿ ತಾನು ಹೆಚ್ಚು ಪರಿಮಾಣದಲ್ಲಿರಬೇಕೆಂಬ ವರದಿಂದ ಅಥವಾ ಹಾಲಿನಲ್ಲಿ ನೀರು ಹಾಕಿದಾಗ ಹಾಲು ಹೆಚ್ಚಾಗಬೇಕೆಂಬ ವರದಿಂದ ಮತ್ತು ಪ್ರವಾಹಾದಿಗಳಲ್ಲಿ ಬರಬರುತ್ತ ನೀರು ಹೆಚ್ಚಾಗಬೇಕೆಂಬ ವರದಿಂದ **ತುರೀಯಂ ಮಲಂ** ನಾಲ್ಕನೇ ಒಂದು ಭಾಗ ಪಾಪವನ್ನು **ಜಗೃಹುಃ** ಸ್ವೀಕರಿಸಿದವು. **ತಾಸು** ಅವುಗಳಲ್ಲಿ **ತದ್ಧರಿಕಿಲ್ಬಿಷಂ** ಆ ಇಂದ್ರನ ಬ್ರಹ್ಮಹತ್ಯಾ ದೋಷವು **ಬುದ್ಬುದಫೇನಾಭ್ಯಾಂ** ಗುಳ್ಳೆ-ನೊರೆ-ಬುರುಗು ರೂಪದಲ್ಲಿ **ದೃಷ್ಟಂ** ಇಂದಿಗೂ ಕಾಣುವದು. 'ತಾಪಾಪನೋದೋ ಭೂಯಸ್ತ್ವಮಂಭಸೋ

ವೃತ್ತಯಸ್ತ್ವಿಮಾಃ' ಎಂದು ಮೂರನೇ ಸ್ಕಂಧದಲ್ಲಿ ಹೇಳಿರುವದನ್ನು ಸ್ಮರಿಸಬಹುದು. ಆದ್ದರಿಂದ ಗುಳ್ಳೆ-ನೊರೆ ಅಸ್ಪೃಶ್ಯವೇ ಎಂದು ಭಾವ.

'ಭೂಮ್ಯಂಬುದ್ರುಮಯೋಷಿದ್ಭ್ಯಃ' ಎಂದು ಹೇಳಿದ ಪ್ರಕಾರ ಭೂಮಿಯನ್ನು ಹೇಳಿದ ನಂತರ ನೀರನ್ನು ಹೇಳಬೇಕಿತ್ತು. ಆದರೂ ಸರ್ವಾಧಾರಗಳಾದ ಧರೆಗೂ ಸರ್ವೋಪಜೀವಿಗಳಾದ ಜೀವನಾನಾಂ ನೀರುಗಳಿಗೂ ಇರುವ ಉಪಜೀವ್ಯತೆಯನ್ನು ತಿಳಿಸಲು ಮೊದಲೊಂದು ಭೂತವನ್ನು ಕೊನೆಗೊಂದು ಭೂತವನ್ನು ಹೇಳಿದ್ದಾದರೆ ಸಂಪುಟಾಕಾರವಾಗಿ ಸ್ಪಷ್ಟ ಹೇಳಿದಂತಾಗುವದು ಎಂದು ಹೀಗೆ ಹೇಳಿರುವರು.

ಶ್ರುತಿಯಲ್ಲಿ 'ಪೃಥವೀಮುಪಾಸೀದದಸ್ಯೈ ಬ್ರಹ್ಮಹತ್ಯಾಯೈ ತೃತೀಯಂ ಪ್ರತಿಗೃಹಾಣೇತಿ ವನಸ್ಪತೀನುಪಾಸೀದದಸ್ಮೈ ತೃತೀಯಂ ಗೃಹ್ಣೀಷ್ವೇತಿ । ಸ ಸ್ತ್ರೀಮುಪಾಸೀದದಸ್ಯೈ ತೃತೀಯಂ ಪ್ರತಿಗೃಹ್ಣೀತೇತಿ' ಎಂದು ಮೂರು ಭಾಗ ಮಾತ್ರ ಹೇಳಿರುವಾಗ ನೀರನ್ನೇಕೆ ಸಂಗ್ರಹಿಸಿದ್ದು. ಪಾಪ ಧಾರಕಗಳಾಗಿ ಇಲ್ಲ ಎಂದರೆ ನಿಜ. ಆದರೆ, ಸತ್ಯವತೀಸುತರು ಅನಂತ ಶಾಸ್ತ್ರದ್ರಷ್ಟೃಗಳಾಗಿದ್ದರಿಂದ ಈ ಅರ್ಥ ಕೊಡುವ ಶ್ರುತಿಯನ್ನು ಊಹಿಸಿ ವ್ಯಾಖ್ಯಾನದಿಂದ ವಿಶೇಷಪ್ರತಿಪತ್ತಿಃ ಮುಂತಾಗಿರುವದರಿಂದಲೂ ಶ್ರುತಿಯಲ್ಲಿ ಉಪಲಕ್ಷಣಾಭಿಪ್ರಾಯದಿಂದ ನೀರನ್ನು ಸಂಗ್ರಹಿಸಿರುವರು. ಮೋಕ್ಷಧರ್ಮದಲ್ಲಿ ಹಾಗಿದೆ. 'ಬ್ರಹ್ಮವಧ್ಯಾಂ ಚ ಚತುರ್ಷು ಸ್ಥಾನೇಷು ವನಿತಾಗ್ನಿವನಸ್ಪತಿಗೋಷು ವ್ಯಭಜತ್' ಎಂದು. ಇನ್ನು ಅಲ್ಲಿ ಇಲ್ಲಿ ಸ್ವಲ್ಪ ಸ್ಥಾನವ್ಯತ್ಯಾಸ, ಕಲ್ಪಭೇದದಿಂದ ಸಮಾಧೇಯವಾಗಿದೆ. ॥೧೦॥

ಮಗನನ್ನು ಕಳೆದುಕೊಂಡ ತ್ವಷ್ಟಾ ಸುಮ್ಮನೆ ಕುಳಿತನೋ ಅಥವಾ ಈ ದುಃಖದಿಂದ ಇಂದ್ರನನ್ನು ನಾಶ ಮಾಡುವ ಏನಾದರು ಒಂದನ್ನು ಸಂಪಾದಿಸಲು ಪ್ರಯತ್ನಿಸಿದನೋ ಎಂದರೆ ವೇದಸಮ್ಮತಿಸಹಿತವಾಗಿ ಎರಡನೇ ಪಕ್ಷವನ್ನು ಅಂಗೀಕರಿಸಿ ಹೇಳುವರು-

**ಹತಪುತ್ರಸ್ತತಸ್ತ್ವಷ್ಟಾ ಜುಹಾವೇಂದ್ರಾಯ ಶತ್ರವೇ ।**
**ಇಂದ್ರಶತ್ರೋ ವಿವರ್ಧಸ್ವ ಮಾ ಚಿರಂ ಜಹಿ ವಿದ್ವಿಷಮ್ ॥೧೧॥**

**ತತಃ** ಅನಂತರ **ಹತಪುತ್ರಃ** ಇಂದ್ರನಿಂದ ಕೊಲ್ಲಲ್ಪಟ್ಟ ಮಗನುಳ್ಳ **ತ್ವಷ್ಟಾ** ತ್ವಷ್ಟನು **ಇಂದ್ರಾಯ** ಇಂದ್ರನನ್ನು **ಶತ್ರವೇ** ಕೊಲ್ಲುವವನಿಗಾಗಿ **ಇಂದ್ರ ಶ್ರತ್ರೋ** ಇಂದ್ರನ ಸಂಹಾರಕನೇ **ವಿವರ್ಧಸ್ವ** ವಿಶೇಷವಾಗಿ ಬೆಳೆಯುವವನಾಗು **ಮಾ ಚಿರಂ** ಬೇಗನೇ **ವಿದ್ವಿಷಂ** ಶತ್ರುವನ್ನು **ಜಹಿ** ಸಂಹರಿಸು ಎಂದು ಮಂತ್ರವನ್ನು ಉಚ್ಚರಿಸಿ **ಜುಹಾವ** ಸೋಮರಸವನ್ನು ಹೋಮಮಾಡಿದನು.

**ವಿಶಿಷ್ಟಾರ್ಥ**

ಇಂದ್ರಶತ್ರೋ ವಿವರ್ಧಸ್ವ ಎಂಬ ಆನುಪೂರ್ವಿಯನ್ನು ಹೇಳಿದ್ದರಿಂದ 'ತ್ವಷ್ಟಾ ಹತಪುತ್ರೋಽಪಿ ಸೋಮಮಾಹರತ್' ಮುಂತಾದ ವೇದವಾಕ್ಯವನ್ನು ಸೂಚಿಸುವರು. ಇಲ್ಲಿ ಇಂದ್ರಶತ್ರೋ ಎಂಬ ಸಮಸ್ತಪದವು ಇಂದ್ರಸ್ಯ ಶತ್ರುಃ ಇಂದ್ರನ ಶತ್ರು ಎಂಬರ್ಥದಲ್ಲಿ ಷಷ್ಠೀತತ್ಪುರುಷ, ಹಾಗೂ ಇಂದ್ರಃ ಶತ್ರುಃ ಯಸ್ಯ ಸಃ ಇಂದ್ರನೇ ಶತ್ರುವಾಗಿ ಉಳ್ಳ ಎಂಬರ್ಥದಲ್ಲಿ ಬಹುವ್ರೀಹಿಗಳನ್ನು ಮಾಡಬಹುದು.

ತತ್ಪುರುಷವಾದಾಗ ಕೊನೆಯ ಅಕ್ಷರ ಉದಾತ್ತಸ್ವರದಿಂದ ಉಚ್ಚರಿತವಾಗುವುದು. ಬಹುವ್ರೀಹಿಯಾದಾಗ ಮೊದಲನೇ ಅಕ್ಷರವು ಉದಾತ್ತಸ್ವರದಿಂದ ಉಚ್ಚರಿತವಾಗುವುದು. ಋತ್ವಿಜರು ಬಹುವ್ರೀಹಿ ಆಗುವಂತೆ ಉಚ್ಚರಿಸಿದ್ದರಿಂದ ಯಜಮಾನನಾದ ತ್ವಷ್ಟೃವಿಗೆ ಅಭಿಪ್ರೇತವಲ್ಲದ ಅರ್ಥದಲ್ಲಿ ಆ ಶಬ್ದವು ಪ್ರಯುಕ್ತವಾಗಿ ವಿಪರೀತಫಲವೇ ಆಯಿತು. ಇಂದ್ರನಿಂದ ಸಂಹೃತನಾಗುವ ವೃತ್ರಾಸುರನ ಉತ್ಪತ್ತಿಯಾಯಿತು. 'ಶ್ರುತ್ಯಾ ಯದಬ್ರವೀತ್ ಸ್ವಾಹೇಂದ್ರಶತ್ರೋ ವರ್ಧಸ್ವ ಇತಿ ತಸ್ಮಾದಸ್ಯೇಂದ್ರಃ ಶತ್ರುರಭವತ್' ಎಂಬ ಶ್ರುತಿಯು ಇದನ್ನು ಸ್ಪಷ್ಟಪಡಿಸುವುದು. ಇದನ್ನೇ ಉದಾಹರಣೆಯಾಗಿಟ್ಟು-ಕೊಂಡು ಶಿಕ್ಷಾಗ್ರಂಥದಲ್ಲಿ (ಉಚ್ಚಾರಣೆಯ ರೀತಿಯನ್ನು ತಿಳಿಸುವ ಗ್ರಂಥ) 'ಮಂತ್ರೋ ಹೀನಃ ಸ್ವರತೋ ವರ್ಣತೋ ವಾ ಮಿಥ್ಯಾಪ್ರಯುಕ್ತೋ ನ ತಮರ್ಥಮಾಹ । ಸ ವಾಗ್ವಜ್ರೋ ಯಜಮಾನಂ ಹಿನಸ್ತಿ ಯಥೇಂದ್ರಶತ್ರುಃ ಸ್ವರತೋಽಪರಾಧಾತ್ ।। ಎಂದು ಹೇಳಿರುವರು.

ಸ್ವರದಿಂದಾಗಲಿ, ವರ್ಣದಿಂದಾಗಲಿ ತಪ್ಪಾಗಿ ಪ್ರಯೋಗಿಸಿದ ಮಂತ್ರವು ಉದ್ದಿಷ್ಟ ಅರ್ಥವನ್ನು ಹೇಳುವದಿಲ್ಲ. ಅದು ವಾಗ್ವಜ್ರವಾಗಿ ಪರಿಣಮಿಸಿ ಯಜಮಾನನಿಗೆ ಕೆಡಕು ಉಂಟು ಮಾಡುವದೆಂದರ್ಥ. ಸ್ವರದ ತಪ್ಪು ಉಚ್ಚಾರದಿಂದ ಇಂದ್ರಶತ್ರುಶಬ್ದ ಮಾಡಿದಂತೆ ಎಂದು ಭಾವ.

**ಸತ್ಯಧರ್ಮರು**

ಇಂದ್ರಾಯಶತ್ರವೇ ಎಂಬುದು ಒಂದೇ ಪದ. ಇಂದ್ರಸ್ಯ ಆಯಃ ಯೇನ ಸಃ ಇಂದ್ರಾಯಃ ಸ ಚಾಽಸೌ ಶತ್ರುಶ್ಚ ಎಂದು ಹೀಗೂ ಮಾಡಬಹುದು. ಇಂದ್ರನಿಗೆ ಲಾಭವಾಗುವ ಶತ್ರು ಎಂದರ್ಥ. (ವ್ಯಯಃ ಎಂಬ ಪದ ಹೆಚ್ಚಿಗೆ ಎಂದು ಕಾಣುವದು) ಇಂದ್ರಶತ್ರೋ ಎಂಬುದು ಶ್ರೌತಾರ್ಥ ಸಂಗ್ರಾಹಕವಾದುದು.




ಶ್ರುತಿಯಾದರೋ 'ಯದಬ್ರವಿತ್ ಸ್ವಾಹೇಂದ್ರಶತ್ರುರ್ವರ್ಧಸ್ವೇತಿ ತಸ್ಮಾದಸ್ಯೇಂದ್ರ ಏವ ಶತ್ರುರಭವತ್' ಮುಂತಾದುದು. ಇಲ್ಲಿ ಸ್ವರಸವಾಗಿ ಸ್ವರಾದಿ ವ್ಯತ್ಯಾಸ ಅದರ ಫಲಾದಿಗಳ ಚಿಂತಾವನ್ನು 'ಪೀಪಿಷ ಇಂದ್ರಶತ್ರುಃ' ಎಂಬ ಋಗ್ಭಾಷ್ಯ ವ್ಯಾಖ್ಯಾನ ಮಾಡುವಾಗ 'ಯಸ್ಯ ಯೋದ್ಧಾ' ಎಂದಾರಂಭಿಸಿ 'ಬಹುವ್ರೀಹಿರ್ಹೀತಿ ಸೂತ್ರಂ ಪುರಾಣಂ' ಎಂಬಲ್ಲಿವರೆಗೆ ಭಾಷ್ಯದಲ್ಲಿ, ಇಂದ್ರಶಬ್ದಸ್ಯ ಎಂದಾರಂಭಿಸಿ ಅನ್ಯಥಾ ಸಮಾಸಾಂತೋದಾತ್ತತ್ವಂ ಸ್ಯಾತ್ ಎಂಬಲ್ಲಿಯವರೆಗೆ ಟೀಕಾದಲ್ಲಿ ಹೇಳಿದಂತೆ ಉದಾಹರಣದರ್ಶನಾದಿತ್ಯಾಹ 'ಸ್ವಾಹೇತಿ' ಎಂದಾರಂಭಿಸಿ 'ಆಹಿತಾಗ್ನ್ಯಾದಿತ್ವಾದ್ವಾ' ಎಂಬಲ್ಲಿ ವರೆಗೆ ಅನುವ್ಯಾಖ್ಯಾನ ಸಹಿತ ಸುಧೆಯಲ್ಲಿ ನಿರೂಪಿಸಿದ್ದನ್ನು (ಸವಿಲಾಸಮಯಂ ಸಂಸಾರಃ) ಸುಂದರವಾಗಿ ಅಲ್ಲಿಯೇ ತಿಳಿಯಬಹುದು. ಇದರ ವಿಸ್ತಾರವನ್ನು ಪೌರುಷೇಯದಲ್ಲಿ ಕೃತ್ಯವಿಲ್ಲದ್ದರಿಂದ ಸಾಧಿಸಿಲ್ಲವೆಂದು ತಿಳಿಯಿರಿ ಎನ್ನುತ್ತಾರೆ ಶ್ರೀಗಳು.

ವರ್ಧಸ್ವ ಎಂಬುದರಿಂದ ಮಂತ್ರಗಳು ಅಯಾತಯಾಮಗಳಾದುದರಿಂದ ಉತ್ಪತ್ತಿ ಆಗೇ ಆಗುವದು ಎಂಬ ನಿಯಮ ತಿಳಿಸುವರು. ಮಗನನ್ನು ಕೊಂದದ್ದರಿಂದ ನನಗೆ ಅಣ್ಣನನ್ನು ಕೊಂದದ್ದರಿಂದ ನಿನಗೆ ದ್ವೇಷಿಯಾದ ಎಂದರ್ಥ. ನಾನಾದರೋ ಇನ್ನು ಹುಟ್ಟಿಲ್ಲವಾದುದರಿಂದ ಅನುಭವವಿಲ್ಲ, ನನಗೆ ಹಾಗಲ್ಲ ಎಂದೂ ಹೇಳುವರು. ವಿದ್ವಿಷಂ ಎನ್ನುವದರಿಂದ ವಿದಃ ವಿಷಂ ಸುತನ ಮೃತಿಯನ್ನು ತಿಳಿದ ನನಗೆ ವಿಷಂ ವಿಷದಂತಿರುವ ಎಂದರ್ಥ. ಇಲ್ಲದೆ ದ್ವಿಷಂ ಎಂದಿದ್ದರೂ ಸಾಕಾಗುವಾಗ ವಿ ಎಂದೇನು ಹೇಳಿರುವರೋ ಅದರಿಂದ ಈ ಅರ್ಥ ಮಾಡಲು ಅವಕಾಶ ಮಾಡಿರುವರು ವ್ಯಾಸರು ಎಂದು ತಿಳಿಯಬೇಕು. 'ಮಾ ಚಿರಂ ಆಲಸ್ಯಾದಮೃತಂ ವಿಷಂ' ಎಂದಿರುವದರಿಂದ ಬೇಗನೇ ಎಂದರ್ಥ. ।।೧೧।।

**ಅಥಾನ್ವಾಹಾರ್ಯಪಚನಾದುತ್ಥಿತೋ ಘೋರದರ್ಶನಃ ।**
**ಕೃತಾಂತ ಇವ ಲೋಕಾನಾಂ ಯುಗಾಂತಸಮಯೇ ಯಥಾ ।।೧೨।।**

**ಅಥ** ಆಹ್ವಾನ ಮಾಡಿದ ನಂತರವೇ, (ಇದರಿಂದ ಅವರ ಅವಂಧ್ಯ ಪ್ರತಿಜ್ಞೆ ಸೂಚಿತವಾಗುವದು). **ಅನ್ವಾಹಾರ್ಯಪಚನಾತ್** ದಕ್ಷಿಣಾಗ್ನಿಯಿಂದ **ಯುಗಾಂತ-ಸಮಯೇ** ಪ್ರಲಯಕಾಲದಲ್ಲಿ **ಯಥಾ** ಹೇಗೆ **ತಥಾ** ಹಾಗೆ **ಲೋಕಾನಾಂ** ಲೋಕಗಳ (ಜನರ) (**ಕ್ಷಯಾಯ**) ನಾಶಕ್ಕಾಗಿ **ಕೃತಾಂತ ಇವ** ಯಮನಂತೆ **ಘೋರದರ್ಶನಃ** ಭಯಂಕರವಾಗಿ ಕಾಣುವ **ಕಶ್ಚನ** ಒಬ್ಬನು **ಉತ್ಥಿತಃ** ಎದ್ದು ಬಂದನು. ಕೃತಾಂತ ಎಂದು

ಹೇಳಿದ್ದರಿಂದ ತ್ವಷ್ಟ್ರವು ಜಹಿ ಎಂದು ಹೇಳಿದ್ದು ನಾಲಿಗೆ ಮೇಲಿನ ಮಾತಲ್ಲ. ಕಿಂತು ಅವನ ಸಿದ್ಧಾಂತವೇ ಆಗಿತ್ತು. ಎಂದು ಶಚೀರಮಣ ಮರಣಪ್ರಯತ್ನವು ಮನಃಪೂರ್ವಕವಾಗಿತ್ತೆಂದು ಧ್ವನಿತವಾಗುವದು. ಇವಶಬ್ದವು ಏವಾರ್ಥಕವಾಗಿದೆ. 'ಕೃತಾಂತೋ ಯಮಸಿದ್ಧಾಂತಃ' ಎಂದು ಅಮರವಿದೆ. ।।೧೨।।

**ವಿಷ್ವಗ್ವಿವರ್ಧಮಾನಂ ತಮಿಷುಮಾತ್ರಂ ದಿನೇ ದಿನೇ ।**
**ದಗ್ಧಶೈಲಪ್ರತೀಕಾಶಂ ಸಂಧ್ಯಾಭ್ರಾನೀಕವಾಸಸಮ್ ।**
**ತಪ್ತತಾಮ್ರಶಿಖಾಶ್ಮಶ್ರುಂ ಮಧ್ಯಾಹ್ನಾರ್ಕೋಗ್ರಲೋಚನಮ್ ।।೧೩।।**

ಇಲ್ಲಿ ಐದು ಶ್ಲೋಕಗಳಿಗೆ ಸೇರಿ ಒಂದೇ ಅನ್ವಯ.

**ದಿನೇದಿನೇ** ಪ್ರತಿದಿನವು **ಇಷುಮಾತ್ರಂ** ಬಾಣ ಬಿಟ್ಟರೆ ಹೋಗಿ ಬೀಳುವಷ್ಟು ಬಾಣದಷ್ಟು ಎಂದು ಅರ್ಥ, ದೂರಪರಿಮಾಣ **ವಿಷ್ವಕ್** ಸುತ್ತಲೂ **ವಿವರ್ಧಮಾನಂ** ಬೆಳೆಯುವ **ದಗ್ಧಶೈಲಪ್ರತೀಕಾಶಂ** ಸುಟ್ಟುಹೋದ ಪರ್ವತದಂತೆ ಕಪ್ಪು ಬಣ್ಣ ಉಳ್ಳ **ಸಂಧ್ಯಾಭ್ರಾನೀಕವಾಸಸಂ** ಸಾಯಂಕಾಲದ ಮೋಡಗಳ ಮಾಲೆಯಂತೆ ಪಿಶಂಗ ಬಣ್ಣದ ಬಟ್ಟೆ ಉಳ್ಳ **ತಪ್ತತಾಮ್ರಶಿಖಾಶ್ಮಶ್ರುಂ** ಕಾದ ತಾಮ್ರದಂತೆ ಕೆಂಪಾಗಿರುವ ತಲೆ ಕೂದಲು ಮೀಸೆಗಳುಳ್ಳ **ಮಧ್ಯಾಹ್ನಾರ್ಕೋಗ್ರಲೋಚನಂ** ಮಧ್ಯಾಹ್ನದ ಸೂರ್ಯನಂತೆ ಕ್ರೂರವಾದ ಕಣ್ಣುಗಳುಳ್ಳ ।।೧೩।।

ಅಭ್ರಾನೀಕವಾಸಸಂ ಎಂದಾಗಲಿ ವರ್ಚಸಂ ಎಂದಾಗಲಿ ಪಾಠವಿದ್ದಾಗಲೂ ಅನೀಕಶಬ್ದವು ಕಲಹವಾಚಕವಾಗಿದೆ. ಮೋಡಗಳ ಸಂಘರ್ಷದಿಂದ ಕಾಂತಿಯು ಹೆಚ್ಚುತ್ತದೆ ಎಂದು ಭಾವ. ಸಮೂಹವೆಂದೂ ಅರ್ಥ. ।।೧೩।।

**ದೇದೀಪ್ಯಮಾನೋ ತ್ರಿಶಿಖೇ ಶೂಲ ಆರೋಪ್ಯ ರೋದಸೀ ।**
**ನೃತ್ಯಂತಮುನ್ನದಂತಂ ಚ ಚಾಲಯಂತಂ ಪದಾ ಮಹೀಮ್ ।।೧೪।।**

**ದೇದೀಪ್ಯಮಾನೇ** ಪ್ರಕಾಶಿಸುವ **ತ್ರಿಶಿಖೇ** ಮೂರು ಕೊನೆಗಳುಳ್ಳ **ಶೂಲೇ** ಶೂಲದಲ್ಲಿ (ತ್ರಿಶೂಲದಲ್ಲಿ) **ರೋದಸೀ** ದ್ಯಾವಾ-ಪೃಥವಿಗಳನ್ನು **ಆರೋಪ್ಯ** ಚುಚ್ಚಿಕೊಂಡು **ನೃತ್ಯಂತಂ** ಕುಣಿಯುತ್ತಿರುವ **ಉನ್ನದಂತಂ** ಗಟ್ಟಿಯಾಗಿ ಶಬ್ದ ಮಾಡುತ್ತಿರುವ **ಪದಾ** ಕಾಲಿನಿಂದ **ಮಹೀಂ** ಭೂಮಿಯನ್ನು **ಚಾಲಯಂತಂ** ನಡುಗಿಸುತ್ತಿರುವ, ।।೧೪।।

**ದರೀಗಂಭೀರವಕ್ತ್ರೇಣ ಪಿಬಂತಂ ಚ ನಭಸ್ತಲಮ್ ।**
**ಲಿಹಂತಂ ಜಿಹ್ವಯಾರ್ಕ್ಷಾಣಿ ಗ್ರಸಂತಂ ಭುವನತ್ರಯಮ್ ॥೧೫॥**

**ದರೀಗಂಭೀರವಕ್ತ್ರೇಣ** ಗುಹೆಯಂತೆ ಆಳವಾದ ಬಾಯಿಯಿಂದ **ನಭಸ್ತಲಂ** ಆಕಾಶವನ್ನೇ **ಪಿಬಂತಂ** ಪಾನ ಮಾಡುತ್ತಿರುವ ಅಥವಾ ಆಕಾಶದ ಕೆಳಭಾಗವನ್ನು ಎಂದರ್ಥ ಮಾಡಬಹುದು. 'ತಲಂ ಸ್ವರೂಪಾಧಾರಯೋಃ' ಎಂದು ವಿಶ್ವವಿದೆ. ನಭಃ ಪಿಬಂತಂ ಎಂದನ್ವಯ ಮಾಡಿ ಆ ನಭವು ಎಂತಹದು ಎಂದರೆ **ತಲಂ** ಇಂದ್ರನೀಲದಂತಿರುವ ಎಂದೂ ಅರ್ಥ ಹೇಳಬಹುದು. ತಲಂ ಇಂದ್ರನೀಲಂ ಎಂದು ಸುಧೆಯಲ್ಲಿ ಹೇಳಿದೆ. 'ಆಕಾಶೋ ನೀಲಿಮೋದೇತಿ' ಎಂದು ಶ್ರುತಿಯೂ ಇದೆ. **ಜಿಹ್ವಯಾ** ನಾಲಿಗೆಯಿಂದ **ಋಕ್ಷಾಣಿ** ನಕ್ಷತ್ರಗಳನ್ನು **ಲಿಹಂತಂ** ನೆಕ್ಕುತ್ತಿರುವ **ಭುವನತ್ರಯಂ** ಮೂರು ಲೋಕವನ್ನೂ **ಗ್ರಸಂತಂ** ನುಂಗುತ್ತಿರುವ, ॥೧೫॥

**ಮಹತಾ ರೌದ್ರದಂಷ್ಟ್ರೇಣ ಜೃಂಭಯಂತಂ ಮುಹುರ್ಮುಹುಃ ।**
**ವಿತ್ರಸ್ತಾ ದುದ್ರುವುರ್ಲೋಕಾ ವೀಕ್ಷ್ಯ ಸರ್ವೇ ದಿಶೋ ದಶ ॥೧೬॥**

**ಮುಹುಃ ಮುಹುಃ** ಮೇಲಿಂದ ಮೇಲೆ **ರೌದ್ರದಂಷ್ಟ್ರೇಣ** ಕ್ರೂರವಾದ ಕೋರೆ ಹಲ್ಲಿರುವ **ಮಹತಾ** (ಮುಖೇನ) ದೊಡ್ಡ ಬಾಯಿಯಿಂದ **ಜೃಂಭಯಂತಂ** ಆಕಳಿಸುತ್ತಿರುವ **ತಂ** ಆ ಬಂದ ವ್ಯಕ್ತಿಯನ್ನು **ವೀಕ್ಷ್ಯ** ನೋಡಿ **ಲೋಕಾಃ** ಜನರು **ವಿತ್ರಸ್ತಾಃ ಸಂತಃ** ಹೆದರಿದವರಾಗಿ **ಸರ್ವೇ** ಎಲ್ಲರೂ **ದಶ ದಿಶಃ** ಹತ್ತು ದಿಕ್ಕುಗಳಿಗೂ **ದುದ್ರುವುಃ** ಓಡಿದರು. ॥೧೬॥

'ಸ ಇಮಾನ್ ಲೋಕಾನಾವೃಣೋದ್ಯದಿಮಾನ್ ಲೋಕಾನಾವೃಣೋತ್ ತತ್ ವೃತ್ರಸ್ಯ ವೃತ್ರತ್ವಂ' ಎಂಬ ಶ್ರುತಿಯ ಅನುಮತಿಯಿಂದ ನಾಮನಿರ್ವಚನ ಮಾಡುವರು-

**ಯೇನಾವೃತಾ ಇಮೇ ಲೋಕಾಸ್ತಮಸಾ ತ್ವಾಷ್ಟ್ರಮೂರ್ತಿನಾ ।**
**ಸ ವೈ ವೃತ್ರ ಇತಿ ಪ್ರೋಕ್ತಃ ಪಾಪಃ ಪರಮದಾರುಣಃ ॥೧೭॥**

**ಯೇನ** ಯಾವ ಕಾರಣದಿಂದ **ಇಮೇ** ಈ **ಲೋಕಾಃ** ಲೋಕಗಳು **ತ್ವಾಷ್ಟ್ರಮೂರ್ತಿನಾ** ತ್ವಷ್ಟೃವಿನ ಯಾಗದಿಂದ ಹೊಂದಿದ ದೇಹ ಉಳ್ಳ **ತಮಸಾ** ತಮೋಗುಣಪ್ರಚುರನಾದ ಅಸುರನಿಂದ **ಆವೃತಾಃ** ಆವರಿಸಲ್ಪಟ್ಟವೋ ಆ

ಕಾರಣದಿಂದ **ಪರಮದಾರುಣಃ** ಅತ್ಯಂತಕ್ರೂರಿಯಾದ ಆದ್ದರಿಂದಲೇ **ಪಾಪಃ** ಪಾಪಿಯಾದ **ಸಃ** ಅವನು **ವೃತ್ರ ಇತಿ** ವೃತ್ರನೆಂದು **ಪ್ರೋಕ್ತಃ** ಹೇಳಲ್ಪಟ್ಟಿರುವನು. ॥೧೭॥

**ವಿಶಿಷ್ಟ ಅರ್ಥ**

**ತ್ವಾಷ್ಟ್ರಮೂರ್ತಿನಾ** ಎಂಬಲ್ಲಿ ಮೂರ್ತಿಃ ಮೂರ್ತಂ ತ್ವಾಷ್ಟ್ರಂ ಚ ತತ್ ಮೂರ್ತಂ ಚ ತ್ವಾಷ್ಟ್ರಮೂರ್ತಂ ತದಸ್ಯ ಅಸ್ತೀತಿ ತ್ವಾಷ್ಟ್ರಮೂರ್ತೀ ತೇನ ತ್ವಾಷ್ಟ್ರ ಮೂರ್ತಿನಾ ಎಂದು ವಿಗ್ರಹಮಾಡಬೇಕು. ತ್ವಾಷ್ಟ್ರೀ ಮೂರ್ತಿಃ ಯಸ್ಯ ಎಂದು ವಿಗ್ರಹ ಮಾಡಿದರೆ ತ್ವಾಷ್ಟ್ರೀಮೂರ್ತಿನಾ ಎಂದು ವೃದ್ಧಿನಿಮಿತ್ತ ಎಂದು ಪುಂವದ್ಭಾವನಿಷೇಧವಿದೆ ಎಂದು ತಿಳಿಯಬೇಕು. ತ್ವಷ್ಟೈವ ತ್ವಾಷ್ಟ್ರಃ ಸ್ವಾರ್ಥೇ ಅಣ್ ತ್ವಾಷ್ಟ್ರಾತ್ ಮೂರ್ತಿಃ ಯಸ್ಯ ತೇನ ಎಂದಾದರೂ ಮಾಡಬಹುದು. ತಮಸಾ ತಮೋಗುಣವಿದ್ದವನಂತೆ ಎಂದರ್ಥ. ಏಕೆಂದರೆ ಅಸುರಾವೇಶದಿಂದಲೂ ತಂದೆಯ ಆಗ್ರಹದಿಂದಲೂ ಅಸದಾಚಾರಿಯಾಗಿ-ದ್ದಾನಾದ್ದರಿಂದ ಕಶ್ಯಪಪುತ್ರನಾದರೂ ತಾಮಸನೇ ಅಸುರನು. ಶ್ರುತಿಯಲ್ಲಿ ಆವೃಣೋತ್ ಎಂದಷ್ಟೇ ಹೇಳಿದೆ. ತಮಸ್ಸನ್ನು ಹೇಳಿಲ್ಲ. ಈ ವಿಷಯ 'ನೀಚಾ ವಯಾ' ಎಂಬ ಋಗ್ಭಾಷ್ಯಟೀಕಾಗಳಲ್ಲಿ ಹೀಗೆ ಹೇಳಿದೆ. 'ವೃತ್ರೋ ಹ್ಯಭೂದ್ದನುಜಃ ಕಶ್ಯಪಾಚ್ಚ ಪಾಪಾತ್ಮಾಸೌ ವೈಷ್ಣವಸ್ತ್ವಷ್ಟ್ರುಜಾತಃ ।

ಇಲ್ಲಿ ಸಂದೇಹ. ದನುವು ಕಶ್ಯಪರ ಹೆಂಡತಿ. ವೃತ್ರನು ಕಶ್ಯಪ ಪುತ್ರನಲ್ಲ ಕಿಂತು ತ್ವಷ್ಟೃವಿನ ಮಗ, ಅಂದಮೇಲೆ, ದನುವು ವೃತ್ರ ಮಾತೆ ಹೇಗಾದಳು, ಎಂದರೆ ಹೇಳುವರು. ವೃತ್ರ ಇತಿ । ದ್ವೌ ವೃತ್ರೌ ತತ್ರೈಕಃ ಕಶ್ಯಪಾತ್ ದನುಜ ಅಭೂತ್ ದೈತ್ಯತ್ವಂ ಚ ತಾಮಸತ್ವಾತ್ । ಅವರಃ ತ್ವಷ್ಟೃಜಾತಃ ಇತ್ಯವಿರೋಧಃ । ಇಬ್ಬರು ವೃತ್ರರು ಒಬ್ಬನು ಕಶ್ಯಪರಿಂದ ದನುವಿನಲ್ಲಿ ಜನಿಸಿದವ ಅವನು ತಾಮಸನಾದ್ದರಿಂದ ದೈತ್ಯನು. ಮತ್ತೊಬ್ಬ ತ್ವಷ್ಟಾನ ಮಗ ಯಜ್ಞದಿಂದ ಅಗ್ನಿಯಲ್ಲಿ ಜನಿಸಿದವ. ಕಾರಣ ಯಾವ ವಿರೋಧವಿಲ್ಲ. ಎಂದು ಭಾವ. ಏಕೆ ಇಬ್ಬರೆಂದು ಕಲ್ಪಿಸಬೇಕು. ದನುಜ ಪುತ್ರನು ಪಾಪಾತ್ಮನೆಂದು 'ದೀರ್ಘತಮ ಅಶಯದಿಂದ್ರಶತ್ರುಃ' ಎಂದು ಶ್ರುತಿಯಲ್ಲಿ ಕೇಳಿ ಬರುತ್ತದೆ. ತ್ವಷ್ಟೃವಿನಿಂದ ಜನಿಸಿದವನು ವೈಷ್ಣವ ಪುಣ್ಯಾತ್ಮ ಎಂದು ಪ್ರಸಿದ್ಧ. ಆದ್ದರಿಂದ ಇಬ್ಬರೆಂದು ಕಲ್ಪಿಸಬೇಕು. 'ಅಹೋ ಧರ್ಮಿಷ್ಠತಾ ತಸ್ಯ ವೃತ್ರಸ್ಯಾಮಿತತೇಜಸಃ । ಅಸ್ಯ ವಿಜ್ಞಾನಮತುಲಂ ವಿಷ್ಣುಭಕ್ತಿಶ್ಚ ತಾದೃಶೀ । ಎಂದು ಮೋಕ್ಷಧರ್ಮದಲ್ಲಿ ಹೇಳಿದೆ. ಕಾರಣ ತ್ವಾಷ್ಟ್ರನು ವೈಷ್ಣವ. ವೃಣೋತೀತಿ ವೃತ್ರಃ ವೃತ್ರಇಾ ಔಣಾದಿಕ ಪ್ರತ್ಯಯ.

'ಅಹನ್ ವೃತ್ರಂ' ಎಂಬ ಋಕ್ ಟೀಕಾದಲ್ಲಿ ವೃಣೋತೇಃ ರೂಪಂ ಎಂದು ಹೇಳಿದೆ. 'ವೃತ್ರಂ ಜಘನ್ವಾಂ ಅಪತದ್ವಾರ' ಎಂಬ ಋಗ್ಭಾಷ್ಯ-ಟೀಕಾದಲ್ಲಿ, ವೃತ್ರಂ ಹತ್ವಾ ತಮಹಿಂ ಚಾಶು ಶುಕ್ರಃ ತದಾ ಶಕ್ರೋ ವೃತ್ರಂ ಜಘನ್ವಾನ್ ಹತ್ವಾ ಇತಿ ಯಾವತ್ । ಅಹಿಂ ಚ ಹತ್ವಾ ತಥೋತ್ತರಾಸೂರಧರಃಪುತ್ರ ಆಸೀದ್ದಾನುಃ ಶಯೇ ಸಹ ವತ್ಸಾ ನ ಧೇನುಃ । ದಾನುಃ ವೃತ್ರಮಾತಾ ದನುಃ ಸಾ ತತ್ಸುತೋ ಅಹಿಶ್ಚ ತಾಸಾಂ. ವೃತ್ರಸ್ಯ ಸುತೋ ಅಹಿಃ ಯತ್ಸುತಃ ಶೀರ್ಬಭೂವ ಎಂದು ತಂದೆ ಬಿದ್ದ ಮೇಲೆ ಶೇತಾಽಭವತ್ ಎಂದು ವ್ಯಾಖ್ಯಾನ ಮಾಡಿದ್ದರಿಂದ ಇವನು ಬೇರೆ. ಅವನಿಂದ ಭಿನ್ನನೆಂದು ತಿಳಿಯುವದು.

ಕಾರಣ ತನ್ನಲ್ಲಿ ಪಾಪಿಯು ಪ್ರವೇಶಿಸಿದುದರಿಂದ ಇವನು ಪಾಪಿ. ಪರಂ ಅದಾರುಣಃ ಎಂದು ಭೇದ. ಆ ವೃತ್ರನಂತೆ ಅತ್ಯಂತ ತಮೋಯೋಗ್ಯ ಕ್ರೂರನಲ್ಲ. ಪರಮದಃ ಮಹಾಮದ ಉಳ್ಳವನು ಮತ್ತು ಅರುಣನು ಕೋಪದಿಂದ ದೇಹ ಕೆಂಪಾಗಿರುವವನು. ಇಲ್ಲಿಯೇ ಮುಂದೆ ಪರೀಕ್ಷಿತ ಪ್ರಶ್ನೋತ್ತರ ಪ್ರಸಂಗದಲ್ಲಿ ಮತ್ತು ಇಂದ್ರವೃತ್ರ ಸಂವಾದದಲ್ಲಿಯೂ ತ್ವಷ್ಟೃಪುತ್ರನಾದ ವೃತ್ರನ ಯೋಗ್ಯತೆ ಸ್ಪಷ್ಟವಾಗುತ್ತದೆ. ಆದ್ದರಿಂದ ವೈಷ್ಣವತೆಯನ್ನು ತಿಳಿಯುವದು ಎನ್ನುತ್ತಾರೆ ಶ್ರೀಪಾದಂಗಳವರು. ।।೧೭।।

**ತಂ ನಿಜಘ್ನುರಭಿದ್ರುತ್ಯ ಸಗಣಾ ವಿಬುಧರ್ಷಭಾಃ ।**
**ಸ್ವೈಃ ಸ್ವೈರ್ದಿವ್ಯಾಸ್ತ್ರಶಸ್ತ್ರೌಘೈಃ ಸೋಽಗ್ರಸತ್ತಾನಿ ಕೃತ್ಸ್ನಶಃ ।।೧೮।।**

**ಸಗಣಾಃ** ತಮ್ಮ ತಮ್ಮ ಸಮೂಹದಿಂದ ಕೂಡಿದ **ವಿಬುಧರ್ಷಭಾಃ** ಶ್ರೇಷ್ಠ ದೇವತೆಗಳು **ಅಭಿದ್ರುತ್ಯ** ಆ ವೃತ್ರಾಸುರನನ್ನು ಎದುರಿಸಿ ಹೋಗಿ **ಸ್ವೈಃ ಸ್ವೈಃ** ತಮ್ಮ ತಮ್ಮ **ದಿವ್ಯಾಸ್ತ್ರಶಸ್ತ್ರೌಘೈಃ** ಶ್ರೇಷ್ಠವಾದ ಅಸ್ತ್ರ ಮತ್ತು ಶಸ್ತ್ರಗಳ ಸಮೂಹದಿಂದ **ತಂ** ವೃತ್ರಾಸುರನನ್ನು **ನಿಜಘ್ನುಃ** ಹೊಡೆದರು. **ಸಃ** ಅವನು **ತಾನಿ** ಅವುಗಳನ್ನು **ಕೃತ್ಸ್ನಶಃ** ಎಲ್ಲವನ್ನೂ **ಅಗ್ರಸತ್** ನುಂಗಿದನು. ।।೧೮।।

**ವಿಶಿಷ್ಟ ಅರ್ಥ**

ಓಘಾಃ ಪರಂಪರಾಃ 'ಓಘಃ ಪರಂಪರಾಯಾಂ' ಸ್ಯಾತ್ ಎಂದು ವಿಶ್ವವಿದೆ. ಶಸ್ತ್ರಾಣಾಂ ಓಘಾಃ ಯೇಷಾಂ ತಾನಿ ಶಸ್ತ್ರೌಘಾನಿ ದಿವ್ಯಾಸ್ತ್ರಾಣಿ ದಿವ್ಯಾನಿ ಚ ತಾನಿ ಅಸ್ತ್ರಾಣಿ ಚ ಎಂದು ವಿಗ್ರಹ. ಇದರಿಂದ ಮುಂದೆ ತಾನಿ ಎಂದು ನಪುಂಸಕಲಿಂಗದಿಂದ ಓಘ ಪರಾಮರ್ಶ ಹೇಗೆ ಎಂಬ ಶಂಕೆ ನಿರಾಕೃತವಾಯಿತು. ।।೧೮।।

**ತತಸ್ತೇ ವಿಸ್ಮಿತಾಃ ಸರ್ವೇ ವಿಷಣ್ಣಾ ಗ್ರಸ್ತತೇಜಸಃ ।**
**ಪ್ರತ್ಯಂಚಮಾದಿಪುರುಷಮುಪತಸ್ಥುಃ ಸಮಾಹಿತಾಃ ॥೧೯॥**

**ತತಃ** ವೃತ್ರಾಸುರನು ಆಯುಧಗಳನ್ನು ನುಂಗಿದ ಮೇಲೆ **ವಿಸ್ಮಿತಾಃ** ಆಶ್ಚರ್ಯಚಕಿತರಾಗಿ **ತೇ ಸರ್ವೇ** ಆ ಎಲ್ಲ ದೇವತೆಗಳೂ **ವಿಷಣ್ಣಾಃ** ದೀನರಾಗಿ **ಗ್ರಸ್ತತೇಜಸಃ** ಕಳೆಗುಂದಿದವರಾಗಿ **ಭ್ರಷ್ಟಚೇತಸಃ** ಏನು ಮಾಡಬೇಕೆಂದು ತಿಳಿಯದೇ, (ಪರಾಕ್ರಮ ಕಳೆದುಕೊಂಡ) **ಸಮಾಹಿತಾಃ** ಶ್ರೀಹರಿಯಲ್ಲಿಯೇ ಮನಸಿಟ್ಟವರಾಗಿ **ಪ್ರತ್ಯಂಚಂ** ಬಿಂಬರೂಪಿಯಾದ ಅಂತರ್ಯಾಮಿಯಾದ **ಆದಿ ಪುರುಷಂ** ಸೃಷ್ಟಿಯ ಪ್ರಾರಂಭದಲ್ಲಿ ಭಕ್ತರ ಅನುಗ್ರಹಕ್ಕಾಗಿ ಸ್ವೀಕರಿಸಿದ ಪುರುಷರೂಪವನ್ನು **ಉಪತಸ್ಥುಃ** ಉಪಾಸಿಸಿದರು. ಶ್ರೀಹರಿಯು ಸರ್ವತ್ರ ವ್ಯಾಪ್ತನಾದುದರಿಂದ ಎಲ್ಲಿಯೂ ಹೋಗುವ ಸಂಭವ ಇಲ್ಲದ್ದರಿಂದ ಅಲ್ಲಿಯೇ ಇದ್ದು ಉಪಾಸಿಸಿದರೆಂದು ಭಾವ. ॥೧೯॥

**ದೇವಾ ಊಚುಃ -**

**ವಾಯ್ವಂಬರಾಗ್ನ್ಯಪ್‌ಕ್ಷಿತಯಸ್ತ್ರಿಲೋಕಾ**
**ಬ್ರಹ್ಮಾದಯೋ ಯೇ ವಯಮುದ್ವಿಜಂತಃ ।**
**ಹರಾಮ ಯಸ್ಮೈ ಬಲಿಮಂತಕೋಽಸೌ**
**ಬಿಭೇತಿ ಯಸ್ಮಾದರಣಂ ತತೋ ನಃ ॥೨೦॥**

**ವಾಯು** ಗಾಳಿ **ಅಂಬರ** ಆಕಾಶ **ಅಗ್ನಿ** ಬೆಂಕಿ **ಅಪ್** ನೀರು **ಕ್ಷಿತಯಃ** ಭೂಮಿಗಳ ಅಭಿಮಾನಿಗಳು **ಬ್ರಹ್ಮಾದಯಃ** ಬ್ರಹ್ಮಾದಿಗಳು **ಯೇ** ಯಾವ **ತ್ರಿಲೋಕಾಃ** ಮೂರು ಲೋಕಗಳು **ತೇ ವಯಂ** ಆ ನಾವು **ಉದ್ವಿಜಂತಃ ಸಂತಃ** ಉದ್ವೇಗಗೊಂಡವರಾಗಿ **ಯಸ್ಮೈ** ಯಾವನಿಗೆ **ಬಲಿಂ** ಪೂಜೆಯನ್ನು **ಹರಾಮ** ಮಾಡುವೆವೋ **ಅಸೌ** ಈ **ಅಂತಕಃ** ಮೂಲಪ್ರಕೃತಿಯೂ ದುರ್ಗಾದಿಗಳ ನಾಮಗಳಿಂದ ಕರಿಸಿಕೊಳ್ಳುವವೋ **ಯಸ್ಮಾತ್** ಯಾವ ಮಹಾ ಅಂತಕನಾದ ಶ್ರೀಹರಿಯಿಂದ **ಬಿಭೇತಿ** ಹೆದರುವಳಂತೆ ಅವನ ವಶದಲ್ಲಿರುವಳೋ **ತತಃ** ಆ ಕಾರಣದಿಂದ **ಸಃ** ಶ್ರೀಹರಿಯು **ನಃ** ನಮಗೆ **ಅರಣಂ ಅಸ್ತು** ರಕ್ಷಕನಾಗಿರಲಿ 'ಅಂತಕಾಯ' ಎಂಬ ಪಾಠದಲ್ಲಿ ದುರ್ಗಾರೂಪದಿಂದ ಸರ್ವಸಂಹಾರಕನಾದ್ದರಿಂದ ಅಂತಕ ಶಬ್ದವಾಚ್ಯನಾದವನಿಗೆ ಶ್ರೀತತ್ವನಿಯಾಮಕನಿಗೆ ಎಂದರ್ಥ.

ಮೇಲಿನ ಶ್ಲೋಕದಲ್ಲಿ ಯಮದೇವರೇ ಬ್ರಹ್ಮಾದಿಗಳಿಗೆ ಭಯ ಪಡಿಸುವರು. ಶರಣು ಹೊಂದುವ ಭಗವಂತನಿಂದ ಭೀತರು ಎಂದು ತೋರುವದು. ಕಾರಣ ಪ್ರಮಾಣದಿಂದ ನಿರಾಕರಿಸುವರು.

ತಾತ್ಪರ್ಯ

**ಕಾಲೋಽಂತಕಃ ಪ್ರಧಾನಂ ಚ ಮೃತ್ಯುರವ್ಯಕ್ತಮಿತ್ಯಪಿ ।**
**ಉಚ್ಯತೇ ಪ್ರಕೃತಿಃ ಸೂಕ್ಷ್ಮಾ ಶ್ರೀಭೂದುರ್ಗೇತಿನಾಮಭಿಃ ॥**

**ಸೈವ ಬ್ರಹ್ಮಾದಿಭಯದಾ ವಿಷ್ಣೋಸ್ತು ವಶವರ್ತಿನೀ ।**
**ಅಭಯಾಽಪಿ ಬಿಭೇತೀವ ತದ್ವಶತ್ವಾದುದೀರ್ಯತೇ ॥ -ಇತಿ ತು ಮಾಹಾತ್ಮ್ಯೇ**

ಸೂಕ್ಷ್ಮಪ್ರಕೃತಿಗೆ ಚಿತ್ ಪ್ರಕೃತಿಯು ಅಭಿಮಾನಿನಿಯಾಗಿದ್ದಾಳೆ. ಶ್ರೀ-ಭೂ- ದುರ್ಗಾ ಎಂಬ ನಾಮಗಳಿಂದ ಮತ್ತು ಕಾಲ-ಅಂತಕ-ಪ್ರಧಾನ-ಮೃತ್ಯು-ಅವ್ಯಕ್ತ ಎಂಬ ನಾಮಗಳಿಂದಲೂ ಹೇಳಲ್ಪಡುತ್ತಾಳೆ. ಅವಳೇ ಬ್ರಹ್ಮಾದಿಗಳಿಗೆ ಭಯಪ್ರದಳು. ಭಯರಹಿತಳಾದರೂ ಶ್ರೀಹರಿಯ ಅಧೀನಳಾದುದರಿಂದ ಹೆದರುವವಳು ಎಂಬುದಾಗಿ ಕರೆಯಲ್ಪಡುವಳು. ತದ್ವಶವರ್ತಿನೀತಿ ಬ್ರಹ್ಮಾದಿಭಯದಾ ಕುತಃ ತದ್ವಶತ್ವಾತ್ ಎಂದು ಅನ್ವಯ. ಬ್ರಹ್ಮಾದಿಭಯದಾ ಎಂಬಲ್ಲಿಯ ಬ್ರಹ್ಮಪದಾರ್ಥಾನ್ವಯ.

**ತೇ** ಬ್ರಹ್ಮಾದಿಗಳು **ವಶೇ** ಅಧೀನದಲ್ಲಿ ಯಸ್ಯಾಃ ಸಾ ತದ್ವಶಾ ತಸ್ಮಾತ್ ಯಾವಳಿಗೆ ಇರುವರೋ ಅವಳು ಎಂದರ್ಥ. ತ್ವೇ ಚ ಎಂದು ಹ್ರಸ್ವವಾಗಿದೆ. ಸ ಚ ತಚ್ಚ ತೌ ಅಥವಾ ತೇ, ತಯೋಃ ವಶತ್ವಾತ್ ಭಗವಂತ ಮತ್ತು ಅವ್ಯಕ್ತತತ್ತ್ವಾಭಿಮಾನಿಯಾದ ಲಕ್ಷ್ಮೀದೇವಿಯ ಅಧೀನವಾದ್ದರಿಂದ ಎಂದರ್ಥ. ಈ ರೀತಿ ವ್ಯಾಖ್ಯಾನ ಮಾಡಿದ್ದರಿಂದ ವಶವರ್ತಿನೀ ಮತ್ತು ತದ್ವಶತ್ವಾತ್ ಎಂಬವುಗಳಲ್ಲಿ ಒಂದು ಹೆಚ್ಚು ಎಂಬ ಮಾತು ಅರ್ಥವಿಲ್ಲದ್ದು. ರಮಾರಮಾರಮಣರೀರ್ವರ ಭಯದಿಂದ ಎಲ್ಲರೂ ಯುಕ್ತರಾಗಿದ್ದಾರೆ ಎಂಬ ಅರ್ಥವು ತು ಶಬ್ದದಿಂದ ಸೂಚಿತವಾಗುತ್ತದೆ. ಮೇಲೆ ಹೇಳಿದ ವಾಯ್ವಾದ್ಯಭಿಮಾನಿಗಳೆಲ್ಲರೂ ರಮೆಯ ಅಧೀನರೆಂಬಲ್ಲಿ ಯಾವ ವಿಶೇಷವಿಲ್ಲದ್ದರಿಂದ ಎಂದು ತಿಳಿಸಲು ಯಾವ ಕ್ರಮವನ್ನೂ ಅನುಸರಿಸಿಲ್ಲ. **ತತೋನಃ** ವ್ಯಾಪ್ತನಾದ ಭಗವಂತನಿಂದ ಊನಳಾದ ಅವ್ಯಾಪ್ತ ಎಂದರ್ಥ. ।।೨೦।।

ಇತರರನ್ನು ಆಶ್ರಯಿಸುವವರು ಅಜ್ಞರು. ಆದ್ದರಿಂದ ಭಗವಂತನನ್ನೇ ಆಶ್ರಯಿಸುವರು ಎಂದು ಹೇಳುವರು-

**ಅವಿಸ್ಮಿತಂ ತಂ ಪರಿಪೂರ್ಣಕಾಮಂ**
**ಸ್ವೇನೈವ ಲಾಭೇನ ಸಮಂ ಪ್ರಶಾಂತಮ್ ।**
**ವಿನೋಪಸರ್ಪತ್ಯಪರಂ ಹಿ ಬಾಲಿಶಃ**
**ಶ್ವಲಾಂಗುಲೇನಾತಿಪಿಪರ್ತಿ ಸಿಂಧುಮ್ ॥೨೦॥**

**ಸ್ವೇನ ಏವ ಲಾಭೇನ** ತನ್ನ ಸ್ವರೂಪಾನಂದಾನುಭವದಿಂದಲೇ **ಪರಿಪೂರ್ಣಕಾಮಂ** ಸಂಪೂರ್ಣವಾದ ಅಭಿಲಾಷೆಯುಳ್ಳ ಆದ್ದರಿಂದಲೇ **ಅವಿಸ್ಮಿತಂ** ಕುತೂಹಲರಹಿತವಾದ, ಅಹಂಕಾರವಿಲ್ಲದ ಆದ್ದರಿಂದಲೇ **ಪ್ರಶಾಂತಂ** ಸಮುದ್ರದಂತೆ ಸ್ತಿಮಿತನಾದ, ವಾಗಾದಿಶೂನ್ಯನಾದ, ರಾಗಾದಿಗಳಿಲ್ಲದ **ಸಮಂ** ಅಂತರ್ಯಾಮಿ ಮುಂತಾದ ಎಲ್ಲ ರೂಪಗಳಲ್ಲಿಯೂ ಏಕಪ್ರಕಾರನಾದ, ಅವರವರ ಯೋಗ್ಯತಾನುಸಾರ ಫಲಪ್ರದನಾದ, ನಿರ್ದೋಷನಾದ **ತಂ** ಲಕ್ಷ್ಮೀ-ಬ್ರಹ್ಮಾದಿಗಳಿಂದ ವಂದ್ಯನಾದ ಶ್ರೀಹರಿಯನ್ನು **ವಿನಾ** ಬಿಟ್ಟು **ಯಃ** ಯಾವನು **ಅಪರಂ** ಆವೃತರಾದ, ಅತಂತ್ರ, ಅನುತ್ತಮರಾದ, ಭಿನ್ನರಾದ **ಉಪಸರ್ಪತಿ** ಇವನೇ ಸ್ವತಂತ್ರವಾಗಿ ತಾರಕನೆಂದು ತಾರಕಮಾರಕನನ್ನು (ಸ್ಕಂದ) ಆರಾಧಿಸುವರೋ, ರಕ್ಷಣೆಗಾಗಿ ಅವರು **ಸಿಂಧುಂ** ಸಮುದ್ರವನ್ನು **ಶ್ವಲಾಂಗುಲೇನ** ನಾಯಿಯ ಬಾಲ ಹಿಡಿದುಕೊಂಡು **ಅತಿಪಿಪರ್ತಿ** ದಾಟಲು ಇಚ್ಛಿಸುವನೋ ಅವನಂತೆ **ಬಾಲಿಶಃ** ಮೂರ್ಖನು.

'ಅಪಿ ಮಾಷಂ ಮಷಂ ಕುರ್ಯಾತ್ ಛಂದೋಭಂಗಂ ನ ಕಾರಯೇತ್' ಎಂದಿರುವುದರಿಂದ ಲಾಂಗುಲ ಎಂದಿದ್ದಾರೆ. ಲಾಂಗೂಲವೆಂದು ತಿಳಿಯಬೇಕು. ॥

ಶ್ರೀಹರಿಯನ್ನು ಶರಣು ಹೊಂದಿದವನು ಸಮುದ್ರದಂತಿರುವ ವಿಪತ್ತನ್ನು ಪರಿಹರಿಸಿಕೊಂಡದ್ದು ಕಂಡಿದ್ದರೆ ಶ್ರೀಹರಿಯನ್ನು ಬಿಟ್ಟು ಬೇರೆ ಯಾರನ್ನು ಶರಣು ಹೋಗುವುದು ಬಾಲಿಶತನವೆಂದು, ನಾಯಿಯ ಬಾಲ ಹಿಡಿದು ಸಮುದ್ರವನ್ನು ದಾಟ ಬಯಸುವವನಂತೆ ಎಂದು ಪರಿಹಾಸ ಮಾಡಿದ್ದು ಸತ್ಯವಾಗುತ್ತಿತ್ತು. ಹಾಗಿಲ್ಲವಲ್ಲ ಎಂದರೆ ಸತ್ಯವ್ರತನೇ ಇದಕ್ಕೆ ಉದಾಹರಣೆ ಎಂದು ಹೇಳುವರು-

**ಯಸ್ಯೋರುಶೃಂಗೇ ಜಗತೀಂ ಸ್ವನಾವಂ**
**ಮನುರ್ಯಥಾಬದ್ಧ್ಯ ತತಾರ ದುರ್ಗಮ್ ।**
**ಸ ಏವ ನಸ್ತ್ರಾಷ್ಟ್ರಭಯಾದ್ ದುರಂತಾತ್**
**ತ್ರಾತಾಶ್ರಿತಾನ್ ವಾರಿಚರೋऽಪಿ ನೂನಮ್ ॥೨೧॥**




**ಮನುಃ** ವೈವಸ್ವತಮನುವು ಸತ್ಯವ್ರತರಾಜನು **ಯಸ್ಯ** ಯಾವ ಮತ್ಸ್ಯರೂಪಿಯಾದ ಶ್ರೀಹರಿಯ **ಉರುಶೃಂಗೇ** ದೊಡ್ಡ ಕೋಡಿನಲ್ಲಿ **ಜಗತೀಂ** ಭೂಮಯವಾದ **ಸ್ವನಾವಂ** ತಮ್ಮ ಮನೋರಥದಿಂದ ಕ್ಲೃಪ್ತವಾದ ದೋಣಿಯನ್ನು, ಭಗವಂತನೇ ನಿರ್ಮಾಣಮಾಡಿ ಕಳಿಸಿದ ನೌಕೆಯನ್ನು ಎಂದರ್ಥ. 'ಉಪಸ್ಥಾಸ್ಯತಿ ನೌಃ ಕಾಚಿದ್ವಿಶಾಲಾ ತ್ವಾಂ ಮಯೇರಿತಾ' ಎಂದು ಅಷ್ಟಮ ಸ್ಕಂಧದಲ್ಲಿ ಹೇಳುವರು. **ಯಥಾ** ದೃಢವಾಗಿ **ಆಬಧ್ಯ** ಹಾವಿನಿಂದ ಕಟ್ಟಿ, 'ನಿಬಧ್ನೀಹಿ ಮಹಾಹಿನಾ' ಎಂದು ಇದನ್ನೂ ಅಷ್ಟಮ ಸ್ಕಂಧದಲ್ಲಿ ಹೇಳಿದೆ. **ದುರ್ಗಂ** ಬೇರೆ ಉಪಾಯದಿಂದ ದಾಟಲು ಅಶಕ್ಯವಾದ ಅವಾಂತರ ಪ್ರಲಯವೆಂಬ ಕಷ್ಟವನ್ನು **ತತಾರ** ದಾಟಿದನೋ **ನೂನಂ** ನಿಶ್ಚಯವಾಗಿ **ಅಪಿ** ಈಗಲೂ **ಸಃ ವಾರಿಚರಃ ಏವ** ಆ ಮತ್ಸ್ಯರೂಪಿಯೇ **ಆಶ್ರಿತಾನ್** ಯಾವಾಗಲೂ ಅವನನ್ನೇ ಸೇವಿಸಿಕೊಂಡಿರುವ **ನಃ** ನಮ್ಮನ್ನು **ದುರಂತಾತ್** ಕೊನೆಯಿಲ್ಲದ, (ದಾಟಲಾಗದ) **ತ್ವಾಷ್ಟ್ರಭಯಾತ್** ತ್ವಷ್ಟೃವಿನ ಯಾಗದಿಂದ ಜನಿಸಿದ ವೃತ್ರಾಸುರನ ಭಯದಿಂದ **ತ್ರಾತಾ ಅಸ್ತು** ರಕ್ಷಕನಾಗಲಿ ಅಥವಾ **ಯಥಾ** ಹೇಗೆ **ತತಾರ** ದಾಟಿದನೋ **ತಥಾ** ಹಾಗೆ **ಆಶ್ರಿತಾನ್** ದಾಟಲು ಆಶ್ರಯಿಸಿದ ನಮ್ಮನ್ನು, ಎಂದಾದರೂ ಅರ್ಥ **ನೂನಂ** ನಿಶ್ಚಯವಾಗಿ **ತ್ರಾತಾ** ರಕ್ಷಿಸುವನು ಎಂದೂ ಅರ್ಥ ಮಾಡಿರುವರು. ಬೇರೆ ಅವತಾರಗಳಿರುವಾಗ ವಾರಿಚರನನ್ನೇ ಏಕೆ ಪ್ರಾರ್ಥಿಸಿದ್ದು ಎಂದರೆ, ಅಗ್ನಿಯಿಂದ ಹುಟ್ಟಿ ಬಂದ ದುಷ್ಟವಾದ ಭೂತದ ಘಾತವು ನೀರಿನಲ್ಲಿ ಉದಯಿಸಿದವನ ದಯೋದಯದಿಂದಲೇ ಸಾಧ್ಯವಾಗುವುದು ನ್ಯಾಯವೆಂದು ಇವರಿಂದ ಅವನ ಪರಿಚರ್ಯೆಯು ಆಚರಿಸಲ್ಪಟ್ಟಿತು ಎಂದು ತಿಳಿಯಬೇಕು. ನೀರಚರನೆಂದು ಹೇಳದೆ ವಾರಿಚರ ಎಂದು ಹೇಳುವುದರಿಂದ ಈಗ ಅವನಲ್ಲಿ ಇದ್ದು ಅವನ ತೇಜಸ್ಸನ್ನು ಉತ್ತೇಜಿಸುವವನು ಇವನೇ ಎಂದೂ ಹೇಳಿರುವರು. ವಾ ಅರಿಚರಃ ಶತ್ರುವಿನಲ್ಲಿಯೂ ಸಂಚರಿಸುವ ಎಂದರ್ಥ. ವಾ ಸಮುಚ್ಚಯಾರ್ಥಕ (ಅರಿಚರಃ ವಾ ಅರಿಚರೋಽಪಿ ಎಂದು ಸಮುಚ್ಚಯ) ।।೨೨।।

ಈ ಮುಂದೆ ಹೇಳುವ ಕಾರಣದಿಂದಲೂ ಶ್ರೀಹರಿಯ ಅನುಗ್ರಹವಿಲ್ಲದೇ ಈ ಭಯವನ್ನು ಕಳೆದುಕೊಳ್ಳುವದು ಅಸಾಧ್ಯವೇ ಎಂಬ ಅಭಿಪ್ರಾಯದಿಂದ ಸ್ತೋತ್ರಮಾಡುತ್ತಾರೆಂದು ಹೇಳುತ್ತಾರೆ-

**ಪುರಾ ಸ್ವಯಂಭೂರಪಿ ಸಂಯಮಾಂಭಸ್ಯು-**
**ದೀರ್ಣವಾತೋರ್ಮಿರವೈಃ ಕರಾಲೇ ।**

ಏಕೋಽರವಿಂದಾತ್ ಪತಿತಸ್ತತಾರ
ತಸ್ಮಾದ್ಭಯಾದ್ ಯೇನ ಸ ನೋಽಸ್ತು ಪಾರಃ ॥೨೩॥

**ಪುರಾ** ಸೃಷ್ಟಿಯ ಪ್ರಾರಂಭದಲ್ಲಿ **ಉದೀರ್ಣವಾತೋರ್ಮಿರವೈಃ** ಪ್ರಕೃತ್ಯಾತ್ಮಕವಾದ ವಾಯುವಿನಿಂದ ಎದ್ದಿರುವ ತೆರೆಗಳ ಶಬ್ದಗಳಿಂದ **ಕರಾಲೇ** ಭಯಂಕರವಾದ **ಸಂಯಮಾಂಭಸಿ** ಪ್ರಳಯಕಾಲದ ನೀರಿನಲ್ಲಿ ಇರುವ **ಅರವಿಂದಾತ್** ಪ್ರಕೃತ್ಯಾತ್ಮಕ ಕಮಲದಿಂದ **ಪತಿತಃ** ಹುಟ್ಟಿದ **ಏಕಃ** ಏಕಾಕಿಯಾದ ಆದ್ದರಿಂದಲೇ ಭಯವನ್ನು ತೋರಿದ **ಸ್ವಯಂಭೂಃ ಅಪಿ** ಬ್ರಹ್ಮದೇವರೂ ಕೂಡಾ **ತಸ್ಮಾತ್ ಭಯಾತ್** ಆ ಭಯದಿಂದ **ಯೇನ** ಯಾವ ಶ್ರೀಹರಿಯಿಂದ **ತತಾರ** ದಾಟಿದರೋ **ಸಃ** ಬ್ರಹ್ಮದೇವರ ಭಯ ಪರಿಹರಿಸಿದ ಶ್ರೀಹರಿಯು **ನಃ** ನಮಗೆ **ಪಾರಃ ಅಸ್ತು** ಈ ವೃತ್ರಾಸುರನ ಭಯಸಮುದ್ರವನ್ನು ದಾಟಿಸುವವನಾಗಲಿ. ॥

ಈ ಶ್ಲೋಕದಲ್ಲಿ ನೀರು, ಗಾಳಿ, ಕಮಲ ಮುಂತಾದವು ಕೇವಲ ಜಡವಾದವು ಮಾತ್ರ ಎಂಬ ಮಾತನ್ನು ನಿರಾಕರಿಸಲು ಮಾನತೀರ್ಥರು ಮಾನ ಹೇಳುವರು-

ತಾತ್ಪರ್ಯ

ಯತ್ರ ವಾಯೂದಪದ್ಮಾದಿರೂಪೇಣ ಪ್ರಕೃತಿಃ ಸ್ಥಿತಾ ।
ಏಕಸ್ತತ್ರಾಬಿಭೇದ್ ಬ್ರಹ್ಮಾ ವಿಚಾರ್ಯ ಭಯಮತ್ಯಗಾತ್ ।
ಅಂತರ್ಗತೋ ಹರಿಸ್ತಸ್ಯ ಧ್ಯಾತೋ ಭಯಮಪಾನುದತ್ ॥ಇತಿ ಚ

ಭವಿಷ್ಯತಾಂ ಜನಾನಾಂ ತು ಸ್ವಭಾವಾನಾಂ ಪ್ರಸಿದ್ಧಯೇ ।
ಜ್ಞಾನಾದಿಗುಣಪೂರ್ಣಸ್ಯ ಬ್ರಹ್ಮಣೋಽಪಿ ಕ್ಷಣಾರ್ಧಗಾಃ ।
ಭಯಾದಿಕಾ ಭವಂತೀವ ಕಥಂ ತಸ್ಮಿನ್ ಸ್ಥಿರಾಲಯಾಃ ॥ಇತಿ ಚ

ಭಗವತ್ಪ್ರೀತಯೇ ನಿತ್ಯಂ ಬ್ರಹ್ಮಣೋ ಯೇ ಭಯಾದಯಃ ।
ನ ವೃಥಾ ತಸ್ಯ ಭಾವಃ ಸ್ಯಾತ್ ಕಶ್ಚಿತ್ ತೇಽಪಿ ಕ್ಷಣಾರ್ಧಗಾಃ ।
ಅಜ್ಞಾನಂ ಚ ಚತುರ್ವಾರಂ ದ್ವಿವಾರಂ ಭಯಮೇವ ಚ ।

ಶೋಕೋಽಪಿ ತಾವನ್ನಾನ್ಯತ್ರ ಕದಾಚಿತ್ ಬ್ರಹ್ಮಣೋ ಭವೇತ್ ।
ತತ್ರಾಽಪಿ ಭಗವತ್ಪ್ರೀತ್ಯಾ ಉನ್ನತ್ಯೈವಾಸ್ಯ ತದ್ಭವೇತ್ ॥ಇತಿ ಬ್ರಹ್ಮತರ್ಕೇ

ಯಾವ ಲಯಕಾಲದಲ್ಲಿ ಗಾಳಿ, ನೀರು, ಪದ್ಮ, ತೆರೆ ಶಬ್ದ ಎಲ್ಲವುಗಳ ರೂಪದಿಂದ ಲಕ್ಷ್ಮೀದೇವಿಯೇ ಇದ್ದಳು. ಆಗ ಚತುರ್ಮುಖ ಬ್ರಹ್ಮನು ಒಬ್ಬನೇ ಇದ್ದುದರಿಂದ

ಭಯ ಪಟ್ಟನು. ಭಗವಂತನನ್ನು ಧ್ಯಾನ ಮಾಡಿ ಭಯವನ್ನು ಕಳೆದುಕೊಂಡನು. ಅಂದರೆ ಅವನಲ್ಲಿರುವ ಶ್ರೀಹರಿಯು ಅವನಿಂದ ಧ್ಯಾನಿಸಲ್ಪಟ್ಟು ಏಕಾಂಗಿತನದಿಂದ ಬಂದ ಭಯವನ್ನು ಪರಿಹರಿಸಿದನು.

ಬ್ರಹ್ಮದೇವರಿಗೆ ನಮ್ಮಂತೆ ಭಯವಲ್ಲ ಎಂದೂ ಹೇಳುವರು. ಮುಂದೆ ಹುಟ್ಟುವ ಜನರಿಗೆ ಭಯ-ಅಜ್ಞಾನಗಳು ಬರುವದಕ್ಕಾಗಿ ಜ್ಞಾನಾದಿಗುಣಪೂರ್ಣರಾದ ಬ್ರಹ್ಮದೇವರಿಗೂ ಅರ್ಧ ಕ್ಷಣ ಮಾತ್ರ ಭಯಾಜ್ಞಾನಾದಿಗಳು ಇದ್ದಂತೆ ತೋರಿಸುವದಷ್ಟೇ. ಆ ಭಯಾದಿಗಳು ಅವರಲ್ಲಿ ಸ್ಥಿರವಾಗಿರಲು ಹೇಗೆ ಸಾಧ್ಯ. ಜ್ಞಾನಾದಿಗುಣಗಳಿಂದ ಪರಿಪೂರ್ಣನಾಗಿದ್ದಾನೆ ಪರಮಾತ್ಮ. ಅವನಿಂದ ಪೂರ್ಣನಾದದ್ದರಿಂದಲೇ ಚತುರ್ಮುಖನನ್ನು ಬ್ರಹ್ಮ ಎಂದು ಕರೆಯುತ್ತಾರೆ. ಆದ್ದರಿಂದ ಅವನಿಗೆ ಭಯಾದಿಗಳು ಸ್ಥಿರವಾಗಿರಲಾರವು ಎಂದು ಭಾವ.

ಕೇವಲ ಲೋಕಸ್ವಭಾವ ಸಿದ್ಧಿಯೊಂದೇ ಪ್ರಯೋಜನವಲ್ಲ. ಲಕ್ಷ್ಮೀಪತಿಪ್ರೀತಿಗೂ ಪ್ರಯೋಜನವೆಂದು ಪ್ರಮಾಣದಿಂದ ಹೇಳುತ್ತಾರೆ. ಬ್ರಹ್ಮದೇವರಲ್ಲಿ ಯಾವ ಒಂದು ಧರ್ಮವೂ ವ್ಯರ್ಥವಲ್ಲ. ಎಲ್ಲವೂ ಭಗವಂತನ ಪ್ರೀತಿಗಾಗಿಯೇ ಆದರೂ ಅವುಗಳು ಅರ್ಧಕ್ಷಣ ಮಾತ್ರವೇ ಈ ಭಯಾದಿ ಪ್ರದರ್ಶನ ಭಗವತ್ಪ್ರೀತಿಗೆ ಆಗಲಿ ಅದಾದರೂ ಎಷ್ಟು ಸಲ ಎಂಬ ಶಂಕೆಯನ್ನು ಪ್ರಸಕ್ತಾನುಪ್ರಸಕ್ತ ಸಂಗತಿಯಿಂದ ಈ ಪ್ರಮಾಣದಿಂದ ಪರಿಹರಿಸುವರು.

ನಾಲ್ಕು ಬಾರಿ ಅಜ್ಞಾನ, ಎರಡು ಬಾರಿ ಭಯ, ಎರಡು ಬಾರಿ ಶೋಕ ಬ್ರಹ್ಮದೇವರಿಗೆ ಪ್ರಾಪ್ತವಾಗುತ್ತವೆ. ಹೊರತು ಐದಾರು ಬಾರಿಯಲ್ಲ. ಬ್ರಹ್ಮದೇವರನ್ನು ಬಿಟ್ಟು ಉಳಿದವರಿಗೆ ಹೆಚ್ಚು ಬಾರಿ ಅಜ್ಞಾನಾದಿಗಳು ಬರುತ್ತವೆ. ಈ ಅಜ್ಞಾನಾದಿಗಳಿಂದಲೂ ಭಗವಂತನ ಪ್ರೀತಿಯಾಗುತ್ತದೆ. ಉತ್ಕರ್ಷಕ್ಕೆ ಕಾರಣವಾಗುತ್ತವೆ ಎಂದು ಭಾವ.

ಮೇಲಿನ ಪ್ರಮಾಣದಲ್ಲಿಯ ಉದ ಶಬ್ದವು ಉದಕವಾಚಕವಾದ ಉದಶಬ್ದವಾಗಿದೆ. 'ರೋಮಕೂಪಲಯೋದಿನಾ' ಎಂಬ ಅನುವ್ಯಾಖ್ಯಾನ ವ್ಯಾಖ್ಯಾನ ಸುಧಾದಲ್ಲಿ ಉದಂ ಅಸ್ಯ ಅಸ್ತೀತೀ ಉದೀ ಎಂದು, ಇದರ ವಾಕ್ಯಾರ್ಥಚಂದ್ರಿಕೆಯಲ್ಲಿ 'ಉದಕವಾಚಿನಾ ಉದಶಬ್ದಾತ್' ಎಂದು ಹೇಳಿದೆ. ಇಲ್ಲಿ ಅಜ್ಞಾನಪದದಿಂದ ಭಾವರೂಪ ಅಜ್ಞಾನವೇ ವಿವಕ್ಷಿತವಾಗಿದೆ. ಜ್ಞಾನಾಭಾವರೂಪ ಅಜ್ಞಾನವು ಭಗವಂತನ

ವಿಷಯದಲ್ಲಿ ನಾಲ್ಕೇ ಸಲ ಎಂದು ಹೇಳಲಾಗುವದಿಲ್ಲ. ಜಗದ್ವಿಷಯದಲ್ಲಿಯೂ ಯಾವಾಗಲೂ ಆಲೋಚನೆ ಮಾಡುವರೆಂದು ನಿಯಮವಿಲ್ಲದ್ದರಿಂದ ಆಲೋಚನ ಮಾಡದಿರುವಾಗ ಬಹಳ ಸಲ ಅಜ್ಞಾನ ಸಂಭವಿಸುವುದರಿಂದ ನಾಲ್ಕೇ ಸಲ ಎಂದು ಹೇಳಲಾಗದು. ಈಶಾದನ್ಯತ್ರ ಆಲೋಚನೇ ಸರ್ವವಿಷಯಕ ಜ್ಞಾನ ಋಜುಗಳ ಜ್ಞಾನವಾಗಿದೆ. ಮತ್ತು 'ಅಜ್ಞಾನಂ ಭಾವರೂಪಂ ದುಃಖಸ್ಪೃಷ್ಟಸ್ಯ' 'ದುಃಖಸ್ಪೃಷ್ಟಂ ತದಸ್ಪೃಷ್ಟಂ ಇತಿ ದ್ವೇಧೈವ ಚೇತನಮ್ । ನಿತ್ಯದುಃಖಾ ರಮಾಽನ್ಯೇ ತು ಸ್ಪೃಷ್ಟದುಃಖಾಃ ಸಮಸ್ತಶಃ ।। ಎಂದು ಟೀಕಾಸಹಿತ ತತ್ತ್ವಸಂಖ್ಯಾನವಿದೆ. ಬ್ರಹ್ಮಣೋಽಪ್ಯಲ್ಪದುಃಖಂ ಸ್ಯಾತ್ತದಪ್ಯನಭಿಮಾನತಃ । ನಾಸ್ತ್ಯಾತ್ಮಸಂಬಂಧಿತಯಾ ಭೋಗಾಭಾವಾತ್ಕಥಂಚನ ।। ಎಂದು ಬೃಹದ್ಭಾಷ್ಯದಲ್ಲಿ ವಿಶಿಷ್ಯ ದುಃಖಸ್ಪೃಷ್ಟತ್ವ ಹೇಳಿದೆ.

'ತಚ್ಚ ಅಜ್ಞಾನಂ ಜ್ಞಾನಂ ಪ್ರತಿಬಧ್ನಾತಿ । ಅನ್ಯೇ ತತ್ತ್ವಜ್ಞಾನಸಂಯುಕ್ತಾ ಮೋಹಮೀಯುಃ' ಎಂದು ಹೇಳಿದೆ. ಅಲ್ಲದೆ ತತ್ತ್ವೋದ್ಯೋತದಲ್ಲಿ 'ಪುಂಗತಮೇವ ಹಿ ತಮಃ' ಎಂಬುದಕ್ಕೆ ಟೀಕೆಯನ್ನು ಬರೆಯುವಾಗ 'ತಮ ಇವ ತಮೋ ಭಾವರೂಪಮಜ್ಞಾನಂ ಜ್ಞಾನಪ್ರತಿಬಂಧಕತ್ವಾತ್' ಎಂದಿದ್ದಾರೆ. ಅಜ್ಞಾನವು ಮೂರು ಸಲ ಮತ್ತು ಒಂದು ಸಲ ಅಂತು ನಾಲ್ಕು ಸಲ. ಭಾಗವತ ಮೂರನೇ ಸ್ಕಂಧದ ಒಂಭತ್ತನೇ ಅಧ್ಯಾಯದಲ್ಲಿ 'ಕಂಜಮು ಲೋಕತಂತ್ರಂ ನಾತ್ಮಾನಮದ್ಧಾಽವಿದದಾದಿ-ದೇವಃ । ಕ ಏಷ ಯೋಽಸಾವಹಮಬ್ಜಪೃಷ್ಠೇ ಏತತ್ ಕುತೋವಾಽಬ್ಜಮನನ್ಯದಪ್ಸು ।। ಎಂದು ತನ್ನ ಅಜ್ಞಾನ, ಪದ್ಮದ ಅಜ್ಞಾನ ಪರಮಾತ್ಮನ ಅಜ್ಞಾನ ಹೀಗೆ ಮೂರು ಬಾರಿ. ಇನ್ನು ಎರಡನೇ ಸ್ಕಂಧ ತಾತ್ಪರ್ಯದಲ್ಲಿ 'ಸ ಬ್ರಹ್ಮಾಽಚಿಂತಯತ್ ಕುತೋ ನು ಪದ್ಮಂ ಬ್ರಹ್ಮಣಃ ಸ್ಯಾದಿತಿ' ಎಂದು ಹೇಳಿದೆ. ಸಂವತ್ಸರನಾಮಕ ಬ್ರಹ್ಮನಿಗೆ ಯಜ್ಞಾದಿ ಜ್ಞಾನಾಭಾವವನ್ನು ಬೃಹದ್ಭಾಷ್ಯದಲ್ಲಿ ಹೇಳಿದೆ.

ಇಚ್ಛತೋ ಬ್ರಹ್ಮಯಜನಂ ಬ್ರಹ್ಮಣಃ ಸಾಧನಾಸ್ಮೃತೇಃ ।
ಶ್ರಮಾತ್ತಾಪಾಚ್ಚ ತಂ ದೇಹಂ ತ್ಯಕ್ತುಮಿಚ್ಛಾ ಬಭೂವ ಹ ।।

ಎಂದಾರಂಭಿಸಿ ಮಹಾಸಂಹಿತಾಯಾಂ ಎಂಬಲ್ಲಿ ವರೆಗೆ ಈ ವಿಷಯವಿದೆ.

ಭಯ ಎರಡು ಸಲ ಬಂದಿದೆ. ಅದನ್ನು 'ಸ ಭಾಣಮಕರೋತ್' ಎಂಬುದರ ವ್ಯಾಖ್ಯಾನ ಬೃಹದ್ಭಾಷ್ಯದಲ್ಲಿ 'ಸಂವತ್ಸರೋ ಬ್ರಹ್ಮಣೋಽಭಾಣಿತಿ ವಚೋ ನಿಸ್ಸೃತಂ

ಭಯತೋ ಮುಖಾತ್ । ತಸ್ಯಾಭಿಮಾನಿನೀ' ಮುಂತಾಗಿ. ಎರಡನೆಯದು ಪ್ರಸ್ತುತವಾದುದು. 'ಅಶರೀರೋ ವಾಯುಃ' ಎಂದು ಶ್ರುತಿ ಇರುವದರಿಂದ ವಾಯ್ವಭಿನ್ನರಾದ ಬ್ರಹ್ಮದೇವರಿಗೆ ದೇಹವಿಲ್ಲದಿರುವಾಗ ದೇಹನಿಮಿತ್ತಕವಾದ ಶೋಕಾದಿಗಳು ಇರಲು ಹೇಗೆ ಸಾಧ್ಯ? ಎಂದರೆ-

ಬ್ರಹ್ಮಾ ನಿರಭಿಮಾನಿತ್ವಾತ್ ಶರೀರ್ಯಪ್ಯಶರೀರವಾನ್ ।
ನಿತ್ಯಾನಂದೋಪಯೋಗ್ಯಾನ್ಯಕಾಮಸ್ಯೋಜ್ಝಿತಸ್ತಥಾ ॥

ಬಹಿರರ್ಥವಿನಿರ್ಮುಕ್ತಃ ತಥಾಽಪಿ ತನುಧಾರಣಾತ್ ।
ಅಮೂಢೋ ಮೂಢ ಇತಿವದುಚ್ಯತೇ ಚ ಸರಸ್ವತೀ ॥

ಸರ್ವೇಷಾಂ ಬ್ರಹ್ಮಪದವೀಯೋಗ್ಯಾನಾಂ ಪೂರ್ವಮೇವ ತು ।
ಅಭಾವಸ್ತ್ವಪರೋಕ್ಷಸ್ಯ ಮೋಹೋ ಜ್ಞಾನಸ್ಯ ಭಣ್ಯತೇ ॥

ಬ್ರಹ್ಮಣಸ್ತ್ವಂಶರೂಪೇಷು ಭಾರತ್ಯಾ ಜ್ಞಾನವರ್ಜನಮ್ ।
ಬ್ರಹ್ಮಗಾಯತ್ರೀಭಾವೇ ತು ನಾಂಶಾವತರಣಂ ಕ್ವಚಿತ್ ॥

ಶತಜನ್ಮಸು ಪೂರ್ವಂ ತು ಜ್ಞಾನೋದಯ ಇತೀರ್ಯತೇ ।
ಆಪರೋಕ್ಷ್ಯೇಣ ಪಾರೋಕ್ಷ್ಯಾತ್ ಪೂರ್ಣಜ್ಞಾನಂ ಸದೈವ ತು ॥

ಇತಿ ಏಕಾದಶಸಪ್ತಮಾಧ್ಯಾಯೇ ತಥೈವ ದ್ವಿತೀಯಸ್ಕಂಧೇ ನವಮೇ 'ಕರ್ಮಣಾ ವಿಮೋಹಿತ ಇತ್ಯತ್ರ ಇದಂ ಕಾರ್ಯಂ ಇತ್ಯಜಾನತಾ ಇತಿ ಜ್ಞಾನಾಭಾವಸ್ಯ । ತಥೈವ ಏಕಾದಶತ್ರಯೋದಶಾಧ್ಯಾಯೇ ಚ 'ಧ್ಯಾಯಮಾನಃ ಪ್ರಶ್ನಬೀಜಂ ನಾಭ್ಯಪದ್ಯತ ಕರ್ಮಧೀಃ । ಪ್ರಶ್ನೋತ್ತರಾಜ್ಞಾನಪ್ರತೀತಿವಾರಣಾಯ ಪ್ರಶ್ನೋ ಬೀಜಮಸ್ಯೇತಿ ಪ್ರಶ್ನಬೀಜಂ ಪರಿಹಾರಂ । ಗುಣಾನಾಂ ಚೇತಸಶ್ಚ ಕರ್ಮ ಕಾರಣಮಿತಿ ಮನ್ವಾನಃ ಕರ್ಮಧೀಃ ।

ಬ್ರಹ್ಮಾ ಪೃಷ್ಟಸ್ತು ಯೋಗಿಂದ್ರೈಃ ಸನಕಾದ್ಯೈರ್ಮನೋಗತೈಃ ।

ಬ್ರಹ್ಮಾ ಮನೋಜ್ಞೈಃ ಕಾರಣಂ ವಿಷಯೇಷು ಅದ್ಧಾ ಕರ್ಮೇತಿ ಪ್ರತಿಪದ್ಯತೇ । ಹೇತುರನ್ಯೋಽಪಿ ತತ್ರಾಸ್ತೀತ್ಯೇವಂ ಜಾನನ್ನಪಿ ಪ್ರಭುಃ ॥

ವಿಶೇಷತೋ ಮನಸ್ತತ್ರ ನಾಧಾಜ್ಞಾನನ್ ಹರೇಃ ಪ್ರಿಯಮ್ ।
ಸ್ವಾತ್ಮನಾ ಪರಿಹಾರೋಕ್ತಿಸ್ತದಾ ಹ್ಯಾಸೀದ್ಧರೇಃ ಪ್ರಿಯಮ್ ।

ಅತಃ ಸ ತತ್ಕ್ರಿಯಂ ಜ್ಞಾನನ್ನಾಕರೋತ್ತದ್ವಿಚಾರಣಮ್ ।
ತಮೇವಾಚಿಂತಯದ್ದೇವಃ ಪ್ರಶ್ನನಿರ್ಣಯಕಾರಣಾತ್ ।

ಭ್ರಮತೀವ ಮನಃ ಕ್ವಾಪಿ ಬ್ರಹ್ಮಣೋ ವಿಷ್ಣುಮಾಯಯಾ ।
ಸರ್ವಜ್ಞಸ್ಯಾಪಿ ಯತ್ರಾತ್ಮಾ ವಕ್ತುಮಿಚ್ಛೇಜ್ಜನಾರ್ದನಃ ।

ತದ್ ಜ್ಞಾತ್ವಾ ಚಿಂತಿತಂ ತಸ್ಯ ಚಿಂತಯತ್ಯಮುಮೇವ ತು ।
ನ ಸ್ವಯಂ ಚಿಂತಯತ್ಯರ್ಥಂ ಸ ಹಿ ತದ್ಭಾವವಿತ್ಸದಾ ॥

ಅನ್ಯೇ ತ್ವಜ್ಞಾನಸಂಯುಕ್ತಾ ಮೋಹಮೀಯುರ್ಯಥಾಕ್ರಮಮ್ ।
ತಸ್ಯ ಮಧ್ಯಂದಿನೇ ಸೂರ್ಯೇ ಕ್ಷೋಭವತ್ ಕ್ಷೋಭಮಾತ್ರಕಮ್ ।
ನೈವಾಜ್ಞಾನಂ ಯಥಾ ಸೂರ್ಯೇ ತಮೋ ನಾಸ್ತಿ ಕದಾಚನ ॥

-ಇತಿ ಭಾವವಿವೇಕೇ ಇತಿ ॥

ತತ್ರೈವ ಸ್ಥಾನಾಂತರೇ । ಬಹುಲಮನ್ವೇಷಣಮಿಯನ್ ಮನೀಷಿಣಃ ಕಿಂಕಾರಣ-ಮಿತ್ಯಾಶಂಕ್ಯೋಕ್ತಂ ತತ್ತಾತ್ಪರ್ಯೇ 'ಈಶ್ವರಾಭಿಪ್ರಾಯವಿದಾ ಬ್ರಹ್ಮಣಾ ತಪ ತಪ ಇತ್ಯುಪದೇಶಲಾಭಾಯ ಬಹುಕಾಲಂ ಅನ್ವೇಷಣ ಕೃತಂ ಇತ್ಯಾದ್ಯುಕ್ತ್ವಾ ಪರಿಹರಣೆಯಮ್ ।

ಅಶರೀರಃ ಎಂಬ ಶಬ್ದಕ್ಕೆ ಶರೀರವೇ ಇಲ್ಲದವ ಎಂದರ್ಥವಲ್ಲ. ಕಿಂತು ಅಭಿಮಾನವಿಲ್ಲದ್ದರಿಂದ ಶರೀರವಿದ್ದರೂ ಶರೀರ ಇಲ್ಲದವನೆಂದು ಕರೆಸಿಕೊಳ್ಳುವರು. ಕಾರಣ ದುಃಖಾಜನಕ ಭಯಾಜ್ಞಾನಗಳು ಬರಲು ತೊಂದರೆ ಇಲ್ಲವೆಂದು ಭಾವ. ನಿತ್ಯವಾದ ಮೋಕ್ಷಾನಂದಕ್ಕೆ ಉಪಯೋಗವಾಗದಿರುವ ಕಾಮವಿಲ್ಲದ್ದರಿಂದ ಬಹಿರರ್ಥ ವಿನಿರ್ಮುಕ್ತನು. ಆದರೂ ದೇಹ ಧಾರಣ ಮಾಡಿರುವದರಿಂದ ಮೋಹ ರಹಿತನಾದರೂ ಮೋಹ ಇದ್ದವರಂತೆ ಹೇಳಲ್ಪಡುವರು. ಇಲ್ಲಿ ಮೋಹವೆಂದರೆ ಭ್ರಾಂತಿಯಲ್ಲ. ಬ್ರಹ್ಮಪದವಿಗೆ ಯೋಗ್ಯರಾದ ಎಲ್ಲ ಋಜುಗಳೆನಿಸಿದ ಜೀವರಿಗೆ ಮೊದಲು ಭಗವಂತನ ಅಪರೋಕ್ಷ ಜ್ಞಾನವಿಲ್ಲದಿರುವದೇ ಮೋಹವೆಂದು ಕರಿಸಿಕೊಳ್ಳುವದು. ಬ್ರಹ್ಮಪದವಿ ಬರುವಕ್ಕಿಂತ ನೂರು ಜನ್ಮದ ಹಿಂದೆ ಅಪರೋಕ್ಷಜ್ಞಾನವಾಗುತ್ತದೆ. ಪರೋಕ್ಷಜ್ಞಾನ ಯಾವಾಗಲೂ ಮೊದಲಿನಿಂದಲೂ ಇರುವದು ಎಂದು ಏಕಾದಶಸ್ಕಂಧ ಏಳನೇ ಅಧ್ಯಾಯದಲ್ಲಿ ಹೇಳಿದೆ. ಅದರಂತೆ ಎರಡನೇ ಸ್ಕಂಧ ಒಂಭತ್ತನೇ ಅಧ್ಯಾಯದಲ್ಲಿ 'ಕರ್ಮಣಾ ವಿಮೋಹಿತಃ' ಎಂಬಲ್ಲಿಯೂ 'ಇದಂ ಕಾರ್ಯಮಿತ್ಯಜಾನತಾ' ಎಂದು ಜ್ಞಾನಾಭಾವವನ್ನೇ ಹೇಳಿದೆ. ಏಕಾದಶ ಹದಿಮೂರನೇ ಅಧ್ಯಾಯದಲ್ಲೂ 'ಧ್ಯಾಯಮಾನಃ ಪ್ರಶ್ನಬೀಜಂ




ನಾಭ್ಯಪದ್ಯತ ಕರ್ಮಭಿಃ' ಎಂಬಲ್ಲಿ ಬ್ರಹ್ಮದೇವರಿಗೆ ಪ್ರಶ್ನೋತ್ತರ ಜ್ಞಾನವಿರಲಿಲ್ಲ ಎಂಬ ಪ್ರತೀತಿಯನ್ನು ನಿವಾರಿಸಲು ಪ್ರಶ್ನವೇ ಕಾರಣವಾಗಿ ಉಳ್ಳದ್ದು ಎಂದರೆ ಪರಿಹಾರವೆಂದು ಅರ್ಥಮಾಡಿದ್ದಾರೆ.

ಇಲ್ಲಿ ಮತ್ತೊಂದು ಪ್ರಶ್ನೆಯು ಈ ರೀತಿಯಾಗಿ ಬರುತ್ತದೆ. ಎರಡು ಭಯಗಳಿಗೆ ಕಾರಣವಾದ ಎರಡು ಅಜ್ಞಾನಗಳನ್ನು ಒಪ್ಪಿದರೆ ಸಾಕು. ನಾಲ್ಕು ಅಜ್ಞಾನಗಳನ್ನು ಹೇಳಿದ್ದು ಹೇಗೆ? ಎಂದರೆ, ಭಯವು ಮುಖ್ಯವಾಗಿ ಜ್ಞಾನದ ಕಾರ್ಯವಾಗಿದೆ. ಸರ್ಪಜ್ಞಾನದಿಂದ ಭಯ ಬರುವುದು ಲೋಕದಲ್ಲಿ ಕಂಡಿದೆ. ಅದರ ಜ್ಞಾನವಿಲ್ಲದವನಿಗೆ ಭಯವಿಲ್ಲವೆಂದು ಅನುಭವ ಸಿದ್ಧವಾಗಿದೆ. ಆದ್ದರಿಂದ ಭಯಕ್ಕೆ ಅಜ್ಞಾನ ಬೇಕಿಲ್ಲವೆಂದು ಭಾವ.

ಹೀಗೊಂದು ಶಂಕೆ. ಯಾವ ಪದ್ಮಜವಿರಿಂಚನಿಗೆ ಭಯವು ಉಂಟಾಯಿತೋ ಅದು ಮಹಾಪ್ರಲಯಾನಂತರ ಕಾಲೀನವಾದುದು ಏಕೆ? ಬ್ರಹ್ಮದೇವರ ದೈನಂದಿನ ಪ್ರಲಯಾನಂತರ ಸೃಷ್ಟಿ ಕಾಲೀನವೇ ಏಕಾಗಬಾರದು? ಎಂದರೆ ಅದು ಸರಿಯಲ್ಲ. ಬ್ರಹ್ಮದೇವರ ದಿನಕಲ್ಪಾನಂತರ ಸೃಷ್ಟಿಕಾಲೀನವಾದ ಪದ್ಮಕ್ಕೆ 'ಉದಕಂ ವಾಯುನಾ ಶುಷ್ಕಂ ಭಿನ್ನಂ ಪದಮಭೂದ್ಧರೇಃ' ಎಂದು 'ತಸ್ಯಾಸನವಿಧಾನಾರ್ಥಂ ಪೃಥಿವೀ ಪದ್ಮಮುಚ್ಯತೇ' ಎಂಬ ಪ್ರಮಾಣದಿಂದ ಶ್ರೀಮದಾಚಾರ್ಯರೇ ಪೃಥಿವೀರೂಪತ್ವವನ್ನು ಹೇಳಿದ್ದಾರೆ. ಮಹಾಪ್ರಲಯಾನಂತರಕಾಲೀನವಾದ ಪದ್ಮಕ್ಕಾದರೂ 'ಯತ್ರ ವಾಯೂದಪದ್ಮಾದಿರೂಪೇಣ ಪ್ರಕೃತಿಃ ಸ್ಥಿತಾ' ಎಂಬ ಪ್ರಮಾಣದಿಂದ ಲಕ್ಷ್ಮ್ಯಾತ್ಮಕತ್ವವನ್ನು ಹೇಳಿದ್ದಾರೆ. ಒಂದೇ ಕಾಲದಲ್ಲಿ ಒಂದಕ್ಕೆ ಉಭಯಾತ್ಮಕತ್ವವು ಸಂಭವಿಸಲಾರದು. ಇನ್ನು 'ಯತ್ರ ವಾಯೂದಪದ್ಮಾದಿ' ಎಂಬ ವಾಕ್ಯವು ಲಕ್ಷ್ಮೀ ಅಭಿಮಾನಿ ಪರವೆಂದು ಹೇಳಲಾಗುವದಿಲ್ಲ. ಈ ವಾಕ್ಯ ಭಾಗವತತಾತ್ಪರ್ಯ ನಿರ್ಣಯಿಸಲು ಹೊರಟಿದ್ದುದರಿಂದ ಅರ್ಥಾಂತರ ಮಾಡಲು ಅವಕಾಶವಿಲ್ಲ. ಈ ಎರಡು ಸೃಷ್ಟಿಯನ್ನು ಬಿಟ್ಟು ಮಿಕ್ಕ ಸೃಷ್ಟಿಕಾಲದಲ್ಲಿ ಬ್ರಹ್ಮದೇವರು ಪದ್ಮದಿಂದ ಜನಿಸಿಲ್ಲ. ಆ ವಿಷಯದಲ್ಲಿ ಪ್ರಮಾಣವಿಲ್ಲ. ಆದಕಾರಣ ಮಹಾಪ್ರಲಯಾನಂತರ ಸೃಷ್ಟಿಕಾಲೀನ ಪದ್ಮಜನಾದ ವಿರಿಂಚನಿಗೆ ಭಯವೆಂದು ಪ್ರಭೋಧಿನಿಯಲ್ಲಿ ಹೇಳಿದ್ದರಿಂದ ಚತುರ್ವಾರ ಅಜ್ಞಾನವು ಪ್ರಲಯಕಾಲಿಕ ಪದ್ಮಭವನಿಗೇನೇ ಇದೆ. ಭಯವಾದರೂ ಮಹಾಪ್ರಲಯಾನಂತರ ಕಾಲೀನ ಪದ್ಮಭವನಿಗೆ ಒಂದು ಸಲ, ಸಂವತ್ಸರಾಖ್ಯ ಬ್ರಹ್ಮನಿಗೊಂದು ಸಲ ಹೀಗೆ ಎರಡು ಸಲವೆಂದು ತಿಳಿಯಬೇಕು.

ಅಥವಾ 'ಅಜ್ಞಾನಂ ಚ ಚತುರ್ವಾರಂ' ಎಂಬುದು ದಿನಪ್ರಲಯಕಾಲಿಕ ಅಜ್ಞಾನ ವಿಷಯಕ. 'ಲೋಕಮಪಶ್ಯಮಾನಃ' ಎಂದು ಒಂದು, 'ತತ್ರ ಸಂವತ್ಸರಂ ನಾಮ ಬ್ರಹ್ಮಾಣಮಸೃಜತ್ ಪ್ರಭುಃ । ತಮತ್ತುಂ ವ್ಯಾದದಾದಾಸ್ಯಂ ತದಾಽಸೌ ವಿರುರಾವ ಹ' ಎಂದು ಮತ್ತೊಂದು ಭಯಕಾರಣವಾದ ಅಜ್ಞಾನವು ತತ್‌ಕ್ಷಣದಲ್ಲಿ ಭಯ ಹುಟ್ಟಿಸಿ ನಾಶವಾಯಿತು. ಕಾರಣ ಅದನ್ನು ತೆಗೆದುಕೊಳ್ಳಬಾರದೆಂದು ಹೇಳಿಲ್ಲ. ಭಯದಿಂದ ಅನ್ಯಥಾಸಿದ್ಧವಾದುದರಿಂದ ಸಾಕ್ಷಾತ್ ಅಧೋಕ್ಷಜ ಪ್ರೀತಿ ಜನಕವಲ್ಲ. ಇತರ ಅಜ್ಞಾನಗಳಂತೆ ಆದ ಕಾರಣ ಅದನ್ನು ಹೇಳಿಲ್ಲ. ಅಜ್ಞಾನ-ಭಯಗಳನ್ನು 'ಉದಕಂ ವಾಯುನಾ ಶುಷ್ಕಂ ಭಿನ್ನಂ ಪದ್ಮಮಭೂದ್ದರೇಃ । ತಸ್ಯಾಸನವಿಧಾನಾರ್ಥಂ ಪೃಥಿವೀ ಪದ್ಮಮುಚ್ಯತೇ' ಎಂದು ಹೇಳಿದ ಪದ್ಮಕ್ಕೇನೇ ಹೇಳಿದ ಲಕ್ಷ್ಮ್ಯಾತ್ಮಕತ್ವವೂ ಸಂಭವಿಸುವದರಿಂದ ಅದನ್ನೇ ಹೇಳಲು ಶಕ್ಯವಿದೆ. ಪ್ರಮಾಣವಿಲ್ಲ ಎನ್ನಬೇಕಿಲ್ಲ. ಈ ರೀತಿ ವಾಕ್ಯಗಳ ಸಂವಲನವೇ ಗಮಕವಾಗುವದು.

ಇನ್ನು ಋಜೂನಾಂ ಏಕ ಏವಾಽಸ್ತಿ ಪರಮೋತ್ಸಾಹವರ್ಜನಂ' ಎಂದಿರುವದರಿಂದ ಅಜ್ಞಾನ-ಭಯಾದಿಗಳನ್ನು ಹೇಳುವದು ಹೇಗೆ? ಎಂದರೆ ಆ ವಾಕ್ಯವು ದುಃಖಪ್ರಾಪಕ ಅಜ್ಞಾನ-ಭಯಗಳಿಂದಲ್ಲವೆಂದು ಹೇಳುವರು. ಭಗವಂತನ ಪ್ರೀತಿ ಜನಕವಾದ ಈ ವಿಧವಾದ ಅಜ್ಞಾನ-�ಯಗಳನ್ನು ದಗ್ಧಪಟಾಯಮಾನ ದೇಹ ಉಳ್ಳವರಿಗೆ ನಿವಾರಣೆ ಮಾಡಿಲ್ಲ. ।।೨೩।।

ನಮಗೆ ಸ್ರಷ್ಟ್ರು ಎಂಬ ಸಂಬಂಧವಿದ್ದರೂ ನಾವು ಅವನ ನಿಜ ಸ್ವರೂಪವನ್ನು ಕಾಣುತ್ತಿಲ್ಲ. ಅವನ ಲಕ್ಷಣವನ್ನು ಮಾತ್ರ ಕಾಣುತ್ತೇವೆ. ಆದ್ದರಿಂದ ನಾವು ಅವನನ್ನೇ ಶರಣು ಹೊಂದುತ್ತೇವೆ ಎಂದು ಹೇಳುತ್ತಾರೆ-

**ಯ ಏಕ ಈಶೋ ನಿಜಮಾಯಯಾ ನಃ**
**ಸಸರ್ಜ ಯೇನಾನುಸೃಜಾಮ ವಿಶ್ವಮ್ ।**
**ವಯಂ ಚ ಯಸ್ಯಾಪಿ ಪುರಃ ಸಮೇತಾಃ**
**ಪಶ್ಯಾಮ ಲಿಂಗಂ ಪೃಥಗೀಶಮಾನಿನಃ ।।೨೪।।**

ಇಲ್ಲಿನ ಯಚ್ಛಬ್ದಕ್ಕೆ ಮುಂದಿನ ೩೬ನೇ ಶ್ಲೋಕದಲ್ಲಿಯ ತಚ್ಛಬ್ದದೊಂದಿಗೆ ಅನ್ವಯ. **ಏಕಃ** ಕೇವಲನೂ **ಈಶಃ** ಸಮರ್ಥನು ಐಶ್ವರ್ಯಾದಿ ಗುಣ ಉಳ್ಳವನೂ ಆದ **ಯಃ** ಯಾವನು **ನಿಜಮಾಯಯಾ** ತನ್ನ ಅಧೀನವಾದ ಪ್ರಕೃತಿಯಿಂದ ಸ್ವೇಚ್ಛೆಯಿಂದ, 'ಬಹು

ಸ್ಯಾಂ ಪ್ರಜಾಯೇಯ' ಎಂಬ ಶ್ರುತಿಯು ನಿಯಾಮಕ ಬಹುರೂಪೇಚ್ಛಾವನ್ನು ಹೇಳಿದೆ. 'ಸೃಜ್ಯಸೃಷ್ಟಾವೀಕ್ಷಾ ಬಭೂವ' ಎಂದು ಶ್ರೀಮದಾಚಾರ್ಯರು ಹೇಳಿರುವರು. **ನಃ** ನಮ್ಮನ್ನು **ಸಸರ್ಜ** ಸೃಷ್ಟಿಸಿದನೋ **ಯೇನ** ಯಾವನಿಂದ ಪ್ರೇರಿತರಾದ **ವಯಂ** ನಾವು **ವಿಶ್ವಂ** ಜಗತ್ತನ್ನು **ಅನುಸೃಜಾಮ** ಮತ್ತೆ ಯಥಾ ಯೋಗ್ಯವಾಗಿ ಸೃಷ್ಟಿಸುವೆವೋ **ಚ** ಮತ್ತು **ಪೃಥಕ್** ತಾರತಮ್ಯಾನುಗುಣವಾಗಿ **ಈಶಮಾನಿನಃ** ಈಶರೆಂಬ ದುರಭಿಮಾನ ಉಳ್ಳವರು ಸ್ವಾತಂತ್ರ್ಯಾಭಿಮಾನ ಉಳ್ಳ **ವಯಂ** ನಾವು **ಯಸ್ಯ ಚ** ಯಾವನ **ಪುರಃ** ಎದುರಿನಲ್ಲಿ **ಸಮೇತಃ ಅಪಿ** ಸೇರಿದವರಾದರೂ **ಲಿಂಗಂ** ಅವನ ಲಕ್ಷಣವನ್ನೇ, ನಮ್ಮನ್ನು ಸೃಷ್ಟಿಸಿದವನು ನಾವು ಅವನ ಅನುಗ್ರಹದಿಂದ ಬಂದ ಕರ್ತೃತ್ವ ಉಳ್ಳವರು ಅವನು ಅಚಿಂತ್ಯ ವೈಭವಯುಕ್ತನು ಇತ್ಯಾದಿಯಾಗಿ **ಪಶ್ಯಾಮಃ** ತಿಳಿಯುವೆವು. **ಸ್ವರೂಪಂ ನ ಪಶ್ಯಾಮಃ** ಸಚ್ಚಿದಾನಂದಾದಿ ಸ್ವರೂಪವನ್ನು ತಿಳಿಯುವದಿಲ್ಲವೋ ಅಂತಹ ಶ್ರೀಹರಿಯನ್ನೇ ಶರಣು ಹೊಂದುವೆವು ಎಂದನ್ವಯ.

**ವಿಶಿಷ್ಟ ಅರ್ಥ**

**ಪೃಥಗೀಶಮಾನಿನಃ** ಎಂಬುದರಿಂದ ಶ್ರೀಹರಿಯ ಸಚ್ಚಿದಾನಂದರೂಪವನ್ನು ಕಾಣದಿರುವದಕ್ಕೆ ಕಾರಣವನ್ನು ತಿಳಿಸಿರುವರು. ಈ ಸ್ವಾತಂತ್ರ್ಯಾಭಿಮಾನವು ದೇವತೆಗಳಿಗೆ ಒಂದೊಂದು ವೇಳೆ ಬರುವದೇ ಹೊರತು ಯಾವಾಗಲೂ ಬರುವದಿಲ್ಲ. ಅದೂ ಎಲ್ಲರಲ್ಲಿಯೂ ಒಂದೇ ರೀತಿಯದಲ್ಲ. ತಾರತಮ್ಯದಿಂದ ಕೂಡಿರುವದು. ಅದನ್ನೇ ಪೃಥಕ್ ಎಂಬ ಪದದಿಂದ ತಿಳಿಸಿರುವರು ಎಂಬುದನ್ನೇ ಆಚಾರ್ಯರು ಪ್ರಮಾಣದಿಂದ ತಿಳಿಸುವರು. ಮತ್ತು ವಯಂ ಹರೇಃ ಲಿಂಗಂ ನ ಪಶ್ಯಾಮಃ ಎಂದು ಅನ್ವಯವಲ್ಲವೆಂದು ತಿಳಿಸಲು ಬೇಕಾದ ಅಧ್ಯಾಹಾರ ಮಾಡಿ ಅನ್ವಯ ಹೇಳುವರು.

**ತಾತ್ಪರ್ಯ**

**ಲಿಂಗಮೇವ ಪಶ್ಯಾಮಃ ।**

ಸಾಮಾನ್ಯವಾಗಿ ಶ್ರೀಮಾನ್ಯಜ್ಞಾಪಕಮೇವ ಪಶ್ಯಾಮಃ ।

ಅಂದರೆ ಲಕ್ಷ್ಮೀದೇವಿಯಿಂದ ಮಾನ್ಯನಾದ ಪೂಜ್ಯನಾದ ಶ್ರೀಹರಿಯ ಅಸಾಧಾರಣ ಧರ್ಮವನ್ನೇ ನೋಡುವೆವು. ಏವ ಎಂಬುದರಿಂದ ಸ್ವರೂಪಂ ಎಂದು ಮೂಲದಲ್ಲಿ ಅಧ್ಯಾಹಾರ ಸೂಚಿಸುವರು. ಅದಕ್ಕೆ ಮೂಲದಲ್ಲಿಯ ನಞಿಯಿಂದ ಅನ್ವಯ. ಸ್ವರೂಪಂ ನ ಪಶ್ಯಾಮಃ ಎಂದರ್ಥ. ಈಶಮಾನಿನಃ ಎಂಬುದರಿಂದ

ನಮ್ಮಂತೆ ದೇವತೆಗಳಿಗೆ ಅಭಿಮಾನ ಬಹುಕಾಲವಿರುವದು ಎಂಬ ಶಂಕೆ ನಿವಾರಿಸಲು ಪ್ರಮಾಣ ಹೇಳುವರು.

ತಾತ್ಪರ್ಯ

**ಕದಾಚಿದಭಿಮಾನಸ್ತು ದೇವಾನಾಮಪಿ ಸನ್ನಿವ ।**
**ಪ್ರಾಯಃ ಕಾಲೇಷು ನಾಸ್ತ್ಯೇವ ತಾರತಮ್ಯೇನ ಸೋಽಪಿ ತು ॥ ಇತಿ ಚ**

ಯಾವಾಗಲೋ ಒಂದು ಸಲ ಅಭಿಮಾನ ದೇವತೆಗಳಿಗೂ ಸನ್ ಇವ ಇದ್ದೇ ಇದೆ. 'ಇವೌಪಮ್ಯೇಽವಧಾರಣೇ' ಎಂದು ವಿಶ್ವವಿದೆ. ಅಭಿಮಾನಃ ಎಂಬಲ್ಲಿ ಅಭಿಪದದಿಂದ ಆ ಮಾನಕ್ಕೆ ಅವಜ್ಞತೆಯನ್ನು ಹೇಳುವರು. ಗರ್ಹಿತವಾದ ಅಭಿಮಾನ ಎಂದು ಅಪಿಪದದಿಂದ ಸೂಚಿಸಿರುವರು. 'ಅಭಿಪ್ರೇಯಸಃ' ಎಂಬ ಕಾಠಕೋಪನಿಷತ್ ಖಂಡಾರ್ಥದಲ್ಲಿ 'ಅಭಿಃ ಅವಜ್ಞಾನಾರ್ಥಃ' ಎಂದು ಅರ್ಥ ಮಾಡಿರುವ ಶ್ರೀರಾಘವೇಂದ್ರ ಸ್ವಾಮಿಗಳವರು ಅದೂ ಕದಾಚಿತ್ ಪ್ರಾಯಃ ಕಾಲದಲ್ಲಿ ಬಹುಕಾಲದಲ್ಲಿ ಇರುವದಲ್ಲ ಕಾಲೇಷು ಎಂದಿಷ್ಟೇ ಹೇಳಿದ್ದರೆ ಮೂರು ನಾಲ್ಕು ಐದಾರು ಕಾಲಾವವಯ ತೆಗೆದುಕೊಳ್ಳಬಹುದು. ಹಾಗಾಗಬಾರದೆಂದು ಪ್ರಾಯಃ ಎಂದಿರುವರು. 'ಪ್ರಾಯಸ್ತುಲ್ಯಬಾಹುಲ್ಯಯೋರಪಿ' ಎಂದು ವಿಶ್ವವಿದೆ. ನಾಸ್ತ್ಯೇವ ಬಹುಲವಗಳಲ್ಲಿ ಇರುವದು ಅಲ್ಲ ಎಂದರ್ಥ.

ಹಾಗಾದರೆ ಎಂಥ ಅಭಿಮಾನ ಎಂದರೆ ಸದಾ ಎಂಬರ್ಥ ಉಳ್ಳದ್ದಾಗಿ ಪ್ರಾಯಃ ಕಾಲೇಷು ಎಂದು ಅನ್ವಯಿಸುವದು. ಕದಾಚಿದಿರುವ ಆ ಅಭಿಮಾನವು ಏಕ ರೀತಿ ಅಲ್ಲ. ಕಿಂತು ತಾರತಮ್ಯಾನುಗುಣವಾಗಿಯೇ ಸಂಸಾರಾವಸ್ಥೆಯಲ್ಲಿಯೇ ಇರುವದು. ಈ ಅಭಿಮಾನವು ಸ್ವರೂಪತಾರತಮ್ಯಕ್ಕೆ ಪ್ರಯೋಜಕವಲ್ಲ ಹೀಗೂ ಅರ್ಥ. 'ಮುಕ್ತಿರ್ಹಿತ್ವಾನ್ಯಥಾರೂಪಂ ಸ್ವರೂಪೇಣ ವ್ಯವಸ್ಥಿತಿಃ'

**ಹೇ ಈಶ** ಸ್ವಾಮಿಯೇ **ಮಾನಿನಃ ವಯಂ** ಸ್ವಾತಂತ್ರ್ಯಾಭಿಮಾನ ಉಳ್ಳ ನಾವು ಪೃಥಕ್ ತಾರತಮ್ಯ ಉಳ್ಳವರು ಎಂದಾದರೂ ಅರ್ಥ. ।।೨೪।।

ನಮಗೆ ಆಪತ್ತುಗಳು ಬಂದಾಗಲೆಲ್ಲ ಭಗವಂತ ಅನುಗ್ರಹಿಸುತ್ತಾನೆ ಎಂದು ತಾವು ಅನುಭವಿಸಿದ ಐಶ್ವರ್ಯಯುತನೆಂದು ಅವನನ್ನು ಸ್ಮರಿಸಿ ವರ್ಣಿಸುವರು ಎಂದು ಹೇಳುವರು-




**ಯೋ ನಃ ಸಪತ್ನೈರ್ಭೃಶಮರ್ದ್ಯಮಾನಾನ್**
**ದೇವರ್ಷಿತಿರ್ಯಙ್ ನೃಷು ನಿತ್ಯ ಏವ ।**
**ಕೃತಾವತಾರಸ್ತನುಭಿಃ ಸ್ವಮಾಯಯಾ**
**ಕೃತ್ವಾತ್ಮಸಾತ್ ಪಾತಿ ಯುಗೇ ಯುಗೇ ಚ ॥೨೫॥**

**ಸಪತ್ನೈಃ** ಶತ್ರುಗಳಿಂದ, 'ರಿಪೌ ವೈರಿಸಪತ್ನಾದಿದ್ವಿಷಃ' ಎಂದು ಅಮರವಿದೆ. **ಭೃಶಂ** ಬಹಳವಾಗಿ **ಅರ್ದ್ಯಮಾನಾನ್** ಪೀಡಿತರಾದ **ನಃ** ನಮ್ಮನ್ನು **ಆತ್ಮಸಾತ್ ಕೃತ್ವಾ** ಸ್ವಾಧೀನರನ್ನಾಗಿ ಮಾಡಿಕೊಂಡು **ನಿತ್ಯಃ ಏವ** ಉತ್ಪತ್ತ್ಯಾದಿರಹಿತನಾಗಿದ್ದರೂ **ದೇವರ್ಷಿತಿರ್ಯಙ್‌ನೃಷು ದೇವ** ಉಪೇಂದ್ರನಾಗಿ **ಋಷಿ** ಪರಶುರಾಮನಾಗಿ **ತಿರ್ಯಙ್** ಮತ್ಸ್ಯಕೂರ್ಮವರಾಹಾದಿಗಳಾಗಿ **ನಾ** ರಾಮ-ಕೃಷ್ಣನಾಗಿ **ತಿರ್ಯಙ್‌ನಾ** ನರಸಿಂಹನಾಗಿ ಈ ರೀತಿ ಹೀನಾಹೀನಜಾತಿಗಳಲ್ಲಿ **ತನುಭಿಃ ಕೃತಾವತಾರಃ** ಜ್ಞಾನಾನಂದಶರೀರಗಳಿಂದ ಅವತರಿಸಿ **ಸ್ವಮಾಯಯಾ** ತನ್ನ ಅಧೀನವಾದ ಪ್ರಕೃತಿಯಿಂದ, ಅಥವಾ **ಸು ಅಮಾಯಯಾ** ಯಥಾರ್ಥವಾಗಿ ಅಥವಾ ತನ್ನ ಮಹಾತ್ಮ್ಯದಿಂದ **ಯಃ** ಯಾವನು **ಯುಗೇ ಯುಗೇ** ಪ್ರತಿಯುಗದಲ್ಲಿಯೂ **ಪಾತಿ** ರಕ್ಷಿಸುವನೋ **ಸಃ** ಅವನು **ಪಾರಃ ಅಸ್ತು** ಭಯಪಾರಕನಾಗಲಿ. **ಯುಗೇ** ದ್ವಂದ್ವಯುದ್ಧದಲ್ಲಿ **ಅಯುಗೇ** ಸೈನ್ಯದೊಡನೆ ಯುದ್ಧ ಮಾಡುವಾಗ **ಚ** ಮಧ್ಯದಲ್ಲಿ ಕಾಪಾಡುವನು ಹೀಗೆ ಅರ್ಥ ಕೆಲವರು ಮಾಡುವರು. ॥೨೫॥

**ತಮೇವ ದೇವಾ ವಯಮಾತ್ಮದೈವತಂ**
**ಪರಂ ಪ್ರಧಾನಂ ಪುರುಷಂ ವಿಶ್ವಮಾದ್ಯಮ್ ।**
**ವ್ರಜಾಮ ಸರ್ವೇ ಶರಣಂ ಶರಣ್ಯಂ**
**ಸ್ವಾನಾಂ ಸ ನೋ ಧಾಸ್ಯತಿ ಶಂ ಮಹಾತ್ಮಾ ॥೨೬॥**

**ದೇವಾಃ** ದೇವತೆಗಳಾದ **ಸರ್ವೇ ವಯಂ** ನಾವೆಲ್ಲರೂ **ಆತ್ಮದೈವತಂ** ನಮ್ಮ ಇಷ್ಟದೈವನಾದ **ಪರಂ** ಸರ್ವೋತ್ತಮನಾದ **ಪ್ರಧಾನಂ** ಎಲ್ಲರಿಗೂ ಮುಖ್ಯನಾದ, ಅತ್ಯುತ್ತಮನಾದ **ಪುರುಷಂ** ಅನಂತ ಫಲ ಕೊಡುವ, ಇದರಿಂದ ಪ್ರಧಾನದ ನಿವಾರಣೆಯಾಗುತ್ತದೆ. **ವಿಶ್ವಂ** ವ್ಯಾಪ್ತನಾದ **ಆದ್ಯಂ** ಪ್ರಪಂಚಕ್ಕೆ ಮೂಲಕಾರಣನಾದ **ಶರಣ್ಯಂ** ಶರಣು ಹೊಂದಲು ಯೋಗ್ಯನಾದ **ತಂ ಏವ** ಆ ಶ್ರೀಹರಿಯನ್ನೇ **ಶರಣಂ ವ್ರಜಾಮ** ರಕ್ಷಕನನ್ನಾಗಿ ಪಡೆಯುವೆವು. **ಮಹಾತ್ಮಾ** ಮಹಾಧೀರನಾದ

ಮಹಾಮಹಿಮನಾದ **ಸಃ** ಅವನು **ಸ್ವಾನಾಂ** ಭಕ್ತರಾದ **ನಃ** ನಮಗೆ **ಶಂ** ಸುಖವನ್ನು **ಧಾಸ್ಯತಿ** ಉಂಟುಮಾಡುವನು.

**ವಿಶಿಷ್ಟ ಅರ್ಥ**

**ಏವ** ಕಾರದಿಂದ ಮತ್ತೊಬ್ಬನನ್ನಲ್ಲವೆಂದೂ, **ದೇವಾಃ** ಎಂಬುದರಿಂದ ನಮಗೆ ಶ್ರೀಹರಿಯೇ ರಕ್ಷಕನೆಂದೂ, **ವಯಂ** ಎಂಬುದರಿಂದ ಶ್ರೀಹರಿಗಿಂತ ನಾವು ಭಿನ್ನರೆಂದು, ನಮ್ಮಲ್ಲಿಯೂ ಪರಸ್ಪರ ಭೇದವಿದೆ ಎಂದೂ **ಪರಂ** ಇತ್ಯಾದಿ ವಿಶೇಷಣಗಳಿಂದ ಇಷ್ಟದೇವತೆಯಷ್ಟೇ ಅಲ್ಲ ಸರ್ವೋತ್ತಮತ್ವಾದಿ ಗುಣ ವಿಶಿಷ್ಟನೆಂದೂ **ಪುರುಷಂ** ಎಂಬುದರಿಂದ ಪ್ರಧಾನ ಶಬ್ದಕ್ಕೆ ಪ್ರಕೃತಿ ಎಂದರ್ಥವಲ್ಲವೆಂದು **ವಿಶ್ವಂ** ಎಂಬುದರಿಂದ ವಿಶ್ವಶಬ್ದಕ್ಕೆ ಜೀವನೆಂದು ಅರ್ಥವಲ್ಲವೆಂದೂ **ಶರಣ್ಯಂ** ಎಂಬುದರಿಂದ ಕ್ರೂರ ಸ್ವಭಾವನಾದರೆ ಇಷ್ಟನಾಗುತ್ತಿರಲಿಲ್ಲವೆಂದೂ **ಸರ್ವೇ** ಎಂಬುದರಿಂದ ನಮ್ಮಲ್ಲಿ ಯಾರಿಗೂ ಇವನ ವಿಷಯದಲ್ಲಿ ರಕ್ಷಿಸುವನೋ ಇಲ್ಲವೋ ಎಂಬ ಸಂದೇಹವಿಲ್ಲವೆಂದೂ **ಸ್ವಾನಾಂ** ಎಂಬುದರಿಂದ ಶರಣು ಹೊಂದಿದರೂ ಉದಾಸೀನನಾಗದೇ ಉದಾರಿಯಂತೆ ಅಭೀಷ್ಟವನ್ನು ಕೊಡುವನೆಂದೂ ತಿಳಿಸಿರುವರು. 'ವಾಸುದೇವೋ ವಾ ಇದಮಗ್ರ ಆಸೀತ್' ಎಂಬ ಶ್ರುತಿಯು ಶ್ರೀಹರಿ ಜಗತ್ತಿಗೆ ಆದಿಕಾರಣನೆಂದು ತಿಳಿಸುತ್ತದೆ.

ಸರ್ವೋತ್ತಮತ್ವವಿಜ್ಞಾನಪೂರ್ವಕಂ ತನ್ಮನಃ ಸದಾ ।
ಸರ್ವಾಧಿಕಪ್ರೇಮಯುಕ್ತಂ ಸರ್ವಸ್ಯಾಽತ್ರ ಸಮರ್ಪಣಮ್ ।
ಅಖಂಡಾ ತ್ರಿವಿಧಾ ಪೂಜಾ ತದ್ರತ್ಯೈವ ಸ್ವಭಾವತಃ ।

ರಕ್ಷತೀತ್ಯೇವ ವಿಶ್ವಾಸಃ ತದಿಯೋಽಹಮಿತಿ ಸ್ಮೃತಿಃ ।
ಶರಣಾಗತಿರೇಷಾ ಸ್ಯಾತ್ ವಿಷ್ಣೌ ಮೋಕ್ಷಫಲಪ್ರದಾ ।

ಮುಂತಾಗಿ ವಿಷ್ಣುಪುರಾಣವು ಶರಣಾಗತ ಶಬ್ದದ ಅರ್ಥವನ್ನು ತಿಳಿಸುತ್ತದೆ. ಭೀತರಕ್ಷಣಾತ್ ಶರಣಂ ಎಂದೂ ಗೀತಾತಾತ್ಪರ್ಯದಲ್ಲಿ ಹೇಳಿದೆ. ।।೨೬।।

ಸ್ತೋತ್ರದ ಫಲವನ್ನು ಹೇಳುತ್ತಾರೆ-

**ಶ್ರೀಶುಕ ಉವಾಚ -**

**ಇತಿ ತೇಷಾಂ ಮಹಾರಾಜ ಸುರಾಣಾಮುಪತಿಷ್ಠತಾಮ್ ।**
**ಪ್ರತೀಚ್ಯಾಂ ದಿಶ್ಯಭೂದಾವಿಃ ಶಂಖಚಕ್ರಗದಾಧರಃ ।।೨೭।।**




ಮಹಾರಾಜ ಪರೀಕ್ಷಿತನೇ ಇತಿ ಮೇಲೆ ಹೇಳಿದಂತೆ **ಉಪತಿಷ್ಠತಾಂ** ಸ್ತುತಿಸುತ್ತಿದ್ದ **ತೇಷಾಂ ಸುರಾಣಾಂ** ಆ ದೇವತೆಗಳಿಗೆ **ಪ್ರತೀಚ್ಯಾಂ ದಿಶಿ** ಮೊದಲು ಹೃದಯ ಕಮಲದಲ್ಲಿ ಅನಂತರ ಹೊರಗೂ ಎದುರಿನಲ್ಲಿ **ಶಂಖಚಕ್ರಗದಾಧರಃ** ಶಂಖಚಕ್ರಗದಾಧಾರಿಯಾಗಿ, ಶ್ರೀಹರಿಯು **ಆವಿಃ ಅಭೂತ್** ವ್ಯಕ್ತನಾದನು. ।।೨೭।।

ಪ್ರತ್ಯಕ್ಷನಾದ ಶ್ರೀಹರಿಯನ್ನು ಕಂಡು ದೇವತೆಗಳು ಏನು ಮಾಡಿದರೆಂದು ಹೇಳುತ್ತಾರೆ-

**ಆತ್ಮತುಲ್ಯೈಃ ಷೋಡಶಭಿರ್ವಿನಾ ಶ್ರೀವತ್ಸಕೌಸ್ತುಭೌ ।**
**ಪರ್ಯುಪಾಸಿತಮುನ್ನಿದ್ರಶರದಂಬುರುಹೇಕ್ಷಣಮ್ ।।೨೮।।**

**ದೃಷ್ಟ್ವಾ ತಮಮರಾಃ ಸರ್ವೇ ಈಕ್ಷಣಾಹ್ಲಾದವಿಕ್ಲವಾಃ ।**
**ದಂಡವತ್ಪತಿತಾ ಭೂಮೌ ಶನೈರುತ್ಥಾಯ ತುಷ್ಟುವುಃ ।।೨೯।।**

**ಶ್ರೀವತ್ಸಕೌಸುಭೌ ವಿನಾ** ಶ್ರೀವತ್ಸವೆನಿಸಿದ ಲಕ್ಷ್ಮೀದೇವಿಯಿಂದ ಅಭಿಮನ್ಯಮಾನವಾದ ಪ್ರಕೃತಿ ಮತ್ತು ಕೌಸ್ತುಭವಾದ ಬ್ರಹ್ಮದೇವರಿಂದ ಅಭಿಮನ್ಯಮಾನವಾದ ಜೀವ ಇವುಗಳಿಲ್ಲದ ಅಂದರೆ ಪ್ರಕೃತಿ-ಪುರುಷಾತೀತವಾಗಿ ಅರ್ಥಾತ್ ಪ್ರಕೃತಿ-ಪುರುಷ ನಿರ್ಮಿತವಲ್ಲದ ಶರೀರಗಳಿಂದ **ಆತ್ಮತುಲ್ಯೈಃ** ತನ್ನ ಸ್ವರೂಪಗಳಾದ ಆದ್ದರಿಂದಲೇ ಮೂಲರೂಪಿ ನಾರಾಯಣನಿಗೆ ಸಮಾನಗಳಾದ ಅಂದರೆ ಸಾಮರ್ಥ್ಯ-ಗುಣಗಳಿಂದ ಮೂಲ ರೂಪಕ್ಕಿಂತ ಸ್ವಲ್ಪವೂ ಕಡಿಮೆ ಇಲ್ಲದ **ಷೋಡಶಭಿಃ** ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧರೆಂಬ ನಾಲ್ಕು ಮತ್ತು ಕೇಶವಾದಿ ದಾಮೋದರಾಂತ ಹನ್ನೆರಡು ಹೀಗೆ ಹದಿನಾರು ರೂಪಗಳಿಂದ **ಪರ್ಯುಪಾಸಿತಂ** ಮಧ್ಯದಲ್ಲಿ ನಾರಾಯಣರೂಪ ಸುತ್ತಲೂ ಈ ಹದಿನಾರು ರೂಪ ಹೀಗೆ ಕ್ರೀಡಿಸುವ **ಉನ್ನಿದ್ರಶರದಂಬುರುಹೇಕ್ಷಣಂ** ಅರಳಿರುವ ಶರತ್ಕಾಲದ ಕಮಲದಂತೆ ವಿಶಾಲವಾದ ಕಣ್ಣುಗಳುಳ್ಳ **ತಂ** ತಮ್ಮ ತಮ್ಮ ಹೃದಯದಲ್ಲಿಯೂ ನಂತರ ಹೊರಗೂ ವ್ಯಕ್ತನಾಗಿ ಕಾಣಸಿಕೊಂಡ ಶ್ರೀಹರಿಯನ್ನು **ದೃಷ್ಟ್ವಾ** ನೋಡಿ **ಸರ್ವೇ ಅಮರಾಃ** ಎಲ್ಲ ದೇವತೆಗಳೂ **ಈಕ್ಷಣಾಹ್ಲಾದವಿಕ್ಲವಾಃ** ನೋಟದಿಂದ ಉಂಟಾದ ಆನಂದದಿಂದ ವಿಹ್ವಲರಾಗಿ **ಭೂಮೌ** ಭೂಮಿಯಲ್ಲಿ **ದಂಡವತ್** ಕಟ್ಟಿಗೆಯಂತೆ ಉದ್ದಕ್ಕೆ **ಪತಿತಾಃ** ಸಾಷ್ಟಾಂಗ ನಮಸ್ಕಾರ ಮಾಡುವವರಾಗಿ **ಶನೈಃ** ಮೆಲ್ಲಗೆ **ಉತ್ಥಾಯ** ಎದ್ದು **ತುಷ್ಟುವುಃ** ಸ್ತೋತ್ರಮಾಡಿದರು.

ಮೇಲಿನ ಶ್ಲೋಕದಲ್ಲಿ ಶ್ರೀಹರಿಯು ಸುನಂದ-ನಂದ ಮುಂತಾದ ಪಾರ್ಷದರಿಂದ ಸುತ್ತುವರಿಯಲ್ಪಟ್ಟಿರುವನು. ಅವರಿಗೂ ಇವನಿಗೂ ಶ್ರೀವತ್ಸಕೌಸ್ತುಭಧಾರಿತ್ವ-ಅಧಾರಿತ್ವಗಳೇ ವಿಶೇಷ ಎಂದಾಗಲಿ ಅಥವಾ ಶ್ರೀಹರಿಗೆ ಅವರೆಡು ಇಲ್ಲವೆಂದಾಗಲಿ ವಿಪರೀತ ಜ್ಞಾನ ಬರುವದು. ಅದನ್ನು ಪ್ರಮಾಣದಿಂದಲೇ ಪರಿಹರಿಸುವರು-

ತಾತ್ಪರ್ಯ

**ಶ್ರೀವತ್ಸಃ ಪ್ರಕೃತಿರ್ಜ್ಞೇಯಾ ಬ್ರಹ್ಮಾಖ್ಯಃ ಕೌಸ್ತುಭಃ ಪುಮಾನ್ ।**
**ತದತೀತ್ಯೈಃ ಷೋಡಶಭಿಃ ಸ್ವರೂಪೈರಪ್ಯುಪಾಸ್ಯತೇ ॥ ಇತಿ ಚ**

ಶ್ರೀವತ್ಸ ಎಂದರೆ ಪ್ರಕೃತಿಯು ಅಂದರೆ ಲಕ್ಷ್ಮೀದೇವಿಯು ಅವಳಿಂದ ಅಭಿಮನ್ಯಮಾನವಾದ ಜಡಪ್ರಕೃತಿಯು ಬ್ರಹ್ಮದೇವರೆಂಬ ಪುರುಷ ಅಂದರೆ ಅವರಿಂದ ಅಭಿಮನ್ಯಮಾನ ಜೀವರು **ತದತೀತ್ಯೈಃ** ಪ್ರಕೃತಿ-ಪುರುಷರನ್ನು ಮೀರಿರುವ ಸ್ತ್ರೀ-ಪುರುಷ ನಿರ್ಮಿತ ಶರೀರರಹಿತಗಳಾದ ಹದಿನಾರು ಸಂಖ್ಯೆಯುಳ್ಳ ತನ್ನ ಸ್ವರೂಪಗಳಾದವುಗಳಿಂದಲೂ **ಉಪಾಸ್ಯತೇ** ಶ್ರೀಹರಿಯು ಸೇವಿಸಲ್ಪಡುವನು. **ಉಪಾಸತೇ** ಎಂಬ ಪಾಠದಲ್ಲಿ ಹದಿನಾರು ರೂಪಗಳಿಂದ ಸುತ್ತುವರಿದ ಶ್ರೀಹರಿಯನ್ನು ಬ್ರಹ್ಮಾದಿಗಳು ಉಪಾಸಿಸುವರು ಎಂದರ್ಥ.

ಪ್ರಮಾಣದಿಂದ ಮೂಲವನ್ನು ವ್ಯಾಖ್ಯಾನಿಸಿ ಅಕ್ಷರ ಯೋಜನೆಯನ್ನು ತಾತ್ಪರ್ಯ ಸಹಿತವಾಗಿ ಪರ್ಯವಸಾನ ಮಾಡುವರು-

**ಶ್ರೀವತ್ಸಕೌಸ್ತುಭೌ ವಿನಾಽಽತ್ಮತುಲ್ಯೈಃ ಪ್ರಕೃತಿಪುರುಷಾತೀತತ್ವಾತ್ ಸಪ್ತದಶ-ರೂಪಾಣ್ಯಪಿ ತುಲ್ಯಾನೀತ್ಯರ್ಥಃ । ಆತ್ಮಭೂತೈಶ್ಚ ತುಲ್ಯೈಶ್ಚ ಆತ್ಮತುಲ್ಯೈಃ ।**

ಶ್ರೀವತ್ಸಕೌಸ್ತುಭೌ ವಿನಾ ಎಂದರೆ ಪ್ರಕೃತಿ-ಪುರುಷರನ್ನು ಮೀರಿರುವದರಿಂದ ಪರಿವಾರರೂಪವಾದ ಹದಿನಾರು ತಾನು ಒಟ್ಟು ಹದಿನೇಳು ರೂಪಗಳು ಜ್ಞಾನಾದಿಗಳಿಂದ ಸಮಾನವಾದವು. ಆತ್ಮತುಲ್ಯೈಃ ಎಂಬಲ್ಲಿ ತನ್ನ ಸದೃಶವಾದ ತನ್ನಿಂದ ಭಿನ್ನರಾದ ತನ್ನಲ್ಲಿರುವ ಬಹುಧರ್ಮ ಉಳ್ಳ ಎಂಬರ್ಥವನ್ನು ನಿರಾಕರಿಸಲು ಉತ್ತರಪದಲೋಪಿ ಸಮಾಸವಿದು ಎಂದು ತಿಳಿಸಿರುವರು. ಆತ್ಮಭೂತೈಃ ತುಲ್ಯೈಃ ಎಂದು ತಿಳಿಸಿರುವರು. ತನ್ನ ಸ್ವರೂಪವೂ ಆದ್ದರಿಂದಲೇ ಸದೃಶವೂ ಎಂದರ್ಥ.

ಭೇದವ್ಯಾಪ್ತವಾದ ತುಲ್ಯತೆಯು ಸಾಕಲ್ಯೇನ ಅಭಿನ್ನವಾದ ಭಗವದ್ರೂಪಗಳಲ್ಲಿ ಬರಲು ಸಾಧ್ಯ ಎಂದರೆ ಈ ಶಂಕೆಯು ಸರಿಯಲ್ಲ. ಎಲೋ ಸ್ವಯೂಥ್ಯನೇ 'ಆವ

 

ಇಂದ್ರಂ' ಎಂಬ ಋಗ್ಭಾಷ್ಯ-ಟೀಕಾಗಳಲ್ಲಿ 'ಕರ್ತಾರಮೀಶಂ' ಎಂದಾಗಲಿ 'ಸ್ವದೃಷ್ಟಾಂತೋ ಹರೇರ್ಭವೇತ್' ಎಂದಿದ್ದಾರೆ. ಇಂದ್ರನು ವಿಷ್ಣು ಆದಾಗ ಹೇಗೆ ಎಂದರೆ ಹೇಳುವರು. **ಸ್ವೇತಿ ॥** ಹರಿಗೆ ತಾನೇ ದೃಷ್ಟಾಂತನಾಗುವನು ಎಂದು ಹೇಳಿದೆ. ಎಂದು ಟೀಕಾ.

ತಾತ್ಪರ್ಯ

ಅಪುಂಪ್ರಕೃತ್ಯಧೀನತ್ವಾದ್ವಾಸುದೇವಾದಿಕಾ ಹರೇಃ ।
ತುಲ್ಯಾಶ್ಚ ಕೇಶವಾದ್ಯಾಶ್ಚ ನ ಚ ಭಿನ್ನಾಃ ಕಥಂಚನ ॥ ಇತಿ ತಂತ್ರಸಾರೇ

ಶ್ರೀವತ್ಸಕೌಸ್ತುಭಾಭ್ಯಾಂ ತು ವಿನಾಭಾವಂ ಪ್ರದರ್ಶಯೇತ್ ।
ಪುಂಪ್ರಕೃತ್ಯಾತ್ಮಕಾಭ್ಯಾಂ ಸ ಧತ್ತೇ ನಿತ್ಯಂ ಜನಾರ್ದನಃ ॥

ಯದಸ್ಯಾಭ್ಯಾಮತೀತತ್ವಂ ಯದ್ವಶೋ ನಾನಯೋರ್ಹರಿಃ ।
ಶ್ರೀವತ್ಸಕೌಸ್ತುಭಾಭ್ಯಾಂ ತು ವಿನಾಭಾವಃ ಸ ಏವ ತು ॥ ಇತಿ ಚ

ಆತ್ಮೈವ ಸಪ್ತದಶಧಾ ಸ್ವಯಂ ಭೂತ್ವಾ ಜನಾರ್ದನಃ ।
ಮಧ್ಯಸ್ಥಾವೃತಿರೂಪೇಣ ಕ್ರೀಡತೇ ಪುರುಷೋತ್ತಮಃ ॥ ಇತಿ ಚ

ಪ್ರಕೃತಿ-ಪುರುಷರ ಅಧೀನವಾಗದೇ ಇದ್ದದ್ದರಿಂದ ವಾಸುದೇವಾದಿ ರೂಪಗಳು ಕೇಶವಾದಿ ರೂಪಗಳೂ ಶ್ರೀಹರಿಗೆ ಸಮಾನವಾದವು. ಯಾವ ರೀತಿಯಿಂದಲೂ ಭಿನ್ನವಲ್ಲ ಎಂದು ತಂತ್ರಸಾರದಲ್ಲಿ ಹೇಳಿದೆ. ಪುರುಷ-ಪ್ರಕೃತ್ಯಾತ್ಮಕವಾಗಿರುವ ಶ್ರೀವತ್ಸ-ಕೌಸ್ತುಭಗಳಿಲ್ಲದೇ ರೂಪಗಳನ್ನು ಧರಿಸುವನು. ಈ ಪ್ರಕೃತಿ-ಪುರುಷರಿಗೆ ಅತೀತನಾಗಿರುತ್ತಾನೆ ಪರಮಾತ್ಮ. ಇವುಗಳಿಗೆ ಅಧೀನನಾಗಿ ಇರುವುದಿಲ್ಲ. ಶ್ರೀವತ್ಸಕೌಸ್ತುಭಾಭ್ಯಾಂ ವಿನಾಭಾವವೆಂದರೇ ಇಷ್ಟೇ ಅರ್ಥ. ಹೊರತು ಶ್ರೀವತ್ಸಕೌಸ್ತುಭಮಣಿರಹಿತನೆಂದರ್ಥವಲ್ಲ. ತಾನೇ ಶ್ರೀಹರಿ ಹದಿನೇಳು ರೂಪಗಳನ್ನು ತಾಳಿ ಮಧ್ಯಸ್ಥ ರೂಪಕ್ಕೆ ಸುತ್ತುವರಿದು ಕ್ರೀಡಿಸುವನು ಎಂದೂ ಹೇಳಿದೆ.

ಭಗವಂತನಿಗೆ ಸದೃಶನಾದ ಮಗನಾಗಬೇಕೆಂದು ವರವನ್ನು ಕೇಳಿದಾಗ ನನಗೆ ನಾನೇ ಸದೃಶನು ಕೇವಲನಾದುದರಿಂದ. ಆದರೂ ಬ್ರಾಹ್ಮಣರ ಮಾತು ಸುಳ್ಳಾಗಬಾರದು ಬ್ರಾಹ್ಮಣಕುಲವು ನನ್ನ ಮುಖವಿದ್ದಂತೆ. ಆದ್ದರಿಂದ ಆಗ್ನೀಧ್ರನ ಪತ್ನಿಯಲ್ಲಿ ನಾನೇ ಒಂದು ಅಂಶದಿಂದ ಜನಿಸುವೆನು. ಆತ್ಮತುಲ್ಯಂ ಅನುಪಲಭಮಾನಃ ಎಂದು ಪಂಚಮಸ್ಕಂಧದಲ್ಲಿ ಹೇಳಿರುವದರಿಂದ ಸಾದೃಶ್ಯಕ್ಕೆ ಭೇದಬೇಕೆಂಬ ನಿಯಮವಿಲ್ಲವೆಂದು ತಿಳಿ.

ಎಲೋ ಪರನೇ ! ಈ ರೀತಿ ಹೇಳುವ ನಿನ್ನ ಅಭಿಪ್ರಾಯವೇನು? ಭೇದವಿಲ್ಲದೆ ಸಾದೃಶ್ಯ ಹೇಗೆ ಎಂದು ಪ್ರಶ್ನೆಯೇ? ಅಥವಾ ಆಯುಷ್ಮಂತನೇ ! ಯಾರೂ ಈ ರೀತಿ ದೃಷ್ಟಾಂತ-ದಾರ್ಷ್ಟಾಂತಿಕಭಾವ ಒಪ್ಪಿಲ್ಲ ಎಂದೋ? ಮೊದಲನೇ ಪಕ್ಷ ಸರಿಯಲ್ಲ, ಸಾಧುವಿಗೆ ಉತ್ತರಿಸಿದಂತೆ ಅಸಾಧುವಾದ ನಿನಗೂ ಅದರಿಂದಲೇ ಉತ್ತರವಾಗುವದು. ಎರಡನೆಯದು ಸರಿಯಲ್ಲ. ಅನನ್ವಯಾಲಂಕಾರವೇ ಇಲ್ಲದೇ ಹೋಗಬೇಕಾಗುವದು. ಆಲಂಕಾರಿಕರು ಅನನ್ವಯಾಲಂಕಾರವನ್ನು ಹೀಗೆ ಹೇಳುವರು.

ಉಪಮಾನೋಪಮೇಯತ್ವಂ ಯದೇಕಸ್ಯೈವ ವಸ್ತುನಃ ।
ಇಂದುರಿಂದುರಿವ ಶ್ರೀಮಾನಿತ್ಯಾದೌ ತದನನ್ವಯಃ ॥

ರಾಮರಾವಣಯೋರ್ಯುದ್ಧಂ ರಾಮರಾವಣಯೋರಿವ ।
ಗಗನಂ ಗಗನಾಕಾರಂ ಸಾಗರಃ ಸಾಗರೋಪಮಮ್ ॥

ಎಂಬಂತೆ ಎಂದು ತಿಳಿ.

ಪ್ರಮಾಣದಲ್ಲಿ ನಿತ್ಯಶಬ್ದದಿಂದ ಪ್ರಕೃತಿ-ಪುರುಷಾತೀತತ್ವ ಎಂದೂ ಹೋಗಲಾರದು ಎಂದು ಸೂಚಿಸುವರು.

ಪ್ರಕೃತಿ-ಪುರುಷಾತೀತತ್ವ ಮುಕ್ತರಿಗೆ ಇದೆಯಲ್ಲ ಎಂದರೆ 'ಯದ್ವಶೇ ನಾನಯೋಃ' ಎಂದಿದ್ದಾರೆ. ಅಂದರೆ ಜಡಪ್ರಕೃತಿಯಿಂದ ಅತೀತರಾದರೂ ಮುಕ್ತರಿಗೆ ರಮಾತಾಮರಸಸಂಭವ (ಬ್ರಹ್ಮ)ರ ಅಧೀನತೆ ಇದ್ದೇ ಇದೆ. ಅದೂ ಭಗವಂತನಿಗಿಲ್ಲ, ಕಾರಣ ಅತಿವ್ಯಾಪ್ತಿ ಇಲ್ಲ. ಸೌಭರಿಯಂತೆ ಕರ್ಮಮರ್ಮ (ಕವಚ) ಭೇದಿಸಲು ಅದರ ಅಧೀನನಾಗಿ ಹದಿನೇಳು ರೂಪ ಧರಿಸಿದನೆಂದು ಎಂದರೆ ಅಲ್ಲ. 'ಪುರುಷೋತ್ತಮಃ ಕ್ರೀಡತೇ' ಎಂದು. ಈ ರೀತಿಯಾಗಲು ನಿಮಿತ್ತ ಜನಾರ್ದನ ಎಂಬುದು. ಜನರ ಪ್ರಾರ್ಥನೆಯಂತೆ ಎಂದು ಭಾವ. ಯದ್ಯಪಿ ಭೂತಪದ ಅಧ್ಯಾಹಾರ ಮಾಡಿ ಆತ್ಮಭೂತತುಲ್ಯೈಃ ಎಂದು ವ್ಯಾಖ್ಯಾನಿಸುವದಕ್ಕಿಂತ ಮೂಲದಲ್ಲಿ ಆತ್ಮಪದಾವೃತ್ತಿ ಮಾಡಿ ಆತ್ಮಾತ್ಮತುಲ್ಯೈಃ ಎಂದು ಲಘುವಾದ ಉಪಾಯದಿಂದ ಪ್ರಸ್ತುತ ಅಪಾಯ ಪ್ರಚ್ಯುತಿಯಾಗುತ್ತಿತ್ತು. ಆದರೂ ಭೂತ್ವಾ ಎಂಬ ಪ್ರಮಾಣದಲ್ಲಿ ಪದವನ್ನು ಅನುಸಂಧಾನ ಮಾಡಿದ ಆಚಾರ್ಯರು ಆತ್ಮತುಲ್ಯೈಃ ಆತ್ಮಭೂತತುಲ್ಯೈಃ ಎಂಬ ವಿವರಣವೆಂಬ ವಿಶೇಷ ತಿಳಿಸಲು ಗುರುವರರು ಗೌರವವನ್ನು ಸಹಿಸಿ ಮಾಡಿರುವರೆಂದು ಸ್ಪಷ್ಟವಾಗಿರಬೇಕು. ॥೨೯॥

ಯಜ್ಞಾಯ ಎಂದು ವೃತ್ರಾಸುರನು ತ್ವಷ್ಟೃವಿನ ಮಗನಾದ್ದರಿಂದ ಯಜ್ಞದಲ್ಲಿ ಜನಿಸಿದವನು. ಕಾರಣ ಸಮಯೋಚಿತವಾಗಿ ಚತುರರಾದ ಅಮರರು ಯಜ್ಞನಿಯಾಮಕ ಭಗವಂತನ ಸ್ತೋತ್ರ ಮಾಡುವರು-

**ದೇವಾ ಊಚುಃ -**

**ನಮಸ್ತೇ ಯಜ್ಞವೀರ್ಯಾಯ ವಯಸೇ ಉತ ತೇ ನಮಃ ।**
**ನಮಸ್ತೇ ಅಸ್ತು ಚಕ್ರಾಯ ನಮೋऽಸ್ತು ಪುರುಹೂತಯೇ ॥೩೦॥**

**ಯಜ್ಞವೀರ್ಯಾಯ** ೧. ಯಜ್ಞವನ್ನು ಸೃಷ್ಟಿಸಿದ ೨. ಯಜ್ಞದಿಂದ ಅಭಿವ್ಯಕ್ತನಾದ ೩. ವೀರ್ಯವತ್ತರವನ್ನಾಗಿ ಮಾಡುವ ಅಥವಾ **ಹೇ ಯಜ್ಞ** ಯಜ್ಞನಾಮಕ ವಿಷ್ಣುವೇ **ವೀರ್ಯಾಯ** ವೀರರಲ್ಲಿದ್ದು ವೀರತ್ವವನ್ನು ಕೊಡುವ, ಅಥವಾ **ಯಜ್ಞಸ್ಯ** ಜ್ಯೋತಿಷ್ಟೋಮಾದಿಗಳಿಗೆ **ವೀರ್ಯಂ** ಸ್ವರ್ಗವನ್ನು ಮತ್ತು ಭಗವಂತನ ಪ್ರಸಾದ ಪ್ರದಾನಶಕ್ತಿತೆಯು ಯಾವನಿಂದ ಬಂದಿದೆಯೋ ಅವನು **ವಿಃ** ಗರುಡನು **ಈರ್ಯಃ** ಪ್ರೇರ್ಯನು ಯೇನ ಯಾವನಿಂದಲೋ ಸಃ ಅವನು ವೀರ್ಯನು, ಗರುಡವಾಹನನೆಂದರ್ಥ.

**ವಿಶಿಷ್ಟ ಅರ್ಥ**

ವಿವಿಧಂ ಈರ್ಯಂ ಪ್ರೇರ್ಯವಾದುದು ಯಾವನಿಗಿದೆಯೋ ಅವನು. 'ವಿಃ ಶ್ರೇಷ್ಠಾತೀತನಾನಾರ್ಥೇ ವಿಃ ಸ್ಯಾತ್ ಪಕ್ಷಿಸು' ಎಂದು ವಿಶ್ವವಿದೆ. **ತೇ** ನಿನಗೆ **ನಮಃ** ನಮಸ್ಕಾರವು. **ತೇ** ನಿನ್ನ **ವೀರ್ಯಾಯ ನಮಃ** ಎಂದೂ ಅನ್ವಯಿಸಬಹುದು 'ನಮಸ್ತೇ ರುದ್ರಮನ್ಯವ ಉತೋತ ಇಷವೇ ನಮಃ' ಎಂಬಂತೆ **ಉತ** ಮತ್ತು **ವಯಸೇ** ಜಗತ್ತನ್ನು ಬಂಧಿಸುವ ಸಕಲ ಜೀವರನ್ನು ಬಂಧಿಸುವ ನಿನಗೆ ನಮಸ್ಕಾರ.

ವಯಸೇ ಉತ ಎಂಬಲ್ಲಿ ಸಂಧಿಮಾಡದಿರುವದರಿಂದ ಪ್ರಥಮಾ ಪಂಚಮಿ ಮುಂತಾದವುಗಳಿಗೆ ಅವಕಾಶ ಕೊಡದಿರುವಂತೆ 'ಪರಿವಯಸೇ ಪಶೂನಿವ' ಎಂದು ಶ್ರುತಿಗೀತೆಯಲ್ಲಿ ಗೃಹೀತವಾದ ಶ್ರುತಿಯನ್ನು ಸ್ಮರಣಕ್ಕೆ ತಂದುಕೊಡುವರು. ಇದರಿಂದ ಎಲ್ಲ ದೇವತೆಗಳಿಗೆ ಪಶುಪ್ರಾಯತಾ ತಿಳಿಸುವ ಅಭಿಪ್ರಾಯವು ಸೂಚಿತವಾಗುವದು. ೧. **ಚಕ್ರಾಯ** ಮತ್ತೆ ಮತ್ತೆ ಸೃಷ್ಟ್ಯಾದಿಗಳನ್ನು ಮಾಡುವ ೨. ಎಲ್ಲವನ್ನೂ ಸಂಹರಿಸುವ ೩. ಸಮಸ್ತ ವಿಪತ್ತುಗಳನ್ನೂ ಪರಿಹರಿಸುವ ಸುದರ್ಶನ ಅವತಾರನಾದ ೪. ಚಕ್ರಧಾರಿಯಾದ (ಶಾದ್ಯಜಂತ) **ಆತ್ತಚಕ್ರಾಯ** ಎಂಬ ಪಾಠದಲ್ಲಿ ದುಷ್ಟನಿಗ್ರಹಕ್ಕೆ

ಚಕ್ರವನ್ನು ಸ್ವೀಕರಿಸಿದ, 'ಚಕ್ರಂ ಚಂಕ್ರಮಣಾದೇಷಃ' ಎಂದಿದೆ. **ತೇ ಚಕ್ರಾಯ** ನೀನೇ ಆದ ಈ ಹದಿನಾರುಸಂಖ್ಯಾರೂಪ ಸಂಘಕ್ಕೆ ಎಂದಾಗಲಿ ಅರ್ಥ 'ಚಕ್ರೋ ಗಣೇ ಚಕ್ರಂ ಸೈನ್ಯರಥಾಂಗಯೋಃ' ಎಂದು ವಿಶ್ವವಿದೆ. ನಿನಗೆ ನಮಸ್ಕಾರ. ಚಕ್ರಾದಿ ಶಬ್ದವಾಚ್ಯನಾದ ಅಚ್ಯುತನು ಎಂಬುದಕ್ಕೆ ಕಾರಣ ಹೇಳುವರು. **ಪುರುಹೂತಯೇ** ೧. ಅನೇಕ ನಾಮಗಳುಳ್ಳ ೨. 'ಇಂದ್ರ ಆಯಾಹಿ ಚಿತ್ರಭಾನೋ' ಮುಂತಾದ ಬಹುವೇದಗಳಿಂದ ಆಹ್ವಾನ ಉಳ್ಳ ೩. ಶುದ್ಧವಾದ ಪರಾಕ್ರಮ ಉಳ್ಳ ನಿನಗೆ ನಮಸ್ಕಾರವಿರಲಿ.

ಈ ಶ್ಲೋಕದಲ್ಲಿ ವಯಸೇ ಎಂಬುದಕ್ಕೆ ಕಾಲಾತ್ಮಕನೇ ಎಂದಾಗಲಿ 'ಅಸ್ಯ ದೇವಸ್ಯ ಮೀಳ್ಹುಷೇ ವಯಾ' ಎಂಬ ಶ್ರುತಿಯಲ್ಲಿ ಬಂಧಕನಾದ್ದರಿಂದ ಅಂಧಕರಿಪುವೇ (ರುದ್ರನೇ) ಎಂದಾಗಲಿ 'ನೀಚಾವಯಾ' ಎಂಬುದರ ಭಾಷ್ಯದಲ್ಲಿ 'ನೀಚಸ್ಥಾನೇ ಬಂಧನಂ ಯಾ ಕರೋತಿ' ಎಂದು ಹೇಳಿದ್ದರಿಂದ ಕಶ್ಯಪಪತ್ನಿ ದನುವಿಗೆ ಎಂದಾಗಲಿ ಯಾವುದೋ ಒಂದು ಪಕ್ಷಿಗೆ ಎಂದಾಗಲಿ ಯಾರು ಸಂದೇಹ ಪಡುವರೋ ಅವನನ್ನು ಅಸಂದಿಗ್ಧಾರ್ಥಕ ಪ್ರಮಾಣದಿಂದ ಸಂದೇಹರಹಿತನನ್ನಾಗಿ ಮಾಡುವರು ವಿಮಾನಯತಿ ಸಂಶಯ ಕಾರಣ ಪ್ರಮಾಣಗಳಿಲ್ಲದವನನ್ನಾಗಿ ಮಾಡುವರು.

'ಪರಮಾತ್ಮನನ್ನೇ ಆಯುಧವೆಂದು ಹೇಳಿದ್ದು ಹೇಗೆ ಎಂದರೆ ಸಮಾನ ವ್ಯವಹಾರ ಸಮಾನವಿಭಕ್ತ್ಯಾದಿಗಳು ಅಭೇದವನ್ನು ತಿಳಿಸುವದಿಲ್ಲವೆಂಬುದು 'ಯಜಮಾನಃ ಪ್ರಸ್ತರಃ' ಎಂಬಲ್ಲಿ ಕಂಡಿರುವದರಿಂದ ಚಕ್ರಾಯ ಎಂದ ಮಾತ್ರದಿಂದ ಚಕ್ರನೇ ಆಗಿ ಬಿಡುವದಿಲ್ಲ. ಛಾಂದೋಗ್ಯಭಾಷ್ಯದಲ್ಲಿ ಹೀಗಿದೆ.

ವಿಷ್ಣುರೂಪಾಣಿ ಗಣ್ಯಂತೇ ಪರರೂಪೇಣ ವೈ ಸಹ ।
ಏವಂಭೂತಾನಿ ಗಣ್ಯಂತೇ ಭಿನ್ನಾನ್ಯಪಿ ಪದೈಃ ಸಹ ।

ಮೂರ್ತಾಮೂರ್ತೇ ಯಥಾ ರೂಪೇ ಬ್ರಹ್ಮಣಸ್ತು ತಥೈವ ಚ ।
ಭಿನ್ನಾನ್ಯಪಿ ತು ಭೂತಾನಿ ಪದಾನಿ ಸ್ವಪದೈಃ ಸಹ ॥ ಇತಿ ಪ್ರಾಥಮ್ಯೇ

ಸುದರ್ಶನಾಖ್ಯಂ ಸ್ವಾಸ್ತ್ರಂ ತು ಪ್ರಾಯುಂಕ್ತ ತದಪಿ ತ್ರಿಪಾತ್ ॥

ನಮಸ್ತೇ ಅಸ್ತು ಎಂಬಲ್ಲಿ ಸಂಧಿ ಮಾಡದಿರುವದರಿಂದ ಇದು ಮಹಾಮಂತ್ರ ಎಂದು ಸೂಚಿಸುತ್ತಿದ್ದಾರೆ. ಅಥವಾ ಶತ್ರುವಿನ ಶರೀರ ಸಂಧಿಯ ರಂಧನ ಸೂಚಿಸುವರು. ಪುರುಹೂತಯೇ ಪುರವಃ ಸರ್ವಾಃ ಹೂತಯಃ ಆಹ್ವಾನಾನಿ ಯಸ್ಯ 'ಹೂತಿರಾಕರಣಾಹ್ವಾನೇ' ಎಂದು ಅಮರ. ನಿನ್ನನ್ನು ಸ್ತುತಿಸುವವರು ಗತಿಭ್ರಷ್ಟರಲ್ಲ

ಎಂದು ಹೇಳುವರು. ಪುರುಭಿಃ ಮಹಾತ್ಮಭಿಃ ಬಹುಭಿಃ ಹೂತಿಃ ಆಹ್ವಾನಂ ಯಸ್ಯ ಸಃ ತಸ್ಮೈ ಪುರುಹೂತಯೇ ಪುರುಹುಃ ಶುದ್ಧಾ ಊತಿಃ ಅಭಿಪ್ರಾಯಃ ಯಸ್ಯ ಸಃ ತಸ್ಮೈ ಇದರಿಂದ ಶ್ರೀಹರಿಯು ತಾರಕನು ಹೊರತು ಪ್ರರತಾರಕನಲ್ಲ ಎಂದು ಹೇಳಿದಂತಾಯಿತು. ಪುರುಹುಃ ಶುದ್ಧಿರುಚ್ಯತೇ ಎಂದು ಅಭಿಧಾನವಿದೆ.

ತಾತ್ಪರ್ಯ

**ವಯಃ ಸರ್ವಸ್ಯ ವಯನಾದ್ ಭಗವಾನ್ ಪುರುಷೋತ್ತಮಃ' ಇತಿ ಚ । 'ಮಾ ತಂತುಶ್ಛೇದಿ ವಯತೋ ಧಿಯಂ ಮೇ' ಇತಿ ಶ್ರುತಿಃ ।**

'ವಯ ಬಂಧನೇ' ಎಂದು ಧಾತು ಇರುವದರಿಂದ ಎಲ್ಲರನ್ನೂ ಬಂಧನ ಮಾಡುವದರಿಂದ ಭಗವಂತನಾದ ಪುರುಷೋತ್ತಮನು ವಯನೆನಿಸುವನು. ಉದಾಹರಿಸಿದ ಶ್ರುತಿಯಲ್ಲಿಯೂ ವಯಃ ಪದವು ಬಂಧನಾರ್ಥಕವಾಗಿರುವದನ್ನು ಕಾಣಬಹುದು.

'ಮಾ ತಂತುಶ್ಛೇದಿ ವಯತೋ ಧಿಯಂ ಮೇ ಮಾ ಮಾತ್ರಾ ಶಾರ್ಯಾಪಸಃ ಪುರುರುತೇಃ' ಎಂಬ ಶ್ರುತಿಗೆ ಈ ರೀತಿಯಾಗಿ ಅರ್ಥ ಹೇಳಬೇಕು. **ಹೇ ವರುಣ** ಶ್ರೇಷ್ಠಾನಂದ ರೂಪನಾದ ಹರಿಯೇ **ಧಿಯಂ ವಯತಃ** ನಿನ್ನಲ್ಲಿ ಬುದ್ಧಿಯನ್ನು ಬಂಧಿಸುವ **ಮೇ** ನನ್ನ **ತಂತುಃ** ಸಂತತಿಯು **ಮಾ ಛೇದಿ** ಕಡಿದು ಹೋಗದಿರಲಿ, 'ನಾಪುತ್ರಸ್ಯ ಲೋಕೋಽಸ್ತಿ' ಎಂದು ಶ್ರುತಿಯಿದೆ. ಮಾತ್ರಾ ಎಂಬುದರಿಂದ ಜ್ಞಾನವು ಅವಶ್ಯ ಬೇಕೆಂದು ಹೇಳುವರು. 'ಯೇ ಗತ್ಯರ್ಥಾಃ ತೇ ಜ್ಞಾನಾರ್ಥಾಃ' ಎಂಬ ನ್ಯಾಯದಿಂದ. ಋತೇಃ ಪುರಾ ಜ್ಞಾನ ಉಂಟಾಗುವ ಮೊದಲು **ಅಪಸಃ** ಕರ್ಮಗಳ **ಮಾತ್ರಾ** ಒಂದಂಶವೂ **ಮಾ ಶಾರಿ** ನಾಶವಾಗುವದು ಬೇಡ. ಅಂದರೆ ತನ್ನ ಕಾರ್ಯ ಮಾಡದೇ ಹೋಗುವದು ಬೇಡ. 'ಕರ್ಮಣಾ ಜ್ಞಾನಮಾತನೋತಿ' ಎಂದು ಶ್ರುತಿಯಿದೆ. ಕ್ರತೋ ಎಂಬ ಪಾಠದಲ್ಲಿಯೂ ಜ್ಞಾನವೆಂದೇ ಅರ್ಥ.

ಪ್ರಮಾಣದಲ್ಲಿ ವಿಶ್ವಸ್ಯ ಎನ್ನದೇ ಸರ್ವಸ್ಯ ಎಂದದ್ದರಿಂದ ಸರ್ವೋ ಹ್ಯೇಷ ರುದ್ರಃ ಎಂದು ಶ್ರುತಿ ಇರುವದರಿಂದ 'ಸರ್ವಃ ಶರ್ವಃ ಕಾಲಂಜಲಃ ಶಿವಃ' ಎಂದು ನಾಮನಿಧಾನದಲ್ಲಿ ಹೇಳಿರುವದರಿಂದಲೂ 'ಅರ್ವ ಷರ್ವ ಹಿಂಸಾಯಾಂ' ಎಂದಿರುವದರಿಂದ ಹಿಂಸಕತ್ವ ಯೋಗವಿರುವುದವರಿಂದಲೂ ಕಿಂಚಿತ್ ಸಾದೃಶ್ಯದಿಂದ ವಿಶೇಷವಾಗಿ ನಾಮ ನಿರ್ದೇಶ ಮಾಡಿ ಪುರಹರ (ರುದ್ರ) ಪರಾಕೃತಿಯನ್ನು ಸೂಚಿಸಿರುವರು ಎಂದು ತಿಳಿಯಬೇಕು. ॥೩೦॥

**ಯತ್ತೇ ಗತೀನಾಂ ತಿಸೃಣಾಮೀಶಿತುಃ ಪರಮಂ ಪದಮ್ ।**
**ನಾರ್ವಾಚೀನೋ ವಿಸರ್ಗಸ್ಯ ಧಾತುರ್ವೇದಿತುಮರ್ಹತಿ ॥೩೦॥**

**ಈಶಿತುಃ** ಸರ್ವನಿಯಾಮಕನಾದ **ತೇ** ನಿನ್ನ **ಯತ್** ಯಾವ **ತಿಸೃಣಾಂ** ದೇವಲೋಕ-ಪಿತೃಲೋಕ-ನರಕಲೋಕಗಳೆಂಬ **ಗತೀನಾಂ ಸಕಾಶಾತ್** ಕರ್ಮಫಲಗಳಾದ ಸ್ಥಾನಗಳಿಗಿಂತ **ಪರಮಂ** ಉತ್ಕೃಷ್ಟವಾದ **ಪದಂ** ವೈಷ್ಣವಸ್ಥಾನಗಳಾದ ವೈಕುಂಠಾದಿ ಲೋಕಗಳೋ **ತತ್** ಅವುಗಳನ್ನು **ಧಾತುಃ** ಬ್ರಹ್ಮದೇವರ **ವಿಸರ್ಗಸ್ಯ** ವಿವಿಧಸೃಷ್ಟಿಯಲ್ಲಿ **ಅರ್ವಾಚೀನಃ** ಅನಂತರಕಾಲದವನಾದ ಅಂದರೆ ಈಗಿನ ಮನುಷ್ಯನು ಅರ್ಥಾತ್ ಜ್ಞಾನಿಯಾಗದವನು **ವೇದಿತುಂ** ತಿಳಿಯಲು, (ಹೊಂದಲು) **ನ ಅರ್ಹತಿ** ಯೋಗ್ಯನಲ್ಲ. ಲೋಕಗಳ ಜ್ಞಾನವನ್ನೇ ಮಾಡಿಕೊಳ್ಳಲಾಗುವುದಿಲ್ಲವೆಂದ ಮೇಲೆ ಆ ವೈಕುಂಠಾದಿಲೋಕಗಳಲ್ಲಿ ವಾಸಮಾಡುವ ಮುಕ್ತರ ಜ್ಞಾನ ಮಾಡಿಕೊಳ್ಳಲು ಸಾಧ್ಯವಿಲ್ಲವೆಂದು ಹೇಳಬೇಕಾಗಿಲ್ಲ. ಇದರಿಂದ ಆ ಲೋಕಗಳನ್ನು ಹೊಂದಲು ಜ್ಞಾನವೇ ಸಾಧನ. ಕರ್ಮವಲ್ಲ ಎಂದಂತಾಯಿತು.

ಬೇರೆ ಯಾವ ಮೂರು ಲೋಕಗಳೋ ಎಂಬ ಭಯ ಪರಿಹರಿಸಲು ಪ್ರಮಾಣ ಹೇಳುವರು-

ತಾತ್ಪರ್ಯ

**ದೇವಲೋಕಾತ್ ಪಿತೃಲೋಕಾನ್ನಿರಯಾಚ್ಚೈವ ಯತ್ಪರಮ್ ।**
**ತಿಸೃಭ್ಯಃ ಪರಮಂ ಸ್ಥಾನಂ ವೈಷ್ಣವಂ ವಿದುಷಾಂ ಗತಿಃ ॥ ಇತಿ ಮಾಹಾತ್ಮ್ಯೇ**

**ದೇವಲೋಕಾತ್** ಮಹದಾದಿಲೋಕಕ್ಕಿಂತಲೂ **ಪಿತೃಲೋಕಾತ್** ಸ್ವರ್ಗಕ್ಕಿಂತಲೂ **ನಿರಯಾತ್** ರೌರವಾದಿಗಳಿಗಿಂತಲೂ ಮೇಲೆ ಇರುವ ಶ್ರೇಷ್ಠವಾದ ವೈಷ್ಣವಸ್ಥಾನಗಳು ಅಪರೋಕ್ಷಜ್ಞಾನಿಗಳಿಂದ ಹೊಂದಲ್ಪಡುವವು. ಎಂದು ಮಾಹಾತ್ಮ್ಯಗ್ರಂಥದಲ್ಲಿ ಹೇಳಿದೆ. ॥೩೦॥

ಹಿಂದೆ ಯುದ್ಧದಲ್ಲಿ ಶಸ್ತ್ರಾಸ್ತ್ರಗಳನ್ನು ಶತ್ರುವು ನುಂಗಿರುವದರಿಂದ ಮುಂದೆ ನಿನ್ನ ಅನುಗ್ರಹವಿಲ್ಲದೆ ಇಂದ್ರ, ವಜ್ರಾಯುಧಗಳಿಗೆ ಸ್ವಚ್ಛಂದ ಕೃತ್ಯವಿಲ್ಲವೆಂದೂ ಗುಣಗಣಗಳು ಅಗಣಿತಗಳಾದುದರಿಂದ ಶ್ಲೋಕಗಳಿಂದ ಗಣನೆ ಮಾಡಿದ ಗಣಗಳು ಸಾಕು ಎಂದಾಲೋಚಿಸಿ ದೇವತೆಗಳ ಸಮೂಹವು ಛಂದಸ್ಸಿಲ್ಲದ ಗದ್ಯದಿಂದ ಆದ್ಯನಾದ ಶ್ರೀಹರಿಯನ್ನು ಸ್ತುತಿಸಿದರು. ಮೊದಲಿಗೆ ಸೃಷ್ಟಿಸುವವನು ಅಬ್ಜಜನು

(ಬ್ರಹ್ಮಾ) ಮಾರಕನು ಮಾರಹರನು (ರುದ್ರನು) ಪಾಲಯಿತಾ ಗೋಪಾಲಃ ರಕ್ಷಕನು ಶ್ರೀಕೃಷ್ಣನು ಎಂಬ ಕೆಲವು ಅಜ್ಞಾನಿಗಳು ಮಾಡಿದ ವ್ಯವಸ್ಥೆಯನ್ನು ದುರವಸ್ಥೀಕರಿಸುವರು-

ಓಂ ನಮಸ್ತೇಽಸ್ತು ಭಗವನ್ನಾರಾಯಣ ವಾಸುದೇವಾದಿಪುರುಷ ಮಹಾಪುರುಷ ಮಹಾನುಭಾವ ಪರಮಮಂಗಲ ಪರಮಕಲ್ಯಾಣ ಪರಮಕಾರುಣಿಕ ಪರಮಹಂಸ-ಪರಿವ್ರಾಜಕೈಃ ಪರಮೇಣಾತ್ಮಯೋಗಸಮಾಧಿನಾ ಪರಿಭಾವಿತ ಪರಿಸ್ಫುಟಿತಪಾರಮ-ಹಂಸ್ಯಧರ್ಮೇಣೋದ್ಘಾಟಿತತಮಃಕಪಾಟದ್ವಾರೇಣಾಪಾವೃತೇ ಆತ್ಮಲೋಕೇ ಸ್ವಯಮುಪಲಬ್ಧೋ ನಿಜಸುಖಾನುಭವೋ ಭವಾನ್ ದುರವಬೋಧ ಇವ ತವ ವಿಹಾರಯೋಗೋ ಯದಶರಣೋಽಶರೀರ ಇದಮನಪೇಕ್ಷಿತಾಸ್ಮತ್ಸಮವಾಯಃ ಸ ಆತ್ಮನ್ಯೆವಾವಿಕ್ರಿಯಮಾಣೇನ ಸಗುಣಮಗುಣಃ ಸೃಜಸಿ ಪಾಸಿ ಹಂಸಿ ॥೩೨॥

ಶ್ರೀಹರಿಯು ಪ್ರಸನ್ನನಾಗಲು ಅವನ ಗುಣಗಳ ಉತ್ಕರ್ಷ ತಿಳಿಸುವ ಸ್ತೋತ್ರವೇ ಪ್ರಯೋಜಕವಾಗಿದೆ. ಪದ್ಯಗಳು ಪದ ನಿಯಮದಿಂದ ಕೂಡಿದವುಗಳಾದ್ದರಿಂದ ಕೆಲವು ಗುಣಗಳನ್ನು ತಿಳಿಸುವದೇ ಹೊರತು ಅಪೇಕ್ಷಿತ ಅನೇಕ ಗುಣಗಳನ್ನು ತಿಳಿಸಲಾರವು. ಆದ್ದರಿಂದ ತಾವು ಹೇಳಬೇಕೆಂದಿರುವ ಅನೇಕ ಗುಣಗಳನ್ನು ಗದ್ಯದಿಂದ ಸ್ತೋತ್ರಮಾಡುತ್ತಾರೆ.

**ಭಗವನ್** ಷಡ್ಗುಣಪೂರ್ಣನೇ **ವಾಸುದೇವ** ವ್ಯಾಪ್ತಿ ಮೊದಲಾದ ಗುಣ ಉಳ್ಳವನೇ **ಆದಿಪುರುಷ** ಪುರುಷೋತ್ತಮನೇ **ಮಹಾನುಭಾವ** ಎಲ್ಲರನ್ನೂ ಮೀರುವ ಸಾಮರ್ಥ್ಯ ಉಳ್ಳವನೇ **ಪರಮಮಂಗಲ** ಅತ್ಯಂತ ಮಂಗಲ ಸ್ವರೂಪನೇ **ಪರಮಕಲ್ಯಾಣ** ಸಕಲ ಶುಭದಾಯಕನೇ **ಪರಮಕಾರುಣಿಕ** ಅತ್ಯಂತ ಕರುಣಾವಂತನೇ ನಾರಾಯಣನೇ **ತೇ ನಮಃ** ನಿನಗೆ ನಮಸ್ಕಾರವಿರಲಿ. ಈ ಸ್ತೋತ್ರವು ಬ್ರಹ್ಮವಿದ್ಯೆಯಾದ್ದರಿಂದ ಪ್ರಾರಂಭದಲ್ಲಿ ಓಂಕಾರವನ್ನು ಹೇಳಿರುವರು. **ಪರಮಹಂಸಪರಿವ್ರಾಜಕೈಃ** ಕುಟೀಚಕ, ಬಹೂದಕ, ಹಂಸ, ಪರಮಹಂಸರೆಂಬ ನಾಲ್ಕು ಬಗೆಯ ಸನ್ನ್ಯಾಸಿಗಳಲ್ಲಿ ಅತ್ಯುತ್ತಮರಾದ ಪರಮಹಂಸರೆಂಬ ಸನ್ನ್ಯಾಸಿಗಳಿಂದ **ಪರಮೇಣ** ಅತ್ಯುತ್ತಮವಾದ **ಆತ್ಮಯೋಗಸಮಾಧಿನಾ** ಶ್ರೀಹರಿಯ ಧ್ಯಾನದಿಂದ ಚಿತ್ತೈಕಾಗ್ರತೆಯಿಂದ **ಪರಿಭಾವಿತ** ಅಭಿವೃದ್ಧವಾದ **ಪರಿಸ್ಫುಟಿತ** ಪ್ರಕಾಶಿತವೂ ಆದ **ಪಾರಮಹಂಸ್ಯಧರ್ಮೇಣ** ಪರಮಹಂಸಸನ್ನ್ಯಾಸಿಗಳ ಸಂಬಂಧಿಯಾದ ಜ್ಞಾನವೆಂಬ ಧರ್ಮದಿಂದ **ಉದ್ಘಾಟಿತ** ತೆರೆಯಲ್ಪಟ್ಟ **ತಮಃಕಪಾಟದ್ವಾರೇಣ** ಅಜ್ಞಾನವೆಂಬ ಬಾಗಿಲ ದ್ವಾರ ಉಳ್ಳ, ಅಜ್ಞಾನವು ದೂರವಾದದ್ದರಿಂದ **ಅಪಾವೃತೇ** ಪ್ರಕಾಶಿತವಾದ **ಆತ್ಮಲೋಕೇ** ನಿನ್ನವೆಂದು

ಪ್ರಸಿದ್ಧವಾದ ವೈಕುಂಠಾದಿಗಳಲ್ಲಿ **ಸ್ವಯಂ** ಪ್ರಯತ್ನವಿಲ್ಲದೇ **ಉಪಲಬ್ಧಃ** ಪ್ರತ್ಯಕ್ಷನಾಗಿರುವ **ಭವಾನ್**, ನೀನು **ನಿಜಸುಖಾನುಭವಃ** ಸ್ವರೂಪ ಸುಖಾನುಭವ ಉಳ್ಳವನು. **ತವ** ಈ ನಿನ್ನ **ವಿಹಾರಯೋಗಃ** ಜಗತ್ತಿನ ಸೃಷ್ಟಿ-ಸ್ಥಿತಿ- ಸಂಹಾರ ಮೊದಲಾದವುಗಳಿಗೆ ಕಾರಣವಾದ ಕ್ರೀಡೆ ಎಂಬ ಉಪಾಯವು **ದುರವಬೋಧ ಇವ** ತಿಳಿಯಲು ಅಸಾಧ್ಯವೆಂಬಂತಿದೆ. ನಿನ್ನ ಅನುಗ್ರಹವಿಲ್ಲದೇ ತಿಳಿಯಲಾಗದೆಂದರ್ಥ.

**ಯತ್** ಏಕೆಂದರೆ **ಅಶರಣಃ** ಅಧಿಷ್ಠಾನವಿಲ್ಲದ **ಅಶರೀರಃ** ಜ್ಞಾನಸಾಧನವಾದ ಪ್ರಾಕೃತ ದೇಹವಿಲ್ಲದ **ಅನಪೇಕ್ಷಿತಾಸ್ಮತ್ಸಮವಾಯಃ** ನಮ್ಮೆಲ್ಲರ ಸಹಾಯವನ್ನೇಪೇಕ್ಷಿಸದ **ಅಗುಣಃ** ಸತ್ವಾದಿಗುಣ ರಹಿತನಾದ **ಸಃ ತ್ವಂ** ಆ ನೀನು **ಸಗುಣಂ** ಪ್ರಾಕೃತ ಸತ್ವಾದಿಗುಣ ವಿಕಾರವಾದ ಅದರ ಸಂಬಂಧ ಉಳ್ಳ **ಇದಂ** ಚೇತನಾಚೇತನಾತ್ಮಕ ಜಗತ್ತನ್ನು **ಅವಿಕ್ರಿಯಮಾಣೇನ** ತನ್ನಿಂದಾಗಲಿ ಪರರಿಂದಾಗಲಿ ವಿಕಾರವಿಲ್ಲದ **ಆತ್ಮನಾ ಏವ** ಸ್ವಭಾವದಿಂದಲೇ ಭೋಗ ಮುಂತಾದ ಪ್ರಯೋಜನವಿಲ್ಲದೇ **ಸೃಜಸಿ** ಸೃಷ್ಟಿಸುವಿ **ಪಾಸಿ** ಪಾಲಿಸುವಿ **ಹಂಸಿ** ಸಂಹರಿಸುವಿ.

ಆದ್ದರಿಂದ ಲೋಕವಿಲಕ್ಷಣ ಕರ್ತೃವಾದ್ದರಿಂದ ತಿಳಿಯಲು ಅಸಾಧ್ಯವೆಂದರ್ಥ. ಈ ರೀತಿ ವಿಜಯಧ್ವಜ, ಚೆಟ್ಟಿ ಅನುಸಾರಿ ಅರ್ಥ.

**ಶ್ರೀಸತ್ಯಧರ್ಮರ ವಿಶೇಷಾರ್ಥ**

ಭಗವಾನ್ ಎಂದಾರಂಭಿಸಿ ಕೃಷ್ಣ ಎಂಬಲ್ಲಿವರೆಗಿನ ಸಂಬುದ್ಧ್ಯಂತ ಪದಗಳನ್ನು ಬಿಟ್ಟು ಬಂದಿರುವ ವ್ಯೂಹದಲ್ಲಿ ಹದಿನೇಳು ಸಂಖ್ಯೆಗಳುಳ್ಳ ರೂಪಗಳನ್ನು ವ್ಯಾಸರು ಹಂಸಾಯ ಎಂಬಲ್ಲಿಯ ವರೆಗಿನ (ಮುಂಚಿನ) ಗ್ರಂಥದಿಂದ ಸಂಗ್ರಹಸಿರುವರು. ಈ ಅಭಿಪ್ರಾಯವು ಪ್ರಾಯಃ ಬಹುಬುದ್ಧಿಯುಳ್ಳವರನ್ನು ಬಿಟ್ಟು ಇತರರಿಂದ ತಿಳಿಯಲು ಸಾಧ್ಯವಿಲ್ಲ. ಆದ್ದರಿಂದ ದೀನರಲ್ಲಿ ದಯೆಯುಳ್ಳ ಇದರ ಅರ್ಥವನ್ನು ತಿಳಿದಿರುವ ಶ್ರೀಮದಾನಂದತೀರ್ಥ ಶ್ರೀಚರಣರು ಈ ನೆಪದಿಂದ ನಿಬಂಧನ ಮಾಡಿದ್ದಾರೆ.

ಇಲ್ಲಿರುವ ಭಗವನ್ ಎಂಬ ಒಂದು ಶಬ್ದವು ಈ ವ್ಯೂಹದ ಮಧ್ಯದಲ್ಲಿರುವ ಶ್ರೀನಾಥನ ಸಂಬೋಧನೆಯಾಗಿದೆ. ಇನ್ನುಳಿದ ಎರಡು ಭಗವನ್ ಎಂಬ ಶಬ್ದಗಳು ವಾಸುದೇವಾದಿ ವ್ಯೂಹಕ್ಕೂ ಕೇಶವಾದಿ ವ್ಯೂಹಕ್ಕೂ ಸಂಬೋಧಕಗಳಾಗಿ ಸಾರ್ಥಕವೆಂದು ತಿಳಿಯಬೇಕು. ಆದ್ದರಿಂದಲೇ ವಿಶೇಷಣ ಕೃತ್ಯ ಹುಡುಕುವ ಆಯಾಸ ಇಲ್ಲವೆಂದು ತಿಳಿಯಬೇಕು.

**ಹೇ ಭಗವನ್** ಷಡ್ಗುಣ ಪರಿಪೂರ್ಣನೇ **ನಾರಾಯಣ** ದೋಷರಹಿತನೇ ಗುಣಗಣಸಹಿತನೇ, ಉದಕಾಶ್ರಯನೇ, ಮುಕ್ತಾಶ್ರಯನೇ, ವೇದಪ್ರತಿಪಾದ್ಯನೇ, ವಾಯುದೇವರಿಗೆ ಪರಮ ಪ್ರೇಮಾಸ್ಪದನೇ, ಸರ್ವವಂದ್ಯನೇ, ಜನ್ಮಾದಿಕರ್ತೃವೇ, **ವಾಸುದೇವ** ವಸುದೇವಸುತನೇ, 'ವಾಸನಾದ್ವಾಸುದೇವೋಽಸಿ ವಾಸಿತಂ ತೇ ಜಗತ್ತ್ರಯಂ । ಸರ್ವಭೂತನಿವಾಸೋಽಸಿ ವಾಸುದೇವ ನಮೋಽಸ್ತು ತೇ ॥ ಎಂಬರ್ಥವನ್ನು ತಿಳಿಯಬೇಕು, ಇದರಿಂದ ಇಲ್ಲಿ ಹೇಳಿದ ವಾಸುದೇವಾದಿವ್ಯೂಹವನ್ನು ಸ್ಫೋರಣ ಮಾಡಿದಂತಾಯಿತು. **ಆದಿಪುರುಷ** ಪುರಾತನಪುರುಷನೇ, ಆದಿಪುರುಷ ಎಂದದ್ದರಿಂದ ವಾಸುದೇವಾದಿಗಳಿಗೆ ಆದಿಪುರುಷ ಕೇಶವ, ಉಪಲಕ್ಷಣಯಾ ಕೇಶವವ್ಯೂಹ ಸಂಗ್ರಹವಾಯಿತು. **ಮಹಾಪುರುಷ** ಉತ್ತಮ ಪುರುಷನೇ **ಮಹಾನುಭಾವ** ಮಹಾಪ್ರಭಾವನೇ **ಪರಮಮಂಗಲ** ಸ್ವಯಂ ಪರಮಕಲ್ಯಾಣರೂಪನೇ **ಪರಮಾಃ** ಶ್ರೇಷ್ಠರಾದ ರಮಾದಿಗಳಿಗೆ ಕಲ್ಯಾಣಪ್ರದನೇ **ಪರಮಕಾರುಣಿಕ** ಪರಮದಯಾವಂತನೇ **ಪರಮಹಂಸೈಃ** ಪರಿಶುದ್ಧರಾದ ಗೃಹಸ್ಥಾಶ್ರಮಿಗಳು, ಪರಿವ್ರಾಜಕಾ 'ಯತ್ಯಾಶ್ರಮೇ ತುರೀಯೇ ವೈ ಪ್ರೀತಿರ್ಮಮ ಗರೀಯಸೀ' ಎಂದು ಹೇಳಿದ ಸನ್ಯಾಸಿಗಳು ಇವರಿಂದ ಎಂದರ್ಥ. ಇವರು ಕುಟೀಚಕ ಬಹೂದಕ, ಹಂಸ, ಪರಮಹಂಸ, ಎಂದು ನಾಲ್ಕು ವಿಧರು, ಕೊನೆಯವರಿಗೆ ನಿಷ್ಕ್ರಿಯರೆಂದೂ ಹೆಸರು. ಇವನು ಗೃಹಸ್ಥ ಇವನು ಯತಿ ಎಂಬ ಸಂಕೋಚ ಮಾಡಿ ವ್ಯವಹಾರವಿದೆ. ವಾಸ್ತವಿಕವಾಗಿ ಭಕ್ತನೇ ಮುಖ್ಯ. ಗೀತಾತಾತ್ಪರ್ಯದಲ್ಲಿ ಹೀಗೆ ಹೇಳಿದೆ. 'ಏತಸ್ಮಾನ್ನ್ಯಾಸಿನಾಂ ಲೋಕಂ ಸಂಯಾಂತಿ ಗೃಹಿಣೋಽಪಿ ಹಿ, ಜ್ಞಾನಮಾರ್ಗಃ ಕರ್ಮಮಾರ್ಗ ಇತಿ ಭೇದಸ್ತತೋ ನಹಿ । ತಸ್ಮಾದಾಶ್ರಮಭೇದೋಽಯಂ ಕರ್ಮಸಂಕೋಚಸಂಭವಃ । ಇತಿ ವ್ಯಾಸಸ್ಮೃತೌ' **ಆತ್ಮಯೋಗಸಮಾಧಿನಾ** ಪ್ರಸನ್ನ ಭಗವತ್ಸಂಬಂಧದಿಂದ ಉಂಟಾದ ಮನಸ್ಸಿನ ಅಚಾಂಚಲ್ಯದಿಂದ **ಪರಿಭಾವಿತಃ** ಸುಶೀಲಿತನಾದ ಪರ್ಯಾಲೋಚಿತನಾದ ಎಂದರ್ಥ.

ಇಲ್ಲಿ ಒಂದು ಸಂದೇಹ. 'ಪರೌ ಭುವೋಽವಜ್ಞಾನೇ' ಎಂದು ಪರಿ ಉಪಸರ್ಗಪೂರ್ವಕ ಭೂ ಧಾತುವಿಗೆ ಅವಜ್ಞಾನಾರ್ಥಕತ್ವವಿರುವದರಿಂದ ಆ ಅರ್ಥವಾದರೂ ಪ್ರಕೃತಕ್ಕೆ ಅನುಪಪನ್ನ. ಬೇರೆ ಅರ್ಥ ಹೇಳುವದು ಹೇಗೆ? ಈ ಅರ್ಥದಲ್ಲೇ ಅನುಶಾಸನವಿದೆಯಲ್ಲ ಎಂದರೆ, ಈ ಶಂಕೆ ಸರಿಯಲ್ಲ. ಇಲ್ಲಿ ಪರಿ ಎಂಬುದು ಭಾವಿತ ಎಂಬ ಣಿಜಂತವಾದ ಧಾತುವಿಗೆ ಉಪಸರ್ಗ

ಯೋಗವಾಗಿರುವದರಿಂದ 'ಕೇಯಂ ಕಥಂತಾ' ಹೇಗೆಂಬುವದು ಹೇಗೆ? ಪರಿಭಾವ್ಯ ಎಂಬ ಕೌಮುದೀ ವ್ಯಾಖ್ಯಾನ ಮಾಡುವಾಗ ತತ್ತ್ವಸುಭೋಧಿನಿಯಲ್ಲಿ ಪರ್ಯಾಲೋಚ್ಯ ಇತ್ಯರ್ಥಃ, ಪರಿ ಪೂರ್ವಕಸ್ಯ ಭವತೇಃ ತಿರಸ್ಕಾರಾರ್ಥಕತ್ವಾತ್ ಕಥಂ ಅತ್ರ ಜ್ಞಾನರ್ಥತಾ ಇತಿ ಶಂಕ್ಯಂ ಭಾವಿತಿ ಚುರಾದಿಣಿಜಂತೇನ ಯೋಗಾತ್ ಎಂದಿದ್ದಾರೆ. ಪರಿಪೂರ್ವಕ ಭೂ ಧಾತುವಿಗೆ ತಿರಸ್ಕಾರ ಎಂಬರ್ಥವಿದ್ದರೂ ಣಿಜಂತ ಭೂ ಧಾತುವಿಗೆ ಪರಿ ಸಂಬಂಧವಾದಾಗ ಬೇರೆ ಅರ್ಥ ಹೇಳಬಹುದು ಎಂದು ಭಾವ. ಇನ್ನು ಕೆಲವರು ಭೂ ಧಾತುವಿಗೆ ಪರಿ, ಸಂಬಂಧವನ್ನು ಒಪ್ಪಿಯೂ ಅರ್ಥ ಹೇಳಿರುವರು. ಅವರು ಪರೌ ಭೂವೋ ಅವಜ್ಞಾನೇ' ಎಂಬ ಸೂತ್ರದಲ್ಲಿ ಅವಜ್ಞಾನ ಎಂದು ಭುವಃ ಎಂಬುದಕ್ಕೆ ವಿಶೇಷಣ ಕೊಟ್ಟಿದ್ದರಿಂದ ತಿರಸ್ಕಾರ ಎಂದರ್ಥ ಹೇಳಬೇಕೆಂಬ ನಿಯಮವಿಲ್ಲ. 'ಮನಸಾ ಪರಿಭಾವ್ಯ ಕಿಂಚಿತ್' ಮುಂತಾಗಿ ಶ್ರೀಹರ್ಷನ ಪ್ರಯೋಗವಿದೆ. ಆದ್ದರಿಂದ ದೋಷ ಶಂಕೆ ಇಲ್ಲವೆಂದು ಮತ್ತೆ ಕೆಲವರು ಹೇಳುತ್ತಾರೆ. 'ಅನಾದರಃ ಪರಿಭವಃ ಪರಿಭಾವಃ ತಿರಸ್ಕ್ರಿಯಾ' ಎಂದು ಕೋಶವಿರುವದರಿಂದ ಪರಿಪೂರ್ವಕ ಘಞಂತವಾದುದರ ಮೇಲೆ ತಿರಸ್ಕಾರ ಪ್ರಸಕ್ತಿ ಬೇರೆದರ ಮೇಲೆ ಅಲ್ಲವೆನ್ನುತ್ತಾರೆ. ಅದು ಸರಿಯಲ್ಲ. ಪರಿಭೂಯ ಪರಿಭವತಿ ಎಂದಾಗಲು ತಿರಸ್ಕಾರಪ್ರತೀತೇಃ ಎಂದು ಶೇಖರದಲ್ಲಿ ಹೇಳಿದೆ. ಮುನಿತ್ರಯೋಕ್ತೇಃ ವಿಚಾರ್ಯ ಇತಿ ವಾ 'ಪರಿಭಾವಃ ತಿರಸ್ಕ್ರಿಯಾ' ಎಂದು ಕೋಶವಿರುವುದರಿಂದ ತಿರಸ್ಕಾರಾರ್ಥಕ ಧಾತುವಿಗೂ ವಿಚಾರಾರ್ಥಕತ್ವ ಹೇಳಿದರೂ ಬಾಧಕವಿಲ್ಲ. ಧಾತುಗಳಿಗೆ ಅನೇಕಾರ್ಥತ್ವ ಉಂಟು. ಆದ್ದರಿಂದಲೇ 'ಪರೌ ಭುವೋ ಅವಜ್ಞಾನೇ' ಎಂಬುದೇ ಸಮಂಜಸವಾಗಿದೆ. ಇಲ್ಲಿಯಾದರೂ ಅಪರಿಭಾವಿತ ಎಂದು ಅಕಾರ ಪ್ರಶ್ಲೇಷ ಮಾಡಿ ಅತಿರಸ್ಕೃತ ಎಂದರ್ಥ ಮಾಡಲು ಬರುವದು. ಆದ್ದರಿಂದ ಶಂಕೆಯ ಆತಂಕವೇ ಇಲ್ಲ ಎಂದು ಸಂತೋಷಿಸಬೇಕು.

ಪರಿಸ್ಫುಟ ಅತಿವ್ಯಕ್ತ ಎಂದರ್ಥ. ಪಾರಮಹಂಸ್ಯಧರ್ಮ ಜ್ಞಾನವು. ಆದರಿಂದ ಅಜ್ಞಾನದ ಬಾಗಿಲು ತೆರೆದಿರುವುದರಿಂದ ಪ್ರಕಾಶಿತವಾದ ವೈಕುಂಠ ಲೋಕವು, ಅಲ್ಲಿ ತಾನೇ ಹೊಂದಿದ ಸ್ವರೂಪ ಸುಖಾನುಭವ ಉಳ್ಳ **ಯದಶರಣ** ಸ್ವಾತಿರಿಕ್ತ ಆಧಾರ ರಹಿತ, ಆದೇಕೆ **ಅಶರೀರಃ** ಪ್ರಾಕೃತಶರೀರರಹಿತ. ಆದ್ದರಿಂದ ನಮ್ಮ ಸಮುದಾಯದ ಅಪೇಕ್ಷೆ ಇಲ್ಲದೇ ಅಸಹಾಯಕನಾಗಿ ಕಾರ್ಯ ಮುಗಿಸುವವನೇ. 'ಕಿಂತಸ್ಯ ಶತ್ರುಹನನೇ ಕಪಯಃ ಸಹಾಯಾಃ' ನಾವು ಕಪಿಗಳಿದ್ದಂತೆ. ದಯೆಯಿಂದ ನೀನು




ನಮ್ಮನ್ನು ಮುಂದೆ ಮಾಡುವಿ ಎಂದು ಭಾವ. **ಅವಿಕ್ರಿಯಮಾಣೇನ** ವಿಕಾರ ಹೊಂದದೆ **ಸಗುಣಂ** ತನಗೆ ಉಪಾದಾನಗಳಾಗದ ಗುಣಗಳುಳ್ಳ **ಇದಂ** ಈ ಜಗತ್ತನ್ನು **ಸ್ವಯಂ** ಅನುಗುಣವಾಗಿ ಪ್ರಧಾನವಾಗಿ ಸೃಷ್ಟಿಸುವಿ ಪಾಲಿಸುವಿ, ಸಂಹರಿಸುವಿ, ಅಂತಹ ನಿನಗೆ ನಮಸ್ಕಾರ. ಇದರಿಂದ ಉಪಾದಾನತಾವಾದ ನಿರಾಕೃತವಾಯಿತು. ।।೩೨।।

**ಸೃಜಸಿ** ಮುಂತಾಗಿ ಹೇಳಿದ ಸೃಷ್ಟಿಕರ್ತೃತ್ವವು ಶ್ರೀಹರಿಗಿದ್ದಲ್ಲಿ ನಮ್ಮ ಹಾಗೆ ಅವನೂ ಪರತಂತ್ರನಾಗಿ ಶುಭಾಶುಭಗಳನ್ನು ಅನುಭವಿಸಬೇಕಾಗುವದು ಎಂಬ ಶಂಕೆಯನ್ನು ಪರಿಹರಿಸುವದಕ್ಕಾಗಿ ಅಜ್ಞಾನಿಗಳ ಸಂಶಯ ರೂಪ ಪೂರ್ವಪಕ್ಷವನ್ನು ಮೊದಲು ಹೇಳಿ ಸಿದ್ಧಾಂತವನ್ನೂ ತಿಳಿಸುತ್ತಾ ಭಗವಂತನ ಸ್ವರೂಪವನ್ನು ನಿರ್ಧರಿಸುತ್ತಾರೆ. ಅಥ ತತ್ರ ಮುಂತಾಗಿ-

ಅಥ ತತ್ರ ಭಗವಾನ್ ಕಿಂ ದೇವದತ್ತವದಿಹ ಗುಣವಿಸರ್ಗಾಪತಿತಃ ಪಾರತಂತ್ರ್ಯೇಣ ಸ್ವಕೃತಕುಶಲಾಕುಶಲಫಲಮುಪಾದದಾತಿ । ಆಹೋಸ್ವಿದಾತ್ಮಾರಾಮ ಉಪಶಮಶೀಲಃ ಸಮಂಜಸದರ್ಶನ ಉದಾಸ್ತ ಇತಿ ಹ ವಾವ ನ ವಿದಾಮಃ ।।

ನಹಿ ವಿರೋಧ ಉಭಯಂ ಭಗವತ್ಯಪರಿಗಣಿತಗುಣಗಣ ಈಶ್ವರೇ ಅನವಗಾಹ್ಯ-ಮಾಹಾತ್ಮ್ಯೇ ಅರ್ವಾಚೀನವಿತರ್ಕವಿಕಲ್ಪವಿಚಾರಪ್ರಮಾಣಾ ಭಾಸಕುತರ್ಕಶಾಸ್ತ್ರ-ಕಲಿಲಾಂತಃಕರಣ ದುರವಗ್ರಹವಾದಿನಾಂ ಚ ವಿವಾದಾನವಸರೇ ಉಪರತಸಮಸ್ತ-ಮಾಯಾಮಯೇ ಕೇವಲಸ್ವಾತ್ಮಮಾಯಾಮಂತರ್ಧಾಯ ಕೋ ನು ದುರ್ಘಟ ಇವ ಭವತಿ ಸ್ವರೂಪದ್ವಯಾಭಾವಾತ್ । ಸಮವಿಷಮಮತೀನಾಂ ಮತಮನುಚರಸಿ । ಯಥಾ ರಜ್ಜುಖಂಡಃ ಸರ್ಪಾದಿಧಿಯಾಮ್ । ಸ ಏವ ಪುನಃ ಸರ್ವವಸ್ತುಷು ವಸ್ತುಸ್ವರೂಪಃ ಸರ್ವೇಶ್ವರಃ ಸಕಲಜಗತ್ಕಾರಣಕಾರಣಭೂತಃ ಸರ್ವಪ್ರತ್ಯಗಾತ್ಮತ್ವಾತ್ ಸರ್ವಗುಣಾ-ಭಾಸೋಪಲಕ್ಷಿತ ಏಕ ಏವ ಪರ್ಯವಶೇಷಿತಃ ।

ಅಥ ಹ ವಾವ ತವ ಮಹಿಮಾಮಹಾಮೃತರಸಸಮುದ್ರವಿಪ್ರುಷಾಽಸಕೃಲ್ಲೀಢಯಾ ಸ್ವಮನಸಿ ನಿಷ್ಯಂದಮಾನಾನವರತಸುಖೇನ ವಿಸ್ಮಾರಿತದೃಷ್ಟಶ್ರುತವಿಷಯಸುಖಲೇಶಾ-ಭಾಸಾಃ ಪರಮಭಾಗವತಾ ಏಕಾಂತಿನೋ ಭಗವತಿ ಸರ್ವಭೂತಪ್ರಿಯಸುಹೃದಿ ಸರ್ವಾತ್ಮನಿ ನಿರಂತರನಿರ್ವೃತಮನಸಃ ಕಥಮು ಹ ವಾ ಏತೇ ಮಧುಮಥನ ಪುನಃ ಸ್ವಾರ್ಥಕುಶಲಾ ಹ್ಯಾತ್ಮಪ್ರಿಯಸುಹೃದಃ ಸಾಧವಸ್ತ್ವಚ್ಚರಣಾಂಬುಜಾನುಸೇವಾಂ ವಿಸೃಜಂತಿ ನ ಯತ್ರ ಪುನರಯಂ ಸಂಸಾರಪರಿವರ್ತಃ ।

**ತ್ರಿಭುವನಾತ್ಮಭಾವನ ತ್ರಿವಿಕ್ರಮ ತ್ರಿನಯನ ತ್ರಿಲೋಕಮನೋಹರಾನುಭಾವ ತವೈವ ವಿಭೂತಯೋಽಭೂವನ್ ದಿತಿಜದನುಜಾದಯಶ್ಚಾಪಿ ತೇಷಾಮನುಪಕ್ರಮಸಮಯಃ ಅಯಮಿತಿ ಸ್ವಾತ್ಮಮಾಯಯಾ ಸುರನರಮೃಗಮಿಶ್ರಿತಜಲಚರಾಕೃತಿಭಿಃ ಯಥಾಪರಾಧಂ ದಂಡಂ ದಧರ್ಥಾವತೀರ್ಯ ।।೩೩।।**

**ಇಹ** ಇಲ್ಲಿ **ಅಥ** ಒಂದು ಪ್ರಶ್ನೆಯು **ಭಗವಾನ್** ಭಗವಂತನು **ಅಥ** ಸೃಷ್ಟ್ಯನಂತರ **ತತ್ರ** ಸೃಷ್ಟವಾದ ಪದಾರ್ಥಗಳ ಮಧ್ಯದಲ್ಲಿ **ದೇವದತ್ತವತ್** ಜೀವನಂತೆ **ಗುಣವಿಸರ್ಗಪತಿತಃ** ಪ್ರಕೃತಿಗುಣಕಾರ್ಯವಾದ ಸಂಸಾರದಲ್ಲಿ ಸಿಲುಕಿರುವ, ಆದ್ದರಿಂದ **ಪಾರತಂತ್ರ್ಯೇಣ** ಪರವಶತೆಯಿಂದ **ಸ್ವಕೃತಕುಶಲಾಕುಶಲಂ ಫಲಂ** ತಾನು ಮಾಡಿದ ಪುಣ್ಯ-ಪಾಪಗಳ ಫಲವಾದ ಸುಖ-ದುಃಖಗಳನ್ನು **ಉಪಾದದಾತಿ ಕಿಂ** ಅನುಭವಿಸುವನೇನು? **ಆಹೋಸ್ವಿತ್** ಅಥವಾ **ಆತ್ಮಾರಾಮಃ** ತನ್ನಲ್ಲೇ ಕ್ರೀಡಿಸುವ ಸ್ವರಮಣನು **ಉಪಶಮಶೀಲಃ** ಶಾಂತಮೂರ್ತಿಯಾದ ಪೂರ್ಣಾನಂದಾನುಭವ ಉಳ್ಳವನು **ಸಮಂಜಸದರ್ಶನಃ** ಶುದ್ಧಜ್ಞಾನ ಉಳ್ಳವನು **ಇತಿ ಕಿಂ ಉದಾಸ್ತೇ** ಸುಖ-ದುಃಖಗಳನ್ನು ಅನುಭವಿಸುವದಿಲ್ಲವೇ? **ಇತಿ** ಎಂದು ಸಂದೇಹ ಬರುವದರಿಂದ **ನ ವಿದಾಮಃ** ಹೀಗೆಯೇ ಎಂದು ತಿಳಿಯಲಾರೆವು. (ಈ ವಿಶೇಷಣಗಳು ಒಂದೊಂದು ಸುಖ-ದುಃಖಗಳನ್ನು ಹೊಂದುವದಿಲ್ಲ ಎಂಬುದಕ್ಕೆ ಕಾರಣಗಳು) **ವಾವ** ಎಂಬುದರಿಂದ ಅಜ್ಞಾನಿಗಳು ಹೀಗೆ ಹೇಳುವರು, ಜ್ಞಾನಿಗಳಲ್ಲ, ಎಂದು ಸೂಚಿಸುವರು ಎಂದು ವಿಜಯಧ್ವಜರು. 'ಹ ವಾವ' ಊಹಾಗೋಚರನಲ್ಲವೆಂಬುದು ಶ್ರುತಿಸಿದ್ಧವೆಂದು ದ್ಯೋತಿತವಾಗುವದು ಎನ್ನುತ್ತಾರೆ ಶ್ರೀಗಳು.

ಯಾವುದಾದರೇನು ಎಂದರೆ ಹೇಳುತ್ತಾರೆ-

**ಉಭಯಂ** ಶುಭಾಶುಭ ಫಲವನ್ನು ಹೊಂದುವನು ಹೊಂದುವದಿಲ್ಲ ಇವೆರಡು ಬೇರೆ ಕಡೆ ವಿರುದ್ಧವಾದರೂ ಭಗವಂತನಲ್ಲಿ **ನ ಹಿ ವಿರೋಧಃ** ವಿರುದ್ಧವಲ್ಲ. ವಿರೋಧಶಾಮಕ ನಿಯಾಮಕ ಹೇಳುತ್ತಾರೆ. **ಭಗವತಿ** ಷಡ್ಗುಣ್ಯೈಶ್ವರ್ಯ ಸಂಪನ್ನನಾದ ಶ್ರೀಹರಿಯಲ್ಲಿ **ಅಪರಿಗಣಿತಗುಣಗಣೇ** ಯಾರಿಂದಲೂ ಎಣಿಸಲಾಗದ ಗುಣಗಣ ಉಳ್ಳ **ಈಶ್ವರೇ** ಅಘಟಿತ ಘಟಕ ಶಕ್ತಿಯುಳ್ಳ (ಇಂದ್ರನಂತಹ ಐಶ್ವರ್ಯವಲ್ಲ) ಸರ್ವ ನಿಯಾಮಕನಾದ **ಅನವಗಾಹ್ಯಮಾಹಾತ್ಮ್ಯೇ** ಇಷ್ಟೇ ಎಂದು ತಿಳಿಯಲಾಗದ ಮಾಹಾತ್ಮ್ಯ ಉಳ್ಳ **ಅರ್ವಾಚೀನ** ಅಸಾಧಕಗಳಾದ, ವ್ಯಾಪ್ತಿಯಿಲ್ಲದ **ವಿತರ್ಕ** ಈ ಭಗವಂತನು ಪ್ರಮೇಯನಾದ್ದರಿಂದ ಘಟಾದಿಗಳಂತೆ ಸ್ವವೃತ್ತಿತ್ವ (ತನ್ನಲ್ಲಿ ಇರುವಿಕೆ)

ಸ್ವೇತರವೃತ್ತಿತ್ವ (ತನಗಿಂತ ಭಿನ್ನವಾದುದರಲ್ಲಿ ಇರುವಿಕೆ) ಇವೆರಡು ಇಲ್ಲದ ಮತ್ತು ಪರಿಚ್ಛಿನ್ನ ಧರ್ಮದಿಂದ ಕೂಡಿರುವನು ಎಂಬೀ ಮೊದಲಾದ ಭಗವಂತನಲ್ಲಿ ಪರಿಚ್ಛಿನ್ನ ಧರ್ಮವನ್ನು ಸಾಧಿಸುವ ಮಹಾ ಅವಿದ್ಯಾರೂಪ ವಿರುದ್ಧತರ್ಕದಿಂದ (ಅನುಮಾನಾಭಾಸದಿಂದ) **ವಿಕಲ್ಪ** ಸಾಮಾನ್ಯ ಜೀವನಂತೆ ಈ ಭಗವಂತನು ಕುಶಲಾಕುಶಲ ಭೋಕ್ತನೇ ಅಲ್ಲವೇ ಎಂಬ ಸಂದೇಹ ರೂಪವಾದ ವಿಕಲ್ಪದಿಂದ **ವಿಚಾರ** ಈ ಶಾಸ್ತ್ರದಲ್ಲಿ ಕರ್ಮಕ್ಕೆ ಪುರುಷಾರ್ಥಹೇತುತ್ವವನ್ನು ಸಮರ್ಥನೆ ಮಾಡುತ್ತೇವೆ ಆದ್ದರಿಂದ ಶಾಸ್ತ್ರ ಮೊದಲಾದ ಸಂಗತಿ ಇದೆ ಎಂಬೀ ರೀತಿಯ ಮೀಮಾಂಸೆಯಿಂದ **ಪ್ರಮಾಣಾಭಾಸ** ನಾನು ಈ ಪೊದೆಯಲ್ಲಿ ಹುಲಿಯನ್ನು ಕಂಡೆ ಎಂಬೀ ಮೊದಲಾಗಿರುವ ಪ್ರಮಾಣಗಳಂತೆ ಕಾಣುವ ವಾಕ್ಯಗಳಿಂದ **ಕುತರ್ಕ** ಈಶ್ವರನು ದುಃಖಪ್ರಚುರವಾದ ದೇಹದಲ್ಲಿ ಇದ್ದದ್ದೇ ಆದರೆ ಜೀವನಂತೆ ದೇಹಗತವಾದ ದುಃಖವನ್ನು ಅನುಭವಿಸಬೇಕಾಗುವದು ಎಂಬೀ ಬಗೆಯ ಕುತ್ಸಿತ ತರ್ಕದಿಂದ ತುಂಬಿದ **ಶಾಸ್ತ್ರ** ವೈಶೇಷಿಕಾದಿಶಾಸ್ತ್ರಗಳಿಂದ **ಕಲಿಲ** ವ್ಯಾಕುಲಿತವಾದ **ಅಂತಃಕರಣ** ಮನಸ್ಸಿನಿಂದ **ದುರವಗ್ರಹ** ದುರಾಗ್ರಹದಿಂದ ಕೂಡಿರುವ **ವಾದಿನಾಂ** ಕುತ್ಸಿತವಾದ ರೀತಿಯಲ್ಲಿ ವಾದ ಮಾಡುವ ಜನರ **ವಿವಾದಾನವಸರೇ ಚ** ವಿವಿಧ ವಾದಗಳಿಗೆ ವಿಷಯನಾಗದಿರುವ **ಕೇವಲಸ್ವಾತ್ಮಮಾಯಾಂ** ದ್ವಂದ್ವ ಇಲ್ಲದ ತನ್ನ ಸಾಮರ್ಥ್ಯವನ್ನೇ **ಅಂತರ್ಧಾಯ** ಆಶ್ರಯಿಸಿ **ಉಪರತಸಮಸ್ತಮಾಯಾಮಯೇ** ಎಲ್ಲ ಪ್ರಾಕೃತ ಸ್ವಭಾವ ರಹಿತನಾದ **ಭಗವತಿ** ಶ್ರೀಹರಿಯಲ್ಲಿ **ಕೋ ನು** ಯಾವುದು ತಾನೇ **ದುರ್ಘಟ ಇವ** ಅಸಂಭಾವಿತವೋ ಎಂಬಂತೆ **ಭವತಿ** ಆಗುವದು ಎಲ್ಲವೂ ಸಂಭಾವಿತವೇ ಎಂದರ್ಥ.

ಅರ್ವಾಚೀನ-ವಿಕಲ್ಪ-ವಿತರ್ಕ ಶಬ್ದಗಳನ್ನು ಈ ರೀತಿಯಾಗಿ ವಿಜಯಧ್ವಜರು ವ್ಯಾಖ್ಯಾನಿಸಿದ್ದಾರೆ.

ಅಯಮೀಶಃ, ಸ್ವಸ್ವೇತರವೃತ್ತಿತ್ವಾನಾಕ್ರಾಂತಪರಿಚ್ಛಿನ್ನನಿಷ್ಠಾಧಿಕರಣಂ, ಮೇಯತ್ವಾತ್, ಘಟವತ್, ಇತಿ ಮಹಾವಿದ್ಯಾಲಕ್ಷಣಕುತರ್ಕೇಣ, ದೇವದತ್ತವತ್ ಕುಶಲಾಕುಶಲ-ಭೋಕ್ತಾ ನವಾ ಇತಿ ವಿಕಲ್ಪೇನ, ಅತ್ರ ಕರ್ಮಣಃ ಪುರುಷಾರ್ಥಹೇತುತ್ವ ಸಮರ್ಥನಾದಸ್ತಿ ಶಾಸ್ತ್ರಾದಿಸಂಗತಿರಿತ್ಯಾದಿಲಕ್ಷಣಮೀಮಾಂಸಯಾ, ಮಯಾಽಸ್ಮಿನ್ ಗುಲ್ಮೇ ವ್ಯಾಘ್ರೋಽದರ್ಶಿ ಇತ್ಯಾದಿ ಪ್ರಮಾಣವದವಭಾಸಮಾನೇನ, ಯದೀಶೋ ದುರ್ಭಗಶರೀರೇ ಸ್ಥಿತಃ, ತರ್ಹಿ ದೇವದತ್ತವತ್ ತದ್ಗತದುಃಖಭೋಗಃ ಪ್ರಸಜ್ಯೇತ ಇತ್ಯಾದಿಕುತರ್ಕೇಣ ಈ ರೀತಿ ಇವೆ. ಇದರ ಪ್ರಕಾರ ಇಲ್ಲಿ ಬರೆದಿದೆ.

ಇಲ್ಲಿ ಸಾಧ್ಯದಲ್ಲಿ ಸ್ವಪದಗಳೆರಡು ಬುದ್ಧಿಸ್ಥ ಆತ್ಮ ಪರವಾಗಿವೆ. ಪರಿಚ್ಛಿನ್ನನಿಷ್ಠಾ ಆಧೇಯತಾ ಯಸ್ಯ ಎಂಬ ವ್ಯುತ್ಪತ್ತಿಯಿಂದ ಪರಿಚ್ಛಿನ್ನಿತ್ವಸಮಾನಾಧಿಕರಣಃ ಎಂದರ್ಥ. ಅನಾಕ್ರಾಂತ ಎಂಬಲ್ಲಿ ವರೆಗೆ ಇದಕ್ಕೆ ವಿಶೇಷಣ. ಇತ್ಥಂ ಚ ಆತ್ಮವೃತ್ತಿತ್ವ ಆತ್ಮೇತರವೃತ್ತಿತ್ವ ಏತುದುಭಯಾಭಾವವಾನ್ ಯಃ ಪರಿಚ್ಛಿನ್ನತ್ವಸಮಾನಾಧಿಕರಣಃ ಧರ್ಮಃ ತದಧಿ ಕರಣತ್ವಂ ಸಾಧ್ಯಂ ದೃಷ್ಟಾಂತಘಟತ್ವಧರ್ಮಮಾದಾಯ ಸಾಧ್ಯಸತ್ವನಿರ್ವಾಹಃ, ಪಕ್ಷೇ ಆತ್ಮತ್ವಾದಿ ಧರ್ಮಮಾದಾಯ ಸಾಧ್ಯಸಿದ್ಧಾವಪಿ ತಸ್ಯ ಪರಿಚ್ಛಿನ್ನತ್ವಾಸಿದ್ಧೇಃ ತತ್ಸಾಮಾನಾಧಿ ಕರಣ್ಯಸ್ಯ ನಿವೇಶಃ ।

ಇದರಿಂದ ಅನಂತಗುಣಪೂರ್ಣನಾಗಿದ್ದಾನೆ ಪರಮಾತ್ಮ. ಹೀಗಾಗಿ ಅಸಂಭಾವಿತವಾದದ್ದರಿಂದ ಗುಣಪೂರ್ಣತ್ವಕ್ಕೆ ವಿರೋಧಿಯಾದ ಪಾರತಂತ್ರ್ಯವು ಪರಮಾತ್ಮನಲ್ಲಿ ಇಲ್ಲ. ಆದ್ದರಿಂದ ಸ್ವಾತಂತ್ರ್ಯ ಒಂದನ್ನೇ ಅಂಗೀಕರಿಸುವುದೇ ಅಥವಾ ದುರ್ಘಟಘಟನಾಸಾಮರ್ಥ್ಯವಿದ್ದುದರಿಂದ ಸ್ವಾಂತಂತ್ರ್ಯ ಪಾರತಂತ್ರ್ಯ ಎರಡನ್ನೂ ಒಪ್ಪಬೇಕೇ ಎಂಬ ಸಂಶಯವು ಉಳಿಯುತ್ತದೆ ಎಂದು ಅಭಿಪ್ರಾಯ.

ಹೀಗೆ ಪೂರ್ವ ಪಕ್ಷ ಮಾಡಿದರೆ, ಅಘಟನಘಟನಾಸಮರ್ಥನಾದರೂ ಶ್ರೀಹರಿಯಲ್ಲಿ ಪುಣ್ಯಾಪುಣ್ಯಭೋಕ್ತೃತ್ವವನ್ನು ನಾವು ತಿಳಿಯುವದಿಲ್ಲ. ಶುಭ ಭೋಕ್ತೃತ್ವವನ್ನು ಮಾತ್ರವೇ ತಿಳಿಯುತ್ತೇವೆ. ಶ್ರೀಹರಿಯು ಪುಣ್ಯಾಪುಣ್ಯಭೋಕ್ತೃವಾಗಿದ್ದಾನೆ ಎಂದು ಹೇಳುವವರು ಮೂಢರು, ಅವರು ಅಸುರ ಸ್ವಭಾವದವರು ಎಂಬ ಅಭಿಪ್ರಾಯದಿಂದ ಪೂರ್ವಪಕ್ಷಕ್ಕೆ ಉತ್ತರ ಹೇಳುತ್ತಾರೆ.

**ಸ್ವರೂಪದ್ವಯಾಭಾವಾತ್** 'ಏಕಮೇವಾದ್ವಿತೀಯಂ' 'ನಿರನಿಷ್ಟೋ ನಿರವದ್ಯಃ' ಎಂಬ ಶ್ರುತಿಯು ಇರುವದರಿಂದ ಸುಖ-ದುಃಖ ಎಂದು ಎರಡು ಸ್ವರೂಪಗಳು ಇರಲು ಸಾಧ್ಯವಿಲ್ಲವಾದ್ದರಿಂದ ಒಂದೇ ಸ್ವರೂಪವು. ಅದೂ ನಿರ್ದೋಷವಾದ ಸುಖಭೋಕ್ತೃತ್ವ ಒಂದೇ ನಿಶ್ಚಯವು. ಇದೇ ಜ್ಞಾನಿಗಳ ಮತ. ಹಾಗಾದರೆ 'ಮಮ ನಿಶಿತಶರೈಃ ವಿಭಿದ್ಯಮಾನತ್ವಚಿ ವಿಲಸತ್ಕವಚೇಽಸ್ತು ಕೃಷ್ಣ ಆತ್ಮಾ' ಎಂದು ಭೀಷ್ಮಾಚಾರ್ಯರು ತಮ್ಮ ತೀಕ್ಷ್ಣಬಾಣಗಳಿಂದ ಶ್ರೀಹರಿಯ ಚರ್ಮವು ಗಾಯಗೊಂಡಿತೆಂದು ಹೇಳಿದ್ದು ಹೇಗೆ? ಎಂದರೆ ಹೇಳುತ್ತಾರೆ. **ಯಥಾ** ಹೇಗೆ **ರಜ್ಜುಖಂಡಃ** ಹಗ್ಗದ ತುಂಡು **ಸರ್ಪಾದಿಧಿಯಾಂ** ಮಸಕು ಕತ್ತಲೆಯಲ್ಲಿ, ದೃಷ್ಟಿಯು ಸ್ಪಷ್ಟವಿಲ್ಲದ ಕಾಲದಲ್ಲಿ, ಇದು ಸರ್ಪವೆಂದು ಅದೇ ಹಗ್ಗವೇ ಮತ್ತೆ ಬೆಳಕಿನಲ್ಲಿರುವ

ಸ್ಥಳದಲ್ಲಿ, ದೃಷ್ಟಿಯು ಸರಿ ಇದ್ದವನಿಗೆ ಇದು ಹಗ್ಗದ ಚೂರೆಂದು ಎರಡೂ ರೀತಿಯಲ್ಲಿ ಕಾಣುವದೋ (ಆದರೆ ಹಗ್ಗದ ಸ್ವರೂಪ ಒಂದೇ ಆಗಿದೆಯೋ) **ತಥಾ** ಹಾಗೆ **ಸಮವಿಷಮಮತೀನಾಂ ಮತಂ** ಶಾಸ್ತ್ರದ ಯಥಾರ್ಥಜ್ಞಾನ ಉಳ್ಳವರಿಗೆ ಅನಂತ ಸಚ್ಚಿದಾನಂದಸ್ವರೂಪನಾಗಿಯೂ, ಅಸುರಸ್ವಭಾವದವರಾದ್ದರಿಂದ ಶಾಸ್ತ್ರವನ್ನು ಅಯಥಾರ್ಥವಾಗಿ ತಿಳಿದು, 'ಅಭೂತಿರಿತ್ಯಸುರಾಃ' ಎಂದು ಹೇಳಿದಂತೆ ಮಿಥ್ಯಾಜ್ಞಾನದಿಂದ ಯುಕ್ತನಾದವನು ದುಃಖಿಯೆಂದೂ, ಭಿನ್ನನೆಂದೂ, ವಿದ್ಧನೆಂದೂ **ಚರಸಿ** ಕಾಣಿಸುವಿ. ಅವರವರ ಬುದ್ಧಿಗನುಸರಿಸಿ ಫಲ ಕೊಡುವಿ. **ಸ ಏವ** ಒಂದೇ ಸ್ವರೂಪನಾದ ಆ ನೀನೇ **ಸರ್ವವಸ್ತುಷು** ನೀನು ಸೃಷ್ಟಿಸಿದ ಎಲ್ಲ ಪದಾರ್ಥಗಳಲ್ಲಿಯೂ **ವಸ್ತುಸ್ವರೂಪಃ** ಅಪ್ರತಿಹತಸ್ವರೂಪನಾಗಿ **ಸರ್ವೇಶ್ವರಃ** ಎಲ್ಲಕ್ಕೂ ನಿಯಾಮಕನಾಗಿ **ಸಕಲಜಗತ್ಕಾರಣಕಾರಣಭೂತಃ** ಎಲ್ಲ ಜಗತ್ಕಾರಣಗಳಿಗೂ ಜಗತ್ತಿಗೂ ಕಾರಣನಾಗಿ **ಸರ್ವಪ್ರತ್ಯಗಾತ್ಮತ್ವಾತ್** ಎಲ್ಲರ ಅಂತರ್ಯಾಮಿಯಾಗಿ ಬಿಂಬರೂಪನಾದ್ದರಿಂದ **ಸರ್ವಗುಣಾಭಾಸೋಪಲಕ್ಷಿತಃ** ಎಲ್ಲ ಗುಣಗಳ ಸಮ್ಯಕ್ ಪ್ರಕಾಶದಿಂದ ಜ್ಞಾನಿಗಳಿಂದ ಅವರವರ ಯೋಗ್ಯತಾನುಗುಣವಾಗಿ ಸಮ್ಯಕ್ ದೃಷ್ಟನಾಗಿ **ಏಕ ಏವ** ಸ್ಥಾನಭೇದದಿಂದ ಭೇದವಿಲ್ಲದವನಾಗಿ **ಪರ್ಯವಶೇಷಿತಃ** 'ನೇತಿ ನೇತಿ' ಎಂದು ಸರ್ವವಿಲಕ್ಷಣನಾಗಿ ನಿಶ್ಚಿತನಾಗಿರುವಿ, ಶ್ರೀಹರಿಯೊಬ್ಬನು ನಿರ್ದೋಷನು, ಸಂಸಾರವನ್ನು ಹೋಗಲಾಡಿಸುವ ಮಹಾಮಹೀಯನು ಎಂಬ ವಿಷಯದಲ್ಲಿ ಮಹನೀಯರ ಅನುಭವವೆಂಬ ಸಾಕ್ಷಿಪ್ರತ್ಯಕ್ಷವನ್ನು ಪ್ರಮಾಣವಾಗಿ ಹೇಳುತ್ತಾರೆ.

**ಹೇ ಮಧುಮಥನ** ಮಧುವೆಂಬ ದೈತ್ಯನನ್ನು ಸಂಹರಿಸಿದ ಶ್ರೀಹರಿಯೇ **ಅಥ** ನೀನು ಸರ್ವೋತ್ತಮನೂ, ಸರ್ವಗುಣಪೂರ್ಣನೂ, ಸರ್ವರೀತಿಯಿಂದಲೂ ನಿರ್ದೋಷನು, ಸರ್ವಾಂತರ್ಯಾಮಿಯೂ ಆದ ಕಾರಣದಿಂದಲೇ **ಅಸಕೃತ್** ಯಾವಾಗಲೂ, (ಪುನಃ ಪುನಃ) **ಲೀಢಯಾ** ಆಸ್ವಾದಿಸಿದ **ತವ** ನಿನ್ನ **ಮಹಿಮಾಮಹಾಮೃತರಸಸಮುದ್ರವಿಪ್ರುಷಾ** ಮಹಿಮೆ ಎಂಬ ಮಹಾಮೃತರಸದ ಸಮುದ್ರದ ಹನಿಯಿಂದ **ಸ್ವಮನಸಿ** ತಮ್ಮ ತಮ್ಮ ಮನಸ್ಸಿನಲ್ಲಿ **ನಿಷ್ಯಂದಮಾನ** ನಿರಂತರವಾದ **ಸುಖೇನ** ಸ್ವರೂಪಸುಖದಿಂದ **ವಿಸ್ಮಾರಿತ** ಸಂಪೂರ್ಣವಾಗಿ ಮರೆತ **ದೃಷ್ಟ** ಕಣ್ಣಿಗೆ ಕಾಣುವ, (ಐಹಿಕ) **ಶ್ರುತ** ವೇದಾದಿಗಳಲ್ಲಿ ಕೇಳಿ ಬರುವ (ಆಮುಷ್ಮಿಕ) **ವಿಷಯ ಸುಖಲೇಶಾಭಾಸಾಃ** ವಿಷಯಜನ್ಯವಾದ ಸುಖಲೇಶಗಳ ಜ್ಞಾನ ಉಳ್ಳ ಅಥವಾ ದೃಷ್ಟವಾದ ಶ್ರುತವಾದ ಸುಖಗಳು ಅಲ್ಪವೆಂದೂ ನಶ್ವರವೆಂದೂ ವಿಶೇಷವಾಗಿ

ಸ್ಮರಣೆಗೆ ತರಲ್ಪಟ್ಟವರಾದ **ಸರ್ವಭೂತಪ್ರಿಯಸುಹೃದಿ** ೧. ಎಲ್ಲ ಪ್ರಾಣಿಗಳಿಗೂ ಪ್ರಿಯರಾದ ಅಂದರೆ ಅಜಾತಶತ್ರುಗಳಾದ ಸನ್ಯಾಸಿಗಳಿಗೆ ಸ್ನೇಹಿತನಾದ ೨. ಎಲ್ಲ ಪ್ರಾಣಿಗಳಿಗೂ ಪರವಸ್ತುವಿನಿಂದ ಅಭೀಷ್ಟವನ್ನು ಕೊಡುವವನಾದ್ದರಿಂದ ಪ್ರಿಯನೆಂಬ ಹೆಸರುಳ್ಳ ಸ್ನೇಹಿತನೂ ಆದ **ಸರ್ವಾತ್ಮನಿ** ಎಲ್ಲರ ಅಂತರ್ಯಾಮಿಯೂ ಆದ ಸ್ವಾಮಿಯೂ ಆದ **ಭಗವತಿ** ಭಗವಂತನಾದ ನಿನ್ನಲ್ಲಿ **ನಿರಂತರನಿರ್ವೃತಮನಸಃ** ಯಾವಾಗಲೂ ಸಂತುಷ್ಟವಾದ ಮನಸ್ಸುಳ್ಳ **ಏಕಾಂತಿನಃ** ನಿನ್ನಲ್ಲಿಯೇ ಶರೀರ-ಇಂದ್ರಿಯ-ಪ್ರಾಣ ಇತ್ಯಾದಿ ಸರ್ವಸ್ವವನ್ನೂ ಸಮರ್ಪಿಸಿದ **ಆತ್ಮಪ್ರಿಯಸುಹೃದಃ** ಶ್ರೀಹರಿಯೇ ಪ್ರಿಯನು ಸ್ನೇಹಿತನೂ ಆಗಿ ಉಳ್ಳ **ಸಾಧವಃ** ಸಾಧುಸ್ವಭಾವದ, ಆದ್ದರಿಂದಲೇ **ಪರಮಭಾಗವತಾಃ** ಉತ್ತಮಭಗವದ್ಭಕ್ತರಾದ **ಏತೇ ಪುನಃ** ಈ ಭಕ್ತ ಜನರಾದರೋ **ಹಿ** ಯಾವ ಕಾರಣ **ಸ್ವಾರ್ಥಕಲಾಃ** ತಮ್ಮ ಪರಮ ಪುರುಷಾರ್ಥವಾದ ಮೋಕ್ಷವನ್ನು ಹೇಗೆ ಸಂಪಾದಿಸಿಕೊಳ್ಳಬೇಕೆಂಬುದರಲ್ಲಿ ನಿಪುಣರೋ ಆ ಕಾರಣದಿಂದ **ಯತ್ರ** ಯಾವ ನಿನ್ನ ಪಾದಾರವಿಂದಗಳ ಸೇವೆಯಲ್ಲಿ **ಅಯಂ** ಈಗ ಅನುಭವಿಸುತ್ತಿರುವ **ಸಂಸಾರಪರಿವರ್ತಃ** ಹುಟ್ಟು-ಸಾವುಗಳ ಪರಿಭ್ರಮಣವು **ನ ಪುನಃ** ಮತ್ತೆ ಉಂಟಾಗುವದಿಲ್ಲವೋ ಅಂತಹ **ತ್ವಚ್ಚರಣಾಂಬುಜಾನುಸೇವಾಂ** ನಿನ್ನ ಪಾದಾರವಿಂದಗಳ ನಿರಂತರ ಆರಾಧನೆಯನ್ನು **ಕಥಂ ಉ ಹ ವಾ ವಿಸೃಜಂತಿ** ಹೇಗೆ ತಾನೆ ಬಿಡುವರು? ಸರ್ವಥಾ ಬಿಡುವದಿಲ್ಲವೆಂದು ಅಭಿಪ್ರಾಯ. ಹ ವಾವ ಇತ್ಯಾದಿ ನಿಪಾತಗಳಿಂದ, 'ಪರಮಃ ಪರಾರ್ಥ್ಯಃ' ಎಂಬ ಶ್ರುತಿಯನ್ನು ಸೂಚಿಸಿ ಮಹಿಮೆಯು ಪರಮವೂ ಪರಾರ್ಥ್ಯವೂ ಎಂದು ತಿಳಿಸಿರುವರು.

ತಮ್ಮ ಅಭಿಪ್ರಾಯವನ್ನು ವಿಜ್ಞಾಪಿಸಲು ಉಪೋದ್ಘಾತವನ್ನು ಹೇಳುತ್ತಾರೆ. **ತ್ರಿಭುವನಾತ್ಮಭವನ** ಮೂರು ಲೋಕಗಳೇ ನಿನ್ನ ಮನೆಯಾಗಿ ಉಳ್ಳ **ತ್ರಿವಿಕ್ರಮ** ಮೂರು ಪಾದಗಳಿಂದ ವಿಕ್ರಮವನ್ನು ಸ್ಥಾಪಿಸಿದ **ತ್ರಿನಯನ** ಮೂರು ಕಣ್ಣುಳ್ಳ ನರಸಿಂಹರೂಪಿಯಾದ **ತ್ರಿಲೋಕ** ೧. ಮನೋಹರಾನುಭಾವ ಜ್ಞಾನವೆಂಬ ಪ್ರಕಾಶದಿಂದ ಮೂರು ಲೋಕದ ವಿಷಯವನ್ನು ಹೊಂದಿರುವ ಅಂದರೆ ಸರ್ವಜ್ಞನಾದ, ಮನಸ್ಸನ್ನು ಹರಣ ಮಾಡುವ ಸಾಮರ್ಥ್ಯ ಉಳ್ಳ ೨. ಮೂರು ಲೋಕದಲ್ಲಿಯೂ ಇರುವ ಜನರ ಮನಸ್ಸನ್ನು ಆಕರ್ಷಿಸುವ ಮಹಿಮೆಯುಳ್ಳ ಹೇ ಶ್ರೀಹರಿಯೇ **ದಿತಿಜದನುಜಾದಯಃ** ದೈತ್ಯದಾನವ ಮುಂತಾದವರು **ಚ** ದೇವತೆಗಳು **ತವ** ನಿನ್ನ **ವಿಭೂತಯಃ** ವಿವಿಧ ಗುಣ ಪ್ರಯೋಜಕ ಇರುವಿಕೆಗೆ ಸ್ಥಾನಗಳಾಗಿ **ಏವ**




ಮಾತ್ರವೇ **ಅಪಿ** ಸ್ವರೂಪ ಮತ್ಸ್ಯಾದಿಗಳಂತಲ್ಲದೇ **ಅಭವನ್** ಆದರೋ **ತೇಷಾಂ** ಅವರ ನಿನ್ನ ಅಧಿಷ್ಠಾನರಾಗಿ ವಿಭೂತಿಶಬ್ದವಾಚ್ಯರಾದ ದೈತ್ಯರೇ ಮೊದಲಾದವರ **ಅನುಪಕ್ರಮಸಮಯಃ** ಪರಾಜಯಕಾಲವು, (ಕ್ಷಯಪ್ರಾರಂಭಕಾಲವು) **ಅಯಂ** ಇದು **ಇತಿ** ಎಂದು **ಮತ್ವಾ** ತಿಳಿದು **ಸ್ವಾತ್ಮಮಾಯಯಾ** ನಿನ್ನ ಸ್ವರೂಪೇಚ್ಛೆಯಿಂದ, ನಿನ್ನ ಮಹಿಮೆಯಿಂದ, ಶುಕ್ರಶೋಣಿತಸಂಬಂಧವಿಲ್ಲದೇ **ಸುರ** ದೇವತೆಗಳ **ನರ** ಮನುಷ್ಯರ **ಮೃಗ** ಮೃಗಗಳ **ಮಿಶ್ರಿತ** ನರ-ಮೃಗಗಳ **ಜಲಚರ** ಮೀನು ಮುಂತಾದ ನೀರಿನಲ್ಲಿ ಸಂಚರಿಸುವ **ಆಕೃತಿಭಿಃ** ಆಕಾರಗಳಿಂದ (ಚಿದಾನಂದಾತ್ಮಕ ರೂಪಗಳಿಂದ) **ಅವತೀರ್ಯ** ಭೂಮಿಯಲ್ಲಿ ವ್ಯಕ್ತನಾಗಿ ಹಿಂದೆ **ಯಥಾಪರಾಧಂ** ಅವರವರ ತ್ರೈಲೋಕ್ಯಹರಣ ಮುಂತಾದ ಅಪರಾಧಕ್ಕೆ ತಕ್ಕಂತೆ **ದಂಡಂ** ಶಿಕ್ಷೆಯನ್ನು ಬಲಿ ಮೊದಲಾದವರಿಗೆ **ದಧರ್ಥ** ಕೊಟ್ಟಿರುವಿ. ವಿಜಯಧ್ವಜರ ಪ್ರಕಾರ ಅರ್ಥ.

**ಶ್ರೀಸತ್ಯಧರ್ಮರ ಪ್ರಕಾರ**

'ಅಥ ತತ್ರ ಭಗವಾನ್ ದೇವದತ್ತವತ್' ಎಂದಾರಂಭಿಸಿ 'ಏಕ ಏವ ಪರ್ಯವಶೇಷಿತಃ' ಎಂಬಲ್ಲಿವರೆಗಿನ ಗದ್ಯಗಳಲ್ಲಿ ಭಗವಂತನಿಗೆ ಪ್ರಕೃತಿಗುಣ ಸೃಷ್ಟಸಂಸಾರಮಗ್ನತೆ ಪಾರತಂತ್ರ್ಯ ಕುಶಲಾಕುಶಲ ಕರ್ಮಫಲ ದೊರುಕುವುದೋ ಅಥವಾ ಇಲ್ಲವೋ ಎಂದು ತಿಳಿಯಲಾರೆವು ಎಂದು ದೇವತೆಗಳಿಗೆ ಅಜ್ಞಾನ, ಬೇರೆಯವರಲ್ಲಿ ದುರ್ಘಟವಾದುದನ್ನು ಸುಘಟಮಾಡುವದು **ಮಾಯಾ** ಮುಂತಾದ ಅನುಚಿತವಾದ ಅರ್ಥವಾಗದಿರಲೆಂದು ತಾವು ಮೊದಲು ತಮ್ಮ ಮಾತುಗಳಿಂದ ವ್ಯಾಖ್ಯಾನ ಮಾಡಿ, ಅದರ ಸ್ಥಿರತೆಗಾಗಿ ತಂತ್ರಭಾಗವತಸ್ಥವಾದ ಪ್ರಮಾಣವನ್ನೂ ಹೇಳುವರು.

ತಾತ್ಪರ್ಯ

**ಅಥ ತತ್ರ ಭಗವಾನ್ ಕಿಂ ದೇವದತ್ತವತ್ ಇತ್ಯಾಕ್ಷೇಪಃ । ಅಚಿಂತ್ಯಶಕ್ತೇರನಂತಗುಣಸ್ಯ ಕುತಃ ಪಾರತಂತ್ರ್ಯಾದಿಕಮಿತ್ಯಭಿಪ್ರಾಯಃ । ಉಪರತಸಮಸ್ತಮಾಯಾಮಯೇ ಪ್ರಾಕೃತಸ್ವಭಾವವರ್ಜಿತೇ । ಕೇವಲಂ ಸ್ವಾತ್ಮಮಾಯಾಂ ನಿಜಸಾಮರ್ಥ್ಯಂ ಸ್ವರೂಪದ್ವಯಾಭಾವಾತ್ ಇತ್ಯಾದಿ ಸಮಾಧಾನಮ್ ।**

ದೇವದತ್ತವತ್ ಕಿಂ? ಎಂಬುದು ಆಕ್ಷೇಪ. ಅಚಿಂತ್ಯಶಕ್ತಿಯುಳ್ಳ ಅನಂತಗುಣಗಳುಳ್ಳ ಪರಮಾತ್ಮನಿಗೆ ಪಾರತಂತ್ರ್ಯಾದಿಗಳು ಹೇಗೆ ಬರುವವು? ಬರಲಾರವೆಂದು

ಅಭಿಪ್ರಾಯ. (ದುರಭಿಪ್ರಾಯ ಉಳ್ಳ ಜನರ ಸಂಶಯವನ್ನು ದೇವತೆಗಳು ತಾವು ವಾದ ಮಾಡಿ ಶಂಕಿಸುವರಷ್ಟೇ.)

ಅಚಿಂತ್ಯಶಕ್ತಿಯುತನಾದ ಕಾರಣ ಅನಂತಗುಣನಾಗಿದ್ದಾನೆ ಪರಮಾತ್ಮ. ಅಥವಾ 'ಪರಸ್ಪರ ತದ್ಭಾವೇ' ಅಂದರೆ ಅನಂತಗುಣನಾಗಲು ಅಚಿಂತ್ಯಶಕ್ತಿ ಕಾರಣವಾಗಿದೆ. ಅಚಿಂತ್ಯಶಕ್ತಿ ಬರಲು ಅನಂತಗುಣ ಕಾರಣವೆಂದು ಭಾವ. ಪರಮಫಲ ಹೇಳುವರು. ಪಾರತಂತ್ರ್ಯಾದಿಗಳಲ್ಲಿಯದು ಎಂದು. **ಉಪರತಮಾಯಾಮಯೀ** ಎಂಬುದಕ್ಕೆ ತನ್ನಲ್ಲಿ ಆರೋಪಿತ ಸಮಸ್ತ ಜಗತ್ತುಳ್ಳ ಭಗವಂತನಲ್ಲಿ ಎಂಬ ಅರ್ಥವನ್ನು ನಿವಾರಿಸಲು, ಪ್ರಾಕೃತಸ್ವಭಾವರಹಿತನಾದ ಎಂದರ್ಥ ಮಾಡಿರುವರು. **ಕೇವಲಸ್ವಾತ್ಮಮಾಯಾ** ಶಬ್ದಕ್ಕೆ ನಿಜಸಾಮರ್ಥ್ಯವೆಂದರ್ಥ. **ಸ್ವರೂಪದ್ವಯಾಭಾವಾತ್** ಎಂಬುವುದೂ ಆಕ್ಷೇಪಾರ್ಥಕ ಎಂಬುದನ್ನು ನಿರಾಕರಿಸುವರು. ಸ್ವರೂಪದ್ವಯಾಭಾವಾತ್ ಮುಂತಾದುದು ಪೂರ್ವಪಕ್ಷಕ್ಕೆ ಸಮಾಧಾನವೆಂದು ಭಾವ.

ತಾತ್ಪರ್ಯ

ಸ್ವತಂತ್ರಃ ಪರತಂತ್ರೋ ವಾ ಜ್ಞೋಽಜ್ಞೋ ದುಃಖೀ ಸುಖೀ ನು ಕಿಮ್ ।
ಇತ್ಯಾದಿಸಂಶಯಃ ಕ್ವ ಸ್ಯಾತ್ ಜ್ಞಾನಿನಾಂ ಪುರುಷೋತ್ತಮೇ ।

ತಸ್ಯಾನಂತಗುಣತ್ವಾಚ್ಚ ಪೂರ್ಣಶಕ್ತಿತ್ವತೋ ಹರೇಃ ।
ಸ್ವಾತಂತ್ರ್ಯಾದಿಕಮೇವಾಸ್ಯ ವಿದೋ ಜಾನಂತಿ ನಿಶ್ಚಯಾತ್ ।

ಘಟಕತ್ವಾದ್ದುರ್ಘಟಸ್ಯ ದುರ್ಜ್ಞೇಯತ್ವಾಚ್ಚ ಸರ್ವಶಃ ।
ತಚ್ಛಕ್ತೇರವಿದೋ ಜೀವಂ ಪರತಂತ್ರಂ ವದಂತ್ಯಮುಮ್ ।

ಏವಂ ದುರ್ಘಟಯಾ ಶಕ್ತ್ಯಾ ಜ್ಞೋಽಜ್ಞಾನಾಂ ಪರಮೇಶ್ವರಃ ।
ಯಥಾ ರಜ್ಜುಃ ಸರ್ಪಧಿಯಾ ರಜ್ಜುಬುದ್ಧ್ಯಾಽವಗಮ್ಯತೇ ।

ತಥಾ ಯಥಾರ್ಥಬುದ್ಧ್ಯಾ ಚ ಮಿಥ್ಯಾಬುದ್ಧ್ಯಾಽವಗಮ್ಯತೇ ।
ಸ್ವೇಚ್ಛಯೈವ ಮಹಾವಿಷ್ಣುಃ ಫಲದಶ್ಚಾನುಸಾರತಃ ॥-ಇತಿ ತಂತ್ರಭಾಗವತೇ ।

ತ್ರಿನಯನೋ ನೃಸಿಂಹರೂಪೀ । 'ವಿಷ್ಣೋರ್ನೃಸಿಂಹನಾಮಾನಿ ತ್ರಿನೇತ್ರೋಗ್ರಾದಿಕಾನಿ ತು ॥ ಇತಿ ಶಬ್ದನಿರ್ಣಯೇ ॥ ವಿವಿಧಂ ಭಾವಪಾತ್ರತ್ವಾತ್ ಸರ್ವೇ ವಿಷ್ಣೋರ್ವಿಭೂತಯಃ' ಇತಿ ಚ ॥೩೩॥

ಶ್ರೀಪುರುಷೋತ್ತಮನ ವಿಷಯದಲ್ಲಿ ಜ್ಞಾನಿಗಳಾದ ದೇವತೆಗಳಿಗೆ ಸ್ವತಂತ್ರನೋ ಪರತಂತ್ರನೋ, ದುಃಖಿಯೋ, ಸುಖಿಯೋ, ಜ್ಞಾನಿಯೋ, ಅಜ್ಞಾನಿಯೋ ಮುಂತಾದ ಸಂಶಯ ಬರಲು ಹೇಗೆ ಸಾಧ್ಯ? ಬರಲಾರದು. ಪುರುಷೋತ್ತಮನು ಅನಂತ ಗುಣ ಉಳ್ಳವನು, ಪೂರ್ಣ ಶಕ್ತಿಯುಳ್ಳವನು. ಆದುದರಿಂದ ಶ್ರೀಹರಿಗೆ ಸ್ವಾತಂತ್ರ್ಯ ಸುಖ, ಜ್ಞಾನಗಳನ್ನೇ ನಿಶ್ಚಿತವಾಗಿ ಜ್ಞಾನಿಗಳು ತಿಳಿಯುವರು. ಆ ಪರಮಾತ್ಮನ ಶಕ್ತಿಯು ದುರ್ಘಟಘಟಕವೂ, ಸಂಪೂರ್ಣವಾಗಿ ಎಲ್ಲರಿಂದ ತಿಳಿಯಲಾಗದ್ದೂ ಆದ್ದರಿಂದ ಅಜ್ಞಾನಿಗಳು ಇವನನ್ನು ಜೀವನೆಂದೂ, ಪರತಂತ್ರನೆಂದೂ ಹೇಳುವರು. ಈ ರೀತಿಯಾಗಿ ದುರ್ಘಟಘಟಕವಾದ ತನ್ನ ಶಕ್ತಿಯಿಂದ ಜ್ಞಾನಿಯಾದ ಹರಿಯು, ಅಜ್ಞರಿಗೆ ಹಗ್ಗವು ಹಾವಿನಂತೆ ಕಂಡಂತೆ, ಜ್ಞಾನಿಗಳಿಗೆ ಹಗ್ಗ ಕಂಡಂತೆ ಯಥಾರ್ಥ ಬುದ್ಧಿಯಿಂದಲೂ, ಭ್ರಮದಿಂದಲೂ ತನ್ನ ಇಚ್ಛೆಯಿಂದಲೇ ತಿಳಿಯುವನು.

ಮಹಾವಿಷ್ಣುವು **ಅನುಸಾರತಃ** ಅವರವರ ಜ್ಞಾನಾನುಸಾರ ಫಲ ಕೊಡುವನು. 'ಇಲ್ಲಿ ಸಾರ ಶಬ್ದಕ್ಕೆ ಜ್ಞಾನವೆಂದರ್ಥ. ಸೃಗತೌ ಧಾತು, 'ಯೇ ಗತ್ಯರ್ಥಾಃ ತೇ ಜ್ಞಾನಾರ್ಥಾಃ' ಎಂಬ ನ್ಯಾಯಾನುಸಾರ ಎಂದು ತಂತ್ರಭಾಗವತದಲ್ಲಿ ಹೇಳಿದೆ. 'ಮಿಥ್ಯಾಬುದ್ಧ್ಯಾ ಮಿಥ್ಯಾಸಾಧನ ಜನ್ಯವಾದ ಎಂದರ್ಥ. 'ಬುಧ್ಯತೇಽನಯಾ ಇತಿ ಬುದ್ಧಿಃ' ಎಂದು ಗೀತಾಭಾಷ್ಯದಲ್ಲಿ ಹೇಳಿದೆ. ಕಾರಣ ಧೀ ಶಬ್ದ ಪುನರುಕ್ತವಲ್ಲ. ಮಿಥ್ಯಾಸಾಧನಜನ್ಯವಾದ ಸರ್ಪಬುದ್ಧಿಯಿಂದ ಅವಗಮ್ಯತೇ ವಿಷಯೀಕೃತವಾಗುವುದು. ತ್ರಿನಯನ ಎಂದರೆ ನೃಸಿಂಹರೂಪಿ ಹರಿಯು. ವಿಷ್ಣುವಿನ ನೃಸಿಂಹರೂಪಕ್ಕೆ ತ್ರಿನೇತ್ರ ಉಗ್ರ ಮುಂತಾದ ನಾಮಗಳಿವೆ ಎಂದು ಶಬ್ದನಿರ್ಣಯದಲ್ಲಿದೆ.

**ಸತ್ಯಧರ್ಮರ ಪ್ರಕಾರ**

ಅರ್ವಾಚೀನ ಅಂದರೆ ಅಸಾಧಕವಾದ ವಿಕಲ್ಪಪೂರ್ವಕ **ವಿತರ್ಕ** ಎಂದರೆ ವಿರುದ್ಧವಾದ ಅನುಮಾನ. ಪರಮಾತ್ಮಾ, ದುಃಖೀ, ಚೇತನತ್ವಾತ್, ಅಹಮಿವ, ಜಗದಂತಃಪಾತಿತ್ವಾತ್ ಮುಂತಾಗಿ. ಏತನ್ಮೂಲಕವಾದ ಯಾವ ವಿಚಾರ ದುರ್ಮೀಮಾಂಸಾ ಮತ್ತು ಪ್ರಮಾಣದಂತೆ ತೋರುತ್ತವೋ ವಸ್ತುತಃ ಪ್ರಮಾಣವಲ್ಲವೋ ಇಂತಹ **ಕುತರ್ಕಶಾಸ್ತ್ರಾಣಿ** ಪಾಶುಪತಾದಿಗಳೋ ಅವುಗಳಿಂದ **ಕಲಿಲ** ವ್ಯಾಕುಲವಾದ **ಅಂತಃಕರಣ** ಮನಸ್ಸುಳ್ಳ **ದುರವಗ್ರಹ** ದುಸ್ಸಾಧ್ಯವಾದ, ಪ್ರತಿಬಂಧ ಉಳ್ಳ **ವಾದಿನಾಂ** ವಾದಿಗಳ (ವಾದಿನಾಂ ಎಂಬಲ್ಲಿಯ ನಿಂದಾರ್ಥಕ ಇನಿ ಪ್ರತ್ಯಯ ವಿವರಣವೆ ಇದುವರೆಗೆ ಹೇಳಿದ್ದು) ಇದರಿಂದ ಸಂಶಯ ವಿಪರ್ಯಾಯ

ಉಳ್ಳವರು ತರತಮಭಾವದಿಂದ ಅಜ್ಞಾನಿಗಳೇ, ದೇವತೆಗಳು ತಮ್ಮ ಅಭಿಪ್ರಾಯಾನುಸಾರ ಪ್ರವೃತ್ತವಾದುದಲ್ಲ ಎಂಬ ಆಕ್ಷೇಪಾಶಯ ಸೂಚಿತವಾಗುವದು. **ವಾದಿನಾಂ** ಎಂದು ಉಪಹಾಸ ಎಂದು ಹೇಳಬಹುದು. **ವಿವಾದಾನವಸರೇ** ಇಂಥ ವಿವಾದಕ್ಕೆ ಅವಕಾಶ ಕೊಡದಿರುವಾಗ **ಕೇವಲಾ** ನಿಸ್ಸೀಮವಾದ **ಸ್ವಾತ್ಮ** ನಿಜವಾದ, ತನ್ನ ಸ್ವರೂಪಭೂತವಾದ **ಮಾಯಾ** ಸಾಮರ್ಥ್ಯವನ್ನು **ಅಂತರ್ಧಾಯ** ನಿಗೂಹ್ಯ ತೋರಗೊಡದೇ **ಉಪರತಸಮಸ್ತಮಾಯಾಮಯೇ** ಪ್ರಾಕೃತಸ್ವಭಾವರಹಿತನಾದ ಈಶ್ವರನಲ್ಲಿ, ದುರ್ಜನರು ಹೇಳುವ ಕುಶಲಾಕುಶಲಭೋಗವನ್ನು ನಾವು ತಿಳಿಯಲಾರೆವು. ಸಗುಣನಿರ್ಗುಣರೂಪದ್ವೈರೂಪ್ಯ ಪ್ರಯೋಜಕ ಭೋಕ್ತೃತ್ವ ಅಭೋಕ್ತೃತ್ವ ಎರಡೂ ಇವೆ ಎಂದರೆ ಅಲ್ಲ. ಅನಂತರೂಪ ಉಳ್ಳವನಿಗೆ ವಿಶೇಷ ಬಲದಿಂದ ರೂಪದ್ವಯಗಳನ್ನು ಒಪ್ಪುವೆವು. ಆದರೆ ಶಬಲಾಶಬಲರೂಪಗಳನ್ನು ಒಪ್ಪುವುದಿಲ್ಲವೆಂದು ಹೇಳುವರು. **ಸ್ವರೂಪದ್ವಯಾಭಾವಾತ್** ಎಂದು. ಅಂದರೆ ಸ್ವಂ ಸ್ವಾತ್ಮಕವಾದ, ಸ್ವಂ ಸ್ವಕೀಯವಾದ ಎಂದು ಎರಡು ರೂಪಗಳಲ್ಲ ಎಂದರ್ಥ. ಅಂದರೆ ಎಲ್ಲವು ಸ್ವಾತ್ಮಕವೇ ಎಂದು ಭಾವ. ರೂಪಾಭಾವಾತ್ ಎಂದಿಷ್ಟೇ ಹೇಳದೆ, ಆತ್ಮಾತ್ಮೀಯ ಸಾಧಾರಣವಾದ ಸ್ವಶಬ್ದ ಪ್ರಯೋಗದಿಂದ ಈ ಅರ್ಥ ಸೂಚಿತವಾಗುವುದು.

'ಏಕಮೇವಾದ್ವಿತೀಯಂ' 'ನಿರನಿಷ್ಟೋ ನಿರವದ್ಯಃ' 'ಶುಭಂ ಪಿಬತ್ಯಸೌ ನಿತ್ಯಂ' 'ಅನಶ್ನನ್ನನ್ಯಃ' ಮುಂತಾಗಿ ಪ್ರಮಾಣವಿರುವುದರಿಂದ ಅಗ್ನಿಸ್ತಂಭನ ವಿದ್ಯೆ ಬಲ್ಲವನು ಸುಡುವ ಮನೆಯೊಳಗಿದ್ದರೂ ಸುಡದಿರುವಂತೆ ಈಶ್ವರನು ದೇಹದಲ್ಲಿದ್ದರೂ ಸುಖದುಃಖಭೋಗವಿಲ್ಲವೆಂದು ಸಮ-ವಿಷಮವಾದ ಮತಿಯುಳ್ಳ ಜನರಿಗೆ ಅನುಗುಣವಾಗಿ ಈ ರೀತಿ ನಿನ್ನನ್ನು ತೋರಿಸುವಿ. ಆದಕ್ಕೆ ಪ್ರಯೋಜಕವನ್ನು ಅರ್ಥಾತ್ ತಿಳಿಸುವರು. **ಸಮವಿಷಮಮತೀನಾಂ ಮತಮನುಸರಸಿ** ಅಧಿಕಾರಿಗಳು ಸಮ ವಿಷಮ ಮತಿಯುಳ್ಳವರಾದ್ದರಿಂದ ಅವರಿಂದ ಪ್ರಸಂಜಿತವಾದ ಮತವನ್ನು ಅನುಸರಿಸುವಿ. ಅಂದರೆ ಅವರ ಜ್ಞಾನಾನುಸಾರ ಸಂಪಾದಿತವಾದ ಗತಿಯನ್ನು ಕೊಡುವ ಮುಖಾಂತರ ಅನುಸರಿಸುವಿ ಎಂದರ್ಥ.

ಅವರ ಸದಸನ್ಮತಿಗಳು ಹೀಗೆ ಎಂದು ದೃಷ್ಟಾಂತ ಪೂರ್ವಕ ತಿಳಿಸುವರು. **ಯಥಾ ರಜ್ಜುಖಂಡಃ ಸರ್ಪಾದಿಧಿಯಾಂ** ಹೇಗೆ ಹಗ್ಗದ ತುಂಡು ಸರ್ಪವೆಂದು ಹೂಮಾಲೆಯೆಂದು ಬುದ್ಧಿಯುಳ್ಳವನಿಗೆ ಅಥವಾ **ರಜ್ಜುಖಂಡಃ ರಜ್ಜುಖಂಡಾದಿಃ ಸರ್ಪಾದಿಧಿಯಾಂ** ಅಂದರೆ ರಜ್ಜುವಿನಲ್ಲೇ ರಜ್ಜು ಎಂಬ ಬುದ್ಧಿ, ಸರ್ಪದಲ್ಲಿಯೇ




ಸರ್ಪವೆಂಬ ಬುದ್ಧಿ ದೋಷವಿಲ್ಲದವರಿಗೆ, ರಜ್ಜುವಿನಲ್ಲಿ ಸರ್ಪಬುದ್ಧಿಗಳು ದೋಷ ಇದ್ದವರಿಗೆ ಹುಟ್ಟುವವೋ ಹಾಗೆ ಎಂದರ್ಥ. ರಜ್ಜುನಾ ಸಹಿತಃ ಖಂಡಃ ರಜ್ಜುಖಂಡಃ ಎಂದು ಮಾಡಿ ಖಂಡಶಬ್ದದಿಂದ ಶುಕ್ತಿಶಕಲವನ್ನು ಸ್ವೀಕರಿಸಿದರೆ ಆದಿಪದದ ಆನುಗುಣ್ಯ ಬರುವದೋ (ರಜ್ಜುಸರ್ಪ-ಶುಕ್ತಿರಜತ ಭ್ರಮ ತೆಗೆದುಕೊಳ್ಳಬಹುದು) **ಸ ಏವ ಭಗವಾನ್ ಸರ್ವವಸ್ತುಷು ಬ್ರಹ್ಮಾದಿಯವಸಾವಸಾನೇಷು** ಬ್ರಹ್ಮಾದಿ ಹುಲ್ಲುಪರ್ಯಂತ **ವಸ್ತುಸ್ವರೂಪಃ** ಆಯಾ ರೂಪದಿಂದ ಇದ್ದು ನಿಯಮಿಸುವನು. **ವಸ್ತುಷು** ಆ ವಸ್ತುಗಳಲ್ಲಿಸು ಅತ್ಯಂತ **ಅರೂಪಃ** ಅವುಗಳಿಂದ ಭಿನ್ನನು, (ಅತದ್ರೂಪ) ಎಂದು ಆಂತರಂಗಿಕ ಭಾವ. ಅಲ್ಲಿರಲೇನು ಕಾರಣ ಎಂದರೆ **ಸರ್ವೇಶ್ವರಃ** 'ಏಷ ಸರ್ವೇಶ್ವರಃ ಏಷ ಸರ್ವಪಾಲಃ' ಎಂಬ ಶ್ರುತಿಯಿರುವುದರಿಂದ ಅವುಗಳ ನಿಯಮನಕ್ಕಾಗಿ ಅಲ್ಲಿರುವನು. ಅಂದ ಮೇಲೆ ಹಿಂದೆ ಹೇಳಿದ ಅನುಮಾನಗಳು ಶ್ರುತಿ ಸಹಾಯವಿಲ್ಲದಿರುವುದರಿಂದ ಶುಷ್ಕವಾದವುಗಳಾದ್ದರಿಂದ ಬಹಿರಂಗ ಪಡಿಸಲು ಯೋಗ್ಯವಾದವುಗಳಲ್ಲ ಎಂದು ತಿಳಿಸಿದಂತಾಯಿತು. ಭಗವಾನ್, ಜೀವಭಿನ್ನಃ , ಸರ್ವೇಶ್ವರತ್ವಾತ್, ವಿಲಕ್ಷಣಚೇತನತ್ವಾತ್, ವ್ಯತಿರೇಕೇಣ ನರವತ್, ಎಂದು ಶ್ರುತಿಮೂಲಕವಾದ ಅನುಮಾನವನ್ನು ಹೇಳಿದಂತಾಯಿತು. 'ಧಾತಾ ಯಥಾ ಪೂರ್ವಮಕಲ್ಪಯತ್' ಎಂದು ಮುಂತಾಗಿ ಬ್ರಹ್ಮಾದಿಗಳಿಗೆ ಕಾರಣತ್ವ ಕೇಳಿ ಬರುವುದಲ್ಲ ಎಂದರೆ ಹೇಳುವರು. **ಸಕಲಕಾರಣಕಾರಣಭೂತಃ** ಎಲ್ಲದಕ್ಕೂ ಕಾರಣರೆಂದು ಅಭಿಮತರಾದ ಬ್ರಹ್ಮ-ರುದ್ರಾದಿಗಳಿಗೂ ಕಾರಣನಾದವನು, 'ನಾಮಾನಿ ಸರ್ವಾಣಿ' 'ಯೋ ದೇವಾನಾಂ' ಮುಂತಾದ ಪ್ರಮಾಣಾನುಸಾರ ಶ್ರೀಹರಿಯೇ ಧಾತಾ ಮೊದಲಾದ ಎಲ್ಲ ನಾಮಗಳಿಂದ ಕರೆಯಲ್ಪಡುವುದರಿಂದ ಉಳಿದವರು ಕಾರಣವೆಂಬ ವಾದ ಅಶ್ರದ್ಧೇಯವೆಂದು ತಿಳಿಯಬೇಕು.

ಭಗವಂತನು ಹೊರಗಿದ್ದು ಎಲ್ಲವನ್ನು ಮಾಡುವನೋ ಅಥವಾ ಒಳಗಿದ್ದೋ ಎಂದರೆ ವಿಶಕಲಿತವಾಗಿ ಒಂದೊಂದನ್ನು ಒಪ್ಪಲಾರೆವು. ಅಂದರೆ ಕೇವಲ ಹೊರಗಿದ್ದು ಎಂದಾಗಲಿ, ಕೇವಲ ಒಳಗಿದ್ದೆಂದಾಗಲಿ ಅಂಗೀಕರಿಸುವುದಿಲ್ಲ. ಒಳಗೂ ಹೊರಗೂ ಇದ್ದು ಯಾವಾಗಲೂ ಎಲ್ಲ ಕಾರ್ಯಗಳನ್ನು ಭಗವಂತ ಮಾಡುತ್ತಾನೆ. 'ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ' ಎಂಬ ಪ್ರಮಾಣ ಈ ವಿಷಯವನ್ನೇ ತಿಳಿಸುತ್ತದೆ. ಇನ್ನು ಪರಿಚ್ಛಿನ್ನ ಪದಾರ್ಥಗಳಲ್ಲಿದ್ದರೆ ಭಗವಂತನಿಗೆ ಪರಿಚ್ಛೇದ ಬರುವದೆಂದು ನಿನ್ನ ಆಶೆಯನ್ನು ಸೂತ್ರಕಾರರೇ 'ಅರ್ಭಕೌಕಸ್ತ್ವಾತ್...' ಎಂಬ

ಸೂತ್ರದಲ್ಲಿ ಸೂತ್ರಕಾರರೇ ಭೇದಿಸಿರುವರು. ಕಾರಣ ಪ್ರಯತ್ನಿಸಬೇಡ. **ಸರ್ವಪ್ರತ್ಯಗಾತ್ಮತ್ವಾತ್** ಸರ್ವಾಂತರ್ಯಾಮಿಯಾದ್ದರಿಂದ **ಸರ್ವಗುಣಾಭಾಸೋ-ಪಲಕ್ಷಿತಃ** ಎಲ್ಲ ಗುಣಗಳ ಜ್ಞಾನ ಉಳ್ಳವರಿಂದ ತಿಳಿಯಲ್ಪಟ್ಟನು. ಸರ್ವೇ ಗುಣಾಃ ತೇಷಾಂ ಆಭಾಸಃ ಜ್ಞಾನಂ ಯೇಷಾಂ ತೈಃ ಉಪಲಕ್ಷಿತಃ ದೃಷ್ಟಃ ೨. ಸರ್ವೇಭ್ಯಃ ಗುಣಾಃ ಅಪ್ರಧಾನಾಃ ಅಧಮಾಧಿಕಾರಿಣಃ ತೇಷಾಂ ಆಭಾಸಃ ಅನವಭಾಸಶ್ಚ ಉಪಲಕ್ಷಿತಃ ಅನುಮಿತಃ ಅಂದರೆ ಅಧಮಾಧಿಕಾರಿಗಳಿಗೆ ಕಾಣದಿರುವವನು ಎಂದು ಅನುಮಿತನಾದವನೆಂದರ್ಥ. **ಸರ್ವೇ** ಅವರೆಲ್ಲರೂ **ಗುಣಾಭಾಸಾಃ** ನಿನ್ನ ಗುಣ ಪ್ರತಿಬಿಂಬ ಗುಣವುಳ್ಳವರು. ಅವರಿಂದ ಉಪಲಕ್ಷಿತನು ಎಂದಾದರೂ ಅರ್ಥ. ನ ಸ್ಥಾನತೋಽಪೀತ್ಯಾದಿಯಾಗಿ ಹೇಳಿರುವುದರಿಂದ ತತ್ಕೃತವೈಚಿತ್ರ್ಯ ಇಲ್ಲವೆಂದು ಹೇಳುವರು. **ಏಕ ಏವ** ಲಯಕಾಲದಲ್ಲಿ ಬೇರಾರೂ ಇಲ್ಲವೆಂದರ್ಥ. ಏಕೆಂದರೆ **ಪರ್ಯವಶೇಷಿತಃ** 'ಸ ವಾ ಏಷ ನೇತಿ' 'ನಿಷೇಧಶೇಷೋ ಜಯತಾದಶೇಷಃ' ಇತ್ಯಾದಿ ಶ್ರುತಿ-ಸ್ಮೃತಿಗಳು ಈ ವಿಷಯದಲ್ಲಿ ಇವೆ. ಏಕ ಏವ ಪರಿಶಿಷ್ಟಃ ಎಂದು ನಿರ್ಣಯ ಹೇಳಿರುವರು. ಒಬ್ಬನೇ ಉಳಿದಿರುವನು ಎಂದು ಅರ್ಥ. 'ಅಥ ಹ ವಾವ...' ಎಂಬ ಗದ್ಯದಲ್ಲಿ 'ತ್ರಿನಯನ...' ಎಂದು ಮತ್ತು 'ವಿಭೂತಯಃ ದಿತಿದನುಜಾದಯಃ' ಎಂದು ವಾಸುದೇವ ಮುಂತಾದ ಭಗವಂತನ ನಾಮಗಳನ್ನೇ ಸ್ತುತಿಸುವ ಪ್ರಸಂಗದಲ್ಲೇ ಹೇಳಿದೆ. ಮತ್ತು ಬೇರೆಯವರ ಲಿಂಗಗಳನ್ನು ಹಿಂದಿನಂತೆ ಹೇಳಿಲ್ಲ. ಆದುದರಿಂದ ಇಲ್ಲಿ ತ್ರಿನಯನನು ಸದಾಶಿವನಲ್ಲ. ವಿಭೂತಯಃ ಎಂದು ಹೇಳಿದ್ದು ಅಭೇದಾಭಿಪ್ರಾಯದಿಂದಲ್ಲ. ಕಿಂತು ಬಹುಭವನಾಭಿಪ್ರಾಯದಿಂದ ಎಂದು ತಮ್ಮ ಮಾತುಗಳು ಮತ್ತು ಪ್ರಮಾಣಗಳು ಈ ಎರಡರಿಂದಲೂ ನೃಮೃಗ ಎರಡೂ ರೂಪವುಳ್ಳ ನೃಹರಿಯೇ ಎಂದು ಹೇಳುವರು. ತ್ರಿನಯನೋ ನರಸಿಂಹಾದಿರೂಪೀ ಎಂದು. ತ್ರೀಣಿ ನಯನಾನಿ ಯಸ್ಯ ಸಃ ತ್ರಿನಯನಃ, 'ವಿಷ್ಣೋಃ ನೃಸಿಂಹ ನಾಮಾನಿ' ಎಂಬ ಪ್ರಮಾಣದಲ್ಲಿ ನೃಸಿಂಹ ಎಂಬುದು 'ನ ಲೋಪಃ ಪ್ರಾತಿಪದಿಕಾಂತಸ್ಯ' ಎಂಬಲ್ಲಿಯಂತೆ ಲುಪ್ತಷಷ್ಠೀಕವಾಗಿದೆ. ಆದ್ದರಿಂದ ವಿಷ್ಣೋಃ ನೃಸಿಂಹಸ್ಯ ಎಂದು ಸಾಮಾನಾಧಿಕರಣ್ಯೇನ ಅನ್ವಯ ಮಾಡಲು ಬರುವುದು.

ಶಬ್ದನಿರ್ಣಯವಾದರೂ ನಿಬಂಧವಾಗಿದೆ. ಆದರಿಂದ ಪುರಾಣಾಂತರದಲ್ಲಿರುವ 'ಸತ್ಯಜ್ಞಾನಸುಖಸ್ವರೂಪಮಮಲಂ ಕ್ಷೀರಾಬ್ಧಿಮಧ್ಯಸ್ಥಲಮ್ । ಯೋಗಾರೂಢಮತಿ ಪ್ರಸನ್ನವದನಂ ಭೂಷಾ ಸಹಸ್ರೋಜ್ವಲಮ್ । ತ್ರ್ಯಕ್ಷಂ ಚಕ್ರಪಿನಾಕಸಾಭಯವರಾನ್

ಬಿಭ್ರಾಣಮರ್ಕಚ್ಛವಿಮ್ । ಛತ್ರೀಭೂತ ಫಣೀಂದ್ರಮಿಂದುಧವಲಂ ಲಕ್ಷ್ಮೀನೃಸಿಂಹಂ ಭಜೇ । ಮುಂತಾದ ವಾಕ್ಯಗಳನ್ನು ಸ್ವೀಕರಿಸಿರುವರು. 'ಉಗ್ರೋ ಭಸ್ಮಧರೊ ನಗ್ನಃ ಕಪಾಲೀತಿ ಶಿವಸ್ಯ ಚ । ವಿಶೇಷನಾಮಾನಿ ದದೌ ಸ್ವಕಿಯಾನ್ಯಪಿ ಕೇಶವಃ' ಎಂದು ಶಿವನ ವಿಶೇಷ ನಾಮವೆಂದು ಹೇಳಿದೆ. ಉಗ್ರ ಎಂಬ ನಾಮವನ್ನು ಇಲ್ಲಿ ನರಸಿಂಹನಾಮಗಳಲ್ಲಿ ಸ್ವೀಕರಿಸಿದ್ದರ ಅಭಿಪ್ರಾಯವೇನು ಎಂದರೆ ಅಲ್ಲಿಯೂ ಭಗವಂತನು ಆ ಶಬ್ದದಿಂದ ಸರ್ವಥಾ ವಾಚ್ಯನಲ್ಲ ಎಂಬ ಅಭಿಪ್ರಾಯವಿಲ್ಲವೇ ಇಲ್ಲ. ಅಲ್ಲಿಯೇ ಸ್ವಕೀಯ ಎಂಬ ಉಕ್ತಿಯ ಸ್ವಾರಸ್ಯಾನುಸಾರ ಈ ರೀತಿಯಾಗಿ ಹೇಳಬೇಕು. ಕಿಂತು ಉಗ್ರತ್ವಾದಿತಚ್ಛಬ್ದಾಭಾವಾತ್ ಎಂದು ಭಾಷ್ಯ ಸಹಿತ ಈ ಪ್ರಮಾಣಕ್ಕೆ 'ಗುಣೈರಪಿ ನ ತೂಪಾಸ್ಯೋ ಯೇ ಪೂರ್ಣತ್ವವಿರೋಧಿನಃ' ಎಂದು ಹೇಳಿರುವುದರಿಂದ ಉಗ್ರನೆಂದು ಭಸ್ಮಧರನೆಂದು ಉಪಾಸನೆ ಮಾಡಬಾರದು ಎಂಬಲ್ಲಿ ತಾತ್ಪರ್ಯವೆಂದು ಅವಶ್ಯ ಹೇಳಬೇಕು. ಆದ್ದರಿಂದ ಅದನ್ನು ಹೇಳಿದ್ದು ಅಯುಕ್ತವಲ್ಲ. 'ನೃಸಿಂಹಾದಿಕಮನ್ಯಚ್ಚ ದುರಿತಾದಿನಿವೃತ್ತಯೇ' ಎಂದು ಭಾಷ್ಯದಲ್ಲಿ ಹೇಳಿರುವುದರಿಂದಲೂ ಪ್ರಮಾಣದಲ್ಲಿಯೂ **ವಿಷ್ಣೋಃ** ಎಂದು ಹೇಳಿದ್ದರಿಂದಲೂ ಶೃಂಗಿಗ್ರಾಹಕತಯಾ ನೃಸಿಂಹ ಎಂದು ಹೇಳಿದ್ದು, ಎಲ್ಲ ಭಗವದ್ರೂಪಗಳಿಗೂ ಅವಿಶೇಷವಾಗಿ ಉಗ್ರಾದಿಶಬ್ದವಾಚ್ಯತಾಪರವೆಂದು ತಿಳಿಯಬೇಕು. 'ಉಗ್ರ ಉಗ್ರಾಭಿರೂತಿಭಿಃ' ಎಂಬಲ್ಲಿ 'ಉಗ್ರಃ ದುಷ್ಟಾನಾಂ' ಎಂಬ ಟೀಕಾ ಮಾತುಗಳು ಸಮಂಜಸಗಳೆಂದು ತಿಳಿಯಬೇಕು.

ಹಿಸಿ ಹಿಂಸಾಯಾಂ ಎಂಬ ಧಾತುವಿಗೆ (ಹಿನಸ್ತಿ) ಪೃಷೋದರಾದಿಯಾದ್ದರಿಂದ ವರ್ಣವಿಪರ್ಯಯವಾಗಿ ಸಿಂಹ ಎಂದಾಗುವದು. ಅಥವಾ ತತ್ತ್ವಪ್ರಕಾಶಿಕೆಯಲ್ಲಿ ಅತಿ ಸಹನವುಳ್ಳ ಪುರುಷನಲ್ಲಿ ಸಿಂಹ ಶಬ್ದ ಪ್ರಯೋಗವಿದೆ ಎಂದು ಹೇಳಿದ್ದರಿಂದ 'ಷಹ ಮರ್ಷಣೇ' ಎಂಬ ಧಾತುವಿನ ರೂಪವು. ಸರ್ವಃ ಸಂಸಾರಃ ಪೃಷೋದರಾದಿರೇವ. 'ತೃತೀಯೋಽತಿಶಯೇ' ಎಂದಿರುವದರಿಂದ ಮೂರನೆಯ ಇಕಾರದ ಅರ್ಥವು ಅತಿ ಎಂಬುದಾಗಿ ಗುರ್ವರ್ಥದಿಪಿಕಾದಲ್ಲಿ ಹೇಳಿದ್ದರಿಂದ ತಿಳಿಯಬೇಕು. ಮತ್ತು 'ನೃಸಿಂ ಹಂತಾ ನೃಸಿಂಹೋಽಸೌ' ಎಂಬ ಮಾನನಿರುಕ್ತಿಯನ್ನು ಆದರಿಂದಲೇ ತಿಳಿಯಬೇಕು.

ಆಗ ನೃಸಿಂ ಎಂದರೆ ಮಾನವೋಪಲಕ್ಷಿತ ಯೋಗ್ಯ ಸರ್ವ ಬಂಧನವನ್ನು ಹಂತೀತಿ ನೃಸಿಂಹಃ ಎಂದರ್ಥ ತಿಳಿಯಬೇಕು. 'ಷಿಞ ಬಂಧನೇ' ಎಂದು ಧಾತು ಇದೆ. ವಿವಿಧಂ ಎಂಬುದು ತಾದಾತ್ಮ್ಯೇನ ಭವನ ವಿಶೇಷಣವಾಗಿದೆ. ವಿವಿಧವಾದ

ಸೂತ್ರದಲ್ಲಿ ಸೂತ್ರಕಾರರೇ ಛೇದಿಸಿರುವರು. ಕಾರಣ ಪ್ರಯತ್ನಿಸಬೇಡ. **ಸರ್ವಪ್ರತ್ಯಗಾತ್ಮತ್ವಾತ್** ಸರ್ವಾಂತರ್ಯಾಮಿಯಾದ್ದರಿಂದ **ಸರ್ವಗುಣಾಭಾಸೋ-ಪಲಕ್ಷಿತಃ** ಎಲ್ಲ ಗುಣಗಳ ಜ್ಞಾನ ಉಳ್ಳವರಿಂದ ತಿಳಿಯಲ್ಪಟ್ಟನು. ಸರ್ವೇ ಗುಣಾಃ ತೇಷಾಂ ಆಭಾಸಃ ಜ್ಞಾನಂ ಯೇಷಾಂ ತೈಃ ಉಪಲಕ್ಷಿತಃ ದೃಷ್ಟ ೨. ಸರ್ವೇಭ್ಯಃ ಗುಣಾಃ ಅಪ್ರಧಾನಾಃ ಅಧಮಾಧಿಕಾರಿಣಃ ತೇಷಾಂ ಆಭಾಸಃ ಅನವಭಾಸಶ್ಚ ಉಪಲಕ್ಷಿತಃ ಅನುಮಿತಃ ಅಂದರೆ ಅಧಮಾಧಿಕಾರಿಗಳಿಗೆ ಕಾಣದಿರುವನು ಎಂದು ಅನುಮಿತನಾದವನೆಂದರ್ಥ. **ಸರ್ವೇ** ಅವರೆಲ್ಲರೂ **ಗುಣಾಭಾಸಾಃ** ನಿನ್ನ ಗುಣ ಪ್ರತಿಬಿಂಬ ಗುಣವುಳ್ಳವರು. ಅವರಿಂದ ಉಪಲಕ್ಷಿತನು ಎಂದಾದರೂ ಅರ್ಥ. ನ ಸ್ಥಾನತೋಽಪೀತ್ಯಾದಿಯಾಗಿ ಹೇಳಿರುವುದರಿಂದ ತತ್ಕೃತವೈಚಿತ್ರ್ಯ ಇಲ್ಲವೆಂದು ಹೇಳುವರು. **ಏಕ ಏವ** ಲಯಕಾಲದಲ್ಲಿ ಬೇರಾರೂ ಇಲ್ಲವೆಂದರ್ಥ. ಏಕೆಂದರೆ **ಪರ್ಯವಶೇಷಿತಃ** 'ಸ ವಾ ಏಷ ನೇತಿ' 'ನಿಷೇಧಶೇಷೋ ಜಯತಾದಶೇಷಃ' ಇತ್ಯಾದಿ ಶ್ರುತಿ-ಸ್ಮೃತಿಗಳು ಈ ವಿಷಯದಲ್ಲಿ ಇವೆ. ಏಕ ಏವ ಪರಿಶಿಷ್ಟಃ ಎಂದು ನಿರ್ಣಯ ಹೇಳಿರುವರು. ಒಬ್ಬನೇ ಉಳಿದಿರುವನು ಎಂದು ಅರ್ಥ. 'ಅಥ ಹ ವಾವ...' ಎಂಬ ಗದ್ಯದಲ್ಲಿ 'ತ್ರಿನಯನ...' ಎಂದು ಮತ್ತು 'ವಿಭೂತಯಃ ದಿತಿದನುಜಾದಯಃ' ಎಂದು ವಾಸುದೇವ ಮುಂತಾದ ಭಗವಂತನ ನಾಮಗಳನ್ನೇ ಸ್ತುತಿಸುವ ಪ್ರಸಂಗದಲ್ಲೇ ಹೇಳಿದೆ. ಮತ್ತು ಬೇರೆಯವರ ಲಿಂಗಗಳನ್ನು ಹಿಂದಿನಂತೆ ಹೇಳಿಲ್ಲ. ಆದುದರಿಂದ ಇಲ್ಲಿ ತ್ರಿನಯನನು ಸದಾಶಿವನಲ್ಲ. ವಿಭೂತಯಃ ಎಂದು ಹೇಳಿದ್ದು ಅಭೇದಾಭಿಪ್ರಾಯದಿಂದಲ್ಲ. ಕಿಂತು ಬಹುಭವನಾಭಿಪ್ರಾಯದಿಂದ ಎಂದು ತಮ್ಮ ಮಾತುಗಳು ಮತ್ತು ಪ್ರಮಾಣಗಳು ಈ ಎರಡರಿಂದಲೂ ನೃಮೃಗ ಎರಡೂ ರೂಪವುಳ್ಳ ನೃಹರಿಯೇ ಎಂದು ಹೇಳುವರು. ತ್ರಿನಯನೋ ನರಸಿಂಹಾದಿರೂಪೀ ಎಂದು. ತ್ರೀಣಿ ನಯನಾನಿ ಯಸ್ಯ ಸಃ ತ್ರಿನಯನಃ, 'ವಿಷ್ಣೋಃ ನೃಸಿಂಹ ನಾಮಾನಿ' ಎಂಬ ಪ್ರಮಾಣದಲ್ಲಿ ನೃಸಿಂಹ ಎಂಬುದು 'ನ ಲೋಪಃ ಪ್ರಾತಿಪದಿಕಾಂತಸ್ಯ' ಎಂಬಲ್ಲಿಯಂತೆ ಲುಪ್ತಷಷ್ಠೀಕವಾಗಿದೆ. ಆದ್ದರಿಂದ ವಿಷ್ಣೋಃ ನೃಸಿಂಹಸ್ಯ ಎಂದು ಸಾಮಾನಾಧಿಕರಣ್ಯೇನ ಅನ್ವಯ ಮಾಡಲು ಬರುವುದು.

ಶಬ್ದನಿರ್ಣಯವಾದರೂ ನಿಬಂಧವಾಗಿದೆ. ಆದರಿಂದ ಪುರಾಣಾಂತರದಲ್ಲಿರುವ 'ಸತ್ಯಜ್ಞಾನಸುಖಸ್ವರೂಪಮಮಲಂ ಕ್ಷೀರಾಬ್ಧಿಮಧ್ಯಸ್ಥಲಮ್ । ಯೋಗಾರೂಢಮತಿ ಪ್ರಸನ್ನವದನಂ ಭೂಷಾ ಸಹಸ್ರೋಜ್ವಲಮ್ । ತ್ರ್ಯಕ್ಷಂ ಚಕ್ರಪಿನಾಕಸಾಭಯವರಾನ್

ಬಿಭ್ರಾಣಮರ್ಕಚ್ಛವಿಮ್ । ಛತ್ರೀಭೂತ ಫಣೀಂದ್ರಮಿಂದುಧವಲಂ ಲಕ್ಷ್ಮೀನೃಸಿಂಹಂ ಭಜೇ । ಮುಂತಾದ ವಾಕ್ಯಗಳನ್ನು ಸ್ವೀಕರಿಸಿರುವರು. 'ಉಗ್ರೋ ಭಸ್ಮಧರೊ ನಗ್ನಃ ಕಪಾಲೀತಿ ಶಿವಸ್ಯ ಚ । ವಿಶೇಷನಾಮಾನಿ ದದೌ ಸ್ವಕಿಯಾನ್ಯಪಿ ಕೇಶವಃ' ಎಂದು ಶಿವನ ವಿಶೇಷ ನಾಮವೆಂದು ಹೇಳಿದೆ. ಉಗ್ರ ಎಂಬ ನಾಮವನ್ನು ಇಲ್ಲಿ ನರಸಿಂಹನಾಮಗಳಲ್ಲಿ ಸ್ವೀಕರಿಸಿದ್ದರ ಅಭಿಪ್ರಾಯವೇನು ಎಂದರೆ ಅಲ್ಲಿಯೂ ಭಗವಂತನು ಆ ಶಬ್ದದಿಂದ ಸರ್ವಥಾ ವಾಚ್ಯನಲ್ಲ ಎಂಬ ಅಭಿಪ್ರಾಯವಿಲ್ಲವೇ ಇಲ್ಲ. ಅಲ್ಲಿಯೇ ಸ್ವಕೀಯ ಎಂಬ ಉಕ್ತಿಯ ಸ್ವಾರಸ್ಯಾನುಸಾರ ಈ ರೀತಿಯಾಗಿ ಹೇಳಬೇಕು. ಕಿಂತು ಉಗ್ರತ್ವಾದಿತಚ್ಛಬ್ದಾಭಾವಾತ್ ಎಂದು ಭಾಷ್ಯ ಸಹಿತ ಈ ಪ್ರಮಾಣಕ್ಕೆ 'ಗುಣೈರಪಿ ನ ತೂಪಾಸ್ಯೋ ಯೇ ಪೂರ್ಣತ್ವವಿರೋಧಿನಃ' ಎಂದು ಹೇಳಿರುವುದರಿಂದ ಉಗ್ರನೆಂದು ಭಸ್ಮಧರನೆಂದು ಉಪಾಸನೆ ಮಾಡಬಾರದು ಎಂಬಲ್ಲಿ ತಾತ್ಪರ್ಯವೆಂದು ಅವಶ್ಯ ಹೇಳಬೇಕು. ಆದ್ದರಿಂದ ಅದನ್ನು ಹೇಳಿದ್ದು ಅಯುಕ್ತವಲ್ಲ. 'ನೃಸಿಂಹಾದಿಕಮನ್ಯಚ್ಚ ದುರಿತಾದಿನಿವೃತ್ತಯೇ' ಎಂದು ಭಾಷ್ಯದಲ್ಲಿ ಹೇಳಿರುವುದರಿಂದಲೂ ಪ್ರಮಾಣದಲ್ಲಿಯೂ **ವಿಷ್ಣೋಃ** ಎಂದು ಹೇಳಿದ್ದರಿಂದಲೂ ಶೃಂಗಿಗ್ರಾಹಕತಯಾ ನೃಸಿಂಹ ಎಂದು ಹೇಳಿದ್ದು, ಎಲ್ಲ ಭಗವದ್ರೂಪಗಳಿಗೂ ಅವಿಶೇಷವಾಗಿ ಉಗ್ರಾದಿಶಬ್ದವಾಚ್ಯತಾಪರವೆಂದು ತಿಳಿಯಬೇಕು. 'ಉಗ್ರ ಉಗ್ರಾಭಿರೂತಿಭಿಃ' ಎಂಬಲ್ಲಿ 'ಉಗ್ರಃ ದುಷ್ಟಾನಾಂ' ಎಂಬ ಟೀಕಾ ಮಾತುಗಳು ಸಮಂಜಸಗಳೆಂದು ತಿಳಿಯಬೇಕು.

ಹಿಸಿ ಹಿಂಸಾಯಾಂ ಎಂಬ ಧಾತುವಿಗೆ (ಹಿನಸ್ತಿ) ಪೃಷೋದರಾದಿಯಾದ್ದರಿಂದ ವರ್ಣವಿಪರ್ಯಯವಾಗಿ ಸಿಂಹ ಎಂದಾಗುವದು. ಅಥವಾ ತತ್ತ್ವಪ್ರಕಾಶಿಕೆಯಲ್ಲಿ ಅತಿ ಸಹನವುಳ್ಳ ಪುರುಷನಲ್ಲಿ ಸಿಂಹ ಶಬ್ದ ಪ್ರಯೋಗವಿದೆ ಎಂದು ಹೇಳಿದ್ದರಿಂದ 'ಷಹ ಮರ್ಷಣೇ' ಎಂಬ ಧಾತುವಿನ ರೂಪವು. ಸರ್ವಃ ಸಂಸಾರಃ ಪೃಷೋದರಾದಿರೇವ. 'ತೃತೀಯೋऽತಿಶಯೇ' ಎಂದಿರುವದರಿಂದ ಮೂರನೆಯ ಇಕಾರದ ಅರ್ಥವು ಅತಿ ಎಂಬುದಾಗಿ ಗುರ್ವರ್ಥದಿಪಿಕಾದಲ್ಲಿ ಹೇಳಿದ್ದರಿಂದ ತಿಳಿಯಬೇಕು. ಮತ್ತು 'ನೃಸಿಂ ಹಂತಾ ನೃಸಿಂಹೋऽಸೌ' ಎಂಬ ಮಾನನಿರುಕ್ತಿಯನ್ನು ಆದರಿಂದಲೇ ತಿಳಿಯಬೇಕು.

ಆಗ ನೃಸಿಂ ಎಂದರೆ ಮಾನವೋಪಲಕ್ಷಿತ ಯೋಗ್ಯ ಸರ್ವ ಬಂಧನವನ್ನು ಹಂತೀತಿ ನೃಸಿಂಹಃ ಎಂದರ್ಥ ತಿಳಿಯಬೇಕು. 'ಷಿಞ ಬಂಧನೇ' ಎಂದು ಧಾತು ಇದೆ. ವಿವಿಧಂ ಎಂಬುದು ತಾದಾತ್ಮ್ಯೇನ ಭವನ ವಿಶೇಷಣವಾಗಿದೆ. ವಿವಿಧವಾದ

ಭವನವೇನುಂಟೋ ಅದಕ್ಕೆ ಯೋಗ್ಯವಾದ್ದರಿಂದ ಎಲ್ಲ ದನುಜಾದಿಗಳು ವಿಭೂತಿ ಎನಿಸುತ್ತಾರೆ. ಮತ್ಸ್ಯಾದಿಗಳಂತೆ ಅಲ್ಲ.

**ಗದ್ಯಾರ್ಥ**

ಹಿಂದೆ ಹೇಳಿದ ಎಲ್ಲ ವಿಷಯದಲ್ಲಿ 'ಅಥ' ಎಂಬುದರಿಂದ ಪ್ರಮಾಣ ಹೇಳುವರು. ಮಹಿಮಾ ಎಂಬುದೇ ಮಹಾ ಅಮೃತಸಮುದ್ರ (ಆಕಾರಾಂತ ಸ್ತ್ರೀಲಿಂಗ ಮಹಿಮಾ ಶಬ್ದ) ಅದರ ವಿಪ್ರುಟ್ ಬಿಂದು ಹನಿಯು **ಅಸಕೃತ್** ಯಾವಾಗಲೂ **ಲೀಢಯಾ** ಆಸ್ವಾದಿಸುವುದರಿಂದ, ಅಸಕೃತ್ ಎಂದು ಅಧಿಕಾರಿವಿಶೇಷವಿವಕ್ಷೆಯಿಂದ ಅಥವಾ ಮಹತ್ವ ಲಾಭಲೋಭದಿಂದ ಎಂದು ತಿಳಿಯಬೇಕು. ನಿಷ್ಯಂದಮಾನ ಎಂದು ಹೇಳುವುದರಿಂದ ಸುಖ ಶಬ್ದದ ನಂತರ ರಸ ಶಬ್ದದ ಅಧ್ಯಾಹಾರತೆಯನ್ನಾಗಲಿ ಸುಖಕ್ಕೆ ರಸತೆಯನ್ನಾಗಲಿ ಭಕ್ತಿರಸ ಎಂಬಲ್ಲಿಯಂತೆ ಸೂಚಿಸಿರುವರು. ಪ್ರವಹಿಸುವ ಸುಖರಸದಿಂದ, ವಿಸ್ಮಾರಿತ ಮರೆತ ವಿಷಯಸುಖ ಉಳ್ಳ 'ಸುಖ ಎಂದರೆ ವೈಷಯಿಕ ಸುಖ, ಕುಟುಂಬಸಮೂಹಸಂಬಂಧಿಯಾದ, **ಪ್ರಿಯಸುಹೃದಿ** ಪ್ರಿಯವಾದುದಕ್ಕಿಂತಲೂ ಪ್ರಿಯನಾದ ಎಂದರ್ಥ. **ಸುಹೃದಿ** ಸುಭಗವಾದ ಮನಸ್ಸುಳ್ಳ ಪ್ರಿಯ ಸುಹೃತ್ತಿಗೂ ಭೇದವನ್ನು ಹಿಂದೆ ಅಭಿಧಾನ ನಾವು ಹೇಳಿದ್ದನ್ನು ಅನುಸಂಧಾನ ಮಾಡಿರಿ ಎನ್ನುತ್ತಾರೆ. ಅನಿಮಿತ್ತೋಪಕಾರಕ ಸುಹೃತ್, ಪ್ರತ್ಯುಪಕಾರಾಪೇಕ್ಷೆಯಿಂದ ಮಾಡುವವ ಪ್ರಿಯ. ನಿವೃತ್ತಮನಸ್ಸಂತುಷ್ಟಚಿತ್ತರು ಅದನ್ನು ಬಿಡದಿರಲು ಕಾರಣ, ಸ್ವಾರ್ಥಕುಶಲರು, **ಯತ್ರ** ಯಾವುದನ್ನು ಸೇವಿಸಿದರೆ, ಪುನಃ ಸಂಸಾರ ಬರುವುದಿಲ್ಲವೋ, ಮೂರು ಲೋಕಗಳೇ ಸನ್ನಿಧಾನ ಧಾಮನಾದವನು ತ್ರಿಭುವನಾತ್ಮಭುವನ, ತ್ರಿನಯನ ನರಹರೇ. ಈಗ ಅವರಿಂದ ಭಯ ಬಂದಿರುವದರಿಂದ ದಿತಿಜದನುಜಾದಿಗಳನ್ನು ಹೇಳಿರುವರು. ಚ ಅಪಿ ಶಬ್ದಗಳಿಂದ ನಾವು ಎಂದೇನು ಪ್ರತ್ಯೇಕ ಹೇಳಬೇಕಿಲ್ಲ ಎಂದು ಸೂಚಿಸುವರು. **ಅನುಪಕ್ರಮಸಮಯಃ** ಎಂಬುದಕ್ಕೆ ಅಪ್ರಾರಂಭಸಮಯ ಎಂದರ್ಥ ಭ್ರಾಂತಿಯನ್ನು ನಿವಾರಿಸಲು ಪ್ರಮಾಣದಿಂದ ಅದರರ್ಥ ಹೇಳುವರು.

ತಾತ್ಪರ್ಯ

ನಿರುಪಕ್ರಮೋ ಹರಿರ್ನಿತ್ಯಮಪ್ರಯತ್ನೋ ಹ್ಯುಪಕ್ರಮೇತ್ ॥ ಇತಿ ಚ

ಈ ತಾತ್ಪರ್ಯ ೩೫ ನೇ ಶ್ಲೋಕಕ್ಕೂ ಸಂಬಂಧಿಸಿದ್ದರಿಂದ ಅಲ್ಲಿ ಬರೆದಿದೆ. ಇಲ್ಲಿಯೂ ಸತ್ಯಧರ್ಮರು ಉಪಯೋಗಿಸಿದ್ದಾರೆ.

ಅನಿತ್ಯ ಪ್ರಯತ್ನ ಉಳ್ಳ ಪುರುಷನು ಯಾವಾಗಲಾದರೊಮ್ಮೆ ಉಪಕ್ರಮ ಮಾಡುವನು. ಶ್ರೀಹರಿಯಾದರೂ ನಿತ್ಯ ಪ್ರಯತ್ನ ಉಳ್ಳವನು. ಆದ್ದರಿಂದ ಅನುಪಕ್ರಮನೆನಿಸುವನು. ಮೂಲದಲ್ಲಿ ಅನುಪಕ್ರಮ ಎಂಬುದು ಶ್ರೀಹರಿಗೆ ಸಂಬೋಧನ ಎಂದು ಸೂಚಿಸಿದಂತಾಯಿತು. ಸಮಯಃ ಕ್ರಮಸಮಯ, ಅಂದರೆ ನಮ್ಮ ವಿರೋಧಿಗಳನ್ನು ಬೆಳೆಸುವ ಸಮಯವಲ್ಲ, ಅವರನ್ನು ರಕ್ಷಿಸುವ ಸಮಯವಲ್ಲವೆಂದು ತಿಳಿದು, ವಾಮನ, ರಾಮ, ನೃಸಿಂಹ, ಮತ್ಸ್ಯಾದಿ ರೂಪದಿಂದ ಅವತರಿಸಿ ಅವರ ಅಪರಾಧಾನುಗುಣ ಶಿಕ್ಷೆ ವಿಧಿಸಿರುವಿ. ಅವತೀರ್ಯ ಎಂಬಲ್ಲಿ, ಅವ ಪೂರ್ವಕ 'ತೃ ಪ್ಲವನತರಣಯೋಃ' ಎಂಬ ಧಾತುವಿಗೆ ಕ್ತ್ವಾ ಪ್ರತ್ಯಯೇ ಗತಿತ್ವಾತ್ ಸಮಾಸೇ, ಸಮಾಸೇನ ಪೂರ್ವೇತಿ ಲ್ಯಪಿ ಋತ ಇದ್ಧಾತೋಃ ಇತಿ ಇತ್ವೇ ಹಲಿ ಚೇತಿ ದೀರ್ಘಃ ।

**ವಿಶೇಷವಿಚಾರ**

ಇಲ್ಲಿ ಗದ್ಯವನ್ನು ಎಣಿಸುವಾಗ ವ್ಯಾಖ್ಯಾನಕಾರರಲ್ಲಿ ಮತ ಭೇದ ಉಂಟು 'ಓಂ ನಮಸ್ತೇ' ಎಂದಾರಂಭಿಸಿ, 'ಯತ್ಕಾಮೇನ ಉಪಸಾದಿತಾಃ' ಎಂಬಲ್ಲಿವರೆಗೆ ಒಂದೇ ಗದ್ಯ ಎಂದು ಸತ್ಯಧರ್ಮತೀರ್ಥರು. 'ಓಂ ನಮಸ್ತೇ' ಎಂದಾರಂಭಿಸಿ 'ಹಂಸಿ' ಎಂಬಲ್ಲಿವರೆಗೆ ಒಂದು, 'ಅಥ ತತ್ರ ಭಗವಾನ್' ಎಂದಾರಂಭಿಸಿ 'ಶಮಯಿತುಂ' ವರೆಗೆ ಎರಡು, 'ಅಥ ಭಗವನ್ ತವಾಸ್ಮಾಭಿಃ' ಎಂದಾರಂಭಿಸಿ, 'ಯತ್ಕಾಮೇ ಉಪಸಾದಿತಾಃ' ವರೆಗೆ ಮೂರನೆಯದು ಎಂದು ಸತ್ಯಾಭಿನವತೀರ್ಥರು. 'ಭಗವನ್' ಎಂದಾರಂಭಿಸಿ 'ಹಂಸಿ' ವರೆಗೆ ಒಂದು, 'ಅಥ ತತ್ರ' ಆರಂಭಿಸಿ 'ಪರ್ಯವಶೇಷಿತಃ' ವರೆಗೆ ಎರಡು, 'ಅಥ ಹ ವಾವ' ದಿಂದ 'ಅವತೀರ್ಯ' ವರೆಗೆ ಮೂರು, 'ಏವಮೇನಂ' ದಿಂದ 'ಉಪಸಾದಿತಾಃ' ವರೆಗೆ ನಾಲ್ಕು ಎಂದು ಚೆಟ್ಟಿ. ಕೆಲವರು ಹತ್ತು ಎಂದು ತಮ್ಮ ಅಭಿಪ್ರಾಯವನ್ನು ತಮ್ಮಿಂದ ಸಂಪಾದಿತವಾದ ಪುಸ್ತಕದಲ್ಲಿ ಹೇಳುವರು.

ಚೆಟ್ಟಿ ಆಚಾರ್ಯರು ವಿರೋಧೇ ಎಂದು ಸಪ್ತಮೀ ಇಟ್ಟು ಕೊಂಡು ವ್ಯಾಖ್ಯಾನಿಸಿರುವರು.

ಚೆಟ್ಟಿಯವರು ಬರೆದ ೩೩ ನೇ ಗದ್ಯದ ಕೆಲವು ಪದಗಳ ಅರ್ಥ. **ಸ್ವಕೃತಕುಶಲಾಕುಶಲಫಲಂ ಕುಶಲಂ** ಸೃಷ್ಟ್ಯಾದಿಗಳು **ಅಕುಶಲಂ** ಸಂಹಾರಾದಿಗಳು ಅವುಗಳ ಫಲವನ್ನು ಸುಖ-ದುಃಖವನ್ನು ಹೊಂದುವನೇ? ಅಥವಾ ಇಲ್ಲವೇ? ಇದರಲ್ಲೇನು ಸಂಶಯ? ಸ್ವಾತಂತ್ರ್ಯ-ಪಾರತಂತ್ರ್ಯ ಎರಡನ್ನೂ ಒಪ್ಪಬಹುದಲ್ಲ ಎಂದರೆ

**ನ ಹಿ ವಿರೋಧೇ** ಸಹಾನವಸ್ಥಾನರೂಪ ವಿರೋಧವಿರುವಾಗ **ಉಭಯಂ** ಎರಡನ್ನು ಅಂಗೀಕರಿಸಲಾಗುವದಿಲ್ಲ. ಹಾಗಾದರೆ ಒಂದೇ ಅಂಗೀಕರಿಸಿರಿ ಎಂದರೆ ಭಗವಂತನು ಅನಂತಗುಣಪೂರ್ಣನಾದ್ದರಿಂದ ಅದಕ್ಕೆ ವಿರೋಧಿಯಾದ ಪಾರತಂತ್ರ್ಯವು ಯುಕ್ತವಾಗುವುದಿಲ್ಲ. ಆದ್ದರಿಂದ ಸ್ವಾತಂತ್ರ್ಯ ಒಂದೇ ಒಪ್ಪಬೇಕೇ ಅಥವಾ ಅಘಟಿತಘಟನಾಸಾಮರ್ಥ್ಯವಿರುವುದರಿಂದ ಎರಡನ್ನೂ ಒಪ್ಪಬೇಕೆಂದು ಸಂಶಯ ಹೋಗಲಾರದು. **ಸ್ವರೂಪದ್ವಯಾಭಾವಾತ್** ಸ್ವಾತಂತ್ರ್ಯ-ಪಾರತಂತ್ರ್ಯಭೇದೇನ ಬ್ರಹ್ಮನಲ್ಲಿ ದ್ವೈವಿಧ್ಯ ಅಪ್ರಮಾಣಿಕ. **ತ್ರಿಭುವನಾತ್ಮಭವನ** ತ್ರಿಭುವನಸ್ಯ ಆತ್ಮಾ ಮುಖ್ಯಪ್ರಾಣಃ ಸ ಏವ ಭವನಂ ಮುಖ್ಯಾಧಿಷ್ಠಾನಂ **ತ್ರಿವಿಕ್ರಮ** ತ್ರಿಷು ವೇದೇಷು ಪ್ರತಿಪಾದ್ಯಃ ವಿಕ್ರಮಃ ಯಸ್ಯ ಸಃ, 'ತ್ರಿರಿತ್ಯೇವಂ ತ್ರಯೋ ವೇದಾಃ ಕೀರ್ತಿತಾ ಮುನಿಸತ್ತಮೈಃ । ಕ್ರಮನ್ನೇತಾಂಸ್ತು ಸರ್ವಾಂಸ್ತ್ರಿವಿಕ್ರಮೋಽಸ್ತಿ ಜನಾರ್ದನಃ' ಎಂದು ವಚನವಿದೆ.

**ಉಪಕ್ರಮವಿಕ್ರಮಃ** 'ಉಪಕ್ರಮಸ್ತು ಪ್ರಾರಂಭೇ ಚಿಕಿತ್ಸಾಯಾಂ ಚ ವಿಕ್ರಮೇ' ಎಂದು ಅಭಿಧಾನವಿದೆ. ನ ಉಪಕ್ರಮಃ ಅನುಪಕ್ರಮಃ ಪರಾಜಯವೆಂದರ್ಥ. ತೇಷಾಂ ಅನುಪಕ್ರಮಸಮಯಃ ದೈತ್ಯರ ಪರಾಜಯಸಮಯವೆಂದು ತಿಳಿದು ಅನೇಕರೂಪಗಳನ್ನು ಧರಿಸಿ ಅಪರಾಧಾನುಗುಣ ದಂಡ ಮಾಡಿರುವಿ ಎಂದು ಭಾವ. ।।೩೩।।

ಈ ರೀತಿ ಸ್ತುತನಾದ ಭಗವಂತನನ್ನು ಕುರಿತು ಪ್ರಸ್ತುತ ವಿಷಯವನ್ನು ಹೇಳುವರೆಂದು ಹೇಳುತ್ತಾರೆ-

ಏವಮೇನಮಪಿ ಭಗವನ್ ಜಹಿ ತ್ವಾಷ್ಟ್ರಂ ವೃತ್ರಾಸುರಂ ಯದಿ ಮನ್ಯಸೇ । ಅಸ್ಮಾಕಂ ತಾವಕಾನಾಂ ತವ ಚರಣನಲಿನಯುಗಲಧ್ಯಾನಾನುಬದ್ಧಹೃದಯನಿಗಡಾನಾಂ ಸ್ವಲಿಂಗವಿಧಾರಣೇನಾತ್ಮಸಾತ್ಕೃತಾನಾಮನುಕಂಪಾನುರಂಜಿತವಿಶದರುಚಿರಶಿಶಿರ-ಸ್ಮಿತಾವಲೋಕನೇನ ವಿಗಲಿತಮಧುರಮುಖರಿತವಚಸಾಽಮೃತಕಲಯಾ ಚಾಂತಸ್ತಾಪಮನಘಾರ್ಹಸಿ ಶಮಯಿತುಮ್ ।।

**ಹೇ ಭಗವನ್** ಶ್ರೀಹರಿಯೇ **ಯದಿ ಮನ್ಯಸೇ** ನಾವು ಹೇಳುವ ಕಾರ್ಯ ಮಾಡಲು ಯೋಗ್ಯವೆಂದು ನೀನು ತಿಳಿದಿದ್ದರೆ, ಇಷ್ಟಪಟ್ಟರೆ, ವಿನಯದಿಂದ ಈ ರೀತಿಯಾಗಿ ಪ್ರಕಾಶವಾಗಿ ಮೆತ್ತಗೆ ಹೇಳಿದ್ದಾರೆ. ನಿನ್ನ ಭಕ್ತವತ್ಸಲತೆಯನ್ನವಲಂಬಿಸಿ, ಬಲಾತ್ಕಾರದಿಂದಾದರೂ ಮಾಡಿಸುವೆವು ಎಂಬ ಭಾವ ಮನಸ್ಸಿನಲ್ಲಿದೆ. ಆದಕ್ಕೆ ಉಪಯುಕ್ತ ಮಾತುಗಳನ್ನೇ ಹೇಳುವರು.

**ಏವಂ** ಹಿಂದೆ ಬಲಿ ಮುಂತಾದವರನ್ನು ನಿಗ್ರಹಿಸಿದಂತೆ **ಏನಂ** ಈ ಲೋಕಭಯಂಕರನಾದ **ತ್ವಾಷ್ಟ್ರಂ** ತ್ವಷ್ಟೃವಿನ ಯಾಗದ ಫಲವಾಗಿ ಜನಿಸಿದ **ವೃತ್ರಾಸುರಮಪಿ** ವೃತ್ರಾಸುರನನ್ನು **ಜಹಿ** ಸಂಹರಿಸು. ಮತ್ತು ಇದು ಕರ್ತವ್ಯವೆಂದು ಪ್ರಾರ್ಥಿಸುವರು. **ಹೇ ಅನಘ** ನಿರ್ದೋಷನಾದ ಶ್ರೀಹರಿಯೇ **ತವ** ನಿನ್ನ **ಚರಣನಲಿನಯುಗಲ** ಕಮಲದಂತಿರುವ ಎರಡು ಪಾದಗಳ **ಧ್ಯಾನ** ಧ್ಯಾನದಿಂದ **ಅನುಬದ್ಧ** ಕಟ್ಟಿಹಾಕಲ್ಪಟ್ಟ **ಹೃದಯನಿಗಡಾನಾಂ** (ಇದರಿಂದ ನೀನು ಒಳಗೆ ಕಟ್ಟಲ್ಪಟ್ಟಿರುವಿ ಎಂದೂ ಸೂಚಿಸುವರು.) ಹೃದಯವೆಂಬ ಸಂಕೋಲೆಗಳುಳ್ಳ **ಸ್ವಲಿಂಗವಿಧಾರಣೇನ** ಸ್ವರೂಪಭೂತವಾದ ಸಾಧುತ್ವಪ್ರಯೋಜಕವಾದ ಭಕ್ತಿಮತ್ತಾದಿ ಚಿಹ್ನೆಗಳನ್ನು ಒಳಗೆ ಹೊರಗೆ ಶಂಖ-ಚಕ್ರಾದಿ ನಿನ್ನ ಚಿಹ್ನೆಗಳನ್ನು ಸ್ಪಷ್ಟವಾಗಿ ಧರಿಸುವುದರಿಂದ **ಆತ್ಮಸಾತ್ಕೃತಾನಾಂ** ನಿನ್ನ ಅಧೀನರಾಗಿ ಮಾಡಲ್ಪಟ್ಟ **ತಾವಕಾನಾಂ** ನಿನ್ನ ಭಕ್ತರಾದ **ಅಸ್ಮಾಕಂ** ನಮ್ಮ **ಅಂತಸ್ತಾಪಂ** ಮನಸ್ಸಿನ ತಾಪವನ್ನು, (ಪಾಪಪ್ರಯುಕ್ತವಾದ) ಅದನ್ನು ಕಳೆಯಲು ಸಮರ್ಥನೆಂದು **ಅನಘ** ಪದದಿಂದ ತಿಳಿಸಿರುವರು. ಪಾಪರಹಿತನೆಂದರ್ಥ. **ಅನುಕಂಪಾನುರಂಜಿತ** ದಯೆಯಿಂದ ಅನುರಾಗಯುಕ್ತವಾದ **ವಿಶದ** ನಿರ್ಮಲವಾದ **ರುಚಿರ** ಮನೋಹರವಾದ **ಶಿಶಿರ** ಶೀತಲವಾದ **ಸ್ಮಿತ** ಮುಗುಳು ನಗೆಯಿಂದ ಕೂಡಿದ **ಅವಲೋಕನೇನ** ನೋಟದಿಂದಲೂ, (ಅನುಕಂಪ ಹಿಡಿದು ರುಚಿರವರೆಗೆ ವಿಶೇಷಣ, ಎರಡಕ್ಕೂ ಸ್ಮಿತಕ್ಕೂ ಅವಲೋಕನಕ್ಕೂ ಶಿಶಿರ ಎಂಬುದು ಅವಲೋಕನಕ್ಕೆ ಮಾತ್ರ ವಿಶೇಷಣವೆಂದು ತಿಳಿಯಬೇಕು ಎನ್ನುತ್ತಾರೆ ಶ್ರೀಗಳು.) **ಅಮೃತಕಲಯಾ** ಅಮೃತಕಲೆಯಿಂದ ಕೂಡಿದ **ವಿಗಲಿತ** ದಯೆಯಿಂದಲೇ ಅನಾಯಾಸವಾಗಿ ಹೊರ ಹೊಮ್ಮಿದ **ಮಧುರ** ಇಂಪಾದ **ಮುಖರಿತ** ಮಂದ್ರಧ್ವನಿಯ **ವಚಸಾ** ಮಾತಿನಿಂದಲೂ ಅಥವಾ ಮಾತೆಂಬ ಅಮೃತದ ಕಲೆಯಿಂದಲೂ **ಶಮಯಿತುಂ ಅರ್ಹಸಿ** ಹೋಗಲಾಡಿಸಲು ಯೋಗ್ಯನಾಗಿರುವೆ.

ಮೊದಲು ಕೃಪಾದೃಷ್ಟಿಯಿಂದ ನೋಡಿ ಅಮೃತದಂತಿರುವ ಮಾತುಗಳನ್ನಾಡಿ, ನಮ್ಮ ಮನಸ್ಸಿನಲ್ಲಿರುವ ಭಯವನ್ನು ಹೋಗಲಾಡಿಸೆಂದು ಅಭಿಪ್ರಾಯ.

ವಿಗಲಿತೇನ ಎಂದದ್ದರಿಂದ ನಿರಾಯಾಸವಾಗಿ ನಿಸ್ಸಾರಿತವಾಗಿದ್ದರೂ 'ಸದ್ಭಿಸ್ತು ಲೀಲಯಾ ಪ್ರೋಕ್ತಂ ಶಿಲಾಲಿಖಿತಮಕ್ಷರಂ' ಎಂದು ಉಕ್ತಿಯಿರುವುದರಿಂದ ನಮ್ಮ ಪ್ರಯೋಜನಜನಕತೆ ಇದೆ ಎಂದು ತಿಳಿದಿರುವೆನೆಂದು ಸೂಚಿಸುವರು. ಹಸಿದಿರುವ ಹುಡುಗನಂತೆ ಮನಸ್ಸಿನ ಭಾವಾತಿರೇಕದಿಂದ ಸರ್ವಜ್ಞನಾದ ನಿನ್ನ ಎದುರಿಗೆ ನಾವು

ವಿಜ್ಞಾಪಿಸಿಕೊಂಡಿದ್ದು ಹೆಚ್ಚು ಮಾತನಾಡಿದಂತೆಯೇ. ಈ ವಿಜ್ಞಾಪನೆಯು ನಮ್ಮ ಅಜ್ಞಾನ ನಿಮಿತ್ತಕವೇ ಹೊರತು ಬೇರೆಯಲ್ಲವೆಂಬ ಅಭಿಪ್ರಾಯದಿಂದ ಹೇಳುತ್ತಾರೆ-

ಅಥ ಭಗವಂಸ್ತವಾಸ್ಮಾಭಿರಖಿಲಜಗದುತ್ಪತ್ತಿಸ್ಥಿತಿಲಯನಿಮಿತ್ತಾಯಮಾನದಿವ್ಯ-ಮಾಯಾವಿನೋದಸ್ಯ ಸಕಲಜೀವನಿಕಾಯಾನಾಮಂತರ್ಹೃದಯೇಷು ಬಹಿರಪಿ ಚ ಬ್ರಹ್ಮಪ್ರತ್ಯಗಾತ್ಮಸ್ವರೂಪೇಣ ಪ್ರಧಾನರೂಪೇಣ ಯಥಾ ದೇಶಕಾಲದೇಹಾವಸ್ಥಾನ-ವಿಶೇಷಂ ತದುಪಾದಾನೋಪಲಂಭಕತಯಾಽನುಭವತಃ ಸರ್ವಪ್ರತ್ಯಯಸಾಕ್ಷಿಣ ಆಕಾಶಶರೀರಸ್ಯ ಸಾಕ್ಷಾತ್ಪರಬ್ರಹ್ಮಣಃ ಪರಮಾತ್ಮನಃ ಕಿಯಾನಿಹ ವಾ ಅರ್ಥವಿಶೇಷೋ ವಿಜ್ಞಾಪನೀಯಃ ಸ್ಯಾದ್ವಿಸ್ಫುಲಿಂಗಾದಿಭಿರಿವ ಹಿರಣ್ಯರೇತಸಃ । ಅತ ಏವ ಸ್ವಯಂ ತದುಪಕಲ್ಪಯಾಽಸ್ಮಾಕಂ ಭಗವತಃ ಪರಮಗುರೋಸ್ತವ ಚರಣಶತಪಲಾಶಚ್ಛಾಯಾಂ ವಿವಿಧವೃಜಿನಸಂಸಾರಪರಿಶ್ರಮೋಪಶಮನೀಮುಪಸನ್ನಾನಾಂ ವಯಂ ಯತ್ಕಾಮೇ-ನೋಪಸಾದಿತಾಃ ॥

**ಅಥೋ ಈಶ ಜಹಿ ತ್ವಾಷ್ಟ್ರಂ ಗ್ರಸಂತಂ ಭುವನತ್ರಯಮ್ ।**
**ಗ್ರಸ್ತಾನಿ ಯೇನ ನಃ ಕೃಷ್ಣ ತೇಜಾಂಸ್ಯಸ್ತ್ರಾಯುಧಾನಿ ಚ ॥೩೪॥**

**ಅಥ** ಮತ್ತು **ಭಗವನ್** ಶ್ರೀಹರಿಯೇ **ಅಖಿಲ** ಸಮಸ್ತವಾದ **ಜಗತ್** ಪ್ರಪಂಚದ **ಉತ್ಪತ್ತಿ** ಹುಟ್ಟು ಸ್ಥಿತಿ ಇರುವಿಕೆ **ಲಯ** ನಾಶ, ಇವುಗಳಿಗೆ **ನಿಮಿತ್ತಾಯಮಾನ** ನಿಮಿತ್ತಕಾರಣವಾಗಿರುವ, ಅಥವಾ ನಿಮಿತ್ತವೆಂದು ತಿಳಿಯಲ್ಪಡುವ (ನಿಮಿತ್ತಮಿತಿ ಅಯಮಾನಾ ಜ್ಞಾಯಮಾನಾ ಅಯತೇಃ ಶಾನಚ್, ಕರ್ಮಣಿ ಯಕ್, ಯಕಾರಲೋಪಃ ಛಾಂದಸಃ, ನಿಮಿತ್ತತ್ವಂ ಅಯಮಾನಾ ಗಚ್ಛತೀತಿ ಕರ್ತರಿ ವಾ ಸಃ ಯಕ್‌ಪ್ರತ್ಯಯವು ಸಂಜ್ಞಾನ ಎಂಬ ಅರ್ಥದಲ್ಲಿ ಬರುತ್ತದೆಂದು ತಿಳಿಯಬೇಕು.) **ದಿವ್ಯಮಾಯಾವಿನೋದಸ್ಯ** ಸ್ವರೂಪೇಚ್ಛೆಯಿಂದ ಲೀಲೆಯುಳ್ಳ **ಸಕಲನಿಕಾಯಾನಾಂ** ಎಲ್ಲ ಜೀವರಾಶಿಗಳ, 'ಸಮೂಹಾಃ ಸಂಹಿತಾನಾಂ ಸಮುಚ್ಚಯಃ' ಎಂದು ವಿಶ್ವವಿದೆ.

'ಕರ್ತುಃ ಕ್ಯಚ್ ಸಲೋಪಶ್ಚ' ಇತ್ಯುಪಮಾನಾತ್ ಸುಬಂತಾತ್ ಆಚಾರಕ್ಯಚಿ ನಿಮಿತ್ತಭಿನ್ನೇ ನಿಮಿತ್ತವದಾಚರತಿ ಇತ್ಯನ್ಯಥಾಪ್ರತೀತಿಃ ಅನೇನ ನಿವಾರಿತಾ ಇತಿ ಜ್ಞೇಯಂ. ಅಂದರೆ ನಿಮಿತ್ತಾಯಮಾನ ಎಂದರೆ ವ್ಯಾಕರಣ ಪ್ರಕಾರ ನಿಮಿತ್ತನಲ್ಲದೇ ನಿಮಿತ್ತದಂತೆ ನಟಿಸುವ ಎಂದರ್ಥವಾಗುವದು. ಕಾರಣ ಮೇಲೆ ಹೇಳಿದಂತೆ ಅಯ ಧಾತುವಿಗೆ ಕರ್ಮಣಿ ಶಾನಚ್ ಅಥವಾ ಕರ್ತರಿ ಶಾನಚ್ ಮಾಡಿದ್ದರಿಂದ ಈ ಭ್ರಾಂತಿಯು ನಿವಾರಿತವಾಯಿತು ಎಂದು ಭಾವ.

**ಹೃದಯೇಷು ಅಂತಃ** ಹೃದಯಗಳ ಒಳಗೂ ಹೊರಗೂ ವ್ಯಾಪ್ತವಾದ ಬ್ರಹ್ಮರೂಪದಿಂದ ಒಳಗೆ ಬಿಂಬರೂಪದಿಂದಲೂ **ಪ್ರಧಾನರೂಪೇಣ** ಮುಖ್ಯರೂಪದಿಂದ ತದಂತರ್ಗತ ತದುತ್ತೇಜಕ ರೂಪದಿಂದ ಇದ್ದು **ಯಥಾದೇಶಕಾಲದೇಹಾವಸ್ಥಾನವಿಶೇಷಂ** ದೇಶವಿಶೇಷ (ಈ ದೇಶ) ಕಾಲವಿಶೇಷ (ಈ ಕಾಲ) ದೇವತೆಯ ಮನುಷ್ಯ ಮುಂತಾದ ದೇಹವಿಶೇಷ ಜಾಗ್ರದಾದ್ಯವಸ್ಥಾವಿಶೇಷಕ್ಕೆ ತಕ್ಕಂತೆ ಅಥವಾ ದೇಹಾವಸ್ಥಾನವಿಶೇಷಂ ಎಂದರೆ ಈ ಕರ್ಮದಿಂದ ಈ ರೀತಿಯ (ಇಂತಹ) ದೇಹವಿರಬೇಕೆಂಬ ವಿಶೇಷ ಇಲ್ಲಿ ಇರಬೇಕು ಎಂಬ ವಿಶೇಷವನ್ನು ತದುಪಾದನೋಪಲಂಭಕತಯಾ ೧. ದೇಶ-ಕಾಲಗಳಿಗೆ ಕಾರಣತ್ವ ಪ್ರಾಪಕನಾಗಿ, ೨. ಅವುಗಳ ಸ್ವೀಕಾರ ಆಶ್ರಯವಾಗಿರುವಿಕೆಯಿಂದ, ೩. ದೇಹಾದಿಗಳಿಗೆ ಉಪಾದಾನ ಕಾರಣವಾದ ಪ್ರಕೃತಿಯನ್ನು ಪ್ರವೇಶಿಸಿ ಪರಿಣಾಮಗೊಳಿಸುವುದರಿಂದ **ಅನುಭವತಃ** ಎಲ್ಲವನ್ನು ಪ್ರತ್ಯಕ್ಷವಾಗಿ ನೋಡುವ **ಸರ್ವಪ್ರತ್ಯಯಸಾಕ್ಷಿಣಃ** ಎಲ್ಲ ಜೀವರ ಜ್ಞಾನಗಳನ್ನೂ ಸಾಕ್ಷಾತ್ತಾಗಿ ನೋಡುವ ಅಥವಾ ಯಾವನ ಎಲ್ಲ ಜ್ಞಾನ ಸಾಕ್ಷಿರೂಪವೇ ಆಗಿದೆಯೋ ಅವನು ಅಂದರೆ ಕೇವಲ ಸ್ವರೂಪಜ್ಞಾನವುಳ್ಳ ಎಂದರ್ಥ **ಆಕಾಶಶರೀರಸ್ಯ** ಆಕಾಶದಂತೆ ವ್ಯಾಪ್ತವಾದ, ಸೂಕ್ಷ್ಮವಾದ, ನಿರ್ಲಿಪ್ತವಾದ, ಅತೀಂದ್ರಿಯವಾದ ಶರೀರವುಳ್ಳ (ಅಸಂಗಾಂಗನಾದ) **ಸಾಕ್ಷಾತ್ ಪರಬ್ರಹ್ಮಣಃ** 'ಆಕಾಶಶರೀರಂ ಬ್ರಹ್ಮ' ಎಂದು ಶ್ರುತಿಯಿಂದ ನಿತ್ಯಮುಕ್ತನಾದ **ಪರಮಾತ್ಮನಃ** ಸರ್ವೋತ್ತಮನಾದ ನಿನಗೆ, ಇದು ಲಿಂಗಶರೀರವ್ಯಾವೃತ್ತಿಗಾಗಿ (ವಿ) ಜೀವವ್ಯಾವೃತ್ತಿಗಾಗಿ **ಪರಬ್ರಹ್ಮ** ಎಂದಿರುವರು. ಮುಕ್ತಜೀವವ್ಯಾವೃತ್ತಿಗಾಗಿ **ಸಾಕ್ಷಾತ್** ಎಂದಿರುವರು. ಸಾಕ್ಷಾತ್ ಪರಬ್ರಹ್ಮತ್ವ ಲಕ್ಷ್ಮಿಗೆ ಇದೆ. ಕಾರಣ **ಪರಮಾತ್ಮನಃ** ಎಂದಿರುವರು. **ಹಿರಣ್ಯರೇತಸಃ** ಮಹಾಪ್ರಕಾಶವುಳ್ಳ ಅಗ್ನಿಗೆ **ವಿಸ್ಫುಲಿಂಗಾದಿಭಿಃ ಇವ** ಅಲ್ಪಪ್ರಕಾಶ ಉಳ್ಳ ಬೆಂಕಿಯ ಕಿಡಿಗಳಿಂದ ಮಿಣುಕು ಹುಳಗಳಿಂದ ಹೇಗೋ ಹಾಗೆ **ಅಸ್ಮಾಭಿಃ** ಅಜ್ಞಾನಿಗಳಾದ ನಮ್ಮಿಂದ **ಇಹ** ಈ ಜಗತ್ತಿನಲ್ಲಿ **ಕಿಯಾನ್ ಅರ್ಥವಿಶೇಷಃ ವಾ** ಯಾವ ವಸ್ತುವಿಶೇಷವು ತಾನೇ **ವಿಜ್ಞಾಪನೀಯಃ ಸ್ಯಾತ್** ತಿಳಿಸಬೇಕಾಗಿರುವದು. ಯಾವುದೂ ಇಲ್ಲವೆಂದರ್ಥ. ನಾವು ಹೇಳದೆಯೇ ನೀನೇ ಎಲ್ಲವನ್ನೂ ಬಲ್ಲೆಯೆಂದು ಅಭಿಪ್ರಾಯ. **ಅತ ಏವ** ನಮ್ಮ ಎಲ್ಲ ಆಪತ್ತುಗಳನ್ನೂ ಪರಿಹರಿಸುವವನಾದುದರಿಂದ ಸರ್ವಜ್ಞನಾದ್ದರಿಂದಲೇ **ಯತ್ಕಾಮೇನ** ಯಾವ ವೃತ್ರಾಸುರನ ಸಂಹಾರೇಚ್ಛೆಯಿಂದ **ವಯಂ** ನಾವು **ಉಪಸಾದಿತಾಃ** ನಿನ್ನ ಪಾದಕಮಲಗಳನ್ನು ಶರಣು ಹೊಂದಿರುವೆವೋ **ತತ್** ಆ ನಮ್ಮ ಅಪೇಕ್ಷೆಯನ್ನು **ಪರಮಗುರೋಃ** ಸರ್ವೋತ್ತಮಗುರುವಾದ **ಭಗವತಃ**

ಸಮಸ್ತ ಐಶ್ವರ್ಯ ಸಂಪನ್ನನಾದ **ತವ** ನಿನ್ನ **ವಿವಿಧವೃಜಿನ** ಅನೇಕ ಬಗೆಯ ದುಷ್ಕರ್ಮಗಳ ಫಲವಾದ **ಸಂಸಾರಪರಿಶ್ರಮ** ಸಾಂಸಾರಿಕ ದುಃಖಗಳ **ಉಪಶಮನೀಂ** ನೆರಳನ್ನು **ಉಪಸನ್ನಾನಾಂ** 'ಅಧೀಹಿ ಭಗವೋ ಬ್ರಹ್ಮ...' ಎಂದು ಸಮಿತ್ಪಾಣಿಯಾಗಿ ಶಿಷ್ಯನು ಗುರುಗಳನ್ನು ಶರಣು ಹೊಂದುವಂತೆ ಶರಣು ಹೊಂದಿರುವ **ಅಸ್ಮಾಕಂ** ನಮಗೆ **ಸ್ವಯಂ** ನಮ್ಮ ಪ್ರಾರ್ಥನೆಯಿಲ್ಲದೇ ನೀನೇ **ಉಪಕಲ್ಪಯ** ನೆರವೇರಿಸು. 'ತ್ರಿಷು ಸ್ಫುಲಿಂಗೋऽಗ್ನಿಕಣಃ' 'ಹಿರಣ್ಯರೇತಾ ಹುತಭುಕ್' ಎಂದು ಅಮರವಿದೆ. ಅವನಿಗೂ ಒಬ್ಬ ಗುರು ಇದ್ದರೆ ಅವನೇ ಪ್ರಾರ್ಥಿತನಾಗುವನು ಎಂಬುದಕ್ಕೆ **ಪರಮಗುರೋ** ಎಂಬುದು ಉತ್ತರ. **ಪರಂ ಅಗುರೋಃ** ಗುರುವಿಲ್ಲದ ಎಂದರ್ಥ. **ಉಪಸಾದಿತಾಃ** ಎಂಬುದರಿಂದ ಸದ್ಗುರು ನೀನು, ಸಚ್ಛಿಷ್ಯರು ನಾವು ಎಂದು ಸೂಚಿಸುತ್ತ, 'ಓಂ ಅಕ್ಷರಧಿಯಾಂ ತ್ವವಿರೋಧಃ ಸಾಮಾನ್ಯತದ್ಭಾವಾಭ್ಯಾಂ ಔಪಸದವತ್ತದುಕ್ತಂ ಓಂ' (೩.೩.೩೪) ಎಂಬ ಸೂತ್ರದಲ್ಲಿ ಉದಾಹರಿಸಿದ 'ನಾನಾವಿಧಾ ಜೀವಸಂಘಾ ವಿಮುಕ್ತೌ ನ ಚೈವ ತೇಷಾಂ ಬ್ರಹ್ಮಧಿಯಾಂ ವಿರೋಧಃ । ದೋಷಾಭಾವಾತ್ ಗುರುಶಿಷ್ಯಾದಿಭಾವಾತ್ ಲೋಕೇऽಪಿ ನಾಸೌ ಕಿಮು ತೇಷಾಂ ವಿಮುಕ್ತೇಃ ॥ ಇತಿ ಚ ॥ ಎಂಬ ತುರಶ್ರುತ್ಯರ್ಥವನ್ನು ಅರ್ಥಾತ್ ಸಂಗ್ರಹಿಸಿರುವರು ಎಂದು ತಿಳಿಯಬೇಕು.

ಬಹು ಪ್ರಾರ್ಥನೆಯಿಂದಲೇ ಸ್ವಾಭೀಷ್ಟ ಫಲ ಪ್ರಾಪ್ತಿಯಾಗುವದು ಎಂದು ತಿಳಿದು ಮೇಲೆ ಹೇಳಿದಂತೆ ಗದ್ಯದಿಂದ ವಿಜ್ಞಾಪಿಸಿದುದನ್ನೇ ಇನ್ನು ಮುಂದೆ ನಮ್ಮ ಸದ್ವೃತ್ತೋಚ್ಛಿತ್ತಿ ಆಗುವದಿಲ್ಲ. ಛಂಧಃಸಿದ್ಧಿ ಆಗೇ ಆಗುವದು ಎಂದು ವೃತ್ತ ಛಂದಸ್ಸಿನಿಂದ ಕೂಡಿದ ಪದ್ಯದಿಂದ ತಿಳಿಸುವರು.

**ಹೇ ಈಶ** ಎಲೋ ನಿಯಾಮಕನೇ **ಕೃಷ್ಣ** ಎಲ್ಲರ ಸಾಮರ್ಥ್ಯವನ್ನು ಸೆಳೆದುಕೊಳ್ಳುವವನೇ **ಯೇನ** ಯಾವ ವೃತ್ರಾಸುರನಿಂದ **ನಃ** ನಮ್ಮ **ತೇಜಾಂಸಿ** ಸಾಮರ್ಥ್ಯವು **ಚ** ಮತ್ತು **ಅಸ್ತ್ರಾಯುಧಾನಿ** ಅಸ್ತ್ರಗಳು ಆಯುಧಗಳು **ಗ್ರಸ್ತಾನಿ** ನುಂಗಲ್ಪಟ್ಟವೋ **ತಂ** ಆ **ಭುವನತ್ರಯಂ** ಮೂರು ಲೋಕಗಳನ್ನು **ಗ್ರಸಂತಂ** ನುಂಗುತ್ತಿರುವ **ತ್ವಾಷ್ಟ್ರಂ** ವೃತ್ರಾಸುರನನ್ನು **ಜಹಿ** ಕೊಲ್ಲು. ಭೀತಿಯನ್ನುಂಟು ಮಾಡುವ ದ್ವಾರಾ ಸಾಮರ್ಥ್ಯವು ನುಂಗಿದಂತೆ ಎಂದು ಭಾವ. ಅವನ ಅಂಗಸಂಧಿಯ ನಿಪಾತವಾಗುವುದು ನಿಶ್ಚಿತ. ದೇವತೆಗಳು ಸಪ್ರಕೃತಿಕರಾಗುವರು ಎಂದು ಸೂಚಿಸಲು ನಿಸ್ಸಂಧಿಕವಾದ ನಿಪಾತವನ್ನು ಮೊದಲಿಗೆ ನಿಂಬಧನೆ ಮಾಡಿರುವರು ಎಂದು ತಾತ್ಪರ್ಯ. ॥೩೪॥

ಶತ್ರುವಧೆಯು ಜಾಗ್ರತೆಯಾಗಲೆಂದು ಮತ್ತೊಮ್ಮೆ ನಮಸ್ಕರಿಸುತ್ತಾರೆ-

**ಹಂಸಾಯ ದಭ್ರನಿಲಯಾಯ ನಿರೀಕ್ಷಕಾಯ**
**ಕೃಷ್ಣಾಯ ಮೃಷ್ಟಯಶಸೇ ನಿರುಪಕ್ರಮಾಯ ।**
**ಸತ್ಸಂಗ್ರಹಾಯ ಭವಪಾಂಥನಿಜಾಶ್ರಯಾಯ**
**ಶಶ್ವದ್ವರಿಷ್ಠಗತಯೇ ಹರಯೇ ನಮಸ್ತೇ ॥೩೫॥**

**ಹಂಸಾಯ** ಹಂಸದಂತೆ, ಅಂದರೆ ಅದು ಹಾಲು ಮತ್ತು ನೀರನ್ನು ಬೇರ್ಪಡಿಸಿ ಹಾಲನ್ನು ಮಾತ್ರ ಸ್ವೀಕರಿಸುವಂತೆ, ಸಜ್ಜನರನ್ನು ಸ್ವೀಕರಿಸಿ ದುರ್ಜನರನ್ನು ವರ್ಜಿಸುವ ಅಥವಾ ಶುದ್ಧನಾದ ಅಥವಾ ಶತ್ರುಸಂಹಾರಕನಾದ, 'ಹಂತೃತ್ವಾದ್ಧಂಸನಾಮಾಸೌ' ಎಂದಿದೆ. **ದಭ್ರನಿಲಯಾಯ** ಸೂಕ್ಷ್ಮವಾದ ಹೃದಯಾಕಾಶದಲ್ಲಿ ವಾಸಿಸಿರುವ **ನಿರೀಕ್ಷಕಾಯ** ಸರ್ವಕರ್ಮಸಾಕ್ಷಿಯಾದ ಅಥವಾ ಸಾಕಲ್ಯೇನ ಪರಿಪೂರ್ಣವಾಗಿ ತನ್ನನ್ನು ನೋಡುವವರಿಲ್ಲದ **ಕೃಷ್ಣಾಯ** ಸದಾ ಆನಂದರೂಪನಾದ 'ಕೃಷಿರ್ಭೂವಾಚಕಃ ಶಬ್ದೋ ಣಶ್ಚ ನಿವೃತಿವಾಚಕಃ । ತಯೋರೈಕ್ಯಂ ಪರಂ ಬ್ರಹ್ಮ ಕೃಷ್ಣ ಇತ್ಯಭಿಧೀಯತೇ' ಪೂರ್ಣ ಬಲ ಪ್ರಾಣವುಳ್ಳ (ಕೃತೌ ಪೂರ್ಣೌ ಷಣೌ ಬಲಪ್ರಾಣೌ ಯಸ್ಯ ಸಃ ಕೃಷ್ಣಃ) **ಮೃಷ್ಟಯಶಸೇ** ಶುದ್ಧವಾದ ದಿಗ್ವ್ಯಾಪ್ತವಾದ ಕೀರ್ತಿಯುಳ್ಳ **ನಿರುಪಕ್ರಮಾಯ** ಶ್ರಮಜನಕಪ್ರಯತ್ನವಿಲ್ಲದೇ ಜಗತ್ಕರ್ತನಾದ **ಸತ್ಸಂಗ್ರಹಾಯ** ಸಜ್ಜನರ ಸಂಗ್ರಹ ಉಳ್ಳ ಸಜ್ಜನರಿಂದ ಸಂಗ್ರಾಹ್ಯನಾದ **ಭವಪಾಂಥನಿಜಾಶ್ರಯಾಯ** ಸಂಸಾರಮಾರ್ಗದಲ್ಲಿರುವ, ನಿತ್ಯಾಶ್ರಯನಾದ, 'ನಿಜಮಾತ್ಮೀಯನಿತ್ಯಯೋಃ' ಎಂದು ಅಭಿಧಾನವಿದೆ. **ಶಶ್ವದ್‌ವರಿಷ್ಠಗತಯೇ** ಪುನರಾವೃತ್ತಿಶೂನ್ಯವಾದ ಆದ್ದರಿಂದಲೇ ಸ್ವರ್ಗಾದಿಗಳಿಗಿಂತ ಉತ್ತಮವಾದ ಮೋಕ್ಷ ಕೊಡುವ ಅಥವಾ ವರಿಷ್ಠರೆಂದು ಪ್ರಸಿದ್ಧರಾದ ಬ್ರಹ್ಮಾದಿಗಳಿಗೆ ಶಾಶ್ವತವಾದ ಗತಿ ನೀಡುವ ಎಂದರ್ಥ **ಹರಯೇ ತೇ ನಮಃ** ಆಪತ್ಪರಿಹಾಕನಾದ ನಿನಗೆ ನಮಸ್ಕಾರವೆಂದು ಭಾವ.

ಹಂಸಾಯ ಎಂಬ ಶ್ಲೋಕದಲ್ಲಿ ನಿರುಪಕ್ರಮಾಯ ಎಂಬ ಪದದಿಂದ ಸೃಷ್ಟ್ಯಾದಿವ್ಯಾಪಾರವರ್ಜಿತನೆಂದು ವಿಪರೀತ ಅರ್ಥವಾಗಬಾರದೆಂದು ಪ್ರಮಾಣದಿಂದ ಆದರರ್ಥ ನಿರ್ಣಯಿಸುವರು-

ತಾತ್ಪರ್ಯ

**ನಿರುಪಕ್ರಮೋ ಹರಿರ್ನಿತ್ಯಮಪ್ರಯತ್ನೋ ಹ್ಯುಪಕ್ರಮೇತ್ ।। ಇತಿ ಚ ।।**

ಶ್ರಮಜನಕ ಪ್ರಯತ್ನವಿಲ್ಲದಿರುವದರಿಂದ ಹರಿಯು ನಿರುಪಕ್ರಮನೆನಿಸುತ್ತಾನೆ. **ಅಪ್ರಯತ್ನಃ** ಮೊದಲು ಪ್ರಯತ್ನವಿಲ್ಲದವನು ಹೊಸದಾಗಿ ಉಪಕ್ರಮ ಮಾಡುವನು. **ನಿತ್ಯಮಪ್ರಯತ್ನಃ** ಎಂಬುದು ಒಂದೇ ಪದ. ನಿತ್ಯಃ ಇತಿ ಮಾ ಜ್ಞಾನಂ ಯಸ್ಯ ಸಃ ಪ್ರಯತ್ನೋ ಯಸ್ಯ ಸಃ ನಿತ್ಯತ್ವೇನ ಆಮ್ನಾಯಾದ್ಯನುಶಿಷ್ಟಪ್ರಯತ್ನವಾನ್ ಅತೋ ಅನುಪಕ್ರಮಃ ಇದಂ ಪ್ರಥಮತಾಶೂನ್ಯ ಯತ್ನಃ ಅಂದರೆ ನಿತ್ಯವೆಂದು ವೇದಾದಿಗಳಲ್ಲಿ ಹೇಳಲ್ಪಟ್ಟ ಪ್ರಯತ್ನವುಳ್ಳವನು ಆದ್ದರಿಂದ ಅವನ ಪ್ರಯತ್ನಕ್ಕೆ ಕೊನೆ ಮಾಡಲಿಲ್ಲ. ಇತರರು ಹಾಗಲ್ಲ **ನಿತ್ಯಂ ಯಥಾ ತಥಾ ಅಪ್ರಯತ್ನಃ** ಯಾವಾಗಲೂ ಇರುವ ಪ್ರಯತ್ನ ಉಳ್ಳವರಲ್ಲ ಆದ್ದರಿಂದ ಅವರು ಪ್ರಯತ್ನ ಮಾಡಲಾರಂಭಿಸುವರು. ಇವನ ಪ್ರಯತ್ನ ಪ್ರಾರಂಭಿಸುವುದಲ್ಲ. ಸರ್ವದಾ ಇದ್ದೇ ಇರುವದು ಎಂದು ಭಾವ. ।।೩೫।।

**ಶ್ರೀಶುಕ ಉವಾಚ -**

**ಅಥೈವಮೀಡಿತೋ ರಾಜನ್ ಸಾದರಂ ತ್ರಿದಶೈರ್ಹರಿಃ ।**
**ಸ್ವಮುಪಸ್ಥಾನಮಾಕರ್ಣ್ಯ ಪ್ರಾಹ ತಾನಭಿನಂದಿತಃ ।।೩೬।।**

**ರಾಜನ್** ಪರೀಕ್ಷಿತನೇ **ಅಥ** ಅನಂತರ **ತ್ರಿದಶೈಃ** ದೇವತೆಗಳಿಂದ **ಸಾದರಂ** ಭಕ್ತಿಯಿಂದ **ಏವಂ** ಮೇಲೆ ಹೇಳಿದಂತೆ **ಈಡಿತಃ** ಸ್ತೋತ್ರ ಮಾಡಿಸಿಕೊಂಡ **ಹರಿಃ** ಭಗವಂತನು **ಸ್ವಂ ಉಪಸ್ಥಾನಂ** ತನ್ನ ಸ್ತೋತ್ರವನ್ನು **ಆಕರ್ಣ್ಯ** ಕೇಳಿ **ಅಭಿನಂದಿತಃ ಸನ್** ಸಂತುಷ್ಟನಾಗಿ **ತಾನ್** ಆ ದೇವತೆಗಳನ್ನು ಕುರಿತು **ಪ್ರಾಹ** ಅವರ ಕಾರ್ಯಸಾಧಕ ಮಾತುಗಳನ್ನು ಹೇಳಿದನು. ।।೩೬।।

**ಶ್ರೀಭಗವಾನುವಾಚ -**

**ಪ್ರೀತೋಽಹಂ ವಃ ಸುರಶ್ರೇಷ್ಠಾ ಮದುಪಸ್ಥಾನವಿದ್ಯಯಾ ।**
**ಆತ್ಮೈಶ್ವರ್ಯಸ್ಮೃತಿಃ ಪುಂಸಾಂ ಭಕ್ತಿಶ್ಚೈವ ಯಯಾ ಮಯಿ ।।೩೭।।**

**ಹೇ ಸುರಶ್ರೇಷ್ಠಾಃ** ದೇವಶ್ರೇಷ್ಠರೇ **ಯಯಾ** ಯಾವ ಈ ಸ್ತೋತ್ರವೆಂಬ ವಿದ್ಯೆಯಿಂದ **ಪುಂಸಾಂ** ಅಧಿಕಾರಿಜೀವರಿಗೆ **ಆತ್ಮೈಶ್ವರ್ಯಸ್ಮೃತಿಃ** ಸ್ವಾಮಿಯಾದ ಶ್ರೀಹರಿಯು ಎಷ್ಟು ಮಹಿಮಾವಂತನೆಂಬ ಸ್ಮರಣೆಯು ಅಥವಾ **ಆತ್ಮನಃ** ತನಗೆ **ಐಶ್ವರ್ಯೇ** ಎಲ್ಲವನ್ನೂ ಮರೆಸುವ ಸಂಪತ್ತಿದ್ದರೂ **ಸ್ಮೃತಿಃ** ನನ್ನ ಸ್ಮರಣವು, ಅಥವಾ

**ಆತ್ಮನಃ** ಪರಮಾತ್ಮನಿಂದಲೇ ನಮಗೆ ಐಶ್ವರ್ಯವೆಂಬ ಸ್ಮರಣವು ಬರುವುದೋ **ಚ** ಮತ್ತು **ಮಯಿ ಏವ** ನನ್ನಲ್ಲಿ ಮಾತ್ರವೇ **ಭಕ್ತಿಃ** ಭಕ್ತಿಯೂ, (ಭವತಃ) ಉಂಟಾಗುವುದೋ **ತಯಾ** ಅಂತಹ **ವಃ** ನಿಮ್ಮಲ್ಲಿ, (ನೀವು ಮಾಡಿದ) **ಮದುಪಸ್ಥಾನವಿದ್ಯಯಾ** ನನ್ನ ಸ್ತೋತ್ರ ರೂಪವಾದ ಈ ವಿದ್ಯೆಯಿಂದ **ವಃ** ನಿಮ್ಮ ಮೇಲೆ **ಅಹಂ** ನಾನು **ಪ್ರೀತಃ** ಸುಪ್ರೀತನಾಗಿರುವೆನು. ।।೩೭।।

**ಕಿಂ ದುರಾಪಂ ಮಯಿ ಪ್ರಾಪ್ತೇ ತಥಾಪಿ ವಿಬುಧರ್ಷಭಾಃ ।**
**ಮಯ್ಯೇಕಾಂತಮತಿರ್ನಾನ್ಯತ್ ಮತ್ತೋ ವಾಂಛತಿ ತತ್ತ್ವವಿತ್ ।।೩೮।।**

**ಹೇ ವಿಬುಧರ್ಷಭಾಃ** ಸುರಶ್ರೇಷ್ಠರೇ **ಮಯಿ** ನಾನು **ಪ್ರಾಪ್ತೇ ಸತಿ** ಪ್ರತ್ಯಕ್ಷನಾದರೆ ಅಥವಾ ಭಕ್ತಿಯಿಂದ ವಶೀಕೃತನಾದರೆ ಅಥವಾ ಫಲೋನ್ಮುಖನಾದರೆ ಅಥವಾ ವಂಚಕನಲ್ಲದ ಭಯಪರಿಹಾರಕನಾದ್ದರಿಂದ ಪ್ರಕೃಷ್ಟನಾದ ಆಪ್ತನಿರುವಾಗ **ದುರಾಪಂ ಕಿಂ** ಹೊಂದಲಾಗದ ಫಲ ಯಾವುದು? ಎಲ್ಲವೂ ಸಾಧ್ಯವೇ. **ತಥಾಽಪಿ** ಆದರೂ **ತತ್ತ್ವವಿತ್** ಪರಮಾತ್ಮನಿಂದ ಪ್ರೇರಿತವಾದ ಮನಸ್ಸು ಮೊದಲಾದವುಗಳು ಎಲ್ಲ ಕಡೆ ಇರುವವು. ಬೇರೆಯವರು ಸ್ವತಂತ್ರರಲ್ಲ ಎಂಬ ತತ್ತ್ವಜ್ಞಾನಿಯು **ಮಯಿ ಏಕಾಂತಮತಿಃ** ನನ್ನಲ್ಲಿ ಭಗವದೇಕನಿಷ್ಠವಾದ ಉತ್ತಮಾಧಿಕಾರಿಯಾದ ಭಕ್ತನು **ಅನ್ಯತ್** ಜ್ಞಾನ-ಪ್ರಸಾದಗಳಿಂದ ಭಿನ್ನವಾದ ಫಲವನ್ನು **ಮತ್ತಃ** ನನ್ನಿಂದ **ನ ವಾಂಛತಿ** ಅಪೇಕ್ಷಿಸುವದಿಲ್ಲ. **ಅನ್ಯತ್** ನನ್ನ ಪ್ರೀತಿವಿಷಯವಾಗದ್ದನ್ನು ಅಪೇಕ್ಷಿಸುವದಿಲ್ಲ. **ಕಿಂತು** ನನಗೆ ಪ್ರಿಯವಾದುದನ್ನೇ ಅಪೇಕ್ಷಿಸುವರು. ಆದ್ದರಿಂದ ನಿಮ್ಮ ಅಪೇಕ್ಷೆಯು ನನಗೆ ಪ್ರಿಯವೇ ಇಲ್ಲವಾದರೆ ಅದನ್ನು ನಾನು ಕೊಡಲಾರೆ ಎಂದು ಭಾವ.

ಉತ್ತಮಾಧಿಕಾರಿಯು ಬೇರೆ ಏನನ್ನು ಕೇಳುವುದಿಲ್ಲ. ಏಕೆಂದರೆ **ತತ್ತ್ವವಿತ್** ಈಶ್ವರಾತಿರಿಕ್ತವಾದುದು ನಶ್ವರವೆಂದು ತಿಳಿದಿರುವವನು. ನಾನು ಪ್ರಸನ್ನನಾದರೆ ಬೇರೆ ಏನನ್ನೂ ಕೇಳುವುದಿಲ್ಲ ಎಂಬುದು ಎಲ್ಲರಿಗೂ ಸಂಬಂಧಿಸಿದ್ದೇ? ಎಂದರೆ, ಅಲ್ಲ ಎಂದೂ ಇಲ್ಲಿ ಹೇಳುವರು. **ಅವಿತ್** ಅಜ್ಞನಾದ ಮನುಷ್ಯನು **ತತ್** ಬೇರೆಯದನ್ನು **ತು** ವಿಶೇಷವಾಗಿ **ವಾಂಛತಿ** ಇಚ್ಛಿಸುವನು. ಅಥವಾ **ಯಃ** ಯಾವನು **ಅನ್ಯತ್ ವಾಂಛತಿ** ಬೇರೆಯದನ್ನು ಇಚ್ಛಿಸುವನೋ **ಸಃ** ಅವನು **ಅವಿತ್** ಅಜ್ಞಾನಿಯು, **ಮತ್ತಶ್ಚ** ಹುಚ್ಚನೂ ಆಗಿದ್ದಾನೆ. ಹೀಗೂ ಅರ್ಥ ಶ್ರೀಗಳು ಮಾಡಿರುವರು. ಈ ಶ್ಲೋಕದಲ್ಲಿ ಭಕ್ತಿಯನ್ನು ಅಭಿನಂದಿಸುತ್ತ ಏಕಾಂತಿಗಳಾದ ನಮಗೆ ಭಗವದ್ಭಕ್ತಿಯನ್ನು ಬಿಟ್ಟು ಸಂಹಾರ

ವರವನ್ನು ಕಾಮನೆ ಮಾಡಿದ್ದು ಯುಕ್ತ ಹೇಗಾದಿತು? ಎಂಬ ದೇವತೆಗಳ ಲಜ್ಜೆಯನ್ನು ಪರಿಹರಿಸಿರುವನು ಎನ್ನುತ್ತಾರೆ ಚೆಟ್ಟಿ ಆಚಾರ್ಯರು. ॥೩೮॥

**ನ ವೇದ ಕೃಪಣಃ ಶ್ರೇಯ ಆತ್ಮನೋ ಗುಣವಸ್ತುದೃಕ್ ।**
**ತಸ್ಯ ತಾನಿಚ್ಛತೋ ಯಚ್ಛೇ ಯದಿ ಸೋऽಪಿ ತಥಾವಿಧಃ ॥೩೯॥**

**ಸ್ವಯಂ ನಿಃಶ್ರೇಯಸಂ ವಿದ್ವಾನ್ನ ವಕ್ತ್ಯಜ್ಞಾಯ ಕರ್ಮಭಿಃ ।**
**ನ ರಾತಿ ರೋಗಿಣೋऽಪಥ್ಯಂ ವಾಂಛತೋऽಪಿ ಭಿಷಕ್ತಮಃ ॥೪೦॥**

**ಗುಣವಸ್ತುದೃಕ್** ಶೀಘ್ರಲಭ್ಯವಾದ ಅನಂತರ ದುರ್ಲಭವಾದ ಸ್ವರ್ಗಾದಿ ವಿಷಯಗಳು ಶಬ್ದಾದಿ ಪ್ರಾಕೃತ ವಿಷಯಗಳು ನಿತ್ಯಗಳೆಂದು ತಿಳಿದ ಆದ್ದರಿಂದಲೇ **ಕೃಪಣಃ** ಶ್ರೀಹರಿಯ ಪ್ರೀತಿಗಿಂತ ಬೇರೆ ಫಲಗಳನ್ನು ಅಪೇಕ್ಷಿಸುವ ನಶ್ವರ ಕಾಮ್ಯಗಳನ್ನು ಕಾಮಿಸುವವನು 'ವಿಷಯೇಷ್ವದೋಷಬುದ್ಧಿಃ ಸನ್ನಿಂದ್ರಿಯಾಣಾಂ ವಶೇ ಸ್ಥಿತಃ । ಕೃಪಣಃ ಸಃ ತು ಸಂಪ್ರೋಕ್ತಃ' ಎಂದು ವಚನವಿದೆ.

ಇಂದ್ರಿಯಜಯವಿಲ್ಲದ ಮಧ್ಯಮಾಧಮ ಅಧಿಕಾರಿಗಳ ಗುಂಪಿಗೆ ಸೇರಿದ ಸಾಮಾನ್ಯ ಭಕ್ತನು **ಆತ್ಮನಃ** ತನ್ನ **ಶ್ರೇಯಃ** ಮೋಕ್ಷವನ್ನು **ನ ವೇದ** ತಿಳಿದಿಲ್ಲ. **ಸಃ ಅಪಿ** ಹೀಗೆ ಬೇರೆ ಫಲವನ್ನು ಅಪೇಕ್ಷಿಸುವವನೂ **ತಥಾವಿಧಃ** ನಶ್ವರ ಫಲವನ್ನು ಹೊಂದಲೂ ಯೋಗ್ಯನಾಗಿ ಉತ್ತಮಾಧಿಕಾರಿಯಾಗದಿದ್ದಲ್ಲಿ **ತಾನ್** ಐಹಿಕಫಲಗಳನ್ನು **ಇಚ್ಛತಃ** ಅಪೇಕ್ಷಿಸುವ **ತಸ್ಯ** ಅನುತ್ತಮಾಧಿಕಾರಿಗೆ **ಅಹಂ** ಅವನಿಂದ ಅದಕ್ಕಾಗಿ ಸೇವೆ ಮಾಡಿಸಿಕೊಂಡ ನಾನು **ತಾನ್** ಆ ಐಹಿಕ ಫಲಗಳನ್ನೇ **ಯಚ್ಛೇ** ಕೊಡುವೆನು. ॥೩೯॥

ಹಾಗೆ ಐಹಿಕಫಲವನ್ನು ಅಪೇಕ್ಷಿಸುವವನು ಅತ್ಯುತ್ತಮನೇಕಲ್ಲವೆಂದರೆ ಅತ್ಯುತ್ತಮನು ಹೇಗಿರುವನು ಎಂಬುದನ್ನು ಉದಾಹರಣೆಯಿಂದ ತಿಳಿಸುತ್ತಾರೆ.

**ವಿದ್ವಾನ್** ಅವರವರಿಗೆ ಯೋಗ್ಯವಾದ ಮುಕ್ತಿವಿಶೇಷವನ್ನು ತಿಳಿದಿರುವ ಅತ್ಯುತ್ತಮನು **ಸ್ವಯಂ** ತಾನು **ಅಜ್ಞಾಯ** ಅಜ್ಞಾನಿಯಾದ ಮುಕ್ತಿಯೋಗ್ಯನಿಗೆ **ಕರ್ಮಭಿಃ** ಕರ್ಮದಿಂದ **ನಿಃಶ್ರೇಯಸಂ** ಮೋಕ್ಷವಾಗುವದೆಂದು **ನ ವಕ್ತಿ** ಉಪದೇಶಿಸುವುದಿಲ್ಲ. 'ತಮೇವಂ ವಿದ್ವಾನಮೃತ ಇಹ ಭವತಿ' ಎಂಬ ಶ್ರುತಿಗೆ ಅನುಸಾರ ಜ್ಞಾನದಿಂದಲೇ ಮೋಕ್ಷವೆಂದೇ ಉಪದೇಶಿಸುವನು. ಇದಕ್ಕೆ ಉದಾಹರಣೆ **ಭಿಷಕ್ತಮಃ** ಉತ್ತಮನಾದ ವೈದ್ಯನು **ವಾಂಛತಃ ಅಪಿ** ಆರೋಗ್ಯಕರವಲ್ಲದ ಗಿಣ್ಣ

ಮೊದಲಾದವನ್ನು ಅಪೇಕ್ಷಿಸುತ್ತಿದ್ದರೂ **ರೋಗಿಣಃ** ಜ್ವರಾದಿಗಳುಳ್ಳ ರೋಗಿಗೆ **ಅಪಥ್ಯಂ** ಹಿತಕರವಲ್ಲದ ಆ ಪದಾರ್ಥಗಳನ್ನು **ನ ರಾತಿ** ಕೊಡುವುದಿಲ್ಲ.॥೫೦॥

ಕೃಪಣನು ಕರ್ಮದಿಂದ ಮೋಕ್ಷಸಿದ್ಧಿಯನ್ನು ಅಪೇಕ್ಷಿಸುವುದರಿಂದ ಉತ್ತಮಾಧಿಕಾರಿ ಅಲ್ಲ ಎಂದು ಅಭಿಪ್ರಾಯ ಪಟ್ಟಿರಲ್ಲವೆ. ಇದನ್ನು ಹೇಗೆ ತಿಳಿಯುತ್ತೀರಿ? 'ಲೋಕ ಸಂಗ್ರಹಮೇವಾಽಪಿ ಸಂಪಶ್ಯನ್ ಕರ್ತುಮರ್ಹಸಿ' ಇತರರು ಮಾಡಲೆಂದಾದರೂ ಕರ್ಮವನ್ನು ನೀನು ಮಾಡಬೇಕು. 'ಯದಿ ಹ್ಯಯಂ ನ ವರ್ತೇಯಂ ಜಾತು ಕರ್ಮಣ್ಯತಂದ್ರಿತಃ' 'ಆಲಸ್ಯರಹಿತನಾಗಿ ನಾನು ಕರ್ಮ ಮಾಡದೇ ಹೋದಲ್ಲಿ ಜನರು ನನ್ನ ಹಾದಿಯನ್ನೇ ಹಿಡಿಯುವರು' ಇತ್ಯಾದಿ ವಾಕ್ಯಗಳಲ್ಲಿ ಕರ್ಮವನ್ನು ಭಗವಂತನೇ ವಿಧಿಸಿರುವನಲ್ಲ ಎಂದು ಶಂಕಿಸಿದರೆ ಉತ್ತರ ಕೊಡುತ್ತಾರೆ.

**ವಿದ್ವಾನ್** ನನ್ನಂತಹ ಜ್ಞಾನಿಯು **ಸ್ವಯಂ ಕರ್ಮಭಿಃ** ಕೇವಲ ಕರ್ಮಗಳಿಂದಲೇ **ಅಜ್ಞಾಯ** ಅಜ್ಞಾನಿಗೆ **ನಿಃಶ್ರೇಯಸಂ** ಮೋಕ್ಷವನ್ನು **ನ ವಕ್ತಿ** ಹೇಳುವುದಿಲ್ಲ. ಮತ್ತೇನೆಂದರೆ ಕರ್ಮಾಚರಣೆಯಿಂದ ಶುದ್ಧಾಂತಃಕರಣನಾದವನಿಗೆ ಜ್ಞಾನದ ಮೂಲಕ ಮೋಕ್ಷವನ್ನು ಉಪದೇಶಿಸುವನು. ಹೇಗೆಂದರೆ ವೈದ್ಯರಲ್ಲಿ ಉತ್ತಮನಾದವನು ಕೇವಲ ಔಷಧವನ್ನೇ ಅಲ್ಲ ರೋಗಿಯು ಅಪೇಕ್ಷಿಸಿದರೂ ಅಪಥ್ಯವನ್ನು ಮಾಡೆಂದು ಹೇಳುವುದಿಲ್ಲ. ಪಥ್ಯದ ಪ್ರಭಾವದಿಂದ ರೋಗವನ್ನು ತಡೆದವನಿಗೆ ಔಷಧದ ಮೂಲಕ ಆರೋಗ್ಯವನ್ನು ತಂದು ಕೊಡುವಂತೆ ಎಂದರ್ಥ.

**ವಿದ್ವಾನ್** ಎಂಬುದನ್ನು ಆವೃತ್ತಿ ಮಾಡಿಕೊಳ್ಳಬೇಕು. **ವಿದ್ವಾನ್** ಜ್ಞಾನಿಯು **ಸ್ವಯಂ ನಿಃಶ್ರೇಯಸಂ ವಿದ್ವಾನ್ ಅಪಿ** ತಾನು ಮೋಕ್ಷ ಸಾಧನವೇನೆಂದು ತಿಳಿದಿದ್ದರೂ **ಕರ್ಮಭಿಃ** ಕರ್ಮದಿಂದ ಮೋಕ್ಷವಾಗುತ್ತದೆ ಎಂದು ಅಪೇಕ್ಷಿಸುವ **ಅಜ್ಞಾಯ** ಅಜ್ಞಾನಿಗೆ **ನ ವಕ್ತಿ** ಬುದ್ಧಿಭೇದವನ್ನುಂಟು ಮಾಡಿ ಜ್ಞಾನವೇ ಸಾಧನವೆಂದು, ಉಪದೇಶಿಸುವದಿಲ್ಲ. ತಾನು ಕರ್ಮ ಮಾಡಿ ಅವನಂತೆಯೇ ತೋರಿಸುವನು.

ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಂಗಿನಾಮ್ ।
ಜೋಷಯೇತ್ ಸರ್ವಕರ್ಮಾಣಿ ವಿದ್ವಾನ್ ಯುಕ್ತಃ ಸಮಾಚರನ್ ॥

ಎಂಬ ವಚನದಂತೆ ಈ ಅರ್ಥ. 'ಯದಿ ಸೋಽಪಿ ತಥಾವಿಧಃ' ಎಂದು ೩೯ ನೇ ಶ್ಲೋಕದಲ್ಲಿ ಹೇಳಿದ್ದರಿಂದ ಉತ್ತಮಾನುತ್ತಮಾಧಿಕಾರಿಗಳಲ್ಲಿ ಅನುತ್ತಮಾಧಿಕಾರಿಗೆ ಮಾತ್ರ ಎಂದರೆ ಕೇವಲ ಫಲಾಪೇಕ್ಷಿಯಾದವನಿಗೆ, ನನಗೆ ಅಪ್ರಿಯವಾದ ಫಲ

ಕೊಡುತ್ತೇನೆ. ಸಮಗ್ರ ಫಲ ಸ್ವೀಕಾರ ಯೋಗ್ಯನಾದ ಉತ್ತಮಾಧಿಕಾರಿಗೆ, ಅವನು ಅಪೇಕ್ಷಿಸಿದರೂ, ನನಗೆ ಅಪ್ರಿಯವಾದುದನ್ನು ಕೊಡುವದಿಲ್ಲವೆಂದು ನಿಯಮ ಮಾಡಿದಂತಾಯಿತು. ಹಾಗಾದರೆ ಕೆಲವು ವೇಳೆ ಉತ್ತಮಾಧಿಕಾರಿಗಳಿಗೂ ನಿನಗೆ ಅಪ್ರಿಯವಾದುದನ್ನು ಕೊಟ್ಟಿರುವೆಯಲ್ಲ ಎಂದರೆ ಅವನು ನಿಮ್ಮ ಭಕ್ತ ಅವನಿಗೆ ಫಲಕೊಡುವರು. ನಿಮಗೆ ಇಷ್ಟವಾದ್ದರಿಂದ ನಿಮ್ಮ ಇಷ್ಟವೇ ನನಗೆ ಪ್ರಿಯವಾದ್ದರಿಂದ ಕೊಟ್ಟಿರುವನೆ ಹೊರತು ನೀವು ಇಷ್ಟ ಪಡದಿದ್ದಲ್ಲಿ ಆ ಫಲವನ್ನು ನಾನು ಸರ್ವಥಾ ಕೊಡುವದಿಲ್ಲ. ನೀವಾದರೋ ಯಾವಾಗಲೂ ನನ್ನ ಪ್ರಿಯವನ್ನೇ ಬಯಸುವವರು. ಈ ಅಭಿಪ್ರಾಯವನ್ನೇ ಶ್ರೀಮದಾಚಾರ್ಯರು ತಿಳಿಸುವರು.

'ನ ವೇದ ಕೃಪಣಃ...' ಎಂಬ ಶ್ಲೋಕದಲ್ಲಿ ಹಿಂದೆ ಸ್ಪಷ್ಟವಾಗಿ ಭಕ್ತನನ್ನೇ ಹೇಳಿರುವುದರಿಂದ ಅವನೇ **ತಥಾವಿಧಃ** ಎಂದು ಪರಾಮರ್ಶಿಸಲ್ಪಡುವನು ಎಂದು ತೋರುವುದು. ಹಾಗೆ ತೋರದಿರಲಿ ಎಂದು ತಾವು ಅನುವಾದ ಮಾಡಿ ವಿವಕ್ಷಿತ ಅರ್ಥ ಹೇಳುವರು-

ತಾತ್ಪರ್ಯ

**ಯದಿ ಸೋಽಪಿ ತಥಾವಿಧಃ ಅತ್ಯುತ್ತಮೋ ನ ಭವತಿ ಚೇತ್ ॥**

ಅತ್ಯುತ್ತಮನಾಗದಿದ್ದರೆ ನನ್ನನ್ನು ಬಿಟ್ಟು ಬೇರೆಯದನ್ನು ಕೇಳುವನೆಂದರ್ಥ. ಹಾಗಾದರೆ ಕಿವುಡನ ಮುಂದೆ ಕಿನ್ನರಿ ಬಾರಿಸಿದಂತೆ ನಾವು ಮಾಡಿದ ಪ್ರಾರ್ಥನೆ ವ್ಯರ್ಥವಾಯಿತೇ ಎಂದರೆ, ಇದು ನನಗೂ ಅಪೇಕ್ಷಿತ ಎಂದು ಸಾಂತ್ವನಗೊಳಿಸುವನು.

**ಯುಷ್ಮತ್ಕಾಮೋ ಮತ್ಪ್ರಿಯ ಏವ । ಅನ್ಯಥಾ ದದ್ಯಾಮಿತಿ ಭಾವಃ ॥**

ನಿಮ್ಮ ಇಷ್ಟ ನನಗೂ ಇಷ್ಟವೇ ಪ್ರಿಯವಾಗದಿದ್ದರೆ ಅಭಯ ಕೊಡುತ್ತಿರಲಿಲ್ಲ.

ಈ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ-

**ವಿಷ್ಣೋಃ ಪ್ರಿಯಂ ಕಾಮಯಂತಿ ದೇವಾ ನೈವಾಽಪ್ರಿಯಂ ಕ್ವಚಿತ್ ।**
**ಯದ್ಯಪ್ರಿಯಂ ಕಾಮಯಂತಿ ನ ರಾತೀಶೋ ಹಿತೋ ಹಿ ಸಃ ॥**

**ಇತಿ ತಂತ್ರಭಾಗವತೇ ॥೩೯-೪೦॥**

ದೇವತೆಗಳು ವಿಷ್ಣುವಿಗೆ ಪ್ರಿಯವಾದುದನ್ನೇ ಇಚ್ಛಿಸುವರು. ಅಪ್ರಿಯವನ್ನು ಇಚ್ಛಿಸುವದೇ ಇಲ್ಲ. ಏನೋ ಒಂದು ಸಲ ಒಂದು ಅಪ್ರಿಯವನ್ನು ಇಚ್ಛಿಸಿದರೂ

ಅವರಿಗೆ ಹಿತ ಮಾಡುವವನಾದ್ದರಿಂದ ಅದನ್ನು ಕೊಡಲಾರನು. ಎಂದು ತಂತ್ರ ಭಾಗವತದಲ್ಲಿದೆ. ಇದಕ್ಕೆ ಉದಾಹರಣ, ಉತ್ತಮಾಧಿಕಾರಿಯಾದ ಅಶ್ವತ್ಥಾಮಾಚಾರ್ಯರು ಪ್ರಾರಬ್ಧವಶಾತ್ ದುರ್ಯೋಧನನ ಕ್ಷೇತ್ರದಲ್ಲಿ ಮಕ್ಕಳನ್ನು ಪಡೆಯಲಿಚ್ಛಿಸಿದರು. ಆದರೆ ಶ್ರೀಹರಿ ಅದನ್ನು ನೆರವೇರಿಸಲಿಲ್ಲ. ।।೩೯-೪೦।।

**ಗುಣವಸ್ತುದೃಕ್** ಎಂಬುದಕ್ಕೆ **ಗುಣೇಷು** ಅಪ್ರಧಾನರಾದ ನಿಮ್ಮಲ್ಲಿ **ವಸ್ತುದೃಕ್** ಶಕ್ತರೆಂದು ತಿಳಿದು ನಶ್ವರ ಫಲ ಅಪೇಕ್ಷಿಸಿದಾಗಲು ಅವುಗಳನ್ನು **ಯಚ್ಛೇ** ನಾನೇ ಕೊಡುವೆ. ಆದರಲ್ಲಿಯೂ ನೀವು ಸ್ವತಂತ್ರರಲ್ಲ ಎಂದು ಭಾವ. ಅವರು ಹಾಗಿರಲಿ. ಹೀಗೆ ಫಲ ಕೊಟ್ಟರೆ ನಿರಪೇಕ್ಷನಾದ, ದಕ್ಷನಾದ ನಿನಗೆ ಅಪಕೀರ್ತಿ ಬರುವುದು ಎಂದರೆ ಯದಿ ಸೋಽಪಿ ತಥಾವಿಧಃ' ಎಂದು ಹೇಳಿರುವರು.

ನಿಮ್ಮ ದ್ವಾರಾ ಆಗಲಿ ಅದ್ವಾರಾ ಆಗಲಿ ನನ್ನನ್ನು ಸೇವಿಸುವವನು ಅತ್ಯುತ್ತಮ ಮೋಕ್ಷಯೋಗ್ಯನಾಗದಿದ್ದಾಗ ಅಲ್ಪಫಲಕ್ಕೆ ಯೋಗ್ಯನಾದಾಗ ಅವನ ಕರ್ಮಾನುಸಾರ ಫಲ ಕೊಡುವ ನನಗೆ ಮಮತೆಯಿಲ್ಲದವನಿಗೆ ಅಪಕೀರ್ತಿ ಏಕೆ? ಅಪಕೀರ್ತಿಯು ಸರ್ವಥಾ ಬರಲಾರದೆಂದು ಭಾವ.

ನಿಮ್ಮ ಇಷ್ಟವು ನನಗೂ ಇಷ್ಟ ಎಂಬುದನ್ನು ತಿಳಿಸಲು ತ್ವಾಷ್ಟ್ರವಧೆಗೆ ಉಪಾಯ ಹೇಳುವನು-

**ಮಘವನ್ ಯಾತ ಭದ್ರಂ ವೋ ದಧ್ಯಂಚಮೃಷಿಸತ್ತಮಮ್ ।**
**ವಿದ್ಯಾವ್ರತತಪಃಸಾರಂ ಗಾತ್ರಂ ಯಾಚತ ಮಾ ಚಿರಮ್ ।।೪೧।।**

**ಮಘವನ್** ಇಂದ್ರನೇ **ವಃ** ನಿಮಗೆ **ಭದ್ರಂ** ಕಲ್ಯಾಣವಾಗಲಿ **ಮಾ ಚಿರಂ** ತಡಮಾಡದೇ, (ಬೇಗನೇ) **ಋಷಿಸತ್ತಮಂ** ಋಷಿಶ್ರೇಷ್ಠನಾದ **ದಧ್ಯಂಚಂ** ದಧಿಽಚಿಯನ್ನು ಕುರಿತು **ಯಾತ ಚ** ಹೊರಡಿರಿ. **ವಿದ್ಯಾವ್ರತತಪಸ್ಸಾರಂ** ವಿದ್ಯಾ ಜ್ಞಾನ **ವ್ರತ** ಚಾಂದ್ರಾಯಣಾದಿಗಳು **ತಪ** ಆಲೋಚನೆಗಳ **ಸಾರ** ಬಲವುಳ್ಳ **ಗಾತ್ರಂ** ಅವನ ದೇಹವನ್ನು **ಯಾಚತ** ಬೇಡಿರಿ. ಜ್ಞಾನವನ್ನು ರಕ್ಷಿಸುವ, ಗತಿಸಾಧನವಾದ್ದರಿಂದ ಗಾತ್ರ ಎಂದರೆ ದೇಹ. ಇಂದ್ರನು ಪ್ರಧಾನ. ಇತರರು ಅಪ್ರಧಾನರೆಂದು ತಿಳಿಸಲು ಏಕವಚನದಿಂದ ಒಬ್ಬನನ್ನು ಸಂಬೋಧಿಸಿ **ವೋ ಯಾತ** ಎಂದಿರುವನು ಎಂದು ತಿಳಿಯಬೇಕು. ।।೪೧।।

ಇಲ್ಲಿ ಜಗದೊಡೆಯನಾದ ಶ್ರೀಹರಿಯು ಮತ್ತೊಬ್ಬರ ಹತ್ತಿರ ಅವರನ್ನು ಕಳಿಸುವುದು ನ್ಯಾಯವಲ್ಲ. ಅದರಲ್ಲೂ ದೇವತೆಗಳ ಅಧೀನನಾದ ಒಬ್ಬ ಋಷಿಯ ಹತ್ತಿರ ಕಳಿಸುವುದು ಇದು ಹೇಗೆ ಎಂಬ ಶಂಕೆಯನ್ನು ಪ್ರಮಾಣದಿಂದ ಪರಿಹರಿಸುತ್ತಾರೆ.

ತಾತ್ಪರ್ಯ

**ಸಮರ್ಥಾ ಅಪಿ ಯಾಚಂತೇ ದೇವಾ ಮುನ್ಯಾದಿಕಾನ್ ಕ್ವಚಿತ್ ।**
**ಆಜ್ಞಯೈವ ಹರೇಸ್ತೇಷಾಂ ಯಶೋಽರ್ಥಮಪಿ ನಾನ್ಯಥಾ ॥ ಇತಿ ಚ**

ದೇವತೆಗಳು ಮುನಿಗಳಿಗಿಂತ ಸಮರ್ಥರಾಗಿದ್ದಾರೆ. ಆದರೂ ತಮಗಿಂತ ಅಶಕ್ತರಾದ ಮುನಿಗಳನ್ನು ಶ್ರೀಹರಿಯ ಆಜ್ಞೆಯಿಂದ ಯಾಚಿಸುತ್ತಾರೆ. ಇವರು ದೇವತೆಗಳಿಗಾಗಿ ತಮ್ಮ ದೇಹವನ್ನೇ ಸಮರ್ಪಿಸಿದರು ಎಂಬ ಕೀರ್ತಿಯನ್ನು ನೀಡಲು ಈ ರೀತಿಯಾಗಿ ಯಾಚಿಸುತ್ತಾರೆ. ಹೊರತು ಬೇರೇ ಉಪಾಯವನ್ನು ಮಾಡಿ ಅಪಾಯವನ್ನು ಪರಿಹರಿಸಿಕೊಳ್ಳಲು ಅಸಮರ್ಥರೆಂದು ದೇವತೆಗಳನ್ನು ಸರ್ವಥಾ ತಿಳಿಯಬಾರದು. ಯಾಕೆಂದರೇ **ತೇಷಾಂ** ಆ ಮುನಿಗಳಿಗೆ **ಚಿತ್** ತ್ರಿದಶಸದೃಶದೃಕ್ ದೇವತೆಗಳಿಗಿರುವಂತಹ ಜ್ಞಾನ **ಕ್ವ** ಇರಲು ಎಲ್ಲಿ ಸಾಧ್ಯ. ಸಾಧ್ಯವಿಲ್ಲವೆಂದು ಭಾವ. ॥೪೦॥

ಎರಡು ಶ್ಲೋಕಗಳಿಂದ ದಧೀಚಿಯ ಹಿರಿಮೆಯನ್ನು ತಿಳಿಸುತ್ತಾರೆ-

**ಸ ವೈ ಹ್ಯಧಿಗತೋ ದಧ್ಯಙ್ ಅಶ್ವಿಭ್ಯಾಂ ಬ್ರಹ್ಮ ನಿಷ್ಕೃತಮ್ ।**
**ತದ್ವಾ ಅಶ್ವಶಿರಂ ನಾಮ ತಯೋರಮರತಾಂ ವ್ಯಧಾತ್ ॥೪೨॥**

**ದಧ್ಯಙ್** ಜಗತ್ತನ್ನು ಧರಿಸುವ ಶ್ರೀಹರಿಯನ್ನು ಹೊಂದಿರುವನಾದ್ದರಿಂದ ದಧ್ಯಙ್ ಎಂದು ಹೆಸರುಳ್ಳ **ಸಃ** ಆ ಋಷಿಯು **ಅಧಿಗತಃ ವೈ** ಅಧಿಕಜ್ಞಾನಿ ಎಂದು ಶ್ರುತಿಪ್ರಸಿದ್ಧನು **ಹಿ** ಏಕೆಂದರೆ **ಅಶ್ವಿಭ್ಯಾಂ** ಅಶ್ವಿನೀದೇವತೆಗಳಿಗೆ **ಬ್ರಹ್ಮ** ಬ್ರಹ್ಮವಿದ್ಯಾರೂಪವಾದ, ಪರಬ್ರಹ್ಮ ವಸ್ತುವನ್ನು **ನಿಷ್ಕೃತಂ** ೧. ಸ್ವೀಕರಿಸಿದನು, ಹೇಳುತ್ತೇನೆ ಎಂದು ಒಪ್ಪಿದನು. ೨. ಅಶ್ವಿನಿದೇವತೆಗಳಿಗೆ, **ಬ್ರಹ್ಮ ನಿಷ್ಕೃತಂ** ಪ್ರವರ್ಗ್ಯವೆಂಬ ಕರ್ಮವನ್ನು **ಉಕ್ತವಾನ್** ಹೇಳಿದನು.

೩. **ನಿಷ್ಕೃತಂ** ತಾನು ಬ್ರಹ್ಮವಿದ್ಯೆಯನ್ನು ಹೇಳಿಕೊಡುತ್ತೇನೆಂದು ಮಾತು ಕೊಟ್ಟಿದ್ದರಿಂದ ಆ ಪ್ರತಿಜ್ಞೆಯನ್ನು ಸತ್ಯ ಮಾಡುವದಕ್ಕಾಗಿ ಬ್ರಹ್ಮವಿದ್ಯಾವನ್ನು




ಅಶ್ವಿನೀದೇವತೆಗಳಿಗೆ ಉಪದೇಶಿಸಿದನು. ಉಪದೇಶಿಸದಿದ್ದರೆ ಸುಳ್ಳು ಹೇಳುವವನೆಂದಾಗುತ್ತಿತ್ತು. ೪. ಆ ದಧೀಚಿಋಷಿಯು ನಾರಾಯಣಕವಚವೆಂಬ ಬ್ರಹ್ಮವಿದ್ಯೆಯನ್ನು ವೀರ್ಯವತ್ತರವಾಗಿ ಮಾಡುವ ಪ್ರವರ್ಗ್ಯಕರ್ಮ ತಿಳಿದವನಲ್ಲವೆ? ಅಶ್ವಿನೀ ದೇವತೆಗಳಿಗೆ ಅವೆರಡನ್ನೂ ಉಪದೇಶಿಸಿದನು. **ತತ್** ಆತನು ಉಪದೇಶಿಸಿಸಿದ ಆ ಬ್ರಹ್ಮವಿದ್ಯೆಯು **ತಯೋಃ** ವೈದ್ಯರೆಂದು ದೇವತೆಗಳಿಂದ ಅಮೃತ ಸಿಗದಂತೆ ಮಾಡಲಾಗಿದ್ದ ಅಶ್ವಿನಿದೇವತೆಗಳಿಗೆ **ಅಮರತಾಂ** ಮರಣರಾಹಿತ್ಯವನ್ನು **ಯತ್ ಚ** ಯಾವುದು **ವ್ಯಧಾತ್** ತಂದುಕೊಟ್ಟಿತ್ತೋ ಅದು **ಅಶ್ವಶಿರಂ ನಾಮ** ಅಶ್ವಶಿರವೆಂದು ಪ್ರಸಿದ್ಧವಾದುದು. **ವೈ** ಶ್ರುತಿಪ್ರಸಿದ್ಧವು.

**ಆಥರ್ವಣಾಯಾಶ್ವಿನೌ ದಧೀಚೇಽಶ್ವ್ಯಂ ಶಿರಃ ಪ್ರೇರಯತಂ ।**
**ಸ ವಾಂ ಮಧು ಪ್ರವೋಚದೃತಾಯನ್ ತ್ವಾಷ್ಟ್ರಂ ಯದ್ದಸ್ರಾವಪಿ ಕಕ್ಷ್ಯಂ ವಾಮ್ ।**

ಎಂಬುದೇ ಶ್ರುತಿ. ಅಶ್ವಿನಿದೇವತೆಗಳೇ ಅಥರ್ವಣನಾದ ದಧೀಚಿಗೆ ಅಶ್ವದ ತಲೆಯನ್ನು ನೀವು ಪ್ರತಿಸಂಧಾನ ಮಾಡಿದಿರಿ. ಆ ದಧೀಚಿಯು **ಋತಾಯನ್** ತನ್ನ ಮಾತನ್ನು ಸತ್ಯ ಮಾಡುವವನಾಗಿ ಸರಿಯಾಗಿ ವಿದ್ಯೆಯನ್ನು ತಿಳಿದವನಾಗಿ ತ್ವಷ್ಟ್ರುವು ವಿಶ್ವರೂಪಾಚಾರ್ಯರಿಗೆ ಉಪದೇಶಿಸಿದ **ಕಕ್ಷ್ಯಂ** ನಾರಾಯಣಕವಚ ಬ್ರಹ್ಮ ವಿದ್ಯೆಯನ್ನು ನಿಮಗೆ ಉಪದೇಶಿಸಿದನು ಎಂದು ಶ್ರುತಿಗೆ ಅರ್ಥ.

ಇಲ್ಲಿ ಹೀಗೆ ಇತಿಹಾಸವನ್ನು ಹೇಳುತ್ತಾರೆ. ಆಥರ್ವಣರಾದ ದಧೀಚಿ ಋಷಿಗಳು ಪ್ರವರ್ಗ್ಯ ಬ್ರಹ್ಮವಿದ್ಯೆಯಲ್ಲಿ ನಿಷ್ಣಾತರಾಗಿದ್ದಾರೆ. ಅದನ್ನು ಅಶ್ವಿನೀದೇವತೆಗಳು ತಿಳಿದರು. ತಾವು ಅಮರತ್ವವನ್ನು ಪಡೆಯಬೇಕೆಂದು ಯೋಚಿಸಿದರು. ದಧೀಚಿ ಋಷಿಗಳ ಬಳಿಗೆ ಬಂದರು. 'ನೀವು ಪ್ರವರ್ಗ್ಯ ಮತ್ತು ಬ್ರಹ್ಮ ವಿದ್ಯೆಗಳಲ್ಲಿ ವಿಶಾರದರೆಂದು ಕೇಳಿದ್ದೇವೆ. ಅವುಗಳನ್ನು ನಾವು ಕಲಿಯಬೇಕೆಂದಿದ್ದೇವೆ. ಹೇಳಿ ಕೊಡಿರಿ ಎಂದು ವಿಜ್ಞಾಪಿಸಿದರು. ಆಗ ದಧೀಚಿ ಋಷಿಗಳು, ನಾನು ಕರ್ಮಕಾಂಡದಲ್ಲಿ ಹೇಳಿರುವ ಕರ್ಮದಲ್ಲಿ ತೊಡಗಿರುವೆನು. ಅದನ್ನು ಮುಗಿಸಿದ ನಂತರ ಹೇಳಿ ಕೊಡುತ್ತೇನೆ ಎಂದು ಮಾತು ಕೊಟ್ಟರು. ಇದನ್ನು ಕೇಳಿದ ಅಶ್ವಿನೀದೇವತೆಗಳು ತಮ್ಮ ಮನೆಗೆ ಹಿಂದಿರುಗಿದರು.

ಈ ಮಧ್ಯದಲ್ಲಿ ತಮ್ಮ ಕೆಳಗಿನ ಮತ್ತೊಬ್ಬರು ತಮಗಿಂತ ಹೆಚ್ಚು ವಿದ್ಯಾ ಪಾರಂಗತರಾಗಬಾರದೆಂದು ಬಗೆದರು ಇಂದ್ರದೇವರು. ದಧೀಚಿಗಳ ಬಳಿಗೆ ಬಂದರು. ನೀವು ಪ್ರವರ್ಗ್ಯ ಮತ್ತು ಬ್ರಹ್ಮವಿದ್ಯೆಗಳನ್ನು ಯಾರಿಗೂ ಉಪದೇಶ

ಮಾಡಬಾರದು. ಅಭಿಮಾನದಿಂದಲೋ, ಲೋಭದಿಂದಲೋ ಉಪದೇಶ ಮಾಡಿದ್ದಾದರೆ, ನಿಮ್ಮ ತಲೆಯನ್ನು ತೆಗೆಯುವೆನು ಎಂದು ಶಾಸನ ಮಾಡಿದರು.

ಅನೇಕ ದಿನಗಳ ನಂತರ ಅಶ್ವಿನೀದೇವತೆಗಳು ಮತ್ತೆ ದಧೀಚಿ ಋಷಿಗಳ ಬಳಿಗೆ ಬಂದರು. ಹಿಂದೆ ನಾವು ಕೇಳಿದ ವಿದ್ಯೆಗಳನ್ನು ಹೇಳಿರಿ ಎಂದರು. ಅದಕ್ಕೆ ಋಷಿಗಳು, ಇಂದ್ರದೇವರು ನಿಷೇಧಿಸಿದ್ದಾರೆ ಎಂದು ನಡೆದ ವೃತ್ತಾಂತವನ್ನು ಹೇಳಿದರು. ಅಶ್ವಿನಿದೇವತೆಗಳು ಉಪಾಯವನ್ನು ಆಲೋಚಿಸಿದರು. ಇಂದ್ರದೇವರು ನಿಮ್ಮ ತಲೆ ಕಡಿಯುವುದಕ್ಕೆ ಮೊದಲೇ ನಾವೇ ಕಡಿದು ಬೇರೊಂದೆಡೆ ಇಟ್ಟು ಯಾವುದೋ ಒಂದು ಅಶ್ವದ ತಲೆಯನ್ನು ಕುತ್ತಿಗೆಗೆ ಸೇರಿಸುತ್ತೇವೆ. ಆದರಿಂದ ನಮಗೆ ಆ ವಿದ್ಯೆ ಹೇಳಿ ಕೊಡಿರಿ. ಇಂದ್ರ ಆ ತಲೆಯನ್ನು ಕತ್ತರಿಸಿದರೆ ನಿಮ್ಮ ಹಿಂದಿನ ತಲೆಯನ್ನು ಮತ್ತೆ ನಾವು ಸೇರಿಸಿ ನಿಮಗೆ ಗುರುದಕ್ಷಿಣೆ ಕೊಡುತ್ತೇವೆ ಎಂದರು. ಆ ದೇವಚಿಕಿತ್ಸಕರ ಮಾತಿನಂತೆ ದಧೀಚಿಗಳು ಅಶ್ವಶಿರವನ್ನು ಧರಿಸಿ ಆ ವಿದ್ಯೆಯನ್ನು ಹೇಳಿಕೊಟ್ಟದ್ದರಿಂದ ಆ ವಿದ್ಯೆ ಅಶ್ವಶಿರವೆಂದು ಪ್ರಸಿದ್ಧವಾಯಿತು.

ನಿಶಮ್ಯಾಥರ್ವಣಂ ದಕ್ಷಂ ಪ್ರವರ್ಗ್ಯಬ್ರಹ್ಮವಿದ್ಯಯೋಃ ।
ದಧ್ಯಂಚಂ ಸಮುಪಾಗಮ್ಯ ತಮೂಚತುರಥಾಶ್ವಿನೌ ॥

ಭಗವನ್ ದೇಹಿ ನೌ ವಿದ್ಯಾಂ ಇತಿ ಶ್ರುತ್ವಾ ಸ ಚಾಽಬ್ರವೀತ್ ।
ಕರ್ಮಣ್ಯವಸ್ಥಿತೋಽದ್ಯಾಹಂ ಪಶ್ಚಾದ್ವಕ್ಷ್ಯಾಮಿ ಗಚ್ಛತಮ್ ॥

ತಯೋರ್ನಿಗದತೋರೇವಂ ಶಕ್ರ ಆಗತ್ಯ ತಂ ಮುನಿಮ್ ।
ಉವಾಚ ಭಿಷಜೋರ್ವಿದ್ಯಾಂ ಮಾ ವಾದೀರಶ್ವಿನೋರ್ಮುನೇ ॥

ಯದಿ ಮದ್ವಾಕ್ಯಮುಲ್ಲಂಘ್ಯ ಬ್ರವೀಷಿ ಸಹಸೈವ ತೇ ।
ಶಿರಸಂಧಾನಸಂದೇಹ ಇತ್ಯುಕ್ತ್ವಾ ಸ ಯಯೌ ಹರಿಃ ॥

ಇಂದ್ರೇ ಗತೇ ತದಾಭ್ಯೇತ್ಯ ನಾಸತ್ಯಾವೂಚತುರ್ದ್ವಿಜಮ್ ।
ತನ್ಮುಖಾದಿಂದ್ರಗದಿತಂ ಶ್ರುತ್ವಾ ತಾವೂಚತುಃ ಪುನಃ ॥

ಆವಾಂ ತವ ಶಿರಶ್ಛಿತ್ವಾ ಪೂರ್ವಮಶ್ವಸ್ಯ ಮಸ್ತಕಮ್ ।
ಸಂಧಾಸ್ಯಾವಃ ತತೋ ಬ್ರೂಹಿ ತೇನ ವಿದ್ಯಾಂ ದ್ವಿಜೋತ್ತಮ ॥

ತಸ್ಮಿನ್ನಿಂದ್ರೇಣ ಕೃತ್ತೇ ಚ ಪುನಃ ಸಂಧಾಯ ಮಸ್ತಕಮ್ ।
ನಿಜಂ ತೇ ದಕ್ಷಿಣಾಂ ದತ್ವಾ ಗಮಿಷ್ಯಾವೋ ಯಥಾಗತಮ್ ॥

**ಏತತ್ ಶ್ರುತ್ವಾ ತಥೋವಾಚ ದಧ್ಯಙ್ ಚಾಥರ್ವಣಸ್ತಯೋಃ ।**
**ಪ್ರವರ್ಗ್ಯಂ ಬ್ರಹ್ಮವಿದ್ಯಾಂ ಚ ಸತ್ಕೃತೋ ಗತಶಂಕಿತಃ ॥** ಇತಿ
ಮುಂತಾಗಿ ಹೇಳಿದೆ.

ಬೃಹದಾರಣ್ಯಕೋಪನಿಷತ್ ನಾಲ್ಕನೇ ಅಧ್ಯಾಯ ಎರಡು ಖಂಡಗಳ ಭಾಷ್ಯದಲ್ಲಿ

**ದಧ್ಯಙಾಥರ್ವಣೋಽಶ್ವಿಭ್ಯಾಮೇತಾಂ ವಿದ್ಯಾಮದಾತ್ ಪುರಾ ।**
**ಹಯಗ್ರೀವಬ್ರಹ್ಮವಿದ್ಯೇತ್ಯೇಷಾ ಬ್ರಹ್ಮಾದಿಭಿಃ ಧೃತಾ ॥**

ಎಂದು ಹೇಳಿದೆ. ವಿಜಯಧ್ವಜೀ, ಟಿಪ್ಪಣಿಗಳ ಸಾರಾಂಶ ಬರೆದಿದೆ.

ಸತ್ಯಧರ್ಮರು ಕೆಲವು ಉಪನಿಷದ್ವಾಕ್ಯಗಳನ್ನು ಹೆಚ್ಚು ಉಲ್ಲೇಖಿಸಿ ವ್ಯಾಖ್ಯಾನಿಸಿರುವರು. ಅಲ್ಲೇ ನೋಡಬಹುದು.

ನಾರಾಯಣಕವಚವನ್ನು ಧರಿಸಿದ್ದರಿಂದ ದಧೀಚಿಯ ಶರೀರವು ವೀರ್ಯವತ್ತರವೆಂದು ಹೇಳುತ್ತಾರೆ-

ಹೇ ಪಾಲಕನೇ ದಧೀಚಿಯ ಹತ್ತಿರವೇ ಹೋಗಿರೆಂದು ಏಕೆ ಹೇಳುವಿ ಎಂದರೆ ನಿನಗೆ ವಿದ್ಯಾನುಬಂಧವಿರುವದರಿಂದ ಮತ್ತು ನನ್ನ ಮಂತ್ರಕ್ಕೆ ಅಯಾತಯಾಮತ್ವ ಇಲ್ಲಿಯಂತೆ ಬೇರೆಡೆ ಇಲ್ಲ. ಮತ್ತು ಅಶ್ವಿನೀದೇವತೆಗಳು ಬೇಡಿದಾಗ ದಧೀಚಿಯು ಹೇಗೆ ತನ್ನ ತಲೆಯನ್ನೇ ಕೊಟ್ಟನೋ ಹಾಗೆ ನಿಮಗೂ ಕೊಡುವನು ಎಂದು ನನ್ನ ಅಭಿಪ್ರಾಯವೆಂದು ಸ್ವಲ್ಪ ಹಳೇ ಕಥೆಯನ್ನು ಶ್ರೀಹರಿ ಹೇಳುವನು-

**ಕೃತ್ಸ್ನಂ ಚಾಽಥರ್ವಣಂ ತ್ವಾಷ್ಟ್ರಂ ವರ್ಮಾಭೇದ್ಯಂ ಮದಾತ್ಮಕಮ್ ।**
**ವಿಶ್ವರೂಪಾಯ ಯತ್ಪ್ರಾದಾತ್ ತ್ವಾಷ್ಟ್ರಾಯ ತ್ವಮಧಾಸ್ತತಃ ॥೫೩॥**

**ಆಥರ್ವಣಂ** ಅಥರ್ವಣನಾದ ದಧೀಚಿಯಿಂದ ಅಧ್ಯಯನ ಮಾಡಲ್ಪಟ್ಟ **ಕೃತ್ಸ್ನಂ** ಅಂಗೋಪಾಂಗಸಹಿತವಾದ ಪೂರ್ಣವಾದ **ಅಭೇದ್ಯಂ** ಮತ್ತೊಬ್ಬರಿಂದ ಭೇದಿಸಲಾಗದ **ಮದಾತ್ಮಕಂ** ನನ್ನ ಸ್ವರೂಪವಾದ ನನ್ನ ವಿಷಯಕವಾದ **ವರ್ಮ** ನಾರಾಯಣಕವಚವು **ತ್ವಾಷ್ಟ್ರಂ** ದಧೀಚಿಯಿಂದ ತ್ವಷ್ಟೃವು ಪಡೆದದ್ದರಿಂದ ತ್ವಾಷ್ಟ್ರವೆನಿಸಿದ **ಯತ್** ಯಾವ ಈ ವರ್ಮವನ್ನು ತ್ವಷ್ಟೃವು **ತ್ವಾಷ್ಟ್ರಾಯ** ತನ್ನ ಮಗನಾದ **ವಿಶ್ವರೂಪಾಯ** ವಿಶ್ವರೂಪಾಚಾರ್ಯನಿಗೆ **ಪ್ರಾದಾತ್** ಉಪದೇಶಿಸಿದನು **ತತಃ** ವಿಶ್ವರೂಪಾಚಾರ್ಯರಿಂದ **ತ್ವಂ** ನೀನು (ಇಂದ್ರನು) **ಅಧಾಃ** ಧರಿಸಿದೆ. ಇಂತಹ ನಾರಾಯಣವಿದ್ಯೆಯಿಂದ ದಧೀಚಿಯ ಗಾತ್ರವು ದೃಢವಾಗಿದೆ ಎಂದು ಭಾವ.

ಕೇಳಿಯೂ ಕೊಡದೇ ಹೋದರೆ ನಮ್ಮ ಮರ್ಯಾದೆ ಹೋಗುವದು ಎಂಬ ಭಯಬೇಡ. ಕೊಟ್ಟೇ ಕೊಡುವರೆಂದು ಹೇಳುವರು-

**ಯುಷ್ಮಭ್ಯಂ ಯಾಚಿತೋ ದಧ್ಯಜ್ ಧರ್ಮಜ್ಞೋಽಂಗಾನಿ ದಾಸ್ಯತಿ ।**
**ತತಸ್ತೈರಾಯುಧಶ್ರೇಷ್ಠೋ ವಿಶ್ವಕರ್ಮವಿನಿರ್ಮಿತಃ ।**
**ಯೇನ ವೃತ್ರಶಿರೋಹರ್ತಾ ಮತ್ತೇಜ ಉಪಬೃಂಹಿತಃ ॥೪೪॥**

**ಯಾಚಿತಃ** ನಿಮ್ಮಿಂದ ಕೇಳಿಸಿಕೊಂಡ **ಧರ್ಮಜ್ಞಃ** ಬೇಡಿಕೆಯನ್ನು ತಿರಸ್ಕರಿಸಬಾರದೆಂಬ ಧರ್ಮ ತಿಳಿದ ಅಥವಾ ಇದರಿಂದ ಮುಂದೆ ಬರುವ ಮಹಾಪುಣ್ಯವನ್ನರಿತ **ದಧ್ಯಜ್** ದಧೀಚಿಯು **ಯುಷ್ಮಭ್ಯಂ** ನಿಮಗೆ **ಅಂಗಾನಿ** ತನ್ನ ಎಲ್ಲ ಅವಯವಗಳನ್ನೂ **ದಾಸ್ಯತಿ** ಕೊಡುವನು.

ಕೇವಲ ತನ್ನ ದೇಹವನ್ನಷ್ಟೇ ಅಲ್ಲ, ಹೆಂಡತಿ ಮಕ್ಕಳೆಂಬ ತಮ್ಮ ಅಂಗ ಪರಿವಾರವನ್ನು ಕೂಡಾ ಕೊಡುವನು. ಎಂದು ತಿಳಿಸಲು ಹತ್ತನೆಯ ಅಧ್ಯಾಯ ಹತ್ತನೆಯ ಶ್ಲೋಕದಲ್ಲಿ **ಸ್ವಜ್ಞಾತಿವಿಗ್ರಹೈಃ** ಎಂದು ಹೇಳುವರು. ಅಥವಾ ತನ್ನ ಜೀವನಕ್ಕೆ ತೊಂದರೆಯಾಗದಂತೆ ಒಂದು ಬೆರಳು ಮುಂತಾದಷ್ಟೇ ಅಲ್ಲ. ಕಿಂತು ಎಲ್ಲ ಶರೀರವನ್ನೇ ನೀಡುತ್ತಾನೆ ಎಂದು ತಿಳಿಸಲು ಬಹುವಚನ ಪ್ರಯೋಗ.

ಬರೀ ಆ ಶರೀರದಿಂದೇನಾಗುವದು ಎಂದರೆ ನಾನು ಅದರೊಳಗೆ ಸನ್ನಿಹಿತನಾಗುವೆನು ಎಂದು ಹೇಳುವನು ಅಂಗಾನಿ ಎಂದು. ಅಗಿಧಾತುಃ ಗತ್ಯರ್ಥಃ ಲೋಟ್, **ಅಹಂ** ನಾನು **ಅಂಗಾನಿ** ಅದರೊಳಗೆ ಹೋಗುವೆನು ಎಂದೂ ಸೂಚಿಸಲೂ ಈ ರೀತಿ ಪ್ರಯೋಗ ಮಾಡಿರುವರು. ಮುಂದೆ **ಮತ್ತೇಜಉಪಬೃಂಹಿತಃ** ಭಗವತ್ತೇಜಸಾ ಅನ್ವಿತಃ ಎಂದು ಮುಂದೆ ಹೇಳುವದರ ಸ್ವಾರಸ್ಯ ಬರುವದು. ನಮ್ಮನ್ನು ವಂಚಿಸಬೇಡ ಸ್ವಾಮಿ ದೇಹ ಯಾರು ಕೊಡುವರು ಎಂಬುದಕ್ಕೆ ಉತ್ತರ **ಧರ್ಮಜ್ಞಃ** ಎಂದು. **ತತಃ** ಅನಂತರ **ತೈಃ** ಆ ಅವಯವಗಳಿಂದ **ವಿಶ್ವಕರ್ಮನಿರ್ಮಿತಃ** ವಿಶ್ವಕರ್ಮನೆಂಬ ನಿಮ್ಮ ಬಡಿಗನಿಂದ ನಿರ್ಮಿತವಾದ **ಆಯುಧಶ್ರೇಷ್ಠಃ** ಶ್ರೇಷ್ಠ ಆಯುಧವು **ಭವತು** ಆಗಲಿ. **ಯೇನ** ಯಾವ ಆಯುಧದಿಂದ **ಮತ್ತೇಜಉಪಬೃಂಹಿತಃ** ನನ್ನ ವಿಶೇಷಶಕ್ತಿಯಿಂದ (ಸನ್ನಿಧಾನ) ಮತ್ತಷ್ಟು ಬಲಿಷ್ಠನಾದ ನೀನು **ವೃತ್ರಶಿರೋಹರ್ತಾ** ವೃತ್ರಾಸುರನ ಶಿರಸ್ಸನ್ನು ತೆಗೆಯುವವನಾಗುವೆ. **ಮತ್ತೇಜಉಪಬೃಂಹಿತಃ** ಎಂಬುವದು ಆಯುಧಕ್ಕೂ ಇಂದ್ರನಿಗೂ ಅನ್ವಯಿಸುವದು.

'ಯುಷ್ಮಭ್ಯಾಂ ಯಾಚಿತೋಽಶ್ವಿಭ್ಯಾಂ ಧರ್ಮಜ್ಞೋಽಸ್ಥೀನಿ ದಾಸ್ಯತಿ' ಎಂಬ ಪಾಠದಲ್ಲಿ ಅಶ್ವಿನೀದೇವತೆಗಳಿಂದ ಯಾಚಿತನಾಗಿ ಹೇಗೆ ಅವರಿಗೆ ವಿದ್ಯೆ ಕೊಟ್ಟನೋ ಹಾಗೆ ನಿಮಗೆ ಕೊಡುವನೆಂದರ್ಥ. ।।೪೪।।

ಅವನು ನುಂಗಿದ ನಮ್ಮ ಅಸ್ತ್ರ-ಶಸ್ತ್ರ ತೇಜಸ್ಸಿನ ಗತಿ ಏನು ಎಂದರೆ ಹೇಳುವನು-

**ತಸ್ಮಿನ್ ವಿನಿಹತೇ ಯೂಯಂ ತೇಜೋಽಸ್ತ್ರಾಯುಧಸಂಪದಃ ।**
**ಭೂಯಃ ಪ್ರಾಪ್ಸ್ಯಥ ಭದ್ರಂ ವೋ ನ ಹಿಂಸಂತಿ ಚ ಮತ್ಪರಾನ್ ।।೪೫।।**

।। ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಷಷ್ಠಸ್ಕಂಧೇ ನವಮೋಽಧ್ಯಾಯಃ ।।

**ತಸ್ಮಿನ್** ಆ ವೃತ್ರಾಸುರನು **ವಿನಿಹತೇ ಸತಿ** ಸಂಹೃತನಾಗಲು **ಯೂಯಂ** ನೀವು **(ತೇನ ಗ್ರಸ್ತಾಃ)** ಅವನಿಂದ ನುಂಗಲ್ಪಟ್ಟ ನಿಮ್ಮ **ತೇಜೋಽಸ್ತ್ರಾಯುಧಸಂಪದಃ** ತೇಜಸ್ಸು ಅಸ್ತ್ರ ಆಯುಧ ಮತ್ತು ಸಂಪತ್ತುಗಳನ್ನು **ಭೂಯಃ** ಮತ್ತೆ **ಪ್ರಾಪ್ಸ್ಯಥ** ಹೊಂದುವಿರಿ. **ವಃ** ನಿಮಗೆ **ಭದ್ರಂ** ಮಂಗಳವು ಆಗಲಿ **ಮತ್ಪರಾನ್** ನನ್ನ ಭಕ್ತರನ್ನು, **(ಕೇ ಅಪಿ)** ವೃತ್ರಾಸುರನೇ ಏನು ಯಾರೂ ಕೂಡ **ನ ಹಿಂಸಂತಿ** ಹಿಂಸಿಸುವುದಿಲ್ಲ. ಹೀಗೆ ಹೇಳಿದ್ದರಿಂದ ಮೂರು ಲೋಕಗಳನ್ನೇ ನುಂಗುವ ಆ ಮಹಾಕಾಯ ನಮ್ಮನ್ನು ಕೊಂದಾನು ಎಂಬ ಶಂಕೆಯನ್ನು ಪರಿಹರಿಸಿರುವನೆಂದು ತಿಳಿಯಬೇಕು. ।।೪೫।।

।। ಇಲ್ಲಿಗೆ ಒಂಭತ್ತನೆಯ ಅಧ್ಯಾಯವು ಮುಕ್ತಾಯವಾಯಿತು ।।

★★★★★

# ಅಥ ಶ್ರೀಮದ್ಭಾಗವತೇ - ಷಷ್ಠಸ್ಕಂಧೇ ದಶಮೋಽಧ್ಯಾಯಃ

**ಅಧ್ಯಾಯಸಾರ**

ಶ್ರೀಶುಕಾಚಾರ್ಯರು ಹೇಳಿದರು. ಷಡ್ಗುಣಪರಿಪೂರ್ಣನಾದ ಪರಮಾತ್ಮ ದಧೀಚಿಗಳ ದೇಹವನ್ನು ಯಾಚಿಸಲು ಇಂದ್ರನಿಗೆ ಆದೇಶ ಮಾಡಿದ. ಅವರೆಲ್ಲರೂ ನೋಡುತ್ತಿದ್ದಂತೆಯೇ ಅದೃಶ್ಯನಾಗಿ ಹೋದ. ದೇವರ ಆದೇಶಕ್ಕೆ ಅನುಗುಣವಾಗಿ ದೇವತೆಗಳೆಲ್ಲರೂ ದಧೀಚಿಗಳ ಹತ್ತಿರ ಹೋದರು. ಅವರನ್ನು ಸ್ತುತಿಸಿದರು. ದಧೀಚಿಗಳ ಶರೀರವನ್ನು ಯಾಚಿಸಿದರು.

ದಧೀಚಿಗಳು ಸಂತುಷ್ಟರಾಗಿ ಹೇಳಿದರು. ನೀವೇನೋ ನನ್ನ ಈ ದೇಹವನ್ನು ಕೇಳುತ್ತಿದ್ದೀರಿ. ಆದರೆ ಮನುಷ್ಯರಿಗೆ ಎಲ್ಲ ವಸ್ತುಗಳಿಗಿಂತಲೂ ಪರಮಪ್ರಿಯವಾಗಿದೆ ಈ ದೇಹ. ಇಂತಹ ದೇಹವನ್ನು ನೀಡಲು ಯಾರೂ ಮುಂದಾಗಲಾರರು. ಆದರೂ ನೀವು ಅತಿಥಿಗಳಾಗಿ ನಮ್ಮ ಆಶ್ರಮಕ್ಕೆ ಬಂದಿರುವಿರಿ. ಅತಿಥಿಯ ರೂಪದಲ್ಲಿ ಪರಮಾತ್ಮನೇ ಬರುತ್ತಾನೆಂದು ಶಾಸ್ತ್ರಗಳು ಪ್ರತಿಪಾದಿಸಿವೆ. ಕ್ರಿಮಿ-ವಿಟ್-ಭಸ್ಮವಾಗಿ ಹೋಗುವ ಈ ದೇಹ ಸಕಲಭೂತಹಿತಕ್ಕಾಗಿ ಉಪಯೋಗಕ್ಕೆ ಬೀಳುತ್ತದೆ ಎಂದರೆ ಇದಕ್ಕಿಂತಲೂ ಸಂತೋಷ ನನಗಾವುದೂ ಇಲ್ಲ. ಸಂತೋಷದಿಂದ ಈ ದೇಹವನ್ನು ನಿಮಗೆ ದಾನ ಮಾಡುತ್ತೇನೆ.

ದಧೀಚಿಗಳು ಹೀಗೆ ಹೇಳಿ ಪರಬ್ರಹ್ಮನಾದ ಪರಮಾತ್ಮನ ಚಿಂತನೆಯನ್ನು ಮಾಡುತ್ತಾ ಯೋಗದಿಂದ ದೇಹವನ್ನು ಪರಿತ್ಯಜಿಸಿದರು. ದಧೀಚಿ ಮುನಿಗಳ ಅಸ್ಥಿಗಳಿಂದ ವಿಶ್ವಕರ್ಮ ವಜ್ರಾಯುಧವನ್ನು ನಿರ್ಮಾಣಮಾಡಿದ. ಇಂದ್ರ ಆ ವಜ್ರಾಯುಧವನ್ನು




ಧರಿಸಿದ. ಐರಾವತಾರೂಢನಾದ. ಮುನಿಗಳಿಂದ ಸ್ತುತನಾಗುತ್ತಾ ವೃತ್ರನನ್ನು ಸಂಹರಿಸಲು ಯುದ್ಧಕ್ಕೆ ತೆರಳಿದ.

ಇದೇ ವೈವಸ್ವತ ಮನ್ವಂತರದ ಮೊದಲನೆಯ ತ್ರೇತಾಯುಗದ ಆದಿಯಲ್ಲಿ ನರ್ಮದಾತೀರದಲ್ಲಿ ದೇವಾಸುರರ ಘನಘೋರವಾದ ಯುದ್ಧವು ಆಯಿತು. ಪರಮಾತ್ಮನ ಕೃಪೆಗೆ ಪಾತ್ರರಾದ ದೇವತೆಗಳಿಗೆ ದೈತ್ಯರಿಂದ ಯಾವುದೇ ವಿಧವಾದ ಪೀಡೆಯಾಗಲಿಲ್ಲ. ದೇವತೆಗಳನ್ನು ಪೀಡಿಸಲು ಅಸುರರು ಮಾಡಿದ ಎಲ್ಲ ಪ್ರಯತ್ನಗಳೂ ವ್ಯರ್ಥವಾದವು.

ದೇವತೆಗಳ ಘೋರವಾದ ಪ್ರಹಾರಗಳನ್ನು ದೈತ್ಯರಿಗೆ ತಾಳಲಾಗಲಿಲ್ಲ. ಕಾದಾಡುವ ಸಾಮರ್ಥ್ಯವೆಲ್ಲ ಕುಗ್ಗಿಹೋಯಿತು. ಅಸಮರ್ಥರಾದ ದೈತ್ಯರು ತಮ್ಮ ಪತಿಯಾದ ವೃತ್ರನನ್ನು ಬಿಟ್ಟು ಓಡಿ ಹೋಗಲು ಸನ್ನದ್ಧರಾದರು.

ತೀವ್ರಭಯದಿಂದ ಓಡಿಹೋಗುತ್ತಿರುವ ತನ್ನ ಸೈನ್ಯವನ್ನು ನೋಡಿದ ವೃತ್ರ. ದೈತ್ಯರನ್ನು ಸಂಬೋಧಿಸಿ ಹೇಳಿದ. ಹೇ ವಿಪ್ರಚಿತ್ತಿ ! ನಮುಚಿ ! ಪುಲೋಮ ! ಶಂಬರ ! ಮಯ ! ನನ್ನ ಮಾತನ್ನು ಕೇಳಿರಿ. ಹುಟ್ಟಿದವನಿಗೆ ಮರಣ ನಿಶ್ಚಿತ. ಮರಣಕ್ಕೆ ಪರಿಹಾರವೇ ಇಲ್ಲ. ಯುದ್ಧದಲ್ಲಿ ಮರಣದಿಂದ ಉತ್ತಮವಾದ ಗತಿಯಾಗುತ್ತದೆ. ಈ ಲೋಕದಲ್ಲಿ ಕೀರ್ತಿಯು ಲಭ್ಯವಾಗುತ್ತದೆ. ಅಂತಹ ಮರಣವನ್ನು ಯಾಕೆ ನೀವು ಅಪೇಕ್ಷಿಸುತ್ತಿಲ್ಲ. ಹೇಡಿಗಳಂತೆ ಓಡಿಹೋಗುತ್ತಿದ್ದೀರಿ. ಯುದ್ಧದಲ್ಲಿ ಪರಾಙ್ಮುಖರಾದವರಿಗೆ ಇಲ್ಲಿಯೂ ಸುಖವಿಲ್ಲ. ಪರತ್ರವೂ ಸುಖವಿಲ್ಲ.

ಬ್ರಹ್ಮಧ್ಯಾನದಿಂದ, ಯೋಗದಿಂದ ಅಥವಾ ಯುದ್ಧದಲ್ಲಿ ವೀರರ ಜೊತೆ ಕಾದಾಡುವುದರಿಂದ ಬರುವ ಮರಣ ಅತಿಪ್ರಶಸ್ತವಾಗಿವೆ. ಉಳಿದ ಮರಣಗಳೆಲ್ಲ ದುರ್ಮರಣಗಳೇ ಆಗಿವೆ. ಇಲ್ಲಿ ಮರಣದಿಂದಲೂ ಸ್ವರ್ಗ. ಗೆಲುವಿನಿಂದಲೂ ಸ್ವರ್ಗವೇ. ಆದ್ದರಿಂದ ಧೈರ್ಯದಿಂದ ಯುದ್ಧ ಮಾಡಿರಿ. ಈ ಮರಣಗಳು ಲೋಕಸಮ್ಮತವಾಗಿವೆ. ಶಾಸ್ತ್ರಸಮ್ಮತವೂ ಆಗಿವೆ.

★★★★★

ಶತ್ರುಸಂಹಾರವು ಶ್ರೀಹರಿಯ ಕರುಣೆಗೆ ಕಾರಣವಾಗಿ ಪರಂಪರಯಾ ಸಾಂಪರಾಯ (ಮೋಕ್ಷ) ಸಾಧನವಾಗುವದು. ಆದುದರಿಂದ ವೃತ್ರಾಸುರ-ಇಂದ್ರರ ಯುದ್ಧವನ್ನು ಇಂದ್ರನಿಂದ ವೃತ್ರಾಸುರ ಹನನವನ್ನು ಕೆಲವು ಅಧ್ಯಾಯಗಳಿಂದ ಹೇಳುವವರಾಗಿ ಮೊದಲಿಗೆ ದಧಿಚಿಯು ಶಚೀಶನಿಗೆ ಶರೀರವನ್ನು ವಿತರಿಸಿದನೇ ಅಥವಾ ಪ್ರತಾರಿಸಿದನೇ (ವಂಚಿಸಿದನೇ) ಎಂಬ ರಾಜನ ಸಂಶಯವನ್ನು ಪರಿಹರಿಸುವದಕ್ಕಾಗಿ ಶುಕಾಚಾರ್ಯರು ಹೇಳುವರೆಂದು ಹೇಳುವರು-

**ಶ್ರೀಶುಕ ಉವಾಚ -**

**ಇಂದ್ರಮೇವಂ ಸಮಾದಿಶ್ಯ ಭಗವಾನ್ ವಿಶ್ವಭಾವನಃ ।**
**ಪಶ್ಯತಾಮನಿಮೇಷಾಣಾಂ ತತ್ರೈವಾಂತರ್ದಧೇ ಹರಿಃ ॥೧॥**

**ವಿಶ್ವಭಾವನಃ** ಜಗತ್ತನ್ನು ಸೃಷ್ಟಿಸುವ ಅಥವಾ ಇವರ ಇಷ್ಟವನ್ನೆಲ್ಲ ಸೃಜಿಸುವ **ಭಗವಾನ್** ಶ್ರೀಹರಿಯು **ಏವಂ** ಮೇಲೆ ಹೇಳಿದಂತೆ **ಇಂದ್ರಂ** ಇಂದ್ರದೇವರಿಗೆ **ಸಮಾದಿಶ್ಯ** ಅಪ್ಪಣೆ ಮಾಡಿ **ಅನಿಮೇಷಾಣಾಂ ಪಶ್ಯತಾಂ** ದೇವತೆಗಳು ನೋಡುತ್ತಿದ್ದಂತೆಯೇ **ಹರಿಃ** ಶ್ರೀಹರಿಯು **ತತ್ರೈವ ಅಂತರ್ದಧೇ** ಅಲ್ಲಿಯೇ ಕಣ್ಣಿಗೆ ಕಾಣದಾದನು. **ಅನಿಮೇಷಾಣಾಂ** ಕಣ್ಣು ಮುಚ್ಚದಿರುವ ಎಂದರ್ಥ. 'ನಿಮೇಷೋಽಕ್ಷಿನಿಮೀಲನೇ' ಎಂದು ವಿಶ್ವವಿದೆ. ಮತ್ತು 'ಸುರಮತ್ಸ್ಯಾವನಿಮಿಷೌ' ಎಂದು ಅಮರವಿದೆ. ॥೧॥

**ತಥಾಭಿಯಾಚಿತೋ ದೇವೈರ್ಋಷಿರಾಥರ್ವಣೋ ಮಹಾನ್ ।**
**ಮೋದಮಾನ ಉವಾಚೇದಂ ಪ್ರಹಸನ್ನಿವ ಭಾರತ ॥೨॥**

**ಹೇ ಭಾರತ** ಪರೀಕ್ಷಿತನೇ **ತಥಾ** ಶ್ರೀಹರಿ ಹೇಳಿದಂತೆ **ದೇವೈಃ** ದೇವತೆಗಳಿಂದ **ಅಭಿಯಾಚಿತಃ** ಪ್ರಾರ್ಥಿತರಾದ **ಮಹಾನ್** ಸರ್ವೋತ್ತಮನಾದ ಶ್ರೀಹರಿಯನ್ನು ತಿಳಿದಿರುವ **ಆಥರ್ವಣಃ ಋಷಿಃ** ದಧೀಚಿಋಷಿಗಳು **ಮೋದಮಾನಃ** ಹೇಯವಾದ ಬಿದ್ದು ಹೋಗುವ ಈ ದೇಹಕ್ಕೆ ಸಜ್ಜನರಿಗೆ ಮಹದುಪಯೋಗವಾಗುವ ಯೋಗ ಒದಗಿತಲ್ಲ ಎಂದು ಸಂತೋಷಿಸುತ್ತ **ಪ್ರಹಸನ್ ಏವ** ನಗುತ್ತಲೇ **ಇದಂ ಉವಾಚ** ಅವರ ಮುಖದಿಂದ ಧರ್ಮವನ್ನು ಕೇಳುವ ಅಭಿಪ್ರಾಯದಿಂದ ಅವರ ಪ್ರಾರ್ಥನೆಯನ್ನು ತಿರಸ್ಕರಿಸುವ ರೀತಿಯಲ್ಲಿ ಮುಂದೆ ಹೇಳುವ ಮಾತುಗಳನ್ನಾಡಿದರು. ಅವರ ಮಾತುಗಳನ್ನು ಹೇಳುವರು.॥೨॥

ದೇಹಧಾರಿಗಳ ದಶೆ ಹೀಗಿರುವದೆಂದು ಹೇಳುವರು-

**ಅಪಿ ವೃಂದಾರಕಾ ಯೂಯಂ ನ ಜಾನೀಥ ಶರೀರಿಣಾಮ್ ।**
**ಸಂಸ್ಥಾಯಾಂ ಯಸ್ತ್ವಭಿದ್ರೋಹೋ ದುಃಸಹಶ್ಚೇತನಾಪಹಃ ॥೩॥**

**ಹೇ ವೃಂದಾರಕಾಃ** ದೇವತೆಗಳೇ **ಅಪಿ** ಎಲ್ಲ ಪ್ರಾಣಿಗಳ ಬುದ್ಧಿ ಸಾಕ್ಷಿಗಳಾಗಿದ್ದರೂ **ಯೂಯಂ** ನೀವು **ಶರೀರಿಣಾಂ** ದೇಹವುಳ್ಳ ಪ್ರಾಣಗಳಿಗೆ **ದುಃಸಹಃ** ಸಹಿಸಲಾಗದ **ಚೇತನಾಪಹಃ** ಬುದ್ಧಿಭ್ರಂಶಕರವಾದ **ಯಃ** ಯಾವ **ಸಂಸ್ಥಾಯಾಂ** ನಾಶದಲ್ಲಿ (ಮರಣದಲ್ಲಿ) **ಅಭಿದ್ರೋಹಃ** ದುಃಖವಾಗುವದೋ **ತಂ** ಅದನ್ನು **ನ ಜಾನೀಥ** ತಿಳಿದಿಲ್ಲ. **ಅಪಿ ನ ಜಾನೀಥ** ತಿಳಿದಿಲ್ಲವೇನು? ಎಂದಾದರೂ ಅರ್ಥ. ನೀವು ತಿಳಿದಿಲ್ಲ ಎಂದು ಭಾವಿಸುತ್ತೇನೆ. ದೇವತೆಗಳಾದ್ದರಿಂದ ಅಂದರೆ 'ಉತ್ಕ್ರಾಂತಿಮಾರ್ಗೌ ದೇವಾನಾಂ ನ ಪ್ರಾಯೇಣ ಭವಿಷ್ಯತಃ' ಎಂದಿದೆ. ದೇವತೆಗಳು ದೇಹ ಬಿಟ್ಟು ಹೋಗುವದಿಲ್ಲ ಅಂದ ಮೇಲೆ ಬಿಡುವಾಗ ಆಗುವ ದುಃಖ ತಿಳಿಯುವುದು ಹೇಗೆ ಎಂದು ಭಾವ. 'ಸಂಸ್ಥಾ ಸ್ಥಿತೌ ಚರೇ ನಾಶೇ' 'ಚೇತನಾ ಸಂವಿದಿ ಪ್ರೋಕ್ತಾ' 'ಅಪಿ ಸಂಭಾವನಾ ಪ್ರಶ್ನೇ' ಎಂದು ಎಲ್ಲ ವಿಷಯದಲ್ಲಿ ಕೋಶವಿದೆ. ॥೩॥

ತನ್ನ ದಾರ್ಢ್ಯವನ್ನು ಪ್ರಕಟಗೊಳಿಸಲು ಸ್ವಲ್ಪ ದುಸ್ತ್ಯಜತೆಯನ್ನು ಉಪಪಾದಿಸುವಂತೆ ನಟಿಸುವನು-

**ಜಿಜೀವಿಷೂಣಾಂ ಜೀವಾನಾಮಾತ್ಮಾ ಪ್ರೇಷ್ಠ ಇಹೇಪ್ಸಿತಃ ।**
**ಕ ಉತ್ಸಹೇತ ತಂ ದಾತುಂ ಭಿಕ್ಷಮಾಣಾಯ ವಿಷ್ಣವೇ ॥೪॥**

**ಇಹ** ಈ ಲೋಕದಲ್ಲಿ ಪ್ರಿಯವಸ್ತುಗಳಲ್ಲಿ **ಜಿಜೀವಿಷೂಣಾಂ** ಜೀವಿಸಲು ಬಯಸುವವರಿಗೆ **ಆತ್ಮಾ** ದೇಹವು **ಪ್ರೇಷ್ಠಃ ಈಪ್ಸಿತಃ** ಅತ್ಯಂತ ಪ್ರಿಯವಾದ ಇಷ್ಟವು ಆದ್ದರಿಂದ **ಕಃ** ಯಾವನು ತಾನೇ **ಭಿಕ್ಷಮಾಣಾಯ** ಅತಿಥಿಯಾಗಿ ಇಚ್ಛಿಸುವ **ವಿಷ್ಣವೇ ಅಪಿ** ಶ್ರೀಹರಿಗೇ ಆದರೂ **ತಂ** ಆ ದೇಹವನ್ನು **ದಾತುಂ** ದಾನ ಮಾಡಲು **ಉತ್ಸಹೇತ** ಪ್ರಯತ್ನಿಸಿಯಾನು.

ವಿಷ್ಣವೇ ಎಂದು ಹೇಳಿದ್ದರಿಂದ ದೇಹವು ಪ್ರಿಯತಮವೆಂದು ನಮಗೆ ತಿಳಿದಿದೆ. ಆದರೂ ಶ್ರೀಹರಿಯೇ ನಮ್ಮ ಮೂಲಕ ಯಾಚಿಸುತ್ತಿರುವನು ಎಂದು ದೇವತೆಗಳು ಹೇಳಿದಾಗಲೂ ಕೊಡಲು ಸಾಧ್ಯವಿಲ್ಲವೆಂದು ಅಭಿಪ್ರಾಯ ಪಟ್ಟಿರುವರು.

ಸಾಮಾನ್ಯವಾಗಿ ಜೀವಾನಾಂ ಜಿಜೀವಿಷೂಣಾಂ ಎಂದು ಹೇಳುವುದರಿಂದ ಅಂತರಂಗದಲ್ಲಿ ನಾನಂಥವನಲ್ಲ ಎಂದು ಧ್ವನಿತ ಪಡಿಸುವರು. ಬೇರೆ ದೃಷ್ಟಾಂತ ಕೊಡದೇ ವಿಷ್ಣು ಬಂದರೂ ಎಂದು ಹೇಳಿದ್ದರಿಂದ ನನಗೆ ಸುಕೃತದಾತಾ ಅವನು ಎಂದೂ ಸೂಚಿಸಿರುವನು. ।।೪।।

ಇದು ಮನಸ್ಸಿನಿಂದ ಬಂದ ಮಾತಲ್ಲ ಎಂದು ತಿಳಿದಿದ್ದರೂ ಬೇರೆ ರೀತಿಯಿಂದ ತಮ್ಮ ಅಭೀಷ್ಟ ನೀಡಲು ಪ್ರೋತ್ಸಾಹಿಸುವರು-

**ದೇವಾ ಊಚುಃ -**

**ಕಿನ್ನು ತದ್ದುಸ್ತ್ಯಜಂ ಬ್ರಹ್ಮನ್ ಪುಂಸಾಂ ಭೂತಾನುಕಂಪಿನಾಮ್ ।**
**ಭವದ್ವಿಧಾನಾಂ ಮಹತಾಂ ಪುಣ್ಯಶ್ಲೋಕೇಡ್ಯಕರ್ಮಣಾಮ್ ।।೫।।**

**ಬ್ರಹ್ಮನ್** ಬ್ರಹ್ಮಜ್ಞಾನಿಯೇ **ಭೂತಾನುಕಂಪಿನಾಂ** ಎಲ್ಲ ಪ್ರಾಣಿಗಳಲ್ಲಿಯೂ ದಯಾ ಮಾಡುವ **ಪುಣ್ಯಶ್ಲೋಕೇಡ್ಯಕರ್ಮಣಾಂ** ಉತ್ತಮ ಕೀರ್ತಿವಂತರಾದ ಪುರುಷರಿಂದ ಸ್ತುತ್ಯವಾದ ದೇಹದಾನಾದಿ ಕರ್ಮಗಳುಳ್ಳ **ಭವದ್ವಿಧಾನಾಂ** ತಮ್ಮಂತಹ **ಮಹತಾಂ ಪುಂಸಾಂ** ಮಹಾಪುರುಷರಿಗೆ **ದುಸ್ತ್ಯಜಂ** ಕೊಡಲಾಗದ **ತತ್ ಕಿಂ ನು** ಆ ಪದಾರ್ಥ ಯಾವುದು? ತಮ್ಮಂತಹ ಮಹನೀಯರು ಎಲ್ಲ ಕೊಡುವರು ಎಂದರ್ಥ. ಅನುಕಂಪಿ ಎಂಬುದು ಶಿಖಾದಿ. ಅಥವಾ ಅಕಾರಾಂತ ಪುಲ್ಲಿಂಗವಾದ ಅನುಕಂಪ ಶಬ್ದ. ।।೫।।

**ನೂನಂ ಸ್ವಾರ್ಥಪರೋ ಲೋಕೋ ನ ವೇದ ಪರಸಂಕಟಮ್ ।**
**ಯದಿ ವೇದ ನ ಯಾಚೇತ ನೇತಿ ನಾಹ ಯದೀಶ್ವರಃ ।।೬।।**

**ಸ್ವಾರ್ಥಪರಃ** ತಮ್ಮ ಪ್ರಯೋಜನದಲ್ಲೇ ಆಸಕ್ತರಾದ **ಲೋಕಃ** ಜನರು **ಪರಸಂಕಟಂ** ಇತರರ ಕಷ್ಟವನ್ನು ಅಥವಾ ಕೊಡಲು ಶಕ್ಯವೇ ಇಲ್ಲವೇ ಎಂಬುದನ್ನು, ಅಥವಾ ನಿನಗೆ ದೇಹ ಕೊಡುವಾಗ, **ಪರಂ** ಮರಣ ಕೊಡುವ ಸಂಕಟವನ್ನು, ಅಥವಾ ನೀನು ಶರೀರ ಕೊಡುವಾಗ ನಿನಗಾಗುವ ಸಂಕಟವನ್ನು **ಪರಃ** ನಾವುಗಳು **ನ ವೇದ** ತಿಳಿದಿಲ್ಲ. **ನೂನಂ** ನಿಶ್ಚಯ **ಯದಿ ವೇದ** ತಿಳಿದಿದ್ದೇ ಆದರೆ **ನ ಯಾಚೇತ** ಬೇಡುತ್ತಿರಲಿಲ್ಲ **ಯಾಚತೇ ಚ** ಕೇಳುತ್ತಾರೆ. ಅಂದ ಮೇಲೆ ತಿಳಿದಿಲ್ಲವೆಂದು ನಿಶ್ಚಯ. ಇದು ಯಾಚಕರದಾಯಿತು ಇನ್ನು **ಯದಿ ಈಶ್ವರಃ ಸನ್ ಅಪಿ** ಕೊಡಲು ಸಮರ್ಥನಾಗಿಯೂ **ನೇತ್ಯಾಹ** ಕೊಡಲಾರೆನೆನ್ನುವನೋ **ಸಃ** ಅವನು **ನ ವೇದ ಪರಸಂಕಟಂ** ಕೇಳುವವರ ಸಂಕಟವನ್ನು ಅರಿತಿಲ್ಲ. ಅಥವಾ **ಯಃ** ನ ಇತ್ಯಾಹ ಇಲ್ಲವೆನ್ನುವನೋ **ಸಃ** ಅವನು **ನ ಈಶ್ವರಃ**

 

ಸಮರ್ಥನೇ ಅಲ್ಲ. ಆದ್ದರಿಂದ ನೀನು ಸಮರ್ಥನು. ನಾವು ಯಾಚಕರು. ಒಬ್ಬನು ಸಾಯುವದಕ್ಕಿಂತ ಅನೇಕರು ಸಾಯುವದು ದೊಡ್ಡದು. ಕಾರಣ ನೀನು ಇಲ್ಲವೆನ್ನಬೇಡ. ಸಮರ್ಥನಾದವನು ಇಲ್ಲವೆನ್ನಲಾರ ಎಂದು ಭಾವ. ।।೬।।

ಇನ್ನು ಸ್ವಭಾವತಃ ಉತ್ತಮರಾದ ದೇವತೆಗಳಿಗೆ ಅವರರಾದವರನ್ನು ಸ್ತುತಿಸುವದು ನಮಿಸುವದು ನೀಚರಂತೆ ಬೇಡುವದು ಏಕೋ ನಮ್ಮ ಮನಸ್ಸಿಗೆ ರುಚಿಸಲಾರದು ಎಂದರೆ ಹೇಳುವರು-

ತಾತ್ಪರ್ಯ

**ನೀಚಾನಪಿ ಚ ಯಾಚಂತೇ ಸ್ವಾತ್ಮನೋ ಗುಣವತ್ತರಾಃ ।**
**ನೀಚವಾಕ್ಯಂ ವದೆಯುಶ್ಚ ಸುರಾ ನೈತಾವತಾ ಕ್ವಚಿತ್ ।**
**ತೇಜಃಕ್ಷತಿರ್ಭವೇದೇಷಾಂ ಜನಕಸ್ಯ ಯಥಾರ್ಭಕಾತ್ ।।ಇತಿ ತಂತ್ರಮಾಲಾಯಾಮ್**

ದೇವತೆಗಳು ಗುಣಾಧಿಕರು. ಮಹಾವಿಷ್ಣುವಿನ ಆಜ್ಞೆಯಂತೆ ಕೆಲವು ಸಲ ತಮ್ಮ ಕಾರ್ಯಸಿದ್ಧಿಗಾಗಿ ತಮಗಿಂತ ನೀಚರನ್ನು ಯಾಚಿಸುವರು. ತಮಗೆ ನೀಚತೆ ಬರುವಂತಹ ಮಾತನಾಡುವರು. ಅಷ್ಟು ಮಾತ್ರದಿಂದ ಅವರ ಮಾನಹಾನಿಯು ಆಗಲಾರದು. ಹೇಗೆ ತಂದೆಯು ಮಗನಿಗೆ ಏನಾದರೂ ಕೇಳಿದರೆ ಮಾನಹಾನಿಯಾಗುವುದಿಲ್ಲವೋ ಹಾಗೆ ಎಂದು ಭಾವ. ।।೬।।

**ಋಷಿರುವಾಚ -**

**ಧರ್ಮಂ ವಃ ಶ್ರೋತುಕಾಮೇನ ಯೂಯಂ ವೈ ಪ್ರತ್ಯುದಾಹೃತಾಃ ।**
**ಏಷ ವಃ ಪ್ರಿಯಮಾತ್ಮಾನಂ ತ್ಯಜಂತಂ ಸಂತ್ಯಜಾಮ್ಯಹಮ್ ।।೭।।**

**ವಃ** ನಿಮ್ಮಿಂದ **ಧರ್ಮಂ** ಧರ್ಮವನ್ನು **ಶ್ರೋತುಕಾಮೇನ** ಕೇಳ ಬಯಸಿದ **ಮಯಾ** ನನ್ನಿಂದ **ಯೂಯಂ** ನೀವು **ಪ್ರತ್ಯುದಾಹೃತಾ ವೈ** ನಿರಾಕರಿಸಲ್ಪಟ್ಟಂತೆ ಹೇಳಲ್ಪಟ್ಟಿರಿ. **ಏಷಃ** ಈ ನಾನು **ಪ್ರಿಯಂ** ಪ್ರೀತಿವಿಷಯವಾದ ಆದರೇ **ಆತ್ಮಾನಂ ತ್ಯಜಂತಂ** 'ಅದ್ಯ ವಾಽಬ್ದಶತಾಂತೇ ವಾ ದೇಹೋಽಯಂ ಕ್ಷಣಭಂಗುರಃ' ಎಂದಿರುವದರಿಂದ ನನ್ನನ್ನು ಬಿಡುವ ಇದನ್ನು **ವಃ ಪ್ರಿಯಂ ಕೃತ್ವಾ** ನಿಮಗೆ ಪ್ರಿಯವಾಗಿ ಮಾಡಿ **ಅಹಂ** ನಾನು **ಸಂತ್ಯಜಾಮಿ** ಸಂತೋಷದಿಂದ ಬಿಡುವೆನು.

ಶ್ರೋತುಕಾಮೇನ 'ತುಂ ಕಾಮಮನಸೋರಪಿ' ಎಂದು ತುಮುನ್ ಪ್ರತ್ಯಯದ ಅಂತ್ಯಲೋಪವಾದರೆ ಶ್ರೋತುಂ ಕಾಮಃ ಯಸ್ಯ ಸಃ ಶ್ರೋತುಕಾಮಃ ತೇನ ಶ್ರೋತು

ಕಾಮೇನ ಎಂದಾಗುವದು. ವರ್ತಮಾನಸಾಮೀಪ್ಯಾದ್ವರ್ತಮಾನ ವ್ಯಪದೇಶವಾದ್ದರಿಂದ ತ್ಯಜಂತಂ ಎಂದಿದ್ದಾರೆ. ತ್ಯಕ್ಷಂತಂ ಎಂದು ಭಾವ. ।।೭।।

**ಯೋಽಧ್ರುವೇಣಾತ್ಮನಾ ನಾಥಾ ನ ಧರ್ಮಂ ನ ಯಶಃ ಪುಮಾನ್ ।**
**ಈಹೇತ ಭೂತದಯಯಾ ಸ ಶೋಚ್ಯಃ ಸ್ಥಾವರೈರಪಿ ।।೮।।**

**ಹೇ ನಾಥಾಃ** ರಕ್ಷಕರೇ **ಹೇ ಅನಾಥಾಃ** ಎಂದೂ ಬೇಡದವರೇ **ಯಃ** ಯಾವ **ಪುಮಾನ್** ಮನುಷ್ಯನು **ಭೂತದಯಯಾ** ಪ್ರಾಣಿಗಳಲ್ಲಿ ದಯೆಯಿಂದ **ಅಧ್ರುವೇಣ** ಸ್ಥಿರವಲ್ಲದ **ಆತ್ಮನಾ** ದೇಹದಿಂದ **ಧರ್ಮಂ** ಧರ್ಮವನ್ನು **ನ ಈಹೇತ** ಇಚ್ಛಿಸುವದಿಲ್ಲವೋ **ಯಶಃ** ಕೀರ್ತಿಯನ್ನು **ನ ಈಹೇತ** ಇಚ್ಛಿಸುವದಿಲ್ಲವೋ **ಸಃ** ಅವನು **ಸ್ಥಾವರೈಃ ಅಪಿ** ವಿವೇಕಶೂನ್ಯರಿಂದಲೂ **ಶೋಚ್ಯಾಃ** ಶೋಚನೀಯರು. ।।೮।।

**ಏತಾವಾನವ್ಯಯೋ ಧರ್ಮಃ ಪುಣ್ಯಶ್ಲೋಕೈರುಪಾಸಿತಃ ।**
**ಯೋ ಭೂತಶೋಕಹರ್ಷಾಭ್ಯಾಮಾತ್ಮಾ ಶೋಚತಿ ಹೃಷ್ಯತಿ ।।೯।।**

**ಯಃ ಆತ್ಮಾ** ಯಾವ ಮನಸ್ಸು (ಜೀವನು) **ಭೂತಶೋಕಹರ್ಷಾಭ್ಯಾಂ** ಪ್ರಾಣಿಗಳ ದುಃಖ-ಸಂತೋಷಗಳಿಂದ **ಶೋಚತಿ** ದುಃಖಿಸುವದೋ **ಹೃಷ್ಯತಿ** ಹರ್ಷಗೊಳ್ಳುವದೋ **ಏತಾವಾನ್** ಇಷ್ಟೇ **ಪುಣ್ಯಶ್ಲೋಕೈಃ** ಪವಿತ್ರ ಕೀರ್ತಿವಂತರಾದ ಶಿಬಿ ಮುಂತಾದವರಿಂದ **ಉಪಾಸಿತಃ** ಸೇವಿಸಲ್ಪಟ್ಟ **ಅವ್ಯಯಃ** ಶಾಶ್ವತವಾದ **ಧರ್ಮಃ** ಧರ್ಮವು. ।।೯।।

**ಅಹೋ ದೈನ್ಯಮಹೋ ಕಷ್ಟಂ ಪಾರಕ್ಯೈಃ ಕ್ಷಣಭಂಗುರೈಃ ।**
**ಯನ್ನೋಪಕುರ್ಯಾದಸ್ವಾರ್ಥೈಃ ಮರ್ತ್ಯಃ ಸ್ವಜ್ಞಾತಿವಿಗ್ರಹೈಃ ।।೧೦।।**

**ಅಹೋ ದೈನ್ಯಂ** ಅಯ್ಯೋ ದುಃಖವು **ಅಹೋ ಕಷ್ಟಂ** ಅಯ್ಯೋ ಕಷ್ಟವು **ಯತ್** ಏಕೆಂದರೆ **ಮರ್ತ್ಯಃ** ಮರಣಶೀಲನಾದ ಮಾನವನು **ಪಾರಕ್ಯೈಃ** ನಾಯಿ-ನರಿಗಳ ಪಾಲಾಗುವ **ಕ್ಷಣಭಂಗುರೈಃ** ಅನಿತ್ಯಗಳಾದ **ಅಸ್ವಾರ್ಥೈಃ** ತನಗೆ ಉಪಯೋಗವಿಲ್ಲದ ಪರರಿಗಾಗಿಯೇ ಇರುವ **ಸ್ವಜ್ಞಾತಿವಿಗ್ರಹೈಃ** ತನ್ನ ಮಕ್ಕಳೇ ಮೊದಲಾದವದರಿಂದ ಮತ್ತು ತನ್ನ ದೇಹದಿಂದ **ನ ಉಪಕುರ್ಯಾತ್** ಉಪಕಾರ ಮಾಡದಿರುವನು. ಇದು ಅತ್ಯಂತ ದುಃಖದಾಯಕ. ಅಥವಾ **ಸ್ವಜ್ಞಾತಿವಿಗ್ರಹೈಃ** ತಮ್ಮವರ ಜಗಳ ನಿಮಿತ್ತ **ಪಾರಕ್ಯೈಃ** ಶತ್ರುಗಳ ಸಂಬಂಧಿಯಾದ ಹೀಗೂ ಅರ್ಥ. **ಕ್ಷಣಭಂಗುರೈಃ** ಉತ್ಸವಗಳ ಯಾವುಗಳಿಂದ ನಾಶವಾದವೋ ಹೀಗೂ ಅರ್ಥ. ಇವನು ನಮಗೆ




ಉಪಕಾರಮಾಡುವದಿಲ್ಲವೆಂದು ಇವನ ಜ್ಞಾತಿಗಳೇ ಇವನ ಉತ್ಸವಗಳನ್ನು ನಾಶಗೊಳಿಸುವರು ಎಂದು ಭಾವ. ||೧೦||

**ಶ್ರೀಶುಕ ಉವಾಚ –**

> **ಏವಂ ಕೃತವ್ಯವಸಿತೋ ದಧ್ಯಙ್ ಆಥರ್ವಣಸ್ತನುಮ್ ।**
> **ಪರೇ ಭಗವತಿ ಬ್ರಹ್ಮಣ್ಯಾತ್ಮಾನಂ ಸನ್ನಯನ್ ಜಹೌ ||೧೧||**

**ಏವಂ** ಹೀಗೆ **ಕೃತವ್ಯವಸ್ಥಿತಃ** ನಿಶ್ಚಯ ಮಾಡಿಕೊಂಡ **ಆಥರ್ವಣಃ ದಧ್ಯಙ್** ಅಥರ್ವಣರಾದ ದಧೀಚಿಗಳು **ಪರೇ** ಸರ್ವೋತ್ತಮನಾದ **ಭಗವತಿ** ಸಮಗ್ರೈಶ್ವರ್ಯ-ವಂತನಾದ **ಬ್ರಹ್ಮಣಿ** ಗುಣಪೂರ್ಣನಾದ ಶ್ರೀಹರಿಯಲ್ಲಿ **ಆತ್ಮಾನಂ** ಮನಸ್ಸನ್ನು **ಸನ್ನಯನ್** ಚೆನ್ನಾಗಿ ಸೇರಿಸುವವರಾಗಿ ದೇಹವನ್ನು ಸಮರ್ಪಿಸಿ **ತನುಂ** ದೇಹವನ್ನು **ಜಹೌ** ಬಿಟ್ಟರು.

ಹಿಂದೆ ಗಾತ್ರಂ ಅಂಗಾನಿ ಎಂದು ಬಂದಿದ್ದರೂ ತನುಂ ಎಂದು ಸ್ತ್ರೀಲಿಂಗ ನಿರ್ದೇಶದಿಂದ ಸ್ತ್ರೀಯರನ್ನು ಬಿಡುವುದೇನು ಮಹಾ? ಎಂದು ಅಲಕ್ಷ್ಯತೆಯನ್ನು ಧ್ವನಿತಪಡಿಸುವರು. ||೧೧||

> **ಯತಾಕ್ಷಾಸುಮನೋಬುದ್ಧಿಸ್ತತ್ತ್ವದೃಗ್ ಧ್ವಸ್ತಬಂಧನಃ ।**
> **ಆಸ್ಥಿತಃ ಪರಮಂ ಯೋಗಂ ನ ದೇಹಂ ಬುಬುಧೇ ಗತಮ್ ||೧೨||**

**ಯತಾಕ್ಷಾಸುಮನೋಬುದ್ಧಿಃ** ನಿಯಮಿತವಾದ ಇಂದ್ರಿಯಗಳು ಪ್ರಾಣ, ಮನಸ್ಸು, ಮತ್ತು ಬುದ್ಧಿಗಳುಳ್ಳ, **ತತ್ತ್ವದೃಕ್** ಭಗವಂತನನ್ನು ಕಂಡುಕೊಂಡ **ಧ್ವಸ್ತಬಂಧನಃ** ಸಂಸಾರವನ್ನು ಕಳೆದುಕೊಂಡ **ಪರಮಂ ಯೋಗಂ ಆಸ್ಥಿತಃ** ಎಲ್ಲಿ ಎಲ್ಲಿ ಯಾವುಯಾವುದಕ್ಕೆ ಲಯ ಚಿಂತನ ಮಾಡುವನೋ ಪ್ರಾಣಾದಿಗಳ ಪ್ರಗ್ರಹ ಉಪಾಯ ಮಾಡುವನೋ ಅದನ್ನು ಹೊಂದಿದವನು **ಗತಂ ದೇಹಂ** ದೇಹ ಹೋದುದನ್ನು **ನ ಬುಬುಧೇ** ತಿಳಿಯಲಿಲ್ಲ.

**ಗತಂ** ತನ್ನಲ್ಲಿ (ಮನಸ್ಸಿನಲ್ಲಿ) ಪ್ರತಿಬಿಂಬಿತನಾದ **ನದೇಹಂ ನದೇ** ಕ್ಷೀರಸಮುದ್ರದಲ್ಲಿ **ಈಹಾ** ಚೇಷ್ಟೆಯುಳ್ಳ, ಕ್ಷೀರಶರಧಿವಿಹಾರನಾದ ಶ್ರೀಹರಿಯನ್ನು ಮಾತ್ರ **ಬುಬುಧೇ** ತಿಳಿದನು. ಹೀಗೂ ಅರ್ಥ. ||೧೨||

**ಅಥೇಂದ್ರೋ ವಜ್ರಮುದ್ಯಮ್ಯ ನಿರ್ಮಿತಂ ವಿಶ್ವಕರ್ಮಣಾ ।**
**ಮುನೇಸ್ತ್ವಸ್ಥಿಭಿರುತ್ಸಿಕ್ತೋ ಭಗವತ್ತೇಜಸಾನ್ವಿತಃ ॥೧೩॥**

**ಅಥ** ದಧೀಚಿಗಳು ಯೋಗದಿಂದಲೇ ದೇಹ ತ್ಯಾಗ ಮಾಡಿದ ನಂತರ **ವಿಶ್ವಕರ್ಮಣಾ** ವಿಶ್ವಕರ್ಮನಿಂದ **ಮುನೇಃ** ಆ ಋಷಿಯ **ಅಸ್ಥಿಭಿಃ** ಮೂಳೆಗಳಿಂದಲೇ **ನಿರ್ಮಿತಂ** ತಯಾರಿಸಿದ **ವಜ್ರಂ** ವಜ್ರಾಯುಧವನ್ನು **ಉದ್ಯಮ್ಯ** ಕೈಯಲ್ಲಿ ಎತ್ತಿ ಹಿಡಿದು **ಉತ್ಸಿಕ್ತಃ** ಹೆಚ್ಚು ಬಲಿಷ್ಠರಾಗಿ **ಭಗವತ್ತೇಜಸಾ** ಶ್ರೀಹರಿಯ ಸಾನ್ನಿಧ್ಯವಿಶೇಷದಿಂದ **ಅನ್ವಿತಃ** ಕೂಡಿದವರಾಗಿ **ಅಶೋಭತ** ಎಂದು ಮುಂದಿನ ಶ್ಲೋಕದಿಂದ ಅನ್ವಯ. ॥೧೩॥

**ಯುತೋ ದೇವಗಣೈಃ ಸರ್ವೈರ್ಗಜೇಂದ್ರೋಪರ್ಯಶೋಭತ ।**
**ಸ್ತೂಯಮಾನೋ ಮುನಿಗಣೈಸ್ತ್ರೈಲೋಕ್ಯಂ ಹರ್ಷಯನ್ನಿವ ॥೧೪॥**

**ದೇವಗಣೈಃ** ದೇವತೆಗಳ ಸಮೂಹದಿಂದ **ಯುತಃ** ಕೂಡಿದವನಾಗಿ **ಮುನಿಗಣೈಃ** ಋಷಿಗಳ ಸಮೂಹದಿಂದ **ಸ್ತೂಯಮಾನಃ** ಸ್ತೋತ್ರ ಮಾಡಲ್ಪಡುವವನಾಗಿ **ತ್ರೈಲೋಕ್ಯಂ** ಮೂರು ಲೋಕದಲ್ಲಿರುವ ಜನರನ್ನು **ಹರ್ಷಯನ್ನಿವ** ಸಂತೋಷಪಡಿಸುವಂತೆ **ಗಜೇಂದ್ರೋಪರಿ** ಐರಾವತದ ಮೇಲೆ **ಅಶೋಭತ** ಶೋಭಿಸಿದನು. ॥೧೪॥

'ಪೂರಣಗುಣಸುಹಿತಾರ್ಥಸದವ್ಯಯತವ್ಯ' ಎಂಬಲ್ಲಿ ಪೂರ್ವೋತ್ತರ ಸಾಹಚರ್ಯದಿಂದ ಕೃದವ್ಯಯಕ್ಕೇನೇ ಸಮಾಸನಿಷೇಧ ಮಾಡಿದ್ದರಿಂದ ಗಜೇಂದ್ರೋಪರಿ ಎಂದಾಗುವುದು. ತೇನ ತದುಪರೀತ್ಯಾದಿ ಸಿದ್ಧಂ ಇತಿ ರಕ್ಷಿತ ಇತ್ಯುಕ್ತೇಃ ।

**ವೃತ್ರಮಭ್ಯದ್ರವಚ್ಛತ್ರುಮಸುರಾನೀಕಯೂಥಪೈಃ ।**
**ಪರ್ಯಸ್ತಮೋಜಸಾ ರಾಜನ್ ಕ್ರುದ್ಧೋ ರುದ್ರ ಇವಾಂತಕಮ್ ॥೧೫॥**

**ರಾಜನ್** ಪರೀಕ್ಷಿತನೇ **ಸಃ** ಆ ಇಂದ್ರದೇವರು **ಕ್ರುದ್ಧಃ** ಕೋಪಗೊಂಡು **ರುದ್ರಃ** ರುದ್ರದೇವರು **ಅಂತಕಂ ಇವ** ಯಮನನ್ನು ಅಟ್ಟಿಸಿಕೊಂಡು ಹೋದಂತೆ **ಅಸುರಾನೀಕಯೂಥಪೈಃ** ದೈತ್ಯ ಸೈನ್ಯದ ನಾಯಕರುಗಳಿಂದ **ಪರ್ಯಸ್ತಂ** ಸುತ್ತುವರೆಯಲ್ಪಟ್ಟಿರುವ **ಶತ್ರುಂ** ವೈರಿಯಾದ **ವೃತ್ರಂ** ವೃತ್ರಾಸುರನನ್ನು **ಓಜಸಾ** ಸಾಮರ್ಥ್ಯದಿಂದ **ಅಭ್ಯದ್ರವತ್** ಎದುರಾಗಿ ನುಗ್ಗಿದನು. ॥೧೫॥

ಮೃತ್ಯುವೆನಿಸುವ ಅಂತಕನನ್ನು ಜಯಿಸಿದ್ದಕ್ಕೆ ರುದ್ರನಿಗೆ ಮೃತ್ಯುಂಜಯ ಎಂದು ಹೆಸರು. ಸ್ಕಾಂದಪುರಾಣದ ಸನತ್ಕುಮಾರಸಂಹಿತೆಯ ಸಹ್ಯಾದ್ರಿಖಂಡದಲ್ಲಿ ಹೀಗೆ ಹೇಳಿದೆ.

**ಅಪಶ್ಯಮಂತಿಕೇ ಕಾಲೇ ತಂ ಜಿಘೃಕ್ಷಂತಮೋಜಸಾ ।**
**ಸ ಪಾಶಪರುಶುವ್ಯಗ್ರಂ ಖಂಡಶೂಲಧನುರ್ಧರಮ್ ॥**

**ಮದಾಜ್ಞೋಲ್ಲಂಘನಂ ಪುತ್ರ ದೃಷ್ಟ್ವಾ ಕ್ರೋಧಮುಪೇಯಿವಾನ್ ।**
**ಮಮ ಕ್ರೋಧಾಗ್ನಿನಾ ಕಾಲೋ ಭಸ್ಮಶೇಷೋ ಬಭೂವ ಹ ॥**

ಯುದ್ಧದ ಕಾಲದೇಶಗಳನ್ನು ಹೇಳುತ್ತಾರೆ-

**ತತಃ ಸುರಾಣಾಮಸುರೈ ರಣಃ ಪರಮದಾರುಣಃ ।**
**ತ್ರೇತಾಮುಖೇ ನರ್ಮದಾಯಾಮಾಸೀದ್ ವೈ ಪ್ರಥಮೇಽಂತರೇ ॥೧೬॥**

**ತತಃ** ಅನಂತರ **ಸುರಾಣಾಂ** ದೇವತೆಗಳಿಗೆ **ಅಸುರೈಃ** ಅಸುರರೊಡನೆ **ಅಂತರೇ** ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದಲ್ಲಿ **ಪ್ರಥಮೇ** ಮೊದಲನೆಯ ನಾಲ್ಕು ಯುಗಗಳಲ್ಲಿ **ತ್ರೇತಾಮುಖೇ** ತ್ರೇತಾಯುಗದ ಪ್ರಾರಂಭದಲ್ಲಿ **ನರ್ಮದಾಯಾಂ** ನರ್ಮದಾತೀರದಲ್ಲಿ **ಪರಮದಾರುಣಃ** ಬಹಳ ಭಯಂಕರವಾದ **ರಣಃ** ಯುದ್ಧವು **ಆಸೀತ್** ಆಯಿತು **ವೈ** ಶಾಸ್ತ್ರಸಿದ್ಧ.

ಇದು ಮೊದಲನೇ ಯುದ್ಧ. ವೃತ್ರನ ಮರಣ ಕಾಲದಲ್ಲಿ ಎರಡನೆ ಯುದ್ಧ ಸಮುದ್ರ ತೀರದಲ್ಲಿ ನಡೆಯಿತು ಎಂಬ ವಿಶೇಷವನ್ನು ಪುರಾಣಾಂತರದಿಂದ ತಿಳಿಯಬೇಕು.

**ರುದ್ರೈರ್ವಸುಭಿರಾದಿತ್ಯೈರಶ್ವಿಭ್ಯಾಂ ಪಿತೃವಹ್ನಿಭಿಃ ।**
**ಮರುದ್ಭಿರ್ಋಭುಭಿಃ ಸಾಧ್ಯೈರ್ವಿಶ್ವೇದೇವೈರ್ಮರುತ್ಪತಿಮ್ ॥೧೭॥**

**ದೃಷ್ಟ್ವಾ ವಜ್ರಧರಂ ಶಕ್ರಂ ರೋಚಮಾನಂ ಸ್ವಯಾ ಶ್ರಿಯಾ ।**
**ನಾಮೃಷ್ಯನ್ನಸುರಾ ರಾಜನ್ ಮೃಧೇ ವೃತ್ರಪುರಸ್ಸರಾಃ ॥೧೮॥**

**ರಾಜನ್** ಪರೀಕ್ಷಿತನೇ **ವೃತ್ರಪುರಸ್ಸರಾಃ** ವೃತ್ರನೇ ಮೊದಲಾದ ಅಸುರರು **ಮೃಧೇ** ಯುದ್ಧದಲ್ಲಿ **ರುದ್ರೈಃ** ಏಕಾದಶರುದ್ರರಿಂದಲೂ **ವಸುಭಿಃ** ಅಷ್ಟವಸುಗಳಿಂದಲೂ **ಆದಿತ್ಯೈಃ** ದ್ವಾದಶಾದಿತ್ಯರಿಂದಲೂ **ಅಶ್ವಿಭ್ಯಾಂ** ಇಬ್ಬರು ಅಶ್ವಿನೀದೇವತೆಗಳಿಂದಲೂ **ಪಿತೃವಹ್ನಿಭಿಃ**

ಪಿತೃಗಳಿಂದಲೂ ಅಗ್ನಿಯಿಂದಲೂ **ಮರುದ್ಭಿಃ** ನಲವತ್ತೊಂಭತ್ತು ಮರುತ್ತರುಗಳಿಂದಲೂ **ಋಭುಭಿಃ** ಋಭುಗಳಿಂದಲೂ **ಸಾಧ್ಯೈಃ** ಸಾಧ್ಯರಿಂದಲೂ **ವಿಶ್ವೇದೇವೈಃ** ವಿಶ್ವೇದೇವತೆಗಳಿಂದಲೂ ಕೂಡಿಕೊಂಡು **ಸ್ವಯಾ ಶ್ರಿಯಾ** ತನ್ನ ಕಾಂತಿಯಿಂದ **ರೋಚಮಾನಂ** ಪ್ರಕಾಶಿಸುವ **ಮರುತ್ಪತಿಂ** ಮರುದ್ಗಣ ಪಾಲಕನಾದ **ವಜ್ರಧರಂ** ವಜ್ರಾಯುಧವನ್ನು ಧರಿಸಿದ **ಶಕ್ರಂ** ಇಂದ್ರದೇವರನ್ನು **ದೃಷ್ಟ್ವಾ** ನೋಡಿ **ನ ಅಮೃಷ್ಯನ್** ಸಹಿಸಲಿಲ್ಲ. ।।೧೭-೧೮।।

**ನಮುಚಿಃ ಶಂಬರೋಽನರ್ವಾ ದ್ವಿಮೂರ್ಧಾ ವೃಷಭೋಽಂಬರಃ ।**
**ಹಯಗ್ರೀವಃ ಶಂಕುಶಿರಾ ವಿಪ್ರಚಿತ್ತಿರಯೋಮುಖಃ ।।೧೯।।**

**ಪುಲೋಮಾ ವೃಷಪರ್ವಾ ಚ ಪ್ರಹೇತಿರ್ಹೇತಿರುತ್ಕಚಃ ।**
**ವ್ಯೋಮಕೇಶೋ ವಿರೂಪಾಕ್ಷಃ ಕಪಿಲೋಽಥ ವಿಭಾವಸುಃ ।।೨೦।।**

**ಇಲ್ವಲೋ ಬಲ್ವಲಶ್ಚೈವ ದಂದಶೂಕೋ ವೃಷಧ್ವಜಃ ।**
**ಕಾಲನಾಭೋ ಮಹಾನಾಭೋ ಭೂತಸಂತಾಪನೋ ವೃಕಃ ।।೨೧।।**

**ದೈತೇಯಾ ದಾನವಾ ಯಕ್ಷಾ ರಕ್ಷಾಂಸಿ ಚ ಸಹಸ್ರಶಃ ।**
**ಸುಮಾಲಿಮಾಲಿಪ್ರಮುಖಾಃ ಕಾರ್ತಸ್ವರಪರಿಚ್ಛದಾಃ ।।೨೨।।**

**ಪ್ರತಿಷಿಧ್ಯೇಂದ್ರಸೇನಾಗ್ರ್ಯಂ ಮೃತ್ಯೋರಪಿ ದುರಾಸದಮ್ ।**
**ಅಭ್ಯದ್ರವನ್ನಸಂಭೀತಾಃ ಸಿಂಹನಾದೇನ ದುರ್ಮದಾಃ ।।೨೩।।**

**ದುರ್ಮದಾಃ** ಮತ್ತರಾದ **ಕಾರ್ತಸ್ವರಪರಿಚ್ಛದಾಃ** ಬಂಗಾರದ (ಕಥಾದಿಗಳಿಂದ ಕೂಡಿದ) ಆಭರಣಗಳಿಂದ ಅಲಂಕೃತರಾದ ನಮುಚಿ, ಶಂಬರ, ಅನರ್ವ, ದ್ವಿಮೂರ್ಧ, ವೃಷಭ, ಅಂಬರ, ಹಯಗ್ರೀವ, ಶಂಕುಶಿರ, ವಿಪ್ರಚಿತ್ತಿ, ಅಯೋಮುಖ, ಪುಲೋಮ, ವೃಷಪರ್ವ, ಪ್ರಹೇತಿ, ಹೇತಿ, ಉತ್ಕಚ, ವ್ಯೋಮಕೇಶ, ವಿರೂಪಾಕ್ಷ, ಕಪಿಲ, ವಿಭಾವಸು, ಇಲ್ವಲ, ಬಲ್ವಲ, ದಂದಶೂಕ, ವೃಷಧ್ವಜ, ಕಾಲನಾಭ, ಮಹಾನಾಭ, ಭೂತಸಂತಾಪನ, ವೃಕ, ಮೊದಲಾದ ದೈತ್ಯರು ದಾನವರು ಯಕ್ಷರೂ ಸಾವಿರಾರು ರಾಕ್ಷಸರೂ ಸುಮಾಲಿ, ಮಾಲಿ ಮೊದಲಾದವರು **ಅಸಂಭೀತಾಃ** ಹೆದರದೇ **ಮೃತ್ಯೋಃ ಅಪಿ** ಮೃತ್ಯುವಿಗೂ **ದುರಾಸದಂ** ಹೊಂದಲು ಅಸಾಧ್ಯವಾದ **ಇಂದ್ರಸೇನಾಗ್ರ್ಯಂ** ಇಂದ್ರನ ಸೈನ್ಯಕ್ಕೆ ಅಧಿಪತಿಯಾದ ಸ್ಕಂದನನ್ನು,

ಅಥವಾ ಶ್ರೇಷ್ಠವಾದ ಇಂದ್ರನ ಸೈನ್ಯವನ್ನು **ಪ್ರತಿಷಿದ್ಧ್ಯ** ತಡೆದು **ಸಿಂಹನಾದೇನ** ಸಿಂಹಗರ್ಜನೆ ಮಾಡುತ್ತ **ಅಭ್ಯದ್ರವನ್** ಮೇಲೆರಗಿದರು. ||೧೯-೨೩||

**ಗದಾಸಿಪರಿಘೈರ್ಬಾಣೈಃ ಪಾಶಮುದ್ಗರತೋಮರೈಃ ।**
**ಶೂಲೈಃ ಪರಶ್ವಧೈಃ ಖಡ್ಗೈಃ ಶತಘ್ನೀಭಿರ್ಭುಶುಂಡಿಭಿಃ ।**
**ಸರ್ವತೋಽವಾಕಿರನ್ ಅಸ್ತ್ರೈಃ ಶಸ್ತ್ರೈಶ್ಚ ವಿಬುಧರ್ಷಭಾನ್ ||೨೪||**

**ತೇ** ಆ ದೈತ್ಯರು **ಗದಾಸಿಪರಿಘೈಃ** ಗದೆ, ಕತ್ತಿ, ಕಬ್ಬಿಣದ ಕಟ್ಟು ಹಾಕಿದ ಆಯುಧಗಳಿಂದ **ಬಾಣೈಃ** ಬಾಣಗಳಿಂದ **ಪಾಶಮುದ್ಗರತೋರಣೈಃ** ಬಂಧಿಸುವ ಹಗ್ಗ, ಮುದ್ಗರ, ತೋಮರಗಳಿಂದ **ಶೂಲೈಃ** ಶೂಲಗಳಿಂದ **ಪರಶ್ವಧೈಃ** ಕೊಡಲಿಗಳಿಂದ **ಖಡ್ಗೈಃ** ಖಡ್ಗಗಳಿಂದ **ಶತಘ್ನೀಭಿಃ** ನೂರು ಜನರನ್ನು ಕೊಲ್ಲುವ ಗದೆಗಳಿಂದ **ಭುಶುಂಡಿಭಿಃ** ಭುಶುಂಡಿಗಳಿಂದ **ಅಸ್ತ್ರೈಃ ಶಸ್ತ್ರೈಃ** ಇವೇ ಮೊದಲಾದ ಅಸ್ತ್ರ-ಶಸ್ತ್ರಗಳಿಂದ **ಸರ್ವತಃ** ಸುತ್ತಲೂ **ವಿಬುಧರ್ಷಭಾನ್** ದೇವತಾಶ್ರೇಷ್ಠರನ್ನು **ಅವಾಕಿರನ್** ಮಳೆಗರೆದರು.

ಶತಘ್ನಿಯು ನಾಲ್ಕು ಗೇಣು ಇರುವ ಕಬ್ಬಿಣದ ಮೊಳೆಗಳುಳ್ಳ ಗುಂಡಗಿನ ಸಂಚಿಕೆ, ಭುಶುಂಡಿಯು ಎಲ್ಲ ಕಡೆಯಲ್ಲಿ ಹೊಲೆದ ಮೊಳೆಗಳುಳ್ಳದ್ದು. 'ಶತಘ್ನೀ ತು ಚತುರ್ಹಸ್ತಾಲ್ಲೋಹಕಂಟಕಸಂಚಿಕಾ । ಭುಶುಂಡೀ ಸರ್ವತೋ ಲೋಹಕಂಟಕಾ-ನುಕ್ರಮಾತ್ರತಾ' ಎಂದು ಅಭಿದಾನವಿದೆ. ||೨೪||

**ನ ತೇಽದೃಶ್ಯಂತ ಸಂಛನ್ನಾಃ ಶರಜಾಲೈಃ ಸಮಂತತಃ ।**
**ಪುಂಖಾನುಪುಂಖೈಃ ಪತಿತೈಃ ಪ್ರಾವೃಷೀವ ನಭೋ ಘನೈಃ ||೨೫||**

**ಸಮಂತತಃ** ಎಲ್ಲ ಕಡೆಯಿಂದಲೂ **ಪತಿತೈಃ** ಬಿದ್ದ **ಪುಂಖಾನುಪುಂಖೈಃ** ಒಂದರ ಬುಡಕ್ಕೆ ಮತ್ತೊಂದು ಸೇರಿಕೊಂಡಿರುವ **ಶರಜಾಲೈಃ** ಬಾಣಗಳ ಸಮೂಹದಿಂದ **ಸಂಛನ್ನಾಃ** ಮುಚ್ಚಿಹೋದ **ತೇ** ಆ ದೇವತೆಗಳು **ಪ್ರಾವೃಷಿ** ಮಳೆಗಾಲದಲ್ಲಿ **ಘನೈಃ** ಮೋಡಗಳಿಂದ **ಸಂಛನ್ನಂ** ಮುಚ್ಚಿಹೋದ **ನಭ ಇವ** ಆಕಾಶದಂತೆ **ನ ಅದೃಶ್ಯಂತ** ಕಾಣಲಿಲ್ಲ. ||೨೫||

**ನ ತೇ ಶಸ್ತಾಸ್ತ್ರಬಾಣೌಘಾ ವ್ಯಾಸೇದುಃ ಸುರಸೈನಿಕಾನ್ ।**
**ಛಿನ್ನಾಃ ಸಿದ್ಧಪಥೇ ದೇವೈರ್ಲಘುಹಸ್ತೈಃ ಸಹಸ್ರಧಾ ||೨೬||**

**ಲಘುಹಸ್ತೈಃ** ವೇಗವಾಗಿ ಗುರಿಯಿಟ್ಟು ಹೊಡೆಯುವ ಕೈಚಳಕ ಉಳ್ಳ ದೇವತೆಗಳಿಂದ **ಸಿದ್ಧಪಥೇ** ಆಕಾಶಮಾರ್ಗದಲ್ಲಿ ದೇವತೆಗಳಿಗೆ ಬಂದು ತಾಕುವ ಮುನ್ನವೇ ಮಧ್ಯಮಾರ್ಗದಲ್ಲಿಯೇ **ಸಹಸ್ರಧಾ** ಸಾವಿರಾರು ಚೂರುಗಳಾಗಿ **ಛಿನ್ನಾಃ ಸಂತಃ** ಕತ್ತರಿಸಲ್ಪಟ್ಟವುಗಳಾಗಿ **ತೇ** ಆ ದೈತ್ಯರು ಪ್ರಯೋಗಿಸಿದ **ಶಸ್ತ್ರಾಸ್ತ್ರಬಾಣೌಘಾಃ** ಶಸ್ತ್ರ-ಅಸ್ತ್ರ ಮತ್ತು ಬಾಣಗಳ ಸಮೂಹಗಳು **ಸುಸೈನಿಕಾನ್** ದೇವತೆಗಳ ಸೈನಿಕರನ್ನು **ನ ವ್ಯಾಸೇದುಃ** ಬಂದು ಸೇರಲಿಲ್ಲ, ದೇವತೆಗಳಿಗೆ ತಗುಲಲಿಲ್ಲವೆಂದರ್ಥ. ।।೩೬।।

**ಅಥ ಕ್ಷೀಣಾಸ್ತ್ರಶಸ್ತ್ರೌಘಾ ಗಿರಿಶೃಂಗದ್ರುಮೋಪಲೈಃ ।**
**ಅಭ್ಯವರ್ಷನ್ ಸುರಬಲಂ ಚಿಚ್ಛಿದುಸ್ತಾಂಶ್ಚ ಪೂರ್ವವತ್ ।।೨೭।।**

**ಅಥ** ಶಸ್ತ್ರಾಸ್ತ್ರಗಳು ವ್ಯರ್ಥವಾದ ಮೇಲೆ **ಕ್ಷೀಣಾಸ್ತ್ರಶಸ್ತ್ರೌಘಾಃ** ಕ್ಷೀಣವಾದ ಶಸ್ತ್ರಾಸ್ತ್ರಗಳ ಸಮೂಹ ಉಳ್ಳ ಆ ದೈತ್ಯರು **ಸುರಬಲಂ** ದೇವತಾಸೈನ್ಯವನ್ನು **ಗಿರಿಶೃಂಗದ್ರುಮೋಪಲೈಃ** ಬೆಟ್ಟಗಳ ಕೊಡುಗಲ್ಲುಗಳು, ಹೆಮ್ಮರಗಳು, ಬಂಡೆಗಳಿಂದ **ಅಭ್ಯವರ್ಷನ್** ಮಳೆಸುರಿಸಿದರು. **ದೇವಾಃ** ದೇವತೆಗಳು **ಪೂರ್ವವತ್** ಹಿಂದಿನಂತೆಯೇ **ತಾನ್ ಚ** ಅವುಗಳನ್ನೂ **ಚಿಚ್ಛಿದುಃ** ಕತ್ತರಿಸಿದರು. ।।೨೭।।

**ತಾನಕ್ಷತಾನ್ ಸ್ವಸ್ತಿಮತೋ ನಿಶಮ್ಯ**
**ಶಸ್ತ್ರಾಸ್ತ್ರಪೂಗೈರಥ ವೃತ್ರನಾಥಾಃ ।**
**ದ್ರುಮೈರ್ದೃಷದ್ಭಿರ್ವಿವಿಧಾದ್ರಿಶೃಂಗೈ-**
**ರಥಾಕ್ಷಿಪಂಸ್ತತ್ರ ಸುರೇಂದ್ರಸೈನಿಕಾನ್ ।।೨೮।।**

**ಅಥ** ಮತ್ತು **ವೃತ್ರನಾಥಾಃ** ವೃತ್ರನೇ ಒಡೆಯನಾಗಿ ಉಳ್ಳ ದೈತ್ಯರು **ತಾನ್** ಆ ಇಂದ್ರಸೈನಿಕರನ್ನು **ದ್ರುಮೈಃ** ಮರಗಳಿಂದ **ದೃಷದ್ಭಿಃ** ಕಲ್ಲುಗಳಿಂದಲೂ **ವಿವಿಧಾದ್ರಿಶೃಂಗೈಃ** ಬೆಟ್ಟಗಳ ಕೋಡುಗಲ್ಲುಗಳಿಂದಲೂ **ಅಕ್ಷತಾನ್** ಗಾಯಗೊಳ್ಳದ **ಸ್ವಸ್ತಿಮತಃ** ಕ್ಷೇಮದಿಂದಿರುವವರನ್ನು **ನಿಶಮ್ಯ** ನೋಡಿ **ಅಥ** ಮತ್ತೆ **ತತ್ರ** ಯುದ್ಧದಲ್ಲಿ **ಸುರೇಂದ್ರಸೈನಿಕಾನ್** ದೇವತೆಗಳ ಸೈನಿಕರನ್ನು **ಶಸ್ತ್ರಾಸ್ತ್ರಪೂಗೈಃ** ಶಸ್ತ್ರಾಸ್ತ್ರಸಮೂಹಗಳಿಂದ **ಅಕ್ಷಿಪನ್** ಹೊಡೆದರು. ।।೨೮।।

**ಸರ್ವೇ ಪ್ರಯಾಸಾ ಅಭವನ್ವಿಮೋಘಾಃ**
**ಕೃತಾಃ ಕೃತಾ ದೇವಗಣೇಷು ದೈತ್ಯೈಃ ।**

**ಕೃಷ್ಣಾನುಕೂಲೇಷು ಯಥಾ ಮಹತ್ಸು**
**ಕ್ಷುದ್ರೈಃ ಪ್ರಯುಕ್ತಾರುಶತೀರುಗ್ರವಾಚಃ ॥೨೯॥**

**ದೈತ್ಯೈಃ** ದೈತ್ಯರಿಂದ **ದೇವಗಣೇಷು** ದೇವತೆಗಳ ಸಮೂಹಗಳ ಮೇಲೆ **ಕೃತಾಃ ಕೃತಾಃ** ಮತ್ತೆ ಮತ್ತೆ ಮಾಡಲ್ಪಟ್ಟ **ಸರ್ವೇ** ಎಲ್ಲ **ಪ್ರಯಾಸಾಃ** ಅವರನ್ನು ಹೊಡೆಯುವ ಪ್ರಯತ್ನಗಳು **ಯಥಾ** ಹೇಗೆ **ಕೃಷ್ಣಾನುಕೂಲೇಷು** ಶ್ರೀಕೃಷ್ಣನು ಅನುಗ್ರಹಾಭಿಮುಖನಾಗಿರುವ **ಮಹತ್ಸು** ಮಹನೀಯರ ವಿಷಯದಲ್ಲಿ, (ದುರ್ವಾಸಾದಿ ವಿಷಯದಲ್ಲಿ) **ಕ್ಷುದ್ರೈಃ** ನೀಚರಿಂದ, (ಹಂಸ-ಡಿಭಿಕಾದಿಗಳಿಂದ) **ಪ್ರಯುಕ್ತಾಃ** ಆಡಿದ **ರುಶತೀಃ** ಹಿಂಸ್ರಗಳಾದ ಮನಃಕ್ಷೋಭೆ ಉಂಟು ಮಾಡುವ **ಉಗ್ರವಾಚಃ** ಕಠಿಣಮಾತುಗಳು ತೊಂದರೆದಾಯಕಗಳಲ್ಲವೋ **ತಥಾ** ಹಾಗೆ **ವಿಮೋಘಾಃ** ಅತ್ಯಂತ ವ್ಯರ್ಥಗಳಾದವು.

**ತೇ ಸ್ವಪ್ರಯಾಸಂ ವಿತಥಂ ನಿರೀಕ್ಷ್ಯ**
**ಹರಾವಭಕ್ತಾ ಹತಯುದ್ಧದರ್ಪಾಃ ।**
**ಪಲಾಯನಾಯಾಜಿಮುಖೇ ವಿಸೃಜ್ಯ**
**ಪತಿಂ ಮನಸ್ತೇ ದಧುರಸ್ತಸಾರಾಃ ॥೩೦॥**

**ಸ್ವಪ್ರಯಾಸಂ** ತಮ್ಮ ಪ್ರಯತ್ನವೆಲ್ಲವೂ **ವಿತಥಂ** ವ್ಯರ್ಥವಾದುದನ್ನು **ನಿರೀಕ್ಷ್ಯ** ನೋಡಿ **ಹರೌ** ಶ್ರೀಹರಿಯಲ್ಲಿ **ಅಭಕ್ತಾಃ** ಸ್ವರೂಪತಃ ಭಕ್ತರಲ್ಲದ **ತೇ** ಪರಾಕ್ರಮಿಗಳೆಂದು ಪ್ರಸಿದ್ಧರಾದ ಆ ದೈತ್ಯರು **ಅಸ್ತಸಾರಾಃ** ಬಲಹೀನರಾಗಿ ಅದರಿಂದ **ಹತಯುದ್ಧದರ್ಪಾಃ** ಯುದ್ಧಮಾಡುವ ಅಹಂಕಾರ ಅಡಗಿದವರಾಗಿ **ಆಜಿಮುಖೇ** ಯುದ್ಧಾರಂಭದಲ್ಲಿ **ಪತಿಂ** ತಮ್ಮ ನಾಯಕನಾದ ವೃತ್ರಾಸುರನನ್ನು **ವಿಸೃಜ್ಯ** ಬಿಟ್ಟು **ಪಲಾಯನಾಯ** ಓಡಿ ಹೋಗಲು **ಮನಃ ದಧುಃ** ಮನಸ್ಸು ಮಾಡಿದರು. **ಹರಾವಭಕ್ತಾಃ** ಎಂದು ಅವರ ಪರಾಜಯಕ್ಕೆ ಕಾರಣವನ್ನು ಸೂಚಿಸಿರುವರು. ॥೩೦॥

**ವೃತ್ರೋಽಸುರಾಂಸ್ತಾನನುಗಾನ್ ಮನಸ್ವೀ**
**ಪ್ರಧಾವತಃ ಪ್ರೇಕ್ಷ್ಯ ಬಭಾಷ ಏತತ್ ।**
**ಪಲಾಯಿತಂ ಪ್ರೇಕ್ಷ್ಯ ಬಲಂ ಚ ಭಗ್ನಂ**
**ಭಯೇನ ತೀವ್ರೇಣ ವಿಹಸ್ಯ ವೀರಃ ॥೩೧॥**

**ವೀರಃ** ಪರಾಕ್ರಮಿಯಾದ **ಮನಸ್ವೀ** ಸ್ಥಿರವಾದ ಮನಸ್ಸುಳ್ಳ **ವೃತ್ರಃ** ವೃತ್ರಾಸುರನು **ಪ್ರಧಾವತಃ** ವೇಗವಾಗಿ ಓಡುತ್ತಿದ್ದ **ಅನುಗಾನ್** ತನ್ನ ಅನುಚರರಾದ **ತಾನ್ ಅಸುರಾನ್**

ಆ ವಿಪ್ರಚಿತ್ತಿ ಮುಂತಾದ ದೈತ್ಯರನ್ನು **ಪ್ರೇಕ್ಷ್ಯ** ನೋಡಿ ಅದಕ್ಕೂ ಮೊದಲೇ **ತೀವ್ರೇಣ ಭಯೇನ** ಅತಿಯಾದ ಭಯದಿಂದ **ಪಲಾಯಿತಂ** ಓಡಿ ಹೋಗಿದ್ದ **ಚ** ಮತ್ತು **ಭಗ್ನಂ** ಅಸ್ತವ್ಯಸ್ತವಾದ **ಬಲಂ** ಸೈನ್ಯವನ್ನು **ಪ್ರೇಕ್ಷ್ಯ** ನೋಡಿ **ವಿಹಸ್ಯ** ಗಹಗಹಿಸಿ ನಕ್ಕು **ಏತತ್** ಮುಂದೆ ಹೇಳುವ ಮಾತುಗಳನ್ನು **ಬಭಾಷೇ** ಆಡಿದನು. ॥೩೧॥

**ಕಾಲೋಪಪನ್ನಾಂ ರುಚಿರಾಂ ಮನಸ್ವಿನಾ-**
**ಮುವಾಚ ವಾಚಂ ಪುರುಷಪ್ರವೀರಃ ।**
**ಹೇ ವಿಪ್ರಚಿತ್ತೇ ನಮುಚೇ ಪುಲೋಮನ್**
**ಮಯಾನರ್ವನ್ ಶಂಬರ ಮೇ ಶೃಣುಧ್ವಮ್** ॥೩೨॥

**ಪುರುಷಪ್ರವೀರಃ** ಪುರುಷರಲ್ಲಿ ಅತ್ಯಂತ ವೀರನಾದ ವೃತ್ರಾಸುರನು **ಕಾಲೋಪಪನ್ನಾಂ** ಆ ಸಂದರ್ಭಕ್ಕನುಗುಣವಾದ **ಮನಸ್ವಿನಾಂ** ಪ್ರಶಸ್ತಮನಸ್ಕರಿಗೆ **ರುಚಿರಾಂ** ಮನೋಹರವಾದ **ವಾಚಂ** ಮಾತನ್ನು **ಉವಾಚ** ಹೇಳಿದನು. ಏನಂದರೆ ಅದನ್ನೇ ಎರಡುವರಿ ಶ್ಲೋಕದಿಂದ ಹೇಳುತ್ತಾರೆ. **ಹೇ ವಿಪ್ರಚಿತ್ತೇ** ವಿಪ್ರಚಿತ್ತಿಯೇ **ನಮುಚೇ** ನಮುಚಿಯೇ **ಪುಲೋಮನ್** ಪುಲೋಮನೇ **ಮಯ** ಮಯನೇ **ಅನರ್ವನ್** ಅನರ್ವನೇ **ಶಂಬರ** ಶಂಬರನೇ ನೀವು **ಮೇ** ನನ್ನ **ವಾಚಂ** ಮಾತನ್ನು **ಶೃಣುಧ್ವಂ** ಕೇಳಿರಿ. ॥೩೨॥

**ಜಾತಸ್ಯ ಮೃತ್ಯುರ್ಧ್ರುವ ಏಷ ಸರ್ವತಃ**
**ಪ್ರತಿಕ್ರಿಯಾ ಯಸ್ಯ ನ ಚೇಹ ಕ್ಲೃಪ್ತಾ ।**
**ಲೋಕೋ ಯಶಶ್ಚಾಥ ತತೋ ಯದಿ ಹ್ಯಮುಂ**
**ಕೋ ನಾಮ ಮೃತ್ಯುಂ ನ ವೃಣೀತ ಯುಕ್ತಮ್** ॥೩೩॥

**ಇಹ** ಈ ಲೋಕದಲ್ಲಿ **ಯಸ್ಯ** ಯಾವ ಮೃತ್ಯುವಿಗೆ **ಪ್ರತಿಕ್ರಿಯಾ** ಪರಿಹಾರವು **ನ ಚ ಕ್ಲೃಪ್ತಾ** ವ್ಯವಸ್ಥಿತವಾಗಿಲ್ಲವೋ **ಏಷಃ** ಅಂತಹ ಈ ಮೃತ್ಯುವು **ಜಾತಸ್ಯ** ಹುಟ್ಟಿದವನಿಗೆ **ಸರ್ವತಃ** ಎಲ್ಲ ಕಡೆಯಿಂದಲೂ **ಧ್ರುವಃ** ತಪ್ಪಿದ್ದಲ್ಲ. **ಅಥ ಯದಿ** ಒಂದು ವೇಳೆ ಅದರಿಂದ **ಲೋಕಃ** ಉತ್ತಮವಾದ ಸ್ವರ್ಗಲೋಕವು **ಯಶಃ ಚ** ಕೀರ್ತಿಯೂ **ಸ್ಯಾತಾಂ** ಬರುವುದೋ **ತತಃ** ಆಗ **ಕಃ** ಯಾವ ಕ್ಷತ್ರಿಯನಿಗೆ ಸಮಾನನಾದ ಯಾವನು ತಾನೇ **ಯುಕ್ತಂ** ಯುದ್ಧರಂಗದಲ್ಲಿ ಒದಗಿ ಬಂದ ಈ ಮೃತ್ಯುವನ್ನು **ನ ವೃಣೀತ** ಅಂಗೀಕರಿಸದಿರುವನು. ಮೃತ್ಯುವಂತೂ ತಪ್ಪಿದ್ದಲ್ಲ. ಆದ್ದರಿಂದ ಕೀರ್ತಿ ಮತ್ತು ಉತ್ತಮ ಲೋಕ ಸಿಗುವಂತಾದರೆ ಅಂತಹದನ್ನು ಬಿಡುವದು ದಡ್ಡತನವೆಂದು ಭಾವ. ॥೩೩॥

ಈ ಕಾರಣದಿಂದಲೂ ಯುದ್ಧದಲ್ಲಿ ಸಾವು ಪ್ರಶಸ್ತವೆಂದು ಹೇಳುವರು-

**ದ್ವೌ ಸಮ್ಮತಾವಿಹ ಮೃತ್ಯೂ ದುರಾಪೌ**
**ಯದ್ ಬ್ರಹ್ಮಸಂಧಾರಣಯಾ ಜಿತಾಸುಃ ।**
**ಕಲೇವರಂ ಯೋಗರತೋ ವಿಜಹ್ಯಾದ್**
**ಯದಗ್ರಣೀರ್ವೀರಶಯೇಽನಿವೃತ್ತಃ** ॥೩೪॥

॥ ಇತಿ ಶ್ರೀಮದ್ಭಾಗವತೇ ಷಷ್ಠಸ್ಕಂಧೇ ದಶಮೋಽಧ್ಯಾಯಃ ॥

**ಜಿತಾಸುಃ** ಪ್ರಾಣಾಯಾಮದಿಂದ ವಾಯುವನ್ನು ಜಯಿಸಿದ **ಯೋಗರತಃ** ಯೋಗಾಭ್ಯಾಸದಲ್ಲಿ ರತನಾದ ಯೋಗಿಯು **ಬ್ರಹ್ಮಸಂಧಾರಣಯಾ** ಶ್ರೀಹರಿಯ ಧ್ಯಾನದಿಂದ **ಕಲೇವರಂ** ದೇಹವನ್ನು **ಯತ್ ವಿಜಹ್ಯಾತ್** ಬಿಡುವದೆಂಬುದೇನುಂಟೋ ಅದು **ಅನಿವೃತ್ತಃ** ಯುದ್ಧದಲ್ಲಿ ಹಿಂದಕ್ಕೆ ಬರದ **ಅಗ್ರಣೀಃ** ವೀರಾಗ್ರೇಸರನು **ವೀರಶಯೇ** ಯುದ್ಧರಂಗದಲ್ಲಿ **ಕಲೇವರಂ** ದೇಹವನ್ನು **ವಿಜಹ್ಯಾತ್ ಇತಿ ಯತ್** ಬಿಡುವುದೇನಿದೆಯೋ ಅದೂ, ಹೀಗೆ **ದ್ವೌ** ಈ ಎರಡು **ಮೃತ್ಯೂ** ಮರಣಗಳು **ಇಹ** ಈ ಲೋಕದಲ್ಲಿ **ದುರಾಪೌ** ಬಹಳ ಪುಣ್ಯವಿದ್ದಲ್ಲಿ ಮಾತ್ರ ದೊರೆಯುವವು. ಸುಲಭವಲ್ಲವೆಂದು **ಸಮ್ಮತೌ** ಶಾಸ್ತ್ರಸಮ್ಮತವಾಗಿದೆ.

**ದ್ವಾವಿಮೌ ಪುರುಷೌ ಲೋಕೇ ಸೂರ್ಯಮಂಡಲಭೇದಿನೌ ।**
**ಪರಿವ್ರಾಡಾತ್ಮಯುಕ್ತಶ್ಚ ರಣೇ ಚಾಽಭಿಮುಖೋ ಹತಃ ॥**

ಎಂಬ ಸ್ಮೃತಿಯು ಈ ವಿಷಯವನ್ನು ತಿಳಿಸುತ್ತದೆ.

॥ ಇಲ್ಲಿಗೆ ಹತ್ತನೇ ಅಧ್ಯಾಯವು ಮುಗಿಯಿತು. ॥

★★★★★

# ಅಥ ಶ್ರೀಮದ್ಭಾಗವತೇ – ಷಷ್ಠಸ್ಕಂಧೇ

# ಏಕಾದಶೋಽಧ್ಯಾಯಃ

**ಅಧ್ಯಾಯಸಾರ**

ಯುದ್ಧದಿಂದ ಓಡಿ ಹೋಗುತ್ತಿರುವ ತನ್ನ ಸೈನ್ಯಕ್ಕೆ ಅನೇಕ ರೀತಿಯಲ್ಲಿ ವೃತ್ರಾಸುರ ಬೋಧನೆ ಮಾಡಿದ. ಆದರೂ ಓಡಿಹೋಗುತ್ತಿರುವ ದೈತ್ಯರು ನಿಲ್ಲಲೇ ಇಲ್ಲ. ಓಡಿ ಹೋಗುತ್ತಿರುವ ಆ ದೈತ್ಯರನ್ನು ದೇವತೆಗಳು ಹಿಂಬಾಲಿಸಿದರು. ಅವರನ್ನು ಹಿಡಿದು ಹಿಡಿದು ಯುದ್ಧಮಾಡಿದರು. ಇದನ್ನು ಕಂಡು ವೃತ್ರಾಸುರ ದೇವತೆಗಳಿಗೆ ಹೇಳಿದ.

ನೀವೆಲ್ಲ ಅದಿತಿಯ ಗರ್ಭದಿಂದ ಜನಿಸಿದವರು. ಶೂರರೆನಿಸಿದವರು. ಆದರೆ ನಿಮ್ಮ ಈ ಕಾರ್ಯದಲ್ಲಿ ಮಾತ್ರ ಶೌರ್ಯವು ಕಾಣುತ್ತಿಲ್ಲ. ಓಡಿಹೋಗುತ್ತಿರುವ ಯೋಧರ ಜೊತೆ ಯುದ್ಧ ಮಾಡುವುದು ಉಚಿತವಲ್ಲ. ನಿಮಗೆ ಧೈರ್ಯವಿದ್ದರೆ, ಸಂಗ್ರಾಮದಲ್ಲಿ ನಿಜವಾಗಿ ಶ್ರದ್ಧೆ ಇದ್ದರೆ ನನ್ನೊಡನೆ ಕಾದಾಡಿರಿ ಎಂದು ಭಯಂಕರವಾದ ಗರ್ಜನೆಯನ್ನು ಮಾಡಿದ. ವೃತ್ರನ ಗರ್ಜನೆಯನ್ನು ಕೇಳಿ ದೇವತೆಗಳೆಲ್ಲ ಧೈರ್ಯವನ್ನು ಕಳೆದುಕೊಂಡರು. ಆ ಗರ್ಜನೆಯನ್ನು ಕೇಳಿ ಲೋಕವೆಲ್ಲ ಮೂರ್ಛಿತವಾಯಿತು. ಆವಾಗ ವೃತ್ರಾಸುರನು ತನ್ನ ಕಾಲಿನ ಕೆಳಗೆ ದೇವತೆಗಳನ್ನು ಹಾಕಿ ಮರ್ದನ ಮಾಡಿದ.

ವೃತ್ರನ ಭಯಂಕರವಾದ ಯುದ್ಧವನ್ನು ನೋಡಿದ ಇಂದ್ರ. ಗದೆಯನ್ನು ಎಸೆದ. ಇಂದ್ರನು ಎಸೆದ ಗದೆಯನ್ನು ಎಡಗೈಯಿಂದ ಅನಾಯಾಸವಾಗಿ ಹಿಡಿದುಕೊಂಡ ವೃತ್ರ. ಅದೇ ಗದೆಯಿಂದ ಐರಾವತದ ಕುಂಭಸ್ಥಳವನ್ನು ಹೊಡೆದ. ಅವನು ಮಾಡಿದ ಆ ಯುದ್ಧವನ್ನು ನೋಡಿ ಎಲ್ಲರೂ ಪ್ರಶಂಸೆ ಮಾಡಿದರು. ವೃತ್ರನ ಗದಾಭಿಘಾತದಿಂದ




ಪೀಡಿತವಾದ ಐರಾವತವು ಹಿಂದಕ್ಕೆ ಸರಿಯಿತು. ವೃತ್ರನ ಬಲದಿಂದ ಇಂದ್ರನೂ ಪೀಡಿತನಾದ. ಶ್ರಾಂತನಾಗಿರುವ ಇಂದ್ರನ ಮೇಲೆ ಯಾವುದೇ ರೀತಿಯಾದ ಆಯುಧವನ್ನು ವೃತ್ರಾಸುರ ಪ್ರಯೋಗಿಸಲಿಲ್ಲ.

ತನ್ನ ತಮ್ಮನಾದ ವಿಶ್ವರೂಪನನ್ನು ಸಂಹರಿಸಿದ ವಜ್ರಪಾಣಿಯಾದ ಇಂದ್ರನನ್ನು ಕುರಿತು ಈ ರೀತಿಯಾಗಿ ಹೇಳಿದ.

ಹೇ ಇಂದ್ರನೇ ! ನೀನು ಬ್ರಹ್ಮದ್ರೋಹಿಯಾಗಿರುವಿ. ಗುರುದ್ರೋಹಿಯೂ ಆಗಿರುವಿ. ಆದ್ದರಿಂದ ನಿನ್ನನ್ನು ನಾನು ಸಂಹರಿಸುತ್ತೇನೆ. ತಮ್ಮನ ಋಣದಿಂದ ಮುಕ್ತನಾಗುತ್ತೇನೆ. ನನ್ನ ಶೂಲದಿಂದ ಭಿನ್ನವಾಗಿ ಹೋದ ನಿನ್ನ ದೇಹಕ್ಕೆ ಅಗ್ನಿಯ ಸ್ಪರ್ಶವೂ ಆಗುವುದಿಲ್ಲ. ಹದ್ದುಗಳಿಗೆ ನಿನ್ನ ದೇಹವನ್ನು ಆಹಾರವಾಗಿ ನೀಡುತ್ತೇನೆ. ಅಥವಾ ವಜ್ರಾಯುಧದಿಂದ ನೀನೇ ನನ್ನನ್ನು ಸಂಹರಿಸಿದರೆ ವೀರಸ್ವರ್ಗವನ್ನು ನಾನು ಪಡೆಯುತ್ತೇನೆ.

ನಿನ್ನ ಮುಂದೆ ನಿಂತಿರುವ ನನ್ನ ಮೇಲೆ ಯಾಕೆ ನೀನು ವಜ್ರಾಯುಧವನ್ನು ಪ್ರಯೋಗಿಸುತ್ತಿಲ್ಲ. ನಿನ್ನ ವಜ್ರಾಯುಧವು ನಿಷ್ಫಲವಾಗಲು ಸಾಧ್ಯವಿಲ್ಲ. ಶ್ರೀಹರಿಯ ಸಾಮರ್ಥ್ಯದಿಂದ ದಧೀಚಿಗಳ ತಪಃಪ್ರಭಾವದಿಂದ ಸಂಪನ್ನವಾಗಿದೆ ವಜ್ರಾಯುಧ. ಆ ವಜ್ರಾಯುಧದಿಂದಲೇ ನಿನ್ನ ಶತ್ರುವಾದ ನನ್ನನ್ನು ಸಂಹರಿಸು. ಸಂಕರ್ಷಣರೂಪಿಯಾದ ಪರಮಾತ್ಮ ನನಗೆ ಆದೇಶ ಮಾಡಿದಂತೆ ಶ್ರೀಹರಿಯ ಧ್ಯಾನದಲ್ಲಿ ತಲ್ಲೀನನಾಗುತ್ತೇನೆ. ಮೋಹಗಳನ್ನೆಲ್ಲ ಪರಿತ್ಯಜಿಸುತ್ತೇನೆ. ನಿನ್ನ ವಜ್ರಾಯುಧದಿಂದ ಹತನಾಗಿ ಜ್ಞಾನಿಗಳಿಂದ ಪ್ರಾಪ್ಯವಾದ ವೈಕುಂಠವನ್ನು ಸೇರಿ ಸುಖಿಸುತ್ತೇನೆ.

★★★★★

**ಶ್ರೀಶುಕ ಉವಾಚ –**

**ತ ಏವಂ ಶಂಸತೋ'ಧರ್ಮ್ಯಂ ವಚಃ ಪತ್ಯುರಚೇತಸಃ ।**
**ನೈವಾಗೃಹ್ಣನ್ ಭಯತ್ರಸ್ತಾಃ ಪಲಾಯನಪರಾ ನೃಪ ॥೧॥**

**ಹೇ ನೃಪ** ಪರೀಕ್ಷಿತನೇ **ಭಯತ್ರಸ್ತಾಃ ಭಯೇಭ್ಯಃ** ಘೋರರಾದ ದೇವತೆಗಳಿಂದ **ತ್ರಸ್ತಾಃ** ಭೀತರಾದ, 'ಭಯಂ ಪ್ರತಿಭಯೇ ಘೋರೇ ಪ್ರಸೂನೇ' ಎಂದು ವಿಶ್ವವಿದೆ. **ಪಲಾಯನಪರಾಃ** ಓಡುವುದರಲ್ಲಿ ಆಸಕ್ತರಾದ **ಅಚೇತಸಃ** ದೃಢವಾದ ಮನಸ್ಸಿಲ್ಲದ **ತೇ** ಆ ದೈತ್ಯರು **ಏವಂ** ಮೇಲೆ ಹೇಳಿದಂತೆ **ಶಂಸತಃ** ಹೇಳುತ್ತಿದ್ದ **ಪತ್ಯುಃ** ನಾಯಕನಾದ ವೃತ್ರನ **ಧರ್ಮ್ಯಂ** ಧರ್ಮಕ್ಕೆ ವಿರುದ್ಧವಲ್ಲದ **ವಚಃ** ಮಾತನ್ನು **ನೈವ ಅಗೃಹ್ಣನ್** ಗ್ರಹಿಸಲಿಲ್ಲ. ॥೧॥

**ವಿಶೀರ್ಯಮಾಣಾಂ ಪೃತನಾಮಾಸುರೀಮಸುರರ್ಷಭಃ ।**
**ಕಾಲಾನುಕೂಲೈಸ್ತ್ರಿದಶೈಃ ಕಾಲ್ಯಮಾನಾಮನಾಥವತ್ ॥೨॥**

**ದೃಷ್ಟ್ವಾ ತಪ್ಯತ ಸಂಕ್ರುದ್ಧ ಇಂದ್ರಶತ್ರುರಮರ್ಷಿತಃ ।**
**ತಾನ್ನಿವಾರ್ಯೌಜಸಾ ರಾಜನ್ ನಿರ್ಭರ್ತ್ಸ್ಯೇದಮುವಾಚ ಹ ॥೩॥**

**ಕಾಲಾನುಕೂಲೈಃ** ಕಾಲನಾಮಕನಾದ ಶ್ರೀಹರಿಯ ಅನುಗ್ರಹೋನ್ಮುಖರಾಗಿರುವ **ತ್ರಿದಶೈಃ** ದೇವತೆಗಳಿಂದ **ಅನಾಥವತ್** ನಾಯಕನಿಲ್ಲದುದೋ ಎಂಬಂತೆ **ಕಾಲ್ಯಮಾನಾಂ** ಓಡಿಸಲ್ಪಡುವ ಆದ್ದರಿಂದಲೇ **ವಿಶೀರ್ಯಮಾಣಾಂ** ಚದುರಿ ಹೋಗುತ್ತಿರುವ **ಆಸುರೀಂ** ಅಸುರನ **ಪೃತನಾಂ** ಸೈನ್ಯವನ್ನು **ದೃಷ್ಟ್ವಾ** ನೋಡಿ **ಅಸುರರ್ಷಭಃ** ಅಸುರಶ್ರೇಷ್ಠನಾದ ವೃತ್ರನು **ಅತಪ್ಯತ್** ದುಃಖಗೊಂಡನು **ಅಮರ್ಷಿತಃ** ಈ ಅಪಜಯವನ್ನು ಸಹಿಸದವನಾಗಿ **ಸಂಕೃದ್ಧಃ** ಬಹಳ ಕುಪಿತನಾದ **ಇಂದ್ರಶತ್ರುಃ** ವೃತ್ರನು **ಓಜಸಾ** ಪರಾಕ್ರಮದಿಂದ **ರಾಜನ್** ಪ್ರಕಾಶಿಸುತ್ತಾ **ತಾಂ** ಆ ಓಡಿ ಹೋಗುತ್ತಿದ್ದ ಸೈನ್ಯವನ್ನು **ನಿವಾರ್ಯ** ಓಡಬೇಡಿರಿ ಎಂದು ತಡೆದರೂ ಓಡುತ್ತಿರುವ ಸೈನ್ಯವನ್ನು **ನಿರ್ಭರ್ತ್ಸ್ಯ** ನಿಂದಿಸಿ, ಅಥವಾ **ತಾನ್** ಓಡಿಸುತ್ತಿರುವ ದೇವತೆಗಳನ್ನು **ನಿರ್ಭರ್ತ್ಸ್ಯ** ನಿಂದಿಸಿ **ಇದಂ** ಮುಂದೆ ಹೇಳುವ ಮಾತುಗಳನ್ನು **ಉವಾಚ** ಆಡಿದನು. ॥೨-೩॥

ಕಾಲಃ ಕಲಿತಸಂಪೂರ್ಣಸದ್ಗುಣತ್ವಾತ್ ಜನಾರ್ದನಃ ।
ಸಂಹಾರಾತ್ ಸರ್ವವಿತ್ತ್ವಾದ್ವಾ ಸರ್ವವಿದ್ರಾವಣೇನ ಚ ॥

ಸಂಪೂರ್ಣ ಸದ್ಗುಣಗಳಿಂದ ಕೂಡಿದವನಾದ್ದರಿಂದ, ಸರ್ವಸಂಹಾರಕನಾದ್ದರಿಂದ, ಸರ್ವವನ್ನೂ ತಿಳಿದವನಾದ್ದರಿಂದ, ಎಲ್ಲವನ್ನು ಓಡಿಸುವದರಿಂದ ಶ್ರೀಹರಿಯು ಕಾಲನೆನಿಸುವನು ಎಂದು ಹೇಳುವ ವಚನದಂತೆ ಶ್ರೀಹರಿಗೆ ಕಾಲನೆಂದು ಹೆಸರು. ।।೨-೩।।

**ವೃತ್ರ ಉವಾಚ -**

**ಕಿಂ ವ ಉಚ್ಚರಿತಾ ಮಾತುರ್ಧಾವದ್ಭಿಃ ಪೃಷ್ಠತೋ ಹತೈಃ ।**
**ನ ಹಿ ಭೀತವಧಃ ಶ್ಲಾಘ್ಯೋ ನ ಸ್ವರ್ಗ್ಯಃ ಶೂರಮಾನಿನಾಮ್ ।।೪।।**

**ಹೇ ದೇವಾಃ** ಎಲೋ ದೇವತೆಗಳೇ **ಯೂಯಂ** ನೀವು **ಮಾತುಃ** ತಾಯಿಯಾದ ಅದಿತಿದೇವಿಯ **ಉಚ್ಚರಿತಾಃ ಕಿಂ** ಮಲ-ಮೂತ್ರಗಳಂತೆ ಹೊರಬಂದವರೇನು? ( ಮಕ್ಕಳು, ಮಲ-ಮೂತ್ರಗಳು ದೇಹದಿಂದ ಹೊರಬರುವದು ಸಮಾನವಾದ್ದರಿಂದ ಹಾಗೆ ಹೇಳಿದ್ದು.) **ಹೇ ಮಾತುಃ ಉಚ್ಚರಿತಾಃ** ಎಂದು ದೇವತೆಗಳ ಸಂಬೋಧನೆಯೂ ಆಗಬಹುದು. **ಪೃಷ್ಠತಃ** ಹಿಂದಿನಿಂದ **ಹತೈಃ** ಹೊಡೆಯಲ್ಪಟ್ಟ **ಧಾವದ್ಭಿಃ** ಓಡಿ ಹೋಗುತ್ತಿರುವ ಅಸುರನಾಯಕರಿಂದ **ವಃ** ನಿಮಗೆ **ಕಿಂ** ಏನು ಪ್ರಯೋಜನ, (ಓಡಿ ಹೋಗುವವರನ್ನು ಹಿಂದಿನಿಂದ ಕೊಲ್ಲುವದರಿಂದ ನಿಮಗೆ ಕೀರ್ತಿಯಾಗಲಿ ಧರ್ಮವಾಗಲಿ ಬರುವದಿಲ್ಲವೆಂದರ್ಥ) ಪ್ರಯೋಜನವಿಲ್ಲ ಅಷ್ಟೇ ಅಲ್ಲ, ಈ ನಿಮ್ಮ ವ್ಯಾಪಾರವು ಸ್ತುತ್ಯವೂ ಅಲ್ಲವೆಂದು ಹೇಳುವರು. **ಶೂರಮಾನಿನಾಂ** ಶೂರರೆಂದು ಅಭಿಮಾನ ಉಳ್ಳವರಿಗೆ **ಭೀತವಧಃ** ಭಯಗೊಂಡವರನ್ನು ಕೊಲ್ಲುವದು **ನ ಹಿ ಶ್ಲಾಘ್ಯಃ** ಪ್ರಶಂಸಾರ್ಹವಲ್ಲ **ನ ಸ್ವರ್ಗ್ಯಂ** ಸ್ವರ್ಗಸಾಧನವೂ ಅಲ್ಲ. ಐಹಿಕವಲ್ಲ, ಪಾರತ್ರಿಕವಲ್ಲವೆಂದು ಭಾವ. ।।೪।।

**ಯದಿ ವಃ ಪ್ರಧನೇ ಶ್ರದ್ಧಾ ಸಾರಂ ವಾ ಕ್ಷುಲ್ಲಕಾ ಹೃದಿ ।**
**ಅಗ್ರೇ ತಿಷ್ಠತ ಮಾತ್ರಂ ಮೇ ನ ಚೇದ್ ಗ್ರಾಮ್ಯಸುಖೇ ಸ್ಪೃಹಾ ।।೫।।**

**ಹೇ ಕ್ಷುಲ್ಲಕಾಃ** ಅಲ್ಪರಾದ ದೇವತೆಗಳೇ **ವಃ** ನಿಮಗೆ **ಪ್ರಧನೇ** ಯುದ್ಧದಲ್ಲಿ **ಯದಿ ಶ್ರದ್ಧಾ ಅಸ್ತಿ** ಶ್ರದ್ಧೆಯಿದ್ದರೆ **ವಾ** ಅಥವಾ **ಹೃದಿ** ಎದೆಯಲ್ಲಿ **ಸಾರಂ ಯದಿ ಅಸ್ತಿ** ಧೈರ್ಯವಿದ್ದರೆ **ಗ್ರಾಮ್ಯಸುಖೇ** ವಿಷಯ ಭೋಗದಿಂದಾಗುವ ಸುಖದಲ್ಲಿ **ಸ್ಪೃಹಾ ನ ಚೇತ್** ಆಸೆ ಇಲ್ಲದಿದ್ದರ **ಮಾತ್ರಂ** ಒಂದು ಕ್ಷಣ ಕಾಲ **ಮೇ** ನನ್ನ **ಅಗ್ರೇ** ಮುಂದೆ **ತಿಷ್ಠತ** ನಿಲ್ಲಿರಿ **ಸಾರಂ** ನ್ಯಾಯವಾಗಿದ್ದರೆ, ನಿಮಗೆ ಯುದ್ಧಶ್ರದ್ಧೆಯು ನ್ಯಾಯವಾಗಿದ್ದರೆ ಹೀಗೂ

ಅರ್ಥ. 'ನ್ಯಾಯೇ ಚ ನೀರೇ ಚ ಘನೇ ಚ ಸಾರಂ' ಎಂದು ಅಮರ-ವಿಶ್ವಗಳಿವೆ. **ಮಾತ್ರಂ** ಸ್ವಲ್ಪ 'ಅಕ್ಷರಾವಯವೇ ಸ್ವಲ್ಪೇ ಕ್ಲೀಬಮ್' ಇತ್ಯಮರಃ । ಗ್ರಾಮ್ಯಸುಖೇ ಸ್ಪೃಹಾ ನ ಚೇತ್ ಎಂಬುದರಿಂದ ನೀವು ಬದುಕಿ ತಿರುಗಿ ಹೋಗಲಾರಿರಿ ಎಂದು ಸೂಚಿಸುವನು. ।।೫।।

**ಏವಂ ಸುರಗಣಾನ್ ಕ್ರುದ್ಧೋ ಭೀಷಯನ್ ವಪುಷಾ ರಿಪೂನ್ ।**
**ವ್ಯನದತ್ ಸುಮಹಾಪ್ರಾಣೋ ಯೇನ ಲೋಕಾ ವಿಚೇತಸಃ ।।೬।।**

**ಕ್ರುದ್ಧಃ** ಸಿಟ್ಟಾದ **ಸುಮಹಾಪ್ರಾಣಃ** ಅತ್ಯಂತ ಬಲಿಷ್ಠನಾದ ವೃತ್ರಾಸುರನು **ಏವಂ** ಮೇಲೆ ಹೇಳಿದಂತೆ **ವಪುಷಾ** ತನ್ನ ದೊಡ್ಡ ದೇಹದಿಂದ **ರಿಪೂನ್** ಶತ್ರುಗಳಾದ **ಸುರಗಣಾನ್** ದೇವತೆಗಳ ಸಮೂಹವನ್ನು **ಭೀಷಯನ್** ಹೆದರಿಸುತ್ತ **ವ್ಯನದತ್** ಸಿಂಹನಾದ ಮಾಡಿದನು. **ಯೇನ** ಯಾವ ಸಿಂಹನಾದದಿಂದ **ಲೋಕಾಃ** ಜನರು **ವಿಚೇತಸಃ ಬಭೂವುಃ** ಮೂರ್ಛೆಗೊಂಡರು. ।।೬।।

**ತೇನ ದೇವಗಣಾಃ ಸರ್ವೇ ವೃತ್ರವಿಸ್ಫೋಟನೇನ ವೈ ।**
**ನಿಪೇತುರ್ಮೂರ್ಛಿತಾ ಭೂಮೌ ಯಥೈವಾಶನಿನಾ ಹತಾಃ ।।೭।।**

**ತೇನ** ಆ ಭಯಂಕರವಾದ **ವೃತ್ರವಿಸ್ಫೋಟನೇನ** ವೃತ್ರಾಸುರನ ಅಟ್ಟಹಾಸದಿಂದ (ಸಿಂಹನಾದದಿಂದ) **ಸರ್ವೇ ದೇವಗಣಾಃ** ಎಲ್ಲ ದೇವತಾಸಮೂಹಗಳು **ಭೂಮೌ** ಭೂಮಿಯಲ್ಲಿ **ಯಥಾ ಏವ** ಹೇಗೆ **ಅಶನಿನಾ** ಸಿಡಲಿನಿಂದಾಗಿ **ಹತಾಃ** ಬಡಿದವರು ಮೂರ್ಛಿತರಾಗಿ ಬೀಳುವರೋ **ತಥೈವ** ಹಾಗೆಯೇ **ಮೂರ್ಛಿತಾಃ ನಿಪೇತುಃ** ಮೂರ್ಛಿತರಾಗಿ ಬಿದ್ದರು **ವೈ** ಇದು ಪ್ರಸಿದ್ಧವು. ।।೭।।

**ಮಮರ್ದ ಪದ್ಭ್ಯಾಂ ಸುರಸೈನ್ಯಮಾತುರಂ**
**ನಿಮೀಲಿತಾಕ್ಷಂ ರಣರಂಗದುರ್ಮದಃ ।**
**ಗಾಂ ಕಂಪಯನ್ನುದ್ಯತಶೂಲ ಓಜಸಾ**
**ನಾಲಂ ವನಂ ಯೂಥಪತಿರ್ಯಥೋನ್ಮದಃ ।।೮।।**

**ರಣರಂಗದುರ್ಮದಃ** ಯುದ್ಧೋನ್ಮತ್ತನಾದ ಆ ವೃತ್ರನು **ಓಜಸಾ** ತನ್ನ ಸಾಮರ್ಥ್ಯದಿಂದ **ಗಾಂ** ಭೂಮಿಯನ್ನು **ಕಂಪಯನ್** ನಡುಗಿಸುತ್ತಾ **ಉದ್ಯತಶೂಲಃ** ಶೂಲಾಯುಧವನ್ನು ಎತ್ತಿದವನಾಗಿ **ಆತುರಂ** ಭಯಗೊಂಡ **ನಿಮೀಲಿತಾಕ್ಷಂ** ವೃತ್ರಾಸುರನ ಆರ್ಭಟವನ್ನು ನೋಡಲಾಗದೆ ಕಣ್ಣು ಮುಚ್ಚಿದ **ಸುರಸೈನ್ಯಂ** ದೇವತೆಗಳ

ಸೈನ್ಯವನ್ನು **ಯಥಾ** ಹೇಗೆ **ಉನ್ಮದಃ** ಮದವೇರಿದ **ಯೂಥಪತಿಃ** ಸಲಗವು, (ಗಂಡಾನೆಯು) **ನಾಲಂ ವನಂ** ನಲವೆಂಬ ಹುಲ್ಲಿನ ಪೊದೆಯನ್ನು, (ಚೆಟ್ಟಿ) ಕಮಲಗಳ ಸಂಬಂಧಿಯಾದ ವನವನ್ನು ಕಮಲಗಳ ಗುಂಪನ್ನು, (ವಿ) **ಪದ್ಭ್ಯಾಂ** ಕಾಲುಗಳಿಂದ **ಮರ್ದಯತಿ** ತುಳಿದು ಹಾಳು ಮಾಡುವದೋ **ತಥಾ** ಹಾಗೆ **ಪದ್ಭ್ಯಾಂ ಮಮರ್ದ** ಕಾಲುಗಳಿಂದ ತುಳಿದು ಮರ್ದನ ಮಾಡಿದನು. ।।೮।।

'ನಲಿನಂ ತು ನಲಂ ಮತಂ' ಎಂದು ವಿಶ್ವವಿದೆ. ನಾಲಂ ಎಂಬುದು ಸಮೂಹಾರ್ಥವೆಂದಾದರೆ 'ಅಚಿತ್ತಹಸ್ತಿ...' ಎಂದು ಠಕ್ ಪ್ರತ್ಯಯ ಬರಬೇಕಾಗುವದು. 'ಅನುದಾತ್ತಾದಿತ್ವಪ್ರಯುಕ್ತಘಞಂತ' ಎಂದಾದರೂ ಹೇಳಬಹುದು. 'ಮದ ಹರ್ಷೇಭದಾನಯೋಃ' ಎಂದು ವಿಶ್ವವಿದೆ. ।।೮।।

**ವಿಲೋಕ್ಯ ತಂ ವಜ್ರಧರೋಽತ್ಯಮರ್ಷಿತಃ**
**ಸ್ವಶತ್ರವೇಽಭಿದ್ರವತೇ ಮಹಾಗದಾಮ್ ।**
**ಚಿಕ್ಷೇಪ ತಾಮಾಪತತೀಂ ಸುದುಸ್ಸಹಾಂ**
**ಜಗ್ರಾಹ ವಾಮೇನ ಕರೇಣ ಲೀಲಯಾ ।।೯।।**

**ವಜ್ರಧರಃ** ಇಂದ್ರದೇವರು **ತಂ** ಸೈನ್ಯವನ್ನು ಮರ್ದಿಸುತ್ತಿರುವ ವೃತ್ರನನ್ನು **ವಿಲೋಕ್ಯ** ನೋಡಿ **ಅತ್ಯಮರ್ಷಿತಃ ಸನ್** ಬಹಳ ಕೋಪಗೊಂಡವರಾಗಿ **ಅಭಿದ್ರವತೇ** ತನ್ನನ್ನು ಲೆಕ್ಕಿಸದೆ ಎದುರಿಸಿ ಬರುತ್ತಿರುವ **ಸ್ವಶತ್ರವೇ** ತನ್ನ ಶತ್ರುವಾದ ವೃತ್ರನ ಮೇಲೆ **ಮಹಾಗದಾಂ** ದೊಡ್ಡ ಗದೆಯನ್ನು **ಚಿಕ್ಷೇಪ** ಎಸೆದರು **ಸಃ** ಆ ವೃತ್ರನು **ಆಪತತೀಂ** ಬರುತ್ತಿರುವ **ಸುದುಸ್ಸಹಾಂ** ಮತ್ತೊಬ್ಬರಿಂದ ಸಹಿಸಲಾಗದ **ತಾಂ** ಆ ಗದೆಯನ್ನು **ಲೀಲಯಾ** ಅನಾಯಾಸವಾಗಿ **ವಾಮೇನ ಕರೇಣ** ಎಡಗೈಯಿಂದ **ಜಗ್ರಾಹ** ಹಿಡಿದು ಕೊಂಡನು.

**ಲೀಲಯಾ** ಎಂದದ್ದರಿಂದ ಬಹು ಅನಾದರ ತಿಳಿಯುವದು. ಸ್ತ್ರೀಯರ ಸ್ಪರ್ಶವನ್ನು ಸ್ತ್ರೀಯರೇ ಮಾಡಬೇಕೇ ಹೊರತು ಪರಪುರುಷರಲ್ಲ ಎಂಬ ಧರ್ಮದ ಮರ್ಮವನ್ನರಿತ ವೃತ್ರನು ಈ ರೀತಿ ಮಾಡಿದನು. 'ಭಾರ್ಯಾಭಾಗೋ ವಾಮ ಇತಿ ಪ್ರಸಿದ್ಧಃ' ಎಂದಿದೆ. ಅಂದರೆ ಗದಾ ಸ್ತ್ರೀಲಿಂಗವಾದ್ದರಿಂದ ಸ್ತ್ರೀ ಅದರಂತೆ ಎಡದ ಕೈಯಿಯು ಭಾರ್ಯಾಭಾಗವಾದ್ದರಿಂದ ಸ್ತ್ರೀ ಕಾರಣ ಎಡಗೈಯಿಂದ ಗದೆ ಹಿಡಿದನೆಂದು ಭಾವ. ।।೯।।

**ಸ ಇಂದ್ರಶತ್ರುಃ ಕುಪಿತೋ ಭೃಶಂ ತಯಾ**
**ಮಹೇಂದ್ರವಾಹಂ ಗದಯೋರುವಿಕ್ರಮಃ ।**
**ಜಘಾನ ಕುಂಭಸ್ಥಲ ಉನ್ನದನ್ ಮೃಧೇ**
**ತತ್ಕರ್ಮ ಸರ್ವೇ ಸಮಪೂಜಯನ್ನೃಪ ॥೧೦॥**

**ಭೃಶಂ** ಬಹಳವಾಗಿ **ಕುಪಿತಃ** ಕೋಪಗೊಂಡ **ಉರುವಿಕ್ರಮಃ** ಅತಿಶಯ ಪರಾಕ್ರಮಿಯಾದ **ಸಃ ಇಂದ್ರಶತ್ರುಃ** ಆ ವೃತ್ರನು **ಮೃಧೇ** ಯುದ್ಧದಲ್ಲಿ **ಉನ್ನದನ್** ಸಿಂಹನಾದ ಮಾಡುತ್ತಾ **ತಯಾ ಗದಯಾ** ಆ ಗದೆಯಿಂದ **ಮಹೇಂದ್ರವಾಹಂ** ಇಂದ್ರನ ವಾಹನವಾದ ಐರಾವತವನ್ನು **ಕುಂಭಸ್ಥಲೇ** ಮುಂಭಾಗದಲ್ಲಿ ಎರಡು ಗುಂಪುಗಳಂತಿರುವ ಗಂಡಸ್ಥಳದಲ್ಲಿ **ಜಘಾನ** ಹೊಡೆದನು. **ನೃಪ** ಪರೀಕ್ಷಿತನೇ **ತತ್ಕರ್ಮ** ಅವನ ಆ ಕಾರ್ಯವನ್ನು **ಸರ್ವೇ** ಸ್ವಕೀಯರು ಪರಕೀಯರು ಎಲ್ಲರೂ **ಸಮಪೂಜಯನ್** ಪ್ರಶಂಸಿದರು.

ಇಂದ್ರನು ಒಂದು ಕಡೆಗಿದ್ದನು. ಐರಾವತ ಬೇರೆಡೆ ಇದ್ದಿತು ಎಂದಲ್ಲವೆಂದು ಸೂಚಿಸಲು **ಇಂದ್ರವಾಹಂ** ಎಂದಿದ್ದಾರೆ. ಇಂದ್ರನನ್ನು ವಹಿಸಿದ ಎಂದರ್ಥ ಇದರಿಂದ ಐರಾವತದ ಮೇಲೆ ಇಂದ್ರನು ಕುಳಿತಿದ್ದರೂ ಅದನ್ನು ಹೊಡೆದನು ಎಂದು ಇಂದ್ರನನ್ನು ಲೆಕ್ಕಿಸಲಿಲ್ಲವೆಂದು ಧ್ವನಿತವಾಗುವದು. ॥೧೦॥

**ಐರಾವತೋ ವೃತ್ರಗದಾಭಿಮೃಷ್ಟೋ**
**ವಿಘೂರ್ಣಿತೋಽದ್ರಿಃ ಕುಲಿಶಾಹತೋ ಯಥಾ ।**
**ಅಪಾಸರದ್ಭಿನ್ನಮುಖಃ ಸಹೇಂದ್ರೋ**
**ಮುಂಚನ್ನಸೃಕ್ ಸಪ್ತಧನುರ್ಭೃಶಾರ್ತಃ ॥೧೧॥**

**ವೃತ್ರಗದಾಭಿಮೃಷ್ಟಃ** ವೃತ್ರನ ಗದೆಯಿಂದ ಹೊಡೆಯಲ್ಪಟ್ಟ **ಐರಾವತಃ** ಇಂದ್ರನ ಆನೆಯು **ಯಥಾ** ಹೇಗೆ **ಕುಲಿಶಾಹತಃ** ವಜ್ರಾಯುಧದಿಂದ ಹೊಡೆಯಲ್ಪಟ್ಟ **ಅದ್ರಿಃ** ಪರ್ವತವು ಸರಿಯುವುದೋ ಹಾಗೆ **ವಿಘೂರ್ಣಿತಃ** ವಿಶೇಷವಾಗಿ ಘೀಳಿಟ್ಟು ನಡುಗುವ ದೇಹ ಉಳ್ಳದ್ದಾಗಿ **ಭಿನ್ನಮುಖಃ** ಮುಖ ಒಡೆದುಕೊಂಡು **ಭೃಶಾರ್ತಃ** ಬಹಳ ದುಃಖಿತನಾಗಿ **ಅಸೃಕ್ ಮುಂಚನ್** ರಕ್ತವನ್ನು ಸುರಿಸುತ್ತ **ಸಹೇಂದ್ರಃ** ಇಂದ್ರ ಸಹಿತವಾಗಿ **ಸಪ್ತಧನುಃ** ಏಳು ಧನಸ್ಸುಗಳಷ್ಟು ಉದ್ದ ಹಿಂದೆ **ಅಪಾಸದತ್** ಸರಿಯಿತು. ಈ ಗದೆಯು ಇಂದ್ರನದೇ ಆಗಿದ್ದರೂ ವೃತ್ರನ ಕೈಯಲ್ಲಿರುವದರಿಂದ ವೃತ್ರಗದೆ ಎಂದು ಹೇಳಲರ್ಹವಾಗಿದೆ ಎಂದು ತಿಳಿಯಬೇಕು. ॥೧೧॥

**ನ ಸನ್ನವಾಹಾಯ ವಿಷಣ್ಣಚೇತಸೋ**
**ಪ್ರಾಯುಂಕ್ತ ಭೂಯಃ ಸ ಗದಾಂ ಮಹಾತ್ಮಾ ।**
**ಇಂದ್ರೋಽಮೃತಸ್ಯಂದಿ ಕರಾಭಿಮರ್ಶ-**
**ವೀತವ್ಯಥಃ ಕ್ಷತವಾಹೋಽವತಸ್ಥೇ ॥೧೨॥**

**ಮಹಾತ್ಮಾ** ಯುದ್ಧದ ಧರ್ಮವನ್ನು ತಿಳಿದ **ಸಃ** ವೃತ್ರನು **ಸನ್ನವಾಹಾಯ** ದುಃಖಕ್ಕೀಡಾದ ವಾಹನ ಉಳ್ಳ **ವಿಷಣ್ಣಚೇತಸೇ** ವಿಷಾದಗೊಂಡ ಮನಸ್ಸುಳ್ಳ ಇಂದ್ರದೇವರಿಗೆ **ಭೂಯಃ** ಮತ್ತೆ **ಗದಾಂ** ಗದೆಯನ್ನು **ನ ಪ್ರಾಯುಂಕ್ತ** ಪ್ರಯೋಗಿಸಲಿಲ್ಲ. **ಕ್ಷತವಾಹಃ** ಗಾಯಗೊಂಡ ವಾಹನ ಉಳ್ಳ **ಇಂದ್ರಃ** ಇಂದ್ರದೇವರು **ಅಮೃತಸ್ಯಂದಿ** ಅಮೃತವನ್ನು ಸುರಿಸುವ **ಕರ** ಕೈಗಳ **ಅಭಿಮರ್ಶ** ಸ್ಪರ್ಶದಿಂದ **ವೀತವ್ಯಥಃ** ದುಃಖವನ್ನು ಕಳೆದುಕೊಂಡು **ಅವತಸ್ಥೇ** ಇದ್ದರು. **ಅಭಿತಸ್ಥೇ** ಎದುರಾಗಿ ನಿಂತರು. ಚಂದ್ರನ ಕಿರಣಗಳ ಸ್ಪರ್ಶದಿಂದ ದುಃಖ ಕಳೆದುಕೊಂಡರು ಎಂದರ್ಥ. ॥೧೨॥

**ಸ ತಂ ನೃಪೇಂದ್ರಾಹವಕಾಮ್ಯಯಾ ರಿಪುಂ**
**ವಜ್ರಾಯುಧಂ ಭ್ರಾತೃಹಣಂ ವಿಲೋಕ್ಯ ।**
**ಸ್ಮರಂಶ್ಚ ತತ್ಕರ್ಮ ನೃಶಂಸಮಂಹಃ**
**ಶೋಕೇನ ಮೋಹೇನ ಹಸನ್ ಜಗಾದ ॥೧೩॥**

**ಹೇ ನೃಪೇಂದ್ರ** ಪರೀಕ್ಷಿದ್ರಾಜನೇ **ಸಃ** ಆ ವೃತ್ರಾಸುರನು **ಆಹವಕಾಮ್ಯಯಾ** ಯುದ್ಧ ಮಾಡುವ ಇಚ್ಛೆಯಿಂದ ನಿಂತಿರುವ **ಭ್ರಾತೃಹಣಂ** ತನ್ನ ಅಣ್ಣನಾದ ವಿಶ್ವರೂಪಾಚಾರ್ಯನನ್ನು ಸಂಹರಿಸಿದ ಆದ್ದರಿಂದಲೇ **ರಿಪುಂ** ಶತ್ರುವಾದ **ವಜ್ರಾಯುಧಂ** ವಜ್ರಾಯುಧವನ್ನು ಧರಿಸಿದ **ತಂ** ಆ ಇಂದ್ರದೇವರನ್ನು **ವಿಲೋಕ್ಯ** ನೋಡಿ **ನೃಶಂಸಂ** ಕ್ರೂರವಾದ **ಅಂಹಃ** ಪಾಪರೂಪವಾದ **ತತ್ಕರ್ಮ** ಬ್ರಾಹ್ಮಣನೂ ಗುರುವೂ ಆದ ವಿಶ್ವರೂಪಾಚಾರ್ಯರನ್ನು ಕೊಂದುದನ್ನು **ಸ್ಮರನ್** ನೆನಪಿಸಿಕೊಳ್ಳುತ್ತಾ **ಶೋಕೇನ** ದುಃಖದಿಂದ **ಮೋಹೇನ** ಅಜ್ಞಾನದಿಂದಲೂ **ಹಸನ್** ನಗುತ್ತಾ **ಜಗಾದ** ಹೇಳಿದನು.

ಸಭೆಯಲ್ಲಿ ಹೇಗೋ ಹಾಗೆ ರಣಧುರೀಣನು ರಣದಲ್ಲಿ ದುಃಖಪ್ರದರ್ಶನ ಮಾಡಬಾರದು ಎಂದು ಹೊರಗೆ ನಗುತ್ತಾ ಹೇಳಿದನು ಎಂದು ಭಾವ. ॥೧೩॥

ವೃತ್ರ ಉವಾಚ -

**ದಿಷ್ಟ್ಯಾ ಭವಾನ್ ಮೇ ಸಮವಸ್ಥಿತೋ ರಿಪುಃ**
**ಯೋ ಬ್ರಹ್ಮಹಾ ಗುರುಹಾ ಭ್ರಾತೃಹಾ ಚ ।**
**ದಿಷ್ಟ್ಯಾಽನೃಣೋಽದ್ಯಾಹಮಸತ್ತಮ ತ್ವಯಾ**
**ಮಚ್ಛೂಲನಿರ್ಭಿನ್ನದೃಷದ್ಧೃದಾಽಚಿರಾತ್ ॥೧೪॥**

**ಯಃ** ಯಾವನು **ಬ್ರಹ್ಮಹಾ** ಬ್ರಾಹ್ಮಣ ಜಾತಿಯಲ್ಲಿ ಜನಿಸಿದ ವಿಶ್ವರೂಪನನ್ನು ಸಂಹರಿಸಿದ್ದರಿಂದ ಬ್ರಹ್ಮಹತ್ಯೆ ಮಾಡಿರುವನೋ **ಗುರುಹಾ** ನಿನಗೂ ನನಗೂ ಗುರು ಸ್ಥಾನದಲ್ಲಿರುವ ವಿಶ್ವರೂಪನನ್ನು ಕೊಂದದ್ದರಿಂದ ಗುರುಹತ್ಯೆ ಮಾಡಿದವನೋ **ಚ** ಮತ್ತು **ಭ್ರಾತೃಹಾ** ನನ್ನ ಅಣ್ಣನಾದ ವಿಶ್ವರೂಪನನ್ನು ಕೊಂದು ಸಹೋದರ ಘಾತಕನೋ, (ಇಬ್ಬರೂ ತ್ವಷ್ಟ್ರುವಿನ ಮಕ್ಕಳು) **ಸಃ** ಅಂತಹ **ಮೇ ರಿಪುಃ** ನನ್ನ ಶತ್ರುವೂ ಆದ **ಭವಾನ್** ನೀನು **ದಿಷ್ಟ್ಯಾ** ನನ್ನ ಪುಣ್ಯದಿಂದ **ಸಮವಸ್ಥಿತಃ** ಯುದ್ಧಕ್ಕಾಗಿ ಎದುರಿಗೆ ನಿಂತಿರುವೆ, ಅಥವಾ **ದಿಷ್ಟ್ಯಾ** ಇದು ನನಗೆ ಆನಂದವು ಎಂದೂ ಅರ್ಥ ಮಾಡಬಹುದು. **ಹೇ ಅಸತ್ತಮ** ದುರ್ಜನ ಶ್ರೇಷ್ಠನೇ **ಅದ್ಯ** ಈಗ **ಮಚ್ಛೂಲ** ನನ್ನ ಶೂಲದಿಂದ **ನಿರ್ಭಿನ್ನ** ಭೇದಿಸಲ್ಪಟ್ಟ **ದೃಷದ್‌ಹೃದಾ** ಕಲ್ಲಿನಂತೆ ಕಠಿಣವಾದ ಹೃದಯ ಉಳ್ಳ **ತ್ವಯಾ** ನಿನ್ನಿಂದ **ಅಚಿರಾತ್** ಜಾಗ್ರತೆಯಾಗಿ **ಅಹಂ** ನಾನು **ಅನೃಣಃ** ಅಣ್ಣನ ಮರಣದ ಋಣವನ್ನು ಕಳೆದುಕೊಂಡವನು **ಸ್ಯಾಂ** ಆಗುವೆನು **ದಿಷ್ಟ್ಯಾ** ಆನಂದವು.

'ದಿಷ್ಟ್ಯಾ ಸಮುಪಜೋಷಂತೇತ್ಯಾನಂದೇತ್ಯಮರಃ' ಅಸ್ಮತ್ ಎನ್ನದೆ ಮತ್ ಎಂದು ಹೇಳಿದ್ದರಿಂದ ಮಥ್ನಾತೀತಿ ಮತ್ ಮತ್ ಚ ತತ್ ಶೂಲಂ ಚ ಮಚ್ಛೂಲ ಎಂದು ವಿಗ್ರಹದಿಂದ ಶೂಲದ ಕಾರ್ಯಕ್ಕನುಗುಣವಾಗಿ ಹೇಳಿದಂತಾಯಿತು. ಅಚಿರಾತ್ ಎಂದುದರಿಂದ 'ಅತ್ಯುತ್ಕಟೈಃ ಪುಣ್ಯಪಾಪೈರಿಹೈವ ಫಲಮಶ್ನುತೇ' ಎಂಬ ನ್ಯಾಯ ಸೂಚಿತವಾಗುವದು. ಅಥವಾ ಭ್ರಾತೃಪ್ರೇಮದಿಂದ ಅಲ್ಪಕಾಲವೂ ಕಲ್ಪ ಸಮಾನವಾಗುವದಾದ್ದರಿಂದ ಚಿರಾತ್ ಎಂದೂ ಮಾಡಬಹುದು. ॥೧೪॥

**ಯೋ ನೋಽಗ್ರಜಸ್ಯಾತ್ಮವಿದೋ ದ್ವಿಜಾತೇಃ**
**ಗುರೋರಪಾಪಸ್ಯ ಚ ದೀಕ್ಷಿತಸ್ಯ ।**
**ವಿಸ್ರಭ್ಯ ಖಡ್ಗೇನ ಶಿರಾಂಸ್ಯವೃಶ್ಚತ್**
**ಪಶೋರಿವಾಕರುಣಃ ಸ್ವರ್ಗಕಾಮಃ ॥೧೫॥**

**ಸ್ವರ್ಗಕಾಮಃ** ದೈತ್ಯರಿಂದ ಸ್ವರ್ಗವನ್ನು ಹಿಂದಕ್ಕೆ ಪಡೆಯಲು ಆಸೆ ಪಟ್ಟ **ಅಕರುಣಃ** ಕರುಣೆಯಿಲ್ಲದ **ಯಃ (ತ್ವಂ)** ಯಾವ ನೀನು **ವಿಸ್ರಭ್ಯ** ಪುರೋಹಿತನನ್ನಾಗಿ ವರಿಸಿ ವಿಶ್ವಾಸ ಹುಟ್ಟಿಸಿ **ಆತ್ಮವಿದಃ** ಪರಮಾತ್ಮನ ಜ್ಞಾನಿಯಾದ **ದ್ವಿಜಾತೇಃ** ಬ್ರಾಹ್ಮಣನಾದ **ಗುರೋಃ** ನಿನಗೆ ಪುರೋಹಿತನಾದ್ದರಿಂದ ಗುರುವಾದ **ಅಪಾಪಸ್ಯ** ಪಾಪವಿಲ್ಲದ **ಚ** ಮತ್ತು, **ದೀಕ್ಷಿತಸ್ಯ** ನಿನಗಾಗಿ ಮಾಡುತ್ತಿದ್ದ ಯಜ್ಞದಲ್ಲಿ ದಿಕ್ಷೀತನಾದ **ನಃ** ನನ್ನ **ಅಗ್ರಜಸ್ಯ** ಅಣ್ಣನ **ಶಿರಾಂಸಿ** ಮೂರು ತಲೆಗಳನ್ನು **ಸ್ವರ್ಗಕಾಮಃ** ಸ್ವರ್ಗಾಪೇಕ್ಷೆಯುಳ್ಳವನು **ಅಕರುಣಃ** ಕರುಣೆ ಇಲ್ಲದಲೇ **ಪಶೋಃ** ಯಜ್ಞಪಶುವಿನ **ಶಿರಃ** ಇವ ತಲೆಯನ್ನು ಕತ್ತರಿಸುವಂತೆ **ಖಡ್ಗೇನ** ಕತ್ತಿಯಿಂದ **ಅವೃಶ್ಚಃ** ಕತ್ತರಿಸಿದೆಯೋ ಆ ನೀನು ಎದುರಿನಲ್ಲಿ ಬಂದಿರುವುದೇ ಆನಂದ ಎಂದು ಹಿಂದಿನ ಶ್ಲೋಕದಲ್ಲಿಯ ಪದದ ಜೊತೆ ಅನ್ವಯ.

ಶ್ರೀ ಸತ್ಯಧರ್ಮರ ಪ್ರಕಾರ **ಖಡ್ಗೇನ** ಎಂಬುದನ್ನು ಮುಂದೆ ಆಂದರೆ ದೃಷ್ಟಾಂತದಲ್ಲಿ ಅನ್ವಯಿಸಬೇಕು. ದಾರ್ಷ್ಟಾಂತಿಕದಲ್ಲಿ **ವಜ್ರೇಣ** ಎಂದು ಶೇಷ ಮಾಡಿಕೊಳ್ಳಬೇಕು. 'ತಸ್ಯ ವಜ್ರಮಾದಾಯ ಶೀರ್ಷಾಣ್ಯಚ್ಛಿನತ್' ಎಂದು ಶ್ರುತಿ ಇದೆ. ಅಥವಾ ಮೋಕ್ಷಧರ್ಮದಲ್ಲಿ **ವಜ್ರೇಣ** ಎಂದು ಹೇಳಿದ್ದಾರೆ. ಇಲ್ಲಿ **ಖಡ್ಗೇನ** ಎಂದು ಹೇಳಿದ್ದಾರೆ. ಇದನ್ನು ಕಲ್ಪಭೇದದಿಂದ ಯೋಜಿಸಿಕೊಳ್ಳಬೇಕು. ಯಜ್ಞಪಶುವನ್ನು ಖಡ್ಗದಿಂದ ಕತ್ತರಿಸಿದಂತೆ ವಜ್ರದಿಂದ ಇವನ ತಲೆ ಕತ್ತರಿಸಿದೆ ಎಂದು ಮೊದಲ ಅಭಿಪ್ರಾಯ. ಕಲ್ಪಭೇದ ಎರಡನೇ ಅಭಿಪ್ರಾಯ. ।।೧೫।।

**ಗುರೋರಪಾಪಸ್ಯ** ಎಂಬಲ್ಲಿ **ಗುರೋಃ ಅಪ ಅಪಸ್ಯ** ಎಂದು ಭೇದ ಮಾಡಿಕೊಳ್ಳಬಹುದು. **ಅಪಸ್ಯ** ನಾನೇ ಮುಂತಾದ ಪಾಲಕ ರಹಿತನಾದ ಎಂದು ಅರ್ಥ ಮಾಡಿರುವರು. ।।೧೫।।

**ಶ್ರೀಹ್ರೀದಯಾಕೀರ್ತಿಭಿರುಜ್ಝಿತಂ ತ್ವಾಂ**
**ಸ್ವಕರ್ಮಣಾ ಪುರುಷಾದ್ಯೈಶ್ಚ ಗರ್ಹ್ಯಮ್ ।**
**ಕೃಚ್ಛ್ರೇಣ ಮಚ್ಛೂಲವಿಭಿನ್ನದೇಹಂ**
**ಅಸ್ಪೃಷ್ಟವಹ್ನಿಂ ಸಮದಂತು ಗೃಧ್ರಾಃ ।। ೧೬ ।**

**ಶ್ರೀ** ತ್ರಿವರ್ಗಸಂಪತ್ತು **ಹ್ರೀ** ಮಾಡಬಾರದ ಕಾರ್ಯಮಾಡಲು ನಾಚಿಕೆ **ದಯಾ** ಪ್ರಾಣಿಗಳಿಗೆ ಸುಖ ಬಯಸುವದು **ಕೀರ್ತಿಭಿಃ** ಯಶಸ್ಸುಗಳಿಂದ **ಉಜ್ಝಿತಂ** ರಹಿತನಾದ **ಸ್ವಕರ್ಮಣಾ** ಗುರುವಧೆಯೆಂಬ ನಿನ್ನ ಕಾರ್ಯದಿಂದ **ಪುರುಷಾದ್ಯೈಃ ಚ**

ಮನುಷ್ಯಭಕ್ಷಕರಿಂದಲೂ **ಗರ್ಹ್ಯಂ** ನಿಂದಿತನಾದ **ಕೃಚ್ಛ್ರೇಣ** ಪ್ರಯತ್ನದಿಂದ **ಮಚ್ಛೂಲವಿಭಿನ್ನದೇಹಂ** ನನ್ನ ಶೂಲದಿಂದ ಭೇದಿಸಲ್ಪಟ್ಟ ದೇಹ ಉಳ್ಳ **ಅಸ್ಪೃಷ್ಟವಹ್ನಿಂ** ಬೆಂಕಿಯ ಸ್ಪರ್ಶವಿಲ್ಲದ **ತ್ವಾಂ** ನಿನ್ನನ್ನು **ಗೃಧ್ರಾಃ** ಹದ್ದುಗಳು **ಸಮದಂತು** ತಿನ್ನಲಿ.

**ಅಸ್ಪೃಷ್ಟವಹ್ನಿಂ** ಎಂಬುದರಿಂದ ನಿನ್ನ ದೇಹಕ್ಕೆ ಅಗ್ನಿಸ್ಪರ್ಶ ಮಾಡಲು ಕೂಡಾ ಯಾರೂ ಉಳಿಯದಂತೆ ಎಲ್ಲ ದೇವತೆಗಳನ್ನು ಸಂಹರಿಸುವೆನೆಂದು ಸೂಚಿಸುವನು.

ಸತ್ಯಧರ್ಮರ ಪ್ರಕಾರ, **ಶ್ರೀ** ಎಂದರೆ ಮತಿ ಅಂದರೆ ಬುದ್ಧಿ ಇಲ್ಲದವ ಎಂದರ್ಥ. 'ಶ್ರೀರ್ಮತೌ' ಎಂದು ವಿಶ್ವವಿದೆ. **ಹ್ರೀಃ** ಎಂದರೆ ಇಂಥ ಕೆಲಸ ಮಾಡಿದವನೆಂದು ತಿಳಿದ ಜನರ ಮುಖ ನೋಡುವಾಗ ಲಜ್ಜೆ **ದಯಾ** ಒಬ್ಬನೇ ಬ್ರಾಹ್ಮಣ ಎಂಬ ಕರುಣೆ, ಎಂದರ್ಥ. **ಪುರುಷಾದೈಶ್ಚ ಗರ್ಹ್ಯಂ** ರಾಕ್ಷಸರೂ ಪೂಜ್ಯರನ್ನು ಈ ರೀತಿ ಮಾಡಲಾರರೆಂದು ಭಾವ. **ಕೃಚ್ಛ್ರೇಣ** ಶೂಲವು ಒಳಗೆ ಹೋಗುವಾಗ ಕಷ್ಟದಿಂದ ನಂತರ ಶೂಲದಿಂದ ಭಿನ್ನ ದೇಹ. **ಅಸ್ಪೃಷ್ಟವಹ್ನಿಂ** ಎಂದು ಇಂಥ ಪಾಪ ಮಾಡಿದವಗೆ ಸಂಸ್ಕಾರಾರ್ಹತೆ ಇಲ್ಲವೆಂದು ಸೂಚಿಸುವನು. ।।೧೬।।

**ಅನ್ಯೇ ತು ಯೇ ತ್ವಾನು ನೃಶಂಸಮಜ್ಞಾ**
**ಯದ್ಯುದ್ಯತಾಸ್ತ್ರಾಃ ಪ್ರಹರಂತಿ ಮಹ್ಯಮ್ ।**
**ತೈರ್ಭೂತನಾಥಂ ಸಗಣಂ ನಿಶಾತ-**
**ತ್ರಿಶೂಲನಿರ್ಭಿನ್ನಗಲೈರ್ಯಜಾಮಿ ।।೧೭।।**

**ಯೇ** ಯಾವ **ಅನ್ಯೇ ತು ಅಪಿ** ಇತರ ದೇವತೆಗಳೂ **ಅಜ್ಞಾಃ** ನನ್ನ ಬಲವನ್ನು ಅರಿಯದವರು **ನೃಶಂಸಂ** ಕ್ರೂರನಾದ **ತ್ವಾ** ನಿನ್ನನ್ನು **ಅನು** ಅನುಸರಿಸಿ **ಉದ್ಯತಾಸ್ತ್ರಾಃ ಸಂತಃ** ಅಸ್ತ್ರಧಾರಿಗಳಾಗಿ **ಮಹ್ಯಂ** ನನ್ನ ಮೇಲೆ **ಪ್ರಹರಂತಿ** ಪ್ರಹಾರ ಮಾಡುವರೋ **ನಿಶಾತ** ಸಾಣೆ ಹಿಡಿದ ಚೂಪಾದ **ತ್ರಿಶೂಲ** ತ್ರಿಶೂಲದಿಂದ **ನಿರ್ಭಿನ್ನ** ಕತ್ತರಿಸಲ್ಪಟ್ಟ **ಗಲೈಃ** ಕುತ್ತಿಗೆಗಳುಳ್ಳ **ತೈಃ** ಆ ದೇವತೆಗಳಿಂದ **ಸಗಣಂ** ಮಾರಿಕಾ-ಭೈರವ ಮುಂತಾದ ಸಮೂಹದಿಂದ ಸಹಿತನಾದ **ಭೂತನಾಥಂ** ರುದ್ರದೇವರನ್ನು ಉದ್ದೇಶಿಸಿ **ಯಜಾಮಿ** ಯಾಗ ಮಾಡುತ್ತೇನೆ.

ರುದ್ರದೇವರು ವೈಷ್ಣವರಾದರೂ ದುಷ್ಟರು ಮಾಡಿದ ಯಾಗದ ಭೋಗಕ್ಕೆ ಅವರ ದೂತರೇ ಯೋಗ್ಯರು. ಆದಕಾರಣ **ಸಗಣಂ ಭೂತನಾಥಂ** ಎಂದು ಈ ಸಮಯದಲ್ಲಿ ಹೇಳಿದ್ದು ಯೋಗ್ಯವೇ ಎನ್ನುತ್ತಾರೆ ಶ್ರೀಗಳು. ।।೧೭।।

ಜಯಾಪಜಯಗಳು ಒಬ್ಬನಿಗೇ ಎಂದು ನಿಶ್ಚಯವಿಲ್ಲವೆಂದು ಹಿಂದೆ ಹೇಳಿದ್ದಕ್ಕೆ ವಿಪರೀತವಾಗಿ ಹೇಳುವನು-

**ಅಥೋ ಹರೇ ಮೇ ಕುಲಿಶೇನ ವೀರ**
**ಹರ್ತಾ ಪ್ರಮಥ್ಯೇಹ ಶಿರೋ ಯದೀಹ ।**
**ತತ್ರಾಽನೃಣೋ ಭೂತಬಲಿಂ ವಿಧಾಯ**
**ಮನಸ್ವಿನಾಂ ಪಾದರಜಃ ಪ್ರಪತ್ಸ್ಯೇ ॥೧೮॥**

**ಅಥೋ** ಒಂದು ವೇಳೆ ವೀರ ಪರಾಕ್ರಮಿಯಾದ **ಹೇ ಹರೇ** ಇಂದ್ರನೇ **ಇಹ** ಯುದ್ಧದಲ್ಲಿ **ಕುಲಿಶೇನ** ವಜ್ರಾಯುಧದಿಂದ **ಪ್ರಮಥ್ಯ** ಬಹಳವಾಗಿ ಹೊಡೆದು **ಮೇ** ನನ್ನ **ಶಿರಃ** ತಲೆಯನ್ನು **ಹರ್ತಾ** ತೆಗೆಯುವಿಯಾದರೆ **ತತ್ರ** ಆಗಲೂ **ಭೂತಬಲಿಂ ವಿಧಾಯ** ನನ್ನ ದೇಹವನ್ನೇ ಭೂತಬಲಿಯನ್ನಾಗಿ ಮಾಡಿ **ಅನೃಣಃ ಸನ್** ಅಣ್ಣನ ಋಣವನ್ನು ತೀರಿಸಿಕೊಂಡವನಾಗಿ ಕರ್ಮಬಂಧದಿಂದ ಮುಕ್ತನಾಗಿ **ಮನಸ್ವಿನಾಂ** ವೀರಸ್ವರ್ಗ ಹೊಂದಿದ ಧೀರರ **ಪಾದರಜಃ ಪ್ರಪತ್ಸ್ಯೇ** ಪಾದಧೂಳಿಯನ್ನು ಹೊಂದುತ್ತೇನೆ.

ಅಂದರೆ ಹಿಂದೆ ರಣರಂಗದಲ್ಲಿ ಶರೀರ ತ್ಯಾಗ ಮಾಡಿ ಸ್ವರ್ಗವನ್ನು ಹೊಂದಿದವರ ಪಾದ ಧೂಳಿಯನ್ನು ಅಂದರೆ ಆ ಲೋಕವನ್ನು ಹೊಂದುತ್ತೇನೆ ಎಂದು ಭಾವ. ॥೧೮॥

ಜೀವಿಸುವದಕ್ಕಿಂತ ಮರಣ ಹೊಂದುವದೇ ನನಗೆ ಸಮ್ಮತವೆಂದು ನಿಸ್ಸಂದೇಹವಾಗಿ ಹೇಳುವನು-

**ಸುರೇಶ ಕಸ್ಮಾನ್ನ ಹಿನೋಷಿ ವಜ್ರಂ**
**ಪುರಃ ಸ್ಥಿತೇ ವೈರಿಣಿ ಮಯ್ಯಮೋಘಮ್ ।**
**ಮಾ ಸಂಶಯಿಷ್ಠಾ ಭಗದೇವ ವಜ್ರಂ**
**ಸ್ಯಾನ್ನಿಷ್ಫಲಂ ಕೃಪಣಾರ್ಥೇವ ಯಾಂಚ್ಯಾ ॥೧೯॥**

ಹೇ **ಸುರೇಶ** ಇಂದ್ರನೇ **ವೈರಿಣಿ** ಶತ್ರುವಾದ **ಮಯಿ** ನಾನು **ಪುರಃ ಸ್ಥಿತೇ ಸತಿ** ಎದುರಿಗೆ ನಿಂತಿರಲು **ವಜ್ರಂ** ವಜ್ರಾಯುಧವನ್ನು **ಕಸ್ಮಾತ್ ನ ಹಿನೋಷಿ** ಏಕೆ ಬಿಡುತ್ತಿಲ್ಲ ಗದೆಯಂತೆ ಇದೂ ಕೂಡ ನಿಷ್ಫಲವಾಗುವದೆನ್ನ ಬೇಡ ಎಂದು ಹೇಳಲು **ಅಮೋಘಂ** ಎಂದಿರುವನು ವ್ಯರ್ಥವಲ್ಲದ ಎಂದರ್ಥ. **ಗದಾ ಇವ** ಗದೆಯಂತೆ **ವಜ್ರಂ**

ವಜ್ರಾಯುಧವು **ನಿಷ್ಫಲಂ ಸ್ಯಾತ್** ವ್ಯರ್ಥವಾಗುವದು ಎಂದು **ಮಾ ಸಂಶಯಿಷ್ಠಾಃ** ಸಂದೇಹ ಪಡಬೇಡ **ಕೃಪಣಾರ್ಥಾ ಯಾಂಚ್ಯಾ** ಇವ ಕೃಪಣನಿಂದ ಪ್ರಯೋಜನ ಪಡೆಯುವ ಯಾಚನೆಯಂತೆ **ನಿಷ್ಫಲಂ** ನಿಷ್ಪ್ರಯೋಜನವೆಂದೂ **ಮಾ ಸಂಶಯಿಷ್ಠಾಃ** ಸಂಶಯ ಪಡಬೇಡ. ಗದೆಯು ವ್ಯತಿರೇಕ ದೃಷ್ಟಾಂತ. ಇದಾದರೂ **ನಿಷ್ಫಲಂ** ನಿತರಾಂ ಫಲತೀತಿ ನಿಷ್ಫಲಂ ಅಂದರೆ ಪ್ರಯೋಜನ ಉಳ್ಳದ್ದಾಗುವದು ಎಂದು ಭಾವ. ಭಗದೇವ ಎಂಬ ಪಾಠದಲ್ಲಿ ೧೨ ಭಾಗ್ಯಗಳ ಸ್ವಾಮಿಯೇ ೨. ಭಾಗ್ಯದಾತನೇ ೩. ಕೀರ್ತ್ಯಾದಿಗುಣವಂತನೇ ೪.ಯೋನಿಯೇ ಆರಾಧ್ಯದೇವತೆಯಾಗಿ ಉಳ್ಳವನೇ ಅರ್ಥಾತ್ ಅಹಲ್ಯಾಜಾರನೇ ಎಂದು ನಿಂದೆಯನ್ನು ಸೂಚಿಸುವನು. ಇಂದ್ರನಿಗೆ ಸಂಬೋಧನೆ.

**ಭಗ ಐಶ್ವರ್ಯ ಮಾಹಾತ್ಮ್ಯಜ್ಞಾನವೈರಾಗ್ಯಯೋನಿಷು ।**
**ವೀರ್ಯಪ್ರಯತ್ನೇಷು ಶ್ರೀಧರ್ಮರವಿಮುಕ್ತಿಷು ॥**

ಎಂದು ಅಭಿಧಾನವಿದೆ. ॥೧೯॥

ವಜ್ರಾಯುಧವು ಅಮೋಘವಾಗಲು ಕಾರಣವನ್ನು ಹೇಳುತ್ತಾ ಇಂದ್ರನನ್ನು ಪ್ರೋತ್ಸಾಹಿಸುವನು-

**ನನ್ವೇಷ ವಜ್ರಸ್ತವ ಶಕ್ರ ತೇಜಸಾ**
**ಹರೇರ್ದಧೀಚೇಸ್ತಪಸಾ ಚ ತೇಜಿತಃ ।**
**ತೇನೈವ ಶತ್ರುಂ ಜಹಿ ವಿಷ್ಣುಯಂತ್ರಿತೋ**
**ಯತೋ ಹರಿರ್ವಿಜಯಃ ಶ್ರೀರ್ಗುಣಾಸ್ತತಃ** ॥೨೦॥

**ಹೇ ಶಕ್ರ** ಇಂದ್ರನೇ **ಏಷಃ** ಈ **ತವ ವಜ್ರಃ** ನಿನ್ನ ವಜ್ರಾಯುಧವು **ಹರೇಃ** ಶ್ರೀಹರಿಯ **ತೇಜಸಾ** ವಿಶೇಷಸನ್ನಿಧಾನದಿಂದಲೂ **ದಧೀಚೇಃ** ದಧೀಚಿ ಋಷಿಗಳ **ತಪಸಾ ಚ** ತಪಸ್ಸಿನಿಂದ ತೇಜಸ್ಸಿನಿಂದಲೂ **ತೇಜಿತಃ ನನು** ತೀಕ್ಷ್ಣವಾಗಿದೆಯಷ್ಟೇ **ವಿಷ್ಣುಯಂತ್ರಿತಃ** ವಿಷ್ಣುವಿನ ವಶನಾಗಿ, ವಿಷ್ಣುವಿನಿಂದ ಪ್ರೇರಿತನಾಗಿ **ತೇನೈವ** ಆ ಶ್ರೀಹರಿಯ ಸನ್ನಿಧಾನ ಉಳ್ಳ ವಜ್ರದಿಂದಲೇ **ಶತ್ರುಂ** ವೈರಿಯಾದ ನನ್ನನ್ನು **ಜಹಿ** ಕೊಲ್ಲು **ಯತಃ** ಎಲ್ಲಿ **ಹರಿಃ** ಶ್ರೀಹರಿ ಇರುವನೋ **ತತಃ** ಅಲ್ಲಿ **ವಿಜಯಃ** ಗೆಲುವು **ಶ್ರೀಃ** ಸಂಪತ್ತು **ಗುಣಾಃ** ಇತರ ಗುಣಗಳು ಇರುವವು.

ಹೇ ವಜ್ರಸ್ತವ ಎಂದು ಒಂದೇ ಪದವೆಂದು ತಿಳಿಯಬೇಕು. ವಜ್ರೇಣ, ಸ್ತವಃ ಯಸ್ಯ ಸಃ ವಜ್ರಾಯುಧದಿಂದ ಸ್ತುತಿಸಲ್ಪಡುವವನೇ, ವಜ್ರಸ್ಯ ಸ್ತವಃ ಯೇನ ತತ್ಸಂಬುದ್ಧಿ ವಜ್ರದ ಸ್ತೋತ್ರ ಮಾಡುವವನೇ ಹೀಗೂ ಅರ್ಥ ಮಾಡಿರುವರು. **ತೇ** ತವ **ಅಜಿತಃ** ಅಪರಾಭೂತಃ ನಿನ್ನ ಸೋಲಿಲ್ಲದ **ವಜ್ರಃ** ವಜ್ರವು ಹೀಗೂ ಅನ್ವಯಾರ್ಥ. **ಯತಃ ವಿಷ್ಣುಯಂತ್ರಿತಃ** ಎಲ್ಲಿ ವಿಷ್ಣುವಶನಾದವನಿರುವನೋ **ತತಃ** ಅಲ್ಲಿ **ಹರಿಃ** ಶ್ರೀಹರಿ ತಾನಿರುವನು ಅವನಿದ್ದಲ್ಲಿ ವಿಜಯ, ಶ್ರೀ, ಗುಣಗಳಿರುವವು. ಹೀಗೂ ವ್ಯಾಪ್ತಿ ತೋರಿಸುವರು. 'ಯತ್ರ ಯೋಗೇಶ್ವರಃ ಕೃಷ್ಣಃ' 'ತತ್ರ ಶ್ರೀರ್ವಿಜಯೋ ಭೂತಿಃ ಧ್ರುವಾ ನೀತಿರ್ಮತಿರ್ಮಮ' ಎಂದು ಗೀತೆಯಲ್ಲಿ ಹೇಳಿದೆ. ।।೨೦।।

ಯುದ್ಧದಲ್ಲಿ ಸನ್ನದ್ಧನಾದ ವೃತ್ರಾಸುರನು ಸಜ್ಜೀವನೇ ಎಂದು ಅವನ ಸ್ವಭಾವ ತಿಳಿಸಲು ಗ್ರಂಥಕಾರರು ಹೇಳುವರು. ಕೊಲ್ಲುವದರಿಂದ ನನಗೆ ಪೀಡೆಯಾಗುವದೆಂದು ಸಂಶಯವೇ ಬೇಡವೆಂದು ಹೇಳುವನು-

**ಅಹಂ ಸಮಾಧಾಯ ಮನೋ ಯಥಾಹ**
**ಸಂಕರ್ಷಣಸ್ತಚ್ಚರಣಾರವಿಂದೇ ।**
**ತ್ವದ್ವಜ್ರರಂಹೋ ಲುಲಿತಗ್ರಾಮ್ಯಪಾಶೋ**
**ಗತಿಂ ಮುನೇರ್ಯಾಮ್ಯಪವಿದ್ಧಲೋಕಃ ।।೨೧।।**

**ಅಹಂ** ನಾನು **ಸಂಕರ್ಷಣಃ** ನನ್ನ ಸ್ವಾಮಿಯಾದ ಶ್ರೀಹರಿಯು **ಯಥಾಹ** 'ವಜ್ರೇಣ ಜಹಿ' ಎಂದೇನು ಹೇಳಿರುವನೋ ಹಾಗೆ ಅಥವಾ ಮನಸ್ಸನ್ನು ಏಕಾಗ್ರದಲ್ಲಿಡುವದನ್ನು ಉಪದೇಶಿಸುವನೋ **ತಥಾ** ಹಾಗೆ **ತಚ್ಚರಣಾರವಿಂದೇ** ಅವನ ಪಾದಾರವಿಂದದಲ್ಲಿ **ಮನಃ ಸಮಾಧಾಯ** ಮನಸ್ಸನ್ನಿಟ್ಟು ತ್ವದ್ವಜ್ರ ನಿನ್ನ ವಜ್ರಾಯುಧದ **ರಂಹ** ವೇಗದಿಂದ **ಲುನಿತ** ಕತ್ತರಿಸಲ್ಪಟ್ಟ **ಗ್ರಾಮ್ಯಪಾಶಃ** ವಿಷಯಾನುಭವವೆಂಬ ಪಾಶ ಉಳ್ಳವನಾಗಿ **ಅಪವಿದ್ಧಲೋಕಃ ಸನ್** ದೇಹವನ್ನು ಬಿಟ್ಟವನಾಗಿ 'ಅಸ್ಮಾತ್ ಲೋಕಾತ್ ಪ್ರೇತ್ಯ' ಎಂದು ಶ್ರುತಿ ಇದೆ. ಈ ಲೋಕ ಸ್ಥಿತಿಯನ್ನು ಕಳೆದುಕೊಂಡು, ಸ್ವರ್ಗಾದಿಲೋಕಗಳನ್ನು ತಿರಸ್ಕರಿಸಿದವನಾಗಿ **ಮುನೇಃ** ಜ್ಞಾನಿಯ **ಗತಿಂ** ವೈಕುಂಠವನ್ನು **ಯಾಮಿ** ಹೊಂದುವೆನು **ಮುನೇಃ** ವಿಶ್ವರೂಪಾಚಾರ್ಯರ ಗತಿಯನ್ನು, ಸನ್ಯಾಸವನ್ನು ಹೊಂದುವೆನು. ।।೨೧।।

ಪರಲೋಕದಲ್ಲಿ ಸುಖವೋ ದುಃಖವೋ ನಿಶ್ಚಿತವಾಗಿ ತಿಳಿಯದು. ನಿನಗೆ ಇಲ್ಲಿಯಾದರೂ ಅಖಂಡ ಐಶ್ವರ್ಯ ಕಂಡು ಬಂದಿರುವದು. ಈ ಲೋಕವನ್ನು ಬಿಟ್ಟರೆ

ಆದೂ ಇಲ್ಲವಾಗುವದು. ಕಾರಣ ನಿನಗೆ ದುಃಖವಾಗುವದಿಲ್ಲವೇ? ಎಂದು ಆಶಂಕಿಸಿ ಎಲ್ಲವೂ ಈಶ್ವರಾಧೀನವಾದ್ದರಿಂದ ಆವನು ಸ್ಥಿರವಾದುದನ್ನೇ ಕೊಡುವನು. ತನ್ನ ಏಕಾಂತಭಕ್ತರಿಗೆ ಸ್ವರ್ಗಾದಿಗಳನ್ನೇ ಕೊಡುವದಿಲ್ಲ. ಅಂದ ಮೇಲೆ ಐಹಿಕ ಕೊಡುವದಿಲ್ಲವೆಂದು ಬೇರೆ ಹೇಳಬೇಕಿಲ್ಲ. ಆದ್ದರಿಂದ ದೇಹತ್ಯಾಗದಿಂದ ನನಗೆ ದುಃಖವಿಲ್ಲ ಎಂಬ ಅಭಿಪ್ರಾಯದಿಂದ ಹೇಳುತ್ತಾರೆ. ಭಗವಂತನ, ಭಗವದ್ಭಕ್ತರ ಕ್ರಿಯೆಗಳನ್ನು ತಿಳಿಸುವರು-

**ಪುಂಸಾಂ ಕಿಲೈಕಾಂತಧಿಯಾಂ ಸ್ವಕಾನಾಂ**
**ಯಾಃ ಸಂಪದೋ ದಿವಿ ಭೂಮೌ ರಸಾಯಾಮ್ ।**
**ನ ರಾತಿ ಯಸ್ಮಾದ್ಭಯಮುದ್ವೇಗ ಆಧಿ-**
**ರ್ಮದಃ ಕಲಿರ್ವ್ಯಸನಂ ಸಂಪ್ರಯಾಸಃ ॥೨೨॥**

ಶ್ರೀಹರಿಯು **ಏಕಾಂತಧಿಯಾಂ** ಒಂದೇ ಮನಸ್ಸಿನಿಂದ ತನ್ನನ್ನು ಸೇವಿಸುವ **ಸ್ವಕಾನಾಂ** ತನ್ನ ಏಕಾಂತಭಕ್ತರಾದ **ಪುಂಸಾಂ** ಉತ್ತಮಾಧಿಕಾರಿಗಳಿಗೆ **ದಿವಿ** ಸ್ವರ್ಗದಲ್ಲಿ **ಭೂಮೌ** ಭೂಮಿಯಲ್ಲಿ **ರಸಾಯಾಂ** ರಸಾತಳದಲ್ಲಿ **ಯಾಃ ಸಂಪದಃ** ಯಾವ ಸಂಪತ್ತುಗಳಿವೆಯೋ **ತಾಃ** ಅವುಗಳನ್ನು **ನ ರಾತಿ ಕಿಲ** ಕೊಡುವದಿಲ್ಲವಷ್ಟೇ **ಯಸ್ಮಾತ್** ಏಕೆಂದರೆ **ಯಸ್ಮಾತ್** ಯಾವ ಕಾರಣ ಸಂಪತ್ತು ಕೊಡುವದರಿಂದ **ಭಯಂ** ಬೇರೆಯವರಿಂದ ಭಯವು **ಉದ್ವೇಗಃ** ಉದ್ವೇಗವು, (ಪ್ರತಿಭಯ) **ಆಧಿಃ** ಮನೋವ್ಯಥೆಯು **ಮದಃ** ಅಹಂಕಾರವು **ಕಲಿಃ** ಜಗಳವು **ವ್ಯಸನಂ** ದುಷ್ಟಚಟಗಳು **ಸಂಪ್ರಯಾಸಃ** ಅತ್ಯಂತ ಕಷ್ಟವು ಆಗುವದೋ ಆ ಕಾರಣದಿಂದ ಕೊಡುವದಿಲ್ಲ. ಹೀಗೆ ವ್ಯಾಖ್ಯಾನಿಸಿದ್ದರಿಂದ ಭಗವಂತನು ಕೊಡುವ ಸ್ವರ್ಗಾದಿ ಸಂಪತ್ತು ಅಪರಿಹಾರ್ಯವಾದ್ದರಿಂದ 'ತಿರಸ್ಕರಿಸಿದ ಸ್ವರ್ಗಾದಿ ಲೋಕಗಳುಳ್ಳವರಾಗಿ ಎಂದು ಹೇಳಿದ್ದು ಹೇಗೆ ಎಂಬುದಕ್ಕೆ ಉತ್ತರಿಸಿದಂತಾಯಿತು.

ಮುಂದೆ ಹೇಳುವದರಿಂದಲೂ ಶ್ರೀಹರಿಯ ಭಕ್ತಾನುಕಂಪಿತ್ವವನ್ನು ಕೊಡುವನೆಂದು ಹೇಳುವರು-

**ತ್ರೈವರ್ಗಿಕಾಯಾಸವಿಘಾತಮಸ್ಮತ್**
**ಪತಿರ್ವಿಧತ್ತೇ ಪುರುಷಸ್ಯ ಶಕ್ರಃ ।**
**ತೇನಾನುಮೇಯೋ ಭಗವತ್ಪ್ರಸಾದೋ**
**ಯೋ ದುರ್ಲಭೋಽಕಿಂಚನಗೋಚರೋಽನ್ಯೈಃ ॥೨೩॥**




**ಹೇ ಶಕ್ರ** ಇಂದ್ರನೇ **ಅಸ್ಮತ್ಪತಿಃ** ನಮ್ಮ ಸ್ವಾಮಿಯು **ಪುರುಷಸ್ಯ** ಭಕ್ತನಿಗೆ **ತ್ರೈವರ್ಗಿಕಾಯಾಸವಿಘಾತಂ** ಧರ್ಮ-ಅರ್ಥ-ಕಾಮಗಳೆಂಬ ತ್ರಿವರ್ಗ ವಿಷಯಕವಾದ ಆಯಾಸದ ನಾಶವನ್ನು **ವಿಧತ್ತೇ** ಮಾಡುವನು. **ತೇನ** ಆಯಾಸದ ನಾಶದಿಂದ ಪ್ರವೃತ್ತಿಧರ್ಮದ ಫಲವಾಗಿ ಬಂದ ಬಂಧಕ ಐಶ್ವರ್ಯದ ನಾಶದಿಂದ **ಯಃ** ಯಾವುದು **ಅಕಿಂಚನಗೋಚರಃ** ಭಗವಂತನನ್ನು ಬಿಟ್ಟು ಬೇರೆ ಏನನ್ನೂ ಅಪೇಕ್ಷಿಸದವರಿಗೆ ದೊರೆಯುವದೋ **ಅನ್ಯೈಃ** ಅಪೇಕ್ಷೆಯುಳ್ಳವರಿಂದ **ದುರ್ಲಭಃ** ದೊರೆಯಲಾರದೋ **ಸಃ** ಅಂತಹ **ಭಗವತ್ಪ್ರಸಾದಃ** ಶ್ರೀಹರಿಯ ಉತ್ತಮ ಪ್ರಸಾದವು ಆಗಿದೆ ಎಂದು **ಅನುಮೇಯಃ** ಅನುಮಾನ ಪ್ರಮಾಣದಿಂದ ತಿಳಿಯಲಾಗುವದು. ।।೨೩।।

'ಯಸ್ಯಾಽನುಗ್ರಹಮಿಚ್ಛಾಮಿ ಹರಿಷ್ಯೇ ತದ್ಧನಂ ಶನೈಃ' ಮುಂತಾದ ಮಾತುಗಳಿಂದ ಆಯಾಸಘಾತವು ಪ್ರಸಾದಕಾರ್ಯವಾದ್ದರಿಂದ, ಕಾರ್ಯದಿಂದ ಕಾರಣ ಅನುಮಾನ ಮಾಡಬಹುದು. ಹರೇ ಹರೇ ಎಂದು ಹರಿಯನ್ನು ಸಂಬೋಧನೆ ಮಾಡುವ ಇವನು ಸ್ವಾಭಾವಿಕವಾಗಿ ಭಗವದ್ಭಕ್ತಿಗೆ ಸಮುದ್ರನು. ಆದ್ದರಿಂದ ಪರವಶತೆಯಿಂದ ಇವನಿಗೆ ಹರಿಸ್ಮರಣ ಉಂಟಾಗಿ ಈ ವಿಧ ಬುದ್ಧಿಯು ಬಹಳವಾಗಿ ವ್ಯಕ್ತವಾಯಿತೆಂದು ಹೇಳುವರು-

**ಅಹಂ ಹರೇ ತವ ಪಾದೈಕಮೂಲ-**
**ದಾಸಾನುದಾಸೋ ಭವಿತಾಽಸ್ಮಿ ಭೂಯಃ ।**
**ಮನಃ ಸ್ಮರೇತಾತ್ಮಪತೇರ್ಗುಣಾನ್ನೋ**
**ಗೃಣೀತ ವಾಕ್ಕರ್ಮ ಕರೋತು ಕಾಯಃ ।।೨೪।।**

**ಹೇ ಹರೇ** ಶ್ರೀಹರಿಯೇ **ಅಹಂ** ನಾನು **ಭೂಯಃ** ಮತ್ತೆ ಮತ್ತೆ **ತವ** ನಿನ್ನ **ಪಾದೈಕಮೂಲದಾಸಾನುದಾಸಃ** ಪಾದವೇ ಮುಖ್ಯಾಶ್ರಯವಾಗಿ ಉಳ್ಳ ದಾಸರ ದಾಸನು **ಭವಿತಾ ಅಸ್ಮಿ** ಆಗುವೆನು **ನಃ** ನಮ್ಮ **ಮನಃ** ಮನಸ್ಸು **ಆತ್ಮಪತೇಃ** ನನ್ನ ಸ್ವಾಮಿಯನ್ನು **ಸ್ಮರೇತ** ಸ್ಮರಿಸಲಿ.

'ಅಧೀಗರ್ಥದಯೇಶಾಂ ಕರ್ಮಣಿ' ಎಂಬ ಸೂತ್ರದಿಂದ ಆತ್ಮಪತೇಃ ಎಂದು ಷಷ್ಠೀ ಆಗಿದೆ. **ಅಸುಪತೇಃ** ಎಂಬ ಪಾಠದಲ್ಲಿ ಪ್ರಾಣನಾಥನನ್ನು ಎಂದರ್ಥ. **ನಃ ವಾಕ್** ನಮ್ಮ ವಾಗಿಂದ್ರಿಯವು **ಗುಣಾನ್ ಗೃಣೀತ** ಗುಣಗಳನ್ನು ಸ್ತುತಿಸಲಿ **ಕಾಯಃ** ದೇಹವು **ಕರ್ಮ ಕರೋತು** ನಮಸ್ಕಾರಾದಿಗಳನ್ನು ಮಾಡಲಿ. ।।

ಪಾದೈಕಮೂಲ ಎಂಬಲ್ಲಿ ಏಕಶಬ್ದವು ಸಂಖ್ಯಾರ್ಥವಲ್ಲದ್ದರಿಂದ 'ಪೂರ್ವಕಾಲೈಕ...' ಎಂಬ ಸೂತ್ರದಿಂದ ಪೂರ್ವನಿಪಾತಕ್ಕೆ ಅವಕಾಶವಿಲ್ಲ. ಅಥವಾ ಏಕಮೂಲಂ ಎಂದು ಏಕಪದಕ್ಕೆ ಮೂಲ ಪದದ ಜೊತೆಗೆ ಅನ್ವಯ ಮಾಡಿದರೆ ಸಂಖ್ಯಾರ್ಥಕವಾದ್ದರಿಂದ ಪೂರ್ವನಿಪಾತವೆಂದೂ ತಿಳಿಯಬಹುದು. ।।೨೪।।

ದಾಸ್ಯ ತೆಗೆದುಕೊಂಡೇನು ಮಾಡುವಿ ನಿನಗೆ ಮಹಾಫಲ ಕೊಡುವೆನು ಎಂದರೆ ಹೇಳುವನು. (ಚೆಟ್ಟಿ) ವೀರಸ್ವರ್ಗವೂ ಕೂಡ ವೈಕುಂಠಾದಿಗಳಂತೆ ಎಂದು ಹೇಳುವರು- (ವಿಜ)

**ನ ನಾಕಪೃಷ್ಠಂ ನ ಚ ಪಾರಮೇಷ್ಠ್ಯಂ**
**ನ ಸಾರ್ವಭೌಮಂ ನ ರಸಾಧಿಪತ್ಯಮ್ ।**
**ನ ಯೋಗಸಿದ್ಧೀರಪುನರ್ಭವಂ ವಾ**
**ಸಮಂಜಸಂ ತ್ವಾ ವಿರಹಯ್ಯ ಕಾಂಕ್ಷೇ** ।।೨೫।।

ಶ್ರೀಹರಿಯೇ **ಸಮಂಜಸಂ** ವೈಷಮ್ಯನೈರ್ಘೃಣ್ಯ ಬುದ್ಧಿ ಇಲ್ಲದ, ಎಲ್ಲ ಸೌಭಾಗ್ಯ ನಿಧಿಯಾದ ಎಲ್ಲಕ್ಕಿಂತ ಸಮೀಚೀನನಾದ **ತ್ವಾಂ** ನಿನ್ನನ್ನು **ವಿರಹಯ್ಯ** ತೊರೆದು **ನಾಕಪೃಷ್ಠಂ** ಸ್ವರ್ಗವನ್ನು ಅದರ ಮೇಲಿರುವ ಮಹಃ ಜನಃ ತಪಃ ಎಂಬ ಲೋಕಗಳನ್ನು **ನ ಕಾಂಕ್ಷೇ** ಅಪೇಕ್ಷಿಸುವದಿಲ್ಲ. **ಪಾರಮೇಷ್ಠ್ಯಂ** ಸತ್ಯಲೋಕವನ್ನು **ನ ಚ ಕಾಂಕ್ಷೇ** ಇಚ್ಛಿಸುವದಿಲ್ಲ. **ಸಾರ್ವಭೌಮಂ** ಭೂಮಿಯಲ್ಲಿ ಚಕ್ರವರ್ತಿ ಪದವಿಯನ್ನು ನ ಆಶಿಸುವದಿಲ್ಲ. **ರಸಾಧಿಪತ್ಯಂ** ರಸಾತಳದ ಒಡೆತನವನ್ನೂ ನ ಆಶಿಸುವದಿಲ್ಲ. **ಯೋಗಸಿದ್ಧಿಃ** ಯೋಗಾಭ್ಯಾಸದಿಂದ ಬರುವ ಅಣಿಮಾದಿ ಅಷ್ಟಸಿದ್ಧಿಗಳನ್ನು ನ ಆಕಾಂಕ್ಷಿಸುವದಿಲ್ಲ. **ಅಪುನರ್ಭವಂ ವಾ ನ ಕಾಂಕ್ಷೇ** ಪೂರ್ಣಸುಖವಿಲ್ಲದ ಪುನರ್ಜನ್ಮಾಭಾವರೂಪವಾದ ಮೋಕ್ಷವನ್ನೂ ಇಚ್ಛಿಸುವದಿಲ್ಲ. ಹೀಗೆ ಹೇಳಿದ್ದರಿಂದ ಮೋಕ್ಷವು ಪ್ರಧಾನಫಲವಾದ್ದರಿಂದ ಎಲ್ಲ ಸಾಧನಗಳೂ ಅದಕ್ಕಾಗಿಯೇ. ಆದ್ದರಿಂದಲೂ ಅದನ್ನು ಆಕಾಂಕ್ಷಿಸದಿರುವದು ಹೇಗೆ? ಎಂಬ ಆಶಂಕೆಗೆ ಅವಕಾಶವಿಲ್ಲ. 'ಸಮ್ಯಕ್ ಸ್ವರೂಪಾಭಿವ್ಯಕ್ತಿಃ ಅಭಾವೋ ಜನನಸ್ಯ ಚ' ಎಂದು ಮೋಕ್ಷವು ಎರಡು ಬಗೆ. ಅದರಲ್ಲಿ ಸಮ್ಯಕ್ ಸ್ವರೂಪಾನಂದಾಭಿವ್ಯಕ್ತಿಯು ಮುಖ್ಯ ಮೋಕ್ಷ. ಜನನಾಭಾವ ಅಮುಖ್ಯ ಮೋಕ್ಷ. ಆದ್ದರಿಂದ ಅಮುಖ್ಯ ಮೋಕ್ಷ ಬೇಡವೆಂಬುದು ಯುಕ್ತವೆಂದು ತಿಳಿಯಬೇಕು. ಆದ್ದರಿಂದಲೇ ಅಪುನರ್ಭವ ಎಂಬ ಪದ ಹಾಕಿರುವರು ಎಂದು ಚೆಟ್ಟಿಯವರ ಅಭಿಪ್ರಾಯ ಮಧ್ಯಮಾಧಿಕಾರಿ ವಿವಕ್ಷೆಯಿಂದ ಎನಿಸುತ್ತದೆ.

ಸತ್ಯಧರ್ಮರ ಪ್ರಕಾರ 'ಏಕಾಂತಾನಾಂ ನ ಕಸ್ಯಚಿದರ್ಥೇ ನಾರಾಯಣೋ ದೇವಃ' ಎಂದಿರುವದರಿಂದ ಮೋಕ್ಷವನ್ನು ಮುಖ್ಯವಾದುದನ್ನು ಪ್ರಧಾನವಾಗಿ ಅಪೇಕ್ಷಿಸುವದಿಲ್ಲ ನಾರಾಯಣ ದರ್ಶನವೇ ಮುಖ್ಯ ಉದ್ದೇಶ್ಯವೆಂದು ಭಾವ. ॥೨೫॥

**ಅಜಾತಪಕ್ಷಾ ಇವ ಮಾತರಂ ಖಗಾಃ**
**ಸ್ತನ್ಯಂ ಯಥಾ ವತ್ಸತರಾಃ ಕ್ಷುಧಾರ್ತಾಃ ।**
**ಪ್ರಿಯಂ ಪ್ರಿಯೇವಾಧ್ಯುಷಿತಂ ವಿಷಣ್ಣಂ**
**ಮನೋಽರವಿಂದಾಕ್ಷ ದಿದೃಕ್ಷತೇ ತ್ವಾಮ್** ॥೨೬॥

**ಅರವಿಂದಾಕ್ಷ** ಕಮಲದಂತೆ ಕಣ್ಣುಳ್ಳ ಶ್ರೀಹರಿಯೇ **ಅಜಾತಪಕ್ಷಾಃ** ರೆಕ್ಕೆ ಬರದಿರುವ **ಖಗಾಃ** ಮರಿಪಕ್ಷಿಗಳು **ಮಾತರಂ ಇವ** ಗೂಗೆಗೆ ಹೆದರಿ ತಾಯಿಹಕ್ಕಿಯನ್ನು (ಸಮೀಪಿಸುವಂತೆ) ಕಾಣಬೇಕೆಂದು ಹಂಬಲಿಸುವಂತೆ **ಕ್ಷುಧಾರ್ತಾಃ** ಹಸಿವಿನಿಂದ ಪೀಡಿತವಾದ **ವತ್ಸತರಾಃ** ಎಳೆ ಕರುಗಳು **ಸ್ತನ್ಯಂ ಯಥಾ** ಸ್ತನದಿಂದ ಬರುವ ಹಾಲನ್ನು ಕುಡಿಯಲು ಕಾತರಿಸುವಂತೆ **ವಿಷಣ್ಣಾಃ** ಕಾಮಪೀಡೆಯಿಂದ ದುಃಖಿತಳಾದ **ಪ್ರಿಯಾ** ಹೊಸದಾಗಿ ಮದುವೆಯಾದ ಮುಗ್ಧೆಯು **ಅಧ್ಯುಷಿತಂ** ದೂರದೇಶಕ್ಕೆ ಪ್ರವಾಸ ಹೋಗಿರುವ **ಪ್ರಿಯಂ ಇವ** ಪ್ರಿಯನಾದ ಪತಿಯನ್ನು ಕಾಣಬೇಕೆನ್ನುವಂತೆ **ವಿಷಣ್ಣಂ** ತಾಪತ್ರಯಗಳಿಂದ ಬೆಂದ ನೊಂದ ಕರ್ಮಗಳಿಂದ ಬದ್ಧವಾದ **ಮನಃ** ಮನಸ್ಸು **ತ್ವಾಂ ದಿದೃಕ್ಷತೇ** ನಿನ್ನನ್ನು ನೋಡಲಿಚ್ಛಿಸುವದು. ನೀನು ಬೇಡುವದಾದರೂ ಏನು ಎಂಬುದಕ್ಕೆ ಉತ್ತರಿಸಿದಂತಾಯಿತು.

**ಮಮೋತ್ತಮಶ್ಲೋಕಜನೇಷು ಸಖ್ಯಂ**
**ಸಂಸಾರಚಕ್ರೇ ಭ್ರಮತಃ ಸ್ವಕರ್ಮಭಿಃ ।**
**ತ್ವನ್ಮಾಯಯಾತ್ಮಾತ್ಮಜದಾರಗೇಹೇಷ್ವಾ-**
**ಸಕ್ತಚಿತ್ತಸ್ಯ ನ ನಾಥ ಭೂಯಾತ್** ॥೨೭॥

॥ ಇತಿ ಶ್ರೀಮದ್ಭಾಗವತೇ ಷಷ್ಠಸ್ಕಂಧೇ ಏಕಾದಶೋಽಧ್ಯಾಯಃ ॥

**ಹೇ ನಾಥ** ಸ್ವಾಮಿಯೇ **ಸ್ವಕರ್ಮಭಿಃ** ನಾನು ಮಾಡಿದ ಕರ್ಮಗಳ ಫಲವಾಗಿ **ಸಂಸಾರಚಕ್ರೇ** ಸಂಸಾರವೆಂಬ ಚಕ್ರದಲ್ಲಿ **ಭ್ರಮತಃ** ಸುತ್ತುವ **ಮಮ** ನನಗೆ **ಉತ್ತಮಶ್ಲೋಕಜನೇಷು** ಉತ್ತಮ ಕೀರ್ತಿಯುಳ್ಳ ನಿನ್ನ ಭಕ್ತಜನರಲ್ಲಿ **ಸಖ್ಯಂ** ಸ್ನೇಹವು

**ಭೂಯಾತ್** ಆಗಲಿ. **ತ್ವನ್ಮಾಯಯಾ** ನಿನ್ನ ಬಂಧಕಶಕ್ತಿಯಿಂದ **ಆತ್ಮಾ** ದೇಹ **ಆತ್ಮಜ** ಮಕ್ಕಳಲ್ಲಿ **ದಾರ** ಹೆಂಡತಿಯಲ್ಲಿಯೂ **ಗೇಹೇಷು** ಮನೆಯಲ್ಲಿಯೂ **ಆಸಕ್ತಚಿತ್ತಸ್ಯ** ಆಸಕ್ತವಾದ ಮನಸ್ಸುಳ್ಳ ಜನರ **ಸಖ್ಯಂ** ಸ್ನೇಹವು **ನ ಭೂಯಾತ್** ಆಗದಿರಲಿ.

**ಆಸಕ್ತಚಿತ್ತೇಷು** ಎಂಬ ಪಾಠದಲ್ಲಿ ಆಸಕ್ತ ಮನಸ್ಸುಳ್ಳ. ಆದ್ದರಿಂದ ಭಗವದ್ವಿಮುಖರಾದ ಜನರಲ್ಲಿ ಎಂದರ್ಥ. ಇದರಿಂದ ಶ್ರೀಹರಿ ದರ್ಶನಕ್ಕೆ ಭಕ್ತ ಜನಸಖ್ಯ ಅಭಕ್ತಜನ ಅಸಖ್ಯ ಎರಡು ಸಾಧನಗಳೆಂದು ಹೇಳಿದಂತಾಯಿತು. ।।೨೭।।

**ಶ್ರೀ ಸತ್ಯಧರ್ಮರ ವಿಶೇಷಾರ್ಥ**

**ಸ್ವಕರ್ಮಭಿಃ** ನಿನ್ನ ರೂಪವಿಶೇಷಗಳಿಂದ **ಭ್ರಮತಃ** ಸುತ್ತುವ ಎಂದರ್ಥ. ನಮ್ಮ ಕರ್ಮಗಳು ನಿಮಿತ್ತಮಾತ್ರ. ವಾಸ್ತವಿಕವಾಗಿ ನಿನ್ನ ರೂಪಗಳಿಂದಲೇ ಭ್ರಮಣವೆಂದು ಭಾವ. 'ಕರ್ಮನಾಮಾ ತು ಭಗವಾನ್ ಫಲಕರ್ತೃತ್ವತೋ ಹರಿಃ' ಎಂದು ಬೃಹದ್ಭಾಷ್ಯದಲ್ಲಿ ಹೇಳಿದೆ. ಉತ್ತಮ ಶ್ಲೋಕ ಜನ, ಇಷು, ಸಖ್ಯಂ ಎಂದು ಛೇದ. ಉತ್ತಮಜನಃ ಉತ್ತಮರು. ಯಂ ಯಾವುದನ್ನು ನನಾಥ ಯಾಚಿಸಿದರೋ ಅಂಥ ನಿನ್ನ ಭಕ್ತರ ಸಖ್ಯವಾಗಲಿ. ಆನಾಶೀರರ್ಥತ್ವಾತ್ ಪರಸ್ಮೈಪದಂ. ಶ್ಲೋಕಜ (ನಿರುಪಪದಾದಪಿ ಜನೇರ್ಡಃ) 'ಜೋ ಜೇತರಿ ಸಮಾಖ್ಯಾತಃ ಕಲತ್ರೇ ಜನನೇऽಪಿ ಜಂ' ಎಂದು ವಿಶ್ವವಿದೆ. ಯದ್ವಾ ಶ್ಲೋಕೇ ಕೀರ್ತಿಗಾಗಿ ಜಾಯತೇ ಹುಟ್ಟುವನು ತತ್ಸಂಬುದ್ಧಿ ಶ್ಲೋಕಜ ಉತ್ತಮ ಕೀರ್ತಿಗಾಗಿ ಜನಿಸಿದವನೇ 'ಶ್ಲೋಕೋ ಯಶಸಿ ಪದ್ಯೇ ಚ' ಎಂದು ಅಮರವಿದೆ. ಇಷು ಸಖ್ಯಂ ಶರವತ್ಸಖ್ಯಂ ಬಾಣದಂತೆ ಲಗ್ನವಾಗಲಿ 'ಶರವತ್ತನ್ಮಯೋ ಭವೇತ್' ಎಂದಿದೆ. ಕೇವಲ ನಿನ್ನಲ್ಲಿ ಲಗ್ನವಾಗಲಿ ದೇಹಾದಿಗಳಲ್ಲಿ ಬೇಡ ಎಂದು ಭಾವ.

ಇಲ್ಲಿಗೆ ಹನ್ನೊಂದನೇ ಅಧ್ಯಾಯವು ಮುಗಿಯಿತು

★★★★★




# ಅಥ ಶ್ರೀಮದ್ಭಾಗವತೇ - ಷಷ್ಠಸ್ಕಂಧೇ

## ದ್ವಾದಶೋಽಧ್ಯಾಯಃ

**ಅಧ್ಯಾಯಸಾರ**

ವೃತ್ರಾಸುರ ಈ ಯುದ್ಧದಲ್ಲಿಯೇ ತನುವನ್ನು ಪರಿತ್ಯಜಿಸಬೇಕೆಂದು ಬಯಸಿದ. ಶೂಲವನ್ನು ಹಿಡಿದು ಇಂದ್ರನೊಡನೆ ಯುದ್ಧಮಾಡಲು ಸನ್ನದ್ಧನಾದ. ಶೂಲವನ್ನು ಇಂದ್ರನ ಮೇಲೆ ಪ್ರಹಾರ ಮಾಡಿದ. ವಜ್ರಾಯುಧದಿಂದ ಶೂಲವನ್ನು ಕಡಿದು ಹಾಕಿದ ಇಂದ್ರ. ಶೂಲವನ್ನು ಹಿಡಿದ ಕೈಯನ್ನೂ ಕತ್ತರಿಸಿದ. ಅದನ್ನು ಲೆಕ್ಕಿಸದೇ ಪರಿಘ ಎಂಬ ಆಯುಧವನ್ನು ಇಂದ್ರನ ಮೇಲೆ ಪ್ರಯೋಗಿಸಿದ. ಪರಿಘಪ್ರಹಾರದಿಂದ ಪೀಡಿತನಾದ ಇಂದ್ರನ ಕೈಯಿಂದ ವಜ್ರಾಯುಧವು ನೆಲಕ್ಕೆ ಜಾರಿತು. ಕೈಕಡಿದರೂ ಈ ರೀತಿಯಾಗಿ ಯುದ್ಧಮಾಡುತ್ತಿರುವ ವೃತ್ರಾಸುರನನ್ನು ನೋಡಿ ಸುರ-ಅಸುರ-ಚಾರಣಾದಿಗಳು ಎಲ್ಲರೂ ಆಶ್ಚರ್ಯಚಕಿತರಾದರು. ವೃತ್ರನ ಪ್ರಶಂಸೆಯನ್ನು ಮಾಡಿದರು. ಇಂದ್ರನಿಗಾದ ಸಂಕಟವನ್ನು ಕಂಡು ದೇವತೆಗಳೆಲ್ಲ ಹಾಹಾಕಾರ ಮಾಡಿದರು.

ತನ್ನ ಕೈಯಿಂದ ಜಾರಿಹೋದ ವಜ್ರವನ್ನು ಕಂಡು ಇಂದ್ರನಿಗೆ ನಾಚಿಕೆಯಾಯಿತು. ಬಿದ್ದ ವಜ್ರವನ್ನು ಮತ್ತೆ ಕೈಗೆ ತೆಗೆದುಕೊಳ್ಳಲಿಲ್ಲ. ಆಗ ವೃತ್ರಾಸುರ ಇಂದ್ರನಿಗೆ ಹೇಳಿದ.

ಹೇ ಇಂದ್ರ ! ನೀನು ವಜ್ರವನ್ನು ಸ್ವೀಕರಿಸು. ಶತ್ರುವಾದ ನನ್ನನ್ನು ಸಂಹರಿಸು. ಉಪಾಯಕ್ಕೆ ಪ್ರತಿಯಾಗಿ ಉಪಾಯವನ್ನು ಮಾಡುವ ಕಾಲವಿದು. ವಿಷಾದಪಡುವ ಕಾಲವಲ್ಲ.

ಭಗವಂತ ಸೃಷ್ಟ್ಯಾದಿಕರ್ತೃವಾಗಿದ್ದಾನೆ. ಬ್ರಹ್ಮಾದಿಗಳಿಗೆ ನಿಯಾಮಕನಾಗಿದ್ದಾನೆ. ಹೀಗಾಗಿ ದೇವರನ್ನು ಸೋಲಿಸುವುದು ಯಾರಿಂದಲೂ ಯಾವಾಗಲಾದರೂ

ಸಾಧ್ಯವೇ ಇಲ್ಲ. ಆದ್ದರಿಂದ ಜಯವೆಂಬುದು ಪರಮಾತ್ಮನಿಗೆ ಮಾತ್ರ ನಿಯತ. ಉಳಿದವರಿಗೆ ಅವರವರ ಪ್ರಾರಬ್ಧಕ್ಕೆ ಅನುಗುಣವಾಗಿ ಜಯ-ಪರಾಜಯಗಳಾಗುತ್ತವೆ. ಯುದ್ಧದಲ್ಲಿ ನನ್ನ ಕೈ ಕಡೆದು ಹೋದರೂ ನಿನ್ನನ್ನು ಸಂಹರಿಸಬೇಕೆಂಬ ನನ್ನ ಪ್ರಯತ್ನವನ್ನು ಗಮನಿಸು. ಈ ಸಂಗ್ರಾಮವೆಂಬುದು ಜೂಜಿಗೆ ಸಮಾನವಾದದ್ದು. ಈ ಸಂಗ್ರಾಮವೆಂಬ ಜೂಜಿನಲ್ಲಿ ಪ್ರಾಣವೇ ಪಣವಾಗಿಡಬೇಕು. ಬಾಣಗಳೇ ಲೆತ್ತಗಳು. ಈ ಸಂಗ್ರಾಮಜೂಜಾಟದಲ್ಲಿ ಯಾರಿಗೆ ಜಯ, ಯಾರಿಗೆ ಪರಾಜಯವೆಂದು ತಿಳಿಯುವುದೇ ಇಲ್ಲ.

ವೃತ್ರಾಸುರನ ಮಾತುಗಳನ್ನು ಕೇಳಿದ ಇಂದ್ರ ವಜ್ರಾಯುಧವನ್ನು ಸ್ವೀಕಾರ ಮಾಡಿದ. ಅವನ ಈ ವ್ಯಾಪಾರವನ್ನು ಕಂಡು ನಗುತ್ತಲೇ ಹೇಳಿದ.

ಹೇ ವೃತ್ರ ! ನೀನು ಸಿದ್ಧನಾಗಿರುವಿ. ನಿನಗೆ ಪರಮಾತ್ಮನಲ್ಲಿರುವ ಅತುಲಿತವಾದ ವಿಶ್ವಾಸ ಆದರ್ಶಪ್ರಾಯವೇ ಆಗಿದೆ. ಆಸುರಭಾವವನ್ನು ತೊರೆದಿರುವಿ. ಭಕ್ತಿಜ್ಞಾನಾದಿಗುಣಗಳಿಂದ ಸಂಪನ್ನನಾಗಿರುವಿ. ವಿಷ್ಣುಮಾಯೆಯನ್ನು ಗೆದ್ದಿರುವಿ. ಹೀಗೆ ಪರಸ್ಪರ ಮಾತುಗಳನ್ನಾಡುತ್ತಲೇ ಇಂದ್ರ-ವೃತ್ರರು ಘೋರವಾದ ಯುದ್ಧವನ್ನು ಮಾಡಿದರು. ವೃತ್ರಾಸುರ ಕಾರ್ಷ್ಣಾಯಸ ಎಂಬ ಶೂಲವನ್ನು ಇಂದ್ರನ ಮೇಲೆ ಪ್ರಯೋಗಿಸಿದ. ಇಂದ್ರ ಮತ್ತೆ ವೃತ್ರಾಸುರನ ಬಾಹುವನ್ನೂ ಶೂಲವನ್ನೂ ವಜ್ರದಿಂದ ಕತ್ತರಿಸಿ ಹಾಕಿದ. ಕೈಗಳಿಲ್ಲದೇ ರೆಕ್ಕೆಗಳನ್ನು ಕಳೆದುಕೊಂಡ ಪರ್ವತದಂತಾದ ವೃತ್ರಾಸುರ.

ಆಗಲೂ ಕೆಚ್ಚೆದೆಯ ವೃತ್ರಾಸುರ ಧೃತಿಗೆಡಲಿಲ್ಲ. ಕೆಳಗಿನ ಹನುವನ್ನು ನೆಲಕ್ಕೆ ಹಚ್ಚಿದ. ಮೇಲಿನ ಹನುವನ್ನು ಆಕಾಶಕ್ಕೆ ಚಾಚಿದ. ವಾಹನಸಹಿತವಾಗಿಯೇ ಇಂದ್ರನನ್ನು ನುಂಗಿ ಹಾಕಿದ. ಎಲ್ಲರೂ ವೃತ್ರಾಸುರನ ಈ ಪರಾಕ್ರಮವನ್ನು ಕಂಡು ಹೌಹಾರಿದರು. ದೇವತೆಗಳು, ಋಷಿಗಳು ಖಿನ್ನರಾದರು. ವೃತ್ರಾಸುರನ ಉದರವನ್ನು ಸೇರಿದ ಇಂದ್ರ ಮೃತನಾಗಲಿಲ್ಲ. ನಾರಾಯಣವರ್ಮದಿಂದ ಸಂರಕ್ಷಿತನಾಗಿದ್ದ. ಹೀಗಾಗಿ ಯಾವ ತೊಂದರೆಯೂ ಇಂದ್ರನಿಗಾಗಲಿಲ್ಲ. ವಜ್ರಾಯುಧದಿಂದ ವೃತ್ರನ ಹೊಟ್ಟೆಯನ್ನು ಸೀಳಿದ. ಅನಾಯಾಸವಾಗಿ ಹೊರಗೆ ಬಂದ. ಅದೇ ವಜ್ರಾಯುಧದಿಂದ ವೃತ್ರನ ತಲೆಯನ್ನು ಕಡಿದು ಹಾಕಿದ. ಅತ್ಯಂತವೇಗ ಉಳ್ಳ ಆ ವಜ್ರಾಯುಧ ಒಂದು ವರ್ಷದ ತನಕ ವೃತ್ರನ ಶಿರಸ್ಸನ್ನು ಕೊಯ್ಯುತ್ತಲೇ ಇತ್ತು. ವೃತ್ರನ ಮರಣಕಾಲ ಬಂದಾಗ ವೃತ್ರನ ಶಿರಸ್ಸನ್ನು ಕತ್ತರಿಸಿ ಹಾಕಿತು.

ಇಲ್ಲಿ ನಡೆದ ಒಂದು ಇತಿಹಾಸ ಈ ರೀತಿಯಾಗಿದೆ. ಇಂದ್ರ-ವೃತ್ರರ ಮೊದಲ ಯುದ್ಧ ನರ್ಮದಾನದೀ ತೀರದಲ್ಲಿ ನಡೆಯಿತು. ಎರಡನೆಯ ಯುದ್ಧ ಸಮುದ್ರ ತೀರದಲ್ಲಿ ಆಯಿತು. ಆ ಸಂದರ್ಭದಲ್ಲಿ ಇಂದ್ರ-ವೃತ್ರರು ಸಂಧಿಯನ್ನು ಮಾಡಿಕೊಂಡರು. ಸಖ್ಯವಾದ ಮೇಲೇ ಇಂದ್ರನು ವೃತ್ರನ ಕೈ ಹಿಡಿದನು. ಯುದ್ಧದಲ್ಲಿ ಬಾಹುಗಳನ್ನು ಇಂದ್ರ ಕತ್ತರಿಸಿ ಹಾಕಿದ್ದ. ಆದರೆ ಮತ್ತೆ ಆ ಕೈಗಳು ಬೆಳೆದಿದ್ದವು.

ನೊರೆಯಿಂದ ವೃತ್ರಾಸುರನನ್ನು ಸಂಹರಿಸಲು ವಿಚಾರಿಸಿದ ಇಂದ್ರ. ಸಮುದ್ರತೀರದಲ್ಲಿ ಸಂಚರಿಸುತ್ತಿದ್ದ. ಇದನ್ನು ನೋಡಿದ ವೃತ್ರಾಸುರ. ನೊರೆಯಿಂದ ನನ್ನನ್ನು ಕೊಲ್ಲು ಎಂದು ವಿನೋದಕ್ಕಾಗಿಯೇ ಹೇಳಿದ. ಆ ಸಂದರ್ಭದಲ್ಲಿ ವೃತ್ರನ ಕಾಲುಗಳು ಇಂದ್ರನಿಗೆ ತಾಕಿದವು. ಈ ನಿಮಿತ್ತದಿಂದ ಜಗಳ ತೆಗೆದ ಇಂದ್ರ. ಯುದ್ಧಕ್ಕೆ ಸಿದ್ಧನಾದ. ವಿಷ್ಣುವಿನ ಶಕ್ತಿಯಿಂದ ಕೂಡಿದ ವಜ್ರಾಯುಧವನ್ನು ನೊರೆಯಲ್ಲಿ ಪ್ರವೇಶಿಸಿ ವೃತ್ರನ ಮೇಲೆ ಪ್ರಯೋಗಿಸಿದ. ಶ್ರೀನಾರಾಯಣನನ್ನು ಧ್ಯಾನಿಸುತ್ತಿದ್ದ ವೃತ್ರನ ಶಿರಸ್ಸನ್ನು ಒಂದು ವರ್ಷದಲ್ಲಿ ಆ ವಜ್ರಾಯುಧವು ಕತ್ತರಿಸಿತು. ಇಂದ್ರನಿಗೂ ವೃತ್ರನಿಗೂ ಸಂಧಾನವಾದ ನಂತರ ಅವನನ್ನು ಕೊಲ್ಲುವವರೆಗೆ ಒಂದು ವರ್ಷಗಳಷ್ಟು ಕಾಲ ಕಳೆದಿತ್ತು.

★★★★★

ಈ ಅಧ್ಯಾಯದಲ್ಲಿ ವೃತ್ರಹ (ಇಂದ್ರ) ವೃತ್ರ ಸಂವಾದದ ನೆಪದಿಂದ ಸರ್ವೇಶ್ವರನಾದ ಶ್ರೀಹರಿಗೂ ಅನೀಶ ಜೀವಾಭೇದ ತಿಳಿಯುವದು ಅಂಧಂತಮಸ್ಸಿಗೆ ಸಾಧನವೆಂದು ಹೇಳುವರು. ಮೊದಲಿಗೆ ಯುದ್ಧಕ್ಕೆ ಸನ್ನದ್ಧರಾದವರಲ್ಲಿ ಸಂಧಿ ಆಯಿತೋ ಒಬ್ಬರಿಗೆ ಗೆಲುವಾಯಿತೋ ಅಥವಾ ಶ್ರಮದಿಂದ ಯುದ್ಧ ನಿಂತಿತೋ ಎಂದರೆ ಯುದ್ಧಶೇಷವನ್ನು ವರ್ಣಿಸುವರು-

**ಋಷಿರುವಾಚ -**

**ಏವಂ ಜಿಹಾಸುರ್ನೃಪದೇಹಮಾಜೌ**
**ಮೃತ್ಯುಂ ಪರಂ ವಿಜಯಂ ಮನ್ಯಮಾನಃ ।**
**ಶೂಲಂ ಪ್ರಗೃಹ್ಯಾಭ್ಯಪತತ್ ಸುರೇಂದ್ರಂ**
**ಯಥಾ ಮಹಾಪುರುಷಂ ಕೈಟಭೋಽಪ್ಸು ॥೧॥**

**ಹೇ ನೃಪ** ಪರೀಕ್ಷಿದ್ರಾಜನೇ **ಏವಂ** ಈ ರೀತಿಯಾಗಿ **ಆಜೌ** ಯುದ್ಧದಲ್ಲಿ **ದೇಹಂ** ದೇಹವನ್ನು **ಜಿಹಾಸುಃ** ,ಬಿಡಲು ಬಯಸಿದ ಆ ವೃತ್ರನು **ಮೃತ್ಯುಂ** ಸಾವನ್ನೇ **ಪರಂ** ಶ್ರೇಷ್ಠವಾದ **ವಿಜಯಂ** ಜಯವೆಂದು **ಮನ್ಯಮಾನಃ ಸನ್** ತಿಳಿದವನಾಗಿ, ಸೋತು ಬದುಕುವದಕ್ಕಿಂತ ಸಾಯುವದೇ ಮೇಲೆಂದು ತಿಳಿದು ಎಂದು ಭಾವ. ಅಥವಾ **ಪರಂ** ಶತ್ರುವನ್ನು, **ವಿಜಯಂ** ವಿಶಿಷ್ಟ ಜಯವುಳ್ಳವನು ಬಲವಂತನು ಅಥವಾ, **ವಿನಾ** ಶ್ರೀಹರಿಯಿಂದಲೇ **ಜಯಂ** ಜಯ ಉಳ್ಳವನು, ಬಲವಂತನು ಎಂದು ಮುಂದಿನದನ್ನು ತಿಳಿದವನಾಗಿ **ಶೂಲಂ ಪ್ರಗೃಹ್ಯ** ಶೂಲವನ್ನು ಹಿಡಿದುಕೊಂಡು **ಯಥಾ** ಹೇಗೆ **ಕೈಟಭಃ** ಕೈಟಭಾಸುರನು **ಅಪ್ಸು** ಸೃಷ್ಟಿಯ ಪ್ರಾರಂಭದಲ್ಲಿ ಪ್ರಳಯೋದಕದಲ್ಲಿ **ಮಹಾಪುರುಷಂ** ಶ್ರೀಹರಿಯನ್ನು ಎದುರಿಸಿದನೋ **ತಥಾ** ಹಾಗೆ **ಸುರೇಂದ್ರಂ** ಇಂದ್ರನ ಮೇಲೆ **ಅಭ್ಯಪತತ್** ಎರಗಿದನು. ಅಥವಾ **ಅಪ್ಸು** ಮರಣಕ್ಕೆ ಕಾರಣವಾದ ಕರ್ಮಗಳು **ಸತ್ಸು** ಇರುವಾಗಲೂ ಎಂದು ಅಭಿಪ್ರಾಯ. ಗ್ರಂಥಕಾರರು ನೀಡಿದ ಅನುರೂಪವಾದ ದೃಷ್ಟಾಂತವಿದು. ॥೧॥

**ತತೋ ಯುಗಾಂತಾಗ್ನಿಕಠೋರಜಿಹ್ವ-**
**ಮಾವಿಧ್ಯಶೂಲಂ ತರಸಾಽಸುರೇಂದ್ರಃ ।**
**ಕ್ಷಿಪ್ತ್ವಾ ಮಹೇಂದ್ರಾಯ ವಿನದ್ಯ ಧೀರೋ**
**ಹತೋಽಸಿ ಪಾಪೇತಿ ರುಷಾ ಜಗಾದ ॥೨॥**

**ತತಃ** ಅನಂತರ **ಧೀರಃ** ಧೈರ್ಯಶಾಲಿಯಾದ **ಅಸುರೇಂದ್ರಃ** ವೃತ್ರಾಸುರನು **ತರಸಾ** ವೇಗದಿಂದ **ಯುಗಾಂತಾಗ್ನಿಕಠೋರಜಿಹ್ವಂ** ಪ್ರಳಯಕಾಲದ ಅಗ್ನಿಯಂತೆ ಭಯಂಕರವಾದ ನಾಲಿಗೆಗಳುಳ್ಳ **ಶೂಲಂ** ಶೂಲವನ್ನು **ಆವಿಧ್ಯ** ತಿರುಗಿಸಿ **ಮಹೇಂದ್ರಾಯ** ಇಂದ್ರನ ಮೇಲೆ **ಕ್ಷಿಪ್ತ್ವಾ** ಎಸೆದು **ವಿನದ್ಯ** ಸಿಂಹನಾದ ಮಾಡಿ **ರುಷಾ** ಸಿಟ್ಟಿನಿಂದ **ಪಾಪ** ಪಾಪಿಯೇ **ಹತಃ ಅಸಿ** ಸಂಹೃತನಾದೆ **ಇತಿ** ಎಂದು **ಜಗಾದ** ಅಬ್ಬರಿಸಿದನು. ॥೨॥

**ಖೇ ಆಪತಂತಂ ಜ್ವಲಿತಂ ಮಹೋಲ್ಕವತ್**
**ನಿರೀಕ್ಷ್ಯ ದುಷ್ಪ್ರೇಕ್ಷಮಜಾತವಿಕ್ಲವಃ ।**
**ವಜ್ರೇಣ ವಜ್ರೀ ಶತಪರ್ವಣಾಽಚ್ಛಿನದ್**
**ಭುಜಂ ಚ ತಸ್ಯೋರಗರಾಜಭೋಗಮ್ ॥೩॥**




**ವಜ್ರೀ** ಇಂದ್ರನು **ಖೇ** ಆಕಾಶದಲ್ಲಿ **ಆಪತಂತಂ** ಬರುತ್ತಿದ್ದ **ಜ್ವಲಿತಂ** ಉರಿಯುತ್ತಿದ್ದ ಆದ್ದರಿಂದಲೇ **ಮಹೋಲ್ಕವತ್** ದೊಡ್ಡ ಕೆಂಡದಂತೆ **ದುಷ್ಪ್ರೇಕ್ಷಂ** ನೋಡಲಾಗದ **(ತಂ)** ಆ ಶೂಲವನ್ನು **ನಿರೀಕ್ಷ್ಯ** ನೋಡಿ **ಅಜಾತವಿಕ್ಲವಃ** ಹೆದರಿಕೆ ಇಲ್ಲದವನಾಗಿ **ಶತಪರ್ವಣಾ** ನೂರು ಹಲ್ಲುಗಳಿರುವ **ವಜ್ರೇಣ** ವಜ್ರಾಯುಧದಿಂದ **ಉರಗರಾಜಭೋಗಂ** ಸರ್ಪರಾಜನಾದ ವಾಸುಕಿಯ ದೇಹದಂತಿರುವ **ಉರಗಭೋಗಭೋಗಂ** ಎಂಬ ಪಾಠದಲ್ಲಿ ವಾಸುಕಿಯ ದೇಹದಂತೆ ಪುಷ್ಟವಾಗಿರುವ ಎಂದರ್ಥ. **ಭುಜಂ** ವೃತ್ರಾಸುರನ ತೋಳನ್ನು **ಚ** ಶೂಲವನ್ನೂ **ಅಚ್ಛಿನತ್** ಕತ್ತರಿಸಿದನು.

ಇಲ್ಲಿ ಮಹತ್ಯಃ ಉಲ್ಕಾಃ ಯಸ್ಯ ತತ್ ಮಹೋಲ್ಕಂ ತದ್ವತ್ ವಹ್ನಿಯಂತೆ, ಹೀಗೆ ಅರ್ಥ ಮಾಡಿದ್ದರಿಂದ 'ಉಲ್ಕಾ ಸ್ಯಾನ್ನಿರ್ಗತಜ್ವಾಲಾ' ಎಂದು ಅಮರದಲ್ಲಿ ಸ್ತ್ರೀಲಿಂಗ ನಿರ್ದೇಶವಿರುವುದರಿಂದ ಮಹೋಲ್ಕವತ್ ಎಂದು ಹೇಗಾಯಿತು ಎಂಬ ಶಂಕೆಗೆ ಅವಕಾಶವಿಲ್ಲವೆಂದು ತಿಳಿಯಬೇಕು.

ಯದ್ಯಪಿ 'ಭೋಗಃ ಸುಖೇ ಸ್ತ್ರ್ಯಾದಿಭೃತಾವಹೇಶ್ಚ ಫಣಕಾಯಯೋಃ' ಎಂದು ಅಭಿಧಾನವಿರುವದರಿಂದ ಕೇವಲ ಭೋಗ ಶಬ್ದವೇ ಸರ್ಪಶರೀರವನ್ನು ತಿಳಿಸುವದು. ಆದರೂ ಇಲ್ಲಿ 'ವಿಶಿಷ್ಟವಾಚಕಪದಾನಾಂ ಸತಿ ವಿಶೇಷ್ಯವಾಚಕಪದಸಮವಧಾನೇ ವಿಶೇಷ್ಯಮಾತ್ರಪರತ್ವಂ' ಎಂಬ ನ್ಯಾಯದಿಂದ 'ಸಕೀಚಕೈಃ ಮಾರುತಪೂರ್ಣರಂಧ್ರೈಃ ಎಂಬಲ್ಲಿಯಂತೆ ಶರೀರಮಾತ್ರಪರವೆಂದು ತಿಳಿಯಬೇಕು. ಉರಗರಾಜನ ಭೋಗ ಪೀನತೆಯಂತೆ ಪೀನತೆಯುಳ್ಳ ಹೀಗೂ ಅರ್ಥ. 'ಭೋಗಃ ಪೀನಸರ್ಪಶರೀರಯೋಃ' 'ವರ್ತುಲಃ ಸ್ಥೂಲತಾಯಾಂ ಚ' ಎಂದೂ ಅಭಿಧಾನವಿದೆ. ಅಥವಾ ಉರಗ ರಾಜಸ್ಯ ಭಾ ಇವ ಭಾ ಶುಭ್ರಕಾಂತಿಃ ಯಸ್ಯ ಸಃ ತೇನ ಉರಗರಾಜಭೇನ ಅಗಂ, 'ಶೈಲವೃಕ್ಷೌ ನಗಾವಗೌ' ಎಂದು ಅಮರವಿರುವುದರಿಂದ ಶೇಷನಂತೆ ಶುಭ್ರಕಾಂತಿಯುಳ್ಳ ವಜ್ರಾಯುಧದಿಂದ ಪರ್ವತವನ್ನು ಕತ್ತರಿಸಿದಂತೆ ಕತ್ತರಿಸಿದನು. ಎಂದೂ ಅರ್ಥ ಮಾಡಬೇಕು. ।।೩।।

**ಛಿನ್ನೈಕಬಾಹುಃ ಪರಿಘೇಣ ವೃತ್ರಃ**
**ಸಂರಬ್ಧ ಆಸಾದ್ಯ ಗೃಹೀತವಜ್ರಮ್ ।**
**ಹನೌ ತತಾಡೇಂದ್ರಮಥಾಮರೇಶಂ**
**ವಜ್ರಶ್ಚ ಹಸ್ತಾತ್ ನ್ಯಪತನ್ಮಘೋನಃ** **।।೪।।**

**ಛಿನ್ನೈಕಬಾಹುಃ** ಒಂದು ತೋಳು ಕತ್ತರಿಸಿ ಹೋದ ಆದ್ದರಿಂದಲೇ **ಸಂರಬ್ಧಃ** ಕುಪಿತನಾದ **ವೃತ್ರಃ** ವೃತ್ರಾಸುರನು **ಗೃಹೀತವಜ್ರಂ** ವಜ್ರಾಯುಧವನ್ನು ಹಿಡಿದಿದ್ದ **ಅಮರೇಶಂ** ದೇವತೆಗಳಿಗೆ ಸ್ವಾಮಿಯಾದ **ಇಂದ್ರಂ** ಇಂದ್ರದೇವರನ್ನು **ಆಸಾದ್ಯ** ಸಮೀಪಿಸಿ **ಪರಿಘೇಣ** ಮುದ್ಗರದಿಂದ **ಹನೌ** ಗದ್ದದಲ್ಲಿ **ತತಾಡ** ಹೊಡೆದನು. **ಮಘೋನಃ** ಇಂದ್ರದೇವರ **ಹಸ್ತಾತ್** ಕೈಗಳಿಂದ **ವಜ್ರಃ** ವಜ್ರಾಯುಧವು **ನ್ಯಪತತ್** ಬಿದ್ದಿತು. ಇಂದ್ರಶಬ್ದವು ಸ್ವಾಮಿಸಾಮಾನ್ಯ ವಾಚಕವಾದ್ದರಿಂದ ವಿಶೇಷವನ್ನು ತಿಳಿಸಲು **ಅಮರೇಶಂ** ಎಂಬ ವಿಶೇಷಣ ಕೊಟ್ಟಿರುವವರು.

ಇಂದ್ರಂ ಮಥ್ನಾತೀತಿ ಇಂದ್ರಮಥ್ ತೇನ ಇಂದ್ರಮಥಾ ಇಂದ್ರನನ್ನು ಮಥನ ಮಾಡುವ ಪರಿಘದಿಂದ ಎಂದರ್ಥ.

**ಆಸಾದ್ಯ** ಎಂದಿದ್ದರಿಂದಲೇ ತಾಡನವು ಆಸಾದನೋತ್ತರ ಕಾಲೀನವೆಂದು ಸ್ವಾಭಾವಿಕವಾಗಿ ಅಥ ಶಬ್ದ ಇಲ್ಲದಿದ್ದರೂ ತಿಳಿಯುವಾಗ ಅಥ ಎಂಬುದು ಅತ್ಯಾವಶ್ಯಕವಲ್ಲ ಎಂಬ ಶಂಕೆಯೂ ಈ ರೀತಿ ಅರ್ಥ ಮಾಡಿದ್ದರಿಂದ ನಿರಾಸವಾಯಿತು. ಯದ್ಯಪಿ ಅಥ ವಜ್ರಃ ಹಸ್ತಾನ್ನ್ಯಪತತ್ ಎಂದು ಅನ್ವಯಿಸಬಹುದು. ಆದರೂ ಅತಿರೇಕ ದೃಷ್ಟಿಯಿಂದ ಈ ರೀತಿ ವ್ಯಾಖ್ಯಾನಿಸಿದೆ ಎಂದು ತಿಳಿಯಬೇಕು. ॥೪॥

**ವೃತ್ರಸ್ಯ ಕರ್ಮಾತಿಮಹಾದ್ಭುತಂ ತತ್**
**ಸುರಾಸುರಾಶ್ಚಾರಣಸಿದ್ಧಸಂಘಾಃ ।**
**ಅಪೂಜಯಂಸ್ತತ್ಪುರುಹೂತಸಂಕಟಂ**
**ನಿರೀಕ್ಷ್ಯ ಹಾಹೇತಿ ವಿಚುಕ್ರುಶುರ್ಭೃಶಮ್** ॥೫॥

**ಸುರಾಸುರಾಃ** ದೇವತೆಗಳು-ದೈತ್ಯರು, **ಚಾರಣಸಿದ್ಧಸಂಘಾಃ** ಚಾರಣ-ಸಿದ್ಧರ ಸಮೂಹಗಳು **ವೃತ್ರಸ್ಯ** ವೃತ್ರನ **ಅತಿಮಹಾದ್ಭುತಂ** ಅತ್ಯಂತ ಆಶ್ಚರ್ಯಕರವಾದ **ತತ್ ಕರ್ಮ** ವಜ್ರಾಯುಧವನ್ನು ಕೈಯಿಂದ ಬೀಳಿಸಿದ ಆ ಕಾರ್ಯವನ್ನು **ಅಪೂಜಯನ್** ಪ್ರಶಂಸಿದರು. **ತತ್** ಆ **ಪುರುಹೂತಸಂಕಟಂ** ಇಂದ್ರದೇವರ ಕಷ್ಟವನ್ನು **ನಿರೀಕ್ಷ್ಯ** ನೋಡಿ **ಹಾಹಾ ಇತಿ** ಹಾಹಾ ಎಂದು **ಭೃಶಂ** ಬಹಳವಾಗಿ **ವಿಚುಕ್ರುಶುಃ** ಕೂಗಿದರು.

ಸುರೈಃ ಸಹಿತಾಶ್ಚ ತೇ ಅಸುರಾಶ್ಚ ಸುರಾಸುರಾಃ ಕೆಲವು ಸಲ ದೇವ-ದಾನವರಲ್ಲಿ ಸ್ನೇಹವೂ ಕಂಡದ್ದರಿಂದ 'ಯೇಷಾಂ ಶಾಶ್ವತಿಕೋ ವಿರೋಧಃ' ಎಂದು ಅನುಶಿಷ್ಟವಾದ

ಶಾಶ್ವತ ದ್ವೇಷವಲ್ಲದ್ದರಿಂದಾಗಲಿ ಅಸುರರಲ್ಲಿ ಪ್ರಹ್ಲಾದಾದಿ ಸದಸುರರೂ ಇರುವದರಿಂದ ಅಂಥವರನ್ನು ಯೇಷಾಂ ಎಂಬುದರಿಂದ ಸ್ವೀಕರಿಸಲಾಗದೇ ಇದ್ದದ್ದರಿಂದಲಾಗಲಿ ಏಕವದ್ಭಾವ ಬಂದಿಲ್ಲವೆಂದು ತಿಳಿಯಬೇಕು. ದೇವತೆಗಳ ಪಕ್ಷದಲ್ಲಿ ಹಾಹಾ ಎಂಬುದು ಶೋಕ ಸೂಚಕ. ದಾನವರ ಪಕ್ಷದಲ್ಲಿ ಅಪಹಾಸ ಸೂಚಕವೆಂದು ವಿವೇಕ ಮಾಡಬೇಕು. ।।೫।।

**ಇಂದ್ರೋ ನ ವಜ್ರಂ ಜಗೃಹೇ ವಿಲಜ್ಜಿತಃ**
**ಚ್ಯುತಂ ಸ್ವಹಸ್ತಾದರಿಸನ್ನಿಧೌ ಪುನಃ ।**
**ತಮಾಹ ವೃತ್ರೋ ಹರ ಆತ್ತವಜ್ರೋ**
**ಜಹಿ ಸ್ವಶತ್ರುಂ ನ ವಿಷಾದಕಾಲಃ** ।।೬।।

**ವಿಲಜ್ಜಿತಃ** ನಾಚಿಕೆಗೊಂಡ **ಇಂದ್ರಃ** ಇಂದ್ರದೇವರು **ಸ್ವಹಸ್ತಾತ್** ತನ್ನ ಕೈಯಿಂದ **ಚ್ಯುತಂ** ಬಿದ್ದಿರುವ **ವಜ್ರಂ** ವಜ್ರಾಯುಧವನ್ನು **ಅರಿಸನ್ನಿಧೌ** ಶತ್ರುವಿನ ಸಮೀಪದಲ್ಲಿ **ಪುನಃ** ಮತ್ತೆ **ನ ಜಗೃಹೇ** ತೆಗೆದುಕೊಳ್ಳಲಿಲ್ಲ. **ವೃತ್ರಃ** ವೃತ್ರಾಸುರನು **ತಂ** ಇಂದ್ರದೇವರನ್ನು ಕುರಿತು **ಹೇ ಹರೇ** ಇಂದ್ರನೇ **ಆತ್ತವಜ್ರಃ** ವಜ್ರಾಯುಧವನ್ನು ತೆಗೆದುಕೊಂಡವನಾಗಿ **ಸ್ವಶತ್ರುಂ** ನಿನ್ನ ಶತ್ರುವಾದ ನನ್ನನ್ನು **ಜಹಿ** ಕೊಲ್ಲು. **ವಿಷಾದಕಾಲಃ ನ** ವಜ್ರಾಯುಧ ಕೈಯಿಂದ ಬಿದ್ದಿತಲ್ಲ ಎಂದು ದುಃಖಿಸುವ ಕಾಲವಲ್ಲವೆಂದು **ಆಹ** ಹೇಳಿದನು. ಸ್ವಃ ಸ್ವಕೀಯನಾದ ಅಂದರೆ ನಿನ್ನ ಪ್ರತಿಪಕ್ಷಿಯಾದ್ದರಿಂದ ನಿನ್ನ ಶತ್ರು ೨. ಸ್ವಃ ಭವಾನ್ ಶತ್ರುಃ ಶಾತಯಿತಾ ಯಸ್ಯ ತಂ ವಾ ಎಂದರೆ ನೀನೇ ಸಂಹಾರಕನಾಗಿವುಳ್ಳ, ೩. ಸ್ವಸ್ಯ ಶತ್ರುಂ ನಿನ್ನ ಅರಿಯಾದ ನನ್ನನ್ನು, ಹೀಗೆ ಅರ್ಥಗಳನ್ನು ಮಾಡಬಹುದು. ।।೬।।

ನಿತ್ಯ ಜಯಶೀಲನು ವಿಷ್ಣು ಒಬ್ಬನೇ ನನ್ನಂಥವರು ನಿನ್ನಂಥವರು ಅವನಂತಲ್ಲ. ಕಾರಣ ಆಯುಧ ಬಿಡುವ ಕಾರಣವಿಲ್ಲವೆಂದು ಜ್ಞಾನಿಯಾದ ವೃತ್ರನು ಕೆಲವು ಮಾತುಗಳನ್ನು ಹೇಳುವನು-

**ಯುಯುತ್ಸತಾಂ ಕುತ್ರ ಚಿದಾತತಾಯಿನಾಂ**
**ಜಯಃ ಸದೈಕತ್ರ ನ ವೈ ಪರಾಜಯಃ ।**
**ವಿನ್ನೈಕಮುತ್ಪತ್ತಿಲಯಸ್ಥಿತೀಶ್ವರಂ**
**ಸರ್ವಜ್ಞಮಾದ್ಯಂ ಪುರುಷಂ ಸನಾತನಮ್** ।।೭।।

**ಆತತಾಯಿನಾಂ** ಶಸ್ತ್ರಧಾರಿಗಳಾದ **ಯುಯುತ್ಸತಾಂ** ಯುದ್ಧಮಾಡಲು ಇಚ್ಛಿಸುವವರಿಗೆ **ಕುತ್ರಚಿತ್** ಯುದ್ಧದಲ್ಲಿ ಕೆಲವು ಸಲ **ಜಯಃ** ಜಯವು **ಕುತ್ರಚಿತ್ ಪರಾಜಯಃ ಅಪಿ** ಕೆಲವು ಸಲ ಪರಾಜಯವೂ ಆಗುವುದು. **ಸದಾ ಜಯಃ** ಯಾವಾಗಲೂ ಜಯವೇ **ನ ಪರಾಜಯಃ** ಪರಾಜಯವಿಲ್ಲವೇ ಇಲ್ಲ ಎಂಬುದು **ಉತ್ಪತ್ತಿಲಯಸ್ಥಿತೀಶ್ವರಂ** ಜನ್ಮ-ಸ್ಥಿತಿ-ಲಯಗಳಿಗೆ ಕಾರಣನಾದ **ಸರ್ವಜ್ಞಂ** ಸರ್ವಜ್ಞನಾದ **ಆದ್ಯಂ** ಸರ್ವಕಾರಣನಾದ **ಪುರುಷಂ** ಸರ್ವಶರೀರದಲ್ಲಿರುವ **ಸನಾತನಂ** ವೇದವೇದ್ಯನಾದ **ಏಕಂ** ಸರ್ವೋತ್ತಮನಾದ ಶ್ರೀಹರಿಯನ್ನು **ವಿನಾ** ಬಿಟ್ಟು ಬೇರೆಯವರಿಗೆ **ನ ವೈ** ಇಲ್ಲವೇ ಇಲ್ಲ.

ಉತ್ಪತ್ತಿಯು ಶ್ರೇಷ್ಠವಾದ್ದರಿಂದ ಮೊದಲಿಗೆ ಹೇಳಿರುವರು. ಮಧ್ಯದಲ್ಲಿ ಸ್ಥಿತಿ ಶಬ್ದವನ್ನು ಹೇಳಬೇಕಾಗಿತ್ತು. ಆದರೂ ಉತ್ಪತ್ತಿಯಲ್ಲಿ ಇದ್ದಂತೆ ಲಯದಲ್ಲಿಯೂ ಸತ್ತಾ ರೂಪವಾದ ಹೇಳಬೇಕಾದ ಸ್ಥಿತಿಶಬ್ದಕ್ಕೆ ಕೊನೆಗೆ ಸ್ಥಿತಿ ಬಂದಿದ್ದು ಉತ್ಪತ್ತಿಯಲ್ಲಿ ಇದ್ದಂತೆ ಲಯದಲ್ಲಿಯೂ ಸತ್ತಾರೂಪವಾದುದು ಅಪೇಕ್ಷಿತವಾದ್ದರಿಂದ ಎಂದು ತಿಳಿಯಬೇಕು.

ಅಂದರೆ ಅಸತಃ ಸತಾ ಸಂಬಂಧಃ ಉತ್ಪತ್ತಿಃ, ಸತ ಏವ ಧ್ವಂಸಃ, ದೇಶಕಾಲಸಂಬಂಧರೂಪಸತ್ತಾ ಏವ ಸ್ಥಿತಿಃ । ಅಥವಾ ಸೋತಿರುವ ನಿನ್ನ ಸ್ಥಿತಿಯಲ್ಲಿಯೂ ದೇಹವಿಯೋಗವೆಂಬ ಲಯವು ಪ್ರತಿಕ್ಷಣ ಆಗುತ್ತಿದೆ ಎಂದು ತಿಳಿಸಲು ಉತ್ಪತ್ತಿ ನಂತರವೇ ಲಯ ಹೇಳಿದ್ದು. ॥೭॥

**ಲೋಕಾಃ ಸಪಾಲಾ ಯಸ್ಯೇಮೇ ಶ್ವಸಂತಿ ವಿವಶಾ ವಶೇ ।**
**ದ್ವಿಜಾ ಇವ ಸಿಚಾ ಬದ್ಧಾಃ ಸ ಕಾಲ ಇಹ ಕಾರಣಮ್ ॥೮॥**

**ಇಮೇ** ಈ **ಸಪಾಲಾಃ** ಪಾಲಕರಿಂದ ಸಹಿತವಾದ **ಲೋಕಾಃ** ಲೋಕಗಳು **ಸಿಚಾ** ಬಲಿಯಿಂದ **ಬದ್ಧಾಃ** ಕಟ್ಟಿಹಾಕಲ್ಪಟ್ಟ (ಅಲ್ಲಿಯ ಜನರು) **ದ್ವಿಜಾ ಇವ** ಹಕ್ಕಿಗಳಂತೆ **ವಿವಶಾಃ** ಪರಾಧೀನರಾಗಿ **ಯಸ್ಯ** ಯಾವನ **ವಶೇ** ಅಧೀನದಲ್ಲಿದ್ದು **ಶ್ವಸಂತಿ** ಉಸಿರಾಡಿಸುತ್ತಿರುವರೋ **ಸಃ** ಆ ಸ್ವತಂತ್ರನೂ ಸರ್ವನಿಯಾಮಕನಾದ **ಕಾಲಃ** ಕಾಲನಾಮಕನಾದ ಶ್ರೀಹರಿಯು **ಇಹ** ಜೀವರ ಜಯ-ಪರಾಜಯಗಳಿಗೆ **ಕಾರಣಂ** ನಿಯಾಮಕನು. ನೀವೂ ಅಲ್ಲ, ನಾವೂ ಅಲ್ಲ. ಆದ್ದರಿಂದ ಲಜ್ಜೆಯು ಯುಕ್ತವಲ್ಲ.

ವಿಜಯಧ್ವಜರು **ಶ್ವಸಂತಿ** ಎಂಬುದರಿಂದ ಇತರರ ಇರುವಿಕೆಯೂ ಅವನ ಅಧೀನ ಎಂದು ತಿಳಿಸಿರುವರು. **ಖಗಾಃ** ಎನ್ನದೇ **ದ್ವಿಜಾಃ** ಎಂದು ಹೇಳಿದ್ದರಿಂದ ಜ್ಞಾನಿಗಳಿಗೂ

ವಾಕ್‌ತಂತಿ (ವೇದವಿಧಿ) ನಿಯತತತ್ವವಿದೆ ಎಂದು ಸೂಚಿಸಿರುವರು. **ವಿವಶಾಃ** ಎಂಬುದಕ್ಕೆ ಶ್ರೀಹರಿಯ ಅಧೀನತೆಯ ಜ್ಞಾನವಿಲ್ಲದೆಯೇ ಎಂದೂ ಅರ್ಥ ಮಾಡಿರುವರು.

ಶ್ರೀಹರಿ ಸ್ವತಂತ್ರನಾಗಿದ್ದಾನೆ. ಆದ್ದರಿಂದ ಉಳಿದುದೆಲ್ಲವೂ ಅವನ ವಶವಾಗಿದೆ. ಹೀಗಾಗಿ ಯಾವಾಗಲೂ ಪರಮಾತ್ಮ ಜಯಶಾಲಿಯಾಗಿದ್ದಾನೆ. ಉಳಿದವರು ಸ್ವತಂತ್ರರಾಗದೇ ಇದ್ದದ್ದರಿಂದ ಅವರಿಗೆ ಜಯದ ನಿಯಮವಿಲ್ಲ. ಎಂದು ಹೇಳಿ ಸದಾ ಜಯಕ್ಕೆ ಕಾರಣ ಹೇಳಿದಂತಾಯಿತು. ಹೀಗೆ ಚೆಟ್ಟಿ ಆಚಾರ್ಯರು ಅಭಿಪ್ರಾಯ ಪಡುತ್ತಾರೆ. ।।೮।।

**ಓಜಃ ಸಹೋ ಬಲಂ ಪ್ರಾಣಮಮೃತಂ ಮೃತ್ಯುಮೇವ ಚ ।**
**ತಮಜ್ಞಾಯ ಜನೋ ಹೇತುಮಾತ್ಮಾನಂ ಮನ್ಯತೇ ಜಡಃ ।।೯।।**

**ಜಡಃ** ಜ್ಞಾನವಿಲ್ಲದ **ಜನಃ** ಜನರು **ಓಜಸ್ಸಹೋಬಲಂ** ಓಜಸ್ಸು ಸಹಸ್ಸು ಬಲಗಳ ಸ್ವರೂಪನಾದ **ಪ್ರಾಣಂ** ಪೂರ್ಣಾನಂದರೂಪಿಯಾದ **ಅಮೃತಂ** ಮರಣರಹಿತನಾದ **ಮೃತ್ಯುಂ** ಇತರರಿಗೆ ಮರಣ ಕೊಡುವವನಾದವ **ತಂ** ಆ ಕಾಲರೂಪಿಯಾದ ಶ್ರೀಹರಿಯನ್ನು **ಅಜ್ಞಾಯ** ಜೀವರ ಓಜಸ್ಸು ಮುಂತಾದವುಗಳಿಗೆ ಕಾರಣನೆಂದು ತಿಳಿಯದೇ **ಆತ್ಮಾನಂ** ತನ್ನನ್ನೇ **ಹೇತುಂ** ಆಧಿಕ್ಯ-ಅನಾಧಿಕ್ಯಗಳಿಗೆ ಜಯ-ಪರಾಜಯಗಳಿಗೆ ಕಾರಣನೆಂದು **ಮನ್ಯತೇ** ತಿಳಿಯುವರು.

**ತಂ** ಎಂಬುದಕ್ಕೆ ವಿಸ್ತಾರಯಂತಂ ಎಂದು ಅರ್ಥ. 'ತನೋತೇರ್ಡಃ' ತನು ವಿಸ್ತಾರೇ ಧಾತು ಡಪ್ರತ್ಯಯ. ಅಂದರೆ ಓಜ ಆದಿಗಳನ್ನು ಕೊಡುವ ಹರಿಯನ್ನು ತಿಳಿಯದೆ ಎಂದರ್ಥ. 'ಅನಞ ಪೂರ್ವೇ' ಎಂದು ಪ್ರತಿಷೇಧವಿರುವುದರಿಂದ **ಅಜ್ಞಾಯ** ಎಂಬಲ್ಲಿ ಲ್ಯಪ್ ಆರ್ಷವೆಂದು ತಿಳಿಯಬೇಕು. ।।೯।।

**ಯಥಾ ದಾರುಮಯೀ ನಾರೀ ಯಥಾ ಯಂತ್ರಮಯೋ ಮೃಗಃ ।**
**ಏವಂಭೂತಾನಿ ಮಘವನ್ ಈಶತಂತ್ರಾಣಿ ವಿದ್ಧಿ ಭೋಃ ।।೧೦।।**

**ಭೋಃ ಮಘವನ್** ಎಲೈ ಇಂದ್ರನೇ **ದಾರುಮಯೀ ನಾರೀ** ಕಟ್ಟಿಗೆಯ ಹೆಣ್ಣು ಗೊಂಬೆಯು **ಯಥಾ** ಹೇಗೆ ಬೊಂಬೆಯಾಟ ಆಡಿಸುವ ಸೂತ್ರಧಾರನ ಅಧೀನವೋ **ಯಂತ್ರಮಯಃ** ಕಟ್ಟಿಗೆಯ **ಮೃಗಃ** ಜಿಂಕೆಯ ಗೊಂಬೆಯು **ಯಥಾ** ಹೇಗೆ ಆಡಿಸುವನ

ಅಧೀನವೋ **ಏವಂ** ಅದೇ ರೀತಿಯಾಗಿ **ಭೂತಾನಿ** ಪ್ರಾಣಿಗಳು **ಈಶತಂತ್ರಾಣಿ** ಭಗವದಧೀನವೆಂದು **ವಿದ್ಧಿ** ತಿಳಿ. ಎಲ್ಲ ಅವಸ್ಥೆಗಳಲ್ಲಿಯೂ ಸ್ತ್ರೀಯಾದವಳಿಗೆ ಸ್ವಾತಂತ್ರ್ಯವಿಲ್ಲದಿರುವುದರಿಂದ ಆ ದೃಷ್ಟಾಂತ ಕೊಟ್ಟಿರುವರು. **ಭೂತಾನಿ** ಎಂದು ನಪುಂಸಕಲಿಂಗ ಪ್ರಯೋಗದಿಂದ ಸರ್ವಥಾ ಸಾಮರ್ಥ್ಯವಿಲ್ಲವೆಂದು ಸೂಚಿಸುವರು.

ಬ್ರಹ್ಮಾದಿ ದೇವತೆಗಳು ಓಜಸ್ಸೇ ಮೊದಲಾದ ಗುಣಗಳ ಸೃಷ್ಟಿಗೆ ಕಾರಣರು ಎಂದಿರುವದರಿಂದ ಜಯ-ಪರಾಜಯಗಳೂ ಅವರ ನಿಯಮನಕ್ಕೆ ಒಳಪಟ್ಟವು ಎಂದು ಹೇಳಿದರೇನು ತಪ್ಪು? ಎಂದರೆ ಉತ್ತರಿಸುವರು-

**ಪುರುಷಃ ಪ್ರಕೃತಿರ್ವ್ಯಕ್ತಮಾತ್ಮಭೂತೇಂದ್ರಿಯಾಶಯಾಃ ।**
**ಶಕ್ನುವಂತ್ಯಸ್ಯ ಸರ್ಗಾದೌ ನ ವಿನಾ ಯದನುಗ್ರಹಮ್ ॥೧೧॥**

**ಪುರುಷಃ** ಬ್ರಹ್ಮದೇವರು **ಪ್ರಕೃತಿಃ** ಚೇತನಪ್ರಕೃತಿಯಾದ ಲಕ್ಷ್ಮೀದೇವಿಯು **ವ್ಯಕ್ತಂ** ಶೇಷದೇವರು **ಆತ್ಮಾ** ವಾಯುದೇವರು **ಭೂತ** ಪಂಚಮಹಾಭೂತಗಳ ಅಭಿಮಾನಿಗಳು **ಇಂದ್ರಿಯ** ಇಂದ್ರಿಯಾಭಿಮಾನಿಗಳು **ಆಶಯಾಃ** ಇಂದ್ರದೇವರು ಇವರೆಲ್ಲರೂ **ಯದನುಗ್ರಹಂ ವಿನಾ** ಯಾವ ಶ್ರೀಹರಿಯ ಅನುಗ್ರಹವಿಲ್ಲದೇ **ಅಸ್ಯ** ಈ ಪ್ರಮಾಣ ಸಿದ್ಧವಾದ ಪ್ರಪಂಚದ **ಸರ್ಗಾದೌ** ಸೃಷ್ಟಿ ಮೊದಲಾದವುಗಳಲ್ಲಿ **ನ ಶಕ್ನುವಂತಿ** ಸಮರ್ಥರಾಗುವದಿಲ್ಲವೋ **ತಂ** ಅಂತಹ **ಆತ್ಮಾನಂ** ಅಂತರ್ಯಾಮಿಯಾಗಿ ಆದಾನಾದಿ ಕರ್ತೃವಾದ **ಈಶ್ವರಂ** ನಿಯಾಮಕರೆನಿಸಿದ ಬ್ರಹ್ಮಾದಿಗಳಿಗಿಂತ ಶ್ರೇಷ್ಠನಾದ ಅವರಿಗೂ ನಿಯಾಮಕನಾದ ಶ್ರೀಹರಿಯನ್ನು **ಅನೀಶಂ** ಅಸಮರ್ಥನಾದ ಜೀವನೆಂದು, ಬ್ರಹ್ಮಾದಿಗಳಿಂದ ಅಭಿನ್ನನೆಂದು ಈಶನಲ್ಲವೆಂದು **ಅವಿದ್ವಾನೇವ** ಅಜ್ಞಾನಿಯಾದವನೇ **ಮನ್ಯತೇ** ತಿಳಿಯುವನು.

ಮೇಲಿನ ಶ್ಲೋಕದಲ್ಲಿ ಸ್ವಲ್ಪ ಅನುವಾದ ಮಾಡಿ ಪ್ರಮಾಣದಿಂದಲೇ ಪುರುಷಾದಿ ಪದಗಳಿಗೆ ತಾತ್ಪರ್ಯ ಹೇಳುವರು-

ತಾತ್ಪರ್ಯ

ಮನ್ಯತೇಽನೀಶಮೀಶ್ವರಮ್ ।

ಅನೀಶಂ ಜೀವರೂಪೇಣ ಪರಮಾತ್ಮಾನಮೀಶ್ವರಮ್ ।
ಯೇ ಮನ್ಯಂತೇ ತಾನ್ ಸಮೀಕ್ಷ್ಯ ಸ್ನೇಹಾನ್ನಿರಯಭಾಗ್ಭವೇತ್ ॥ಇತಿ ಚ ॥

**ಹಿರಣ್ಯಗರ್ಭಃ ಪುರುಷ ಆತ್ಮಾ ವಾಯುರುದಾಹೃತಃ ।**
**ಶೇಷೋವ್ಯಕ್ತಸ್ತಥೈವೇಂದ್ರ ಆಶಯಃ ಸಮುದಾಹೃತಃ ॥ ಇತಿ ಚ ॥**

ಮೂಲದಲ್ಲಿಯ 'ಮನ್ಯತೇಽನೀಶಮೀಶ್ವರಂ' ಎಂಬುದಕ್ಕೆ ಯಾರು ಸರ್ವೇಶ್ವರನಾದ ಶ್ರೀಹರಿಯನ್ನು ಅನೀಶನಾದ ಜೀವನಿಂದ ಅಭಿನ್ನನೆಂದು ತಿಳಿಯುವನೋ ಅವನು ತಮಸ್ಸನ್ನು ಹೊಂದುತ್ತಾನೆ. ಅಂಥವರ ಸ್ನೇಹ ಮಾಡುವವನು ಕೂಡಾ ನರಕ ಹೊಂದುವನು ಎಂದು ಹೇಳಿದೆ.

ಪುರುಷಪದದಿಂದ ಹಿರಣ್ಯಗರ್ಭನು, (ಪ್ರಕೃತಿ ಪದದಿಂದ ರಮಾದಿಗಳು) ಆತ್ಮಪದದಿಂದ ವಾಯುದೇವರು, ವ್ಯಕ್ತ ಪದದಿಂದ ಶೇಷದೇವರು, ಆಶಯಪದದಿಂದ ದೇವೇಂದ್ರನು ಹೇಳಲ್ಪಡುವರು ಎಂದು ಭಾವ. ॥೧೧॥

ಈ ತಾತ್ಪರ್ಯಾನುಸಾರ ಮೇಲಿನ ಪದಗಳಿಗೆ ಸಂಸಾರಿಸಾಮಾನ್ಯರೆಂದು ಅರ್ಥ ಮಾಡದೆ ವಿಶಿಷ್ಟ ಚೇತನರೆಂದು ಅರ್ಥ ಮಾಡಿದೆ. ಈಶ್ವರಂ ಎಂದು ಹೇಳಿದ್ದರಿಂದ ಅನೀಶನೆಂದು ತಿಳಿಯುವದು ವಿರುದ್ಧವೆಂದೂ ಅವಿದ್ವಾನ್ ಎಂದದ್ದರಿಂದ ಹಾಗೆ ತಿಳಿಯುವವನು ಅಜ್ಞಾನಿ ಎಂದು, ಐವ ಕಾರದಿಂದ ಅವನಿಗೆ ನರಕವೇ ಗತಿ ಎಂದು ತಿಳಿಸಿರುವರು. ॥೧೧॥

ತಂದೆಮೊದಲಾದವರು ಸ್ರಷ್ಟೃಗಳೆಂದು, ಹುಲಿ ಮುಂತಾದವುಗಳು ಹಂತೃಗಳೆಂದು ಸ್ಪಷ್ಟವಾಗಿ ಕಂಡಿದೆಯಲ್ಲ ಎಂಬ ಪ್ರಶ್ನೆಗೆ ಬ್ರಹ್ಮಾದಿಗಳಿಂದ ಭಿನ್ನನಾದ ಶ್ರೀಹರಿಯೇ ಸೃಷ್ಟ್ಯಾದಿಗಳನ್ನು ಮಾಡುತ್ತಾನೆ ಎಂಬುದು ಉತ್ತರವಾಗಿದೆ. ಹಾಗಾದರೆ ತಂದೆಯು ಸ್ರಷ್ಟಾ, ಹುಲಿಯು ಸಂಹರ್ತಾ ಎಂಬ ಮಾತುಗಳಿಗೆ ಅರ್ಥವೇನು? ಎಂದರೆ ಹೇಳುವರು-

**ಭೂತೈಃ ಸೃಜತಿ ಭೂತಾನಿ ಗ್ರಸತೇ ತಾನಿ ತೈಃ ಸ್ವಯಮ್ ॥೧೨॥**

**ಸ್ವಯಂ** ಶ್ರೀಹರಿಯು **ಭೂತೈಃ** ಅಸ್ವತಂತ್ರರಾದ ಬ್ರಹ್ಮಾದಿಗಳಿಂದ **ಭೂತಾನಿ** ಪ್ರಾಣಿಗಳನ್ನು **ಸೃಜತಿ** ಸೃಷ್ಟಿಸುವನು **ತೈಃ** ಅವುಗಳಿಂದ **ತಾನಿ** ಪ್ರಾಣಿಗಳನ್ನು **ಗ್ರಸತೇ** ಸಂಹರಿಸುವನು. ಬ್ರಹ್ಮಾದಿಗಳ ಮುಖಾಂತರ ಮಾಡುವದರಿಂದ ಅವರು ಸೃಷ್ಟ್ಯಾದಿಗಳನ್ನು ಮಾಡುವರೆಂದು ರೂಢಿ ಬಂದಿದೆ ಎಂದು ಭಾವ. ॥೧೨॥

**ಆಯುಃ ಶ್ರೀಃ ಕೀರ್ತಿರೈಶ್ವರ್ಯಮಾಶಿಷಃ ಪುರುಷಸ್ಯ ಯಾಃ ।**
**ಭವಂತ್ಯೇವ ಹಿ ತೇ ಕಾಲೇ ಯಥಾಽನಿಚ್ಛೋರ್ವಿಪರ್ಯಯಾಃ ॥೧೩॥**

**ಪುರುಷಸ್ಯ** ಹುಟ್ಟಿದ ಪ್ರತಿಯೊಬ್ಬ ಮನುಷ್ಯ ಮೊದಲಾದವರಿಗೆ **ಯಾಃ** ಯಾವ **ಆಯುಃ** ಆಯುಷ್ಯವು **ಶ್ರೀಃ** ಸಂಪತ್ತು **ಕೀರ್ತಿಃ** ಕೀರ್ತಿಯು **ಐಶ್ವರ್ಯಂ** ಅಧಿಕಾರವು (ಈಶಭಾವ) **ಆಶಿಷಃ** ಅಭೀಷ್ಟಗಳು ಆಗುವವೋ **ಅನಿಚ್ಛೋಃ** ಇಚ್ಛಿಸದಿರುವವನಿಗೂ **ವಿಪರ್ಯಯಾಃ** ಮೃತ್ಯು-ದಾರಿದ್ರ್ಯ-ಅಪಕೀರ್ತಿ-ದುಃಖ ಮೊದಲಾದವುಗಳು **ಕಾಲೇ** ಆಯಾ ಕಾಲದಲ್ಲಿ ಭಗವಂತನಿಂದಲೇ **ಭವಂತಿ** ಆಗುವವೋ **ತಥಾ** ಹಾಗೆಯೇ **ತೇ** (ಭಾವಾಃ) ಆಯುಷ್ಯ ಮೊದಲಾದವುಗಳು ಶ್ರೀಹರಿಯಿಂದಲೇ ಆಗುವವು. ಸುಖವಾದರೆ ನನ್ನ ಸಾಮರ್ಥ್ಯದಿಂದ ದುಃಖವಾದರೆ ಭಗವಂತ ಹೀಗೆ ಮಾಡಿಸಿದ ಎಂದು ವೈಷಮ್ಯವೇಕೆ? ಎಲ್ಲವೂ ಅವನಿಂದಲೇ ಎಂದು ಭಾವ. ।।೧೩।।

**ತಸ್ಮಾದಕೀರ್ತಿಯಶಸೋರ್ಜಯಾಪಜಯಯೋರಪಿ ।**
**ಸಮಃ ಸ್ಯಾತ್ಸುಖದುಃಖಾಭ್ಯಾಂ ಮೃತ್ಯುಜೀವಿತಯೋಸ್ತಥಾ ।।೧೪।।**

**ತಸ್ಮಾತ್** ಎಲ್ಲವೂ ಈಶ್ವರಾಧೀನವಾದ ಕಾರಣ **ಅಕೀರ್ತಿಯಶಸೋಃ** ಅಪಕೀರ್ತಿ-ಕೀರ್ತಿಗಳ ವಿಷಯದಲ್ಲಿ **ಅಪಿ** ಮತ್ತು **ಜಯಾಪಜಯಯೋಃ** ಜಯಾಪಜಯಗಳ ವಿಷಯದಲ್ಲಿಯೂ **ಸುಖದುಃಖಾಭ್ಯಾಂ** ಸುಖ-ದುಃಖಗಳಿಂದಲೂ **ತಥಾ** ಹಾಗೂ **ಮೃತ್ಯುಜೀವಿತಯೋಃ** ಸಾವು-ಬದುಕುಗಳಲ್ಲಿಯೂ **ಸಮಃ** ಶ್ರೀಹರಿಯ ಅಧೀನವೆಂದು ತಿಳಿದು ಹಿಗ್ಗು-ಕುಗ್ಗುಗಳನ್ನು ಹೊಂದದೇ ಸಮಾಧಾನ ಮನಸ್ಕನು **ಸ್ಯಾತ್** ಆಗಬೇಕು.

ಇಲ್ಲಿ **ಅಕೀರ್ತಿಃ** ಪ್ರತ್ಯಕ್ಷಸ್ತುತಿ **ಯಶಃ** ದಿಕ್ಕುಗಳಲ್ಲಿ ವ್ಯಾಪ್ತವಾದ ಸ್ತುತಿ ಎಂದೂ ಅರ್ಥ ಮಾಡಿಕೊಳ್ಳಬೇಕು. 'ದಿಕ್ಷು ಯಾನಾದ್ಯಶೋ ವ್ಯಾಪ್ತಂ ಕೀರ್ತಿಃ ಪ್ರತ್ಯಕ್ಷತಃ ಸ್ತುತಿಃ' ಎಂದು ಛಾಂದೋಗ್ಯಭಾಷ್ಯದಲ್ಲಿ ಹೇಳಿದೆ. ನಾನು-ನನ್ನದು ಎನ್ನುವ ಅಭಿಮಾನವೇ ದುಃಖಕಾರಣವೆಂದು ಹೇಳುವರು. ।।೧೪।।

ಪ್ರಕೃತಿ-ಪುರುಷರ ವಿವೇಕವಿಲ್ಲದಿರುವದೇ ದುಃಖಾದಿಗಳಿಗೆ ಕಾರಣವೆಂದು ಹೇಳುತ್ತಾರೆ-

**ಸತ್ತ್ವಂ ರಜಸ್ತಮ ಇತಿ ಪ್ರಕೃತೇರ್ನಾತ್ಮನೋ ಗುಣಾಃ ।**
**ತತ್ರ ಸಾಕ್ಷಿಣಮಾತ್ಮಾನಂ ಯೋ ವೇದ ನ ಸ ಬಧ್ಯತೇ ।।೧೫।।**

**ಸತ್ವಂ** ಸತ್ವವು **ರಜಃ** ರಜಸ್ಸು **ತಮಃ** ತಮಸ್ಸು **ಇತಿ** ಎಂಬುವವು **ಪ್ರಕೃತೇಃ** ಪ್ರಕೃತಿಯ **ಗುಣಾಃ** ಗುಣಗಳು **ಆತ್ಮನಃ ನ** ಚಿದಾನಂದಮಯನಾದ ಜೀವನ ಗುಣಗಳಲ್ಲ. **ತತ್ರ** ಅಪ್ರಾಕೃತನಾದ ಜೀವನಲ್ಲಿ **ಸಾಕ್ಷಿಣಂ** ಪ್ರತ್ಯಕ್ಷವಾಗಿ ನೋಡುವ, ಇವುಗಳಿಂದ

ಅಸಂಬದ್ಧನಾದ, ಬಂಧಕನೂ ಮೋಚಕನೂ ಆದ **ಆತ್ಮಾನಂ** ಪರಮಾತ್ಮನನ್ನು **ಯಃ** ಯಾವ ಜೀವನು **ವೇದ** ತಿಳಿಯುವನೋ **ಸಃ** ಅವನು **ನ ಬಧ್ಯತೇ** ಹರ್ಷ-ಶೋಕಾದಿಗಳಿಂದ ಬದ್ಧನಾಗುವದಿಲ್ಲ. ಅಹಂ-ಮಮತಾ ಅತೀತನಾದವನೆಂದರ್ಥ.

**ಯಃ** ಯಾವನು **ತತ್ರ ಆತ್ಮಗುಣೇಷ್ವಪಿ ಸಾಕ್ಷಿಣಂ** ಜೀವನ ಮತ್ತು ಗುಣಗಳ ಸಾಕ್ಷಿ ಎಂದು **ಆತ್ಮಾನಂ** ತನ್ನನ್ನೇ (ಜೀವ) **ವೇದ** ತಿಳಿಯುವನೋ **ಸಃ** ಅವನು **ನ ಬಧ್ಯತೇ ಇತಿ ನ** ಬದ್ಧನಾಗುವದಿಲ್ಲವೆಂದಿಲ್ಲ ಬದ್ಧನೇ ಆಗುವನು. ಹೀಗೆ ಅನ್ವಯ-ವ್ಯತಿರೇಕಗಳಿಂದ ಶ್ರೀಹರಿಯ ಜ್ಞಾನ ಆವಶ್ಯಕ ಎಂದು ಹೇಳಿದಂತಾಗುವದು.

ಕೇವಲ ವಜ್ರಾಯುಧ ಕೈಯಿಂದ ಬಿದ್ದ ಮಾತ್ರಕ್ಕೆ ಇಷ್ಟೊಂದು ಲಜ್ಜೆಯೇ ನನ್ನನ್ನು ನೋಡಿಯೂ ಎಂದು ಹೇಳಿ ಯುದ್ಧ ಸನ್ನದ್ಧನನ್ನಾಗಿ ಮಾಡಲು ತನ್ನನ್ನೇ ದೃಷ್ಟಾಂತೀಕರಿಸುವನು.

> **ಪಶ್ಯ ಮಾಂ ನಿರ್ಜಿತಂ ಶಕ್ರ ವೃಕ್ಣಾಯುಧಭುಜಂ ಮೃಧೇ ।**
> **ಘಟಮಾನಂ ಯಥಾಶಕ್ತಿ ತವ ಪ್ರಾಣಜಿಹೀರ್ಷಯಾ ॥೧೬॥**

**ಹೇ ಶಕ್ರ** ಇಂದ್ರನೇ **ಮೃಧೇ** ಯುದ್ಧದಲ್ಲಿ **ವೃಕ್ಣಾಯುಧಭುಜಂ** ಕತ್ತರಿಸಲ್ಪಟ್ಟ ಶೂಲಾಯುಧ ಭುಜ ಉಳ್ಳ ಆದ್ದರಿಂದಲೇ **ನಿರ್ಜಿತಂ** ನಿನ್ನಿಂದ ಸೋಲಲ್ಪಟ್ಟ ಆದರೂ **ಯಥಾಶಕ್ತಿ** ಶಕ್ತಿ ಇದ್ದಷ್ಟು **ತವ** ನಿನ್ನ **ಪ್ರಾಣಜಿಹೀರ್ಷಯಾ** ಪ್ರಾಣವನ್ನು ತೆಗೆಯಬೇಕೆಂಬ ಇಚ್ಛೆಯಿಂದ **ಘಟಮಾನಂ** ನಿನ್ನ ಮೇಲೆ ಎರಗುತ್ತಿರುವ **ಮಾಂ ಪಶ್ಯ** ನನ್ನನ್ನು ನೋಡು. ಇದರಿಂದ ಹರ್ಷ-ಶೋಕನಿವೃತ್ತಿಯಲ್ಲಿ ನಾನೇ ಗುರುವೆಂದು ಭಾವ. ॥೧೬॥

ಯುದ್ಧವನ್ನು ಪಗಡೆಯ ಜೂಜಿಗೆ ಹೋಲಿಸಿ ಜಯ-ಪರಾಜಯಗಳು ಅನಿಶ್ಚಿತವೆಂದು ತಿಳಿಸುತ್ತಾರೆ-

> **ಪ್ರಾಣಗ್ಲಹೋಽಯಂ ಸಮರ ಇಷ್ವಕ್ಷೋ ವಾಹನಾಸನಃ ।**
> **ಅತ್ರ ನ ಜ್ಞಾಯತೇಽಮುಷ್ಯ ನ ಯೋಽಮುಷ್ಯ ಪರಾಜಯಃ ॥೧೭॥**

**ಅಯಂ ಸಮರಃ** ಈ ಯುದ್ಧವು **ಪ್ರಾಣಗ್ಲಹಃ** ಪ್ರಾಣಗಳೇ ಪಣವಾಗಿ ಉಳ್ಳದ್ದು **ಇಷ್ವಕ್ಷಃ** ಬಾಣಗಳೇ ಪಗಡೆಕಾಯಿ ಉಳ್ಳದ್ದು **ವಾಹನಾಸನಃ** ಕುದುರೆ ಮುಂತಾದ ವಾಹನಗಳೇ ತೊಂಬತ್ತಾರು ಮನೆಗಳುಳ್ಳದ್ದು, ಪಗಡೆಯ ಪಟ್ಟ ಉಳ್ಳದ್ದು, (ಹಾಸು ಹಲಿಗೆ) ಪಗಡೆಯ ಆಟವಿದು. **ಅತ್ರ** ಇದರಲ್ಲಿ **ಅಮುಷ್ಯ ಜಯಃ** ಇವನಿಗೆ ಜಯ

**ಅಮುಷ್ಯ** ಇವನಿಗೆ **ಪರಾಜಯಃ** ಸೋಲು **ಇತಿ** ಎಂದು **ನ ಜ್ಞಾಯತೇ** ತಿಳಿಯಲಾರದು. 'ಪಣೋಽಕ್ಷೇಷು ಗ್ಲಹೋಽಕ್ಷಾಸ್ತು ದೇವನಾಪಾಶಕಾಶ್ಚ ತೇ' ಎಂದು ಅಮರವಿದೆ.

**ಶ್ರೀಶುಕ ಉವಾಚ -**

**ಇಂದ್ರೋ ವೃತ್ರವಚಃ ಶ್ರುತ್ವಾ ಗತಾಲೀಕಮಪೂಜಯತ್ ।**
**ಗೃಹೀತವಜ್ರಃ ಪ್ರಹಸಂಸ್ತಮಾಹ ಗತವಿಸ್ಮಯಃ ॥೧೮॥**

**ಇಂದ್ರಃ** ಇಂದ್ರದೇವನು **ವೃತ್ರವಚಃ** ವೃತ್ರನ ಮಾತನ್ನು **ಶ್ರುತ್ವಾ** ಕೇಳಿ **ಗತಾಲೀಕಂ** ಕಪಟವಿಲ್ಲದ ಅವನನ್ನು **ಅಪೂಜಯತ್** ಪ್ರಶಂಸಿಸಿದನು. **ಗತ ವಿಸ್ಮಯಃ ಸನ್** ಅಂಹಕಾರವನ್ನು ಕಳೆದುಕೊಂಡವನಾಗಿ **ಗೃಹೀತವಜ್ರಃ** ವಜ್ರಾಯುಧವನ್ನು ತೆಗೆದುಕೊಂಡು **ಪ್ರಹಸನ್** ನಗುತ್ತ **ತಂ** ವೃತ್ರನನ್ನು ಕುರಿತು **ಆಹ** ಹೇಳಿದನು. ॥೧೮॥

**ಇಂದ್ರ ಉವಾಚ -**

**ಅಹೋ ದಾನವ ಸಿದ್ಧೋಽಸಿ ಯಸ್ಯ ತೇ ಮತಿರೀದೃಶೀ ।**
**ಭಕ್ತಃ ಸರ್ವಾತ್ಮನಾತ್ಮಾನಂ ಸುಹೃದಂ ಜಗದೀಶ್ವರಮ್ ॥೧೯॥**

**ಭವಾನತಾರ್ಷೀನ್ಮಾಯಾಂ ವೈ ವೈಷ್ಣವೀಂ ಜನಮೋಹಿನೀಮ್ ।**
**ಯದ್ವಿಹಾಯಾಸುರಂ ಭಾವಂ ಮಹಾಪುರುಷತಾಂ ಗತಃ ॥೨೦॥**

**ಹೇ ದಾನವ** ದನುಪುತ್ರನಾದ ದಾನವರ ಸ್ವಭಾವದ ವೃತ್ರನೇ **ಸಿದ್ಧಃ ಅಸಿ** ಜೀವನ್ಮುಕ್ತನಾಗಿರುವೆ **ಅಹೋ** ಆಶ್ಚರ್ಯ **ಯಸ್ಯ ತೇ** ಯಾವ ನಿನಗೆ **ಈದೃಶೀ** ಆಗು-ಹೋಗುಗಳೆಲ್ಲ ಶ್ರೀಹರಿಯು ಅಧೀನವೆಂಬ ಈ ಬಗೆಯ **ಮತಿಃ** ಜ್ಞಾನವು ಬಂದಿರುವದು. **ಸುಹೃದಂ** ನಿರ್ವ್ಯಾಜಸ್ನೇಹಿತನಾದ **ಜಗದೀಶ್ವರಂ** ಜಗದೊಡೆಯನಾದ **ಆತ್ಮಾನಂ** ಪರಮಾತ್ಮನನ್ನು **ಸರ್ವಾತ್ಮನಾ** ಸರ್ವಪ್ರಕಾರದಿಂದ ಸರ್ವಸ್ವಾಮಿ ಎಂದು **ಭಕ್ತಃ** ಸೇವಿಸಿದ **ಭವಾನ್** ನೀನು **ಜನಮೋಹಿನೀಂ** ಜನರನ್ನು ಮೋಹಗೊಳಿಸುವ **ವೈಷ್ಣವೀಂ ಮಾಯಾಂ** ಶ್ರೀಹರಿಯ ಬಂಧಕಶಕ್ತಿಯನ್ನು **ಅತಾರ್ಷಿತ್** ಅವನ ಅನುಗ್ರಹದಿಂದ ದಾಟಿರುವಿ **ಯತ್** ಏಕೆಂದರೆ **ಆಸುರಂ ಭಾವಂ** ಅಸುರಸ್ವಭಾವವನ್ನು ಅಂದರೆ ಎಲ್ಲದಕ್ಕೂ ನಾನೇ ಸ್ವತಂತ್ರನೆಂಬ ಭಾವನೆಯನ್ನು **ವಿಹಾಯ** ಬಿಟ್ಟು **ಮಹಾಪುರುಷತಾಂ** ಏಕಾಂತತೆಯನ್ನು **ಗತಃ** ಹೊಂದಿರುವಿ.

**ವೈಷ್ಣವೀಂ** ವಿಷ್ಣುಪತ್ನಿಯಾದ **ಜ್ಞಾನಮೋಹಿನೀಂ** ಶ್ರೀಹರಿಯ ಅನುಗ್ರಹವಿಲ್ಲದಿದ್ದರೆ ಜ್ಞಾನವನ್ನು ನಾಶಪಡಿಸುವ **ಮಾಯಾಂ** ಪ್ರಕೃತಿಗುಣಪ್ರವರ್ತಕಳಾದ್ದರಿಂದ ಮಾಯಾ ಶಬ್ದವಾಚ್ಯಳಾದ ಶ್ರೀ, ಭೂ, ದುರ್ಗಾ ರೂಪಳಾದ ಚಿತ್ಪ್ರಕೃತಿಯನ್ನು **ಭವಾನ್** ನೀನು **ಅತಾರ್ಷಿತ್** ಭಗವಂತನ ಅನುಗ್ರಹ ಪಡೆದು ನಿನಗೆ ಅಭಿಮುಖ ಮಾಡಿಕೊಂಡಿರುವಿ. ಲಕ್ಷ್ಮೀದೇವಿಯ ಅನುಗ್ರಹವನ್ನು ಪಡೆಯುವುದೇ ಅವಳನ್ನು ದಾಟುವುದು ಎಂದು ಅರ್ಥ. ಚೆಟ್ಟಿಯವರು ಈ ರೀತಿಯಾಗಿಯೂ ಅರ್ಥವನ್ನು ಮಾಡಿದ್ದಾರೆ. ।।೧೯-೨೦।।

**ಖಲ್ವಿದಂ ಮಹದಾಶ್ಚರ್ಯಂ ಯದ್ರಜಃಪ್ರಕೃತೇಸ್ತವ ।**
**ವಾಸುದೇವೇ ಭಗವತಿ ಸರ್ವಾತ್ಮನಿ ದೃಢಾ ಮತಿಃ ।।೨೧।।**

**ರಜಃಪ್ರಕೃತೇಃ** ರಜಃಪ್ರಚುರ ಸ್ವಭಾವನಾದ, ಅಸುರಜಾತಿಯವನಾದ **ತವ** ನಿನಗೆ **ಸರ್ವಾತ್ಮನಿ** ಎಲ್ಲರಿಗೂ ಸ್ವಾಮಿಯಾದ **ಭಗವತಿ** ಸಮಗ್ರ ಐಶ್ವರ್ಯ ಸಂಪನ್ನನಾದ **ವಾಸುದೇವೇ** ಶ್ರೀಹರಿಯಲ್ಲಿ **ದೃಢಾ** ನಿಶ್ಚಲವಾದ **ಮತಿಃ** ಜ್ಞಾನವಿದೆ ಎಂಬುದು ಏನಿದೆಯೋ **ಇದಂ** ಇದು **ಮಹದಾಶ್ಚರ್ಯಂ** ಅತ್ಯಂತ ಆಶ್ಚರ್ಯವು, ಮಹಾಂತರಾದ ನಮಗೂ ಆಶ್ಚರ್ಯ. (ಮಹತಾಂ ಆಶ್ಚರ್ಯಂ) **ಖಲು** ನನ್ನನ್ನು ಸಾಂತ್ವನಗೊಳಿಸುವಿ. 'ಖಲು ಸಾಂತ್ವನೇ' ಎಂದು ವಿಶ್ವವಿದೆ. ।।೨೧।।

ಅಂತರ್ಮುಖಿಯಾದ ಕಣ್ಣುಗಳಿಂದ ಶ್ರೀ ಜಗನ್ನಾಥನನ್ನು ಭಜಿಸುವ ನಿನಗೆ ಇತರ ದೇವತೆಗಳ ಸೇವೆ ಮಾಡಿದರೇನು ಫಲ? ಬಿಟ್ಟರೇನು ಹಾನಿ? ಎಂಬುದನ್ನು ಅನುರೂಪವಾದ ದೃಷ್ಟಾಂತದಿಂದ ನಿರೂಪಿಸುವರು. ಅಥವಾ ನಿರರ್ಗಲವಾದ ಅಪವರ್ಗಮಾರ್ಗವಿರುವಾಗ, ಸ್ವರ್ಗಾದಿಗಳಿಂದೇನು ಪ್ರಯೋಜನ ಎಂದು ಹೇಳುವನು-

**ಯಸ್ಯ ಭಕ್ತಿರ್ಭಗವತಿ ಹರೌ ನಿಃಶ್ರೇಯಸೇಶ್ವರೇ ।**
**ವಿಕ್ರೀಡತೋಽಮೃತಾಂಭೋಧೌ ಕಿಂ ಕ್ಷುದ್ರೈಃ ಖಾತಕೋದಕೈಃ ।।೨೨।।**

**ಯಸ್ಯ** ಯಾವನಿಗೆ **ನಿಃಶ್ರೇಯಸೇಶ್ವರೇ** ಮೋಕ್ಷಕ್ಕೆ ನಿಯಾಮಕನಾದ **ಭಗವತಿ** ಐಶ್ವರ್ಯಶಾಲಿಯಾದ **ಹರೌ ಅಮೃತಾಂಭೋಧೌ** ಶ್ರೀಹರಿ ಎಂಬ ಅಮೃತ ಸಮುದ್ರದಲ್ಲಿ **ಭಕ್ತಿಃ** ಭಕ್ತಿಯು ಇದೆಯೋ ಆದ್ದರಿಂದಲೇ **ವಿಕ್ರೀಡತಃ** ವಿಶೇಷವಾಗಿ ಆಡುತ್ತಿರುವ **ತಸ್ಯ** ಆ ಭಕ್ತನಿಗೆ **ಕ್ಷುದ್ರೈಃ** ಬೇಗನೆ ಒಣಗುವ **ಖಾತಕೋದಕೈಃ** ಕೆರೆ-ಭಾವಿ

ಮುಂತಾದವುಗಳ ನೀರಿನಿಂದ, ಆದರಂತೆ ಇರುವ ಇತರ ದೇವತೆಗಳಿಂದ ಸ್ವರ್ಗಾದಿಗಳಿಂದ **ಕಿಂ** ಆಗಬೇಕಾದ್ದೇನು? ಪ್ರಯೋಜನವಿಲ್ಲವೆಂದರ್ಥ. ।।೨೨।।

**ಶ್ರೀಶುಕ ಉವಾಚ –**

**ಇತಿ ಬ್ರುವಾಣಾವನ್ಯೋನ್ಯಂ ಧರ್ಮಜಿಜ್ಞಾಸಯಾ ನೃಪ ।**
**ಯುಯುಧಾತೇ ಮಹಾವೀರ್ಯಾವಿಂದ್ರವೃತ್ರೌ ಯುಧಾಂಪತೀ ।।೨೩।।**

**ನೃಪ** ಪರೀಕ್ಷಿದ್ರಾಜನೇ **ಧರ್ಮಜಿಜ್ಞಾಸಯಾ** ಭಗವಂತನ ಸ್ವರೂಪವನ್ನು ತಿಳಿಯುವ ಇಚ್ಛೆಯಿಂದ **ಇತಿ** ಈ ರೀತಿಯಾಗಿ **ಅನ್ಯೋನ್ಯಂ** ಪರಸ್ಪರವಾಗಿ **ಬ್ರುವಾಣಾ** ಮಾತನಾಡುತ್ತಿದ್ದ **ಮಹಾವೀರ್ಯೌ** ಮಹಾಪರಾಕ್ರಮಿಗಳಾದ **ಯುಧಾಂಪತೀ** ಯೋಧರಲ್ಲಿ ಮುಖ್ಯರಾದ **ಇಂದ್ರವೃತ್ರೌ** ಇಂದ್ರ-ವೃತ್ರರು **ಅನ್ಯೋನ್ಯಂ** ಪರಸ್ಪರ **ಯುಯುಧಾತೇ** ಯುದ್ಧ ಮಾಡುತ್ತಿದ್ದರು. ।।೨೩।।

**ಆವಿಧ್ಯ ಪರಿಘಂ ವೃತ್ರಃ ಕಾರ್ಷ್ಣಾಯಸಮರಿಂದಮ ।**
**ಇಂದ್ರಾಯ ಪ್ರಾಹಿಣೋದ್ ಘೋರಂ ವಾಮಹಸ್ತೇನ ಮಾರಿಷ ।।೨೪।।**

**ಹೇ ಅರಿಂದಮ** ಶತ್ರುನಾಶಕನಾದ **ಮಾರಿಷ** ಶ್ರೇಷ್ಠರಾಜನೇ **ವೃತ್ರಃ** ವೃತ್ರನು **ವಾಮಹಸ್ತೇನ** ಕತ್ತರಿಸಿ ಉಳಿದ ಎಡಗೈಯಿಂದ **ಘೋರಂ** ಭಯಂಕರವಾದ **ಕಾರ್ಷ್ಣಾಯಸಂ** ಕಬ್ಬಿಣದ **ಪರಿಘಂ** ಪರಿಘಾಯುಧವನ್ನು **ಆವಿಧ್ಯ** ಹೊಡೆದು ಹಿಂದಿರುಗಿಸಿ **ಇಂದ್ರಾಯ** ಇಂದ್ರನ ಮೇಲೆ **ಪ್ರಾಹಿಣೋತ್** ಎಸೆದನು. ।।೨೪।।

**ಸ ತು ವೃತ್ರಸ್ಯ ಪರಿಘಂ ಕರಂ ಚ ಕರಭೋಪಮಮ್ ।**
**ಚಿಚ್ಛೇದ ಯುಗಪದ್ದೇವೋ ವಜ್ರೇಣ ಶತಪರ್ವಣಾ ।।೨೫।।**

**ಸಃ ದೇವಃ ತು** ಆ ಇಂದ್ರದೇವನಾದರೂ **ಪರಿಘಂ** ಪರಿಘಾಯುಧವನ್ನು **ಕರಭೋಪಮಂ ಕರಂ ಚ** ಆನೆಯ ಸೊಂಡಿಲಿನಂತಿರುವ ಕೈಯ್ಯನ್ನು **ಶತಪರ್ವಣಾ** ನೂರು ಅರಗಳುಳ್ಳ **ವಜ್ರೇಣ** ವಜ್ರಾಯುಧದಿಂದ **ಯುಗಪತ್** ಏಕಕಾಲದಲ್ಲಿ **ಚಿಚ್ಛೇದ** ಕತ್ತರಿಸಿದನು. 'ಕರಿಕಾಯೇ ತು ಕರಭೇ ಕರಿಪೋತೇಽಪಿ ತತ್ಕರೇ' ಇತ್ಯಭಿಧಾನಾತ್' ।।೨೫।।

**ದೋರ್ಭ್ಯಾಮುತ್ಕೃತ್ತಮೂಲಾಭ್ಯಾಂ ಬಭೌ ರಕ್ತಸ್ರವೋಽಸುರಃ ।**
**ಛಿನ್ನಪಕ್ಷೋ ಯಥಾ ಗೋತ್ರಃ ಖಾದ್ ಭ್ರಷ್ಟೋ ವಜ್ರಿಣಾ ಹತಃ ।।೨೬।।**

**ಉತ್ಕೃತ್ತಮೂಲಾಭ್ಯಾಂ** ಕತ್ತರಿಸಿದ ಪ್ರಾರಂಭದ ಭಾಗ ಉಳ್ಳ **ದೋರ್ಭ್ಯಾಂ** ತೋಳುಗಳಿಂದ **ರಕ್ತಸ್ರವಃ** ರಕ್ತ ಸುರಿಯುತ್ತಿರುವ **ಅಸುರಃ** ವೃತ್ರನು **ವಜ್ರಿಣಾ** ಇಂದ್ರದೇವರಿಂದ **ಹತಃ** ಹೊಡೆಯಲ್ಪಟ್ಟವನಾಗಿ **ಛಿನ್ನಪಕ್ಷಃ** ಛಿನ್ನವಾದ ರೆಕ್ಕೆ ಉಳ್ಳ ಆದ್ದರಿಂದಲೇ **ಖಾತ್** ಆಕಾಶದಿಂದ **ಭ್ರಷ್ಟಃ** ಕಳಚಿ ಕೆಳಗೆ ಬಿದ್ದ **ಗೋತ್ರಃ ಯಥಾ** ಪರ್ವತದಂತೆ **ಬಭೌ** ಶೋಭಿಸಿದನು.

**ಕೃತ್ವಾಧರಾಂ ಹನುಂ ಭೂಮೌ ದೈತ್ಯೋ ದಿವ್ಯುತ್ತರಾಂ ಹನುಮ್ ।**
**ನಭೋ ಗಂಭೀರವಕ್ತ್ರೇಣ ಲಿಲೇಹೋಲ್ಬಣಜಿಹ್ವಯಾ ॥೨೭॥**

**ದೈತ್ಯಃ** ವೃತ್ರನು **ಅಧರಾಂ ಹನುಂ** ಕೆಳಗಿನ ಕಪೋಲಪ್ರದೇಶವನ್ನು (ಕೆಳದುಟಿ-ಯನ್ನು) **ಭೂಮೌ** ಭೂಮಿಯಲ್ಲಿ **ಉತ್ತರಾಂ ಹನುಂ** ಮೇಲಿನ ಕಪೋಲವನ್ನು (ಮೇಲ್ದುಟಿಯನ್ನು) ದಿವಿ ಅಂತರಿಕ್ಷದಲ್ಲಿ **ಕೃತ್ವಾ** ಇಟ್ಟು **ನಭೋಗಂಭೀರವಕ್ತ್ರೇಣ** ಆಕಾಶದಂತೆ ಆಳವಾದ ಬಾಯಿಯಿಂದ ಕೂಡಿದ ಇವನು **ಉಲ್ಬಣಜಿಹ್ವಯಾ** ಕ್ರೂರವಾದ (ಉದ್ದಾದ) ನಾಲಿಗೆಯಿಂದ **ನಭಃ** ಆಕಾಶವನ್ನು **ಲಿಲೇಹ** ನೆಕ್ಕಿದನು. ಹಾಗೆ ಕಂಡನು. ॥೨೭॥ ಹನುದ್ವಯಂ ಲಿಲೇಹ ಎಂದೂ ಅನ್ವಯ ಮಾಡಿರುವರು.

**ದಂಷ್ಟ್ರಾಭಿಃ ಕಾಲಕಲ್ಪಾಭಿಃ ಗ್ರಸನ್ನಿವ ಜಗತ್ತ್ರಯಮ್ ।**
**ಅತಿಮಾತ್ರಮಹಾಕಾಯ ಆಕ್ಷಿಪಂಸ್ತರಸಾ ಗಿರೀನ್ ॥೨೮॥**

**ಅತಿಮಾತ್ರಮಹಾಕಾಯಃ** ಅತ್ಯಂತ ಎತ್ತರವಾದ ದೇಹ ಉಳ್ಳ **ಅತಿಮಾತ್ರಂ ಮಹಾಕಾಯಃ** ಎಂಬ ಪಾಠದಲ್ಲಿ ಬಹು ಪ್ರಮಾಣದ ಪದಾರ್ಥದಕ್ಕಿಂತ ದೊಡ್ಡ ದೇಹ ಉಳ್ಳ ವೃತ್ರನು **ಕಾಲಕಲ್ಪಾಭಿಃ** ಯಮ ಸದೃಶವಾದ **ದಂಷ್ಟ್ರಾಭಿಃ** ಹಲ್ಲುಗಳಿಂದ **ಜಗತ್ತ್ರಯಂ** ಮೂರು ಲೋಕಗಳನ್ನು **ಗ್ರಸನ್ನಿವ** ನುಂಗುವಂತೆ ಕಾಣುತ್ತ **ತರಸಾ** ವೇಗದಿಂದ ಬಲದಿಂದ 'ತರೋ ಬಲೇ ಚ ವೇಗೇ ಚ' ಎಂದು ವಿಶ್ವವಿದೆ. **ಗಿರೀನ್** ಬೆಟ್ಟಗಳನ್ನು **ಆಕ್ಷಿಪನ್** ಅಲಗಾಡಿಸುತ್ತ, ॥೨೮॥

**ಗಿರಿರಾಟ್ ಪಾದಚಾರೀವ ಪದ್ಭ್ಯಾಂ ನಿರ್ದಾರಯನ್ ಮಹೀಮ್ ।**
**ಜಗ್ರಾಸ ತಂ ಸಮಾಸಾದ್ಯ ವಜ್ರಿಣಂ ಸಹ ವಾಹನಮ್ ।**
**ಮಹಾಪ್ರಾಣೋ ಮಹಾವೀರ್ಯೋ ಮಹಾಸರ್ಪ ಇವ ದ್ವಿಪಮ್ ॥೨೯॥**

**ಪಾದಚಾರೀ** ಕಾಲಿನಿಂದ ನಡೆದು ಬರುತ್ತಿರುವ **ಗಿರಿರಾಟ್ ಇವ** ಪರ್ವತರಾಜನಂತೆ **ಪದ್ಭ್ಯಾಂ** ಕಾಲುಗಳಿಂದ **ಮಹೀಂ** ಭೂಮಿಯನ್ನು **ನಿರ್ದಾರಯನ್** ಸೀಳುತ್ತ **ವಜ್ರಿಣಂ**

ಇಂದ್ರನನ್ನು **ಸಮಾಸಾದ್ಯ** ಸಮೀಪಿಸಿ **ಮಹಾಪ್ರಾಣಃ** ಮಹಾಬಲಿಷ್ಠನಾದ **ಮಹಾವೀರ್ಯಃ** ಮಹಾಸಾಮರ್ಥ್ಯ ಉಳ್ಳ ವೃತ್ರನು **ಮಹಾಸರ್ಪಃ** ಅಜಗರವು (ಹೆಬ್ಬಾವು) **ದ್ವಿಪಂ ಇವ** ಆನೆಯನ್ನು ನುಂಗುವಂತೆ **ಸಹವಾಹನಂ** ಐರಾವತ ಸಹಿತನಾದ **ತಂ** ಇಂದ್ರನನ್ನು **ಜಗ್ರಾಸ** ನುಂಗಿದನು. ॥೨೯॥

**ವೃತ್ರಗ್ರಸ್ತಂ ತಮಾಲಕ್ಷ್ಯ ಸಪ್ರಜಾಪತಯಃ ಸುರಾಃ ।**
**ಹಾ ಕಷ್ಟಮಿತಿ ನಿರ್ವಿಣ್ಣಾಶ್ಚುಕ್ರುಶುಃ ಸಮಹರ್ಷಯಃ ॥೩೦॥**

**ಸಪ್ರಜಾಪತಯಃ** ಪ್ರಜೇಶ್ವರದಿಂದ ಕೂಡಿದ **ಸಮಹರ್ಷಯಃ** ಮಹರ್ಷಿಗಳಿಂದ ಕೂಡಿದ **ಸುರಾಃ** ದೇವತೆಗಳು **ವೃತ್ರಗ್ರಸ್ತಂ** ವೃತ್ರನಿಂದ ನುಂಗಲ್ಪಟ್ಟ **ತಂ** ಆ ವಾಹನ ಸಹಿತನಾದ ಇಂದ್ರನನ್ನು **ಆಲಕ್ಷ್ಯ** ನೋಡಿ **ನಿರ್ವಿಣ್ಣಾಃ** ಖಿನ್ನರಾಗಿ **ಹಾ ಕಷ್ಟಂ** ಅಯ್ಯೋ ದುಃಖವು **ಇತಿ** ಎಂದು **ಚುಕ್ರುಶುಃ** ಕೂಗಿಕೊಂಡರು. ॥೩೦॥

**ನಿಗೀರ್ಣೋಽಪ್ಯಸುರೇಂದ್ರೇಣ ನ ಮಮಾರೋದರಂ ಗತಃ ।**
**ಮಹಾಪುರುಷಸನ್ನದ್ಧೋ ಯೋಗಮಾಯಾಬಲೇನ ಚ ॥೩೧॥**

**ಅಸುರೇಂದ್ರೇಣ** ವೃತ್ರಾಸುರನಿಂದ **ನಿಗೀರ್ಣಃ** ನುಂಗಲ್ಪಟ್ಟ **ಉದರಂ ಗತಃ ಅಪಿ** ಅವನ ಹೊಟ್ಟೆಯನ್ನು ಸೇರಿದ್ದರೂ **ಇಂದ್ರಃ** ಇಂದ್ರದೇವರು **ಮಹಾಪುರುಷಸನ್ನದ್ಧಃ** ಭಗವಂತನಿಂದ ರಕ್ಷಿತರು ನಾರಾಯಣಕವಚದಿಂದ ಸನ್ನದ್ಧರಾಗಿದ್ದರಿಂದ **ಯೋಗಮಾಯಾಬಲೇನ ಚ** ಯೋಗಸಾಮರ್ಥ್ಯದಿಂದ ಬಂದ ಅಣಿಮಾದಿ ಮಹಿಮೆಯಿಂದಲೂ **ನ ಮಮಾರ** ಸಾಯಲಿಲ್ಲ.

**ಉದರಂ** ನಾನು ಸಾಯುವೆನೋ ಹೊರ ಹೋಗುವೆನೋ ಎಂದು ಸಂಶಯವನ್ನು **ನ ಗತಃ** ಹೊಂದಲಿಲ್ಲ. ಹೀಗೂ ಅರ್ಥ. 'ಉದರಂ ಸಂಶಯಃ ಪ್ರೋಕ್ತಃ' ಎಂದು ತಾತ್ಪರ್ಯಾಂತರದಲ್ಲಿ ಹೇಳಿದೆ. ॥೩೧॥

**ಭಿತ್ತ್ವಾ ವಜ್ರೇಣ ತತ್ಕುಕ್ಷಿಂ ನಿಷ್ಕ್ರಮ್ಯ ಬಲಭಿದ್ವಿಭುಃ ।**
**ಉಚ್ಚಕರ್ತ ಶಿರಃ ಶತ್ರೋರ್ಗಿರಿಃ ಶೃಂಗಮಿವೌಜಸಾ ॥೩೨॥**

**ವಿಭುಃ** ಸಮರ್ಥನಾದ **ಬಲಭಿತ್** ಇಂದ್ರನು **ವಜ್ರೇಣ** ವಜ್ರಾಯುಧದಿಂದ **ತತ್ಕುಕ್ಷಿಂ** ಅವನ ಹೊಟ್ಟೆಯನ್ನು **ಭಿತ್ತ್ವಾ** ಸೀಳಿ **ನಿಷ್ಕ್ರಮ್ಯ** ಹೊರಗೆ ಬಂದು **ಓಜಸಾ** ಸಾಮರ್ಥ್ಯದಿಂದ **ಗಿರಿಶೃಂಗಂ ಇವ** ಬೆಟ್ಟದ ಕೋಡುಗಲ್ಲಿನಂತೆ **ಶತ್ರೋಃ** ವೃತ್ರನ **ಶಿರಃ** ತಲೆಯನ್ನು **ಉಚ್ಚಕರ್ತ** ಕತ್ತರಿಸಿದನು. ॥೩೨॥

**ವಜ್ರಸ್ತು ತತ್ಕಂಧರಮಾಶುವೇಗಃ**
**ಕೃಂತನ್ ಸಮಂತಾತ್ಪರಿವರ್ತಮಾನಃ ।**
**ನ್ಯಪಾತಯತ್ತಾವದಹರ್ಗಣೇನ**
**ಯೋ ಜ್ಯೋತಿಷಾಮಯನೇ ವಾರ್ತ್ರಹತ್ಯೇ ॥೩೩॥**

**ಆಶುವೇಗಃ** ಅತ್ಯಂತ ವೇಗವುಳ್ಳ **ವಜ್ರಃ ತು** ವಜ್ರಾಯುಧವಾದರೂ **ವಾರ್ತ್ರಹತ್ಯೇ** ವೃತ್ರನ ವಧೆಗಾಗಿ ನಡೆದ ಯುದ್ಧದಲ್ಲಿ ೨. ವೃತ್ರಹತ್ಯೆಗೆ ಯೋಗ್ಯವಾದ ಕಾಲದಲ್ಲಿ ೩. ವೃತ್ರನ ಹನನಕ್ಕಾಗಿ **ತತ್ಕಂಧರಂ** ವೃತ್ರನ ಕುತ್ತಿಗೆಯನ್ನು **ಸಮಂತಾತ್** ಸುತ್ತಲೂ **ಪರಿವರ್ತಮಾನಃ** ಸುತ್ತುತ್ತಾ **ಜ್ಯೋತಿಷಾಂ** ಸೂರ್ಯಾದಿಗ್ರಹಗಳ **ಅಯನೇ** ದಕ್ಷಿಣ-ಉತ್ತರಾಯಣಗಳೆಂಬ ವರ್ಷದಲ್ಲಿ **ಯಃ ಅಹರ್ಗಣಃ** ಯಾವ ಹಗಲು-ರಾತ್ರಿಗಳಿಂದ ಸೇರಿದ ಮುನ್ನೂರ ಅರವತ್ತು ದಿನಗಳ ಸಮೂಹವು ಆಗುವದೋ **ತಾವದಹರ್ಗಣೇನ** ಅಷ್ಟು ದಿನಗಳಿಂದ **ಕೃಂತನ್** ಕತ್ತರಿಸುತ್ತ **ನ್ಯಪಾತಯತ್** ಬೀಳಿಸಿತು.

ಮುನ್ನೂರಾ ಅರವತ್ತು ದಿನ ಕುತ್ತಿಗೆಯ ಸುತ್ತ ಸುತ್ತುತ್ತಾ ವೃತ್ರನ ಸಾವಿಗೆ ಯೋಗ್ಯಕಾಲದಲ್ಲಿ ಕುತ್ತಿಗೆಯನ್ನು ದೇಹದಿಂದ ಕೆಳಕ್ಕೆ ಬೀಳಿಸಿತು ಎಂದು ಅಭಿಪ್ರಾಯ. ॥೩೩॥

ಆಚಾರ್ಯರು ಈ ಶ್ಲೋಕದ ಅರ್ಥವನ್ನು ಪ್ರಮಾಣದಿಂದ ತಿಳಿಸುವರು-

ತಾತ್ಪರ್ಯ

ಸಂಧಿತಃ ಸಮಯೇನೇಂದ್ರೋ ವೃತ್ರೇಣಾಽಥೋ ಕರಗ್ರಹಃ ।
ಸಮುದ್ರತೀರೇ ವಿಚರನ್ ಫೇನೇನ ವಧಮಸ್ಯ ತು ।

ನರ್ಮಣಾ ಜಹಿ ಫೇನೇನ ವಾಚಯಿತ್ವಾ ಸುರೇಶ್ವರಃ ।
ಪಾದಸ್ಪರ್ಶವಿವಾದಂ ಚ ಕೃತ್ವಾ ಯುದ್ಧಾಯ ದಂಶಿತಃ ।

ಫೇನೇ ವಜ್ರಂ ಸಮಾವೇಶ್ಯ ವಿಷ್ಣುಯುಕ್ತಂ ವ್ಯಸರ್ಜಯತ್ ।
ಅಪಾನುದಚ್ಛಿರಸ್ತಸ್ಯ ಧ್ಯಾಯತೋ ವತ್ಸರೇಣ ಸಃ ॥ ಇತ್ಯಾಗ್ನೇಯೇ

ವೃತ್ರಾಸುರನಿಂದ ಒಂದು ನಿಯಮ ಮಾಡಿಕೊಂಡು ಅಥವಾ ಕೆಲ ಕಾಲಾನಂತರ ಇಂದ್ರನು ಸ್ನೇಹ ಬೆಳಸಿದನು. ಸಖ್ಯವಾದ ಮೇಲೇ ಅವನ (ವೃತ್ರನ) ಕೈ ಹಿಡಿದನು. (ಇದರಿಂದ ಅವನಿಗೆ ಕೈ ಬೆಳದಿದ್ದವು ಎಂದು ಸೂಚಿತವಾಗುವದು) ನೊರೆಯಿಂದ

ವೃತ್ರಾಸುರನನ್ನು ಸಂಹರಿಸುವದಕ್ಕಾಗಿ ಸಮುದ್ರತೀರದಲ್ಲಿ ಸಂಚರಿಸುತ್ತ ನೊರೆಯಿಂದ ನನ್ನನ್ನು ಕೊಲ್ಲು ಎಂದು ವಿನೋದ ಉಪಹಾಸಕ್ಕಾಗಿ ವೃತ್ರಾಸುರನಿಂದ ಹೇಳಿಸಿಕೊಂಡು ಇಂದ್ರದೇವನು ಏಕೆ ಕಾಲು ತಾಗಿಸಿದಿ ಎಂದು ಜಗಳ ತೆಗೆದು ಯುದ್ಧಕ್ಕಾಗಿ ಕವಚಕಟ್ಟಿಕೊಂಡು ಸಿದ್ಧನಾಗಿ, ವಿಷ್ಣುವಿನ ಶಕ್ತಿಯಿಂದ ಕೂಡಿದ ವಜ್ರಾಯುಧವನ್ನು ನೊರೆಯಲ್ಲಿ ಪ್ರವೇಶಿಸಿ ವೃತ್ರನಿಗೆ ಬಿಟ್ಟು ಶ್ರೀನಾರಾಯಣನನ್ನು ಧ್ಯಾನಿಸುತ್ತಿದ್ದ ವೃತ್ರನ ಶಿರಸ್ಸನ್ನು ಒಂದು ವರ್ಷದಲ್ಲಿ ಕತ್ತರಿಸಿದನು ಎಂದು ಆಗ್ನೇಯ ಪುರಾಣದಲ್ಲಿದೆ. ।।೩೩।।

ಇಂದ್ರನಿಗೂ ವೃತ್ರನಿಗೂ ಸಂಧಾನವಾದ ನಂತರ ಅವನನ್ನು ಕೊಲ್ಲುವವರೆಗೆ ಗತಿಸಿದ ಕಾಲ ಒಂದು ವರ್ಷವೆಂದು ತಿಳಿಯಬೇಕು-

**ತದಾ ಚ ಖೇ ದುಂದುಭಯೋ ವಿನೇದುಃ**
**ಗಂಧರ್ವವಿದ್ಯಾಧ್ರಮಹರ್ಷಿಸಿದ್ಧಾಃ ।**
**ವಾರ್ತ್ರಘ್ನಲಿಂಗೈಸ್ತಮಭಿಷ್ಟುವಾನಾ**
**ಮಂತ್ರೈರ್ಮುದಾ ಕುಸುಮೈರಭ್ಯವರ್ಷನ್ ।।೩೪।।**

**ತದಾ** ವೃತ್ರನ ತಲೆ ಬಿದ್ದಾಗ **ಖೇ** ಆಕಾಶದಲ್ಲಿ **ದುಂದುಭಯಃ** ದುಂದುಭಿಗಳು **ವಿನೇದುಃ** ತಾವೇ ಶಬ್ದ ಮಾಡಿದವು. **ಗಂಧರ್ವವಿದ್ಯಾಧ್ರಮಹರ್ಷಿಸಿದ್ಧಾಃ** ಗಂಧರ್ವರು ವಿದ್ಯಾಧರರು, ಮಹರ್ಷಿಗಳು, ಸಿದ್ಧರು **ಮುದಾ** ಸಂತೋಷದಿಂದ **ತಂ** ಇಂದ್ರದೇವರನ್ನು **ವಾರ್ತ್ರಘ್ನಲಿಂಗೈಃ** ವೃತ್ರನನ್ನು ಸಂಹರಿಸಿದ ಇಂದ್ರನ ಪರಾಕ್ರಮ ತಿಳಿಸುವ, ತಡೆದಿದ್ದ ನೀರನ್ನು ಹೊರ ಹೊರಡಿಸಿದರೆಂಬ ಲಕ್ಷಣಗಳುಳ್ಳ **ಮಂತ್ರೈಃ** 'ಇಂದ್ರೋ ವೈ ವೃತ್ರಂ ಹತ್ವಾ ಮಹಾನಭವತ್' 'ವಾರ್ತ್ರಹತ್ಯಾಯ ಶ್ರವಸೇ ಪೃತನಾಸಾಹ್ಯಾಯ' 'ದಾಸಪತ್ನೀರಹೀಗೋಪಾ ಅತಿಷ್ಠನ್ನಿರುದ್ಧಾ ಆಪಃ ಪಣಿನೇವ ಗಾವಃ । ಅಪಾಂ ಬಲಮಪಿಹಿತಂ ಯದಾಸೀತ್ ವೃತ್ರಂ ಜಘನ್ವಾಂ ಅಪ ತದ್ವಾರ' ಮುಂತಾದ ವೇದಮಂತ್ರಗಳಿಂದ **ಅಭಿಷ್ಟುವಾನಾಃ** ಸ್ತೋತ್ರ ಮಾಡುವವರಾಗಿ **ಕುಸುಮೈಃ** ಹೂಗಳಿಂದ **ಅಭ್ಯವರ್ಷನ್** ಮಳೆ ಗರೆದರು.

ವರ್ಷಣಕರ್ಮಗಳಾದ ಕುಸುಮಗಳಿಗೆ ಕರಣತ್ವ ಔಪಚಾರಿಕ. ದುಂದುಭಿಗಳು ತಾವೇ ಬಾರಿಸಿದವೆಂದು 'ಸ್ವಯಮೇವ ಪ್ರವಾದ್ಯಂತ ದೇವತೂರ್ಯಾಣ್ಯನೇಕಶಃ' ಎಂದು ಹರಿವಂಶದಲ್ಲಿ ಹೇಳಿದೆ.

ವಿದ್ಯಾಧ್ರ ಎಂಬುದಕ್ಕೆ ಸದೃಶವಾದ ಪ್ರಕರಣದಲ್ಲಿ ಋಗ್ಭಾಷ್ಯಟೀಕಾದಲ್ಲಿ 'ಆಧ್ರಸ್ಯ ಚಿತ್' ಆಸಮಂತಾತ್ ಧಾರಕಸ್ಯಾಪಿ । ಮಹೀಧ್ರ ಇತಿ ಯಥಾ । ಧೃ ಧಾರಣೇ ಎಂಬ ಧಾತು ಮೂಲ ವಿಭೂಜಾದಿತ್ವಾತ್ ಕ ಪ್ರತ್ಯಯೇ ಕಿತ್ವಾತ್ ಗುಣಾಭಾವೇ ಋಕಾರಸ್ಯ ಯಣಾದೇಶೇ ವಿದ್ಯಾಂ ಧರಂತೀತಿ ವಿದ್ಯಧ್ರಾಃ ಎಂದಾಗುವದು. ।।೩೪।।

**ವೃತ್ರಸ್ಯ ದೇಹಾನ್ನಿಷ್ಕ್ರಾಂತಮಾತ್ಮಜ್ಯೋತಿರರಿಂದಮ ।**
**ಪಶ್ಯತಾಂ ಸರ್ವಲೋಕಾನಾಂ ಸ್ವಲೋಕಂ ಸಮಪದ್ಯತ ।।೩೫।।**

।। ಇತಿ ಶ್ರೀಮದ್ಭಾಗವತೇ ಷಷ್ಠಸ್ಕಂಧೇ ದ್ವಾದಶೋऽಧ್ಯಾಯಃ ।।

**ಅರಿಂದಮ** ಶತ್ರುಸಂಹಾರಕನೇ **ವೃತ್ರಸ್ಯ ದೇಹಾತ್** ವೃತ್ರನ ದೇಹದಿಂದ **ನಿಷ್ಕ್ರಾಂತಂ** ಹೊರ ಹೊರಟ **ಆತ್ಮಜ್ಯೋತಿಃ** ಜೀವನೆಂಬ ಬೆಳಕು **ಸರ್ವಲೋಕಾನಾಂ ಪಶ್ಯತಾಂ** ಎಲ್ಲ ಜನರು ನೋಡುತ್ತಿರುವಾಗಲೇ **ಸ್ವಲೋಕಂ** ತಾನಿದ್ದ ವಿದ್ಯಾಧರಲೋಕವನ್ನು **ಸಮಪದ್ಯತ** ಹೊಂದಿತು. ತನ್ನ ವಿದ್ಯಾಧರ ಶರೀರವನ್ನು ಅಂದರೆ ತನ್ನ ಅಂಶಿಯನ್ನು ಹೊಂದಿತು ಎಂದರ್ಥ. ।।೩೫।।

ಇಲ್ಲಿಗೆ ಹನ್ನೆರಡನೆಯ ಅಧ್ಯಾಯವು ಮುಗಿಯಿತು

★★★★★

# ಅಥ ಶ್ರೀಮದ್ಭಾಗವತೇ - ಷಷ್ಠಸ್ಕಂಧೇ

## ತ್ರಯೋದಶೋಽಧ್ಯಾಯಃ

**ಅಧ್ಯಾಯಸಾರ**

ಇಂದ್ರನು ವೃತ್ರಾಸುರನ ಸಂಹಾರ ಮಾಡಿದ. ಇಂದ್ರನ ಹೊರತಾಗಿ ಸಮಸ್ತಲೋಕವೂ ವೃತ್ರಾಸುರನ ಸಂಹಾರದಿಂದ ಸಂತುಷ್ಟವಾಯಿತು. ಬಹ್ಮ-ರುದ್ರಾದಿದೇವತೆಗಳು, ಎಲ್ಲ ಋಷಿ-ಮುನಿಗಳು ತಮ್ಮ ತಮ್ಮ ನಿವಾಸಕ್ಕೆ ತೆರಳಿದರು.

ರಾಜ ಕೇಳಿದ. ವೃತ್ರನ ಸಂಹಾರದಿಂದ ಜಗವೆಲ್ಲ ಸಂತೋಷದಿಂದಿರುವಾಗ ಇಂದ್ರನಿಗೆ ಮಾತ್ರ ಯಾಕೆ ಶೋಕ. ಸವಿಸ್ತಾರವಾಗಿ ಈ ವಿಷಯವನ್ನು ತಿಳಿಸಬೇಕು.

ರಾಜನ ಪ್ರಾರ್ಥನೆಯಂತೆ ಶುಕಾಚಾರ್ಯರು ನಡೆದ ವೃತ್ತಾಂತವನ್ನು ಹೇಳಲು ಉಪಕ್ರಮಿಸಿದರು. ವೃತ್ರಾಸುರನ ಪರಾಕ್ರಮದಿಂದ ಭೀತರಾದ ದೇವತೆಗಳು ಇಂದ್ರನ ಮೊರೆ ಹೋದರು. ವೃತ್ರನ ಸಂಹಾರಕ್ಕಾಗಿ ಪ್ರಾರ್ಥಿಸಿದರು. ಆದರೆ ಇಂದ್ರ ಮಾತ್ರ ವೃತ್ರನ ಸಂಹಾರವನ್ನು ಬಯಸಲಿಲ್ಲ. ದೇವತೆಗಳಿಗೆಲ್ಲ ಹೇಳಿದ. ಈಗಾಗಲೇ ವಿಶ್ವರೂಪಾಚಾರ್ಯರನ್ನು ಸಂಹಾರಮಾಡಿದ್ದೇನೆ. ಆ ಪಾಪವನ್ನು ಭೂಮಿಗೆ, ಜಲಕ್ಕೆ, ಸ್ತ್ರೀಯರಿಗೆ, ವೃಕ್ಷಗಳಿಗೆ ಹಂಚಿದ್ದೇನೆ. ಈಗ ಮತ್ತೆ ವೃತ್ರಾಸುರನನ್ನು ಸಂಹಾರ ಮಾಡಿ ಆ ಪಾಪವನ್ನು ನಾನು ಹೇಗೆ ಪರಿಹರಿಸಿಕೊಳ್ಳಲಿ.

ಶಕ್ರನ ಮಾತನ್ನು ಕೇಳಿ ಋಷಿಗಳು ಹೇಳಿದರು. ಹೇ ಇಂದ್ರ ನೀನು ವೃತ್ರಾಸುರನನ್ನು ಸಂಹಾರ ಮಾಡು. ನಿನ್ನಿಂದ ಅಶ್ವಮೇಧ ಯಾಗವನ್ನು ಮಾಡಿಸಿ ಆ ಪಾಪದ ಪರಿಹಾರವಾಗುವಂತೆ ನಾವು ಮಾಡುತ್ತೇವೆ. ಭಕ್ತಿಯಿಂದ ಅಶ್ವಮೇಧವನ್ನು




ಮಾಡಿದರೇ ಚರಾಚರಪ್ರಪಂಚವನ್ನು ಸಂಹಾರಮಾಡಿದ್ದರಿಂದ ಬಂದ ಪಾಪವೂ ತೊಲಗುತ್ತದೆ. ಕಿಂಪುನಃ ಈ ವೃತ್ರಹತ್ಯೆಯ ಪಾಪ? ಇಷ್ಟೇ ಅಲ್ಲದೇ ವೃತ್ರ ಈಗ ದುಷ್ಟತನವನ್ನು ತೋರಿಸಿದ್ದಾನೆ. ಅಂತಹ ಖಲನ ನಿಗ್ರಹದಿಂದ ನಿನಗಾವ ಪಾಪವೂ ಬರಲಾರದು. ಆದ್ದರಿಂದ ನಿಶ್ಚಿಂತವಾಗಿ ವೃತ್ರನನ್ನು ಸಂಹರಿಸು. ವೃತ್ರಹತ್ಯೆಯಿಂದ ಅನೇಕ ಸಜ್ಜನರಿಗೆ ಒಳಿತಾಗುತ್ತದೆ.

ಶುಕಾಚಾರ್ಯರು ಹೇಳಿದರು. ಋಷಿಗಳ ಮಾತನ್ನು ಕೇಳಿದ ಇಂದ್ರ. ವೃತ್ರಾಸುರನನ್ನು ಸಂಹಾರ ಮಾಡಿದ. ಆ ಬ್ರಹ್ಮಹತ್ಯೆಯಿಂದ ಇಂದ್ರ ಪರಿತಪ್ತನಾದ. ಹೀಗಾಗಿ ಯಾವುದೇ ಸುಖ ಇಂದ್ರನಿಗಾಗಲಿಲ್ಲ.

ಯದ್ಯಪಿ ಶತ್ರುವಿನ ಸಂಹಾರದಿಂದ ಸುಖವೇ ಆಗಬೇಕು. ಆದರೆ ಬ್ರಹ್ಮಹತ್ಯೆಯಿಂದ ತಪ್ತನಾದ ಇಂದ್ರನಿಗೆ ಶತ್ರುಸಂಹಾರ ಸುಖಕರವಾಗಲಿಲ್ಲ. ಇಂದ್ರ ವೃತ್ರನನ್ನು ಸಂಹರಿಸಿ ಮಹೇಂದ್ರನಾದ. ಅವನಿಗೆ ಯಾವುದೇ ರೀತಿಯಾದ ಪಾಪದ ಲೇಪವಾಗಲಿಲ್ಲ. ಆದರೂ ಲೋಕದೃಷ್ಟಿಯನ್ನನುಸರಿಸಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲು ಇಂದ್ರ ಸನ್ನದ್ಧನಾದ.

ಬ್ರಹ್ಮಹತ್ಯಾ ಪಾಪವು ರೂಪವನ್ನು ಧರಿಸಿ ಇಂದ್ರನನ್ನು ಬೆನ್ನು ಹತ್ತಿತು. ಅದನ್ನು ಪರಿಹರಿಸಿಕೊಳ್ಳಲು ಇಂದ್ರ ದಶದಿಕ್ಕುಗಳಲ್ಲಿಯೂ ಓಡಾಡಿದ. ಕೊನೆಗೆ ಈಶಾನ್ಯ ದಿಕ್ಕಿಗೆ ಹೋದ. ಅಲ್ಲಿಯ ಮಾನಸಸರೋವರದಲ್ಲಿ ಪ್ರವೇಶ ಮಾಡಿದ. ಸೂಕ್ಷ್ಮವಾದ ರೂಪವನ್ನು ಪರಿಗ್ರಹಿಸಿ ಮಾನಸದಲ್ಲಿಯ ಕಮಲದ ದೇಟಿನಲ್ಲಿ ಅಡಗಿ ಕುಳಿತ. ಬ್ರಹ್ಮಹತ್ಯಾಪಾಪದ ಪ್ರಶಮನಕ್ಕಾಗಿ ಸಾವಿರವರ್ಷಗಳ ತನಕ ತಪಸ್ಸು ಮಾಡಿದ. ಶ್ರೀಹರಿಯ ಧ್ಯಾನದಲ್ಲಿ ಮಗ್ನನಾದ. ಪಾಪದ ಪರಿಹಾರದ ನೆಪದಿಂದ ಶ್ರೀಹರಿಯ ಧ್ಯಾನ ಮಾಡುವ ಸುಯೋಗದಿಂದ ಸಂಪನ್ನನಾದ. ನಹುಷಚಕ್ರವರ್ತಿಯು ಈ ಸಾವಿರ ವರ್ಷಗಳ ವರೆಗೆ ಸ್ವರ್ಗ ಸಾಮ್ರಾಜ್ಯವನ್ನು ಅನುಭವಿಸಿದ. ಆ ನಹುಷ ಐಶ್ವರ್ಯದ ಮದದಿಂದ ಶಚಿಯನ್ನು ಅಪೇಕ್ಷಿಸಿದ. ಋಷಿಗಳ ಶಾಪದಿಂದ ಅಜಗರಸರ್ಪವಾಗಿ ಭೂಮಿಯಲ್ಲಿ ಬಿದ್ದ.

ನಿಷ್ಪಾಪಿಯಾದ ಇಂದ್ರನು ಕೂಡಾ ಅಷ್ಟರವರೆಗೆ ನೃಸಿಂಹನ ಧ್ಯಾನದಿಂದ ಪರಿಶುದ್ಧನಾಗಿದ್ದ. ಬ್ರಹ್ಮದೇವರು ಅಗ್ನಿ ಎಂಬ ದೂತನ ಮೂಲಕ ಇಂದ್ರನನ್ನು ಕರೆಸಿದರು. ಇಂದ್ರನು ಬಂದಮೇಲೆ ಋಷಿಗಳು ತಾವು ಹೇಳಿದಂತೆ ಅಶ್ವಮೇಧ

ಯಾಗವನ್ನು ಮಾಡಿಸಿದರು. ಇಂದ್ರನು ಆ ಅಶ್ವಮೇಧಯಾಗದಿಂದ ಪರಮಾತ್ಮನನ್ನು ಪೂಜಿಸಿದ. ಬ್ರಹ್ಮಹತ್ಯಾಘಾಪದಿಂದ ಮುಕ್ತನಾದ. ಇಂದ್ರವಿಜಯರೂಪವಾದ ಈ ಮಹದಾಖ್ಯಾನವು ಸಮಸ್ತಪಾಪಪರಿಶೋಧಕವಾಗಿದೆ. ಧನ-ಕೀರ್ತಿಪ್ರದವಾಗಿದೆ. ಆಯುಷ್ಯಪ್ರಾಪಕವಾಗಿದೆ. ಜ್ಞಾನಿಗಳಾದವರು ಇದನ್ನು ಪ್ರತಿಪರ್ವದಲ್ಲಿಯೂ ಶ್ರವಣಮಾಡಬೇಕು.

★★★★★

**ಚಿಟ್ಟಿ** - ಇಂದ್ರನು ಮಾಡಿದ ಅಶ್ವಮೇಧದಂತೆ ಶ್ರೀಹರಿಭಕ್ತರು ಮಾಡಿದ ಕ್ರಿಯೆಗಳು ಮಹಾಪಾಪಗಳನ್ನೂ ಕಳೆಯುವವು ಎಂದು ಈ ಅಧ್ಯಾಯದಲ್ಲಿ ತಿಳಿಸುವರು-

ಸತ್ಯಧರ್ಮರು- ಸತ್ಕರ್ಮವೇ ಅಸತ್ಕರ್ಮಗಳೆಂಬ ಕವಚಭೇದಕವೆಂದು ಈ ಅಧ್ಯಾಯದಲ್ಲಿ ಹೇಳುವರು. ಈ ವಿಷಯವನ್ನು ತಿಳಿಯಲೇಬೇಕೆಂಬ ಅತಿಶಯವಾದ ಅಪೇಕ್ಷೆಯು ರಾಜನಿಗೆ ಬರಬೇಕೆಂದು ಮೊದಲಿಗೆ ಸ್ವಲ್ಪ ಸಂಶಯಕಾರಣವನ್ನು ಅಂಕುರಿಸುವರು-

**ವಿಜಯಧ್ವಜರು**- ಅಶ್ವಮೇಧಾದಿ ಕರ್ಮಗಳು, ಜ್ಞಾನಪ್ರತಿಬಂಧಕವಾದ ದುಷ್ಕರ್ಮವನ್ನು ನಾಶ ಮಾಡುವವೆಂದು ಈ ಅಧ್ಯಾಯದಲ್ಲಿ ಹೇಳುವರು-

**ಶ್ರೀಶುಕ ಉವಾಚ -**

**ವೃತ್ರೇ ಹತೇ ತ್ರಯೋ ಲೋಕಾ ವಿನಾ ಶಕ್ರೇಣ ಭೂರಿದ ।**
**ಸಪಾಲಾ ಹ್ಯಭವನ್ ಸದ್ಯೋ ವಿಜ್ವರಾ ನಿರ್ವೃತೇಂದ್ರಿಯಾಃ ॥೧॥**

**ಹೇ ಭೂರಿದ** ಯಾಚಕರಿಗೆ ಬಹಳವಾಗಿ ಕೊಡುವವನೇ ಅಥವಾ ಬಂಗಾರ ಕೊಡುವವನೇ 'ಭೂರಿ ಸ್ವರ್ಣಂ ಹಿರಣ್ಯಂ ಚ ಪುರಟಂ ನಿಷ್ಕಹೇಮನಿ' ಎಂದು ಅಭಿಧಾನವಿದೆ. **ವೃತ್ರೇ ಹತೇ** ವೃತ್ರಾಸುರನು ಸಾಯುತ್ತಿರಲು **ಶಕ್ರೇಣ ವಿನಾ** ಇಂದ್ರನನ್ನು ಬಿಟ್ಟು **ಸಪಾಲಾಃ** ಪಾಲಕರಿಂದ ಕೂಡಿದ **ತ್ರಯೋ ಲೋಕಾಃ** ಮೂರು ಲೋಕನಿವಾಸಿಗಳು **ಸದ್ಯಃ** ಕೂಡಲೇ **ವಿಜರಾಃ** ಭಯರಹಿತರಾಗಿ **ನಿರ್ವೃತೇಂದ್ರಿಯಾಃ** ಸ್ವಸ್ಥಮನಸ್ಕಾರಾದರು **ಹಿ** ಪ್ರಸಿದ್ಧ. ॥೧॥

**ದೇವರ್ಷಿಪಿತೃಭೂತಾನಿ ದೈತ್ಯಾ ದೇವಾನುಗಾಶ್ಚ ಯೇ ।**
**ಪ್ರತಿಜಗ್ಮುಃ ಸ್ವಧಿಷ್ಣ್ಯಾನಿ ಬ್ರಹ್ಮೇಶೇಂದ್ರಾದಯಸ್ತತಃ ॥೨॥**

ದೇವತೆಗಳು, ಋಷಿಗಳು, ಪಿತೃಗಳು, ಭೂತಗಳು ದೈತ್ಯರು, ದೇವಾನುಚರರು, ಬ್ರಹ್ಮದೇವರು, ರುದ್ರದೇವರು, ಇಂದ್ರದೇವರು, ಮೊದಲಾದವರು, **ತತಃ** ಸಮುದ್ರತೀರದಿಂದ **ಸ್ವಧಿಷ್ಣ್ಯಾನಿ** ತಮ್ಮ ತಮ್ಮ ಸ್ಥಾನಗಳಿಗೆ **ಪ್ರತಿಜಗ್ಮುಃ** ಹಿಂತಿರುಗಿ ಹೋದರು. ಬ್ರಹ್ಮೇಶ ಎಂದು ಅನುವಾದ ಮಾಡಿದ್ದರಿಂದ ಅವರೂ ಯುದ್ಧವನ್ನು ನೋಡಲು ಬಂದಿದ್ದರೆಂದು ತಿಳಿಯುವದು. ।।೨।।

**ರಾಜೋವಾಚ -**

**ಇಂದ್ರಸ್ಯಾನಿರ್ವೃತೇರ್ಹೇತುಂ ಶ್ರೋತುಮಿಚ್ಛಾಮಿ ಭೋ ಮುನೇ ।**
**ಯೇನಾಸನ್ ಸುಖಿನೋ ದೇವಾ ಹರೇರ್ದುಃಖಂ ಕುತೋಽಭವತ್ ।।೩।।**

**ಭೋ ಮುನೇ** ಹೇ ಋಷಿಗಳೇ **ಇಂದ್ರಸ್ಯ** ಇಂದ್ರದೇವರಿಗೆ **ಅನಿರ್ವೃತೇಃ** ಸುಖವಾಗದಿರುವದಕ್ಕೆ **ಹೇತುಂ** ಕಾರಣವನ್ನು **ಶ್ರೋತುಂ ಇಚ್ಛಾಮಿ** ಕೇಳಲಿಚ್ಛಿಸುವೆನು. **ದೇವಾಃ** ದೇವತೆಗಳು, **ಯೇನ** ಯಾವ ಇಂದ್ರದೇವರಿಂದ, ಅಥವಾ ಯಾವ ವೃತ್ರವಧದಿಂದ **ಸುಖಿನಃ** ಸುಖವಂತರು **ಆಸನ್** ಆದರೋ **ತಸ್ಯ ಹರೇಃ** ಆ ಇಂದ್ರದೇವರಿಗೆ **ದುಃಖಂ** ದುಃಖವು **ಕುತಃ ಅಭವತ್** ಯಾವ ಕಾರಣದಿಂದ ಆಯಿತು? ।।೩।।

**ಇಂದ್ರಸ್ಯ ನಿರ್ವೃತೇಃ ಹೇತುಂ** ಎಂಬುದರಿಂದಲೇ ಶಂಕೆ ಪೂರ್ಣವಾದರೂ ಮತ್ತೆ **ಹರೇಃ ದುಃಖಂ ಕುತೋಽಭವತ್** ಎಂದು ಹೇಳಿದ್ದು ಆಶ್ಚರ್ಯ ಪರವಶತೆಯಿಂದ ಸ್ಮರಣವಿಲ್ಲದೆ ಎಂದು ತಿಳಿಯಬೇಕು. ಅಥವಾ ಇಂದ್ರಸ್ಯ ದುಃಖಂ ಕುತೋ ಅಭವತ್ ಇತಿ ಶ್ರೋತುಮಿಚ್ಛಾಮಿ ಎಂದು ಅನ್ವಯ. **ಹರೇಃ** ಎಂದರೆ ಸುಖವಾಗದಿರಲು ಈ ಶಂಕೆಗೆ ಕಾರಣವಾದ, ಮನಸ್ಸಿನ ಕಾತರತೆಗೆ ಕಾರಣವಾದ ಬುದ್ಧಿಮಾಂದ್ಯವವನ್ನು **ಅಪಹರೇಃ** ಪರಹರಿಸಿಯೇ ತೀರುವೆನು ಎಂದರ್ಥ.

ದುಃಖಕ್ಕೆ ಕಾರಣವನ್ನು ಹೇಳಲು ಪ್ರಾಸ್ತಾವಿಕ ಹೇಳುವರು-

**ಶ್ರೀಶುಕ ಉವಾಚ -**

**ವೃತ್ರವಿಕ್ರಮಸಂವಿಗ್ನಾಃ ಸರ್ವೇ ದೇವಾಃ ಸಹರ್ಷಿಭಿಃ ।**
**ತದ್ವಧಾಯಾರ್ಥಯನ್ನಿಂದ್ರಂ ನೈಚ್ಛದ್ಭೀತೋ ಬೃಹದ್ವಧಾತ್ ।।೪।।**

**ವೃತ್ರವಿಕ್ರಮಸಂವಿಗ್ನಾಃ** ವೃತ್ರನ ಪರಾಕ್ರಮದಿಂದ ಗಾಬರಿಯಾದ **ಸರ್ವೇ ದೇವಾಃ** ಎಲ್ಲ ದೇವತೆಗಳು **ಋಷಿಭಿಃ ಸಹ** ಋಷಿಗಳೊಂದಿಗೆ **ತದ್ವಧಾಯ** ವೃತ್ರನನ್ನು ಕೊಲ್ಲಲು

**ಇಂದ್ರಂ** ಇಂದ್ರದೇವರನ್ನು **ಅರ್ಥಯನ್** ಪ್ರಾರ್ಥಿಸಿದರು **ಬೃಹದ್ವಧಾತ್** ಬ್ರಾಹ್ಮಣವಧೆಯಿಂದ, **ಭೀತಃ** ಹೆದರಿದವನಾಗಿ, ಅಥವಾ ಇವರ ತಂದೆ ವಿಶ್ವರೂಪಾಚಾರ್ಯರ ವಧದಿಂದ ಭೀತನಾಗಿ, (ಆ ಬ್ರಹ್ಮಹತ್ಯೆಯೇ ಸಾಕು ಮತ್ತೊಂದು ಬ್ರಹ್ಮಹತ್ಯೆಯನ್ನು ಹೇಗೆ ಮಾಡಲಿ ಎಂದು ವಿಚಾರಿಸಿ) **ನ ಐಚ್ಛತ್** ವೃತ್ರನನ್ನು ಸಂಹರಿಸಲು ಇಚ್ಛಿಸಲಿಲ್ಲ. ।।೪।।

ವಿಶ್ವರೂಪನನ್ನು ಕೊಂದ ನಿನಗೆ ವೃತ್ರನನ್ನು ಕೊಲ್ಲಲು ಭಯ ಯಾಕೆ ಎಂದರೇ ಹೇಳುವರು-

**ಇಂದ್ರ ಉವಾಚ -**

**ಭೂಸ್ತ್ರೀಜಲದ್ರುಮ್ಮೈರೇನೋ ವಿಶ್ವರೂಪವಧೋದ್ಭವಮ್ ।**
**ವಿಭಕ್ತಮನುಗೃಹ್ಣದ್ಭಿರ್ವೃತ್ರಹತ್ಯಾಂ ಕ್ವ ಮಾರ್ಜ್ಮ್ಯಹಮ್ ।।೫।।**

**ಅನುಗೃಹ್ಣದ್ಭಿಃ** ಪಾಪವನ್ನು ಸ್ವೀಕರಿಸಿ ನನ್ನಲ್ಲಿ ಅನುಗ್ರಹ ಮಾಡಿದ **ಭೂಸ್ತ್ರೀಜಲದ್ರುಮ್ಮೈಃ** ಭೂಮಿ, ಸ್ತ್ರೀಯರು ನೀರು ಮತ್ತು ಗಿಡಗಳಿಂದ, **ವಿಶ್ವರೂಪವಧೋದ್ಭವಂ ಏನಃ** ವಿಶ್ವರೂಪಾಚಾರ್ಯರ ಹತ್ಯೆಯಿಂದ ಬಂದ ಬ್ರಹ್ಮಹತ್ಯಾ ಪಾಪವು **ವಿಭಕ್ತಂ** ವಿಭಾಗ ಮಾಡಲ್ಪಟ್ಟಿತು. (ಇವರು ಬ್ರಹ್ಮಹತ್ಯಾಪಾಪವನ್ನು ಸ್ವೀಕರಿಸಿದರು ಎಂದು ಅರ್ಥ.) **ಅಹಂ** ನಾನು **ವೃತ್ರಹತ್ಯಾಂ** ವೃತ್ರನನ್ನು ಕೊಲ್ಲುವದರಿಂದ ಬರುವ ಬ್ರಹ್ಮಹತ್ಯಾ ಪಾಪವನ್ನು **ಕ್ವ** ಮತ್ತೆಲ್ಲಿ **ಮಾರ್ಜ್ಮಿ** ಶೋಧಿಸಿ ಕಳೆದುಕೊಳ್ಳಲಿ. ।।೫।।

**ಶ್ರೀಶುಕ ಉವಾಚ -**

**ಋಷಯಸ್ತದುಪಾಕರ್ಣ್ಯ ಮಹೇಂದ್ರಮಿದಮಬ್ರುವನ್ ।**
**ಮಾರ್ಜಯಿಷ್ಯಾಮ ಭದ್ರಂ ತೇ ಹಯಮೇಧೇನ ಮಾ ಸ್ಮ ಭೈಃ ।।೬।।**

**ಋಷಯಃ** ಋಷಿಗಳು **ತತ್** ಇಂದ್ರದೇವರ ಮಾತನ್ನು **ಉಪಾಕರ್ಣ್ಯ** ಕೇಳಿ **ಮಹೇಂದ್ರಂ** ಇಂದ್ರದೇವರನ್ನು ಕುರಿತು **ಇದಂ** ಮುಂದೆ ಹೇಳುವ ಮಾತನ್ನು **ಅಬ್ರುವನ್** ಹೇಳಿದರು. **ತೇ** ನಿನಗೆ **ಭದ್ರಂ ಅಸ್ತು** ಕಲ್ಯಾಣವಾಗಲಿ **ಹಯಮೇಧೇನ** ಅಶ್ವಮೇಧ ಯಾಗದಿಂದ **ಮಾರ್ಜಯಿಷ್ಯಾಮ** ಪಾಪ ಪರಿಹಾರ ಮಾಡುವೆವು **ಮಾ ಸ್ಮ ಭೈಃ** ಹೆದರಬೇಡ. **ಯಾಜಯಿಷ್ಯಾಮ** ಎಂಬ ಪಾಠದಲ್ಲಿ ಯಾಗ ಮಾಡಿಸುವೆವು ಎಂದರ್ಥ. ।।೬।।

**ಹಯಮೇಧೇನ ಪುರುಷಂ ಪರಮಾತ್ಮಾನಮೀಶ್ವರಮ್ ।**
**ಇಷ್ಟ್ವಾ ನಾರಾಯಣಂ ದೇವಂ ಮೋಕ್ಷ್ಯಸೇऽಪಿ ಜಗದ್ವಧಾತ್ ॥೭॥**

**ಪುರುಷಂ** ಬಹುಫಲಪ್ರದನಾದ **ಪರಮಾತ್ಮಾನಂ** ಸರ್ವೋತ್ತಮಸ್ವಾಮಿಯಾದ **ಈಶ್ವರಂ** ಸರ್ವನಿಯಾಮಕನಾದ **ದೇವಂ** ಕ್ರೀಡಾದಿಗುಣವಿಶಿಷ್ಟನಾದ **ನಾರಾಯಣಂ** ಶ್ರೀಹರಿಯನ್ನು **ಅಶ್ವಮೇಧೇನ ಇಷ್ಟ್ವಾ** ಅಶ್ವಮೇಧಯಾಗದಿಂದ ಪೂಜಿಸಿ **ಜಗದ್ವಧಾದಪಿ** ಪ್ರಪಂಚವನ್ನು ಸಂಹರಿಸುವುದರಿಂದಲೂ **ಮೋಕ್ಷ್ಯಸೇ** ಬಂದ ಪಾಪದಿಂದ ಮುಕ್ತನಾಗುವಿ. ॥೭॥

**ಬ್ರಹ್ಮಹಾ ಪಿತೃಹಾ ಗೋಘ್ನೋ ಮಾತೃಹಾಚಾರ್ಯಹಾऽಘವಾನ್ ।**
**ಶ್ವಾದಃ ಪುಲ್ಕಸಕೋ ವಾऽಪಿ ಶುದ್ಧ್ಯೇರನ್ ಯಸ್ಯ ಕೀರ್ತನಾತ್ ॥೮॥**

**ತಮಶ್ವಮೇಧೇನ ಮಹಾಮಖೇನ ಶ್ರದ್ಧಾನ್ವಿತೋऽಸ್ಮಾಭಿರನುಷ್ಠಿತೇನ ।**
**ಹತ್ವಾऽಪಿ ಸ ಬ್ರಹ್ಮ ಚರಾಚರಂ ತ್ವಂ ನ ಲಿಪ್ಯಸೇ ಕಿಂ ಖಲನಿಗ್ರಹೇಣ ॥**

**ಯಸ್ಯ ಕೀರ್ತನಾತ್** ಯಾವನ ನಾಮ ಸಂಕೀರ್ತನದಿಂದಲೇ **ಬ್ರಹ್ಮಹಾ** ಬ್ರಾಹ್ಮಣನನ್ನು ಕೊಂದವನು **ಪಿತೃಹಾ** ತಂದೆಯನ್ನು ಕೊಂದವನು **ಗೋಘ್ನಃ** ಆಕಳನ್ನು ಕೊಂದವನು **ಮಾತೃಹಾ** ತಾಯಿಯನ್ನು ಕೊಂದವನು **ಆಚಾರ್ಯಹಾ** ಗುರುವನ್ನು ಕೊಂದವನು **ಅಘವಾನ್** ಬೇರೆ ಯಾವುದೇ ಪಾಪ ಮಾಡಿದವನು **ಶ್ವಾದಃ** ನಾಯಿಯನ್ನು ತಿನ್ನುವ ಚಂಡಾಲನು **ಪುಲ್ಕಸಃ ವಾऽಪಿ** ಕಿರಾತನು ಕೂಡಾ **ಶುದ್ಧ್ಯೇರನ್** ಶುದ್ಧರಾಗುವರೋ, ॥೮॥

**ಅಸ್ಮಾಭಿಃ** ನಮ್ಮಿಂದ **ಅನುಷ್ಠಿತೇನ** ಅನುಷ್ಠಿತವಾದ **ಅಶ್ವಮೇಧೇನ ಮಹಾಮಖೇನ** ಅಶ್ವಮೇಧ ಎಂಬ ದೊಡ್ಡ ಯಾಗದಿಂದ **ತಂ** ಅಂತಹ ನಾರಾಯಣನನ್ನು **ಇಷ್ಟ್ವಾ** ಪೂಜಿಸಿ **ಸಬ್ರಹ್ಮ** ಬ್ರಾಹ್ಮಣರಿಂದ ಸಹಿತವಾದ **ಚರಾಚರಂ** ಜಂಗಮಾಜಂಗಮ ಪ್ರಪಂಚವನ್ನು **ಹತ್ವಾऽಪಿ** ಸಂಹರಿಸಿದರೂ **ನ ಲಿಪ್ಯಸೇ** ಪಾಪದಿಂದ ಲಿಪ್ತನಾಗುವದಿಲ್ಲ. ಅಂದ ಮೇಲೆ **ಶ್ರದ್ಧಾನ್ವಿತಃ** ಶ್ರದ್ಧೆಯಿಂದ ಯುಕ್ತನಾದ **ತ್ವಂ** ನೀನು **ಖಲನಿಗ್ರಹೇಣ ಲಿಪ್ಯಸೇ ಕಿಂ?** ದುಷ್ಟನಾದ ವೃತ್ರನನ್ನು ಕೊಂದ ಪಾಪದಿಂದ ಲಿಪ್ತನಾಗುವಿ ಏನು? ಸರ್ವಥಾ ಲೇಪವಿಲ್ಲ ಎಂದು ತಾತ್ಪರ್ಯ. ಬ್ರಹ್ಮಹತ್ಯೆಯು ಅಧಿಕ ದೋಷವೆಂದು ಸೂಚಿಸಲು ಸಬ್ರಹ್ಮ ಎಂದು ಚರಾಚರಕ್ಕಿಂತ ಬೇರೆಯಾಗಿ ಹೇಳಿದ್ದಾರೆ. ॥೯॥

ಅಶ್ವಮೇಧಾದಿಗಳಿಂದ ಬ್ರಹ್ಮಹತ್ಯೆ ಹೋಗುವದಾದರೆ ನಾನೇನು ನಿರಾಕರಿಸುವುದಿಲ್ಲ. ನಿಮ್ಮ ಆಜ್ಞೆಯಂತೆ ನಡೆಯುವೆನು ಎಂದು ಇಂದ್ರನು ಹೀಗೆ ಮಾಡಿದನೆಂದು ಹೇಳುವರು-

**ಶ್ರೀಶುಕ ಉವಾಚ –**

**ಏವಂ ಸಂಚೋದಿತೋ ವಿಪ್ರೈರ್ಮರುತ್ವಾನಹನದ್ರಿಪುಮ್ ।**
**ಬ್ರಹ್ಮಹತ್ಯಾ ಹತೇ ತಸ್ಮಿನ್ನಾಸಸಾದ ವೃಷಾಕಪಿಮ್ ॥೧೦॥**

**ಏವಂ** ಈ ರೀತಿಯಾಗಿ **ವಿಪ್ರೈಃ** ಋಷಿಗಳಿಂದ **ಸಂಚೋದಿತಃ** ಪ್ರೇರಿತರಾದ **ಮರುತ್ವಾನ್** ಇಂದ್ರದೇವರು **ರಿಪುಂ** ಶತ್ರುವನ್ನು **ಅಹನತ್** ಕೊಂದರು. **ತಸ್ಮಿನ್** ಆ ವೃತ್ರನು **ಹತೇ** ಸಂಹೃತನಾಗುತ್ತಿರಲು **ಬ್ರಹ್ಮಹತ್ಯಾ** ಬ್ರಹ್ಮಹತ್ಯಾಪಾಪವು **ವೃಷಾಕಪಿಂ** ಇಂದ್ರದೇವರನ್ನು **ಆಸಸಾದ** ಬಂದು ಸೇರಿತು.

ಮರುತಃ ಅಸ್ಯ ಸಂತೀತಿ ಮರುತ್ವಾನ್ । 'ತಸೌ ಮತ್ವರ್ಥೇ' (ಸಿ.ಕೌ.೧೪೯೬) ಇತಿ ಭತ್ವಾತ್ ಜಸ್ತ್ವಾಭಾವಃ । ತಾಂತಸಾಂತೌ ಭಸಂಜ್ಞೌ ಸ್ತಃ ಮತ್ವರ್ಥೇ ಪ್ರತ್ಯಯೇ ಪರೇ 'ತದಸ್ಯಾಸ್ತೀತ್ಯರ್ಥೇ ಮತುಪ್' ಮತ್ವರ್ಥದಲ್ಲಿ ಪ್ರತ್ಯಯ ಬಂದಿರುವಾಗ ತಕಾರಾಂತ-ಸಕಾರಾಂತಗಳಿಗೆ ಭಸಂಜ್ಞೆ ಬರುವದು. ಜ್ಞ ಇತಿ ಮತುಪೊ ವತ್ವಮ್ 'ವೃಷಾಕಪಿಃ ಹರೇ ಶಕ್ರೇ ಹರೀತಕ್ಯಾಂ ಜನಾರ್ದನೇ' ಎಂದು ಅಭಿಧಾನವಿದೆ. ಆದ್ದರಿಂದ, **ವೃಷಾಕಪಿಂ** ರುದ್ರನನ್ನು, **ಯಥಾ** ಹೇಗೆ, **ಬ್ರಹ್ಮಹತ್ಯಾ ಆಸಸಾದ** ಬ್ರಹ್ಮಹತ್ಯೆಯು ಸಮೀಪಿಸಿತೋ ಹಾಗೆ ಎಂದೂ ಅರ್ಥ. 'ಹರ ವಿಷ್ಣೂ ವೃಷಾಕಪೀ' ಎಂದು ಅಮರವಿದೆ. 'ವೃಷಾಕಪಿಃ ಶಿವೇ ಕೃಷ್ಣೇ' ಎಂದು ವಿಶ್ವವಿದೆ. 'ಬ್ರಹ್ಮಹತ್ಯಾನಿಮಿತ್ತೇನ ಕಪಾಲ್ಯಾಸ್ತೇಽಧುನಾ ಹರಃ' ಎಂದಿದೆ. ॥೧೦॥

ಈ ಶ್ಲೋಕದಲ್ಲಿ ಅಪರೋಕ್ಷಜ್ಞಾನಿಯಾದ ಇಂದ್ರನಿಗೆ ಬ್ರಹ್ಮಹತ್ಯೆ ಪ್ರಾಪ್ತವಾಯಿತು ಎಂದು ಹೇಳಿದ್ದಾರೆ. ಇದು ಹೇಗೆ ಯುಕ್ತ? 'ತದಧಿಗಮ ಉತ್ತರ ಪೂರ್ವಾಘಯೋರಶ್ಲೇಷವಿನಾಶೌ ತದ್ವ್ಯಪದೇಶಾತ್' ಎಂದು ಅಪರೋಕ್ಷಜ್ಞಾನಿಗಳಿಗೆ ದೋಷಲೇಪವಿಲ್ಲವೆಂದು ಹೇಳಿದೆಯಲ್ಲ? ಎಂದರೆ ಪ್ರಮಾಣದಿಂದಲೇ ಉಪಪತ್ತಿಯನ್ನು ಹೇಳುವರು-




ತಾತ್ಪರ್ಯ

**ಪ್ರಾರಬ್ಧಕರ್ಮಣೈವೈಷಾಂ ಕ್ಲೃಪ್ತದುಃಖಸ್ಯ ಸೂಚಕಮ್ ।**
**ಇದಾನೀಂತನಕರ್ಮ ಸ್ಯಾತ್ ವ್ರಣಹೇತುರ್ಯಥಾ ರಣಃ ॥**

**ದೇವಾದೀನಾಂ ಸ್ಥಿತಪ್ರಜ್ಞಭಾವಾನ್ನೈವಾನ್ಯಥಾ ಭವೇತ್ ।**
**ಪ್ರಾರಬ್ಧಮಪಿ ತು ಕ್ವಾಪಿ ಕಿಂಚಿದ್ವಿಘಟಿತಂ ಭವೇತ್ ॥ ಇತಿ ಚ**

ಈ ದೇವತೆಗಳಿಗೆ ಪ್ರಾರಬ್ಧಕರ್ಮಗಳೇ ದುಃಖಸೂಚಕವಾಗುವವು. ಗಾಯಗೊಳ್ಳುವ ಪ್ರಾರಬ್ಧ ಇದ್ದವರಿಗೆ ಮಾತ್ರ ಯುದ್ಧವು ಗಾಯಕ್ಕೆ ಕಾರಣವಾಗುವದು. ಪ್ರಾರಬ್ಧ ಇಲ್ಲದವರಿಗೆ ಇಲ್ಲ. ಹಾಗೆಯೇ ಅಪರೋಕ್ಷಜ್ಞಾನಾನಂತರ ಮಾಡಿದ ಕರ್ಮಗಳು ಪ್ರಾರಬ್ಧಕ್ಕೆ ಸೂಚಕವಾಗುತ್ತವೆಯೇ ಹೊರತು ಹೊಸದುಃಖಕ್ಕೆ ಕಾರಣವಾಗಲಾರವು. ಏಕೆಂದರೆ ದೇವತೆಗಳು ಅಪರೋಕ್ಷ ಜ್ಞಾನಿಗಳಾಗಿರುವುದರಿಂದ ಅವರಿಗೆ ಅನಂತರ ಮಾಡಿದ ಕರ್ಮಗಳ ಲೇಪವಿಲ್ಲ. ಹಾಗಾದರೆ ಪೂಜ್ಯರು ಹೇಳುವ ಪ್ರಾಯಶ್ಚಿತ್ತಗಳು ವ್ಯರ್ಥವೇ ಎಂದರೆ ಅಲ್ಲ. ಪ್ರಾಯಶ್ಚಿತ್ತದಿಂದ ಕೆಲವು ಸಲ ಪ್ರಾರಬ್ಧಕರ್ಮವು ವಿಘಟಿತವಾಗುತ್ತದೆ. ಅಂದರೆ ಪ್ರಾರಬ್ಧಕರ್ಮದಿಂದ ಲಭ್ಯವಾಗುವ ಫಲವು ಕಡಿಮೆಯಾಗುವದು. ಆದ್ದರಿಂದ ಪ್ರಾಯಶ್ಚಿತ್ತಗಳು ವ್ಯರ್ಥವಲ್ಲ.

'ಉಪಮರ್ದಂ ಚ' ಎಂಬ ಸೂತ್ರ ವ್ಯಾಖ್ಯಾನವಾದ ಅನುವ್ಯಾಖ್ಯಾನದಲ್ಲಿ (೩-೪-೧೬) ಪ್ರಾಪ್ತಸ್ಯಾಪ್ಯನಿವೃತ್ತಸ್ಯ ಕಿಂಚಿದುತ್ಕರ್ಷಸ್ಯ ಸಂವಿದಾ । ಉಪಮರ್ದ ಇಹ ಪ್ರೋಕ್ತಃ ಚತುರ್ಥೇಽಲೇಪ ಇಷ್ಯತೇ', ಇದರ ಸುಧೆಯಲ್ಲಿ, 'ಕ್ಲೃಪ್ತಸ್ಯ ಹಾನಿಃ ನ ಇತ್ಯನುವರ್ತತೇ' ಎಂದಾರಂಭಿಸಿ, 'ತಥಾ ಚ ಜ್ಞಾನಾಗ್ನಿಃ ಸರ್ವಕರ್ಮಾಣೀತಿ ಸರ್ವಶಬ್ದೋಽಪ್ಯಪೀಡಿತಃ ಸ್ಯಾತ್' ಎಂಬಲ್ಲಿ ವರೆಗೆ ಅತ್ಯಂತ ವಿಸ್ತಾರವಾಗಿ ಈ ವಿಷಯವನ್ನು ಹೇಳಿರುವರು. ಅಲ್ಲಿಯೇ ಅದನ್ನು ತಿಳಿಯಬೇಕು.

**ತಯೇಂದ್ರಂ ಸ್ಮ ಹ ಸಂತಪ್ತಂ ನಿರ್ವೃತಿರ್ನಾಮುಮಾವಿಶತ್ ।**
**ಹ್ರೀಮಂತಂ ಹತ್ಯಯಾ ತಪ್ತಂ ಸುಖಯಂತ್ಯಪಿ ನೋ ಗುಣಾಃ ॥೧೧॥**

**ತಯಾ** ಆ ಬ್ರಹ್ಮಹತ್ಯೆಯಿಂದ **ಸಂತಪ್ತಂ** ಬಹುತಾಪಗೊಂಡ **ಅಮುಂ ಇಂದ್ರಂ** ಈ ಇಂದ್ರದೇವರನ್ನು **ನಿರ್ವೃತಿಃ** ಮನಶ್ಶಾಂತಿಯು **ನ ಆವಿಶತ್** ಪ್ರವೇಶಿಸಲಿಲ್ಲ. ಅವರಿಗೆ ಮನಃಶಾಂತಿಯಾಗಲಿಲ್ಲವೆಂದರ್ಥ. **ಸ್ಮ ಹ** ಎಂಬ ಅವ್ಯಯಗಳಿಂದ ರಾತ್ರಿ ಕಂಡ ಬಾವಿಯಲ್ಲಿ ಹಗಲು ಬಿದ್ದಂತೆ ಒಂದು ಸಲ ಅನುಭವಿಸಿದ್ದರೂ ಮತ್ತೆ ಈ ನನ್ನ ಪ್ರವೃತ್ತಿ

ಏನು ಭಗವನ್ಮಹಿಮಾ ಎಂಬ ಆಶ್ಚರ್ಯವನ್ನು ಸೂಚಿಸುವವು. ಎಲ್ಲರಿಗೂ ಅಪಕಾರಿಯಾದವನನ್ನು ಕೊಂದರೆ ಎಲ್ಲರಿಗೂ ಉಪಕಾರ ಮಾಡಿದ ಪುಣ್ಯ, ಶೂರತೆ, ಕೀರ್ತಿ ಮುಂತಾದ ಅನೇಕ ಗುಣಗಳು ಬರುವದರಿಂದ ಸುಮನೋನಾಯಕನಿಗೆ (ಇಂದ್ರನಿಗೆ) ದೌರ್ಮನಸ್ಯವೇಕೆ ಎಂದರೆ, ಯಾವನಿಗೇ ಆಗಲಿ ಇಂಥ ಕೆಲಸಮಾಡಿದವನಿಗೆ ಸುಖವಿಲ್ಲವೆಂದು ಸಾಮಾನ್ಯವಾಗಿ ಹೇಳುವರು. **ಅಪಿ** ಶತ್ರುವಧೆಯಿಂದ ಸೂಚಿತಗಳಾದ ಶೌರ್ಯವೇ ಮೊದಲಾದ ಗುಣಗಳು ಸುಖ ಕಾರಣಗಳಾಗಿದ್ದರೂ **ಗುಣಾಃ** ಶೌರ್ಯ ಮುಂತಾದ ಗುಣಗಳು **ಹ್ರೀಮತಾಂ** ಲಜ್ಜೆ ಉಳ್ಳವರಿಗೆ **ವಾಚ್ಯತಾಂ ಪ್ರಾಪ್ತಂ** ನಿಂದೆಯನ್ನು ಹೊಂದಿದವನನ್ನು **ನೋ ಸುಖಯಂತಿ** ಸಂತೋಷಪಡಿಸುವದಿಲ್ಲ. 'ಬ್ರಹ್ಮಹತ್ಯೆ ಮಾಡಿದವನೆಂದು ಅನ್ನಿಸಿ ಕೊಂಡವನಿಗೆ ಎಂದರ್ಥ. ।।೧೧।।

**ತಾಂ ದದರ್ಶಾನುಧಾವಂತೀಂ ಚಂಡಾಲೀಮಿವ ರೂಪಿಣೀಮ್ ।**
**ಜರಯಾ ವೇಪಮಾನಾಂಗೀಂ ಯಕ್ಷ್ಮಗ್ರಸ್ತಾಮಸೃಕ್‍ಪಟಾಮ್ ।।೧೨।।**

**ವಿಕೀರ್ಯ ಪಲಿತಾನ್ ಕೇಶಾಂಸ್ತಿಷ್ಠ ತಿಷ್ಠೇತಿ ಭಾಷಿಣೀಮ್ ।**
**ಮೀನಗಂಧ್ಯಸುಗಂಧೇನ ಕುರ್ವಂತೀಂ ಮಾರ್ಗದೂಷಣಮ್ ।।೧೩।।**

**ಜರಯಾ** ಮುದಿತನದಿಂದ **ವೇಪಮಾನಾಂಗೀಂ** ನಡುಗುತ್ತಿರುವ ಅಂಗಗಳುಳ್ಳ **ಯಕ್ಷ್ಮಗ್ರಸ್ತಾಂ** ಕ್ಷಯರೋಗ ಪೀಡಿತಳಾದ, ಈ ವಿಶೇಷಣದಿಂದ ಅವನಿಗೆ ಈ ರೋಗ ಬರುವಂತೆ ಮಾಡಲೆಂದು ಸೂಚಿತವಾಗುವದು. **ಅಸೃಕ್ ಪಟಾಂ** ರಜಸ್ವಲೆಯಂತೆ ರಕ್ತದಿಂದ ಕೆಂಪಾದ ಬಟ್ಟೆಯುಳ್ಳ, 'ಮನಃ ಶಿಲಾದಿರಕ್ತಿಮವಸ್ತ್ರಾಂ' ಎಂದು ಸತ್ಯಧರ್ಮರು ವ್ಯಾಖ್ಯಾನಿಸಿದ್ದಾರೆ. ಆಗ ಮನಃಶಿಲೆ ಎಂದರೆ ಗೈರಿಕ ಧಾತು. ಆದರಂತೆ ಕೆಂಪಾದ ಎಂದರ್ಥ. **ಪಲಿತಾನ್** ನೆರೆತಿರುವ (ಬಿಳಿಯಾದ) **ಕೇಶಾನ್** ಕೂದಲುಗಳನ್ನು **ವಿಕೀರ್ಯ** ಹರಡಿಕೊಂಡು **ತಿಷ್ಠ ತಿಷ್ಠ** ನಿಲ್ಲು ನಿಲ್ಲು **ಇತಿ** ಎಂದು **ಭಾಷಿಣೀಂ** ಮಾತನಾಡುವ **ಮೀನಗಂಧ್ಯಸುಗಂಧೇನ** ಸತ್ತ ಮೀನುಗಳನ್ನು ಧರಿಸುವ ಬೆಸ್ತರುಗಳಂತೆ ಕೆಟ್ಟವಾಸನೆಯಿಂದ, ಮೀನಿನಂತೆ ದುರ್ಗಂಧ ಉಳ್ಳ ಶ್ವಾಸ ಗಾಳಿಯ ವಾಸನೆಯಿಂದ **ಮಾರ್ಗದೂಷಣಂ ಕುರ್ವಂತೀಂ** ದಾರಿಯನ್ನೇ ದೂಷಿತವಾಗಿ ಮಾಡುವ **ರೂಪಿಣೀಂ** ಶರೀರವನ್ನು ಧರಿಸಿದ **ಚಂಡಾಲೀಂ ಇವ** ಹೊಲಸಿಯಂತೆ **ಅನುಧಾವತೀಂ** ಬೆನ್ನು ಹತ್ತಿ ಬರುತ್ತಿರುವ **ತಾಂ** ಆ ಬ್ರಹ್ಮಹತ್ಯಾ ಪಾಪವನ್ನು **ದದರ್ಶ** ಇಂದ್ರದೇವರು ನೋಡಿದರು. ।।೧೨-೧೩।।

**ನಭೋಗತೋ ದಿಶಃ ಸರ್ವಾಃ ಸಹಸ್ರಾಕ್ಷೋ ವಿಶಾಂಪತೇ ।**
**ಪ್ರಾಗುದೀಚೀಂ ದಿಶಂ ದೃಷ್ಟ್ವಾ ಪ್ರವಿಷ್ಟೋ ನೃಪಮಾನಸಮ್ ॥೧೪॥**

**ವಿಶಾಂಪತೇ** ಪ್ರಜೆಗಳಿಗೆ ಒಡೆಯನಾದ ನೃಪ ಪರೀಕ್ಷಿತನೇ **ಸಹಸ್ರಾಕ್ಷಃ** ಸಾವಿರ ಕಣ್ಣಿನ ಇಂದ್ರದೇವರು **ಸರ್ವಾಃ ದಿಶಃ** ಎಲ್ಲ ದಿಕ್ಕುಗಳನ್ನೂ ಕುರಿತು **ಗತ್ವಾ** ಆ ಪಾಪವನ್ನು ತಪ್ಪಿಸಿಕೊಳ್ಳಲು ಹೋಗಿ **ನಭೋಗತಃ** ಆಕಾಶ ಮಾರ್ಗದಿಂದ ಆಕಾಶವನ್ನು ಸೇರಿ **ಪ್ರಾಗುದೀಚೀಂ** ಪೂರ್ವೋತ್ತರಗಳ ಮಧ್ಯದ **ದಿಶಂ** ಈಶಾನ್ಯದಿಕ್ಕನ್ನು **ದೃಷ್ಟ್ವಾ** ನೋಡಿ **ತಾಂ ಪ್ರವಿಷ್ಟಃ** ಆ ದಿಕ್ಕನ್ನು ಪ್ರವೇಶಿಸಿ **ಮಾನಸಂ** ಮಾನಸಸರೋವರವನ್ನು **ಪ್ರವಿಷ್ಟಃ** ಪ್ರವೇಶಿಸಿದನು.

ಇಲ್ಲಿ **ಮಾನಸ** ಶಬ್ದದಿಂದ **ಮಾನಸಂ ಪ್ರವಿಷ್ಟಃ** ಅಂದರೆ ಎಲ್ಲಿ ಹೋದರೆ ನನಗೆ ತ್ರಾಸವಾಗುವದಿಲ್ಲವೆಂದು ಮನಸ್ಸಿನಿಂದ ಆಲೋಚಿಸಿ ಎಂದೂ ಅರ್ಥವನ್ನು ಸೂಚಿಸುವರು. ಮೋಕ್ಷಧರ್ಮದಲ್ಲಿ 'ನಲಿನೀಂ ಪ್ರತಿಪೇದೇ' ಎಂದಾರಂಭಿಸಿ 'ಏವಮಿಂದ್ರೋ ಬ್ರಹ್ಮತೇಜಃಪ್ರಭಾವೋಪಬೃಂಹಿತಂ ಶತ್ರುವಧಂ ಕೃತ್ವಾ ಸ್ವಸ್ಥಾನಂ ಪ್ರಾಪ್ತಃ ' ಎಂಬಲ್ಲಿ ವರೆಗೆ ವಿಸ್ತಾರವಾಗಿ ಹೇಳಿದೆ ಅದನ್ನು ತಿಳಿಯುವದು. ॥೧೪॥

**ಸ ಆವಸತ್ಪುಷ್ಕರನಾಲತಂತೂನ್**
**ಅಲಬ್ಧಭೋಗೋ ಯದಿಹಾಗ್ನಿದೂತಃ ।**
**ವರ್ಷಾಣಿ ಸಾಹಸ್ರಮಲಕ್ಷಿತೋಽಂತಃ**
**ಸಂಚಿಂತಯನ್ ಬ್ರಹ್ಮವಧಾದ್ವಿಮೋಕ್ಷಮ್ ॥೧೫॥**

**ಯತ್** ಯಾವ ಕಾರಣ ಇಹ ಮಾನಸ ಸರೋವರದಲ್ಲಿ **(ಆಸೀತ್)** ಇದ್ದರೋ, **ಅಗ್ನಿದೂತಃ** ಹವಿಸ್ಸನ್ನು ಹೊಂದಲು ಅಗ್ನಿಯನ್ನು ದೂತನನ್ನಾಗಿ ಹೊಂದಿದ್ದರೋ **ತತ್** ಆದ್ದರಿಂದ **ಅಲಬ್ಧಭೋಗಃ** ಅಗ್ನಿಯು ನೀರಿನಲ್ಲಿ ಬರಲಾರನಾದುದರಿಂದ ಹವಿರ್ಭಾಗವನ್ನು ಹೊಂದದವರಾಗಿ **ಭೋಗಃ** ಎಂಬ ಪಾಠದಲ್ಲಿ ನಿದ್ದೆ ಮುಂತಾದ ಸುಖ ಹೊಂದದಿರುವ **ಸಃ** ಇಂದ್ರದೇವರು **ಬ್ರಹ್ಮವಧಾತ್** ವೃತ್ರನನ್ನು ಕೊಂದ ಬ್ರಹ್ಮಹತ್ಯಾಪಾಪದಿಂದ **ವಿಮೋಕ್ಷಂ** ಬಿಡುಗಡೆಯ ಉಪಾಯವನ್ನು **ಸಂಚಿಂತಯನ್** ಆಲೋಚಿಸುತ್ತ **ಅಲಕ್ಷಿತಃ** ನೀರಿನಿಂದ ಆವೃತರಾದ್ದರಿಂದ ಯಾರಿಗೂ ಕಾಣದವರಾಗಿ **ಅಂತಃ** ಸರೋವರದೊಳಗೆ **ಪುಷ್ಕರನಾಲತಂತೂ** ಕಮಲದ ದೇಟನಲ್ಲಿರುವ ಎಳೆಯನ್ನು ಆಶ್ರಯಿಸಿ ಅದರಲ್ಲಿ **ಸಾಹಸ್ರಂ ವರ್ಷಾಣಿ** ಸಾವಿರ ವರ್ಷಗಳು **ಆವಸತ್** ವಾಸಿಸಿದರು.

**ಅಲಕ್ಷಿತೋಽದ್ಭಿಃ** ಎಂಬ ಪಾಠದಲ್ಲಿ **ಅದ್ಭಿಃ** ದೇವತೆಗಳಿಂದ **ಅಲಕ್ಷಿತಃ** ಕಾಣದವರಾಗಿ ಎಂದರ್ಥ. ಅಥವಾ ನೀರಿನಿಂದ ಆವೃತರಾಗಿ ಎಂದೂ ಅರ್ಥ ಮಾಡಬಹುದು.

**ಆಪ ಇತ್ಯೇವ ದೇವಾನಾಂ ಸರ್ವೇಷಾಂ ಪ್ರದದೌ ಹರಿಃ ।**
**ಸ್ವಕೀಯಮೇವ ನಾಮಾನಿ ಪೃಥಕ್ ಪೃಥಗದಾತ್ ಪ್ರಭುಃ ॥**

ಎಂಬ ಪ್ರಮಾಣದಿಂದ ದೇವತೆಗಳಿಗೆ ಅಪ್ ಶಬ್ದ ವಾಚ್ಯತ್ವವು ಸಿದ್ಧವಾಗಿದೆ.

ತಂದೆ-ತಾಯಿಯರಾದ ಲಕ್ಷ್ಮೀನಾರಾಯಣರು ಕಮಲ ನಿಲಯರಾದುದರಿಂದ ಕಮಲದಲ್ಲಿರುವದು ಇಂದ್ರನಿಗೆ ಇಷ್ಟವಾಯಿತು. 'ಲಕ್ಷ್ಮೀಃ ಪದ್ಮಾಲಯಾ ಪದ್ಮಾ' ಎಂದಿದೆ. ಮತ್ತು 'ಯತ್ರ ಪದ್ಮವನಾನಿ ಚ ತತ್ರ ಸನ್ನಿಹಿತೋ ಹರಿಃ' ಎಂದು ಪ್ರಮಾಣವಿದೆ ಎನ್ನುತ್ತಾರೆ ಶ್ರೀಗಳು.

ಅಗ್ನಿದೂತಃ ಅಗ್ನಿಯೇ ಭೃತ್ಯನಾಗಿ ಉಳ್ಳವನು ಬೃಹಸ್ಪತಿಯ ಪ್ರಾರ್ಥನೆಯ ನಂತರ ಇಂದ್ರನನ್ನು ಹುಡುಕುವ ಅಗ್ನಿಗೆ ದೂತತ್ವವನ್ನು ತಿಳಿಯಬೇಕು. ಉದ್ಯೋಗಪರ್ವದಲ್ಲಿ ಹೀಗಿದೆ. 'ಹುತಾಗ್ನಿಂ ಸೋಽಬ್ರವೀದ್ರಾಜನ್' ಎಂದಾರಂಭಿಸಿ, 'ಅಣುಮಾತ್ರೇಣ ವಪುಷಾ ಪದ್ಮತಂತ್ವಾಶ್ರಿತಂ ಪ್ರಭುಂ । ತಥೈವ ತ್ವಾಂ ಮಹಾಭಾಗ ಎಂದಾರಂಭಿಸಿ, 'ಅಥ ಮಾಮಸ್ಪೃಶನ್ ಮೂರ್ಧ್ನಿ ಪಾದೇನ' ಎಂದು ಮಧ್ಯದಲ್ಲಿ ಹೇಳಿ, 'ಧ್ವಂಸಪಾಪಪರಿಭ್ರಷ್ಟಃ ಕ್ಷೀಣಪುಣ್ಯೋ ಮಹೀತಲೇ । ದಶವರ್ಷಸಹಸ್ರಾಣಿ ಸರ್ಪರೂಪಧರೋ ಮಹಾನ್ । ವಿಚರಿಷ್ಯಸಿ ಪೂರ್ಣೇಷು ಪುನಃ ಸರ್ವಮವಾಪ್ಸ್ಯಸಿ' ಎಂಬಲ್ಲಿವರೆಗೆ ಅಗಸ್ತ್ಯರ ಮಾತಿನ ಅನುವಾದರೂಪದಿಂದ ಹೇಳಿದೆ. 'ಸಹಸ್ರಮಪಿ ಸಾಹಸ್ರಂ' ಎಂದು ದ್ವಿರೂಪ ಕೋಶವಿದೆ. **ಅಂತಃ** ಮನಸ್ಸಿನಲ್ಲಿ **ಸಂಚಿಂತಯನ್** ಉಪಾಯ ಚಿಂತಿಸುತ್ತಾ ಹೀಗೂ ಅರ್ಥವನ್ನು ಹೇಳಬಹುದು. ॥೧೫॥

**ತಾವತ್ ತ್ರಿಣಾಕಂ ನಹುಷಃ ಶಶಾಸ**
**ವಿದ್ಯಾತಪೋಯೋಗಬಲಾನುಭಾವಃ ।**
**ಸ ಸಂಪದೈಶ್ವರ್ಯಮದಾಂಧಬುದ್ಧಿಃ**
**ನೀತಸ್ತಿರಶ್ಚಾಂ ಗತಿಮಿಂದ್ರಪತ್ನ್ಯಾ ॥೧೬॥**

**ತಾವತ್** ಇಂದ್ರನು ಬರುವವರೆಗೆ **ವಿದ್ಯಾತಪೋಯೋಗಬಲಾನುಭಾವಃ** ವಿದ್ಯಾ, ತಪಸ್ಸು, ಯೋಗ, ಬಲ, ಸಾಮರ್ಥ್ಯವನ್ನು ಹೊಂದಿದ, **ನಹುಷಃ** ಯಯಾತಿಯ ಮಗನಾದ ನಹುಷನು **ತ್ರಿಣಾಕಂ** ಮೂರನೆಯದಾದ ಸ್ವರ್ಗವನ್ನು ೧. ಭೂಮಿ,

ಅಂತರಿಕ್ಷ, ಸ್ವರ್ಗ ಸ್ಥಾನಗಳನ್ನು ೩. ತ್ರಿಶಬ್ದವಾಚ್ಯರಾದ ದೇವತೆಗಳಿಂದ ಅಧಿಷ್ಠಿತವಾದ ಸ್ವರ್ಗಲೋಕವನ್ನು, **ಶಶಾಸ** ಆಳಿದನು. ಆದ್ದರಿಂದಲೇ ಇಂದ್ರದೇವರು ತ್ರೈಲೋಕ್ಯಪಾಲನೆಯಿಂದ ಬಂದ ಸರ್ವೈಶ್ವರ್ಯ ಭೋಗವಿಲ್ಲದವರಾದರು. **ತಾವಚ್ಚ ನಾಕಂ** ಎಂಬ ಪಾಠದಲ್ಲಿ ಚ ಎಂಬುದಕ್ಕೆ ಏವ ಎಂದರ್ಥ. ತಾವದೇವ ಅಷ್ಟು ಕಾಲ ಮಾತ್ರ ಯಾವಾಗಲೂ ಅಲ್ಲ ಎಂದರ್ಥ. ಅಥವಾ ನಹುಷನೇ ಸ್ವರ್ಗವನ್ನು ಆಳಿದನು. ಯಾವ ದೇವತೆಗಳೂ ಆಳಲಿಲ್ಲವೆಂದರ್ಥ. 'ನಾನ್ಯಸ್ಯ ಪದಮಿಚ್ಛಂತಿ ತದ್ದೇವಾನಾಂ ಪರಂ ವ್ರತಮ್ । ತಸ್ಮಾತ್ತಂ ನಹುಷಂ ಶಕ್ರಪದೇ ನಿದಧುರೀಶ್ವರಾಃ' ಎಂಬ ಪ್ರಮಾಣವು ದೇವತೆಗಳು ಏಕೆ ಸ್ವರ್ಗ ಆಳಲಿಲ್ಲವೆಂಬುದನ್ನು ತಿಳಿಸುತ್ತದೆ. ಮತ್ತೊಬ್ಬರ ಪದವಿಯನ್ನು ಇಚ್ಛಿಸದಿರುವದು ದೇವತೆಗಳ ಮುಖ್ಯ ವ್ರತವಾಗಿದೆ. ಆದ್ದರಿಂದ ಸಮರ್ಥರಾದರೂ ಆಳಲಿಲ್ಲವೆಂದು ಭಾವ. ನಹುಷನಿರುವಾಗ ಮತ್ತೆ ಇಂದ್ರನಿಗೆ ಪದವಿ ದೊರೆತದ್ದು ಹೇಗೆಂದು ಹೇಳುವರು.

**ಸಂಪದೈಶ್ವರ್ಯಮದಾಂಧಬುದ್ಧಿಃ** ಸಂಪತ್ತು ಮತ್ತು ಸ್ವಾಮಿತ್ವಗಳ ಮದದಿಂದ ಅಹಂಕಾರದಿಂದ ಕುರುಡಾದ ಬುದ್ಧಿಯುಳ್ಳ, ವಿವೇಕಶೂನ್ಯನಾದ **ಸಃ** ನಹುಷನು **ಇಂದ್ರಪತ್ನ್ಯಾ** ಶಚೀದೇವಿಯಿಂದ ಅಗಸ್ತ್ಯರ ಮೂಲಕ **ತಿರಶ್ಚಾಂ ಗತಿಂ** ಅಜಗರ ಜನ್ಮವನ್ನು **ನೀತಃ** ಹೊಂದಿಸಲ್ಪಟ್ಟನು.

ಇಲ್ಲಿ ಪುರಾಣದ ಕಥೆ ಹೀಗೆದೆ. ಐಶ್ವರ್ಯಗರ್ವಿತನಾದ ನಹುಷನು ಒಂದು ದಿನ ನಾನು ಇಂದ್ರನು. ನನ್ನನ್ನು ಹೊಂದು ಎಂದು ಶಚೀದೇವಿಗೆ ಹೇಳಿದನು. ಭೀತಳಾದ ಶಚೀದೇವಿಯು ಬೃಹಸ್ಪತ್ಯಾಚಾರ್ಯರಿಗೆ ಈ ವಿಷಯ ತಿಳಿಸಿದಳು. ಆದಕ್ಕವರು, ಬ್ರಾಹ್ಮಣರು ಹೊತ್ತು ತರುವ ಮೇಣೆಯಲ್ಲಿ ಬಾ ಎಂದು ಹೇಳು. ಕುಪಿತರಾದ ಬ್ರಾಹ್ಮಣರಿಂದ ಅವನು ಶಪ್ತನಾಗುವನು ಎಂದು ಉಪಾಯವನ್ನು ಹೇಳಿಕೊಟ್ಟರು. ಹಾಗೆಯೇ ಶಚಿಯು ನಹುಷನಿಗೆ ಹೇಳಿದಳು. ಅಗಸ್ತ್ಯಾದಿ ಮಹಾಮುನಿಗಳಿಂದ ತನ್ನ ಮೇಣೆಯನ್ನು ಹೊರಡಿಸಿಕೊಂಡು ಶಚೀದೇವಿಯ ಮನೆಗೆ ಹೊರಟನು. ಆಗ ' ಕ್ಷಿಪ್ರಂ ಸರ್ಪ' ಎಂದು ಅಗಸ್ತ್ಯರನ್ನು ಕಾಲಿನಿಂದ ಒದ್ದನು. ಅವರು ಕುಪಿತರಾಗಿ ಸರ್ಪೋ ಭವ ಎಂದು ಶಪಿಸಿದರು. ಕೂಡಲೇ ನಹುಷನು ಅಜಗರ ಸರ್ಪನಾಗಿ ಕೆಳಗೆ ಬಿದ್ದನು.

ತ್ರಿಣಾಕ ಎಂದರೆ ಭೂಃ, ಭುವಃ, ಸ್ವಃ ಹೀಗೆ ಸ್ವರ್ಗ ಮೂರನೆಯದು. ಮತ್ತು ದುಃಖರಹಿತವಾದ ಎಂದರ್ಥ ಹೇಳಿದೆ. ತ್ರಿ ಶಬ್ದಕ್ಕೆ ತೃತೀಯ, ತ್ರಿ ಮೂರು, ತೃತೀಯ

ಮೂರನೆಯ ಎಂಬ ಅರ್ಥವನ್ನು ತ್ರಿದಶ ಪದದ ವ್ಯಾಖ್ಯಾನದಲ್ಲಿ ಭಾನುದೀಕ್ಷಿತರು ತೃತೀಯಾ ಯೌವನಾಖ್ಯಾ ದಶಾ ಸದಾ ಯೇಷಾಂ ತೇ ತ್ರಿದಶಾಃ । ತೃತೀಯಾರ್ಥತಾ ತ್ರಿಶಬ್ದಸ್ಯ ಎಂದು ಹೇಳಿರುವರು. ತತ್ತ್ವಸುಭೋಧಿನಿಯಲ್ಲಿ ತ್ರಿಭಾಗ ಇತಿವತ್ ತ್ರಿಶಬ್ದಸ್ಯ ತೃತೀಯಾರ್ಥಕತಾ ಎಂದು ಹೇಳಿದೆ. ತ್ರಿದಿನ ಶಬ್ದದಂತೆ ಎಂದು ಹೇಳಿದೆ. ತ್ರಿ ಎಂದರೆ ದೇವತೆಗಳು ಎಂದೂ ಅರ್ಥ. 'ಆದಿತ್ಯಾ ವಸವೋ ರುದ್ರಾಸ್ತ್ರಿಧಾ ಹಿ ಸುರಾ ಯತಃ । ಮರುತಶ್ಚೈವ ವಿಶ್ವೇ ಚ ಸಾಧ್ಯಾಶ್ಚೈವ ತು ತದ್ಗತಾಃ । ಅತಸ್ತ್ರಯ ಇತಿ ಪ್ರೋಕ್ತಾಶ್ಚತ್ವಾರೋ ಮಾನುಷಾಃ ಸ್ಮೃತಾಃ ' ಎಂದು ಸ್ಕಾಂದವಚನವಿದೆ.

ಅತ್ರೇಯಮನುಸಂಧೇಯಾ ಕಥಾ ಪೌರಾಣಿಕೈಃ ಬುಧೈಃ ।
ಕದಾಚಿನ್ನಹುಷಃ ಪ್ರಾಹ ಶಚೀಮೈಶ್ವರ್ಯಗರ್ವಿತಃ ॥

ಇಂದ್ರಂ ಮಾಂ ಭಜ ಕಲ್ಯಾಣೀತ್ಯಥ ಶಚ್ಯಾಽತಿಭೀತಯಾ ।
ಸಮಾವೇದಿತವೃತ್ತಾಂತೋ ಬೃಹಸ್ಪತಿರುವಾಚ ತಾಮ್ ॥

ಶಿಬಿಕಾಂ ಬ್ರಾಹ್ಮಣೈರ್ವಾಹ್ಯಾಮಾರುಹ್ಯ ತ್ವಾಂ ಸಮಾಗತಮ್ ।
ಭಜಿಷ್ಯಾಮೀತಿ ತಂ ಬ್ರೂಹಿ ತತೋಽಸೌ ಕುಪಿತೈರ್ದ್ವಿಜೈಃ ॥

ಶಪ್ತಃ ಪತಿಷ್ಯತಿ ಕ್ಷಿಪ್ರಮಿತ್ಯುಕ್ತಾ ಸಾ ಯಯೌ ನೃಪಮ್ ।
ತಯೋಕ್ತಂ ನಹುಷಃ ಶ್ರುತ್ವಾ ಪ್ರತಿಜಗ್ರಾಹ ಸಾದರಮ್ ॥

ವಾಹಯಾಮಾಸ ಶಿಬಿಕಾಮಗಸ್ತ್ಯಾದೀನ್ಮಹಾಮುನೀನ್ ।
ತದಾ ಕ್ಷಿಪ್ರಂ ಸರ್ಪ ಸರ್ಪೇತ್ಯಗಸ್ತ್ಯಂ ಸ್ವಪದಾಹನತ್ ॥

ಸರ್ಪೋ ಭವೇತಿ ತಂ ಶಪ್ತೋ ಮುನಿನಾ ನಹುಷಃ ಕ್ಷಣಾತ್ ।
ಪಾಪಾತ್ಮಾಽಜಗರೋ ಭೂತ್ವಾ ಜನಾನಾಂ ಪಶ್ಯತಾಮಿತಿ ॥

ಈ ರೀತಿಯಾಗಿ ಪುರಾಣ ವಾಕ್ಯಗಳು ಇವೆ. ॥೧೬॥

**ತತೋ ಗತೋ ಬ್ರಹ್ಮಗಿರೋಪಹೂತಃ**
**ಋತಂಭರಧ್ಯಾನನಿವಾರಿತಾಂಹಃ ।**
**ಪಾಪಶ್ಚ ದಿಗ್ದೇವತಯಾ ಹತೌಜಾಃ**
**ತಂ ನಾಭ್ಯಭೂದವಿತಂ ವಿಷ್ಣುಪದ್ಯಾ ॥೧೭॥**

ಬ್ರಹ್ಮಗಿರಾ ೧. ಚತುರ್ಮುಖ ಬ್ರಹ್ಮದೇವರ ಮಾತಿನಿಂದ, ೨. ಬೃಹಸ್ಪತ್ಯಾಚಾರ್ಯರ ಮಾತಿನಿಂದ (ಬ್ರಹ್ಮಾಪಿ ತನ್ನ ಜಾನಾತಿ ಎಂಬುದರ ವ್ಯಾಖ್ಯಾನ ಮಾಡುವಾಗ ಬ್ರಹ್ಮಾ

ಬೃಹಸ್ಪತಿಃ ಎಂದು ಗೀತಾಭಾಷ್ಯದಲ್ಲಿ ಹೇಳಿದೆ.) ಮೋಕ್ಷಧರ್ಮದಲ್ಲಿ 'ಪಿತಾಮಹಮುಪಾಗಮ್ಯ ಶಿರಸಾ ಪ್ರತ್ಯಪೂಜಯನ್ । ಮುಚ್ಯತಾಂ ತ್ರಿದಶೇಂದ್ರೋऽಸೌ ಮತ್ಪ್ರಿಯಂ ಕುರು ಭಾಮಿನೀ ॥ ಮುಂತಾಗಿದೆ. ಕಾರಣ ಚತುರ್ಮುಖ ಎಂದೂ ಅರ್ಥ ಮಾಡಬಹುದು. **ಉಪಹೂತಃ** ದೂತನಾದ ಅಗ್ನಿಯ ಮೂಲಕ ಕರಿಸಲ್ಪಟ್ಟ, **ಋತಂಭರಧ್ಯಾನನಿವಾರಿತಾಂಹಃ** ಪ್ರಹ್ಲಾದನ ಮಾತನ್ನು ಸತ್ಯಮಾಡಲು ಬಂದ ನರಸಿಂಹ ದೇವರ ಧ್ಯಾನದಿಂದ ಬ್ರಹ್ಮಹತ್ಯಾ ಪಾಪವನ್ನು ಕಳೆದುಕೊಂಡ, **ಸಃ** ಇಂದ್ರದೇವರು, **ತತಃ** ಮಾನಸಸರೋವರದಿಂದ, **ಗತಃ** ಹೊರಟರು. **ವಿಷ್ಣುಪದ್ಯಾ** ಮಾನಸ ಸರೋವರದಲ್ಲಿ ಸೇರಿರುವ ಗಂಗಾನದಿಯಿಂದ, ವಿಷ್ಣುಪಾದಾವಲಂಬಿನಿಯಾದ ಮಹಾಲಕ್ಷ್ಮೀದೇವಿಯಿಂದ **ಅವಿತಂ** ರಕ್ಷಿತನಾಗಿದ್ದ, **ತಂ** ಇಂದ್ರದೇವರನ್ನು, **ದಿಗ್ದೇವತಯಾ** ಇಂದ್ರನಿಗೆ ಹಿತಕಾರಿಣಿಯಾದ ಈಶಾನ್ಯ ದಿಕ್ಕಿನ ದೇವತೆಯಿಂದ, ೨. ರಮಾ ದೇವಿಯಿಂದ, ೩. ದಿಕ್ ಶಬ್ದ ವಾಚ್ಯ ಬಾಹುವಿನಿಂದ ಕೂಡಿದ ವಿಷ್ಣುವಿನಿಂದ, 'ದಿಶಾಂ ವತ್ಸಂ ವೇದ' ಎಂಬ ಛಾಂದೋಗ್ಯಭಾಷ್ಯದಲ್ಲಿ 'ವಾಚಿ ದಿಕ್ ಸಂಸ್ಥಿತಾ...' ಎಂದಾರಂಭಿಸಿ, 'ದಿಜ್ಞಾಮಾನಾಶ್ಚೈತೇ ಪ್ರೋಕ್ತಾ ಧರ್ಮಜ್ಞಾನಾತಿದೇಶನಾತ್' ಎಂಬಲ್ಲಿ ವರೆಗೆ ಹೇಳಿದೆ. **ಹತೌಜಾಃ** ಕುಗ್ಗಿದ ಬಲವುಳ್ಳ, **ಪಾಪಃ** ಬ್ರಹ್ಮಹತ್ಯಾ ಪಾಪವು, ಅಭಿಮಾನಿ ಜೀವನು **ನ ಅಭ್ಯಭೂತ್** ಅಭಿಭವಗೊಳಿಸಲಿಲ್ಲ.

'ಉಪಹೂತಋತಂಭರಧ್ಯಾನನಿವಾರಿತಾಂಹಃ' ಎಂಬುದು ಒಂದೇ ಪದವೆಂದು ತಿಳಿಯಬೇಕು. ಋತಂಭರನೆಂದು ಕರಿಸಿಕೊಂಡ ನೃಸಿಂಹನೆಂದು ಅರ್ಥ. ಬ್ರಹ್ಮಋಷಿಃ ಎಂದಂತೆ ಋತ್ಯಕಃ ಇತಿ ಪ್ರಕೃತಿಭಾವವಾಗಿ ಋತಂಭರ ಎಂದಾಗುವುದು. 'ತೃತೀಯೋऽತಿಶಯೇ' ಎಂದಿರುವುದರಿಂದ ಋತುಂಭರ ಎಂಬ ಪಾಠವೂ ಸಮೀಚೀನವೇ ಆಗಿದೆ. ಅನನ್ಯಾಧೀನತ್ವರೂಪವಾದ ಅತಿಶಯವನ್ನು ಋತಕ್ಕೆ ಹೇಳುತ್ತಿದ್ದಾರೆ. 'ಉಗ್ರ ಊರ್ಜ ಋತುಂಭರಾಃ' ಎಂದು ತಂತ್ರಸಾರದಲ್ಲಿ ಇದೆ. ಅಲ್ಲಿಯೂ ಋತಂಭರ ಎಂದೇ ಪಠಿಸಬಹುದಲ್ಲ ಎಂದರೆ, ಋತುಂ ಋತುಕಾಲೋಪಲಕ್ಷಿತಂ ಬಿಭರ್ತೀತಿ ಋತುಂಭರಃ ಎಂದು ವೇದವ್ಯಾಸಶ್ರೀಮಚ್ಚರಣರ ವಿವರಣವಿದೆ. ॥೧೭॥

**ತಂ ಚ ಬ್ರಹ್ಮರ್ಷಯೋऽಭ್ಯೇತ್ಯ ಹಯಮೇಧೇನ ಭಾರತ ।**
**ಯಥಾವದ್ದೀಕ್ಷಯಾಂಚಕ್ರುಃ ಪುರುಷಾರಾಧನೇನ ಹ ॥೧೮॥**

**ಭಾರತ** ಪರೀಕ್ಷಿತನೇ **ಬ್ರಹ್ಮಋಷಯಃ** ಬ್ರಹ್ಮರ್ಷಿಗಳು **ಅಭ್ಯೇತ್ಯ** ಹಿಂದೆ ಮಾತು ಕೊಟ್ಟಂತೆ ಬಂದು **ಪುರುಷಾರಾಧನೇನ** ವಿಷ್ಣುವಿನ ಆರಾಧನೆ ಸಹಿತವಾಗಿ **ಹಯಮೇಧೇನ** ಅಶ್ವಮೇಧದಿಂದ **ತಂ** ಇಂದ್ರದೇವರನ್ನು **ಯಥಾವತ್** ವಿಹಿತವಾದ ರೀತಿಯಲ್ಲಿ **ದೀಕ್ಷಯಾಂಚಕ್ರುಃ** ದೀಕ್ಷಿತನನ್ನಾಗಿ ಮಾಡಿದರು. **ಹ** ಪ್ರಸಿದ್ಧ.

**ದೀಕ್ಷಯಾಂಚಕ್ರುಃ** ಎಂದು ಎರಡು ಪದಗಳು. ಆದರೂ ತುಂಗಭದ್ರಾ ಎಂಬಂತೆ ಜೋಡಿಸಿಯೇ ಹೇಳಬೇಕು. 'ತಂ ಪಾತಯಾಂ ಪ್ರಥಮಮಾಸ' ಮುಂತಾದ ಪ್ರಯೋಗ ಸರಿಯಾದುದಲ್ಲವೆಂದು ನವೀನ ವೈಯ್ಯಾಕರಣಿಗಳು ಹೇಳುತ್ತಾರೆ.

ಮಂತ್ರತಸ್ತಂತ್ರತಶ್ಛಿದ್ರಂ ದೇಶಕಾಲಾರ್ಹವಸ್ತುನಃ ।
ಸರ್ವಂ ಕರೋತಿ ನಿಶ್ಛಿದ್ರಮನುಸಂಕೀರ್ತನಂ ತವ ॥

ಎಂದಿರುವದರಿಂದ 'ಪುರುಷಸ್ಯೈತಸ್ಯ ಜಗತೋ ಹ್ಯಗ್ರ ಆಸೀನ್ನಾರಾಯಣಃ ಪುರಃ । ಏಕ ಏವ ಶ್ರಿಯಾ ಸಾರ್ಧಂ ತಮಾತ್ಮಾ ಪುರುಷ ಇತ್ಯಪಿ । ಆಹುಸ್ತಸ್ಮಾತ್' ಎಂದು ಬೃಹದ್ಭಾಷ್ಯದಲ್ಲಿರುವುದರಿಂದ ಪುರುಷ ಎಂದರೆ ವಿಷ್ಣು. ಅವನ ಆರಾಧನ ಸಹಿತವಾಗಿ ಎಂದು ಹೇಳಿದ್ದರಿಂದ 'ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ' ಎಂಬ ಪ್ರಸಿದ್ಧಿಯನ್ನು ತಿಳಿಸುವರು.

**ಅಥೇಜ್ಯಮಾನೇ ಪುರುಷೇ ಸರ್ವಭೂತಮಯಾತ್ಮನಿ ।**
**ಅಶ್ವಮೇಧೇ ಮಹೇಂದ್ರೇಣ ವಿತತೇ ಬ್ರಹ್ಮವಾದಿಭಿಃ ॥೧೯॥**

**ಸ ವೈ ತ್ವಾಷ್ಟ್ರವಧೋ ಭೂಯಾನಪಿ ಪಾಪಃ ಪರಂತಪ ।**
**ನೀತಸ್ತೇನೈವ ಶೂನ್ಯಾಯ ನೀಹಾರ ಇವ ಭಾನುನಾ ॥೨೦॥**

**ಬ್ರಹ್ಮವಾದಿಭಿಃ** ವೇದವಾದಿಗಳಿಂದ **ವಿತತೇ** ವಿಸ್ತಾರವಾಗಿ ಮಾಡಲ್ಪಟ್ಟ ಅಶ್ವಮೇಧ ಯಾಗದಲ್ಲಿ **ಮಹೇಂದ್ರೇಣ** ಇಂದ್ರದೇವರಿಂದ **ಸರ್ವದೇವಮಯಾತ್ಮನಿ** ಎಲ್ಲ ದೇವತೆಗಳಿಗೆ ಪ್ರಧಾನನೂ ಅಂತರ್ಯಾಮಿಯೂ ಆದ **ಸರ್ವಭೂತಮಯಾತ್ಮನಿ** ಎಂಬ ಪಾಠದಲ್ಲಿ ಎಲ್ಲ ಚೇತನ ಪ್ರಧಾನನೂ ಅಂತರ್ಯಾಮಿಯೂ ಆದ **ಪುರುಷೇ** ಯಜ್ಞಪುರುಷನಾದ ಶ್ರೀಹರಿಯು **ಇಜ್ಯಮಾನೇ ಸತಿ** ಪೂಜಿಸಲ್ಪಡುತ್ತಿರಲು **ಅಥ** ಸಾಂಗವಾಗಿ ಯಜ್ಞವಾದ ಕಾರಣ **ಸಃ** ಆ **ತ್ವಾಷ್ಟ್ರವಧಃ ಪಾಪಃ** ವೃತ್ರವಧೆಯಿಂದ ಬಂದ ಪಾಪವು **ಭೂಯಾನ್ ಅಪಿ** ದೊಡ್ಡದೇ ಆಗಿದ್ದರೂ **ತೇನ** ಆ ಯಾಗದಿಂದ ಆ ಪುರುಷನಿಂದ **ಭಾನುನಾ** ಸೂರ್ಯನಿಂದ **ನೀಹಾರಃ ಇವ** ಮಂಜಿನಂತೆ **ಶೂನ್ಯಾಯ**

ನೀತಃ ನಾಶ ಮಾಡಲ್ಪಟ್ಟಿತು. ವೈ 'ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ' ಎಂಬ ಗೀತೆಯ ವಾಕ್ಯವು ಹೇಳುವಂತೆ, ಶ್ರೀಹರಿಯ ಜ್ಞಾನದಿಂದ ಪಾಪವು ಸರ್ವಥಾ ನಾಶವಾಗಿದ್ದರೂ ಅಶ್ವಮೇಧದಿಂದ ಇಂದ್ರದೇವರಿಗೆ ಮಹತ್ವಾತಿಶಯ ಬಂದಿತು ಎಂದು ಸೂಚಿಸುವರು. ||೧೯-೨೦||

**ಸ ವಾಜಿಮೇಧೇನ ಯಥೋದಿತೇನ**
**ವಿತಾಯಮಾನೇನ ಮರೀಚಿಮಿಶ್ರೈಃ ।**
**ಇಷ್ಟ್ವಾऽಪಿ ಯಜ್ಞಂ ಪುರುಷಂ ಪುರಾಣಂ**
**ಇಂದ್ರೋ ಮಹಾನಾಸ ವಿಧೂತಪಾಪಃ** **||೨೧||**

**ವಿಧೂತಪಾಪಃ ಅಪಿ** ಜ್ಞಾನದಿಂದಲೇ ಪಾಪವನ್ನು ಕಳೆದುಕೊಂಡಿದ್ದರೂ **ಸಃ ಇಂದ್ರಃ** ಆ ಇಂದ್ರದೇವರು **ಯಥೋದಿತೇನ** ವಿಧಿಗನುಗುಣವಾಗಿ **ಮರೀಚಿಮಿಶ್ರೈಃ** ಮರೀಚಿ ಸಹಿತರಾದ ಋಷಿಗಳಿಂದ **ವಿತಾಯಮಾನೇನ** ವಿಸ್ತೃತವಾಗಿ ಮಾಡಲ್ಪಟ್ಟ **ವಾಜಿಮೇಧೇನ** ಅಶ್ವಮೇಧದಿಂದ, **ಪುರಾಣಂ ಪುರುಷಂ** ಪುರಾಣ ಪುರುಷನಾದ **ಯಜ್ಞಂ** ವಿಷ್ಣುವನ್ನು **ಇಷ್ಟ್ವಾ** ಪೂಜಿಸಿ **ಮಹಾನ್ ಆಸ** ಅತಿಶಯ ಮಹತ್ವ ಉಳ್ಳವರಾದರು.

'ಇಂದ್ರೋ ವೈ ವೃತ್ರಂ ಹತ್ವಾ ಮಹಾನಾಸ' ಎಂಬ ಶ್ರುತಿಯು ಈ ವಿಷಯದಲ್ಲಿ ಪ್ರಮಾಣವಾಗಿದೆ. **ಅಧಿಯಜ್ಞಂ** ಎಂಬ ಪಾಠದಲ್ಲಿ ಯಜ್ಞವನ್ನು ಹೊಂದಿದ, ಯಜ್ಞಾಧಿಷ್ಠಿತನಾದ ಎಂದು ಅರ್ಥ. ||೨೧||

ಸರ್ವ ಯಜ್ಞಾಭಿಮಾನಿ ಉತ್ಕೃಷ್ಟತ್ವ ಮತ್ತು ಪ್ರವರ್ತಕತ್ವವಿರುವದರಿಂದ ಅಧಿಯಜ್ಞ ಶಬ್ದವಾಚ್ಯನಾದ ಅಥವಾ ಸರ್ವಾಂತರ್ಯಾಮಿಯಾದ, 'ಪ್ರಾಣಿನಾಂ ದೇಹಗೋ ವಿಷ್ಣುರಧಿಯಜ್ಞ ಇತೀರಿತಃ' ಅಧಿಗತಃ ಯಜ್ಞಂ ಇತಿ ಅಧಿಯಜ್ಞಃ ಎಂದು ಪ್ರಾದಿಸಮಾಸ. ಅಧಿಷ್ಠಿತಃ ಯಜ್ಞಃ ಅನೇನ ಎಂದು ಬಹುವ್ರೀಹಿಯನ್ನೂ ಮಾಡಬಹುದು. ಆದ್ದರಿಂದ ಯಾವ ಉಪದ್ರವವಿಲ್ಲ.

ಇಂದ್ರನು ಕೇವಲ ಸ್ವಾರ್ಥಕ್ಕಾಗಿ ಯಜ್ಞವನ್ನು ಒಬ್ಬನೇ ಮಾಡಲಿಲ್ಲ. ಕಿಂತು ಲೋಕೋಪಕಾರಕ್ಕಾಗಿ ಎಂದು ತಿಳಿಸಲು ಮರೀಚಿಮಿಶ್ರೈಃ ಎಂದಿದ್ದಾರೆ. ದೊಡ್ಡವರು ಮಾಡುತ್ತಾರೆ. ದೊಡ್ಡವರು ಮಾಡಿಸುತ್ತಾರೆ. ಎಂದಾದರೆ ಬೇರೆ ಜನರು ಯಜ್ಞದಲ್ಲಿ ಆಸಕ್ತರಾಗುವರು. ಆದ್ದರಿಂದ ಲೋಕೋಪಕಾರವನ್ನು ಮಾಡಿದಂತಾಯಿತು.

ಮೋಕ್ಷಧರ್ಮದಲ್ಲಿ 'ಧನ್ಯಾಧನ್ಯಾ...' ಎಂದಾರಂಭಿಸಿ ಅಂತರ್ಗರ್ಭಿತ ವೃತ್ರಗೀತಾ 'ಇತ್ಯೇದ್ ವೃತ್ರಮಾಶ್ರಿತ್ಯ ಶಕ್ರಸ್ಯಾತ್ಯದ್ಭುತಂ ಮಹತ್ । ಕಥಿತಂ ಕರ್ಮ ತೇ ಪಾಪ ಕಿಂ ಭೂಯಃ ಶ್ರೋತುಮಿಚ್ಛಸಿ' ಎಂಬಲ್ಲಿವರೆಗೆ ಹೇಳಿದ ಕಥೆಯೂ ಇದಕ್ಕೆ ಅನುಗುಣವಾಗಿಲ್ಲ. ಕಲ್ಪಭೇಧದಿಂದ ಸಮಾಧಾನ ಮಾಡಬೇಕು. ।।೨೧।।

ಯಜ್ಞಾದಿಗಳನ್ನು ಮಾಡಲು ಸಮರ್ಥರಾದವರಿಗೆ ಇಷ್ಟೇ ಸಾಕು ಎಂದು ಹೇಳುವರು-

**ಇದಂ ಮಹಾಖ್ಯಾನಮಶೇಷಪಾಪ್ಮನಾಂ**
**ಪ್ರಕ್ಷಾಲನಂ ತೀರ್ಥಪದಾನುಕೀರ್ತನಮ್ ।**
**ಭಕ್ತ್ಯುಚ್ಛ್ರಯಂ ಭಕ್ತಜನಾನುವರ್ಣನಂ**
**ಮಹೇಂದ್ರಮೋಕ್ಷಂ ವಿಜಯಂ ಮರುತ್ವತಃ ।।೨೨।।**

**ಪಠೇಯುರಾಖ್ಯಾನಮಿದಂ ಸದಾ ಬುಧಾಃ**
**ಶೃಣ್ವಂತ್ಯಥೋ ಪರ್ವಣಿ ಪರ್ವಣೀಂದ್ರಿಯಮ್ ।**
**ಧನ್ಯಂ ಯಶಸ್ಯಂ ನಿಖಿಲಾಘಮೋಚನಂ**
**ರಿಪುಂಜಯಂ ಸ್ವಸ್ತ್ಯಯನಂ ತಥಾಯುಷಮ್ ।।೨೩।।**

।। ಇತಿ ಶ್ರೀಮದ್ಭಾಗವತೇ ಷಷ್ಠಸ್ಕಂಧೇ ತ್ರಯೋದಶೋಽಧ್ಯಾಯಃ ।।

**ಇದಂ** ಈ **ಮಹಾಖ್ಯಾನಂ** ದೊಡ್ಡವರ ಚರಿತ್ರೆಯು **ಅಶೇಷಪಾಪ್ಮನಾಂ** ಎಲ್ಲ ಪಾಪಗಳನ್ನು **ಪ್ರಕ್ಷಾಲನಂ** ಶುದ್ಧೀಕರಣ ಮಾಡುವದು **ತೀರ್ಥಕಥಾನುಕೀರ್ತನಂ** ಪವಿತ್ರ ಚರಣನಾದ ಶ್ರೀಹರಿಯ ಕೀರ್ತನೆಯಿಂದ ಕೂಡಿದುದು **ಭಕ್ತ್ಯುಚ್ಛ್ರಯಂ** ಭಕ್ತಿಯನ್ನು ಬೆಳೆಸುವದು **ಭಕ್ತಜನಾನುವರ್ಣನಂ** ಭಕ್ತರ ವರ್ಣನೆಯುಳ್ಳದ್ದು **ಮಹೇಂದ್ರಮೋಕ್ಷಂ** ಇಂದ್ರದೇವರ ಪಾಪ ಮುಕ್ತಿಯುಳ್ಳದ್ದು, **ಮರುತ್ವತಃ** ಇಂದ್ರದೇವರ **ವಿಜಯಂ** ವಿಶಿಷ್ಟ ಜಯವನ್ನು ತಿಳಿಸುವದು, **ಅಥೋ** ಆ ಕಾರಣದಿಂದ **ಬುಧಾಃ** ಜ್ಞಾನಿಗಳು **ಧನ್ಯಂ** ಧನಪ್ರದವಾದ **ಯಶಸ್ಯಂ** ಕೀರ್ತಿದಾಯಕವಾದ **ನಿಖಿಲಾಘಮೋಚಕಂ** ಎಲ್ಲ ಪಾಪಗಳನ್ನು ಪರಿಹರಿಸುವ ದುರ್ಬಲವಲ್ಲದ ಪಾಪವನ್ನೂ ಕಳೆಯುವ **ರಿಪುಂ ಜಯಂ** ಶತ್ರುಜಯವನ್ನುಂಟುಮಾಡುವ **ಸ್ವಸ್ತ್ಯಯನಂ** ಮಂಗಳಕರವಾದ **ತಥಾ** ಮತ್ತು **ಆಯುಷಂ** ದೀರ್ಘಾಯುಷ್ಯವನ್ನು ಕೊಡುವ, ಆ ಆಯುಷಾ ನಿತ್ಯಾಯುಃ ಮೋಕ್ಷಃ ಯಸ್ಮಾತ್ ತತ್ ಆಯುಷಂ ಮುಕ್ತಿಯನ್ನು ನೀಡುವ ಎಂದರ್ಥ, ಇಂದ್ರಸಂಬಂಧಿ

ಯಾದ, **ಇದಂ ಆಖ್ಯಾನಂ** ಈ ಚರಿತ್ರೆಯನ್ನು **ಪರ್ವಣಿ ಪರ್ವಣಿ** ಪ್ರತಿಯೊಂದು ಪರ್ವಕಾಲದಲ್ಲಿ **ಸದಾ** ಯಾವಾಗಲೂ **ಪಠೇಯುಃ** ಪಠನ ಮಾಡುವರು. **ಶೃಣ್ವಂತಿ** ಕೇಳುವರು. ಪಠನ ಮಾಡಬೇಕು. ಕೇಳಬೇಕು ಎಂದು ಭಾವ. ।।೨೨-೨೩।।

ಇಂದ್ರೋಪಾಖ್ಯಾನವನ್ನು ಕೇಳಿದವರಿಗೂ ಸರ್ವಪಾಪನಿವೃತ್ತಿ ಹೇಳಿದ್ದರಿಂದ ಮಹಾತ್ಮರಾದ ಇಂದ್ರದೇವರಿಗೆ ಪಾಪಲೇಪವಿಲ್ಲ. ಲೋಕಸಂಗ್ರಹಕ್ಕಾಗಿ ಪ್ರಾಯಶ್ಚಿತ್ತಾನುಷ್ಠಾನ ಮಾಡಿದರೆಂಬುದು ದೃಢವಾಯಿತು.

ಇಂದ್ರೋऽಪ್ಯವಾಪ ಸ್ವಸ್ಥಾನಮಿಷ್ಟ್ವಾ ವಿಷ್ಣುಂ ವಿಪಾಪಕಃ ।
ಧರ್ಮವೃದ್ಧ್ಯರ್ಥಮೇವೈತತ್ಪಾಪಮಾಸೀಚ್ಚಚೀಪತೇಃ ।।

ನ ಹಿ ಲೋಕಾವನಂ ಪಾಪಂ ತ್ರೈಲೋಕ್ಯೇಶಸ್ಯ ವಜ್ರಿಣಃ ।
ವೃತ್ರಂ ಹತ್ವಾ ಮಹಾನಾಸೇತ್ಯಾದಿ ವೇದಪದಂ ಚ ಯತ್ ।

ಕ್ವಚಿತ್ ಪಾಪಂ ಚ ಪುಣ್ಯಾನಾಂ ವೃದ್ಧಯೇ ಭವತಿ ಸ್ಫುಟಮ್ ।
ವೃತ್ರಂ ಹತ್ವಾ ಯಥೇಂದ್ರಸ್ಯ ಜನಾ ಧರ್ಮಾಭಿವೃದ್ಧಯೇ ।

ದೇವಾನಾಂ ವಾ ಮುನೀನಾಂ ವಾ ಭವೇದೇವಂ ನ ವೈ ನೃಣಾಮ್ ।
ಪಾಪಂ ಯತ್ಪುಣ್ಯಮೇತಚ್ಚ ಅಸುರಾಣಾಂ ವಿಲೋಮತಃ ।
ಏವಂ ಹಿ ಸ್ಕಾಂದವಚನಂ ನ ಪಾಪಂ ತಚ್ಚಚೀಪತೇಃ ।।

ಎಂಬ ಪ್ರಮಾಣ ಇದಕ್ಕೆ ಉಪಷ್ಟಂಭಕವಾಗಿದೆ. ।।೨೨-೨೩।।

ಇಲ್ಲಿಗೆ ಹದಿಮೂರನೇ ಅಧ್ಯಾಯವು ಮುಗಿಯಿತು

★★★★★

# ಅಥ ಶ್ರೀಮದ್ಭಾಗವತೇ - ಷಷ್ಠಸ್ಕಂಧೇ

# ಚತುರ್ದಶೋಽಧ್ಯಾಯಃ

**ಅಧ್ಯಾಯಸಾರಾಂಶ**

ವೃತ್ರಾಸುರ ಪಾಪಿಯಾಗಿದ್ದ. ಅವನಿಗೆ ಭಗವಂತನಲ್ಲಿ ನಿರತಿಶಯವಾದ ಭಕ್ತಿಯು ಹೇಗೆ ಹುಟ್ಟಿಕೊಂಡಿತು. ನಿರಂತರ ಭಕ್ತಿಯಲ್ಲಿಯೇ ಮುಳುಗಿರುವ ದೇವತೆಗಳೂ ಕೆಲವು ಬಾರಿ ಅಸುರಾವೇಶದಿಂದ ದೇವರಲ್ಲಿ ದ್ವೇಷ ಮಾಡುತ್ತಾರೆ. ಕರ್ಮಭೂಮಿಯಲ್ಲಿಯೂ ಅನಂತರಾದ ಮಾನವ ಸಮುದಾಯದಲ್ಲಿ ಯಾರೋ ಒಬ್ಬರು ಮಾತ್ರ ಮುಕ್ತಿಗಾಗಿ ಪ್ರಯತ್ನಿಸುತ್ತಾರೆ. ಪ್ರಯತ್ನಮಾಡುವವರಲ್ಲಿಯೂ ಯಾವನೋ ಒಬ್ಬನು ಮಾತ್ರ ಮುಕ್ತನಾಗುತ್ತಾನೆ. ವೃತ್ರನಾದರೋ ಸ್ವಭಾವತಃ ಅಸುರನಾಗಿದ್ದಾನೆ. ಯುದ್ಧಮಾಡುವ ಪ್ರಸಂಗದಲ್ಲಿ ದೇವರಲ್ಲಿ ದೃಢವಾದ ಮತಿಯು ಹೇಗೆ ಬಂದಿತು. ಇದು ನಮ್ಮ ಸಂದೇಹ. ಈ ಸಂದೇಹವನ್ನು ತಾವು ಪರಿಹಾರ ಮಾಡಬೇಕು. ಇದಕ್ಕೆ ಉತ್ತರವನ್ನು ಕೇಳಲು ನಾವೆಲ್ಲರೂ ಕಾತರರಾಗಿದ್ದೇವೆ. ಪರೀಕ್ಷಿತ ಈ ರೀತಿಯಾಗಿ ಕೇಳಿದ.

ಶುಕಾಚಾರ್ಯರು ವೃತ್ರಾಸುರನ ಪೂರ್ವಜನ್ಮದ ಇತಿಹಾಸವನ್ನು ಹೇಳುವ ಮೂಲಕ ಪರೀಕ್ಷಿತನ ಪ್ರಶ್ನೆಗೆ ಉತ್ತರ ನೀಡಿದರು.

ಪರೀಕ್ಷಿತನೇ ! ಪೂರ್ವದಲ್ಲಿ ವ್ಯಾಸರಿಂದ, ನಾರದರಿಂದ, ದೇವಲರಿಂದ ಕೇಳಿರುವ ಇತಿಹಾಸವನ್ನು ನಿನಗೆ ಹೇಳುತ್ತೇನೆ. ಸಾವಧಾನ ಮನಸ್ಕನಾಗಿ ಕೇಳು.

ಆದು ಶೂರಸೇನದೇಶ. ಚಿತ್ರಕೇತು ಆ ಸಾಮ್ರಾಜ್ಯದ ಸಾಮ್ರಾಟ್. ಅವನಿಗೆ ಕೋಟಿ ಜನ ಹೆಂಡತಿಯರು. ಯಾರಿಗೂ ಸಂತಾನವಾಗಲಿಲ್ಲ. ದೈವ ಆಡುವ ಆಟಕ್ಕೆ




ಉತ್ತಮ ಸಾಕ್ಷಿ ಚಿತ್ರಕೇತುವಿನ ಸಂಸಾರ. ಮಕ್ಕಳಿಲ್ಲದ ರಾಜ್ಯ-ಕೋಶ-ಸಂಪತ್ತು-ಸೌಭಾಗ್ಯ-ಪತ್ನಿಯರು ಯಾರೂ ರಾಜನಿಗೆ ಪ್ರೀತಿಹೇತುವಾಗಲಿಲ್ಲ.

ಅದು ಶುಭದಿನ. ಚಿತ್ರಕೇತುವಿನ ಮನೆಗೆ ಅಂಗಿರಸರು ಬಂದರು. ಅಂಗಿರಸರು ಮಹಾಯೋಗಿಗಳು. ಲೋಕಸಂಚಾರ ಮಾಡುತ್ತಾ ಭಗವದಿಚ್ಛೆಯಿಂದಲೇ ಅಲ್ಲಿಗೆ ಬಂದರು. ಮಹಾನುಭಾವರು ಮನೆಗೆ ಬಂದ ಘಳಿಗೆಯೇ ಸುವರ್ಣಘಳಿಗೆ. ಅವರು ಯಾವ ಫಲವನ್ನು ನೀಡದಿದ್ದರೂ ಅವರ ದರ್ಶನವೇ ದುರ್ಯೋಗಗಳ ನೆಲೆಯಾದ ಈ ಸಂಸಾರದಲ್ಲಿ ಅತಿಮಹಾಸುಯೋಗ. ಈ ಸಂಸಾರಬೇಗೆಯಲ್ಲಿ ತಂಗಾಳಿಯಾಗಿ ಮಹಾನುಭಾವರು ಬರುತ್ತಾರೆ. ದರ್ಶನಸುಖವನ್ನು ದಯಪಾಲಿಸಿ ಹೋಗುತ್ತಾರೆ. ಗೊತ್ತು-ಗುರಿಯಿಲ್ಲದೇ ಮುನ್ನುಗ್ಗುತ್ತಿರುವ ಜೀವನಕ್ಕೆ ತಿರುವನ್ನು ನೀಡಿ ಹೋಗುತ್ತಾರೆ.

ಬಂದಿರುವ ಮಹಾನ್ ಅತಿಥಿಗೆ ಮಹಾವೈಭವದಿಂದಲೇ ಸತ್ಕರಿಸಿದ ಚಿತ್ರಕೇತು. ವಿನೀತನಾಗಿ ಋಷಿಯ ಬಳಿಗೆ ಬಂದು ಅಂಜಲಿ ಘಟಿಸಿ ಕುಳಿತುಕೊಂಡ. ಅಂಗಿರಸರು ಚಿತ್ರಕೇತುವನ್ನು ಶುಭಾಶೀರ್ವಾದಗಳಿಂದ ಹರಿಸಿದರು. ಯೋಗಕ್ಷೇಮವನ್ನು ವಿಚಾರಿಸಿದರು.

ರಾಜನ್ ! ನಿನ್ನ ಪ್ರಜೆಗಳು ಸುಖವಾಗಿ ಇರುವರೇ? ಹೆಂಡತಿ-ಮಕ್ಕಳು-ಮಂತ್ರಿಗಳು-ದಾಸರು ನಿನಗೆ ಅನುಕೂಲವಾಗಿರುವರೇ? ನಿನ್ನ ಮುಖ ಚಿಂತೆಯಿಂದ ಬಾಡಿಹೋಗಿದೆ. ನಿರಾಶೆಯು ನಿನ್ನ ಮುಖದಲ್ಲಿ ತಾಂಡವವಾಡುತ್ತಿದೆ. ಸಂತತಿ ಇಲ್ಲದೇ ಚಿತ್ರಕೇತು ಕೊರಗುತ್ತಿದ್ದಾನೆ ಎಂದು ಅಂಗಿರಸರಿಗೆ ಗೊತ್ತಾಯಿತು. ಆದರೂ ಪ್ರಶ್ನಿಸಿದರು.

ಚಿತ್ರಕೇತು ಭಕ್ತಿನಮ್ರನಾಗಿಯೇ ಉತ್ತರಿಸಿದ. ತಪೋಜ್ಞಾನಸಮಾಧಿಗಳಿಂದ ಯಾವ ಪಾಪಲೇಪವೂ ನಿಮಗಿರುವುದಿಲ್ಲ. ಎಲ್ಲವನ್ನೂ ತಿಳಿದವರು ನೀವು. ಆದರೂ ನಿಮ್ಮ ಪ್ರಶ್ನೆಗೆ ಉತ್ತರ ಕೊಡಬೇಕು. ನನ್ನ ಮನಸ್ಸಿನಲ್ಲಿಯ ಸಂಕಟವನ್ನು ಇವತ್ತು ನಿಮ್ಮ ಮುಂದೆ ತೋಡಿಕೊಳ್ಳುತ್ತೇನೆ. ಒಂದು ಮಾತಿನಲ್ಲಿ ಹೇಳಬೇಕಾದರೇ ನನಗೆ ಎಲ್ಲವೂ ಇದೆ. ಯಾವುದೂ ಇಲ್ಲ. ಇದಕ್ಕಿಂತಲೂ ಹೆಚ್ಚು ಮಾತುಗಳಿಂದ ನನ್ನ ಸಂಕಟವನ್ನು ಹೇಳಲಾಗದು. ಮಗನಿಲ್ಲದ ಸ್ವರ್ಗಸೌಭಾಗ್ಯವೂ ಶೂನ್ಯವೇ ಸರಿ. ಹಸಿವೆ-ನೀರಡಿಕೆಗಳಿಂದ ಬಳಲಿದವಗೆ ಗಂಧ-ಹೂಮಾಲೆ-ಹೆಂಡತಿಯರು ಎಷ್ಟಿದ್ದರೇನು? ಯಾವೂ ಹಸಿವು-ತೃಷೆಗಳನ್ನು ನೀಗಿಸಲಾರವು. ಬೊಗಸೆ ನೀರು ಹಿಡಿ ಅನ್ನ

ಮನುಷ್ಯನ ಹಸಿವು-ತೃಷೆಗಳನ್ನು ನೀಗಿಸುತ್ತವೆ. ಮಕ್ಕಳಿಲ್ಲದೇ ನನ್ನ ವಂಶ ಶೋಕಕ್ಕೆ ಪಾಲಾಗಬಾರದು. ಆ ನರಕವನ್ನು ದಾಟುವ ಉಪಾಯವನ್ನು ನೀವೇ ಹೇಳಬೇಕು. ಸಂತಾನಸೌಭಾಗ್ಯವನ್ನು ನನಗೆ ಕರುಣಿಸಬೇಕು.

ಮಹಾತ್ಮರಾದ ಅಂಗಿರಸರು ರಾಜನ ಪ್ರಾರ್ಥನೆಯನ್ನು ಮನ್ನಿಸಿದರು. ತ್ವಷ್ಟೃದೇವತಾಕವಾದ ಚರುವನ್ನು ಮಾಡಿ ತ್ವಷ್ಟೃವನ್ನು ಯಜ್ಞದಿಂದ ಪೂಜಿಸಿದರು. ರಾಜನ ಹಿರಿಯ ಪತ್ನಿಯಾದ ಕೃತದ್ಯುತಿಗೆ ಯಜ್ಞೋಚ್ಛಿಷ್ಟವಾದ ಆ ಚರುವನ್ನು ಭಕ್ಷಿಸಲು ನೀಡಿದರು. ನಂತರ ರಾಜನಿಗೆ ಹೇಳಿದರು.

ರಾಜನ್ ! ಮೊದಲು ಸಂತೋಷವನ್ನು, ನಂತರ ದುಃಖವನ್ನು ನೀಡುವ ಮಗ ನಿನಗಾಗುತ್ತಾನೆ. ಇದನ್ನು ಅನ್ಯಥಾ ಮಾಡಲು ಯಾರಿಂದಲೂ ಸಾಧ್ಯವಿಲ್ಲ. ಹೀಗೆ ಹೇಳಿ ಬ್ರಹ್ಮಪುತ್ರರಾದ ಅಂಗಿರಸರು ಹೊರಟು ಹೋದರು.

ಚರುವನ್ನು ಸ್ವೀಕರಿಸಿದ ಕೃತದ್ಯುತಿಯು ಬೇಗನೇ ಗರ್ಭವನ್ನು ಧರಿಸಿದಳು. ಶುಕ್ಲಪಕ್ಷದ ಚಂದ್ರನಂತೆ ಅವಳ ಗರ್ಭವು ಅಭಿವೃದ್ಧವಾಯಿತು. ಹತ್ತನೇ ತಿಂಗಳಲ್ಲಿ ಸುಂದರನಾದ ಮಗುವಿಗೆ ತಾಯಿಯಾದಳು. ಈ ವಾರ್ತೆಯನ್ನು ಕೇಳಿದ ರಾಜ್ಯದ ಜನರೆಲ್ಲರೂ ಸಂತೋಷಪಟ್ಟರು. ರಾಜನೂ ಸ್ನಾನವನ್ನು ಮಾಡಿ ಅಲಂಕೃತನಾದ. ಬ್ರಾಹ್ಮಣರಿಂದ ಸ್ವಸ್ತಿವಾಚನ ಮಾಡಿಸಿದ. ಜಾತಕರ್ಮಾದಿಗಳನ್ನು ವೈಭವದಿಂದ ಮಾಡಿದ. ಬ್ರಾಹ್ಮಣರಿಗೆ ಸುವರ್ಣ, ರಜತ, ವಸ್ತ್ರ, ಆಭರಣಗಳು, ಗ್ರಾಮ, ಆನೆ, ಕುದುರೆಗಳನ್ನು ದಾನ ಮಾಡಿದ. ಅರವತ್ತು ಕೋಟಿ ಆಕಳುಗಳನ್ನು ದಾನ ಮಾಡಿದ.

ಅತಿಪ್ರಯಾಸದಿಂದ ಗಳಿಸಿದ ಸಂಪತ್ತಿನಲ್ಲಿ ದರಿದ್ರನಿಗೆ ಅತಿಶಯವಾದ ಪ್ರೀತಿಯು ಅಭಿಮಾನವು ಇರುತ್ತದೆ. ಹಾಗೆಯೇ ರಾಜನಿಗೆ ಆ ಮಗನ ಮೇಲೆ ಪ್ರೀತಿ-ಅಭಿಮಾನಗಳು ದಿನ-ದಿನಕ್ಕೂ ಬೆಳೆದವು. ತಾಯಿಯಾದ ಕೃತದ್ಯುತಿಯ ಆನಂದಕ್ಕೆ ಪಾರವೇ ಇಲ್ಲ.

ಮಗುವಿನ ತಾಯಿಯಾದ ಕೃತದ್ಯುತಿಯಲ್ಲಿಯೂ ರಾಜ ಹೆಚ್ಚಿನ ಪ್ರೀತಿಯನ್ನು ತೋರಿಸಿದ. ಉಳಿದ ಪತ್ನಿಯರನ್ನು ಉದಾಸೀನ ಮಾಡಿದ. ರಾಜನ ಈ ಔದಾಸೀನ್ಯವನ್ನು ಉಳಿದ ಪತ್ನಿಯರಿಗೆ ಸಹಿಸಲಾಗಲಿಲ್ಲ. ಸಹಜವಾಗಿಯೇ ರಾಜನ ಮೇಲೆ, ಕೃತದ್ಯುತಿಯ ಮೇಲೆ, ಮಗುವಿನ ಮೇಲೆ ಅಸೂಯೆ ಹೆಚ್ಚಾಯಿತು. ರಾಜನು ತೋರಿಸುತ್ತಿರುವ ಈ ಔದಾಸೀನ್ಯಕ್ಕೆ ಹುಟ್ಟಿದ ಈ ಮಗುವೇ ಕಾರಣನಾಗಿದ್ದಾನೆ.

ಆದ್ದರಿಂದ ಈ ಮಗುವನ್ನು ಕೊಂದು ಹಾಕಿದರೆ ರಾಜ ಮತ್ತೆ ನಮ್ಮನ್ನು ಪ್ರೀತಿಯಿಂದ ನೋಡಿಕೊಳ್ಳುತ್ತಾನೆ ಎಂದುಕೊಂಡರು.

ಎಲ್ಲರೂ ಸೇರಿ ವಿಚಾರಿಸಿದರು. ವಿಷವನ್ನು ಮಗುವಿಗೆ ಉಣಿಸಿದರು. ಮರುದಿನ ಬೆಳಗಾಯಿತು. ಸೂರ್ಯೋದಯವಾಯಿತು. ಮಗುವಿನ ಗದ್ದಲ ಕೇಳಿಬರಲಿಲ್ಲ. ಪುತ್ರಸೂರ್ಯನ ಅಸ್ತವಾದದ್ದು ಕೃತದ್ಯುತಿಗೆ ತಿಳಿಯಲಿಲ್ಲ. ಇನ್ನೂ ಮಲಗಿದ್ದಾನೆ ಎಂದೇ ತಿಳಿದಳು. ಗೃಹಕೃತ್ಯದಲ್ಲಿ ತಲ್ಲೀನಳಾದಳು.

ಎಷ್ಟು ಹೊತ್ತಾದರೂ ಮಗು ಏಳಲಿಲ್ಲ. ಕೃತದ್ಯುತಿಗೆ ಸಂದೇಹ ಬಂತು. ಮಗುವನ್ನು ಕರೆತರಲು ಧಾತ್ರಿಗೆ ಹೇಳಿದಳು. ಧಾತ್ರಿಯು ಹೋಗಿ ನೋಡಿದಳು. ಮಗುವಿನ ಶ್ವಾಸೋಚ್ಛ್ವಾಸ ನಿಂತಿತ್ತು. ಹಾಲುಣಿಸುವ ಆ ಧಾತ್ರಿಗೆ ಸಹಜವಾಗಿಯೇ ದುಃಖ ಉಕ್ಕೇರಿತು. ಹತಾऽಸ್ಮಿ ಎಂದು ಚೀರುತ್ತಾ ಮೂರ್ಛಿತಳಾಗಿ ಬಿದ್ದಳು. ಧಾತ್ರಿಯ ಆರ್ತನಾದವನ್ನು ಕೇಳಿ ಕೃತದ್ಯುತಿಯು ಗಾಬರಿಯಾದಳು. ಓಡೋಡಿ ಬಂದಳು. ಮೃತನಾದ ಮಗುವನ್ನು ನೋಡಿದಳು. ಆವಳೂ ಮೂರ್ಛಿತಳಾಗಿ ಬಿದ್ದಳು.

ಅಂತಃಪುರದ ಜನರೆಲ್ಲರೂ ಅಲ್ಲಿ ಸೇರಿದರು. ಯಾರಿಗೂ ಮಗುವಿನ ಮರಣವನ್ನು ಸಹಿಸಲಾಗಲಿಲ್ಲ. ಎಲ್ಲರೂ ದುಃಖಿಸಿದರು. ಕೃತದ್ಯುತಿಯ ಸವತಿಯರೂ ಸುಮ್ಮನೇ ಅತ್ತಂತೆ ನಟಿಸಿದರು. ಚಿತ್ರಕೇತು ಮಗನ ಮರಣದ ವಾರ್ತೆಯನ್ನು ಕೇಳಿದ. ಹದಿನಾಲ್ಕು ಲೋಕಗಳೂ ಕಳಚಿ ತನ್ನ ಮೇಲೆಯೇ ಬಿದ್ದಂತೆ ವರ್ತಿಸಿದ. ಶೋಕಾಶ್ರುಗಳು ತುಂಬಿದ ಕಣ್ಣುಗಳಿಗೆ ದಾರಿ ಕಾಣದಾಯಿತು. ಏಳುತ್ತಾ ಬೀಳುತ್ತಾ ಮಗುವಿದ್ದ ಸ್ಥಳಕ್ಕೆ ಬಂದ. ಮೃತನಾದ ಮಗುವನ್ನು ನೋಡಿದ. ರಾಜನ ಶೋಕ ಅತಿದೀರ್ಘವಾಯಿತು. ಶೋಕದಿಂದ ಕಂಠ ಬಿಗಿಯಿತು. ಮಾತನಾಡಲಾಗಲಿಲ್ಲ.

ಕೃತದ್ಯುತಿಯು ಶೋಕಸಂತಪ್ತನಾದ ಪತಿಯನ್ನು ನೋಡಿದಳು. ಕೂದಲುಗಳನ್ನೆಲ್ಲ ಹರಡಿಕೊಂಡು ರೋದಿಸಿದಳು. ಚಿತ್ರಧಾ ವಿಚಿತ್ರಧಾ ವಿಲಾಪಿಸಿದಳು. ಹೇ ವಿಧಾತನೇ ! ನೀನು ಬಾಲಿಶನಾಗಿರುವಿ. ಮೊದಲಿಗೆ ಜನಿಸಿದ ತಂದೆ-ತಾಯಿಗಳು ಇರುವಾಗಲೇ ನಂತರ ಹುಟ್ಟಿದ ಮಕ್ಕಳನ್ನು ಕಟುಕನಂತೆ ಸಂಹರಿಸುತ್ತಿ. ಇದು ನಿನ್ನ ಮೌಢ್ಯವೇ ಆಗಿದೆ. ಇದಕ್ಕೆ ವಿಪರೀತವಾಗಿ ಮೊದಲು ಹುಟ್ಟಿದವರನ್ನು ಮೊದಲು ಸಂಹರಿಸಿ, ನಂತರ ಹುಟ್ಟಿದವರನ್ನು ನಂತರ ಸಂಹರಿಸಿದ್ದರೇ ನೀನು ಪ್ರಾಜ್ಞನಾಗುತ್ತಿದ್ದಿ. ಈಗ ನಾನೇನು ಮಾಡಲಿ. ಹೇಗೆ ದಿವಸಗಳನ್ನು ಕಳೆಯಲಿ?

ಮಗೂ ! ಕೃಪಣಳಾದ ನನ್ನನ್ನು ಬಿಟ್ಟು ಹೋದೆಯಲ್ಲಾ? ನಿನ್ನ ದೀರ್ಘವಾದ ಈ ವಿರಹದಿಂದ ಪರಿತಪ್ತನಾದ ತಂದೆಯನ್ನು ನೋಡು. ಏಳು. ಎದ್ದೇಳು. ನಿರ್ದಯಿಯಾದ ಯಮನೊಡನೆ ದೂರ ದೂರ ಹೋಗಬೇಡ. ನಮ್ಮ ಹತ್ತಿರವೇ ಬಾ. ನಿನ್ನ ಜೊತೆಗಾರರು ಬಂದು ಆಟಾಡುವುದಕ್ಕೆ ನಿನ್ನನ್ನು ಕರೆಯುತ್ತಿದ್ದಾರೆ. ನಿನಗಾಗಿ ಕಾಯುತ್ತಿದ್ದಾರೆ. ಏಳು ಅವರ ಜೊತೆ ಆಟವಾಡು. ನೀನು ಹಸಿದಿರುವಿ. ಹಾಲು ಕೊಡುತ್ತೇನೆ. ಏಳು ಹಾಲನ್ನು ಕುಡಿದು ಮತ್ತೆ ಮಲಗು. ಅವ್ಯಕ್ತವಾದ ಮಧುರವಾದ ನಿನ್ನ ಮಾತುಗಳು ಮಾತೆಯಾದ ನನಗೆ ಕೇಳಿಸುತ್ತಿಲ್ಲ ಮಾತನಾಡು. ನಮ್ಮ ಶೋಕವನ್ನು ಪರಿಹಾರ ಮಾಡು. ಅಥವಾ ನಮ್ಮ ಈ ಶೋಕ ನಮ್ಮ ಈ ರೋದನ ನಿನಗೆ ಕೇಳಿಸುತ್ತಿಲ್ಲವೇ? ಅಯ್ಯೋ ! ನಿರ್ದಯಿಯಾದ ಯಮ ನಿನ್ನನ್ನು ದೂರ ಕರೆದುಕೊಂಡು ಹೋಗಿಬಿಟ್ಟನೇ? ನಾನೀಗ ಏನು ಮಾಡಲಿ. ಮಗುವಿಲ್ಲದೇ ಹೇಗೆ ಬಾಳಲಿ?

ಶುಕಾಚಾರ್ಯರು ಹೇಳಿದರು. ಕೃತದ್ಯುತಿಯು ಮೃತನಾದ ಮಗುವನ್ನು ನೋಡಿ ಚಿತ್ರ-ವಿಚಿತ್ರವಾಗಿ ರೋದಿಸಿದಳು. ಪ್ರೀತಿಯ ಮಗನ ಮರಣ, ಪ್ರಿಯೆಯಾದ ಕೃತದ್ಯುತಿಯ ಶೋಕ ಈ ಎರಡು ಶೋಕಗಳ ಮಧ್ಯದಲ್ಲಿ ರಾಜ ಸಿಕ್ಕಿಕೊಂಡಿದ್ದ. ಗಾಯದ ಮೇಲೆ ಬರೆ ಎಳೆದಂತೆ ರಾಜನ ಪರಿಸ್ಥಿತಿಯಾಯಿತು.

ತಾನು ಎಷ್ಟೇ ಗಂಭೀರನಾಗಿದ್ದರೂ ಮುಕ್ತಕಂಠದಿಂದ ಚಿತ್ರಕೇತು ರೋದಿಸಿದ. ರಾಜದಂಪತಿಗಳು ರೋದಿಸುತ್ತಲೇ ಮತ್ತೆ ಮೂರ್ಛಿತರಾದರು. ಇದನ್ನು ಕಂಡು ಎಲ್ಲ ಅಂತಃಪುರವೂ ಶೋಕದಲ್ಲಿ ಮುಳುಗಿಹೋಯಿತು. ಚಿತ್ರಕೇತುವಿನ ವೃತ್ತಾಂತವನ್ನು ಅಂಗಿರಸರು ಯೋಗದೃಷ್ಟಿಯಿಂದ ತಿಳಿದರು. ನಾರದರಿಂದ ಕೂಡಿಕೊಂಡು ಶೂರಸೇನದೇಶಕ್ಕೆ ಪ್ರಯಾಣ ಬೆಳಸಿದರು.

★★★★★




**ಟಿಪ್ಪ-** ಇನ್ನು ಮುಂದೆ ನಾಲ್ಕು ಅಧ್ಯಾಯಗಳಲ್ಲಿ ಚಿತ್ರಕೇತುವಿನ ಹಿಂದಿನ ಇತಿಹಾಸ ಹೇಳುವರು. ಮಡದಿ-ಮಕ್ಕಳಲ್ಲಿ ಮಮತೆಯು ಚಿತ್ರಕೇತುವಿನಂತೆ ದುಃಖಕ್ಕೆ ಕಾರಣವಾಗುವದು. ಆದ್ದರಿಂದ ಜ್ಞಾನಾಪೇಕ್ಷಿಗಳು ಮಮತೆಯನ್ನು ತ್ಯಜಿಸಬೇಕು ಎಂದು ಈ ಅಧ್ಯಾಯದಲ್ಲಿ ಹೇಳುವರು. 'ಅಹಂ ಹರೇ ತವ ಪಾದೈಕಮೂಲ-ದಾಸಾನುದಾಸೋ ಭವಿತಾಽಸ್ಮಿ ಭೂಯಃ' ಮುಂತಾದ ವೃತ್ರನ ಮಾತುಗಳನ್ನು ವಿಚಾರ ಮಾಡಿದರೆ ಅವನು ಭಗವದ್ಭಕ್ತನೆಂದು ತೋರುವುದು. ಭಕ್ತತ್ವವು ಎರಡು ವಿಧ. ನಾರಾಯಣಾಯನತ್ವ ನಾರಾಯಣಪರಾಯಣತ್ವ ಎಂದು. ವೃತ್ರನು ಅಸುರಜಾತಿಯವನಾದ್ದರಿಂದ ಎರಡೂ ಸಾಧ್ಯವಿಲ್ಲ ಎಂಬ ಅಭಿಪ್ರಾಯದಿಂದ ಏಳು ಶ್ಲೋಕಗಳಿಂದ ಪ್ರಶ್ನಿಸುವನು .

ಈ ಅಧ್ಯಾಯದಲ್ಲಿ ವೃತ್ರನ ಚರಿತ್ರೆಯನ್ನು ಪರೀಕ್ಷಿತರು ಕೇಳುತ್ತಿದ್ದಾರೆ. ವೃತ್ರ ಸ್ವಭಾವತಃ ಅಸುರನಲ್ಲಿ. ಭಗವದ್ಭಕ್ತ ಎಂದು ಪರೀಕ್ಷಿತರಿಗೆ ತಿಳಿದ ವಿಷಯವೇ ಆಗಿದೆ. ಆದರೆ ಆ ಸಭೆಯಲ್ಲಿ ಕುಳಿತ ಅನೇಕ ಜನರಿಗೆ ವೃತ್ರನ ಬಗ್ಗೆ ಸಂದೇಹವಿದೆ. ಅಸುರನಿಗೆ ಈ ವಿಧವಾದ ಭಗವದ್ಭಕ್ತಿ ಬಂದದ್ದು ಹೇಗೆ ಎಂಬ ಸಂದೇಹ ಅವರಿಗೆಲ್ಲ ಇದೆ. ಆ ಎಲ್ಲ ಸಾಧುಜನರ ಸಂದೇಹವನ್ನು ಪರಿಹರಿಸುವ ಉದ್ದೇಶದಿಂದಲೇ ಶುಕಾಚಾರ್ಯರಿಗೆ ಈ ರೀತಿಯಾಗಿ ಪರೀಕ್ಷಿತನು ಪ್ರಶ್ನಿಸುತ್ತಿದ್ದಾನೆ. ಈ ವಿಷಯವನ್ನೇ ಇಲ್ಲಿ ಹೇಳುತ್ತಿದ್ದಾರೆ.

**ಪರೀಕ್ಷಿದುವಾಚ -**

> **ರಜಸ್ತಮಃಸ್ವಭಾವಸ್ಯ ಬ್ರಹ್ಮನ್ ವೃತ್ರಸ್ಯ ಪಾಪ್ಮನಃ ।**
> **ನಾರಾಯಣೇ ಭಗವತಿ ಕಥಮಾಸೀದ್ ದೃಢಾ ರತಿಃ ॥೧॥**

**ಬ್ರಹ್ಮನ್** ಶುಕಾಚಾರ್ಯರೇ **ರಜಸ್ತಮಃಸ್ವಭಾವಸ್ಯ** ರಾಜಸ-ತಾಮಸ ಸ್ವಭಾವದ ಅಸುರಜಾತಿಯವನಾದ ಆದ್ದರಿಂದಲೇ **ಪಾಪ್ಮನಃ ವೃತ್ರಸ್ಯ** ಪಾಪಿಯಾದ ವೃತ್ರನಿಗೆ ಅಥವಾ ಪಾಪದಿಂದಲೇ ರಜಸ್ತಮಸ್ವಭಾವದವನೆಂದು ತಿಳಿಯಲ್ಪಟ್ಟ ವೃತ್ರನಿಗೆ **ಭಗವತಿ ನಾರಾಯಣೇ** ಐಶ್ವರ್ಯಶಾಲಿಯಾದ ನಾರಾಯಣನಲ್ಲಿ **ದೃಢಾ ರತಿಃ** ಅತಿಶಯ ಭಕ್ತಿಯು **ಕಥಂ ಆಸೀತ್** ಹೇಗೆ ಹುಟ್ಟಿತು. ॥೧॥

ದೇವತೆಗಳಿಗೆ ದುರ್ಲಭವಾದುದು ಭಕ್ತಿ. ಅಂದಮೇಲೆ ಇವನಿಗೆ ದುರ್ಲಭವೆಂದೇನು ಹೇಳಬೇಕಿಲ್ಲ ಎಂಬ ಅಭಿಪ್ರಾಯದಿಂದ ಹೇಳುವರು-

**ದೇವಾನಾಂ ಶುದ್ಧಸತ್ತ್ವಾನಾಮೃಷೀಣಾಂ ಚಾಽಮಲಾತ್ಮನಾಮ್ ।**
**ಭಕ್ತಿರ್ಮುಕುಂದಚರಣೇ ನ ಪ್ರಾಯೇಣೋಪಜಾಯತೇ ॥೨॥**

**ಶುದ್ಧಸತ್ತ್ವಾನಾಂ** ಶುದ್ಧಸ್ವಭಾವದ ಹೆಚ್ಚು ಸತ್ತ್ವ ಗುಣದಿಂದ ನಿರ್ಮಿತವಾದ ಶರೀರವುಳ್ಳ ಆದ್ದರಿಂದಲೇ **ಅಮಲಾತ್ಮನಾಂ** ನಿರ್ಮಲವಾದ ಮನಸ್ಸುಳ್ಳ ತಪಸ್ಸಿನಿಂದ ಮನೋದೋಷವನ್ನು ಕಳೆದುಕೊಂಡ **ದೇವಾನಾಂ** ದೇವತೆಗಳಿಗೂ **ಋಷೀಣಾಂ ಚ** ಋಷಿಗಳಿಗೂ **ಮುಕುಂದಚರಣೇ** ಶ್ರೀಹರಿಯ ಪಾದಾರವಿಂದಗಳಲ್ಲಿ **ಭಕ್ತಿಃ** ಭಕ್ತಿಯು ನಾರಾಯಣ ಪರಾಯಣತೆಯು **ಪ್ರಾಯೇಣ** ಬಹಳವಾಗಿ ಬ್ರಹ್ಮಾದಿ ಕೆಲವರನ್ನು ಬಿಟ್ಟು **ನ ಉಪಜಾಯತೇ** ಹುಟ್ಟಲಾರದು. ಅಥವಾ **ದೇವಾನಾಂ ಭಕ್ತಿಃ ಉಪಜಾಯತೇ ನ** ದೇವತೆಗಳಿಗೆ ಭಕ್ತಿಯು ಹುಟ್ಟುವಂತೆ **ದೃಢಾ ರತಿಃ ಆಸೀತ್** ದೃಢಭಕ್ತಿ ಜನಿಸಿತು ಹೀಗೂ ಅರ್ಥ. 'ಚಕ್ರಂ ನ' ಎಂಬಲ್ಲಿಯಂತೆ ನ ಎಂಬುದು ಇವ ಎಂಬರ್ಥದಲ್ಲಿದೆ. ಮುಂದೆ ಹೇಳುವ ಉತ್ತರದಲ್ಲಿ ರುಚಿಯನ್ನು ಹುಟ್ಟಿಸಲು ಅಥವಾ ಬಹಳ ಆಶ್ಚರ್ಯತೆಯನ್ನು ತಿಳಿಸಲು 'ಪ್ರಾಯೇಣ ನ ಜಾಯತೇ' ಎಂದು ಹೇಳಿದ್ದಾರೆ ಎಂದು ಶ್ರೀ ಸತ್ಯಧರ್ಮರು ಹೇಳುತ್ತಾರೆ.

ಇಲ್ಲಿ ವಿಜಯಧ್ವಜತೀರ್ಥರು ಪ್ರಾಯಃ ಶಬ್ದದ ಸ್ವಾರಸ್ಯವನ್ನು ಹೀಗೆ ವಿವರಿಸುವರು. ದೇವತೆಗಳೂ ಋಷಿಗಳೂ ನಿರಂತರ ಭಕ್ತಿಯನ್ನು ಮಾಡಲು ಯೋಗ್ಯರು. ಆದರೆ ಆಗಾಗ ಅಸುರಾವೇಶದಿಂದ ದ್ವೇಷವನ್ನು ಮಾಡುವರು. ಹೀಗೆ ಮಾಡದಿದ್ದರೆ 'ಶುದ್ಧಸತ್ತ್ವಾನಾಂ' ಮುಂತಾದ ವಿಶೇಷಣಗಳಿಂದ ಕೂಡಿದ 'ದೇವಾನಾಂ ಗುಣಲಿಂಗಾನಾಂ' ಮುಂತಾಗಿ ಮುಂದೆ ಹೇಳುವ ಆತ್ಯಂತಿಕ ಭಕ್ತಿ ಲಕ್ಷಣವು ಅಸಂಗತವಾಗುವದು. ಆದ್ದರಿಂದ ಪ್ರಾಯಃ ಶಬ್ದಕ್ಕೆ ಬಹು ಎಂದರ್ಥವಿದ್ದರೂ ಇಲ್ಲಿ ಅಲ್ಪವೆಂದರ್ಥವನ್ನು ಅಂಗೀಕರಿಸಬೇಕು. ಅಥವಾ ಮುಂದಿನ ಪ್ರಮಾಣಾನುಸಾರ ಭಕ್ತಿ ಮಾಡುವದು ದುರ್ಲಭವೆಂದು ತಿಳಿಸಲು ಹಾಗೆ ಹೇಳಿರುವರು. ದೇವತೆಗಳಲ್ಲಿಯೂ, ಋಷಿಗಳಲ್ಲಿಯೂ ಹರಿಭಕ್ತಿ ಇಲ್ಲವೆಂದು, ಅಥವಾ ಭಕ್ತರು ಬಹಳ ಇರುವದರಿಂದ ಭಕ್ತಿಯ ತಾರತಮ್ಯವನ್ನು ತಿಳಿಸಲು ಹಾಗೆ ಹೇಳಿರುವರು. ಇದರಿಂದ ವೃತ್ರನಿಗೆ ನಾರಾಯಣಪರಾಯಣತೆ ಅಸಂಭಾವಿತ ಎಂದು ಹೇಳಿದಂತಾಯಿತು. ॥೨॥

**ರಜೋಭಿಃ ಸಮಸಂಖ್ಯಾತಾಃ ಪಾರ್ಥಿವೈರಿಹ ಜಂತವಃ ।**
**ತೇಷಾಂ ಯೇ ಕೇಚನೇಹಂತೇ ಶ್ರೇಯೋ ವೈ ಮನುಜಾದಯಃ ॥೩॥**

**ಇಹ** ಕರ್ಮಭೂಮಿಯಲ್ಲಿ **ಜಂತವಃ** ಜೀವರು ಶರೀರ ಉಳ್ಳವರು ಮತ್ತು ಶರೀರವಿಲ್ಲದವರು **ಪಾರ್ಥಿವೈಃ** ಪೃಥಿವಿಯ **ರಜೋಭಿಃ** ಧೂಳುಗಳಿಗೆ **ಸಮಸಂಖ್ಯಾತಾಃ** ಸಮಾನವಾದ ಅನಂತ ಸಂಖ್ಯಾ ಉಳ್ಳವರಾಗಿರುವರು, ಭೂಮಿಯ ಧೂಳುಗಳೆಷ್ಟಿವೆಯೋ ಅಷ್ಟು ಶರೀರವಿಶಿಷ್ಟರು ಇರುವರು. ಶರೀರವಿಲ್ಲದ ಬೇರೆ ಜೀವರೂ ಅನಂತವಾಗಿರುವರು. 'ಪರಮಾಣುಪ್ರದೇಶೇಽಪಿ ಹ್ಯನಂತಾ ಜೀವರಾಶಯಃ' ಎಂದು ಶ್ರುತಿಯಿದೆ. ಅವರನ್ನು ಪರಿಗಣಿಸಿಲ್ಲ. ಶರೀರ ಉಳ್ಳವರನ್ನೇ ಇಲ್ಲಿ ಹೇಳುವರು. **ತೇಷಾಂ** ಅವರಲ್ಲಿ, **ಯೇ ಕೇಚನ** ಕೆಲವರು **ಮನುಜಾದಯಃ** ಮನುಷ್ಯ ಮುಂತಾದವರು **ಶ್ರೇಯಃ** ಸ್ವರ್ಗ ಮೊದಲಾದ ಶ್ರೇಯಸ್ಸಿಗಾಗಿ **ಈಹಂತೇ** ಪ್ರಯತ್ನಿಸುವರು. **ವೈ** 'ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ' ಎಂಬ ಪ್ರಮಾಣವಚನವು ಇದೇ ವಿಷಯವನ್ನು ತಿಳಿಸುತ್ತದೆ. ಅಥವಾ ಬಯಸುವವರಲ್ಲಿಯೂ ವಿಶೇಷವನ್ನು ತೋರಿಸಿರುವರು. ಮನುಷ್ಯ ಮೊದಲಾದವರೇ ಧರ್ಮ ಮಾಡುವರು. ಅಸುರರು ಧರ್ಮ ಮಾಡುವದಿಲ್ಲ. ವಿಜಯಧ್ವಜರು ಈ ರೀತಿಯಾಗಿ ವ್ಯಾಖ್ಯಾನಿಸಿದ್ದಾರೆ.

ಸತ್ಯಧರ್ಮರು ಈ ರೀತಿಯಾಗಿ ವ್ಯಾಖ್ಯಾನಿಸುತ್ತಾರೆ. ರಜಃ ಶಬ್ದದಿಂದ ಪರಮಾಣುಗಳನ್ನು ಸ್ವೀಕರಿಸಿ ಪಾರ್ಥಿವ ಶಬ್ದದಿಂದ ಉಪಲಕ್ಷಣಯಾ ಜಲಾದಿಗಳನ್ನು ತೆಗೆದುಕೊಂಡು ಅಂತೂ ಎಲ್ಲ ಪರಮಾಣುಗಳು ಎಣಿಸಿದರೆ ಏನು ಸಂಖ್ಯೆ ಬರುವದೋ ಅದಕ್ಕಿಂತ **ಸಂ** ಅತ್ಯಂತ, **ಅಸಂಖ್ಯಾತಾಃ** ಎಣಿಸಲಾಗದ, **ಜಂತವಃ** ಪ್ರಾಣಿಗಳು ಸೃಷ್ಟವಾದವು. ಸೃಜ್ಯವಾದವು. **ಇಹ** ಸೃಷ್ಟವಾದವುಗಳಲ್ಲಿ ಕೆಲವು ಮನುಷ್ಯಾದಿಗಳು ಪ್ರಯತ್ನಿಸುವರು. **ಕೇಚನ** ಸ್ವಲ್ಪ ಜನರು, 'ಪರಮಾಣುಪ್ರದೇಶೇಽಪಿ ಹ್ಯನಂತಾಃ ಪ್ರಾಣಿರಾಶಯಃ' 'ಇತ್ಯಾಮ್ನಾತಾಃ ಸದೇಹಾಃ ಅತೀತಾನಾಗತಾಶ್ಚೈವ ಯಾವಂತಃ ಪರಮಾಣವಃ । ತತೋಽಪ್ಯನಂತಗುಣಿತಾ ಜೀವಾನಾಂ ರಾಶಯಃ ಪೃಥಕ್' ಎಂದು ಹೇಳಿದವರು ನಿಶ್ಶರೀರ ಜೀವರಾಶಿಗಳು ಎಂದು ವಿವೇಕ. 'ನಿರ್ದೇಹಕಾನ್ ಸ ಭಗವಾನನಿರುದ್ಧನಾಮಾ' ಎಂದು ಆಚಾರ್ಯರು ಹೇಳಿರುವರು.

**ಪ್ರಾಯೋ ಮುಮುಕ್ಷವಸ್ತೇಷಾಂ ಕೇಚನೇಹ ದ್ವಿಜೋತ್ತಮಾಃ ।**
**ಮುಮುಕ್ಷೂಣಾಂ ಸಹಸ್ರೇಷು ಕಶ್ಚಿನ್ಮುಚ್ಯೇತ ಸಿಧ್ಯತಿ ॥೪॥**

**ತೇಷಾಂ** ಸ್ವರ್ಗಾದಿಗಳು ಕ್ಷಣದಲ್ಲಿ ನಾಶವಾಗುವ ಸುಖವುಳ್ಳಗಳೆಂದು ತಿಳಿದು ಪ್ರವೃತ್ತರಾಗುವ ಮನುಷ್ಯರೇ ಮೊದಲಾದ ಜೀವರಾಶಿಗಳಲ್ಲಿ ಇಹ ಜಗತ್ತಿನಲ್ಲಿ ಪ್ರಾಯಃ

ಬಹಳವಾಗಿ **ಕೇಚನ** ಕೆಲವರೇ **ಮುಮುಕ್ಷವಃ** ಮೋಕ್ಷಾಪೇಕ್ಷಿಗಳು ಅಥವಾ, **ಪ್ರಾಯಃ ಅಮುಮುಕ್ಷವಃ** ಎಂದೂ ಪದಚ್ಛೇದ ಮಾಡಬಹುದು. **ತೇಷಾಂ** ಮನುಷ್ಯರೇ ಮೊದಲಾದವರ ಮಧ್ಯದಲ್ಲಿ **ಅಮುಮುಕ್ಷವಃ** ಮೋಕ್ಷೇಚ್ಛೆ ಇಲ್ಲದವರೇ **ಪ್ರಾಯಃ** ಬಹುಮಂದಿ **ಕೇಚನ** ಕೆಲವರು ಮಾತ್ರ **ಮುಮುಕ್ಷವಃ** ಮೋಕ್ಷೇಚ್ಛುಗಳು **ಹೇ ದ್ವಿಜೋತ್ತಮಾಃ** ಬ್ರಾಹ್ಮಣಶ್ರೇಷ್ಠರೇ **ತೇಷಾಂ ಮಧ್ಯೇ** ಮೋಕ್ಷವನ್ನು ಅಪೇಕ್ಷಿಸುವವರಲ್ಲಿಯೂ **ಕೇಚನ** ಕೆಲವರೇ **ಪ್ರಯತಂತೇ** ಮೋಕ್ಷ ಹೊಂದಲು ಪ್ರಯತ್ನಿಸುವರು. **ತೇಷು ಸಹಸ್ರೇಷು** ಹಾಗೆ ಪ್ರಯತ್ನಿಸುವ ಸಾವಿರಾರು ಅಧಿಕಾರಿಗಳಲ್ಲಿ **ಕಶ್ಚಿತ್** ಯಾವನೋ ಒಬ್ಬನು, **ಮುಚ್ಯೇತ** ಮುಕ್ತನಾಗುವನು , **ತತ್ರಾಽಪಿ** ಸಂಸಾರದಿಂದ ಮುಕ್ತರಾದವರಲ್ಲಿಯೂ ಅಂದರೆ ಮತ್ತೆ ಜನ್ಮಾದಿಗಳನ್ನು ಹೊಂದದೆ ಜ್ಞಾನಾನಂದಾದಿ ಪೂರ್ಣತೆಯನ್ನೂ ಪಡೆಯದೇ ಇರುವ ಜೀವನ್ಮುಕ್ತರಲ್ಲಿ **ಕಶ್ಚಿತ್** ಏವ ಪೂರ್ಣ ಜ್ಞಾನಿಯೇ **ಸಿದ್ಧ್ಯತಿ** ಆನಂದಾದಿಗಳಿಂದ ಪೂರ್ಣನಾಗುವನು. ಇಲ್ಲಿ **ಮುಮುಕ್ಷವಃ** ಎಂಬುದಕ್ಕೆ ಜೀವನ್ಮುಕ್ತೀಚ್ಛೆ ಎಂದರ್ಥ ಮಾಡಿ **ಮುಚ್ಯೇತ** ಜೀವನ್ಮುಕ್ತರಾಗುವರು ಎಂದೂ ಅರ್ಥಮಾಡಿ ಅಜೀವನ್ಮುಕ್ತರೆಲ್ಲರೂ **ಸಿದ್ಧ್ಯತಿ** ತಮಗೆ ಯೋಗ್ಯವಾದ ಆನಂದ ಹೊಂದುವರು ಎಂದು ಅರ್ಥವನ್ನು ಹೇಳಬೇಕು.

ಅಥವಾ **ತೇಷಾಂ ಮಧ್ಯೇ** ಮನುಷ್ಯರಲ್ಲಿಯೂ **ಕೇಚನ ದ್ವಿಜೋತ್ತಮಾಃ** ಕೆಲವು ಬ್ರಾಹ್ಮಣ ಶ್ರೇಷ್ಠರು **ಇಹ** ಸಂಸಾರದಲ್ಲಿ **ಮುಮುಕ್ಷವಃ** ಮುಕ್ತಿಯನ್ನು ಇಚ್ಛಿಸುವವರು, 'ಮುಮುಕ್ಷೂಣಾಂ ಸಹಸ್ರೇಷು ಕಶ್ಚಿದೇವ ಸಿದ್ಧ್ಯತಿ' ಮೋಕ್ಷೇಚ್ಛುಗಳಲ್ಲಿ ಯಾವನೊ ಒಬ್ಬನು ಜ್ಞಾನಿಯಾಗುವನು ಮತ್ತು **ಮುಚ್ಯೇತ** ಮುಕ್ತನಾಗುವನು ಅಥವಾ **ಮುಚ್ಯೇತ** ಲಿಂಗಶರೀರದಿಂದ ಮುಕ್ತನಾಗುವನು. ಸಿದ್ಧ್ಯತಿ ಸಹಸ್ರೇಷು ಎಂಬ ಪದದಿಂದ 'ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ । ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ । ಎಂಬ ಗೀತೆಯನ್ನು ಜ್ಞಾಪಿಸುವರು.

**ಮುಕ್ತಾನಾಮಪಿ ಸಿದ್ಧಾನಾಂ ನಾರಾಯಣಪರಾಯಣಃ ।**
**ಸುದುರ್ಲಭಃ ಪ್ರಶಾಂತಾತ್ಮಾ ಕೋಟಿಷ್ವಪಿ ಮಹಾಮುನೇ ॥೫॥**

**ಹೇ ಮಹಾಮುನೇ** ಮಹರ್ಷಿಗಳೇ **ಸಿದ್ಧಾನಾಂ** ಆನಂದಪೂರ್ಣರಾದ **ಮುಕ್ತಾನಾಂ ಮಧ್ಯೇ ಅಪಿ** ಮುಕ್ತರಲ್ಲಿಯೂ **ನಾರಾಯಣಪರಾಯಣಃ** ನಾರಾಯಣನೇ ಆಶ್ರಯನಾಗಿ ಉಳ್ಳವನು **ಸುದುರ್ಲಭಃ** ಅತ್ಯಂತ ದುರ್ಲಭನು, **(ನಾರಾಯಣಾಯ-ನಾನಾಂ) ಕೋಟಿಷು ಅಪಿ** ಆ ನಾರಾಯಣಾಶ್ರಯರಾದವರ ಕೋಟಿಗಳಲ್ಲಿಯೂ

**ಪ್ರಶಾಂತಾತ್ಮಾ** ಪ್ರಕೃಷ್ಟ ಭಗವನ್ನಿಷ್ಠೆಯಿಂದ ಕೂಡಿದ ಮನಸ್ಸುಳ್ಳ, ಪ್ರಕೃಷ್ಟಾನಂದ-ರೂಪನಾದ, **ನಾರಾಯಣಪರಾಯಣಃ** ನಾರಾಯಣನಲ್ಲಿಯೇ ಆಸಕ್ತನಾದವನು **ಸುದುರ್ಲಭಃ** ಅತ್ಯಂತ ದುರ್ಲಭನು ಎಂದರ್ಥ. ।।೫।।

**ವಿಶೇಷಾರ್ಥ**

ಸಿದ್ಧರಾದವರೆಲ್ಲರೂ ನಾರಾಯಣಾಯನರು ಮತ್ತು ಶಾಂತಾತ್ಮರು, ಭಕ್ತಿಪೂರ್ಣರು. ಸಿದ್ಧರಾದ ಮುಕ್ತರಲ್ಲಿಯೂ ನಾರಾಯಣಪರಾಯಣರು, ಪ್ರಶಾಂತಾತ್ಮರು, ಸುದುರ್ಲಭರೆಂದು ತಿಳಿಯಬೇಕು. ಪರ ಮತ್ತು ಪ್ರ ಉಪಸರ್ಗಗಳ ಸ್ವಾರಸ್ಯದಿಂದ ಬ್ರಹ್ಮಾದಿಗಳು ಕೆಲವರು ಮಾತ್ರ ನಾರಾಯಣಪರಾಯಣರು. ಮತ್ತು ಪ್ರಶಾಂತಾತ್ಮರು. ಇದೇ ಅರ್ಥವನ್ನೇ ಗೀತೆಯಲ್ಲಿ 'ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ' ಮುಂತಾಗಿ ಹೇಳಿದೆ. ಬ್ರಾಹ್ಮದಲ್ಲಿಯೂ ಇದೇ ವಿಷಯವನ್ನು ಹೇಳಿದ್ದಾರೆ.

ಅನಂತಾನಾಂ ತು ಜೀವಾನಾಂ ಯತಂತೇ ಕೇಚಿದೇವ ತು ।
ಮುಕ್ತ್ಯೈ ತೇಷು ತು ಮುಚ್ಯಂತೇ ಕೇಚಿನ್ಮುಕ್ತೇಷು ಚ ಸ್ಫುಟಮ್ ।।

ಕೇಚನ್ನೈವ ಹರಿಂ ಸಮ್ಯಕ್ ಬ್ರಹ್ಮರುದ್ರಾದಯೋ ವಿದುಃ ।
ಅನ್ಯೇಷಾಂ ಯಾವತಾ ಮುಕ್ತಿಸ್ತಾವತ್ ಜ್ಞಾನಂ ಹರೌ ಪರಮ್ ।।

ಸತ್ತತ್ವದಲ್ಲಿಯೂ ಈ ವಿಷಯವನ್ನು ತಿಳಿಸಿದ್ದಾರೆ.

ಸರ್ವೇ ಮುಕ್ತಾ ಹರೌ ಭಕ್ತಾಸ್ತೇಷು ಬ್ರಹ್ಮೈವ ಮುಖ್ಯತಃ ।
ವಿಷ್ಣೋಃ ಪರಮಭಕ್ತಸ್ತು ತಸ್ಮಾಜ್ಜೀವಘನೋ ಮತಃ ।।

ತಾತ್ಪರ್ಯ

ನವಕೋಟ್ಯಸ್ತು ದೇವಾನಾಂ ಋಷಯಃ ಶತಕೋಟಯಃ ।
ನಾರಾಯಣಾಯನಾಃ ಸರ್ವೇ ಯೇ ಕೇಚಿತ್ ತತ್ಪರಾಯಣಾಃ ।।

ನಾರಾಯಣಾಯನಾ ದೇವಾ ಋಷ್ಯಾದ್ಯಾಸ್ತತ್ಪರಾಯಣಾಃ ।
ಬ್ರಹ್ಮಾದ್ಯಾಃ ಕೇಚನ್ನೈವ ಸ್ಯುಃ ಸಿದ್ಧೋ ಯೋಗ್ಯಸುಖಂ ಲಭನ್ ।।
-ಇತಿ ತಂತ್ರಭಾಗವತೇ

ತಂತ್ರಭಾಗವತದಲ್ಲಿ ಈ ವಿಷಯವನ್ನು ಪ್ರತಿಪಾದಿಸುವ ಪ್ರಮಾಣಗಳನ್ನು ಉದಾಹರಿಸಿದ್ದಾರೆ. ಇದನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಜಯತೀರ್ಥ

ಶ್ರೀಮಚ್ಚರಣರು, ಗೀತಾತಾತ್ಪರ್ಯ ಟೀಕೆಯಲ್ಲಿ ಜೀವನ್ಮುಕ್ತರೆಲ್ಲರಿಗೂ ಸಿದ್ಧಿ ಪದದಿಂದ ಹೇಳಿದ ಮುಕ್ತಿಯಾಗುವದು. ನಾರಾಯಣನ ಜ್ಞಾನ ಉಳ್ಳವರಾದ್ದರಿಂದ ಸಿದ್ಧಿಯನ್ನು ಹೊಂದಿದ ಎಲ್ಲರೂ ನಾರಯಣಾಯನರೇ ಆಗಿದ್ದಾರೆ. ನಾರಾಯಣಪರಾಯಣರು ಮಾತ್ರ ದುರ್ಲಭರು ಎಂದಿರುವರು.

ಅನುವ್ಯಾಖ್ಯಾನದಲ್ಲಿ ಮುಕ್ತರ ವೈರಾಗ್ಯ-ಭಕ್ತ್ಯಾದಿ ಸಾಧನತಾರತಮ್ಯವನ್ನು ತಿಳಿಸಲು ಈ ಶ್ಲೋಕವನ್ನು ಉದಾಹರಿಸುವರು. **ಮುಕ್ತಾನಾಂ** ಶರೀರಾಭಿಮಾನವಿಲ್ಲದ **ಸಿದ್ಧಾನಾಂ** ಕೋಟಿ ಕೋಟಿ ಜ್ಞಾನಿಗಳಲ್ಲಿಯೂ ಕೂಡ ನಾರಾಯಣಪರಾಯಣನೂ, ಪ್ರಶಾಂತಾತ್ಮನೂ **ಸುದುರ್ಲಭಃ** ಎಲ್ಲಿಯೋ ಒಬ್ಬರಿಬ್ಬರು ಮಾತ್ರ ನಾರಾಣಾಯನರೂ, ಪ್ರಶಾಂತಾತ್ಮರೂ ಆಗಿರುವರೆಂದು ಸ್ಪಷ್ಟವಾಗಿ ತಾರತಮ್ಯ ತೋರುವದು. ಇಲ್ಲಿ ಎರಡು ವಿಶೇಷಣಗಳಿಂದ ವೈರಾಗ್ಯ-ಭಕ್ತಿಗಳನ್ನು ಹೇಳಿರುವರು. ಎಂಬುದಾಗಿ ಸುಧಾದಲ್ಲಿ ಬೇರೊಂದು ರೀತಿಯಿಂದ ಈ ಶ್ಲೋಕಕ್ಕೆ ವ್ಯಾಖ್ಯಾನ ಮಾಡಿರುವರು.

ಸನ್ನ್ಯಾಯರತ್ನಾವಳಿಯಲ್ಲಿ 'ಮುಕ್ತರಲ್ಲಿ ಯಾರು ಉದ್ಯೋಗಾತಿಶಯದಿಂದ ಚೆನ್ನಾಗಿ ವ್ಯಕ್ತವಾದ ಸ್ವಯೋಗ್ಯಾನಂದಸಿದ್ಧರೋ ಅಂಥವರ ಕೋಟಿಗಳಲ್ಲಿಯೂ ನಾರಾಯಣನೊಬ್ಬನನ್ನೇ ಆಶ್ರಯಿಸಿದ ನಾರಾಯಣಪರಾಯಣನು ಸುದುರ್ಲಭ-ನಾದವನು ಯಾವನೋ ಅವನು ಬ್ರಹ್ಮಾದಿ ಜೀವವೇ ಆಗಿರಬೇಕು. ಉಳಿದವರು ನಾರಾಯಣಾಯನರಾಗಿದ್ದಾರೆ. ಈ ಶ್ಲೋಕವು ಜೀವನ್ಮುಕ್ತರ ಜ್ಞಾನಾದಿಗಳ ತಾರತಮ್ಯವನ್ನು ಕೂಡಾ ಹೇಳುತ್ತದೆಂದು ಅನ್ವಯ ಮಾಡಿಕೊಳ್ಳಬೇಕು ಎಂದೂ ಹೇಳಿರುವರು.

ಇಲ್ಲಿ 'ಗತಾಸೂನಗತಾಸೂಂಶ್ಚ' ಎಂಬ ಗೀತಾಶ್ಲೋಕದಲ್ಲಿ ಮಾಡಿಕೊಂಡಂತೆ ಸಿದ್ಧರಲ್ಲಿ ನಾರಾಯಣಪರಾಯಣನು ಹೇಗೆ ದುರ್ಲಭನೋ ಹಾಗೆ ಚೇತನರಲ್ಲಿ ನಾರಾಯಣಾಯನನೂ ದುರ್ಲಭನೆಂದು ಮನಸಾ ವಿಭಾಗ ಮಾಡಿಕೊಂಡು, ದೃಷ್ಟಾಂತ-ದಾರ್ಷ್ಟಾಂತಿಕ ರೀತಿಯಲ್ಲಿ ವ್ಯಾಖ್ಯಾನ ಮಾಡಬೇಕು. ಇಲ್ಲದಿದ್ದರೆ 'ದೇವಾನಾಂ' ಎಂಬ ಹಿಂದಿನ ಶ್ಲೋಕದಿಂದಲೇ ನಾರಾಯಣಪರಾಯಣನು ದುರ್ಲಭನೆಂದು ಉಕ್ತವಾಗಿರುವುದರಿಂದ ಪುನರುಕ್ತವಾಗುತ್ತದೆ. ಮತ್ತು ಪ್ರಕೃತಾನುಪಯುಕ್ತವೂ ಆಗುತ್ತದೆ. ।।೫।।

**ವೃತ್ರಸ್ತು ಸ ಕಥಂ ಪಾಪಃ ಸರ್ವಲೋಕೋಪತಾಪನಃ ।**
**ಇತ್ಥಂ ದೃಢಮತಿಃ ಕೃಷ್ಣ ಆಸೀತ್ಸಂಗ್ರಾಮ ಉಲ್ಬಣೇ ।।೬।।**

**ಸರ್ವಲೋಕೋಪತಾಪನಃ** ಎಲ್ಲ ಜನರನ್ನು ತೊಂದರೆ ಪಡಿಸುವ ಆದ್ದರಿಂದಲೇ **ಪಾಪಃ** ಪಾಪಿಯಾದ **ಸಃ ವೃತ್ರಃ** ಆ ವೃತ್ರಾಸುರನು **ಉಲ್ಬಣೇ ಸಂಗ್ರಾಮೇ** ಎಲ್ಲವನ್ನೂ ಮರೆಸುವಂತಹ ಭಯಂಕರ ಯುದ್ಧದಲ್ಲಿ **ಇತ್ಥಂ** ಮೇಲೆ ಹೇಳಿದಂತೆ **ಕೃಷ್ಣೇ** ಶ್ರೀಹರಿಯಲ್ಲಿ **ದೃಢಮತಿಃ** ಸ್ಥಿರವಾದ ಭಕ್ತಿಯುಳ್ಳವನು **ಕಥಂ ಆಸೀತ್** ಹೇಗೆ ಆದನು. **ತು** ಶಬ್ದದಿಂದ ಇದು ಅತ್ಯಂತ ಅನುಪಪನ್ನ ಎಂದು ತಿಳಿಸುವರು. **ಪಾಪಃ ಸರ್ವಲೋಕೋಪತಾಪನಃ** ಎಂಬ ಎರಡು ವಿಶೇಷಣಗಳಿಂದ ಅನುಪಪನ್ನತೆಯನ್ನು **ಉಲ್ಬಣೇ ಸಂಗ್ರಾಮೇ** ಎಂಬುದರಿಂದ ಮತಿಯ ದೃಢತೆಯನ್ನು ಸಮರ್ಥಿಸಿರುವರು. ಅಲ್ಪಾಧಿಕಾರಿಗಳಿಗೆ ಮಹಾವಿಪತ್ತಿನಲ್ಲಿ ಶ್ರೀಹರಿಯ ಮರುವು ಬರುವದೇ ಅನುಭವಸಿದ್ಧ. ।।೬।।

**ಅತ್ರ ನಃ ಸಂಶಯೋ ಭೂಯಾನ್ ಶ್ರೋತುಂ ಕೌತೂಹಲಂ ಪ್ರಭೋ ।**
**ಯಃ ಪೌರುಷೇಣ ಸಮರೇ ಸಹಸ್ರಾಕ್ಷಮತೋಷಯತ್ ।।೭।।**

**ಯಃ** ಯಾವ ವೃತ್ರನು **ಸಮರೇ** ಯುದ್ಧದಲ್ಲಿ **ಪೌರುಷೇಣ** ಭಗವಂತನ ಸ್ತೋತ್ರದಿಂದ, ಪರಮಾತ್ಮನ ಸ್ನೇಹದಿಂದ, ಪರಾಕ್ರಮದಿಂದ **ಸಹಸ್ರಾಕ್ಷಂ** ಇಂದ್ರದೇವರನ್ನು (ಬಹುಜ್ಞನನ್ನು) **ಅತೋಷಯತ್** ಸಂತೋಷಪಡಿಸಿದನೋ (ಅಹೋ ದಾನವ ಸಿದ್ಧೋಽಸಿ ಎಂದಿದ್ದಾನೆ ಇಂದ್ರ) **ಅತ್ರ** ಅಂತಹ ವೃತ್ರನು ಹರಿಭಕ್ತನೆಂಬ ವಿಷಯದಲ್ಲಿ **ನಃ** ನಮಗೆ **ಭೂಯಾನ್** ಬಹಳ **ಸಂಶಯಃ** ಸಂದೇಹವಿರುವದು. **ಪ್ರಭೋ** ಸಮರ್ಥರಾದ ಶುಕಾಚಾರ್ಯರೇ **ಶ್ರೋತುಂ** ಇದರ ಕಾರಣವನ್ನು ಕೇಳಲು **ಕೌತೂಹಲಂ** ಕೂತುಹಲವು ಇದೆ. ।।೭।।

**ಸೂತ ಉವಾಚ –**

**ಪರೀಕ್ಷಿತೋಽಥ ಸಂಪ್ರಶ್ನಂ ಭಗವಾನ್ ಬಾದರಾಯಣಿಃ ।**
**ನಿಶಮ್ಯ ಶ್ರದ್ದಧಾನಸ್ಯ ಪ್ರತಿನಂದ್ಯ ವಚೋಽಬ್ರವೀತ್ ।।೮।।**

**ಅಥ** ಅನಂತರ **ಭಗವಾನ್** ತ್ರಿಕಾಲಜ್ಞಾನಿಗಳಾದ **ಬಾದರಾಯಣಿಃ** ಶುಕಾಚಾರ್ಯರು **ಶ್ರದ್ದಧಾನಸ್ಯ ಪರೀಕ್ಷಿತಃ** ಶ್ರದ್ಧಾವಂತನಾದ ಪರೀಕ್ಷಿತರಾಜನ **ಸಂಪ್ರಶ್ನಂ** ಆದರ ಪೂರ್ವಕ ಪ್ರಶ್ನೆಯನ್ನೇ **ನಿಶಮ್ಯ** ಕೇಳಿ **ಪ್ರತಿನಂದ್ಯ** ಪ್ರಶಂಸೆ ಮಾಡಿ **ವಚಃ ಅಬ್ರವೀತ್** ಮುಂದೆ ಹೇಳುವ ಮಾತನ್ನಾಡಿದರು. ಮುಂದೆ ಹೇಳುವ ಕಥೆಯಿಂದ ಇವನಿಗೆ ಶಾಪ ನಿಮಿತ್ತ ಅಸುರದೇಹ ಬಂದಿದ್ದರೂ ಸ್ವಾಭಾವಿಕವಾಗಿ ಗಂಧರ್ವರ ಗುಂಪಿಗೆ ಸೇರಿದವನಾದ್ದರಿಂದ ಹರಿಭಕ್ತಿಯು ಯುಕ್ತವೇ ಎಂದು ಅಭಿಪ್ರಾಯ. ।।೮।।

ದೇವತೆಗಳೇ ಶಾಪದಿಂದ ಪ್ರಹ್ಲಾದ ಮೊದಲಾಗಿ ಅಸುರರಾಗಿ ಜನಿಸಿದ್ದಾರೆ. ಆದ್ದರಿಂದ ಅವರಿಗೆ ಭಕ್ತಿಯ ವ್ಯತ್ಯಯವಾಗಿಲ್ಲ. ಇದನ್ನು ತಿಳಿಸಲು ಶುಕಾಚಾರ್ಯರು ವೃತ್ರನ ಪೂರ್ವ ವೃತ್ತಾಂತ ಹೇಳುವರು-

**ಶ್ರೀಶುಕ ಉವಾಚ -**

**ಶೃಣುಷ್ವಾವಹಿತೋ ರಾಜನ್ನಿತಿಹಾಸಂ ಪುರಾತನಮ್ ।**
**ಶ್ರುತಂ ದ್ವೈಪಾಯನಮುಖಾನ್ನಾರದಾದ್ದೇವಲಾದಪಿ ॥೯॥**

ರಾಜನ್ ಪರೀಕ್ಷಿತನೇ **ದ್ವೈಪಾಯನಮುಖಾತ್** ನಮ್ಮ ತಂದೆಗಳಾದ ವೇದವ್ಯಾಸರಿಂದ **ನಾರದಾತ್** ನಾರದರಿಂದ **ಅಪಿ** ಮತ್ತು **ದೇವಲಾತ್** ದೇವಲ ಋಷಿಗಳಿಂದ **ಶ್ರುತಂ** ಕೇಳಲ್ಪಟ್ಟ **ಪುರಾತನಂ** ಹಿಂದೆ ನಡೆದ **ಇತಿಹಾಸಂ** ಚರಿತ್ರೆಯನ್ನು **ಅವಹಿತಃ** ಸಾವಧಾನನಾಗಿ **ಶ್ರುಣುಷ್ವ** ಕೇಳು. ಗಹನ ವಿಷಯ ಒಂದೇ ಸಲ ಕೇಳಿದಾಗ ತಿಳಿಯಲಾರದು. ಕಾರಣ ಮೂರು ಜನರಿಂದ ಕೇಳಿದ್ದು ಎಂದು ಭಾವ. ॥೯॥

**ಆಸೀದ್ರಾಜಾ ಸಾರ್ವಭೌಮಃ ಶೂರಸೇನೇಷು ವೈ ನೃಪಃ ।**
**ಚಿತ್ರಕೇತುರಿತಿ ಖ್ಯಾತೋ ಯಸ್ಯಾಸೀತ್ಕಾಮಧುಙ್ಮಹೀ ॥೧೦॥**

**ನೃಪ** ರಾಜನೇ **ಶೂರಸೇನೇಷು** ಶೂರಸೇನದೇಶದಲ್ಲಿ **ರಾಜಾ** ಪ್ರಜಾರಂಜಕನಾದ **ಚಿತ್ರಕೇತುಃ ಇತಿ ಖ್ಯಾತಃ** ಚಿತ್ರಕೇತು ಎಂಬ ಹೆಸರಿನಿಂದ ಪ್ರಸಿದ್ಧನಾದ **ಸಾರ್ವಭೌಮಃ** ಚಕ್ರವರ್ತಿಯು **ಆಸೀತ್** ಇದ್ದನು. **ಯಸ್ಯ** ಅವನಿಗೆ **ಮಹೀ** ಭೂಮಿಯು **ಕಾಮಧುಜ್** ಅಭೀಷ್ಟದಾಯಕವಾಗಿತ್ತು. ॥೧೦॥

**ತಸ್ಯ ಭಾರ್ಯಾಸಹಸ್ರಾಣಾಂ ಸಹಸ್ರಾಣಿ ದಶಾಭವನ್ ।**
**ಸಾಂತಾನಿಕಶ್ಚಾಪಿ ನೃಪೋ ನ ಲೇಭೇ ತಾಸು ಸಂತತಿಮ್ ॥೧೧॥**

**ತಸ್ಯ** ಆ ರಾಜನಿಗೆ **ಭಾರ್ಯಾಸಹಸ್ರಾಣಾಂ** ಸಾವಿರ ಹೆಂಡತಿಯರ **ದಶಸಹಸ್ರಾಣಿ** ಹತ್ತು ಸಾವಿರಗಳು ಅಂದರೆ ಒಂದು ಕೋಟಿ ಹೆಂಡತಿಯರು **ಅಭವನ್** ಇದ್ದರು. **ನೃಪಃ** ರಾಜನು **ಸಾಂತಾನಿಕಃ** ಸಂತಾನ ಪಡೆಯುವ ಇಚ್ಛೆಯುಳ್ಳವನಾಗಿದ್ದರೂ **ಸ್ವಯಂ** ಸಂತಾನ ಪಡೆಯಲು ಅರ್ಹನಾಗಿದ್ದರೂ ಮಕ್ಕಳನ್ನು ಪಡೆಯಲಿಲ್ಲ. ॥೧೧॥

**ರೂಪೌದಾರ್ಯವಯೋಜನ್ಮವಿದ್ಯೈಶ್ವರ್ಯಶ್ರಿಯಾದಿಭಿಃ ।**
**ಸಂಪನ್ನಸ್ಯ ಗುಣೈಸ್ಸರ್ವೈಶ್ಚಿಂತಾ ವಂಧ್ಯಾಪತೇರಭೂತ್ ॥೧೨॥**

**ರೂಪೌದಾರ್ಯವಯೋಜನ್ಮವಿದ್ಯೈಶ್ವರ್ಯಶ್ರಿಯಾದಿಭಿಃ** ಸೌಂದರ್ಯ, ತಾರುಣ್ಯ, ಒಳ್ಳೆಯ ವಂಶದಲ್ಲಿ ಜನನ, ಜ್ಞಾನ, ಐಶ್ವರ್ಯ ಮತ್ತು ಸಂಪತ್ತು ಮೊದಲಾದ **ಸರ್ವೈಃ ಗುಣೈಃ** ಎಲ್ಲ ಗುಣಗಳಿಂದ **ಸಂಪನ್ನಸ್ಯ** ಯುಕ್ತನಾದ **ವಂಧ್ಯಾಪತೇಃ** ಬಂಜೆಯರ ಗಂಡನಾದ ಆ ರಾಜನಿಗೆ **ಚಿಂತಾ ಅಭೂತ್** ಮಕ್ಕಳಿಲ್ಲವೆಂಬ ಚಿಂತೆಯಾಯಿತು.

**ವಂಧ್ಯಾಪತೇಃ** ಎಂದು ಹೇಳಿದ್ದರಿಂದ ದೈವಯೋಗದಿಂದ ಕೋಟಿ ಜನ ಹೆಂಡತಿಯರೂ ಬಂಜೆಯರೇ ಬಂದು ಸೇರಿದ್ದಾರೆ ಎಂದು ತಿಳಿಯುವದು. ।।೧೨।।

**ನ ತಸ್ಯ ಸಂಪದಃ ಸರ್ವಾ ಮಹಿಷ್ಯೋ ವಾಮಲೋಚನಾಃ ।**
**ಸಾರ್ವಭೌಮಸ್ಯ ಭೂಶ್ಚೇಯಂ ನಾಽಭೂವನ್ ಪ್ರೀತಿಹೇತವಃ ।।೧೩।।**

**ತಸ್ಯ ಸಾರ್ವಭೌಮಸ್ಯ** ಚಕ್ರವರ್ತಿಯಾದ ಆ ಚಿತ್ರಕೇತುವಿಗೆ **ಸರ್ವಾಃ ಸಂಪದಃ** ಎಲ್ಲ ಸಂಪತ್ತುಗಳು **ವಾಮಲೋಚನಾಃ** ಸುಂದರಾಕ್ಷಿಯರಾದ ಸುಂದರಿಯರಾದ **ಸರ್ವಾಃ ಮಹಿಷ್ಯಃ** ಎಲ್ಲ ಹೆಂಡತಿಯರು **ಇಯಂ ಭೂಃ ಚ** ಈ ಭೂಮಿಯು ಕೂಡಾ **ಪ್ರೀತಿಹೇತವಃ** ಪ್ರೀತಿಗೆ ಕಾರಣಗಳು **ನ ಅಭೂವನ್** ಆಗಲಿಲ್ಲ. ಇವುಗಳಿಂದ ಸಂತೋಷವಾಗಲಿಲ್ಲ.

**ನಾಽಭವನ್ ಪ್ರೀತಿಹೇತವಃ** ಎಂಬ ಪಾಠವಿದ್ದಾಗ **ನತಸ್ಯ** ಎಂದರೆ ಸರ್ವನಮಸ್ಕೃತಸ್ಯ ಎಂದರ್ಥ. **ಭೂಶ್ಚೇಯಮಭವನ್** ಎಂಬ ಪಾಠದಲ್ಲಿ ವ್ಯಾಖ್ಯಾನದ ಆವಶ್ಯಕತೆ ಏನೂ ಇಲ್ಲ. ಅರ್ಥವು ಸ್ಪಷ್ಟವಾಗಿದೆ. ।।೧೩।।

**ತಸ್ಯೈಕದಾ ತು ಭವನಮಂಗಿರಾ ಭಗವಾನೃಷಿಃ ।**
**ಲೋಕಾನನುಚರನ್ನೇತಾನುಪಾಗಚ್ಛದ್ಯದೃಚ್ಛಯಾ ।।೧೪।।**

**ಭಗವಾನ್** ಪೂಜ್ಯರಾದ **ಅಂಗಿರಾಃ ಋಷಿಃ** ಅಂಗಿರಸ ಋಷಿಗಳು **ಏತಾನ್** ಈ **ಲೋಕಾನ್** ಲೋಕಗಳನ್ನು **ಅನುಚರನ್** ಸಂಚರಿಸುತ್ತಾ **ಯದೃಚ್ಛಯಾ** ಶ್ರೀಹರಿಯ ಇಚ್ಛೆಯಂತೆ **ಏಕದಾ** ಒಂದು ದಿನ **ತಸ್ಯ** ಆ ರಾಜನ **ಭವನಂ** ಮನೆಯನ್ನು ಕುರಿತು **ಉಪಾಗಚ್ಛತ್** ಬಂದರು. ।।೧೪।।

**ತಂ ಪೂಜಯಿತ್ವಾ ವಿಧಿವತ್ ಪ್ರತ್ಯುತ್ಥಾನಾರ್ಹಣಾದಿಭಿಃ ।**
**ಕೃತಾತಿಥ್ಯಮುಪಾಸೀದತ್ ಸುಖಾಸೀನಂ ಸಮಾಹಿತಃ ।।೧೫।।**

ದೇವತೆಗಳೇ ಶಾಪದಿಂದ ಪ್ರಹ್ಲಾದ ಮೊದಲಾಗಿ ಅಸುರರಾಗಿ ಜನಿಸಿದ್ದಾರೆ. ಆದ್ದರಿಂದ ಅವರಿಗೆ ಭಕ್ತಿಯ ವ್ಯತ್ಯಯವಾಗಿಲ್ಲ. ಇದನ್ನು ತಿಳಿಸಲು ಶುಕಾಚಾರ್ಯರು ವೃತ್ರನ ಪೂರ್ವ ವೃತ್ತಾಂತ ಹೇಳುವರು-

**ಶ್ರೀಶುಕ ಉವಾಚ -**

**ಶೃಣುಷ್ವಾವಹಿತೋ ರಾಜನ್ನಿತಿಹಾಸಂ ಪುರಾತನಮ್ ।**
**ಶ್ರುತಂ ದ್ವೈಪಾಯನಮುಖಾನ್ನಾರದಾದ್ದೇವಲಾದಪಿ ॥೯॥**

**ರಾಜನ್** ಪರೀಕ್ಷಿತನೇ **ದ್ವೈಪಾಯನಮುಖಾತ್** ನಮ್ಮ ತಂದೆಗಳಾದ ವೇದವ್ಯಾಸರಿಂದ **ನಾರದಾತ್** ನಾರದರಿಂದ **ಅಪಿ** ಮತ್ತು **ದೇವಲಾತ್** ದೇವಲ ಋಷಿಗಳಿಂದ **ಶ್ರುತಂ** ಕೇಳಲ್ಪಟ್ಟ **ಪುರಾತನಂ** ಹಿಂದೆ ನಡೆದ **ಇತಿಹಾಸಂ** ಚರಿತ್ರೆಯನ್ನು **ಅವಹಿತಃ** ಸಾವಧಾನನಾಗಿ **ಶೃಣುಷ್ವ** ಕೇಳು. ಗಹನ ವಿಷಯ ಒಂದೇ ಸಲ ಕೇಳಿದಾಗ ತಿಳಿಯಲಾರದು. ಕಾರಣ ಮೂರು ಜನರಿಂದ ಕೇಳಿದ್ದು ಎಂದು ಭಾವ. ॥೯॥

**ಆಸೀದ್ರಾಜಾ ಸಾರ್ವಭೌಮಃ ಶೂರಸೇನೇಷು ವೈ ನೃಪಃ ।**
**ಚಿತ್ರಕೇತುರಿತಿ ಖ್ಯಾತೋ ಯಸ್ಯಾಸೀತ್ಕಾಮಧುಙ್ಮಹೀ ॥೧೦॥**

**ನೃಪ** ರಾಜನೇ **ಶೂರಸೇನೇಷು** ಶೂರಸೇನದೇಶದಲ್ಲಿ **ರಾಜಾ** ಪ್ರಜಾರಂಜಕನಾದ **ಚಿತ್ರಕೇತುಃ ಇತಿ ಖ್ಯಾತಃ** ಚಿತ್ರಕೇತು ಎಂಬ ಹೆಸರಿನಿಂದ ಪ್ರಸಿದ್ಧನಾದ **ಸಾರ್ವಭೌಮಃ** ಚಕ್ರವರ್ತಿಯು **ಆಸೀತ್** ಇದ್ದನು. **ಯಸ್ಯ** ಅವನಿಗೆ **ಮಹೀ** ಭೂಮಿಯು **ಕಾಮಧುಜ್** ಅಭೀಷ್ಟದಾಯಕವಾಗಿತ್ತು. ॥೧೦॥

**ತಸ್ಯ ಭಾರ್ಯಾಸಹಸ್ರಾಣಾಂ ಸಹಸ್ರಾಣಿ ದಶಾಭವನ್ ।**
**ಸಾಂತಾನಿಕಶ್ಚಾಪಿ ನೃಪೋ ನ ಲೇಭೇ ತಾಸು ಸಂತತಿಮ್ ॥೧೧॥**

**ತಸ್ಯ** ಆ ರಾಜನಿಗೆ **ಭಾರ್ಯಾಸಹಸ್ರಾಣಾಂ** ಸಾವಿರ ಹೆಂಡತಿಯರ **ದಶಸಹಸ್ರಾಣಿ** ಹತ್ತು ಸಾವಿರಗಳು ಅಂದರೆ ಒಂದು ಕೋಟಿ ಹೆಂಡತಿಯರು **ಅಭವನ್** ಇದ್ದರು. **ನೃಪಃ** ರಾಜನು **ಸಾಂತಾನಿಕಃ** ಸಂತಾನ ಪಡೆಯುವ ಇಚ್ಛೆಯುಳ್ಳವನಾಗಿದ್ದರೂ **ಸ್ವಯಂ** ಸಂತಾನ ಪಡೆಯಲು ಅರ್ಹನಾಗಿದ್ದರೂ ಮಕ್ಕಳನ್ನು ಪಡೆಯಲಿಲ್ಲ. ॥೧೧॥

**ರೂಪೌದಾರ್ಯವಯೋಜನ್ಮವಿದ್ಯೈಶ್ವರ್ಯಶ್ರಿಯಾದಿಭಿಃ ।**
**ಸಂಪನ್ನಸ್ಯ ಗುಣೈಸ್ಸರ್ವೈಶ್ಚಿಂತಾ ವಂಧ್ಯಾಪತೇರಭೂತ್ ॥೧೨॥**

**ರೂಪೌದಾರ್ಯವಯೋಜನ್ಮವಿದ್ಯೈಶ್ವರ್ಯಶ್ರಿಯಾದಿಭಿಃ** ಸೌಂದರ್ಯ, ತಾರುಣ್ಯ, ಒಳ್ಳೆಯ ವಂಶದಲ್ಲಿ ಜನನ, ಜ್ಞಾನ, ಐಶ್ವರ್ಯ ಮತ್ತು ಸಂಪತ್ತು ಮೊದಲಾದ **ಸರ್ವೈಃ ಗುಣೈಃ** ಎಲ್ಲ ಗುಣಗಳಿಂದ **ಸಂಪನ್ನಸ್ಯ** ಯುಕ್ತನಾದ **ವಂಧ್ಯಾಪತೇಃ** ಬಂಜೆಯರ ಗಂಡನಾದ ಆ ರಾಜನಿಗೆ **ಚಿಂತಾ ಅಭೂತ್** ಮಕ್ಕಳಿಲ್ಲವೆಂಬ ಚಿಂತೆಯಾಯಿತು.

**ವಂಧ್ಯಾಪತೇಃ** ಎಂದು ಹೇಳಿದ್ದರಿಂದ ದೈವಯೋಗದಿಂದ ಕೋಟಿ ಜನ ಹೆಂಡತಿಯರೂ ಬಂಜೆಯರೇ ಬಂದು ಸೇರಿದ್ದಾರೆ ಎಂದು ತಿಳಿಯುವದು. ।।೧೨।।

**ನ ತಸ್ಯ ಸಂಪದಃ ಸರ್ವಾ ಮಹಿಷ್ಯೋ ವಾಮಲೋಚನಾಃ ।**
**ಸಾರ್ವಭೌಮಸ್ಯ ಭೂಶ್ಚೇಯಂ ನಾಽಭೂವನ್ ಪ್ರೀತಿಹೇತವಃ ।।೧೩।।**

**ತಸ್ಯ ಸಾರ್ವಭೌಮಸ್ಯ** ಚಕ್ರವರ್ತಿಯಾದ ಆ ಚಿತ್ರಕೇತುವಿಗೆ **ಸರ್ವಾಃ ಸಂಪದಃ** ಎಲ್ಲ ಸಂಪತ್ತುಗಳು **ವಾಮಲೋಚನಾಃ** ಸುಂದರಾಕ್ಷಿಯರಾದ ಸುಂದರಿಯರಾದ **ಸರ್ವಾಃ ಮಹಿಷ್ಯಃ** ಎಲ್ಲ ಹೆಂಡತಿಯರು **ಇಯಂ ಭೂಃ ಚ** ಈ ಭೂಮಿಯು ಕೂಡಾ **ಪ್ರೀತಿಹೇತವಃ** ಪ್ರೀತಿಗೆ ಕಾರಣಗಳು **ನ ಅಭೂವನ್** ಆಗಲಿಲ್ಲ. ಇವುಗಳಿಂದ ಸಂತೋಷವಾಗಲಿಲ್ಲ.

**ನಾಽಭವನ್ ಪ್ರೀತಿಹೇತವಃ** ಎಂಬ ಪಾಠವಿದ್ದಾಗ **ನತಸ್ಯ** ಎಂದರೆ ಸರ್ವನಮಸ್ಕೃತಸ್ಯ ಎಂದರ್ಥ. **ಭೂಶ್ಚೇಯಮಭವನ್** ಎಂಬ ಪಾಠದಲ್ಲಿ ವ್ಯಾಖ್ಯಾನದ ಆವಶ್ಯಕತೆ ಏನೂ ಇಲ್ಲ. ಅರ್ಥವು ಸ್ಪಷ್ಟವಾಗಿದೆ. ।।೧೩।।

**ತಸ್ಯೈಕದಾ ತು ಭವನಮಂಗಿರಾ ಭಗವಾನೃಷಿಃ ।**
**ಲೋಕಾನನುಚರನ್ನೇತಾನುಪಾಗಚ್ಛದ್ಯದೃಚ್ಛಯಾ ।।೧೪।।**

**ಭಗವಾನ್** ಪೂಜ್ಯರಾದ **ಅಂಗಿರಾಃ ಋಷಿಃ** ಅಂಗಿರಸ ಋಷಿಗಳು **ಏತಾನ್** ಈ **ಲೋಕಾನ್** ಲೋಕಗಳನ್ನು **ಅನುಚರನ್** ಸಂಚರಿಸುತ್ತಾ **ಯದೃಚ್ಛಯಾ** ಶ್ರೀಹರಿಯ ಇಚ್ಛೆಯಂತೆ **ಏಕದಾ** ಒಂದು ದಿನ **ತಸ್ಯ** ಆ ರಾಜನ **ಭವನಂ** ಮನೆಯನ್ನು ಕುರಿತು **ಉಪಾಗಚ್ಛತ್** ಬಂದರು. ।।೧೪।।

**ತಂ ಪೂಜಯಿತ್ವಾ ವಿಧಿವತ್ ಪ್ರತ್ಯುತ್ಥಾನಾರ್ಹಣಾದಿಭಿಃ ।**
**ಕೃತಾತಿಥ್ಯಮುಪಾಸೀದತ್ ಸುಖಾಸೀನಂ ಸಮಾಹಿತಃ ।।೧೫।।**

**ವಿಧಿವತ್** ಶಾಸ್ತ್ರದಲ್ಲಿ ಹೇಳಿದಂತೆ **ಪ್ರತ್ಯುತ್ಥಾನಾರ್ಹಣಾದಿಭಿಃ** ಎದ್ದು ನಿಲ್ಲುವದು, ಪೂಜೆ ಮೊದಲಾದವುಗಳಿಂದ, **ತಂ** ಆ ಋಷಿಗಳನ್ನು **ಪೂಜಯಿತ್ವಾ** ಸತ್ಕರಿಸಿ **ಸಮಾಹಿತಃ ಸನ್** ಏಕಾಗ್ರಚಿತ್ತನಾಗಿ **ಕೃತಾತಿಥ್ಯಂ** ಅತಿಥಿ ಸತ್ಕಾರಮಾಡಿಸಿಕೊಂಡು **ಸುಖಾಸೀನಂ** ಆರಾಮವಾಗಿ ಕುಳಿತ **ತಂ** ಆ ಋಷಿಯನ್ನು **ಉಪಾಸೀದತ್** ಸಮೀಪಿಸಿ ಕುಳಿತನು. ।।೧೫।।

**ಮಹರ್ಷಿಸ್ತಮುಪಾಸೀನಂ ಪ್ರಶ್ರಯಾವನತಂ ಕ್ಷಿತೌ ।**
**ಪ್ರತಿಪೂಜ್ಯ ಮಹಾರಾಜ ಸಮಾಭಾಷ್ಯೇದಮಬ್ರವೀತ್ ।।೧೬।।**

**ಹೇ ಮಹಾರಾಜ** ಪರೀಕ್ಷಿತನೇ **ಮಹರ್ಷಿಃ** ಅಂಗಿರಸ ಋಷಿಗಳು **ಕ್ಷಿತೌ** ಭೂಮಿಯಲ್ಲಿ **ಉಪಾಸೀನಂ** ಸಮೀಪ ಕುಳಿತಿರುವ **ಪ್ರಶ್ರಯಾವನತಂ** ನಮ್ರತೆಯಿಂದ ಬಾಗಿದ **ತಂ** ಆ ಚಿತ್ರಕೇತುವನ್ನು **ಪ್ರತಿಪೂಜ್ಯ** ರಾಜನಾದರೂ ಜ್ಞಾನಿಗಳು ಬಂದಾಗ ಈ ವಿಧವಾಗಿ ವಿನಯಾದಿ ಗುಣಗಳನ್ನು ಕಂಡು ಸನ್ಮಾನಿಸಿ **ಸಮಾಭಾಷ್ಯ** ಮಾತನಾಡಿಸಿ **ಇದಂ ಅಬ್ರವೀತ್** ಮುಂದೆ ಹೇಳುವಂತೆ ಹೇಳಿದರು. ।।೧೬।।

ತಪೋಬಲದಿಂದ ಲೋಕವೃತ್ತಾಂತವನ್ನು ಬಲ್ಲವರಾಗಿದ್ದರೂ, ಅಂಗಿರ ಋಷಿಗಳು ಅವನಿಂದ ಕೇಳಲು ಆರೋಗ್ಯವನ್ನು ಮೊದಲಿಗೆ ಪ್ರಶ್ನಿಸುವರು-

**ಅಂಗಿರಾ ಉವಾಚ -**

**ಅಪಿ ತೇಽನಾಮಯಂ ಸ್ವಸ್ತಿ ಪ್ರಕೃತೀನಾಂ ತಥಾತ್ಮನಃ ।**
**ಯಥಾ ಪ್ರಕೃತಿಭಿರ್ಗುಪ್ತಃ ಪುಮಾನ್ ರಾಜಾ ಚ ಸಪ್ತಭಿಃ ।।೧೭।।**

**ಆತ್ಮಾನಂ ಪ್ರಕೃತಿಷ್ವದ್ಧಾ ನಿಧಾಯ ಶ್ರೇಯ ಆಪ್ನುಯಾತ್ ।**
**ರಾಜ್ಞಸ್ತಥಾ ಪ್ರಕೃತಯೋ ನರದೇವಾಹಿತಾದಯಃ ।।೧೮।।**

**ತೇ ಅನಾಮಯಂ ಅಪಿ** ನಿನಗೆ ಆರೋಗ್ಯವಿದೆಯಷ್ಟೇ **ತಥಾ** ಮತ್ತು **ಆತ್ಮನಃ** ನಿನ್ನ **ಪ್ರಕೃತೀನಾಂ** ಸ್ವಾಮಿ, ಅಮಾತ್ಯ, ಜನಪದ, ದುರ್ಗ, ದ್ರವಿಣಸಂಚಯ, ದಂಡ, ಮಿತ್ರರೆಂಬ ಏಳು ಪ್ರಕೃತಿಗಳಿಗೂ **ಸ್ವಸ್ತಿ ಅಪಿ** ಕ್ಷೇಮ ಅಷ್ಟೇ, ಪ್ರಕೃತಿಗಳ ಕುಶಲ ಪ್ರಶ್ನೆಯಿಂದೇನು ಪ್ರಯೋಜನ ಎಂದರೆ ಹೇಳುತ್ತಾರೆ. **ಯಥಾ** ಹೇಗೆ **ಪುಮಾನ್** ಜೀವನು **ಸಪ್ತಭಿಃ** ಮಹತ್, ಅಹಂಕಾರ, ಪಂಚಭೂತಗಳೆಂಬ **ಸಪ್ತಭಿಃ ಪ್ರಕೃತಿಭಿಃ** ಏಳು ಪ್ರಕೃತಿಗಳಿಂದ **ಗುಪ್ತಃ** ರಕ್ಷಿತನಾಗಿರುವನೋ, ಜೀವನು ಮಹದಾದಿಗನ್ನು ಬಿಟ್ಟು ಒಂದು ಕ್ಷಣವೂ ಇರಲಾರನು. **ಪ್ರಕೃತಿಷು** ದೇಹಕ್ಕೆ ಕಾರಣಗಳಾದ ಮಹದಾದಿ

ಪ್ರಕೃತಿಗಳಲ್ಲಿ **ಆತ್ಮಾನಂ** ಜೀವನನ್ನು **ಅದ್ಧಾ** ಸರಿಯಾಗಿ **ನಿಧಾಯ** ಇಟ್ಟು **ಶ್ರೇಯಃ** ಮೋಕ್ಷಸಾಧನೆಯನ್ನು **ಆಪ್ನುಯಾತ್** ಹೊಂದುವನು. **ತಥಾ** ಆದರಂತೆ ರಾಜನೂ ಕೂಡ **ಪ್ರಕೃತಿಷು** ಮೇಲೆ ಹೇಳಿದ ಏಳು ಬಗೆಯ ಪ್ರಕೃತಿಗಳಿಂದ ರಕ್ಷಿತನಾಗಿ ಅವರಲ್ಲಿ **ಆತ್ಮಾನಂ** ತನ್ನನ್ನು ತನ್ನ ರಾಜ್ಯದ ಭಾರವನ್ನು, **ಅದ್ಧಾ** ಸಂಪೂರ್ಣವಾಗಿ ಅಥವಾ ವಿಶ್ವಾಸ ಪೂರ್ವಕವಾಗಿ **ಆತ್ಮಾನಂ** ಮನಸ್ಸನ್ನು **ನಿಧಾಯ** ಇಟ್ಟು **ಶ್ರೇಯಃ ಆಪ್ನುಯಾತ್** ವಿಹಿತವಾದ ಶ್ರೇಯೋಽಭಿವೃದ್ಧಿಯನ್ನು ಹೊಂದುವನು. ರಾಜಸುಖವನ್ನು ಹೊಂದುವನು ಎಂದರ್ಥ. **ನರದೇವ** ರಾಜನೇ ಅದರಂತೆ **ಪ್ರಕೃತಯಃ** ಸ್ವಾಮಿ ಮುಂತಾದ ಪ್ರಕೃತಿಗಳು **ರಾಜ್ಞಃ** ರಾಜನ, ವಶವರ್ತಿಗಳಾದಲ್ಲಿ ಶ್ರೇಯಸ್ಸನ್ನು ಹೊಂದುವವು. ಇಲ್ಲಿ ಯಸ್ಯ ರಾಜ್ಞಃ ಆತ್ಮಾ ಚ ಅನುವಶಃ ಚೇತ್ ತರ್ಹಿ ಸರ್ವೇ ಲೋಕಾಃ ತಸ್ಮೈ ಬಲಿಂ ಯಚ್ಛಂತಿ ಎಂದೂ ಅನ್ವಯವನ್ನು ವಿಜಯಧ್ವಜರು ತೋರಿಸಿರುವರು.

ತಾನು ಪ್ರಕೃತ್ಯಾದಿಗಳ ವಶನಾದಲ್ಲಿ ಪ್ರಕೃತ್ಯಾದಿಗಳು ತನ್ನ ವಶದಲ್ಲಿ ಇರದಿರುವದರಿಂದ ಪ್ರಕೃತ್ಯಾದಿಗಳು ಅಹಿತಾದಯಃ ಅಹಿತಕಾರಣಗಳಾಗುವವು. ಆದ್ದರಿಂದ ಪ್ರಕೃತಿಗಳನ್ನು ತನ್ನ ವಶವರ್ತಿಗಳನ್ನಾಗಿ ಮಾಡಿಕೊಳ್ಳಬೇಕು. ಎಂದು ತಾತ್ಪರ್ಯ.

ಆಹಿತಾದಯಃ ಎಂದು ಪದಚ್ಛೇದ ಮಾಡಿದಲ್ಲಿ, **ಆ** ಮೊದಲಿನಿಂದಲೂ, ಸಂಪೂರ್ಣವಾಗಿ **ಹಿತಾದಯಃ** ಹಿತಕಾರಿಗಳಾದಲ್ಲಿ ಶ್ರೇಯಸ್ಕರಗಳೆಂದರ್ಥ. ಇದರಿಂದ ಪ್ರಕೃತ್ಯಾದಿಗಳ ಗುಣವನ್ನು ತೋರಿಸಿದಂತಾಯಿತು.

**ಸ್ವಾಮ್ಯಮಾತ್ಯೋ ಜನಪದೋ ದುರ್ಗಂ ದ್ರವಿಣಸಂಚಯಃ ।**
**ದಂಡೋ ಮಂತ್ರೀ ಚ ಸಪ್ತೈತಾಃ ತಸ್ಯ ಪ್ರಕೃತಯಃ ಸ್ಮೃತಾಃ ॥**

ಸ್ವಾಮಿ ಎಂದರೆ ಗುರು, ಅಥವಾ ತಾನು (ರಾಜ) ಬುದ್ಧಿಕಾರ್ಯದಲ್ಲಿ ಸಹಾಯ ವಾಗುವವನು, ಮಂತ್ರಿಕೆಲಸಗಳಲ್ಲಿ ಸಹಾಯ ಮಾಡುವವನು ಅಮಾತ್ಯ. ಹೇಗೆ ಪ್ರಕೃತಿಗಳಿಂದ ಗುಪ್ತನಾದ ರಾಜನು ಸುಖವನ್ನು ಹೊಂದುವನೋ ಹಾಗೆ ರಾಜನಿಂದ ಸಂತೋಷಿತರಾದ ಪ್ರಜೆಗಳು ರಾಜನ ಸಂತೋಷಕ್ಕೆ ಕಾರಣರಾಗುವರು. ಇಲ್ಲದಿದ್ದರೆ ಅಹಿತಕ್ಕೆ ಅಂದರೆ ಅಸಂತೋಷಕ್ಕೆ ಕಾರಣರಾಗುವರು. (ಅಹಿತಸ್ಯ ಆದಯಃ) ಚೆಟ್ಟಿ ವಿಜಯಧ್ವಜೀಯ ಪ್ರಕಾರ ಅನ್ವಯಾರ್ಥ.

ಶ್ರೀಸತ್ಯಧರ್ಮರ ಪ್ರಕಾರ ವಿಶೇಷಾರ್ಥವನ್ನು ಮಾತ್ರ ಮುಂದಿನಂತೆ ತಿಳಿಯಬೇಕು.

'ಯಥಾ ಪ್ರಕೃತಿಭಿರ್ಗುಪ್ತಃ ಪುಮಾನ್ ರಾಜಾ ಚ ಸಪ್ತಭಿಃ' ಇದರ ಅಂತರಂಗಾಭಿಪ್ರಾಯ ಅಂಗಿರಸರದು ಹೀಗೆ ಎನ್ನುತ್ತಾರೆ ಶ್ರೀಗಳು.

ಕಾರ್ಯ-ಕಾರಣ ಶಬ್ದಗಳಿಗೆ 'ಗೋಭಿಃ ಶ್ರೀಣಿತ ಮತ್ಸರಂ' ಎಂಬಲ್ಲಿ ಸಂಕೀರ್ಣತೆ ಕಂಡಿರುವದರಿಂದ ಪ್ರಕೃತಿ ಪದದಿಂದ ಅದರ ಕಾರ್ಯವಾದ ಪಂಚಭೂತಗಳು, ಮಹತತ್ತ್ವ ಅಹಂಕಾರತತ್ತ್ವ ಈ ಏಳರಿಂದ ರಕ್ಷಿತನಾದ ಜೀವನು **ಪ್ರಕೃತಿಷು** ಆ ಪ್ರಕೃತಿಗಳಲ್ಲೇ **ಆತ್ಮಾನಂ ಅದ್ಧಾ ನಿಧಾಯ** ಯಾವುದರಿಂದ ಹುಟ್ಟಿದೆಯೋ ಅಲ್ಲಿಯೇ ಪ್ರವೇಶವೆಂದು ಚಿಂತನೆ ಮಾಡುತ್ತಾ ತನ್ನನ್ನು ಇಟ್ಟು **ಶ್ರೇಯಃ** ಅವುಗಳ ಮೋಕ್ಷಾನಂತರ ದೊರೆಯುವ ಮೋಕ್ಷರೂಪಮಂಗಳವನ್ನು ಹೊಂದುವನೋ ಹಾಗೆ ರಾಜನು, ಸಪ್ತಪ್ರಕೃತಿಗಳಲ್ಲಿ ವಿಶ್ವಾಸ ಮಾಡಿ ಶ್ರೇಯಸ್ಸು ಹೊಂದುವನು ಎಂದು ದೃಷ್ಟಾಂತ ಕೊಟ್ಟಿರುವರು.

ಮರಣಕಾಲದಲ್ಲಿ ಲಯ ಚಿಂತನ ಮಾಡುವದು ಶ್ರೇಯಸ್ಸಾಧನವೆಂದು ಭಾವ. ಆ ಪ್ರಕೃತಿಗಳೇ ರಾಜನಿಂದ ಅವಮಾನಿತರಾದರೆ ರಾಜನಿಗೆ ಅಹಿತ ಮಾಡುವರೆಂದೂ ಹೇಳುವರು. ಅಪ್ರಕೃತಯಃ ನ ವಿದ್ಯತೇ ಪ್ರಕೃತಿಃ ಸ್ವಭಾವಃ ಪ್ರಾಗ್ವತ್ ಯೇಷಾಂ ತೇ ಮನಸ್ಸಿನ ವಿಷಾದ ಉಳ್ಳವರಾಗಿ **ರಾಜ್ಞಃ** ರಾಜನಿಗೆ ಆಲೋಚನ ಸೂಚನಾದಿಗಳಿಂದ ದ್ವೇಷಿಯ ಸ್ಥಾನದಲ್ಲಿರಿಸಿ ತಾವು **ಅಹಿತಾದಯಃ** ಅಹಿತಕ್ಕೆ ಕಾರಣರಾಗುವರು. **ತಥಾ ಪ್ರಕೃತಯಃ ಚೇತ್** ಹೇಗೆ ಇರಬೇಕೋ ಹಾಗೆ ಸ್ವಭಾವ ಇದ್ದರೆ **ಅದ್ಧಾ** ಯಾವ ಕಾಲದಲ್ಲಿಯೂ (ಈ ರೀತಿ ಅಡ್ಡಹಾದಿ ಹಿಡಿಸದೇ) ಕಾರಾಗಾರದಲ್ಲಿಡದೇ **ಆಹಿತಾದಯಃ** ಒಳ್ಳೇ ಹಿತಕಾರಣರಾಗುವರು. ಆದ್ದರಿಂದ ರಾಜನು ಜಾಗ್ರತನಾಗಿರಬೇಕು ಎಂದು ಅಂಗಿರಸರು ತಿಳಿಸಿದರು. ||೧೭-೧೮||

**ಅಪಿ ದಾರಾಃ ಸುತಾಮಾತ್ಯಾ ಭೃತ್ಯಾಃ ಶ್ರೇಣ್ಯೋಽಥ ಮಂತ್ರಿಣಃ ।**
**ಪೌರಾ ಜಾನಪದಾ ಭೂಪಾ ಆತ್ಮಾ ಚ ವಶವರ್ತಿನಃ ||೧೯||**

**ದಾರಾಃ** ಹೆಂಡತಿಯರು **ಸುತಾಮಾತ್ಯಾಃ** ಮಕ್ಕಳು-ಮಂತ್ರಿಗಳು (ಕಾರ್ಯಸಹಾಯಕರು) **ಶ್ರೇಣ್ಯಃ** ಮಂತ್ರಿವಿಶೇಷರು ಅಥವಾ ರಾಜನ ಸಮಾನವಯಸ್ಕರಾದ ಅಂಗರಕ್ಷಕರು **ಅಥ** ಮತ್ತು **ಮಂತ್ರಿಣಃ** ಮಂತ್ರಿಗಳು

(ಆಲೋಚನೆ ಮಾಡುವವರು) **ಪೌರಾಃ** ಪಟ್ಟಣಿಗರು **ಜಾನಪದಾಃ** ದೇಶವಾಸಿಗಳು **ಭೂಪಾಃ** ಸಾಮಂತರಾಜರು **ಭೃತ್ಯಾಃ** ಕಿಂಕರರು **ಆತ್ಮಾ ಚ** ಮನಸ್ಸು ಮತ್ತು ದೇಹವು **ವಶವರ್ತಿನಃ ಅಪಿ** ಅಚಾಂಚಲ್ಯದಿಂದ, ನೀರೋಗದಿಂದ ನಿನ್ನ ಅಧೀನದಲ್ಲಿರು-ವವಲ್ಲವೇ? ಅನುಕೂಲರಾಗಿರುವವಲ್ಲವೇ ಎಂದರ್ಥ.

ಅಮಾತ್ಯಾಃ ಭೃತ್ಯಾಃ ಮುಂತಾದ ಬಹುವಚನ ಸಹಪಾಠಕ್ಕನುಗುಣವಾಗಿ ಸುತಾಃ ಎಂದು ಹೇಳಿದ್ದರೆ ಒಬ್ಬ ಮಗನೇನೋ ಮುಂದೆ ಆಗುವವನಿದ್ದರೂ, ರಾಜನು ಋಷಿಯು ಸುಳ್ಳು ಮಾತಾಡುವವನಲ್ಲ ಅಂದ ಮೇಲೆ ನನಗೆ ಬಹಳ ಮಕ್ಕಳಾಗುವರೆಂದು ತಿಳಿಯುವನು. ಹಾಗಾಗದಿರಲೆಂದು ಅಂಗೀರಸರು, ಸುತಶ್ಚ ಅಮಾತ್ಯಾಶ್ಚ ಎಂದು ವಿಗ್ರಹಭೂಮಿಯನ್ನು ರಚಿಸಿ ಜಾಗರೂಕರಾಗಿರುವರು. ಇಲ್ಲವಾದರೆ ಸುತಾಃ ಅಮಾತ್ಯಾಃ ಎಂದೇ ಹೇಳುತ್ತಿದ್ದರು. 'ರಾಜ್ಞಃ ಸಮಾನವಯಸಃ ಶ್ರೇಣಯಸ್ತ್ವಂಗರಕ್ಷಕಾಃ' ಎಂದಿದೆ. ।।೧೯।।

ಮನೋಜಯ ಪ್ರಶ್ನೆಗೆ ಕಾರಣವೇನೆಂದರೆ ಹೇಳುವರು-

**ಯಸ್ಯಾತ್ಮಾನುವಶಶ್ಚೇತ್ ಸ್ಯಾತ್ಸರ್ವೇ ತದ್ವಶಗಾ ಇಮೇ ।**
**ಲೋಕಾಃ ಸಪಾಲಾ ಯಚ್ಛಂತಿ ಸರ್ವೇ ಬಲಿಮತಂದ್ರಿತಾಃ ।।೨೦।।**

**ಆತ್ಮನಃ ಪ್ರೀತಯೇಽಪ್ಯಾತ್ಮಾ ಪರತಃ ಸ್ವತ ಏವ ವಾ ।**
**ಲಕ್ಷಯೇಽಲಬ್ಧಕಾಮಂ ತ್ವಾಂ ಚಿಂತಯಾ ಶಬಲಂ ಮುಖಮ್ ।।೨೧।।**

**ಯಸ್ಯ** ಯಾವನಿಗೆ **ಆತ್ಮಾ** ಮನಸ್ಸು **ಅನುವಶಃ ಸ್ಯಾತ್ ಚೇತ್** ವಶವಾಗಿರುವದೋ **ಇಮೇ ಸರ್ವೇ** ಈ ಭೃತ್ಯರೇ ಮುಂತಾದವರು **ತದ್ವಶಗಾಃ** ಅವನ ಅಧೀನರಾಗುವರು, ಇಲ್ಲದಿದ್ದರೆ ಕೋಪ-ಲೋಭಾದಿಗಳಿಗೆ ಅಧೀನನಾದ ನಿನ್ನ ಕ್ರೋಧಾದಿಗಳಿಂದ ವೈಮನಸ್ಯ ಹೊಂದಿದ ಭೃತ್ಯರೇ ಮೊದಲಾದವರು, ಹೇಳಿದ ಕೆಲಸವನ್ನು ಮಾಡಲಾರರು ಎಂದರ್ಥ. ಆದ್ದರಿಂದ ಕ್ರೋಧಾದಿಗಳಿಲ್ಲದಿರುವದು ಮನೋಜಯದ ಫಲ. ಕ್ರೋಧ ಮಾಡದಿದ್ದರೆ ಎಲ್ಲರೂ ವಶರಾಗುವರು. ಮತ್ತು **ಸಪಾಲಾಃ** ಅಧಿಪತಿಗಳಿಂದ ಕೂಡಿದ **ಸರ್ವೇ ಲೋಕಾಃ** ಎಲ್ಲ ಜನರೂ **ಅತಂದ್ರಿತಾಃ** ಪ್ರಮತ್ತರಾಗದೇ, ಆಲಸ್ಯವಿಲ್ಲದೇ **ಬಲಿಂ ಯಚ್ಛಂತಿ** ಕಪ್ಪ-ಕಾಣಿಕೆಯನ್ನು ಕೊಡುವರು. ।।೨೦।।

ತಮಗೆ ಹಿಂಸೆ ಬಂದಾಗ ಅಧೀನರಾಗುವದು ನಿಶ್ಚಯ. ಸಂರಕ್ಷಕರಿಂದ ಸಹಿತರಾದ ಎಲ್ಲರೂ ಆಲಸ್ಯವಿಲ್ಲದೇ ಬಲಿಯನ್ನು ಕೊಡುವರು ಹೀಗೂ ಅರ್ಥ.

**ಆತ್ಮಾ ಅಪಿ** ಪ್ರಪಂಚವೂ **ಆತ್ಮನಃ** ನಿನ್ನ **ಪ್ರೀತಯೇ** ಪ್ರೀತಿಗಾಗಿ **ಸ್ಯಾತ್** ಆಗುವದು. 'ಪ್ರೀತಯೇ ನಾತ್ಮಾ' ಎಂಬ ಪಾಠದಲ್ಲಿ **ಆತ್ಮಾ** ನೀನು **ಆತ್ಮನಃ** ನಿನ್ನ **ಪ್ರೀತಯೇ** ಸಂತೋಷಕ್ಕೆ ನ ಆಗುತ್ತಿಲ್ಲ. ನೀನು ಸಂತೋಷಪಡುತ್ತಿಲ್ಲವೆಂದರ್ಥ. ಇದೆಲ್ಲ ಇರಲಿ ನಿಮಗೇನು ತೋರುತ್ತದೆ ಎಂದರೆ ಹೇಳುತ್ತಾರೆ. **ಮುಖಂ** ನಿನ್ನ ಮುಖವು **ಚಿಂತಯಾ** ಯಾಚನೆಯಿಂದ **ಶಬಲಂ** ಲಕ್ಷಣ ಹೀನವಾಗಿ ಕಳೆಗುಂದಿದೆ. ಆದ್ದರಿಂದ ನಾನು **ತ್ವಾಂ** ನಿನ್ನನ್ನು **ಸ್ವತಃ** ನಿನ್ನಿಂದಲೋ **ಪರತಃ ವಾ** ಮತ್ತೊಬ್ಬರಿಂದಲೋ **ಅಲಬ್ಧಕಾಮಂ** ಇಷ್ಟವು ನೆರವೇರದಿರುವವನನ್ನಾಗಿ **ಲಕ್ಷಯೇ** ಕಾಣುತ್ತೇನೆ. (ಊಹಿಸುತ್ತೇನೆ). ।।೨೦।।

ದಡ್ಡನಾದುದರಿಂದ ಹೇಳಲಿಲ್ಲವೋ ಅಥವಾ ಅವಸರದಲ್ಲಿ ಮಾತಾಡಿದನಾದ್ದರಿಂದ ತನ್ನ ಅಭೀಷ್ಟವು ಜಾರಿಹೋಯಿತೇ ಎಂಬ ಪರೀಕ್ಷಿತನ ಮನಸ್ಸಿನಲ್ಲಿಯ ಎರಡನೇ ಪಕ್ಷವನ್ನು ತಿಳಿಸುವರು ಶುಕಾಚಾರ್ಯರು-

**ಶ್ರೀಶುಕ ಉವಾಚ –**

> **ಏವಂ ವಿಕಲ್ಪಿತೋ ರಾಜನ್ ವಿದುಷಾ ಮುನಿನಾಽಪಿ ಸಃ ।**
> **ಪ್ರಶ್ರಯಾವನತೋಽಭ್ಯಾಹ ಪ್ರಜಾಕಾಮನಯಾ ಮುನಿಮ್ ।।೨೨।।**

**ರಾಜನ್** ಪರೀಕ್ಷಿತನೇ **ವಿದುಷಾ ಅಪಿ** ಸಂತಾನವಿಲ್ಲದ ಕಾರಣ ದುಃಖವೆಂದು ತಿಳಿದವರಾಗಿದ್ದರೂ **ಮುನಿನಾ** ಅಂಗಿರಸ ಋಷಿಗಳಿಂದ **ಏವಂ** ಮೇಲೆ ಹೇಳಿದಂತೆ **ವಿಕಲ್ಪಿತಃ** ಅನೇಕ ಪ್ರಶ್ನೆ ಮಾಡಿಸಿ ಕೊಂಡು **ಸಃ** ಚಿತ್ರಕೇತುವು **ಪ್ರಶ್ರಯಾವನತಃ** ನಮ್ರತೆಯಿಂದ ಬಾಗಿದವನಾಗಿ **ಪ್ರಾಜಾಕಾಮನಯಾ** ಸಂತತಿಯ ಇಚ್ಛೆಯಿಂದ **ಮುನಿಂ** ಆ ಋಷಿಗಳನ್ನು ಕುರಿತು **ಅಭ್ಯಾಹ** ಆ ವಿಕಲ್ಪದ ಉತ್ತರವಾಗಿ ಹೇಳಿದನು. **ಮುನಿಂ** ಇಷ್ಟು ಹೇಳಿ ಸುಮ್ಮನೆ ಕುಳಿತ ಮುನಿಗಳನ್ನು ಕುರಿತು **ಏವಂ** ಮುಂದೆ ಹೇಳುವಂತೆ **ಅಭ್ಯಾಹ** ಎಂದೂ ಅನ್ವಯ ಮಾಡಿಕೊಳ್ಳಬಹುದು. ।।೨೨।।

ತನ್ನ ಇಷ್ಟವು ನೆರವೇರಲಿಲ್ಲವೆಂದು ಹೇಳುತ್ತಾ ನಾಲ್ಕು ಶ್ಲೋಕಗಳಿಂದ ಮಗುವನ್ನು ಬೇಡುತ್ತಾನೆ-

**ಚಿತ್ರಕೇತುರುವಾಚ –**

> **ಭಗವನ್ ಕಿಂ ನ ವಿದಿತಂ ತಪೋಜ್ಞಾನಸಮಾಧಿಭಿಃ ।**
> **ಯೋಗಿನಾಂ ಧ್ವಸ್ತಪಾಪಾನಾಂ ಬಹಿರಂತಃಶರೀರಿಷು ।।೨೩।।**

**ಭಗವನ್** ಪೂಜ್ಯರೇ **ತಪೋಜ್ಞಾನಸಮಾಧಿಭಿಃ** ಕೃಚ್ಛ್ರಚಾಂದ್ರಾಯಣಾದಿ ರೂಪವಾದ ತಪಸ್ಸಿನಿಂದ ಅಥವಾ ಆಲೋಚನಾರೂಪವಾದ ತಪಸ್ಸಿನಿಂದ, ಜ್ಞಾನದಿಂದ, ಚಿತ್ತೈಕಾಗ್ರತಾರೂಪವಾದ ಸಮಾಧಿಯಿಂದ **ಧ್ವಸ್ತಪಾಪಾನಾಂ** ಪಾಪವನ್ನು ಕಳೆದುಕೊಂಡ **ಯೋಗಿನಾಂ** ಯೋಗಿಗಳಿಗೆ **ಶರೀರಿಷು** ಪ್ರಾಣಿಗಳಲ್ಲಿ **ಬಹಿಃ** ಹೊರಗೆ **ಅಂತಃ** ಒಳಗೆ **ನ ವಿದಿತಂ** ತಿಳಿಯದಿರುವದು **ಕಿಂ** ಏನಿದೆ. ತಮಗೆ ಎಲ್ಲವೂ ತಿಳಿದೇ ಇದೆ ಎಂದು ಅರ್ಥ. ಅಥವಾ **ಹೇ ತಪೋಜ್ಞಾನ** ತಪಸ್ಸಿನಿಂದಲೇ ಜ್ಞಾನ ಉಳ್ಳವನೇ ಇದರಿಂದ **ಅಂತಃ ಕಿಂ ನ ವಿದಿತಂ** ಒಳಗಿನದೇನು ತಿಳಿದಿಲ್ಲ. **ಸಮಾಧಿಭಿಃ** ನನ್ನ ಮನೋವ್ಯಥೆಯಿಂದ **ಬಹಿಃ** ಹೊರಗೆ ಊಹಿಸಿದ್ದರಿಂದ **ಕಿಂ ನ ವಿದಿತಂ** ಏನು ತಿಳಿದಿಲ್ಲ ಹೀಗೂ ಅರ್ಥ. ।।೨೩।।

**ತಥಾಽಪಿ ಪೃಚ್ಛತೋ ಬ್ರೂಯಾಂ ಬ್ರಹ್ಮನ್ನಾತ್ಮನಿ ಚಿಂತಿತಮ್ ।**
**ಭವತೋ ವಿದುಷಶ್ಚಾಽಪಿ ಚೋದಿತಸ್ತ್ವದನುಜ್ಞಯಾ ।।೨೪।।**

**ಬ್ರಹ್ಮನ್** ಬ್ರಹ್ಮಜ್ಞಾನಿಗಳೇ **ತಥಾಽಪಿ** ತಮಗೆ ತಿಳಿದಿದ್ದರೂ **ಪೃಚ್ಛತಃ** ನನ್ನನ್ನು ಕೇಳುತ್ತಿರುವ **ವಿದುಷಃ ಅಪಿ** ಬಲ್ಲವರಾಗಿದ್ದರೂ **ಭವತಃ** ತಮಗೆ **ಚೋದಿತಃ** ತಮ್ಮಿಂದ ಪ್ರೇರಿತರಾಗಿ **ತ್ವದನುಜ್ಞಯಾ** ತಮ್ಮ ಅಪ್ಪಣೆಯಿಂದಲೇ **ಆತ್ಮನಿ** ನನ್ನ ಮನಸ್ಸಿನಲ್ಲಿ **ಚಿಂತಿತಂ** ಆಲೋಚಿಸಿರುವದನ್ನು **ಬ್ರೂಯಾಂ** ಹೇಳುವೆನು. ಮಗನಿಲ್ಲದಿರುವದರಿಂದ ಆತುರತೆಯಿಂದ **ಭವತಃ** ಎಂದು **ವಿದುಷಃ** ಎಂದು ಮತ್ತೆ ಹೇಳಿರುವನು. **ಭವತಃ ಪಾರಂ** ಎಂದು ಶೇಷ ಮಾಡಿ ಸಂಸಾರದಿಂದ ದಾಟುವದನ್ನು **ಅವಿದುಷಃ** ತಿಳಿಯದ ನನ್ನ **ಆತ್ಮನಿ** ಮನಸ್ಸಿನಲ್ಲಿ **ಚಿಂತಿತಂ** ಏನಿದೆ ಎಂದು ಪ್ರಶ್ನಿಸುವ, ನಿಮ್ಮಿಂದ ಚಿಂತಿತವಾದುದನ್ನೇ, (ಹೇಳುವೆನು ಹೀಗೂ ಹೇಳಬಹುದು) ।।೨೪।।

**ಲೋಕಪಾಲೈರಪಿ ಪ್ರಾರ್ಥ್ಯಾಃ ಸಾಮ್ರಾಜ್ಯೈಶ್ವರ್ಯಸಂಪದಃ ।**
**ನ ನಂದಯಂತ್ಯಪ್ರಜಂ ಮಾಂ ಕ್ಷುತ್ತೃಟ್ಕ್ಷಾಮಮಿವಾಪರೇ ।।೨೫।।**

**ಅಪರೇ** ಮಾಲೆ, ಗಂಧ, ಸ್ತ್ರೀ, ಮೊದಲಾದವುಗಳು **ಕ್ಷುತ್ ತೃಟ್ ಕ್ಷಾಮಂ ಇವ** ಹಸಿವೆ-ನೀರಡಿಕೆಗಳಿಂದ ಬಳಲಿದವನನ್ನು ಹೇಗೆ ಸಂತೋಷ ಪಡಿಸಲಾರವೋ ಹಾಗೆ **ಲೋಕಪಾಲೈಃ ಅಪಿ** ಲೋಕಪಾಲಕರಿಂದಲೂ **ಪ್ರಾರ್ಥ್ಯಂ** ಅಪೇಕ್ಷಿಸಲ್ಪಡುವ **ಸಾಮ್ರಾಜ್ಯೈಶ್ವರ್ಯಸಂಪದಃ ಅಪಿ** ರಾಜ್ಯ-ಐಶ್ವರ್ಯ-ಸಂಪತ್ತುಗಳೂ ಕೂಡ **ಅಪ್ರಜಂ** ಮಕ್ಕಳಿಲ್ಲದ **ಮಾಂ** ನನ್ನನ್ನು **ನ ನಂದಯಂತಿ** ಸಂತೋಷಪಡಿಸುತ್ತಿಲ್ಲ. ।।

ಅಪ್ರಜಂ ಎಂದದ್ದರಿಂದ 'ಪುತ್ರಾತ್ ಶತಗುಣಂ ಪುತ್ರೀ' ಎಂಬ ನ್ಯಾಯದಿಂದ 'ಕನ್ಯೋದಿತಾ ಬತ ಕುಲದ್ವಯತಾರಿಣೀ' ಎಂದಿರುವ ಹೆಣ್ಣು ಮಗುವೂ ಇಲ್ಲವೆಂದು ತಿಳಿಯುವದು. ಪ್ರಜಾ ಅಸ್ಯ ಅಸ್ತೀತಿ ಪ್ರಜಃ ಸಃ ನ ಇತಿ ಅಪ್ರಜಃ ತಂ. ಇದು ನಞ ಅಲ್ಲ. ಕಿಂತು ನಿಷೇಧಾರ್ಥಕ ಅಕಾರ. ಅ ನ ಪ್ರಜಾ ಯಸ್ಯ ತಂ ಎಂದೂ ಮಾಡಬಹುದು. 'ನಿತ್ಯಂ ಅಸಿಚ್ ಪ್ರಜಾಮೇಧಯೋಃ' (ಸಿ.ಕೌ.೮೬೨) ಎಂಬ ಸಮಾಸಾಂತವಿಧಿಯು ಅನಿತ್ಯವಾದ್ದರಿಂದ ಪ್ರವೃತ್ತವಾಗಿಲ್ಲ ಎಂದು ತಿಳಿಯಬೇಕು. ||೨೫||

**ತನ್ನಃ ಪಾಹಿ ಮಹಾಭಾಗ ಪೂರ್ವೈಃ ಸಹ ಗತಂ ತಮಃ ।**
**ಯಥಾ ತರೇಮ ದುಸ್ತಾರಂ ಪ್ರಜಯಾ ತದ್ವಿಧೇಹಿ ನಃ ॥೨೬॥**

**ತತ್** ಆದ್ದರಿಂದ **ನಃ** ನಮ್ಮನ್ನು **ಪಾಹಿ** ರಕ್ಷಿಸಿರಿ. **ಮಹಾಭಾಗ** ಮಹಾಭಾಗ್ಯವಂತರಾದ ಋಷಿವರ್ಯರೇ **ಪೂರ್ವೈಃ ಸಹ** ಹಿರಿಯರೊಂದಿಗೆ **ಗತಂ** ಹೊಂದಿದ **ದುಸ್ತಾರಂ** ದಾಟಲಾಗದ **ತಮಃ** ನರಕವನ್ನು **ಯಥಾ** ಹೇಗೆ **ಯಯಾ ಪ್ರಜಯಾ** ಯಾವ ಮಗನಿಂದ **ತರೇಮ** ದಾಟುವೆವೋ ಆ ಉಪಾಯವನ್ನು **ನಃ** ನಮಗೆ **ವಿಧೇಹಿ** ಮಾಡಿಕೊಡಿ. ಆ ಉಪಾಯವು ಯಾವುದೆಂದು ಚಿಂತೆ ಪಡಬೇಕಿಲ್ಲ ಎಂಬುದನ್ನು ಪ್ರಜಯಾ ಎಂಬುದರಿಂದ ತಿಳಿಸಿರುವರು. 'ನಾಪುತ್ರಸ್ಯ ಲೋಕೋಽಸ್ತಿ' ಎಂದಿದೆ.

ದುಸ್ತಾರಂ ಎಂಬುದರಿಂದ ಬೇರೆ ಉಪಾಯದಿಂದ ದಾಟಲಾಗದು ಎಂದು ತಿಳಿಸುವರು. ಯದ್ಯಪಿ 'ಋದೋರಪ್' ಎಂದು ಅಪ್ ಪ್ರತ್ಯಯವು ಬಂದರೆ ದುಸ್ತರಂ ಎಂದಾಗಬೇಕು. ಆದರೂ ಸ್ವಾರ್ಥಿಕ ಪ್ರಜ್ಞಾದಿ ಅಣ್ ಪ್ರತ್ಯಯ ಮಾಡಿದರೆ ತರ ಏವ ತಾರಃ ದುಸ್ಸಾಧಃ ತಾರಃ ಯಸ್ಯ ಸಃ ದುಸ್ತಾರಃ ತಂ, 'ಓಂ ಸಾಂಪರಾಯೇ ತರ್ತವ್ಯಾಭಾವಾತ್ ಓಂ' ಎಂಬ ವ್ಯಾಸರ ಉಕ್ತಿಗನುಸಾರವಾಗಿ ತೃಧಾತು ಒಂದಿದೆ ಎಂದು ಊಹಿಸಬೇಕು. ಆದರ ರೂಪವಿದು. ಕಾರಣ ಘಞ ಪ್ರತ್ಯಯ ಮಾಡಬಹುದು. 'ತತ್ರ ತಾರಾಥಮೂಲತ್ವಂ' ಎಂಬ ಅನುವ್ಯಾಖ್ಯಾನ ವ್ಯಾಖ್ಯಾನದಲ್ಲಿ ತರಂತಿ ಅನೇನ ಅನಿಷ್ಟನಿಚಯಂ ಓಂಕಾರಸ್ತಾರಃ ಎಂದು ಸುಧಾ-ಪರಿಮಳಗಳಲ್ಲಿ, ತಂತ್ರದೀಪಿಕೆಯಲ್ಲಿಯೂ ಹೇಳಿದೆ. ಎರಡು ಕ್ರಿಯಾಪದಗಳ ಅನ್ವಯಕ್ಕಾಗಿ, ನಃ ನಃ ಎಂದು ಎರಡು ಪದಗಳಿವೆ.

ನಮಗೆ ವಿಧಿಜ್ಞಾನವಿಲ್ಲವೆಂದು ಹೇಳುವರು. **ಅತದ್ವಿಧೇಹಿನಃ** ತದ್ವಿಧಾ ಪುತ್ರೋತ್ಪತ್ತಿಪ್ರಕಾರಕವಾದ, ಈಹಾ ಚೇಷ್ಟೆಯು, ಯೇಷಾಂ ಅಸ್ತಿ ತೇ ತದ್ವಿಧೇಹಿನಃ ತೇ ನ ಇತಿ ಅತದ್ವಿಧೇಹಿನಃ ನಃ ಎಂದನ್ವಯ. ಮಕ್ಕಳಾಗುವಂತೆ ವ್ಯಾಪರವಿಲ್ಲದ ನಮ್ಮನ್ನು ಎಂದರ್ಥ. ಮಹಾಭಾಗಾಶ್ಚ ತೇ ಪೂರ್ವೇ ಚ ತ್ಯೈಃ ಎಂದೂ ಮಾಡಬಹುದು. ತಮಃ ಗತಂ ಎಂದು ಮುಂದೆ ಆಗುವ ನಿಶ್ಚಯದಿಂದ ಹೇಳಿದ ಮಾತು. ।।೨೬।।

**ಶ್ರೀಶುಕ ಉವಾಚ –**

**ಇತ್ಯರ್ಥಿತಃ ಸ ಭಗವಾನ್ ಕೃಪಾಲುರ್ಬ್ರಹ್ಮಣಃ ಸುತಃ ।**
**ಶ್ರಪಯಿತ್ವಾ ಚರುಂ ತ್ವಾಷ್ಟ್ರಂ ತ್ವಷ್ಟಾರಮಯಜದ್ವಿಭುಃ ।।೨೭।।**

**ಇತಿ** ಮೇಲೆ ಹೇಳಿದಂತೆ **ಅರ್ಥಿತಃ** ಪ್ರಾರ್ಥಿತರಾದ **ಭಗವಾನ್** ಪೂಜ್ಯರಾದ **ಕೃಪಾಲುಃ** ದಯಾಶೀಲರಾದ **ಬ್ರಹ್ಮಣಃ ಸುತಃ** ಬ್ರಹ್ಮದೇವರ ಮಕ್ಕಳಾದ **ವಿಭುಃ** ರಾಜನ ಇಷ್ಟಾರ್ಥ ನೀಡಲು ಸಮರ್ಥರಾದ **ಸಃ** ಆ ಅಂಗಿರಋಷಿಗಳು **ತ್ವಾಷ್ಟ್ರಂ** ತ್ವಷ್ಟೃ ದೇವತಾಕವಾದ **ಚರುಂ** ಹವಿಸ್ಸನ್ನು **ಶ್ರಪಯಿತ್ವಾ** ಬೇಯಿಸಿ **ತ್ವಷ್ಟಾರಂ** ತ್ವಷ್ಟೃ ದೇವತಾಂತರ್ಗತ ತನ್ನಾಮಕ ಶ್ರೀಹರಿಯನ್ನು **ಅಯಜತ್** ಯಜ್ಞದಿಂದ ಪೂಜಿಸಿದರು.

ಕೃಪಾಂ ಲಾತಿ ಆದತ್ತೇ ಇತಿ ಕೃಪಾಲುಃ ಅಥವಾ 'ಗರ್ಗರ್ಯಾಲುರ್ಗಲಂತಿಕಾ' ಎಂದು ಅಮರವಿರುವದರಿಂದ ಕೃಪಾಪೂರ್ಣಕಲಶ ಸದೃಶರು ಎಂದರ್ಥ ಮಾಡಬಹುದು. ಕರ್ಕರ್ಯಾಲುರ್ಗಲಂತಿಕಾ ಎಂದೂ ಇದೆ. ಕರ್ಕರೀ, ಗರ್ಗರೀ ಎರಡು ಶಬ್ದಕ್ಕೂ ಕಲಶವೆಂದರ್ಥ. ಆದರಂತೆ ಆಲು ಶಬ್ದಕ್ಕೂ ಕಲಶವೆಂದರ್ಥ ಮುಂದೆ ಅವನ ಮಗನಾಗಿ ಜನಿಸಲು ಕಾರಣವೆಂಬ ಬುದ್ಧಿಯಿಂದ ಅಂಗಿರಸರು ತ್ವಾಷ್ಟ್ರನನ್ನು ಕುರಿತು ಯಜ್ಞ ಮಾಡಿದರು. ।।೨೭।।

**ಜ್ಯೇಷ್ಠಾ ಶ್ರೇಷ್ಠಾ ಚ ಯಾ ರಾಜ್ಞೋ ಮಹಿಷೀಣಾಂ ಚ ಭಾರತ ।**
**ನಾಮ್ನಾ ಕೃತದ್ಯುತಿಸ್ತಸ್ಯೈ ಯಜ್ಞೋಚ್ಛಿಷ್ಟಮದಾದ್ವಿಭುಃ ।।೨೮।।**

**ಭಾರತ** ಪರೀಕ್ಷಿತನೇ **ರಾಜ್ಞಃ** ರಾಜನ **ಮಹಿಷೀಣಾಂ** ಪತ್ನಿಯರಲ್ಲಿ **ಯಾ** ಯಾವಳು **ಜ್ಯೇಷ್ಠಾ** ವಯಸ್ಸಿನಿಂದ ಹಿರಿಯಳೋ ಮೊದಲು ಮದುವೆಯಾದವಳೋ **ಶ್ರೇಷ್ಠಾ ಚ** ಗುಣದಿಂದಲೂ ಶ್ರೇಷ್ಠಳೋ **ನಾಮ್ನಾ** ಹೆಸರಿನಿಂದ **ಕೃತದ್ಯುತಿಃ** ಕೃತದ್ಯುತಿ ಎಂಬ ಹೆಸರಿನವಳೋ **ತಸ್ಯೈ** ಅವಳಿಗೆ **ವಿಭುಃ** ಸಮರ್ಥರಾದ ಅಂಗಿರಸರು **ಯಜ್ಞೋಚ್ಛಿಷ್ಟಂ** ಹೋಮ ಮಾಡಿ ಉಳಿದ ಚರುವನ್ನು **ಅದಾತ್** ಕೊಟ್ಟರು.

'ಮಹಿಷೀ ನೃಪಪತ್ನ್ಯಾಂ ಚ' ಎಂದು ವಿಶ್ವಕೋಶವಿದೆ. 'ಕೃತಾಭಿಷೇಕಾ ಮಹಿಷೀ' ಎಂದು ಅಭಿಧಾನವೂ ಇದೆ. ಆದ್ದರಿಂದ ಮಹಿಷೀ ಎಂಬ ಶಬ್ದಕ್ಕೆ ಪಟ್ಟಾಭಿಷಿಕ್ತಳಾದ ರಾಜನ ಪತ್ನೀ ಎಂದೇ ಅರ್ಥ ಮಾಡಬೇಕು. ಆದರೂ ಇಲ್ಲಿ ಪ್ರತ್ಯೇಕವಾಗಿ ರಾಜ್ಞಃ ಎಂಬ ಶಬ್ದವನ್ನು ಪ್ರಯೋಗಿಸಿದ್ದರಿಂದ 'ವಿಶಿಷ್ಟವಾಚಕಾನಾಂ ಪದಾನಾಂ ಸತಿ ವಿಶೇಷ್ಯವಾಚಕಪದಸಮವಧಾನೇ ವಿಶೇಷ್ಯಮಾತ್ರಪರತ್ವಂ' ಎಂಬ ನ್ಯಾಯದಿಂದ ಮಹಿಷೀ ಎಂಬ ಶಬ್ದಕ್ಕೆ ಕೇವಲ ಪತ್ನೀ ಎಂದು ಅರ್ಥ ಮಾಡಬೇಕು.

ನಾಮ್ನಾ ಕೃತದ್ಯುತಿಃ ಎಂದದ್ದರಿಂದ ಅರ್ಥತಃ ಅಕೃತದ್ಯುತಿ ಅಂದರೆ ಅಪರ್ಯಾಪ್ತವಾದ ಕಾಂತಿಯುಳ್ಳವಳು ಅರ್ಥಾತ್ ಅತಿಶಯವಾದ ಕಾಂತಿ ಉಳ್ಳವಳು ಎಂದು ಅರ್ಥ. ।।೨೮।।

**ಅಥಾಹ ನೃಪತಿಂ ರಾಜನ್ ಭವಿತೈಕಸ್ತವಾತ್ಮಜಃ ।**
**ಹರ್ಷಶೋಕಪ್ರದಸ್ತುಭ್ಯಮಿತಿ ಬ್ರಹ್ಮಸುತೋ ಯಯೌ ।।೨೯।।**

**ರಾಜನ್** ಪರೀಕ್ಷಿತನೇ **ಬ್ರಹ್ಮಸುತಃ** ಅಂಗಿರಸನು **ಅಥ** ಅನಂತರ **ನೃಪತಿಂ ಪ್ರತಿ** ರಾಜನನ್ನು ಕುರಿತು **ರಾಜನ್** ಚಿತ್ರಕೇತುವೇ **ತುಭ್ಯಂ** ನಿನಗೆ **ಹರ್ಷಶೋಕಪ್ರದಃ** ಜನನದಿಂದ ಸಂತೋಷ, ಮರಣದಿಂದ ದುಃಖಗಳನ್ನು ಕೊಡುವ **ಏಕಃ** ಒಬ್ಬ **ಆತ್ಮಜಃ** ಮಗನು **ತವ** ನಿನಗೆ **ಭವಿತಾ** ಆಗುವನು **ಇತಿ** ಎಂದು **ಆಹ** ಹೇಳಿದರು. ಮತ್ತು **ಯಯೌ** ಹೊರಟು ಹೋದರು. ।।೨೯।।

**ಸಾಽಪಿ ತತ್ಪ್ರಾಶನಾದೇವ ಚಿತ್ರಕೇತೋರಧಾರಯತ್ ।**
**ಗರ್ಭಂ ಕೃತದ್ಯುತಿರ್ದೇವೀ ಕೃತ್ತಿಕಾಗ್ನೇರಿವಾತ್ಮಜಮ್ ।।೩೦।।**

**ಸಾ** ಜ್ಯೇಷ್ಠಳಾದ ಶ್ರೇಷ್ಠಳಾದ, ಮಹಿಷಿಯಾದ **ಕೃತದ್ಯುತಿಃ ದೇವೀ ಅಪಿ** ಕೃತದ್ಯುತಿ ದೇವಿಯು ಕೂಡಾ **ತತ್ಪ್ರಾಶನಾದೇವ** ಆ ಚರುವನ್ನು ಭಕ್ತಿಯಿಂದ ಭೋಜನ ಮಾಡಿದ್ದರಿಂದ **ಕೃತ್ತಿಕಾ** ನಕ್ಷತ್ರಾಭಿಮಾನಿಯು **ಅಗ್ನೇಃ** ಅಗ್ನಿಯ ದೆಸೆಯಿಂದ **ಆತ್ಮಜಂ ಇವ** ಷಣ್ಮುಖನನ್ನು ಮಗನಾಗಿ ಪಡೆದಂತೆ **ಚಿತ್ರಕೇತೋಃ** ಚಿತ್ರಕೇತುವಿನಿಂದ **ಗರ್ಭಂ** ಗರ್ಭವನ್ನು **ಅಧಾರಯತ್** ಧರಿಸಿದಳು. 'ದೇವೀ ಕೃತಾಭಿಷೇಕಾಯಾಂ' ಎಂದು ಅಮರವಿದ್ದದ್ದರಿಂದ ಪಟ್ಟಾಭಿಷಿಕ್ತಳಾದವಳು ಎಂದು ಅರ್ಥ. ನಿದರ್ಶನಾನಂತರ ಪ್ರದರ್ಶನ ಮಾಡದೇ (ದೃಷ್ಟಾಂತ ಕೊಟ್ಟ ಮೇಲೆ ದಾರ್ಷ್ಟಾಂತಿಕ ಹೇಳದೇ) ಅಗ್ನೇರಿವಾತ್ಮಜಂ ಎಂದು ಹೇಳಿದ್ದರಿಂದ 'ಕೇತುರಗ್ನೇಃ ಶುನೋಽಪಿ ವಾ' ಎಂದು

ಹೇಳಿದ್ದರಿಂದ ಶೀಘ್ರದಲ್ಲಿ ಅವನಿಗೇ ಹುಟ್ಟಿದವನಾದ್ದರಿಂದಲೂ ದ್ವಿಜನಾದ್ದರಿಂದ ಯೋಗ್ಯನಾದ್ದರಿಂದ ಅವನಂತೆ ಎಂದು ಸೂಚಿಸಿದಂತಾಯಿತು.

**ತಸ್ಯಾ ಅನುದಿನಂ ಗರ್ಭಃ ಶುಕ್ಲಪಕ್ಷ ಇವೋಡುಪಃ ।**
**ವವೃಧೇ ಶೂರಸೇನಸ್ಯ ತೇಜಸಾ ಶನಕೈರ್ನೃಪ ॥೩೦॥**

**ನೃಪ** ರಾಜನೇ **ಶೂರಸೇನಸ್ಯ ಚ** ಶೂರಸೇನ ದೇಶದ ರಾಜನಾದ ಚಿತ್ರಕೇತುವಿನ **ತೇಜಸಾ** ರೇತಸ್ಸಿನಿಂದ ಕೂಡಿದ **ತಸ್ಯಾಃ** ಕೃತದ್ಯುತಿಯ **ಗರ್ಭಃ** ಗರ್ಭವು **ಶುಕ್ಲಪಕ್ಷೇ** ಶುಕ್ಲಪಕ್ಷದಲ್ಲಿ **ಉಡುಪಃ ಇವ** ಚಂದ್ರನಂತೆ **ಶನಕೈಃ** ಮೆಲ್ಲನೇ **ವವೃಧೇ** ಬೆಳೆಯಿತು. ॥೩೦॥

**ಅಥ ಕಾಲ ಉಪಾವೃತ್ತೇ ಕುಮಾರಃ ಸಮಜಾಯತ ।**
**ಜನಯನ್ ಶೂರಸೇನಾನಾಂ ಶೃಣ್ವತಾಂ ಪರಮಾಂ ಮುದಮ್ ॥೩೧॥**

**ಅಥ** ಅನಂತರ. **ಕಾಲೇ** ಜನನ ಕಾಲವು. **ಉಪಾವೃತ್ತೇ** ಬಂದಿರಲು **ಶೃಣ್ವತಾಂ** ಜನನ ವಾರ್ತೆಯನ್ನು ಕೇಳಿದ **ಶೂರಸೇನಾನಾಂ** ಶೂರಸೇನ ದೇಶದ ಜನರಿಗೆ **ಪರಮಾಂ** ಅತಿಶಯವಾದ **ಮುದಂ** ಸಂತೋಷವನ್ನು **ಜನಯನ್** ಉಂಟು ಮಾಡುತ್ತಾ **ಕುಮಾರಃ** ಮಗನು **ಸಮಜಾಯತ** ಹುಟ್ಟಿದನು. ॥೩೧॥

**ಸ ರಾಜಾ ಸುಕುಮಾರಸ್ಯ ಸ್ನಾತಃ ಶುಚಿರಲಂಕೃತಃ ।**
**ವಾಚಯಿತ್ವಾಶಿಷೋ ವಿಪ್ರೈಃ ಕಾರಯಾಮಾಸ ಜಾತಕಮ್ ॥೩೩॥**

**ಸ್ನಾತಃ** ಮಗನ ಜನನವನ್ನು ಕೇಳಿ ಸಚೇಲ ಸ್ನಾನ ಮಾಡಿದ **ಶುಚಿಃ** ಶುದ್ಧನಾದ **ಸಃ ರಾಜಾ** ಆ ಚಿತ್ರಕೇತು ರಾಜನು **ಅಲಂಕೃತಃ ಸನ್** ಅಲಂಕಾರ ಮಾಡಿಕೊಂಡು **ಸುಕುಮಾರಸ್ಯ** ಉತ್ತಮನಾದ ಆ ಮಗನಿಗೆ **ವಿಪ್ರೈಃ** ಬ್ರಾಹ್ಮಣರಿಂದ **ಆಶಿಷಃ** ಆಶೀರ್ವಾದಗಳನ್ನು **ವಾಚಯಿತ್ವಾ** ಹೇಳಿಸಿ **ಜಾತಕಂ ಕಾರಯಾಮಾಸ** ಜಾತಕರ್ಮ ಮಾಡಿಸಿದನು. ॥೩೩॥

**ತೇಭ್ಯೋ ಹಿರಣ್ಯಂ ರಜತಂ ವಾಸಾಂಸ್ಯಾಭರಣಾನಿ ಚ ।**
**ಗ್ರಾಮಾನ್ ಹಯಾನ್ ಗಜಾನ್ ಪ್ರಾದಾದ್ಧೇನೂನಾಮರ್ಬುದಾನಿ ಷಟ್॥**

**ತೇಭ್ಯಃ** ಆ ಬ್ರಾಹ್ಮಣರಿಗೆ **ಹಿರಣ್ಯಂ** ಬಂಗಾರವನ್ನು **ರಜತಂ** ಬೆಳ್ಳಿಯನ್ನು **ವಾಸಾಂಸಿ** ಬಟ್ಟೆಗಳನ್ನು **ಆಭರಣಾನಿ ಚ** ಆಭರಣಗಳನ್ನು **ಗ್ರಾಮಾನ್** ಗ್ರಾಮಗಳನ್ನು **ಹಯಾನ್**

ಕುದುರೆಗಳನ್ನು **ಗಜಾನ್** ಆನೆಗಳನ್ನು **ಧೇನೂನಾಂ** ಆಕಳುಗಳ **ಷಟ್ ಅರ್ಬುದಾನಿ** ಆರು ಅರ್ಬುದಗಳನ್ನು **ಪ್ರಾದಾತ್** ಕೊಟ್ಟನು. ಅಂದರೆ ಅರವತ್ತು ಕೋಟಿ ಆಕಳುಗಳನ್ನು ದಾನ ಮಾಡಿದನೆಂದರ್ಥ. ।।೩೪।।

**ವವರ್ಷ ಕಾಮಾನನ್ಯೇಷಾಂ ಪರ್ಜನ್ಯ ಇವ ದೇಹಿನಾಮ್ ।**
**ಧನ್ಯಂ ಯಶಸ್ಯಮಾಯುಷ್ಯಂ ಕುಮಾರಸ್ಯ ಮಹಾತ್ಮನಃ ।।೩೫।।**

**ಪರ್ಜನ್ಯ ಇವ** ಮಳೆಯ ಅಭಿಮಾನಿದೇವತೆಯಂತೆ **ಅನ್ಯೇಷಾಂ ದೇಹಿನಾಂ** ಇತರ ಜನರಿಗೆ **ಕಾಮಾನ್** ಅವರವರ ಅಭೀಷ್ಟಗಳನ್ನು **ವವರ್ಷ** ಮಳೆಗರೆದನು. ಎಂತಹ ಜಾತಕರ್ಮ ಮಾಡಿದನೆಂದು ಹೇಳುತ್ತಾರೆ. **ಮಹಾತ್ಮನಃ** ಮಹಿಮಾವಂತನಾದ ಕುಮಾರನಿಗೆ **ಧನ್ಯಂ** ಸಂಪತ್ಕರವಾದುದು **ಯಶಸ್ಯಂ** ಕೀರ್ತಿಕರವಾದುದು **ಆಯುಷ್ಯಂ** ಆಯುಷ್ಯಪ್ರದವಾದುದು, ನಿತ್ಯವಾದ ಆಯುಷ್ಯರೂಪ ಮೋಕ್ಷ ಪ್ರದವಾದ, ಜಾತಕರ್ಮ ಮಾಡಿದನು ಎಂದರ್ಥ. ।।೩೫।।

**ಕೃಚ್ಛ್ರಲಬ್ಧೇಽಸ್ಯ ರಾಜರ್ಷೇಸ್ತನಯೇಽನುದಿನಂ ಪಿತುಃ ।**
**ಯಥಾ ನಿಃಸ್ವಸ್ಯ ಕೃಚ್ಛ್ರಾಪ್ತೇ ಧನೇ ಸ್ನೇಹೋಽನ್ವವರ್ಧತ ।।೩೬।।**

**ಅಸ್ಯ** ಈ ಮಗುವಿನ **ಪಿತುಃ** ತಂದೆಯಾದ **ರಾಜರ್ಷೇಃ** ಚಿತ್ರಕೇತುವಿಗೆ **ಕೃಚ್ಛ್ರಲಬ್ಧೇ** ಬಹು ಕಷ್ಟದಿಂದ ಪಡೆದ **ತನಯೇ** ಮಗನಲ್ಲಿ **ನಿಃಸ್ವಸ್ಯ** ದರಿದ್ರನಿಗೆ **ಕೃಚ್ಛ್ರಾಪ್ತೇ** ಕಷ್ಟದಿಂದ ಸಂಪಾದಿತವಾದ **ಧನೇ** ಹಣದಲ್ಲಿ **ಯಥಾ** ಹೇಗೆ **ಸ್ನೇಹಃ** ಮಮತೆಯು ಬೆಳೆಯುವದೋ **ತಥಾ** ಹಾಗೆ **ಸ್ನೇಹಃ** ಅಭಿಮಾನವು **ಅನುದಿನಂ** ಪ್ರತಿದಿನವು **ಅನ್ವವರ್ಧತ** ಬೆಳೆಯಿತು. ।।೩೬।।

**ಮಾತುಸ್ತ್ವತಿತರಾಂ ಪುತ್ರೇ ಸ್ನೇಹೋ ಮೋಹಸಮುದ್ಭವಃ ।**
**ಕೃತದ್ಯುತೇಃ ಸಪತ್ನೀನಾಂ ಪ್ರಜಾಕಾಮಜ್ವರೋಽಭವತ್ ।।೩೭।।**

**ಮಾತುಃ ಕೃತದ್ಯುತೇಃ ತು** ತಾಯಿಯಾದ ಕೃತದ್ಯುತಿಗಾದರೋ **ಪುತ್ರೇ** ಮಗನಲ್ಲಿ **ಮೋಹಸಮುದ್ಭವಃ** ನನ್ನದೆಂಬ ಅಜ್ಞಾನದಿಂದ ಹುಟ್ಟಿದ **ಸ್ನೇಹಃ** ಪ್ರೀತಿಯು **ಅತಿತರಾಂ ಅಭವತ್** ಬಹಳವಾಗಿ ಉಂಟಾಯಿತು. **ಸಪತ್ನೀನಾಂ ತು** ಕೃತದ್ಯುತಿಯ ಸವತಿಯರಿಗೆ **ಪ್ರಜಾಕಾಮಜ್ವರಃ** ಮಗುವಾಗಬೇಕೆಂಬ ಆಸೆಯಿಂದ ಅತಿಯಾಗಿ ತಾಪವು **ಅಭವತ್** ಆಯಿತು. (ಮೋಹಜನಕವಾದ ಎಂದೂ ಅರ್ಥ ಮಾಡಿರುವರು.)

**ಚಿತ್ರಕೇತೋರತಿಪ್ರೀತಿರ್ಯಥಾ ದಾರೇ ಪ್ರಜಾವತಿ ।**
**ನ ತಥಾನ್ಯೇಷು ಸಂಜಜ್ಞೇ ಬಾಲಂ ಲಾಲಯತೋಽನ್ವಹಮ್ ॥೩೮॥**

**ಅನ್ವಹಂ** ಪ್ರತಿದಿನವೂ **ಬಾಲಂ** ಮಗುವನ್ನು **ಲಾಲಯತಃ** ಮುದ್ದಿಸುವ **ಚಿತ್ರಕೇತೋಃ** ಚಿತ್ರಕೇತುವಿಗೆ **ಪ್ರಜಾವತಿ** ಮಗನನ್ನು ಪಡೆದ **ದಾರೇ** ಹೆಂಡತಿಯಲ್ಲಿ **ಯಥಾ** ಹೇಗೆ **ಅತಿಪ್ರೀತಿಃ** ಬಹು ಪ್ರೀತಿಯು **ಸಂಜಜ್ಞೇ** ಹುಟ್ಟಿತ್ತೋ **ತಥಾ** ಹಾಗೆ **ಅನ್ಯೇಷು** ಉಳಿದ ಹೆಂಡತಿಯರಲ್ಲಿ **ನ ಸಂಜಜ್ಞೇ** ಹುಟ್ಟಲಿಲ್ಲ.

ಇಲ್ಲಿ ಶ್ರೀಧರಸ್ವಾಮಿಯು **ದಾರೇ** ಎಂಬ ಏಕವಚನ ಆರ್ಷವೆಂದು ಹೇಳಿದ್ದು ಶ್ರೀಹರ್ಷನಿಗೆ ಹರ್ಷಪ್ರದವಲ್ಲವಾದ್ದರಿಂದ ಉಪೇಕ್ಷ್ಯವಾಗಿದೆ. ಯದ್ಯಪಿ 'ಅಥ ಪುಂಭೂಮ್ನಿ ದಾರಾಃ' ಎಂದು ಅಮರವಿದೆ. ದಾರ ಶಬ್ದವು ನಿತ್ಯಬಹುವಚನಾಂತವೆಂದು ಇದೆ. ಆದರೆ ಅದು ಪ್ರಾಯಿಕವೆಂದು ಭಾವ. ಏಕೆಂದರೆ ಸಿಕತಾ ಶಬ್ದ ಸ್ತ್ರೀಲಿಂಗ ನಿತ್ಯ ಬಹುವಚನಾಂತ. ಅದರಂತೆ ಅಪ್ಸರಾ ಶಬ್ದವೂ ಸ್ತ್ರೀಲಿಂಗ ಬಹುವಚನಾಂತವಾಗಿದ್ದರೂ 'ಏಕಾ ಚ ಸಿಕತಾ ತೈಲದಾನೇ ಸಮರ್ಥಾ' 'ಏಕಾಂ ಅಪ್ಸರಾಂ' ಮುಂತಾಗಿ ಮಹಾಭಾಷ್ಯ ಪ್ರಯೋಗವಿದ್ದುದರಿಂದ ಏಕವಚನವು ಸುಖವಾಗಿ ಹೇಳಲು ಬರುವದು. ದಾರೇ ಎಂದು ಏಕವಚನಾಂತ ಪ್ರಯೋಗ ಮಾಡಿದ್ದು ಸರಿಯೇ ಆಗಿದೆ. ಶ್ರೀಹರ್ಷನೂ ಕೂಡ ದ್ವಿರೂಪ ಕೋಶದಲ್ಲಿ ಭವೇದ್ದಾರಾಶ್ಚ ದಾರೋಽಪಿ ಜಲೌಕಾಶ್ಚ ಜಲೌಕಸಃ' ಎಂದು ಹೇಳಿರುವನು. ।।೩೮।।

**ತಾಃ ಪರ್ಯತಪ್ಯನ್ನಾತ್ಮಾನಂ ಗರ್ಹಯಂತ್ಯೋಽಭ್ಯಸೂಯಯಾ ।**
**ಅನಪತ್ಯೇನ ದುಃಖೇನ ರಾಜ್ಞಶ್ಚಾನಾದರೇಣ ಚ ॥೩೯॥**

**ತಾಃ** ಆ ಸವತಿಯರು **ಅಭ್ಯಸೂಯಯಾ** ಹೊಟ್ಟೆಕಿಚ್ಚಿನಿಂದ **ಆತ್ಮಾನಂ** ತಮ್ಮನ್ನು **ಗರ್ಹಯಂತ್ಯಃ** ದೂಷಿಸಿಕೊಳ್ಳುವವರಾಗಿ **ಅನಪತ್ಯೇನ** ಮಗನಿಲ್ಲದಿರುವದರಿಂದ ಉಂಟಾದ **ದುಃಖೇನ** ದುಃಖದಿಂದಲೂ **ರಾಜ್ಞಃ** ರಾಜನ **ಅನಾದರೇಣ ಚ** ಅನಾದರದಿಂದಲೂ **ಪರ್ಯತಪ್ಯನ್** ಅತ್ಯಂತ ಸಂತಾಪಗೊಂಡರು. ।।೩೯।।

**ಧಿಗಪ್ರಜಾಂ ಸ್ತ್ರಿಯಂ ಪಾಪಾಂ ಪತ್ಯುಶ್ಚಾಗೃಹಸಮ್ಮತಾಮ್ ।**
**ಸಪ್ರಜಾಭಿಃ ಸಪತ್ನೀಭಿರ್ದಾಸೀಮಿವ ತಿರಸ್ಕೃತಾಮ್ ॥೪೦॥**

**ಅಪ್ರಜಾಂ** ಸಂತತಿ ಇಲ್ಲದ ಆದ್ದರಿಂದಲೇ **ಪಾಪಾಂ** ಪಾಪಿಯಾದ **ಪತ್ಯುಃ** ಗಂಡನಿಗೆ **ಅಗೃಹಸಮ್ಮತಾಂ** ಪತ್ನಿಯೆಂದು ಸಮ್ಮತವಲ್ಲದ **ಸಪ್ರಜಾಭಿಃ** ಮಕ್ಕಳಿಂದ

ಕೂಡಿದ **ಸಪತ್ನೀಭಿಃ** ಸವತಿಯರಿಂದ **ದಾಸೀಂ ಇವ** ದಾಸಿಯಂತೆ **ತಿರಸ್ಕೃತಾಂ** ತಿರಸ್ಕರಸಲ್ಪಟ್ಟ **ಸ್ತ್ರಿಯಂ** ಸ್ತ್ರೀಗೆ **ಧಿಕ್** ಧಿಕ್ಕಾರವು. ನಿಜವಾಗಿ ಇಲ್ಲಿ ಒಬ್ಬ ಸವತಿಯೇ ಮಗು ಇದ್ದವಳಾದ್ದರಿಂದ ದುಃಖ ಕಾರಣಳಾಗಿದ್ದರೂ **ಸಪತ್ನೀಭಿಃ** ಎಂದು ಬಹುದುಃಖದಿಂದ ಬಹುವಚನ ಪ್ರಯೋಗವೆಂದು ತಿಳಿಯಬೇಕು. ||೪೦||

ಸ್ವಾಮಿಯ ಪ್ರೀತಿಯಿಲ್ಲದ ದಾಸಿತನವು ಅಪ್ರಯೋಜಕವೆಂದು ಹೇಳುತ್ತಾರೆ-

**ದಾಸೀನಾಂ ಕೋ ನು ಸಂತಾಪಃ ಸ್ವಾಮಿನಃ ಪರಿಚರ್ಯಯಾ ।**
**ಅಭೀಕ್ಷ್ಣಂ ಲಬ್ಧಮಾನಾನಾಂ ದಾಸ್ಯಾ ದಾಸೀವ ದುರ್ಭಗಾ ||೪೧||**

**ಸ್ವಾಮಿನಃ** ಯಜಮಾನನ **ಪರಿಚರ್ಯಯಾ** ಸೇವೆಯಿಂದ **ಅಭಿಕ್ಷ್ಣಂ** ಮತ್ತೆ ಮತ್ತೆ **ಲಬ್ಧಮಾನಾನಾಂ** ಮರ್ಯಾದೆಯನ್ನು ಸಂಪಾದಿಸಿಕೊಂಡ **ದಾಸೀನಾಂ** ದಾಸಿಯರಿಗೆ **ಸಂತಾಪಃ ಕಃ ನು** ಏನು ದುಃಖವು ? ನಾನಾದರೂ **ದಾಸ್ಯಾಃ ದಾಸೀ ಇವ** ದಾಸಿಯ ದಾಸಿಯಂತೆ **ದುರ್ಭಗಾ** ದುರ್ದೈವಳಾಗಿದ್ದೇನೆ. ||೪೧||

ಹಿಂದಿನ ಶ್ಲೋಕದಲ್ಲಿ 'ದಾಸೀಮಿವ ತಿರಸ್ಕೃತಾಂ' ಎಂದು ಉತ್ಪ್ರೇಕ್ಷಿಸಿದ್ದನ್ನು ತಾನೇ ಆಲೋಚಿಸಿ ತಿರಸ್ಕರಿಸುವರು ರಾಜನನ್ನು ಸಾಕ್ಷಾತ್ ಸೇವಿಸುವದರಿಂದ ಸತ್ಕಾರ ಪಡೆದ ದಾಸಿಯರು ರಾಜನ ಸ್ನೇಹಪಾತ್ರರು ಆದಕಾರಣ ಅವರಂತೆ ಎಂದು ಉತ್ಪ್ರೇಕ್ಷೆ ಸರಿಯಲ್ಲ. ಹಾಗಾದರೆ ನೀವು ಯಾರ ಸದೃಶರು ಎಂದರೆ ದುರ್ದೈವಿಗಳಾದ ರಾಜನ ಮುಖವನ್ನೇ ನೋಡದ ದಾಸಿಯರ ದಾಸಿಯರಂತೆ ಎಂದು ಭಾವ ||೪೧||

**ಏವಂ ಸಂದಹ್ಯಮಾನಾನಾಂ ಸಪತ್ನ್ಯಾಃ ಪುತ್ರಸಂಪದಾ ।**
**ರಾಜ್ಞೋಽಸಮ್ಮತವೃತ್ತೀನಾಂ ವಿದ್ವೇಷೋ ಬಲವಾನಭೂತ್ ||೪೨||**

**ಏವಂ** ಹೀಗೆ **ಸಪತ್ನ್ಯಾಃ ಪುತ್ರಸಂಪದಾ** ಸವತಿಯ ಪುತ್ರಸಂಪತ್ತಿನಿಂದ **ಸಂದಹ್ಯಮಾನಾನಾಂ** ಒಳಗೆ ಬೆಂದು ಹೋಗುತ್ತಿರುವ **ರಾಜ್ಞಃ** ಚಿತ್ರಕೇತುವಿಗೆ **ಅಸಮ್ಮತವೃತ್ತೀನಾಂ** ಅನಭಿಮತವಾದ ಆಚರಣ ಉಳ್ಳ ಅಥವಾ ಬಂಜೆಯರಾದ್ದರಿಂದ ಅಸಮ್ಮತವಾದ ಜೀವನವುಳ್ಳ ಅವರಿಗೆ **ವಿದ್ವೇಷಃ** ಆ ಮಗುವಿನಲ್ಲಿ ಅತಿಶಯ ದ್ವೇಷವು **ಬಲವಾನ್ ಅಭೂತ್** ದೃಢವಾಗಿ ಆಯಿತು ||೪೨||

**ವಿದ್ವೇಷಾನಷ್ಟಮತಯಃ ಸ್ತ್ರಿಯೋ ದಾರುಣಚೇತಸಃ ।**
**ಗರಂ ದದುಃ ಕುಮಾರಾಯ ವಿದ್ವೇಷಾನ್ನೃಪತಿಂ ಪ್ರತಿ ||೪೩||**

**ವಿದ್ವೇಷಾತ್** ಅತಿಯಾದ ದ್ವೇಷದಿಂದ **ನಷ್ಟಮತಯಃ** ವಿವೇಕವನ್ನು ಕಳೆದುಕೊಂಡ **ದಾರುಣಚೇತಸಃ** ಕ್ರೂರಮನಸ್ಸಿನ **ಸ್ತ್ರಿಯಃ** ಆ ಹೆಂಗಸರು **ನೃಪತಿಂ ಪ್ರತಿ** ರಾಜನಲ್ಲಿಯ ದ್ವೇಷದಿಂದ **ವಿದ್ವೇಷಾತ್** ತಮ್ಮನ್ನು ಪ್ರೀತಿಸುವದಿಲ್ಲವೆಂಬ ಆಕ್ರೋಶದಿಂದ **ದುರ್ಮರ್ಷಾಃ** ಎಂಬ ಪಾಠದಲ್ಲಿ ಅಸಹನೆಯುಳ್ಳವರಾಗಿ ಎಂದರ್ಥ. **ಕುಮಾರಾಯ** ಆ ಮಗನಿಗೆ **ಗರಂ** ವಿಷವನ್ನು **ದದುಃ** ಕೊಟ್ಟರು. 'ಕಿಂ ಕಠಿಣಂ ಸ್ತ್ರೀಹೃದಯಂ' ಎಂದಿದೆಯಷ್ಟೇ. ।।೪೩।।

**ಕೃತದ್ಯುತಿರಜಾನಂತೀ ಸಪತ್ನೀನಾಮಘಂ ಮಹತ್ ।**
**ಸುಪ್ತ ಏವೇತಿ ಸಂಚಿಂತ್ಯ ನಿರೀಕ್ಷ್ಯ ವ್ಯಚರದ್ ಗೃಹೇ ।।೪೪।।**

**ಸಪತ್ನೀನಾಂ** ಸವತಿಯರ **ಮಹತ್ ಅಘಂ** ಮಗುವಿಗೆ ವಿಷ ಕೊಟ್ಟ ಮಹಾಪಾಪವನ್ನು **ಅಜಾನಂತೀ** ತಿಳಿಯದಿರುವ **ಕೃತದ್ಯುತಿಃ** ತಾಯಿಯಾದ ಕೃತದ್ಯುತಿಯು **ನಿರೀಕ್ಷ್ಯ** ಬಂದು ನೋಡಿ **ಸುಪ್ತ ಏವ** ಮಗನು ಮಲಗಿಯೇ ಇರುವನು **ಇತಿ** ಎಂದು **ಸಂಚಿಂತ್ಯ** ಮನಸ್ಸಿನಲ್ಲಿ ವಿಚಾರಮಾಡಿ **ಗೃಹೇ** ಮನೆಯಲ್ಲಿ **ವ್ಯಚರತ್** ಓಡಾಡುತ್ತಿದ್ದಳು. ।।೪೪।।

**ಶಯಾನಂ ಸುಚಿರಂ ಬಾಲಮುಪಧಾರ್ಯ ಮನೀಷಿಣೀ ।**
**ಪುತ್ರಮಾನಯ ಮೇ ಭದ್ರೇ ಇತಿ ಧಾತ್ರೀಮಚೋದಯತ್ ।।೪೫।।**

**ಮನೀಷಿಣೀ** ಬುದ್ಧಿವಂತಳಾದ ಆ ಕೃತದ್ಯುತಿಯು **ಬಾಲಂ** ಮಗುವನ್ನು **ಸುಚಿರಂ** ಬಹಳ ಹೊತ್ತು **ಶಯಾನಂ** ಮಲಗಿರುವದನ್ನು **ಉಪಧಾರ್ಯ** ಗಮನಿಸಿ **ಧಾತ್ರೀಂ** ಮಗುವಿಗೆ ಸ್ತನ್ಯಪಾನವನ್ನು ಕೊಡುವ ದಾದಿಯನ್ನು **ಭದ್ರೇ** ಮಂಗಳಕರಳೇ **ಮೇ** ನನ್ನ **ಪುತ್ರಂ** ಮಗುವನ್ನು **ಆನಯ** ಎತ್ತಿಕೊಂಡು ಬಾ **ಇತಿ** ಎಂದು **ಅಚೋದಯತ್** ಪ್ರೇರಿಸಿದಳು. ।।೪೫।।

**ಸಾ ಶಯಾನಮುಪವ್ರಜ್ಯ ದೃಷ್ಟ್ವಾ ಚೋತ್ತಾರಲೋಚನಮ್ ।**
**ಪ್ರಾಣೇಂದ್ರಿಯಾತ್ಮಭಿಸ್ತ್ಯಕ್ತಂ ಹತಾಸ್ಮೀತ್ಯಪತದ್ಭುವಿ ।।೪೬।।**

ಸಾ ದಾದಿಯು **ಶಯಾನಂ** ಮಲಗಿದ ಮಗುವನ್ನು **ಉಪಾವ್ರಜ್ಯ** ಸಮೀಪಿಸಿ **ಪ್ರಾಣೇಂದ್ರಿಯಾತ್ಮಭಿಃ ತ್ಯಕ್ತಂ** ಪಂಚಪ್ರಾಣಗಳಿಂದಲೂ ದಶೇಂದ್ರಿಯಗಳಿಂದಲೂ ಮನಸ್ಸಿನಿಂದಲೂ ಜೀವನಿಂದಲೂ ಬಿಡಲ್ಪಟ್ಟ ಆದ್ದರಿಂದಲೇ **ಉತ್ತಾರಲೋಚನಂ**

ಕಣ್ಣುಗಳನ್ನು ಮೇಲೆ ಮಾಡಿದ ಆ ಮಗುವನ್ನು ದೃಷ್ಟ್ವಾ ನೋಡಿ ಹತಾಸ್ಮಿ ನಾನು ಹತಳಾದೆ ಇತಿ ಎಂದು ಭುವಿ ಭೂಮಿಯಲ್ಲಿ ಅಪತತ್ ಬಿದ್ದು ಬಿಟ್ಟಳು. ।।೪೬।।

**ತಸ್ಯಾಸ್ತದಾಕರ್ಣ್ಯ ಭೃಶಾತುರಸ್ವರಂ**
**ಘ್ನಂತ್ಯಾಃ ಕರಾಭ್ಯಾಮುರ ಉಚ್ಚಕೈರಪಿ ।**
**ಪ್ರವಿಶ್ಯ ರಾಜ್ಞೀ ತ್ವರಯಾತ್ಮಜಾಂತಿಕಂ**
**ದದರ್ಶ ಬಾಲಂ ಸಹಸಾ ಮೃತಂ ಸುತಮ್ ।।೪೭।।**

ಕರಾಭ್ಯಾಂ ಕೈಗಳಿಂದ ಉಚ್ಚಕೈಃ ಗಟ್ಟಿಯಾಗಿ ಶಬ್ದವಾಗುವಂತೆ ಉರಃ ಎದೆಯನ್ನು ಘ್ನಂತ್ಯಾಃ ಹೊಡೆದುಕೊಳ್ಳುತ್ತಿದ್ದ ತಸ್ಯಾಃ ದಾದಿಯ ಭೃಶಾತುರಂ ಅತ್ಯಂತ ದುಃಖದ ಸ್ವರಂ ಧ್ವನಿಯನ್ನು ವಚಃ ಮಾತನ್ನು ಆಕರ್ಣ್ಯ ಕೇಳಿ ರಾಜ್ಞೀ ರಾಣಿಯಾದ ಕೃತದ್ಯುತಿಯು ತ್ವರಯಾ ಶೀಘ್ರವಾಗಿ ಆತ್ಮಜಾಂತಿಕಂ ಮಗುವಿನ ಸಮೀಪವನ್ನು ಪ್ರವಿಶ್ಯ ಹೊಂದಿ ಸಹಸಾ ಇದ್ದಕ್ಕಿದ್ದಂತೆ ಆಕಸ್ಮಾತ್ ಮೃತಂ ಸತ್ತುಹೋಗಿದ್ದ ಬಾಲಂ ಸುತಂ ಸಣ್ಣ ಮಗುವನ್ನು ದದರ್ಶ ನೋಡಿದಳು. ।।೪೭।।

**ಪಪಾತ ಭೂಮೌ ಪರಿವೃದ್ಧಯಾ ಶುಚಾ**
**ಮುಮೋಹ ವಿಭ್ರಷ್ಟಶಿರೋರುಹಾಂಬರಾ ।**
**ತತೋ ನೃಪಾಂತಃಪುರವರ್ತಿನೋ ಜನಾ**
**ನರಾಶ್ಚ ನಾರ್ಯಶ್ಚ ನಿಶಮ್ಯ ರೋದನಮ್ ।।**
**ಆಗತ್ಯ ತುಲ್ಯವ್ಯಸನಾಃ ಸುದುಃಖಿತಾಃ**
**ತಾಶ್ಚ ವ್ಯಲೀಕಂ ರುರುದುಃ ಕೃತಾಗಸಃ ।।೪೮।।**

ಪರಿವೃದ್ಧಯಾ ಅತಿಯಾಗಿ ಬೆಳೆದ ಶುಚಾ ದುಃಖದಿಂದ ವಿಭ್ರಷ್ಟಶಿರೋರುಹಾಂಬರಾ ಹರವಲ್ಪಟ್ಟ ತಲೆಗೂದಲು ಮತ್ತು ಬಟ್ಟೆಗಳುಳ್ಳವಳಾಗಿ ಮುಮೋಹ ಮೂರ್ಛಿತಳಾದಳು ಭೂಮೌ ಪಪಾತ ಭೂಮಿಯಲ್ಲಿ ಬಿದ್ದಳು. ತತಃ ಅನಂತರ ನೃಪ ಪರೀಕ್ಷಿತನೇ ಅಂತಃಪುರವರ್ತಿನಃ ಅಂತಃಪುರದಲ್ಲಿರುವ ನರಾಃ ಚ ಗಂಡಸರು ಚ ಮತ್ತು ನಾರ್ಯಃ ಹೆಂಗಸರೂ ಜನಾಃ ಜನರು ರೋದನಂ ಅಳುವದನ್ನು ನಿಶಮ್ಯ ಕೇಳಿ ಆಗತ್ಯ ಬಂದು ತುಲ್ಯವ್ಯಸನಾಃ ಸಮಾನ ವ್ಯಸನವುಳ್ಳವರಾಗಿ ಸುದುಃಖಿತಾಃ ಬಹಳ ದುಃಖವುಳ್ಳವರು ಆಸನ್ ಆದರು ಕೃತಾಗಸಃ ಮಗುವಿಗೆ ವಿಷಕೊಟ್ಟು ಅಪರಾಧ ಮಾಡಿದ ತಾಃ ಒಂದು ಕಡಿಮೆ ಹತ್ತು ಕೋಟಿ ಸಂಖ್ಯಾಕರಾದ ಆ ಸವತಿಯರು ವ್ಯಲೀಕಂ ಸುಳ್ಳಾಗಿ ರುರುದುಃ ಅತ್ತರು ದುಃಖವಿದ್ದವರಂತೆ ನಟಿಸಿದರು. ।।೪೮।।

**ಶ್ರುತ್ವಾ ಮೃತಂ ಪುತ್ರಮಲಕ್ಷಿತಾಂತಕಂ**
**ವಿನಷ್ಟದೃಷ್ಟಿಃ ಪ್ರಪತನ್ ಸ್ಖಲನ್ನಪಿ ।**
**ಸ್ನೇಹಾನುಬಂಧೈಧಿತಯಾ ಶುಚಾ ಭೃಶಂ**
**ವಿಮೂರ್ಛಿತೋಽನುಪ್ರಕೃತಿರ್ದ್ವಿಜೈರ್ವೃತಃ ॥೪೯॥**

**ಸಃ** ಆ ಚಿತ್ರಕೇತುವು **ಅಲಕ್ಷಿತಾಂತಕಂ** ನೀರೋಗಿಯಾದುದರಿಂದ ಸಾವಿಗೆ ಕಾರಣವೇ ತಿಳಿಯದಿರುವ **ಪುತ್ರಂ** ಮಗನನ್ನು **ಮೃತಂ** ಸತ್ತನೆಂದು **ಶ್ರುತ್ವಾ** ಕೇಳಿ **ವಿನಷ್ಟದೃಷ್ಟಿಃ** ಕಣ್ಣುಕಾಣದವನಾಗಿ **ಪ್ರಪತನ್** ಬೀಳುತ್ತಾ **ಅಪಿ** ಮತ್ತು **ಸ್ಖಲನ್** ಮುಗ್ಗರಿಸುತ್ತಾ **ಸ್ನೇಹಾನುಬಂಧೈಧಿತಯಾ** ಪ್ರೀತಿಯ ಸಂಬಂಧದಿಂದ ಬೆಳೆದ **ಶುಚಾ** ದುಃಖದಿಂದ **ಅನುಪ್ರಕೃತಿಃ** ಮಂತ್ರಿ ಮುಂತಾದ ಪ್ರಜೆಗಳಿಂದ ಕೂಡಿಕೊಂಡು **ದ್ವಿಜೈಃ ವೃತಃ** ಜೊತೆಗೆ ಬಂದ ಬ್ರಾಹ್ಮಣರಿಂದ ಸುತ್ತುವರೆದವನಾಗಿ **ಭೃಶಂ** ಬಹಳವಾಗಿ **ವಿಮೂರ್ಛಿತಃ** ಪ್ರಜ್ಞೆ ತಪ್ಪಿ ಬಿದ್ದನು. ॥೪೯॥

**ಪಪಾತ ಬಾಲಸ್ಯ ಸ ಪಾದಮೂಲೇ**
**ಮೃತಸ್ಯ ವಿಸ್ರಸ್ತಶಿರೋರುಹಾಂಬರಃ ।**
**ದೀರ್ಘಂ ಶ್ವಸನ್ ಬಾಷ್ಪಕಲೋಪರೋಧತೋ**
**ನಿರುದ್ಧಕಂಠೋ ನ ಶಶಾಕ ಭಾಷಿತುಮ್ ॥೫೦॥**

**ವಿಸ್ರಸ್ತಶಿರೋರುಹಾಂಬರಃ** ಬಿಚ್ಚಿದ ತಲೆಗೂದಲು ಮತ್ತು ಬಟ್ಟೆಗಳುಳ್ಳ **ಸಃ** ಚಿತ್ರಕೇತುವು **ಮೃತಸ್ಯ ಬಾಲಸ್ಯ** ಸತ್ತ ಹುಡುಗನ **ಪಾದಮೂಲೇ ಪಪಾತ** ಕಾಲುಗಳ ಬುಡದಲ್ಲಿ ಬಿದ್ದನು. ಇದರಿಂದ ಕರ್ತವ್ಯಾಕರ್ತವ್ಯ ವಿವೇಕ ಕಳೆದುಕೊಂಡಿದ್ದನೆಂದು ತಿಳಿಯುವದು. **ದೀರ್ಘಂ ಶ್ವಸನ್** ನಿಟ್ಟುಸಿರು ಬಿಡುತ್ತಾ **ಬಾಷ್ಪಕಲೋಪರೋಧತಃ** ಕಣ್ಣೀರಿನ ಕಣಗಳ ತಡೆಯಿಂದ **ನಿರುದ್ಧಕಂಠಃ** ಗಂಟಲು ಕಟ್ಟಿದವನಾಗಿ **ಭಾಷಿತುಂ ನ ಶಶಾಕ** ಮಾತನಾಡಲು ಸಮರ್ಥನಾಗಲಿಲ್ಲ. ॥೫೦॥

**ಪತಿಂ ನಿರೀಕ್ಷ್ಯೋರುಶುಚಾರ್ಪಿತಂ ತದಾ**
**ಮೃತಂ ಚ ಬಾಲಂ ಸುತಮೇಕಸಂತತಿಮ್ ।**
**ಜನಸ್ಯ ರಾಜ್ಞೀ ಪ್ರಕೃತೇಶ್ಚ ಹೃದ್ರುಜಂ**
**ಸತೀ ದಧಾನಾ ವಿಲಲಾಪ ಚಿತ್ರಧಾ ॥೫೦॥**

**ತದಾ** ಆಗ **ಸತೀ** ಪತಿವ್ರತೆಯಾದ **ರಾಜ್ಞೀ** ರಾಣಿಯು **ಉರುಶುಚಾ ಅರ್ಪಿತಂ** ಬಹಳ ದುಃಖದಿಂದ ಆವರಿಸಿದ **ಪತಿಂ** ಗಂಡನನ್ನು **ಏಕಸಂತತಿಂ** ಒಂದೇ ಸಂತತಿಯಾದ **ಸುತಂ** ಮಗನಾದ **ಬಾಲಂ** ಹುಡುಗನನ್ನು **ಮೃತಂ ಚ** ಸತ್ತುದನ್ನೂ **ನಿರೀಕ್ಷ್ಯ** ನೋಡಿ **ಜನಸ್ಯ** ಜನರ **ಪ್ರಕೃತೇಃ** ಮಂತ್ರಿ ಮೊದಲಾದವರ **ಹೃದ್ರುಜಂ** ಹೃದಯದ ಸಂಕಟವನ್ನು **ದಧಾನಾ** ಧರಿಸುವವಳಾಗಿ **ಚಿತ್ರಧಾ ವಿಲಲಾಪ** ಅನೇಕ ರೀತಿ ಹೇಳಿಕೊಂಡು ಅತ್ತಳು. ||೫೦||

**ಸ್ತನದ್ವಯಂ ಕುಂಕುಮಪಂಕಮಂಡಿತಂ**
**ನಿಷಿಂಚತೀ ಸಾಂಜನಬಾಷ್ಪಬಿಂದುಭಿಃ ।**
**ವಿಕೀರ್ಯ ಕೇಶಾನ್ ವಿಗಲತ್ಸ್ರಜಃ ಸುತಂ**
**ಶುಶೋಚ ಚಿತ್ರಂ ಕುರರೀವ ದುಷ್ಕರಮ್ ||೫೨||**

**ರಾಜ್ಞೀ** ರಾಣಿಯು **ಕುಂಕುಮಪಂಕಮಂಡಿತಂ** ಕೇಸರಿಯ ಹಸಿ ಗಂಧದಿಂದ ಅಲಂಕೃತವಾಗಿದ್ದ **ಸ್ತನದ್ವಯಂ** ಎರಡು ಸ್ತನಗಳನ್ನು **ಸಾಂಜನಬಾಷ್ಪಬಿಂದುಭಿಃ** ಕಾಡಿಗೆಯಿಂದ ಕೂಡಿದ ಕಣ್ಣೀರಿನ ಹನಿಗಳಿಂದ **ನಿಷಿಂಚತೀ ಸತೀ** ಸ್ನಾನ ಮಾಡಿಸುವವಳಾಗಿ **ವಿಗಲತ್** ಉದರ ಕೆಳಗೆ ಬೀಳುತ್ತಿರುವ **ಸ್ರಜಃ** ಹೂಗಳನ್ನು **ಕೇಶಾನ್** ತಲೆಗೂದಲುಗಳನ್ನು **ವೀಕೀರ್ಯ** ಹರಡಿಕೊಂಡು **ಕುರರೀ ಇವ** ಹೆಣ್ಣು ಕೂರುವ ಹಕ್ಕಿಯಂತೆ (ಮೀನು ತಿನ್ನುವ ಜಲಚರ) **ದುಷ್ಕರಂ** ಕೇಳಲಾಗದಂತೆ **ಚಿತ್ರಂ** ಬಗೆಬಗೆಯಾಗಿ **ಸುತಂ** ಮಗನಿಗಾಗಿ **ಶುಶೋಚ** ಶೋಕಿಸಿದಳು 'ಸುಸ್ವರಂ' ಎಂಬ ಪಾಠದಲ್ಲಿ ರಾಗಸಹಿತವಾಗಿ ಎಂದರ್ಥ.

ಶೋಕರೀತಿಯನ್ನು ಹೇಳುತ್ತಾರೆ-

**ಅಹೋ ವಿಧಾತಸ್ತ್ವಮತೀವ ಬಾಲಿಶೋ**
**ಯಸ್ತ್ವಾತ್ಮಸೃಷ್ಟ್ಯಪ್ರತಿರೂಪಮೀಹಸೇ ।**
**ಪರೇ ತು ಜೀವತ್ಯಪರಸ್ಯ ಯಾ ಮೃತಿಃ**
**ವಿಪರ್ಯಯಶ್ಚೇತ್ತ್ವಮಸಿ ಧ್ರುವಂ ಪರಃ ||೫೩||**

**ಹೇ ವಿಧಾತಃ** ಎಲೋ ಸೃಷ್ಟಿಕರ್ತನೇ **ತ್ವಂ** ನೀನು **ಅತೀವ ಬಾಲಿಶಃ** ಅತ್ಯಂತ ಮೂರ್ಖನು (ಹುಡುಗನು, ಜಡಕ್ಕಿಂತ ಜಡನು) ವಿಧಾತನನ್ನು ಬಾಲಿಶ ಎಂದು ಯಾಕೆ ಸಂಬೋಧಿಸಿದರು ಎಂಬುದಕ್ಕೆ ಹೇಳುತ್ತಾರೆ. **ಯಃ ತ್ವಂ** ಯಾವ ನೀನು

**ಆತ್ಮಸೃಷ್ಟ್ಯಪ್ರತಿರೂಪಂ** ನಿನ್ನ ಸೃಷ್ಟಿ ಕಾರ್ಯಕ್ಕೆ ವಿರುದ್ಧವಾಗಿ ಇಷ್ಟ ಪಡುತ್ತಿರುವಿ ಇದು ಹೇಗೆ ಸೃಷ್ಟಿಗೆ ವಿರುದ್ಧ ಎಂದರೆ ಹೇಳುತ್ತಾರೆ. **ಪರೇ** ಮೊದಲು ಹುಟ್ಟಿದ ತಂದೆ-ತಾಯಿಗಳು **ಜೀವತಿ ಸತಿ** ಬದುಕಿರುವಾಗಲೇ **ಅಪರಸ್ಯ** ಅನಂತರ ಹುಟ್ಟಿದ ಮಗ ಮುಂತಾದವರ **ಯಾ** ಯಾವ **ಮೃತಿಃ** ಮರಣವು ಸೃಷ್ಟಿಗೆ ಅನುಕೂಲವಲ್ಲ ಅಂದರೆ ಸೃಷ್ಟಿಯನ್ನು ಬೆಳೆಸಲು ಹೊರಟ ನೀನು ಹುಟ್ಟಿಸುವ ಸಾಮರ್ಥ್ಯವುಳ್ಳ ಹುಡುಗರನ್ನು ಸಾಯಿಸುವಿ. ಸಾಮರ್ಥ್ಯವಿಲ್ಲದ ಮುದುಕರನ್ನು ಬದುಕಿಸುವಿ. ಇದರಿಂದ ಸೃಷ್ಟಿ ಮುಂದುವರಿಯಲಾರದು ಕಾರಣ ಇಂತಹ ಕಾರ್ಯ ಮಾಡಿದ ನೀನು ಮಂದಬುದ್ಧಿ ಎಂದರ್ಥ. ತುಶಬ್ದದಿಂದ ಸಂಹಾರಕಾಲದಲ್ಲಿ ಅನಂತರ ಹುಟ್ಟಿದ್ದು ಮೊದಲು ಹೋಗುವದು. ಕ್ರಮವಾಗಿದ್ದರೂ ಸ್ಥಿತಿಕಾಲದಲ್ಲಿ ಈ ಕ್ರಮವು ಅನುಪಪನ್ನವೆಂದು ಸೂಚಿಸಿರುವರು. ಹಾಗಾದರೆ ಪರಿಹಾರ ಹೇಗೆ ಎಂದರೇ ಹೇಳುವರು. **ವಿಪರ್ಯಯಶ್ಚೇತ್** ಮೇಲಿನ ಕ್ರಮಕ್ಕೆ ವಿರುದ್ಧಕ್ರಮವಾದರೆ ಅಂದರೆ ಮೊದಲು ಹುಟ್ಟಿದವನು ಮೊದಲು ಸಾಯುವದು ಅನಂತರ ಹುಟ್ಟಿದವನು ಅನಂತರ ಸಾಯುವದು ಹೀಗಾದಲ್ಲಿ **ಧ್ರುವಂ** ನಿಶ್ಚಯವಾಗಿ **ತ್ವಂ** ನೀನು **ಪರಃ ಅಸಿ** ಬಾಲಿಶ ಭಿನ್ನನು ಅಂದರೆ ವಿವೇಕಿ ಎಂದಾಗುವ ನಿನ್ನ ವ್ಯಾಪಾರಕ್ಕೆ ತಕ್ಕ ವ್ಯಾಪಾರ ಮಾಡಿದ್ದರಿಂದ ಬುದ್ಧಿವಂತನೆಂದರ್ಥ. **ವಿಪರ್ಯಯಶ್ಚೇತ್** ವ್ಯತ್ಕ್ರಮವಾಗಿದ್ದಲ್ಲಿ **ತ್ವಂ** ನೀನು **ಧ್ರುವಂ** ನಿಶ್ಚಯವಾಗಿ **ಪರಃ ಅಸಿ** ಪ್ರಾಣಗಳಿಗೆ ದುಃಖಕಾರಿಯಾದ್ದರಿಂದ ಶತ್ರುವಾಗುವಿ. ಕೃಪಾಳುವಲ್ಲ ಹೀಗೂ ಅರ್ಥ ಮಾಡಿರುವರು. ತು ಎಂಬುದರಿಂದ ಈ ಬಾಲಿಶತ್ವವು ಶೋಕದಿಂದ ಆಪಾದಿಸುವದು ಹೊರತು ನಿನ್ನಲ್ಲಿ ವಾಸ್ತವಿಕವಾಗಿ ಇಲ್ಲವೆಂದು ಸೂಚಿಸುತ್ತಿರುವರು.

ಮೇಲಿನ ಶ್ಲೋಕದಲ್ಲಿ ಮಹಾಭಗವದ್ಭಕ್ತನಾದ ಚಿತ್ರಕೇತುವಿನ ನಿಯತಪತ್ನಿಯಾದ ಕೃತದ್ಯುತಿಯು ಧೈರ್ಯಗೆಟ್ಟವಳಾಗಿ ಚತುರಾನನಚಾತುರಿಯನ್ನು ಆತುರಳಾಗಿ ಬಾಲಿಶ ಎಂದಳು ಎಂಬುದರ ಶಂಕೆಯನ್ನು ಪರಿಹರಿಸಲು ಆಚಾರ್ಯರು ಹೇಳುವರು-

ತಾತ್ಪರ್ಯ

**'ಸಂತಾಪಕ್ರೋಧರಾಗಾದಿಷ್ವನರ್ಥಕವಚಃ ಕ್ವಚಿತ್' ಇತಿ ಶಬ್ದನಿರ್ಣಯೇ ॥**

ಸಂತಾಪ, ಕ್ರೋಧ, ದ್ವೇಷ, ರಾಗಾದಿಗಳು ಇರುವಾಗ ಕೆಲವು ಸಲ ಜ್ಞಾನಿಗಳು ಅಜ್ಞಾನಿಗಳಂತೆ ಮಾತನಾಡುವರು. ಕೃತದ್ಯುತಿಯ ಮಾತುಗಳು ಸಂತಾಪ

ಮೂಲಕಗಳೇ ಹೊರತು ಮಿಥ್ಯಾಜ್ಞಾನ ಮೂಲಕವಲ್ಲವೆಂದು ಶಬ್ದನಿರ್ಣಯದಲ್ಲಿದೆ. ಆದ್ದರಿಂದ ಅನರ್ಥಕಾರಕಗಳಲ್ಲವೆಂದು ಭಾವ. ಪಂಚಮಸ್ಕಂಧದಲ್ಲಿಯೂ 'ಕಾ ತ್ವಂ ಚಿಕೀರ್ಷಸಿ ವನೇ ಮುನಿವರ್ಯ ಶೈಲೇ' ಎಂಬ ಶ್ಲೋಕತಾತ್ಪರ್ಯದಲ್ಲಿ 'ಪರಿಹಾಸ ಪ್ರಲಾಪಾದಿಷ್ವನರ್ಥಾ ವಾಗಪೀಷ್ಯತೇ' ಎಂದು ಹೇಳಿದ್ದಾರೆ. ಈಗಲೂ ಪ್ರಲಾಪಕಾಲವಾದುದರಿಂದ ಬಾಲಿಶ ಎಂದು ಬ್ರಹ್ಮದೇವರನ್ನು ಸಂಬೋಧಿಸಿದರೂ ಕೃತದ್ಯುತಿಗೆ ಪಾಪವು ಬರಲಿಲ್ಲ. **ಆತ್ಮಸೃಷ್ಟೇ** ನಿನ್ನಿಂದ ಸೃಷ್ಟವಾದ ಜಗತ್ತಿನಲ್ಲಿ **ಅಪ್ರತಿರೂಪಂ ಈಹಸೇ ಇತಿ ಬಾಲಿಶಃ** ವಿಪರೀತ ನಡೆದುಕೊಳ್ಳುವಿ ಆದ್ದರಿಂದ ಬಾಲಿಶನೆಂದರ್ಥ. ನನ್ನ ಮಗನಾದರೂ ನಿನ್ನ ಮಗನಿಂದ ಕೊಡಲ್ಪಟ್ಟವನು. ಆ ನಿನ್ನ ಮಗನ ಗೌರವವನ್ನೂ ನೀನು ನೋಡಲಿಲ್ಲ ಆದ್ದರಿಂದ ನೀನು ಬಾಲಿಶನೆಂದೂ ಹೇಳುವಳು.

**ಆತ್ಮಸೃಷ್ಟೇ** ನಿನ್ನ ಮಗನಾದ ಅಂಗಿರಸರಿಗೆ **ಪ್ರತಿರೂಪಂ ಈಹಸೇ** ಅವನು ಮಗನನ್ನು ಇತ್ತನು ನೀನು ಆ ಮಗನಿಗೆ ಹಾನಿಯನ್ನಿತ್ತಿರುವಿ. ಆದ್ದರಿಂದ ನೀನು ಬಾಲಿಶನಾಗಿರುವಿ ಎಂದು ಹೇಳುವಳು. **ಪರೇ ಜೀವತಿ ಅಪರಸ್ಯ ಮೃತಿಃ** ವೃದ್ಧರು ಬದುಕಿರುವಾಗ ಬಾಲಕರಿಗೆ ಮರಣ ಇದು ವಿಪರ್ಯಯ. ವ್ಯತ್ಕ್ರಮ ಎಂದರೆ **ಧ್ರುವಂ ಪರಃ** ನಿಶ್ಚಯವಾಗಿ ನೀನು ಶತ್ರುವಾಗಿರುವಿ. **ವಿಪರ್ಯಯಶ್ಚೇತ್** ಮಗುವು ಇದ್ದು ನಾವು ಹೋಗಿದ್ದರೆ ಈಗಿನ ಕಾರ್ಯ ವಿಪರಿತವಾದರೆ **ತ್ವಂ ಪರಃ ಅಬಾಲಿಶಃ** ನೀನು ಜ್ಞಾನಿಯೇ ಆಗಿರುತ್ತಿದ್ದಿ. **ಪರೇ ತು** ನಿನ್ನ ಮಗನಿಂದ ಸಂಪಾದಿತವಾದ ಮಗನ ವರ ಬೇಡಿದ ಹಿರಿಯನಾದ ಚಿತ್ರಕೇತು ಇರುವಾಗ **ಅಪರಸ್ಯ** ಅತಿಸೂಕ್ಷ್ಮ ಶರೀರದ ಮಗುವಿನ ಮೃತಿಯಾದರೆ **ತ್ವಂ ಧ್ರುವಂ ಪರಃ** ಅಂಗಿರಸನಿಗೆ ಸ್ವಕೀಯನಲ್ಲ ತಂದೆಯಲ್ಲವೆಂದರ್ಥ. ಅಂದರೆ ಅಂಗಿರಸ ತಂದೆಯಾಗಲು ಯೋಗ್ಯನಲ್ಲ. ನಿನ್ನ ಕಾರ್ಯದಿಂದ ಅವನು ಆರ್ಯನಾಗಲು ಅನುಗುಣವಾಗಿಲ್ಲವೆಂದು ಭಾವ. ।।೫೩।।

ನೀನು ಸಿಟ್ಟಿನಿಂದ ಕುರುಡಳಾಗಿ ಹೀಗೆ ಮಾತನಾಡುವಿ ಕರ್ಮಾನುಸಾರ ಸುಖ-ದುಃಖಗಳನ್ನು ನೀಡುವ ನನ್ನದೇನು ತಪ್ಪು ಎನ್ನುವಿಯಾದರೆ ಇಷ್ಟಾದರೆ ಒಂದು ನೀತಿಯನ್ನು ಅನುಸರಿಸಬೇಕಿತ್ತು. ಅದನ್ನೂ ನೀನು ಮಾಡಲಿಲ್ಲವೆಂದು ಹೇಳುವಳು-

**ನ ಹಿ ಕ್ರಮಶ್ಚೇದಿಹ ಮೃತ್ಯುಜನ್ಮನೋಃ**
**ಶರೀರಿಣಾಮಸ್ತು ತದಾತ್ಮಕರ್ಮಭಿಃ ।**




**ಯಃ ಸ್ನೇಹಪಾಶೋ ನಿಜಸರ್ಗವೃದ್ಧಯೇ**
**ಸ್ವಯಂಕೃತಸ್ತೇ ತಮಿಮಂ ವಿವೃಶ್ಚಸಿ** ॥೫೪॥

**ಇಹ** ಇಲ್ಲಿ **ಶರೀರಿಣಾಂ** ಪ್ರಾಣಿಗಳಿಗೆ **ಮೃತ್ಯುಜನ್ಮನೋಃ** ಮರಣ ಹುಟ್ಟುಗಳಿಗೆ **ಕ್ರಮಃ** ಮೊದಲಿನವ ಮೊದಲು ಸಾಯುವನು ಅನಂತರದವನಲ್ಲ ಎಂಬ ಕ್ರಮ ಮತ್ತು ಮೊದಲಿನವನಿಗಿಂತ ಚಿರಂಜೀವಿಯೇ ಹುಟ್ಟಬೇಕು ಅಲ್ಪಾಯುಷಿ ಹುಟ್ಟಬಾರದು ಎಂಬ ಕ್ರಮವೂ ಅಥವಾ ಮಗನಿದ್ದಾಗಲೇ ತಂದೆ ಸಾಯುವನು ತಂದೆಯು ಬದುಕಿದ್ದಾಗಲೇ ಮಗನು ಹುಟ್ಟುವನು ಎಂಬ ಕ್ರಮವು **ನ ಹಿ ಚೇತ್** ಇಲ್ಲವಾದಲ್ಲಿ **ತತ್** ಆ ಕ್ರಮವು **ಆತ್ಮಕರ್ಮಭಿಃ** ಆಯಾ ಜೀವನಿಯಾಮಕನಾಗಿ ನನ್ನ ಅಗತ್ಯವಿದೆ ಎಂದಲ್ಲಿ ಇರಲಿ. ಆದರೂ **ನಿಜಸರ್ಗವೃದ್ಧಯೇ** ನೀನು ಮಾಡುತ್ತಿರುವ ಸೃಷ್ಟಿಯ ಅಭಿವೃದ್ಧಿಗಾಗಿ **ತೇ** ನಿನ್ನಿಂದ **ಯಃ** ಯಾವ **ಸ್ನೇಹಪಾಶಃ** ಇವನು ನನ್ನ ಮಗನು ಎಂಬ ಅಭಿಮಾನಬಂಧವು **ಕೃತಃ** ಮಾಡಲ್ಪಟ್ಟಿರುವದೋ **ತಂ ಇಮಂ** ಆ ಈ ಸ್ನೇಹಪಾಶವನ್ನು **ಸ್ವಯಂ** ನೀನೇ **ವಿವೃಶ್ಚಸಿ** ಕತ್ತರಿಸಿ ಹಾಕುತ್ತಿರುವೆ ಇದು ಸರಿಯಲ್ಲ. ಎಂದೇ ನಮ್ಮ ಆಕ್ರೋಶವೆಂದರ್ಥ. ಇಂತಹ ದುಃಖವನ್ನು ಕಂಡು ಯಾರೂ ಮಕ್ಕಳು ಮೊದಲಾದ ಪದಾರ್ಥದಲ್ಲಿ ಅಭಿಮಾನ ಮಾಡಲಾರರು. ಆದ್ದರಿಂದ ನೀನು ಬಾಲಿಶನೇ ಆಗಿರುವಿ. ಕ್ಷಣಕಾಲದಲ್ಲಿ ಸಾಯುವ ಮಗನಲ್ಲಿ ಅಲ್ಪಬುದ್ಧಿಯುಳ್ಳ ನಿನ್ನಿಂದ ಸ್ನೇಹ ಹುಟ್ಟಸಬಾರದು. ಅದನ್ನು ಹುಟ್ಟಿಸಿರುವಿ. ಆದ್ದರಿಂದ ಬಾಲಿಶ ನೀನು ಎಂದು ಭಾಮಿನಿಯ ಭಾವ. ಇದಕ್ಕೂ ಕರ್ಮವೇ ಕಾರಣವೆಂದು ಚತುರಾನನನು ಆಚಾತುರ್ಯವನ್ನು ನಿರಾಕರಿಸುವನು. ಆದರೂ ಪ್ರಲಾಪಕಾಲವಾದ್ದರಿಂದ ಸ್ಮೃತಿ ಇಲ್ಲದೇ ಆಡಿದ ಮಾತೆಂದು ತಿಳಿಯಬೇಕು.

ಅಂಗಸ್ಮೃತಿ ಭಂಗವಾದುದರಿಂದ ಅಂಗನೆಯು ಅಂಗಜನನ್ನು ಈ ಭಂಗಿಯಿಂದ ಮಲಗಿದ ಮಗುವಿನೊಡನೆ ಮಾತನಾಡಿದಂತೆ ಮಗನನ್ನು ಕುರಿತು ಮಾತಾಡುವಳು-

**ತ್ವಂ ತಾತ ನಾರ್ಹಸಿ ಚ ಮಾಂ ಕೃಪಣಾಮನಾಥಾಂ**
**ತ್ಯಕ್ತುಂ ವಿಚಕ್ಷ್ವ ಪಿತರಂ ತವ ಶೋಕತಪ್ತಮ್ ।**
**ಅಂಜಸ್ತರೇಮ ಭವತಾಽಪ್ರಜದುಸ್ತರಂ ಯದ್**
**ಧ್ವಾಂತಂ ನ ಯಾಹ್ಯಕರುಣೇ ನಯ ಮೇ ನ ದೂರಮ್** ॥೫೫॥

**ತಾತ** ಮಗುವೇ **ತ್ವಂ** ನೀನು **ಕೃಪಣಾಂ** ದೀನಳಾದ **ಅನಾಥಾಂ** ರಕ್ಷಕರಿಲ್ಲದ **ಮಾಂ** ತಾಯಿಯಾದ ನನ್ನನ್ನು **ತ್ಯಕ್ತುಂ** ಬಿಡಲು **ನ ಅರ್ಹಸಿ** ಯೋಗ್ಯನಲ್ಲ **ಶೋಕತಪ್ತಂ** ದುಃಖದಿಂದ ನೊಂದಿರುವ **ತವ ಪಿತರಂ** ನಿನ್ನ ತಂದೆಯನ್ನು **ವಿಚಕ್ಷ್ವ** ನೋಡು **ಭವತಾ** ನಿನ್ನಿಂದ **ಅಪ್ರಜದುಸ್ತರಂ** ಮಕ್ಕಳಿಲ್ಲದವರು ದಾಟಲಾಗದೇ **ಯತ್ ಧ್ವಾಂತಂ** ಯಾವ ಕತ್ತಲಿದೆಯೋ ಅರ್ಥಾತ್ ನರಕವಿದೆಯೋ **ತತ್** ಅದನ್ನು **ಅಂಜಃ** ಸಂಪೂರ್ಣವಾಗಿ **ತರೇಮ** ದಾಟುವೆವು. **ತ್ವಂ** ನೀನು **ಅಕರುಣೇನ** ನಿರ್ದಯನಾದ **ಯಮೇನ** ಯಮನಿಂದ **ನೀತಃ** ಒಯ್ಯಲ್ಪಟ್ಟವನಾಗಿ **ದೂರಂ** ಬಹುದೂರ **ನ ಯಾಹಿ** ಹೋಗಬೇಡ. ಇದು ಕೂಡಾ ಸಿಟ್ಟಿನ ಮಾತೇ ಆಗಿದೆ. ।।೫೫।।

**ಉತ್ತಿಷ್ಠ ತಾತ ತ ಇಮೇ ಶಿಶವೋ ವಯಸ್ಯಾಃ**
**ತ್ವಾಮಾಹ್ವಯಂತಿ ನೃಪನಂದನ ಸಂವಿಹರ್ತುಮ್ ।**
**ಸುಪ್ತಶ್ಚಿರಂ ಹ್ಯಶನಯಾ ಚ ಭವಾನ್ ಪರೀತೋ**
**ಭುಂಕ್ಷ್ವ ಸ್ತನಂ ಪಿಬ ಶುಚೋ ಹರ ನಃ ಸ್ವಕಾನಾಮ್ ।।೫೬।।**

ತಾತ ಮಗುವೇ **ಉತ್ತಿಷ್ಠ** ಏಳು **ನೃಪನಂದನ** ರಾಜಕುವರನೇ **ವಯಸ್ಯಾಃ** ನಿನ್ನ ಗೆಳೆಯರಾದ **ತೇ ಇಮೇ ಶಿಶವಃ** ಆ ಈ ಮಕ್ಕಳು **ಸಂವಿಹರ್ತುಂ** ಆಟವಾಡಲು **ತ್ವಾಂ ಆಹ್ವಯಂತಿ** ನಿನ್ನನ್ನು ಕರೆಯುತ್ತಿರುವರು **ಭವಾನ್** ನೀನು **ಚಿರಂ** ಬಹಳ ಹೊತ್ತು **ಸುಪ್ತಃ** ಮಲಗಿರುವಿ **ಅಶನಯಾ** ಊಟದ ಆಸೆಯಿಂದ ಹಸಿವಿನಿಂದಾಗಿ **ಪರೀತಃ** ಕೂಡಿರುವಿ **ವಿಭುಂಕ್ಷ್ವ** ಊಟಮಾಡು **ಸ್ತನಂ ಪಿಬ** ಎದೆಹಾಲನ್ನು ಕುಡಿ **ಸ್ವಕಾನಾಂ ನಃ** ನಿನ್ನವರಾದ ನಮಗೆ **ಶುಚಃ** ದುಃಖಗಳನ್ನು **ಹರ** ಹೋಗಲಾಡಿಸು. ಇದು ರಾಗದಿಂದ ಆಡಿದ ಅಸಂಗತ ಮಾತು. ।।೫೬।।

**ನಾಹಂ ತನೂಜ ದದೃಶೇ ಹತಮಂಗಲಾ ತೇ**
**ಮುಗ್ಧಸ್ಮಿತಂ ಮುದಿತವೀಕ್ಷಣಮಾನನಾಬ್ಜಮ್ ।**
**ಕಿಂ ವಾ ಗತೋಽಸ್ಯ ಪುನರನ್ವಯಮನ್ಯಲೋಕಂ**
**ನೀತೋಽಘೃಣೇನ ನ ಶೃಣೋಮಿ ಕಲಾ ಗಿರಸ್ತೇ ।।೫೭।।**

**ತನೂಜ** ಮಗನೇ **ಹತಮಂಗಲಾ** ಪುಣ್ಯಹೀನಳಾದ **ಅಹಂ** ನಾನು **ತೇ** ನಿನ್ನ **ಮುಗ್ಧಸ್ಮಿತಂ** ಮೋಹಗೊಳಿಸುವ ಸುಂದರ ಮಂದಹಾಸ ಉಳ್ಳ **ಮುದಿತವೀಕ್ಷಣಂ** ಸಂತಸದ ನೋಟ ಉಳ್ಳ **ಆನನಾಬ್ಜಂ** ಮುಖಕಮಲವನ್ನು **ನ ದದೃಶೇ** ನೋಡಲಿಲ್ಲ ಈ ಮಾತು ಕೂಡಾ ರಾಗನಿಮಿತ್ತವೇ ಆಗಿದೆ. ಕ್ರೋಧನಿಮಿತ್ತ ಒಯ್ಯಲ್ಪಟ್ಟವನಾಗಿ

**ಅಪುನರನ್ವಯಂ** ಮತ್ತೆ ಹಿಂದಕ್ಕೆ ಬಾರದಿರುವಂತೆ ಹೋಗಿರುವಿ ಏನು? **ತೇ** ನಿನ್ನ **ಕಲಾಃ** ಅವ್ಯಕ್ತಮಧುರವಾದ **ಗಿರಃ** ಮಾತುಗಳನ್ನು **ನ ಶೃಣೋಮಿ** ಕೇಳುತ್ತಿಲ್ಲ ಆದ್ದರಿಂದ ಪರಲೋಕಕ್ಕೆ ಹೋಗಿರುವಿ ಏನು ಎಂದು ಪ್ರಶ್ನೆ. ।।೫೭।।

ಬೇರೆ ಯಾರೂ ಅಳಲಿಲ್ಲವೇ ಎಂದರೆ ಹೇಳುತ್ತಾರೆ-

**ಶ್ರೀಶುಕ ಉವಾಚ -**

**ವಿಲಪಂತ್ಯಾಂ ಮೃತಂ ಪುತ್ರಮಿತಿ ಚಿತ್ರವಿಲಾಪನೈಃ ।**
**ಚಿತ್ರಕೇತುರ್ಭೃಶಂ ತಪ್ತೋ ಮುಕ್ತಕಂಠೋ ರುರೋದ ಹ ।।೫೮।।**

**ಮೃತಂ ಪುತ್ರಂ** ಸತ್ತ ಮಗನನ್ನು ಕುರಿತು **ಇತಿ** ಮೇಲೆ ಹೇಳಿದಂತೆ **ವಿಲಪಂತ್ಯಾಂ** ಸತ್ಯಾಂ ಕೃತದ್ಯುತಿಯು ಅಳುತ್ತಿರಲು **ಭೃಶಂ ತಪ್ತಃ** ಬಹಳ ನೊಂದ **ಚಿತ್ರಕೇತುಃ** ಚಿತ್ರಕೇತುವು **ಮುಕ್ತಕಂಠಃ ರುರೋದ ಹ** ಗಟ್ಟಿಯಾಗಿ ಬಿಕ್ಕಿ ಬಿಕ್ಕಿ ಅತ್ತನಷ್ಟೇ. ।।೫೮।।

**ತಯೋರ್ವಿಲಪತೋಃ ಸರ್ವೇ ದಂಪತ್ಯೋಸ್ತದನುವ್ರತಾಃ ।**
**ರುರುದುಃ ಸ್ಮ ನರಾ ನಾರ್ಯಃ ಸರ್ವಮಾಸೀದಚೇತನಮ್ ।।೫೯।।**

**ತಯೋಃ ದಂಪತ್ಯೋಃ** ಆ ರಾಜ-ರಾಣಿಯರು **ವಿಲಪತೋಃ ಸತೋಃ** ಅಳುತ್ತಿರಲು **ತದನುವ್ರತಾಃ** ಅವರ ಅನುಚರರಾದ **ಸರ್ವೇ** ಎಲ್ಲ **ನರಾಃ** ಗಂಡಸರು **ನಾರ್ಯಃ** ಹೆಂಗಸರು **ರುರುದುಃ ಸ್ಮ** ಅಳುತ್ತಿದ್ದರು. **ಸರ್ವಂ** ಚೇತನವೂ **ಅಚೇತನಂ** ಬುದ್ಧಿ ಪ್ರವೃತ್ತಿಯಿಲ್ಲದೆ ಕಲ್ಲಿನಂತೆ **ಆಸೀತ್** ಆಯಿತು. ।।೫೯।।

**ಏವಂ ಕಶ್ಮಲಮಾಪನ್ನಂ ನಷ್ಟಸಂಜ್ಞಮನಾಯಕಮ್ ।**
**ಜ್ಞಾತ್ವಾಂಗಿರಾ ನಾಮ ಮುನಿರಾಜಗಾಮ ಸನಾರದಃ ।।೬೦।।**

।। ಇತಿ ಶ್ರೀಮದ್ಭಾಗವತೇ ಷಷ್ಠಸ್ಕಂಧೇ ಚತುರ್ದಶೋಽಧ್ಯಾಯಃ ।।

**ಏವಂ** ಈ ರೀತಿ **ಕಶ್ಮಲಂ** ದುಃಖವನ್ನು **ಆಪನ್ನಂ** ಹೊಂದಿದ **ನಷ್ಟಸಂಜ್ಞಂ** ಪ್ರಜ್ಞಾಹೀನನಾದ **ಅನಾಯಕಂ** ರಾಜನಲ್ಲದ ಸಾಮಾನ್ಯ ಮನುಷ್ಯನಂತೆ ವರ್ತಿಸುತ್ತಿರುವ ರಾಜನಿಗೆ ಬೋಧಿಸುವವರು ಯಾರೂ ಇಲ್ಲವೆಂದು **ಜ್ಞಾತ್ವಾ** ತಿಳಿದು **ಅಂಗಿರಾ ನಾಮ ಮುನಿಃ** ಅಂಗಿರಾ ಎಂಬ ಋಷಿಗಳು **ಸನಾರದಃ** ನಾರದಸಹಿತರಾಗಿ **ಆಜಗಾಮ** ಬಂದರು. ಇದರಿಂದ ಋಷಿಗಳು ತ್ರಿಕಾಲಜ್ಞಾನಿಗಳೆಂದು ಸ್ಪಷ್ಟವಾಯಿತು.

ಇಲ್ಲಿಗೆ ಹದಿನಾಲ್ಕನೇ ಅಧ್ಯಾಯವು ಮುಗಿಯಿತು

# ಅಥ ಶ್ರೀಮದ್ಭಾಗವತೇ - ಷಷ್ಠಸ್ಕಂಧೇ

# ಪಂಚದಶೋಽಧ್ಯಾಯಃ

**ಅಧ್ಯಾಯಸಾರಾಂಶ**

ಶುಕಾಚಾರ್ಯರು ಕಥೆಯನ್ನು ಮುಂದುವರಿಸಿದರು. ಮೃತನಾದ ಮಗುವಿನ ಹತ್ತಿರವೇ ಶೋಕಿಸುತ್ತಾ ಕುಳಿತಿರುವ ರಾಜನನ್ನು ಆಂಗಿರಸರು ಮತ್ತು ನಾರದರು ಸದ್ವಚನಗಳಿಂದ ಸಮಾಧಾನ ಮಾಡಿದರು.

ರಾಜನ್ ! ಯಾರ ಉದ್ದೇಶದಿಂದ ನೀನು ರೋದಿಸುತ್ತಿರುವಿಯೋ ಆವನಿಗೂ ನಿನಗೂ ಇರುವ ಸಂಬಂಧವೇನು? ಮಗ ಎಂದು ತಾನೇ ನಿನ್ನ ಉತ್ತರ. ಹಾಗಾದರೇ ಪೂರ್ವಜನ್ಮದಲ್ಲಿ ನಿನಗೂ ಇವನಿಗೂ ಸಂಬಂಧವೇನು? ಮುಂದಿನ ಜನ್ಮದಲ್ಲಿ ನಿನ್ನ ಮಗನಾಗಿಯೇ ಇವನು ಹುಟ್ಟುವನೇ? ಹಿಂದಿನ ಮುಂದಿನ ಕಾಲದಲ್ಲಿ ನಿನಗೆ ಅವನಿಗೆ ಯಾವ ಸಂಬಂಧವೂ ಇಲ್ಲ. ಹಾಗೆಯೇ ಈ ಜನ್ಮದಲ್ಲಿಯೂ ನಿನಗೆ ಇವನಿಗೆ ಯಾವ ಸಂಬಂಧವೂ ಇಲ್ಲ. ಇದು ಪಿತೃ-ಪುತ್ರಭಾವ ಇತ್ಯಾದಿಗಳೆಲ್ಲ ಭ್ರಾಂತಿಯೇ. ಆದ್ದರಿಂದ ಶೋಕವನ್ನು ಬಿಟ್ಟುಬಿಡು. ಯಾವುದೇ ಸಂಬಂಧವಿಲ್ಲದ ಒಬ್ಬ ಜೀವನಿಗಾಗಿ ನೀವು ದುಃಖಿಸುತ್ತಿರುವುದು ಯೋಗ್ಯವಲ್ಲ.

ನದಿಯ ವೇಗದಿಂದ ಎಲ್ಲಿಯೋ ಇದ್ದ ಮರಳು ಹರಳುಗಳು ಒಂದಾಗುತ್ತವೆ. ಮತ್ತೆ ಅದೇ ನದಿಯ ವೇಗದಿಂದ ದೂರವಾಗುತ್ತವೆ. ಹೀಗೆಯೇ ಸರ್ವಜ್ಞನಾದ ಶ್ರೀಹರಿಯ ಶಕ್ತಿಯಿಂದ ಜೀವರಾಶಿಗಳು ಒಟ್ಟಿಗೆ ಸೇರುತ್ತವೆ. ಮತ್ತೆ ದೂರವಾಗುತ್ತವೆ.

ದೇಹವನ್ನು ಬಿಟ್ಟವರು ಮತ್ತೊಂದು ದೇಹವನ್ನು ಪಡೆಯುವರೋ? ಅಥವಾ ಶೂನ್ಯರಾಗುವರೋ? ಅಥವಾ ಮುಕ್ತರಾಗುವರೋ?

ಒಂದು ಬೀಜದಿಂದ ಅನೇಕ ಬೀಜಗಳಾಗುತ್ತವೆ. ಕೆಲವು ಸಲ ಪ್ರತಿಬಂಧಕದಿಂದ ಬೀಜಗಳಾಗುವುದೇ ಇಲ್ಲ. ಬೀಜಗಳಾದರೂ ಸುಟ್ಟಾಗ ಮತ್ತೆ ಬೀಜಜನಕತ್ವವು ಅವುಗಳಿಗೆ ಇರುವುದಿಲ್ಲ. ಹಾಗೆಯೇ ಭಗವಂತನ ಇಚ್ಛೆಯಿಂದ ಪ್ರೇರಿತರಾದ ಜೀವರು ಪುತ್ರಾದಿಗಳಾಗಿ ಜನಿಸುತ್ತಾರೆ. ಜ್ಞಾನಾಗ್ನಿಯಿಂದ ಭರ್ಜಿತಸಂಸಾರ ಉಳ್ಳವರಾದಾಗ ಮುಕ್ತರಾಗುತ್ತಾರೆ. ಅಲ್ಲದೇ ಪುಣ್ಯ-ಪಾಪಗಳಿಂದಲೇ ಜೀವರು ದೀರ್ಘಾಯುಷಿಗಳೂ, ಅಲ್ಪಾಯುಷಿಗಳೂ ಆಗುತ್ತಾರೆ. ಆದ್ದರಿಂದ ಶೋಕವನ್ನು ಪರಿತ್ಯಜಿಸು. ಷಡ್ಗುಣಪರಿಪೂರ್ಣನಾದ ಪರಮಾತ್ಮನಲ್ಲಿ ಮನಸ್ಸನ್ನು ನೆಲೆಗೊಳಿಸು.

ಅಂಗಿರಸರ ಮಾತಿನಿಂದ ಚಿತ್ರಕೇತು ಸಮಾಹಿತನಾದ. ಹಿರಿಯರ ವಚನಗಳಿಗೆ ಇರುವ ಸಾಮರ್ಥ್ಯವಿದು. ವಿಚಿತ್ರವಾದ ಶೋಕದಲ್ಲಿರುವ ಚಿತ್ರಕೇತುವೂ ಅಂಗಿರಸರ ಮಾತಿನಿಂದ ಕೂಡಲೇ ಸಮಾಹಿತನಾದ. ಕಣ್ಣುಗಳನ್ನು ಒರೆಸಿಕೊಂಡ. ಹೇಳಿದ. ನೀವಿಬ್ಬರೂ ಜ್ಞಾನಸಂಪನ್ನರು. ಅವಧೂತವೇಷದಿಂದ ಗೂಢರಾಗಿದ್ದೀರಿ. ನಿಮ್ಮನ್ನು ಗುರುತಿಸಲಾಗುತ್ತಿಲ್ಲ. ಯಾರು ನೀವು?

ಕುಮಾರ, ನಾರದ, ಋಭು, ಅಂಗಿರ, ದೇವಲ, ಅಸಿತ, ಅಪಾಂತರತಮ, ವ್ಯಾಸ, ಮಾರ್ಕಂಡೇಯ, ಆರುಣ ಮುಂತಾದ ಋಷಿಗಳೆಲ್ಲ ಗ್ರಾಮ್ಯಬುದ್ಧಿಗಳಾದ ನಮ್ಮಂತಹ ಜನರಿಗೆ ಬೋಧನೆ ಮಾಡುವುದಕ್ಕಾಗಿಯೇ ಗೂಢರಾಗಿ ಸಂಚರಿಸುತ್ತಾ ಇರುತ್ತಾರೆ. ಆದ್ದರಿಂದ ಸಂಸಾರದಲ್ಲಿ ಆಸಕ್ತನಾದ ಅಜ್ಞಾನಿಯಾದ ನನಗೆ ಉಪದೇಶ ಮಾಡಿರಿ.

ಅಂಗಿರಸರು ಹೇಳಿದರು. ರಾಜನ್ ! ಮಕ್ಕಳನ್ನು ಬಯಸಿದ ನಿನಗೆ ಮಕ್ಕಳನ್ನು ನೀಡಿದ ಅಂಗಿರಸರು ನಾವು. ಇವರು ಬ್ರಹ್ಮಪುತ್ರರಾದ ನಾರದರು. ನೀನು ಪುತ್ರಶೋಕದಲ್ಲಿ ಸಂತಪ್ತನಾಗಿರುವುದನ್ನು ಯೋಗದೃಷ್ಟಿಯಿಂದ ತಿಳಿದೆವು. ನಿನ್ನನ್ನು ಅನುಗ್ರಹಿಸುವುದಕ್ಕಾಗಿ ಬಂದಿದ್ದೇವೆ. ಭಗವದ್ಭಕ್ತರು ಪುತ್ರಶೋಕದಿಂದ ನಷ್ಟರಾಗುವುದನ್ನು ನಾವು ಸಹಿಸುವುದಿಲ್ಲ. ಈ ಮೊದಲೂ ನಿನಗೆ ತತ್ತ್ವೋಪದೇಶವನ್ನು ಮಾಡುವುದಕ್ಕಾಗಿಯೇ ನಾನು ಬಂದಿದ್ದೆ. ಆದರೆ ಪುತ್ರರ ಆಗ್ರಹ ನಿನಗಿರುವುದು ಕಂಡು ಮಕ್ಕಳನ್ನು ನಿಡಿದೆ. ಮಕ್ಕಳಿಂದ ಯಾವ ರೀತಿಯಾದ ತಾಪವಾಗುತ್ತದೆಂದು ನೀನು ಅನುಭವಿಸಿದೆ. ಮಕ್ಕಳಿದ್ದವರಿಗೆ ಮಾತ್ರ ಈ ತಾಪವಲ್ಲ. ಹೆಂಡತಿ, ಅಣ್ಣ-ತಮ್ಮ ಯಾರೇ ಇರಲಿ ಅವರೆಲ್ಲರೂ ತಾಪದಾಯಕರೇ ಆಗಿದ್ದಾರೆ.

ನಾರದರು ಹೇಳಿದರು. ರಾಜನ್ ! ನಾನು ನಿನಗೆ ಈ ಮಂತ್ರೋಪನಿಷತ್ತನ್ನು ಉಪದೇಶ ಮಾಡುತ್ತೇನೆ. ಆರು ದಿವಸಗಳ ವರೆಗೆ ಇದನ್ನು ಭಕ್ತಿಯಿಂದ ಜಪಿಸು. ನಿನಗೆ ಶೇಷಾಂತರ್ಯಾಮಿಯಾದ ಸಂಕರ್ಷಣನ ಸಂದರ್ಶನವಾಗುತ್ತದೆ. ಮರಿಯಬೇಡ. ಆ ಸಂಕರ್ಷಣನ ಅನುಗ್ರಹದಿಂದಲೇ ರುದ್ರಾದಿಗಳು ತಮ್ಮ ತಮ್ಮ ಪದವಿಗಳನ್ನು ಪಡೆದಿದ್ದಾರೆ. ಅಲ್ಲಿ ಸುಸ್ಥಿರವಾಗಿ ನೆಲೆಸಿದ್ದಾರೆ.

★★★★★

ಭಗವಂತನ ಅಪರೋಕ್ಷ ಜ್ಞಾನದಿಂದಲೇ ಸಂಸಾರ ನಿಃಸರಣವಾಗುವದು. ಆ ಜ್ಞಾನವಾದರೂ ನಿರಂತರ ಅವನ ಚರಣ ಪರಿಚರಣದಿಂದ ಆಗುವದು. ಇದೆಲ್ಲದಕ್ಕೂ ಅವನ ಅನುಗ್ರಹವೇ ಮೂಲವೆಂದೂ, ಸಂಸಾರವೆಂಬ ಕಾಡುಗಿಚ್ಚಿನಲ್ಲಿ ಬೆಂದವನಿಗೆ ಸಜ್ಜನರ ಸಂಗ ಚಿತ್ರಕೇತುವಿನಂತೆ ಸಂತಾಪನಿವಾರಕವೆಂದೂ ಈ ಅಧ್ಯಾಯದಲ್ಲಿ ತಿಳಿಸುತ್ತಿದ್ದಾರೆ. ಮೊದಲಿಗೆ ಅಂಗಿರಸರು-ನಾರದರು ಬಂದು ಮಗನ ಮರಣದಿಂದ ದುಃಖಿತನಾದ ಚಿತ್ರಕೇತುವನ್ನು ಸಾಂತ್ವನಗೊಳಿಸಿದರೆಂದು ಹೇಳುವರು-

**ಶ್ರೀಶುಕ ಉವಾಚ -**

**ಊಚತುರ್ಮೃತಕೋಪಾಂತೇ ಪತಿತಂ ಮೃತಕೋಪಮಮ್ ।**
**ಶೋಕಾಭಿಭೂತಂ ರಾಜಾನಂ ಬೋಧಯಂತೌ ಸದುಕ್ತಿಭಿಃ ॥೧॥**

**ಮೃತಕೋಪಾಂತೇ** ಶವಸಮೀಪದಲ್ಲಿ **ಪತಿತಂ** ಬಿದ್ದಿರುವ **ಮೃತಕೋಪಮಂ** ಶವದಂತಿರುವ **ಶೋಕಾಭಿಭೂತಂ** ದುಃಖದಿಂದ ಆವೃತನಾದ **ರಾಜಾನಂ** ಚಿತ್ರಕೇತುವಿಗೆ **ಸದುಕ್ತಿಭಿಃ** ನಿರ್ದುಷ್ಟವಾದ ಸಮೀಚಿನವಾದ ಮಾತುಗಳಿಂದ **ಬೋಧಯಂತೌ** ತಿಳುವಳಿಕೆಯನ್ನು ಕೊಡುತ್ತ **ಊಚತುಃ** ಹೇಳಿದರು. ॥೧॥

ಶೋಕ ಮಾಡಿ ಫಲವಿಲ್ಲವೆಂದು ಎರಡು ಶ್ಲೋಕಗಳಿಂದ ದೃಷ್ಟಾಂತ ಕೊಟ್ಟು ತಿಳಿಸುವರು-

**ಕೋಽಯಂ ಸ್ಯಾತ್ತವ ರಾಜೇಂದ್ರ ಭವಾನ್ ಯಮನುಶೋಚತಿ ।**
**ತ್ವಂ ಚಾಽಸ್ಯ ಕತಮಃ ಸೃಷ್ಟೌ ಪುರೇದಾನೀಮತಃ ಪರಮ್ ॥೨॥**

**ಯಥಾ ಪ್ರಯಾಂತಿ ಸಂಯಾಂತಿ ಸ್ರೋತೋವೇಗೇನ ವಾಲುಕಾಃ ।**
**ಸಂಯುಜ್ಯಂತೇ ವಿಯುಜ್ಯಂತೇ ತಥಾ ಕಾಲೇನ ದೇಹಿನಃ ॥೩॥**

**ರಾಜೇಂದ್ರ** ಚಿತ್ರಕೇತುವೇ ! **ಭವಾನ್** ನೀನು **ಯಂ** ಯಾರನ್ನು ಕುರಿತು **ಅನುಶೋಚತಿ** ದುಃಖಿಸುತ್ತಿರುವಿಯೋ **ಅಯಂ ಚ** ಈ ದೇಹದಲ್ಲಿರುವ ಜೀವನು **ತವ** ನಿನಗೆ **ಕಃ ಸ್ಯಾತ್** ಎಂತಹ ಬಂಧುವಾಗಿರುವನು (ಈಗ ಮಗನೆಂಬ ಭ್ರಾಂತಿ ಎಂದಾದರೆ) **ಸೃಷ್ಟೌ** ಪ್ರವಾಹರೂಪವಾದ ಬ್ರಹ್ಮದೇವರ ಸೃಷ್ಟಿಯಲ್ಲಿ **ಪುರಾ** ಹಿಂದೆ **ತ್ವಂ** ನೀನು **ಅಸ್ಯ** ಈ ಬಾಲಕನಿಗೆ **ಕತಮಃ** ಯಾವ ಬಂಧುವು. ತಂದೆಯೇ? ಸೋದರ ಮಾಮನೇ? ಸಹೋದರನೇ? **ಅತಃ ಪರಂ** ಮುಂದೆ **ಕತಮಃ** ಎಂತಹ ಬಂಧುವು? **ಇದಾನೀಂ** ಈ ಜನ್ಮದಲ್ಲಿ **ಕತಮಃ** ಯಾವ ಬಂಧುವು. ಹಿಂದಿನ ಜನ್ಮದಲ್ಲಿ ತಂದೆಯಾಗಿ ಜೊತೆಯಲ್ಲಿದ್ದವರು ಸತ್ತಮೇಲೆ ಆ ಜೀವನಿಂದ ಬಿಡುಗಡೆ ಹೊಂದಿ ಮತ್ತೊಂದು ಜನ್ಮದಲ್ಲಿ ಅವನ ಅಥವಾ ಇತರರ ಮಕ್ಕಳಾಗಿ ಇತರರಾಗಿ ಹುಟ್ಟುವರು. ತಂದೆಯು ಎಲ್ಲ ಜನ್ಮಗಳಲ್ಲಿಯೂ ಅವನ ತಂದೆಯೇ ಆಗಿರುವನೆಂಬ ನಿಯಮವಿಲ್ಲ. ಇದರಂತೆ ಇವನೂ ಹಿಂದೆ ಮುಂದೆ ನಿನಗೆ ಎಂತಹ ಬಂಧುವೋ ಎಂದೂ ಸೇರಿಸಿಕೊಳ್ಳಬೇಕು. ಹೇಗೆ ಹಿಂದಿನ ಮುಂದಿನ ಕಾಲಗಳಲ್ಲಿ ನಿಮ್ಮಿಬ್ಬರಿಗೂ ಸಂಬಂಧವಾವುದೂ ಇರಲಿಲ್ಲವೋ, ಇರುವದಿಲ್ಲವೋ ಹಾಗೆಯೇ ಈ ಜನ್ಮದಲ್ಲಿಯೂ ಸಂಬಂಧಿ ಎಂಬ ಭ್ರಾಂತಿಯೇ ಹೊರತು ಬೇರೆಯಲ್ಲ. ನಿಯಮಿತವಾಗಿ ಮಗನೇ ಮೊದಲಾದ ಸಂಬಂಧವಿಲ್ಲವಾದುದರಿಂದ ಇವನಿಗಾಗಿ ದುಃಖ ಪಡಬೇಕಾಗಿಲ್ಲವೆಂದು ಭಾವ. ।।೨।।

**ಯಥಾ** ಹೇಗೆ **ಕಾಲೇನ** ಪ್ರಸಿದ್ಧ ಕಾಲಕ್ರಮದಿಂದ **ಸ್ರೋತೋವೇಗೇನ** ನದಿಯ ಪ್ರವಾಹದ ರಭಸದಿಂದ **ವಾಲುಕಾಃ** ಮರಳುಗಳು **ಪ್ರಯಾಂತಿ** ಒಂದನ್ನೊಂದು ಬಿಟ್ಟು ದೂರ ಸರಿಯುವವೋ ಮತ್ತು **ಸಂಯಾಂತಿ** ಒಂದು ಕಡೆ ಸೇರುವವೋ **ತಥಾ** ಹಾಗೆ **ಕಾಲೇನ** ಕಾಲನಾಮಕನಾದ ಶ್ರೀಹರಿಯಿಂದ **ದೇಹಿನಃ** ಜೀವರು **ಸಂಯುಜ್ಯಂತೇ** ಸಂಬಂಧಿಗಳಾಗುವರು. **ಕಾಲೇನ** ಸಂಹಾರಕನಾದ ಶ್ರೀಹರಿಯಿಂದ **ವಿಯುಜ್ಯಂತೇ** ಮೃತರಾಗಿ ಸಂಬಂಧ ರಹಿತರಾಗುವರು. **ಸ್ರೋತೋವೇಗೇನ** ಕರ್ಮಪ್ರವಾಹದಿಂದ **ಪ್ರಯಾಂತಿ** ತಾಯಿಯ ಉದರದಿಂದ ಹುಟ್ಟುವರು. **ಸಂಯಾಂತಿ** ಮರಣದಿಂದ ಹೋಗುವರು. ನಿನ್ನಂಥವರಿಂದ **ಸಂಯುಜ್ಯಂತೇ ವಿಯುಜ್ಯಂತೇ** ಸಂಯೋಗ ವಿಯೋಗ ಪಡೆಯುವರು. ।।೩।।

ದೇಹ ಬಿಟ್ಟವರು ಮತ್ತೆ ಬೇರೆ ದೇಹಗಳನ್ನು ಹೊಂದುವರೋ ಅಥವಾ ಎಲ್ಲಾದರೂ ಲೀನರಾಗುವರೋ ಅಥವಾ ಮುಕ್ತರಾಗುವರೋ ಎಂದರೆ ಹೇಳುವರು-

**ಯಥಾ ಧಾನಾಸು ವೈ ಧಾನಾ ಭವಂತಿ ನ ಭವಂತಿ ಚ ।**
**ಏವಂ ಭೂತೇಷು ಭೂತಾನಿ ಚೋದಿತಾನೀಶಮಾಯಯಾ ॥೪॥**

**ಯಥಾ** ಹೇಗೆ **ಧಾನಾಸು** ಬೀಜಗಳನ್ನು ಬಿತ್ತುತ್ತಿರಲು **ಧಾನಾಃ** ಮತ್ತೆ ಬಿತ್ತಲು ಯೋಗ್ಯವಾದ ಬೀಜಗಳು **ಭವಂತಿ** ಹುಟ್ಟುವವು. **ನ ಭವಂತಿ** ಮರುಭೂಮಿಯಲ್ಲಿ ಬಿತ್ತಿದಾಗ ನಾಶವಾಗುವವು, ಬೇರೇ ಬೀಜಗಳು ಹುಟ್ಟುವದಿಲ್ಲವೋ **ಏವಂ** ಅದರಂತೆ **ಈಶಮಾಯಾಚೋದಿತಾನಿ** ಭಗವಂತನ ಇಚ್ಛೆಯಿಂದ ಪ್ರೇರಿತವಾದ **ಭೂತೇಷು** ತಂದೆ ಮುಂತಾದ ಪ್ರಾಣಿಗಳಲ್ಲಿ **ಭೂತಾನಿ** ಮಕ್ಕಳು **ಭವಂತಿ** ಮತ್ತೆ ನಿನ್ನಂತೆ ಉತ್ಪಾದಕರಾಗುವರು. **ನ ಭವಂತಿ** ನಿನ್ನ ಮಗನಂತೆ ಮತ್ತೆ ಪುತ್ರೋತ್ಪಾದಕ-ರಾಗುವದಿಲ್ಲ. ಆದ್ದರಿಂದ ಶೋಕ ಬೇಡ.

ಹುರಿದ ಬೀಜ ಹುಟ್ಟದಿರುವಂತೆ ಜ್ಞಾನಾಗ್ನಿಯಿಂದ ಹುರಿಯಲ್ಪಟ್ಟ ಸಂಸಾರಬೀಜ ಕರ್ಮಗಳುಳ್ಳ ಜೀವರು ಪುನರಾವೃತ್ತಿ ಇಲ್ಲದ ಅವಸ್ಥೆ ಮೋಕ್ಷವನ್ನು ಹೊಂದಿ ಹುಟ್ಟದೇ ಇರಬಹುದು. ಎಂಬ ವಿಶೇಷವನ್ನು ವೈ ಶಬ್ದದಿಂದ ಸೂಚಿಸುವರು. ಬೀಜ ಬೀಜದಿಂದ ಆಗೇ ಆಗುವುದು ಎಂಬ ನಿಯಮವಿಲ್ಲ. ಇದರಂತೆ ಮಕ್ಕಳು ಆಗೇ ಆಗುತ್ತಾರೆ ಎಂಬ ನಿಯಮವಿಲ್ಲ. ಬೀಜಗಳಿಗೆ ಜನ್ಯ-ಜನಕಭಾವವಿದ್ದರೂ ಹೇಗೆ ತಂದೆ-ಮಕ್ಕಳು ಎಂಬ ವ್ಯವಹಾರವಿಲ್ಲವೋ ಹಾಗೆಯೇ ಜೀವರಲ್ಲಿಯೂ ಇಲ್ಲವೆಂದು ಭಾವ. ಆದ್ದರಿಂದ ಮುಪ್ಪಿನಲ್ಲಿ ಆದ ಮಗ ಸತ್ತನೆಂದು ದುಃಖಿಸಬೇಕಿಲ್ಲವೆಂದು ಭಾವ. ॥೪॥

ಎಲ್ಲಿಯ ವರೆಗೆ ಭಗವಂತನ ಕ್ಲೃಪ್ತಿ ಇದೆಯೋ ಅಲ್ಲಿಯ ವರೆಗೆ, ಸತ್, ಅಸತ್, ಮಿಶ್ರರಿಗೆ ಶ್ರಮವಿಲ್ಲದೆ ಶ್ರಮವುಳ್ಳ ಮತ್ತು ಮಿಶ್ರವಾದ ಐಹಿಕ ವಿಷಯಗಳನ್ನು ಅನುಭವಿಸಿ ಉಪಾದೇಯಗಳಿಗೆ ಉಪಾದಾನ ಪ್ರವೇಶವಾದ ಮೇಲೆ ಭಗವಂತನ ಅನುಗ್ರಹ-ನಿಗ್ರಹಗಳಿಂದ ತಮ್ಮ ತಮ್ಮ ಗತಿಯಾಗುವದು ಎಂದು ಹೇಳಲು ಮುಂದಿನ ಗ್ರಂಥ ಹೊರಟಿದೆ-

**ವಯಂ ಚ ತ್ವಂ ಚ ಯೇ ಚೇಮೇ ತುಲ್ಯಕಾಲಾಶ್ಚರಾಚರಾಃ ।**
**ಜನ್ಮಮೃತ್ಯೋರ್ಯಥಾ ಪಶ್ಚಾತ್ಪ್ರಾಗೇವ ಮಧುನಾ ವಿಭೋ ॥೫॥**

**ವಿಭೋ** ರಾಜನೇ **ತುಲ್ಯಕಾಲಾಃ** ಈ ಕ್ಷಣದಲ್ಲಿ ಒಂದೇ ಕಾಲದಲ್ಲಿರುವ **ವಯಂ ಚ** ನಾವೂ **ತ್ವಂ ಚ** ನೀನೂ **ಇಮೇ** ಈ **ಯೇ ಚರಾಚರಾಃ** ಜಂಗಮ-ಸ್ಥಾವರಗಳು ಜ್ಞಾನ ಉಳ್ಳವರು ಅಜ್ಞಾನಿಗಳು ದೇಹನಾಶವಾಗುವದರಿಂದ ಮುಂದಿನ ಕ್ಷಣದಲ್ಲಿ

ಹೇಗೆ ಇಲ್ಲವೋ ಹಾಗೆಯೇ ಈಗಲೂ ಆ ವರ್ತಮಾನ ಕಾಲದಲ್ಲಿರುವ ನಮಗೆ **ಪ್ರಾಕ್** **ಜನ್ಮ** ಮೊದಲು ಉತ್ಪತ್ತಿ **ಪಶ್ಚಾತ್** ನಂತರ **ಮೃತ್ಯುಃ** ಮರಣವು ಆದರಂತೆ ಈಗ ಮುಂದೆಯು ಜನ್ಮ ಮರಣಗಳು ಇರುವವು. ಅಥವಾ ಹುಟ್ಟುವ ಮೊದಲು ಸತ್ತ ಮೇಲೆ ಹೇಗೆ ಪಿತಾ-ಪುತ್ರ ಭಾವವಿಲ್ಲವೋ ಹಾಗೆಯೇ ಈಗಲೂ ಎಂದು ತಿಳಿ ಹೀಗೂ ಅರ್ಥ ಮಾಡಿರುವರು. ಮತ್ತು ದೇಹ ನಾಶ ಮತ್ತು ಅನಾಶಗಳಿಂದ ಯಾವಾಗಲೂ ಸಮಾನಕಾಲತ್ವವು ಇಲ್ಲವೆಂದಾದರೆ ಯಾವಾಗಲೂ ಸಮಾನಕಾಲತ್ವ ಯಾರಿಗೆ ಎಂದರೆ ಹೇಳುತ್ತಾರೆ **ಯಥಾ** ಹೇಗೆ **ಜನ್ಮಮೃತ್ಯೋಃ** ಹುಟ್ಟು-ಸಾವುಗಳ **ಪಶ್ಚಾತ್** ಅನಂತರದಲ್ಲಿಯೂ **ಪ್ರಾಕ್** ಮೊದಲೂ ಈಗಲೂ **ಏವಂ** ಹೀಗೆಯೇ ಸೃಷ್ಟ್ಯಾದಿಗಳನ್ನು ಮಾಡುತ್ತಿರುವನು. ಇದರಿಂದ ಶ್ರೀಹರಿಗೆ ದೇಹದಿಂದ ಸರ್ವಕಾಲದಲ್ಲಿ ಇರುವಿಕೆಯನ್ನು ಹೇಳಿರುವರು. ಜೀವರ ಚೈತನ್ಯವು ಎಲ್ಲ ಕಾಲದಲ್ಲಿ ಇರುವದಾದರೂ ದೇಹಕ್ಕೆ ನಾಶವಿರುವದರಿಂದ ಎಲ್ಲ ಕಾಲದಲ್ಲಿ ಇರುವವನಲ್ಲವೆಂದು ಭಾವ. 'ದೇಹಸ್ಯ ಸರ್ವಥಾ ನಾಶಾತ್ ಅನಾಶಾಚ್ಚೇತನಸ್ಯ ತು' ಎಂದು ಸ್ಮೃತಿ ಇದೆ.

ಎಲೋ ರಾಜನೇ ! ಯಾರಿಗೆ ಯಾರು ಮಕ್ಕಳು ಮೊದಲಾದವರು? ಎಲ್ಲ ಕೇವಲ ಮೋಹವೆಂದಾದರೆ ನಾನಿವನ ತಂದೆ ಎಂಬ ಅಭಿಮಾನ ಹೇಗೆ ಬರುತ್ತದೆ. ಎಂದರೆ ಹೇಳುತ್ತಾರೆ. ಈ ಅಭಿಮಾನಕ್ಕೆ ಶ್ರೀಹರಿಯೇ ನಿಮಿತ್ತನೆಂದೂ ಹೇಳುತ್ತಾರೆ-

**ಭೂತೈರ್ಭೂತಾನಿ ಭೂತೇಶಃ ಸೃಜತ್ಯವತಿ ಹಂತ್ಯಜಃ ।**
**ಆತ್ಮಸೃಷ್ಟೈರಸ್ವತಂತ್ರೈರನಪೇಕ್ಷೋಽಪಿ ಬಾಲವತ್ ॥೬॥**

**ಭೂತೇಶಃ** ಎಲ್ಲ ಪ್ರಾಣಿಗಳಿಗೂ ಪಂಚಭೂತಗಳಿಗೂ ನಿಯಾಮಕನಾದ **ಅಜಃ** ಉತ್ಪತ್ತಿ-ನಾಶರಹಿತನಾದ ಶ್ರೀಹರಿಯು **ಅನಪೇಕ್ಷಃ ಅಪಿ** ಜೀವರ ಸೃಷ್ಟ್ಯಾದಿಗಳಿಂದ ತನಗೆ ಯಾವ ಪ್ರಯೋಜನವಿಲ್ಲದಿದ್ದರೂ **ಬಾಲವತ್** ಹುಡುಗರು ಆಟಿಗೆಗಳಿಂದ ಆಟವಾಡುವಂತೆ **ಅಸ್ವತಂತ್ರೈಃ** ತಾವೇ ಹುಟ್ಟಲಾಗದ ಪರತಂತ್ರರಾದ **ಆತ್ಮಸೃಷ್ಟೈಃ** ತನ್ನಿಂದ ಸೃಷ್ಟರಾದ **ಭೂತೈಃ** ಪ್ರಾಣಿಗಳಿಂದ ಅಥವಾ ವ್ಯಕ್ತವಾದ ಅಥವಾ ಸ್ಥೂಲವಾಗಿ ಸೃಷ್ಟವಾದ ಪಂಚಮಹಾಭೂತಗಳಿಂದ **ಭೂತಾನಿ** ಪ್ರಾಣಿಗಳನ್ನು **ಸೃಜತಿ** ಸೃಷ್ಟಿಸುವನು **ಅವತಿ** ರಕ್ಷಿಸುವನು **ಹಂತಿ** ಸಂಹರಿಸುವನು.

ಹೀಗೆ ಎಲ್ಲದಕ್ಕೂ ಕಾರಣನಾದ್ದರಿಂದ ಶ್ರೀಹರಿಯನ್ನು ಸೇವಿಸಬೇಕೇ ಹೊರತು ದುಃಖಿಸಬಾರದು. 'ನಾನಾ ಹ್ಯೇವಂ ವ್ಯಪದಿಶಂತಿ ಪಿತೇತಿ ಪುತ್ರೇತಿ ಭ್ರಾತೇತಿ' ಎಂಬ

ಶ್ರುತಿಯು, 'ಪುತ್ರಭ್ರಾತೃಸಖಿತ್ವೇನ ಸ್ವಾಮಿತ್ವೇನ ಯತೋ ಹರಿಃ । ಬಹುಧಾ ಗೀಯತೇ ದೇವೈಃ...' ಎಂಬ ಪುರಾಣವಾಕ್ಯಗಳು ಶ್ರೀಹರಿಯನ್ನೇ ಆ ರೀತಿ ಉಪಾಸಿಸಬೇಕೆಂದು ತಿಳಿಸುವವು.

ಸಾಕ್ಷಾತ್ ಭಗವಂತನಿಂದ ನಿಯಮ್ಯನಾದ, ಪ್ರಪಂಚಕ್ಕೆ ನಿಯಾಮಕನಾದವನು ಇಲ್ಲವೇ ಎಂದರೆ ಹೇಳುವರು. ಅನಪಃ ಮುಖ್ಯಪ್ರಾಣಃ, ತತಃ ಏವ ಪಿತಾಮಹಶ್ಚ ತಸ್ಯ ಈಕ್ಷಾ ದಯಾಪಾತ್ರತಯಾ ಈಕ್ಷಣಂ ಯಸ್ಯ ಸಃ ಅನಪೇಕ್ಷಃ ।

ಪರಮಾತ್ಮ ಸೃಷ್ಟವಾದ ಅಸ್ವತಂತ್ರಗಳಾದ ಭೂತಗಳಿಂದ ಸ್ವತಂತ್ರನು ಹೇಗೆ ಸೃಷ್ಟಿಸುವನು ಎಂದರೆ ಅದರ ಪ್ರಕಾರವನ್ನು ತಿಳಿಸುವರು-

**ದೇಹೇನ ದೇಹಿನೋ ರಾಜನ್ ದೇಹಾದ್ದೇಹೋಽಭಿಜಾಯತೇ ।**
**ಬೀಜಾದೇವ ಯಥಾ ಬೀಜಂ ದೇಹ್ಯರ್ಥ ಇವ ಶಾಶ್ವತಃ ॥೭॥**

**ರಾಜನ್** ರಾಜನೇ **ದೇಹೇನ** ತಂದೆಯ ದೇಹದಿಂದ ಸಂಯುಕ್ತವಾದ **ದೇಹಾತ್** ತಾಯಿಯ ದೇಹದಿಂದ **ದೇಹಿನಃ** ಹುಟ್ಟಲಿರುವ ಜೀವನ **ದೇಹಃ** ದೇಹವು **ಅಭಿಜಾಯತೇ** ಹುಟ್ಟುವದು. ಜೀವನು ಹುಟ್ಟುವದಿಲ್ಲ ಹೀಗೆ ಹೇಳಿದ್ದರಿಂದ ನಿತ್ಯನಾದ ಚೇತನನು ಹುಟ್ಟುವದು ಹೇಗೆ? ಎಂಬ ಶಂಕೆಗೆ ಉತ್ತರವಾಗಿ ಹುಟ್ಟು ಮೊದಲಾದ ವ್ಯವಹಾರವು ದೇಹಗಳಿಗೆ ಹೊರತು ಚೇತನನಿಗೆ ಅಲ್ಲವೆಂದು ಹೇಳಿದಂತಾಯಿತು. 'ದಿಹ ಉಪಚಯೇ' ಎಂಬ ಧಾತುವಿನ ರೂಪ ದೇಹಶಬ್ದವು. **ದೇಹೇನ** ದೇಹಶಬ್ದದಿಂದ ಉಪಲಕ್ಷಿತವಾದ ಪೂರ್ವಕರ್ಮದಿಂದ ಫಲ ಕೊಡುವುದಕ್ಕಾಗಿ ಶ್ರೀಹರಿಯಿಂದ ಪ್ರೇರಿತವಾದ್ದರಿಂದ **ದೇಹಿನಃ** ತಂದೆ-ತಾಯಿಗಳೆಂದು ಕರೆಸಿಕೊಳ್ಳುವವರ **ದೇಹಾತ್** ಉಪಾದಾನವಾದ ದೇಹದಿಂದ **ದೇಹಃ** ಮಗನ ದೇಹವು **ಅಭಿಜಾಯತೇ** ಹುಟ್ಟುವದು. ಅಭಿ ಎಂಬ ಉಪಸರ್ಗದಿಂದ ಅನೇಕ ಮುಖವಾದ ಪರಂಪರಾಸೃಷ್ಟಿಯನ್ನು ಸೂಚಿಸಿರುವರು. ಈ ವಿಷಯದಲ್ಲಿ ದೃಷ್ಟಾಂತ ಹೇಳುತ್ತಾರೆ. **ಬೀಜಾತ್** ಏವ ಹಲಸು ಮೊದಲಾದ ಬೀಜದಿಂದ ನೀರು ತೇಜಸ್ಸು ಮುಂತಾದ ಸಾಧನಸಾಮಗ್ರೀಸಹಿತವಾದುದರಿಂದಲೇ **ಯಥಾ** ಹೇಗೆ **ಬೀಜಂ** ಅಂಕುರವೆಂಬ ವೃಕ್ಷ ಜೀವನ ಶರೀರವು ಜೀವನೊಡನೆ ಹುಟ್ಟುವದೋ ನೀರು ಮೊದಲಾದವುಗಳಿಂದ ಸಾರವನ್ನು ಸಂಪಾದಿಸಿಕೊಂಡು ಅದರಿಂದ ಬೇರೆ ಹಲಸಿನ ಬೀಜ ಮೊದಲಾದ ಬೀಜಗಳು ಹುಟ್ಟುವವೋ ಅದರಿಂದ ಮತ್ತೆ ವೃಕ್ಷ ಅದರಿಂದ ಮತ್ತೆ ಬೀಜ ಹೀಗೆ

ಕಾರ್ಯಪರಂಪರೆಯು ಆಗುತ್ತದೆ. ಹಾಗಾದರೆ ಅನವಸ್ಥೆ ಬರುವದಿಲ್ಲವೇ? ಎಂದರೆ ಇಲ್ಲ. ಮೂಲಕಾರ್ಯ ಪ್ರಕೃತ್ಯಾತ್ಮಕವಾದ್ದರಿಂದ ಅನವಸ್ಥೆಗೆ ಅವಕಾಶವಿಲ್ಲ. **ತಥಾ** ಆದರಂತೆ ತಂದೆ-ತಾಯಿಗಳ ದೇಹ ವಿಕಾರವಾದ ಶುಕ್ರ-ಶೋಣಿತಗಳ ಸಂಬಂಧದಿಂದ ಕಲಿಲ (ಮಾಂಸಪಿಂಡ) ಮೊದಲಾದ ಕಾರ್ಯವು ಅಭಿಮಾನಿ ಜೀವನೊಂದಿಗೆ ಹುಟ್ಟುವದು. ಆದರಿಂದ ಅವಯವಗಳುಳ್ಳ ಸ್ತ್ರೀ-ಪುರುಷರ ದೇಹಗಳು. ಅವುಗಳ ರೇತಸ್ಸು ರಜಸ್ಸು ಇತ್ಯಾದಿ ಕ್ರಮದಿಂದ ಬೇರೆ ದೇಹರೂಪ ಕಾರ್ಯಗಳು ಕ್ರಮವಾಗಿ ಹುಟ್ಟುವವು. ಈ ಕ್ರಮದಿಂದ ಶ್ರೀಹರಿಯು ಭೂತಗಳಿಂದ ಸೃಷ್ಟಿ ಮಾಡುವನು. ಇದರಂತೆ ಸ್ಥಿತಿ-ಸಂಹಾರಕಾರ್ಯಗಳನ್ನು ಊಹಿಸಿಕೊಳ್ಳಬೇಕು. ಇವೆಲ್ಲವೂ ಅವರವರ ಅದೃಷ್ಟಕ್ಕೆ ನಿಯಾಮಕನಾದ ಶ್ರೀಹರಿಯ ಇಚ್ಛೆಗೆ ಅಧೀನವಾಗಿ ನಡೆಯುವದು ಎಂದು ತಿಳಿಯಬೇಕು.

ದೇಹವು ನಾಶವಾದಂತೆ ಜೀವನೂ ನಾಶವಾದಲ್ಲಿ ಪುರುಷಾರ್ಥ ಉಪಪನ್ನವಾಗುವದಿಲ್ಲ ಎಂದರೆ ಹೇಳುವರು. **ದೇಹೀ** ದೇಹ-ದೇಹಿಗಳ ಮಧ್ಯದಲ್ಲಿ ದೇಹಿಯು ಜೀವನು **ಅರ್ಥ ಇವ** ಮೋಕ್ಷವೆಂಬ ಪುರುಷಾರ್ಥದಂತೆ, ಶಬ್ದಗಳ ಅರ್ಥಗಳಂತೆ, ಭೂಮ್ಯಾದಿಗಳಂತೆ, ಭಗವಂತನಂತೆ, **ಶಾಶ್ವತಃ** ಅಭಿಮಾನವಿಲ್ಲದೆ ಜನ್ಮ-ನಾಶಗಳಿಲ್ಲದ್ದರಿಂದ ಮೂರು ಕಾಲಗಳಲ್ಲಿ ಒಂದೇ ರೀತಿಯಾಗಿ ಇರುವವನು. ಹಾಗಾದರೆ ಶ್ರೀಹರಿ ಸಮಾನನೇ ಎಂದರೆ ಆದಕ್ಕೂ ದೇಹೀ ಎಂಬುದೇ ಉತ್ತರ. **ಅರ್ಥಃ** ಜೀವನೆಂಬ ಪದಾರ್ಥವು **ಶಾಶ್ವತ ಇವ** 'ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ । ಯದನುಗ್ರಹತಃ ಸಂತಿ ನ ಸಂತಿ ಯದುಪೇಕ್ಷಯಾ' ಎಂದಿರುವದರಿಂದ ಜೀವನ ನಿತ್ಯತ್ವವು ಶ್ರೀಹರಿಯ ಅಧೀನವಾಗಿದೆ. ಆದ್ದರಿಂದ ಆ ನಿತ್ಯತ್ವವು ಔಪಚಾರಿಕವಾಗಿದೆ. ಆದ್ದರಿಂದ ನಿತ್ಯನೆಂಬಂತೆ ಇರುವನು. ನಿರುಪಚರಿತ ನಿತ್ಯತ್ವವು ಶ್ರೀಹರಿಗೆ ಮಾತ್ರ ಇರುತ್ತದೆ. ಆದ್ದರಿಂದ ಜೀವ-ಪರಮಾತ್ಮರಿಗೆ ಸಾಮ್ಯವಿಲ್ಲ ಎಂದು ತಿಳಿಯಬೇಕು.

**ವಿಶಿಷ್ಟ ಅರ್ಥ**

'ಅಥಾತೋ ರೇತಸಃ ಸೃಷ್ಟಿಃ' ಎಂಬ ಶ್ರುತಿಯು ಶ್ರೀಹರಿ ಪ್ರೇರಿತವಾದ ರೇತಸ್ಸಿನಿಂದ ಸೃಷ್ಟಿಯನ್ನು ಹೇಳುವದು. ಕೆಲವು ಕಾರ್ಯಗಳು ನಾರಾಯಣನಿಂದಲೇ ಆಗುವವು. (ನಾರಾಯಣಾಯನಗಳು) ಕೆಲವು ಅವನ ಅಧೀನಗಳಾಗಿ ಪರಂಪರೆಯಿಂದ ಆಗುವವು. (ನಾರಾಯಣ ಪರಾಯಣಗಳು) ಅಂತಹ ಎಲ್ಲ

ಕೆಲಸಗಳೂ ನಾರಾಯಣಾಧೀನವೇ ಆಗಿವೆ. ಈ ವಿಶೇಷವನ್ನು ಹಿಂದಿನ ಅಧ್ಯಾಯದ ೫ ನೇ ಶ್ಲೋಕದಲ್ಲಿ ಉದಾಹರಿಸಿದ 'ನಾರಾಯಣಾಯನಾ ದೇವಾ ಋಷ್ಯಾದ್ಯಾಃ ತತ್ಪರಾಯಣಾಃ । ಬ್ರಹ್ಮಾದ್ಯಾಃ ಕೇಚನ್ನೈವಂ ಸ್ಯುಃ ಸಿದ್ಧೋ ಯೋಗ್ಯಂ ಸುಖಂ ಲಭೇತ್' ಇಲ್ಲಿಯೂ ಇಂತಹವರು ಎಷ್ಟು ಮಂದಿ ಎಂಬ ಆಶಂಕೆಯನ್ನು 'ನವಕೋಟ್ಯಸ್ತು ದೇವಾನಾಂ ಋಷೀಣಾಂ ಶತಕೋಟಯಃ । ನಾರಾಯಣಾಯನಾಃ ಸರ್ವೇ ಯೇ ಕೇಚಿತ್ ತತ್ಪರಾಯಣಾಃ' ಎಂಬ ಪ್ರಮಾಣದಿಂದ ಪರಿಹರಿಸಿಕೊಳ್ಳಬೇಕು. ಈ ಎರಡು ಪ್ರಮಾಣಗಳನ್ನು 'ಮುಕ್ತಾನಾಮಪಿ ಸಿದ್ಧಾನಾಂ' ಎಂಬಲ್ಲಿ ಹೇಳದೇ ಇಲ್ಲಿಯೇ ಹೇಳಿರುವೆವು. ಕಾರಣವೇನೆಂದರೇ 'ಎಲ್ಲವೂ ನಾರಾಯಣಾಶ್ರಯದಿಂದಲೇ ನಡೆಯುವದೆಂದು ಹೇಳಬೇಕಾಗಿದೆ. ಅದಕ್ಕಾಗಿ ಇಲ್ಲಿಯೇ ಹೇಳಿದ್ದೇವೆ. ಎರಡೂ ಕಡೆಗೂ ಇವೇ ಪ್ರಮಾಣಗಳು ಎಂದು ಸಂತೋಷಿಸಬೇಕು ಎಂದು ಶ್ರೀ ವಿಜಯಧ್ವಜತೀರ್ಥರು ಹೇಳಿರುವರು.

ಇಲ್ಲಿ ದೇಹೀ ಅರ್ಥ ಇವ ಎಂಬುದಕ್ಕೆ ಪರಕೀಯರು ಜೀವನು ನರತ್ವ ಮುಂತಾದ ಜಾತಿಯಂತೆ ಶಾಶ್ವತ ನಿತ್ಯನು ಎಂದು ವ್ಯಾಖ್ಯಾನ ಮಾಡಿರುವರು. 'ಕುತೋ ಭಸ್ಮತ್ವಮಾಪ್ತಸ್ಯ ನರತ್ವಂ ಪುನರಿಷ್ಯತೇ' ಭಸ್ಮವಾದವನಿಗೆ ನರತ್ವವಿಲ್ಲ ಎಂಬ ವಚನದಂತೆ ನರತ್ವವು ಆಯಾ ನರನ ನಾಶದೊಂದಿಗೆ ನಾಶವಾಗುವದು. ಅದು ನಿತ್ಯವಲ್ಲ. ಆದ್ದರಿಂದ ಅವರ ವ್ಯಾಖ್ಯಾನ ಸರಿಯಲ್ಲ. ವಿಜಯಧ್ವಜರು

**ದೇಹಿನಃ** ನಿತ್ಯ-ಅಪ್ರಾಕೃತ ಪ್ರಶಸ್ತ ದೇಹವುಳ್ಳ ಭಗವಂತ ನಿಮಿತ್ತವಾಗಿ **ದೇಹೇನ** ಪಿತೃವಿನ ದೇಹದಿಂದ ತಾಯಿಯ ದೇಹವು ಹುಟ್ಟುವದು. ಅಥವಾ **ದೇಹೇನದೇಹಿನಃ** ಎಂದು ಒಂದೇ ಪದ. ದೇಹಕ್ಕೆ **ಇನ** ಸುಖ-ದುಃಖಭೋಗ ಮಾಡುವದರಿಂದ ಪತಿಯಾದ ದೇಹಿಯಾದವನ ಅಂದರೆ ತಂದೆ-ತಾಯಿಗಳ **ದೇಹಾತ್** ಮಿಲನವಾದ ದೇಹದಿಂದ **ದೇಹಃ** ಮಗನ ದೇಹವು **ಅಭಿಜಾಯತೇ** ಹುಟ್ಟುವದು. ಹೀಗೂ ಅರ್ಥವನ್ನು ಶ್ರೀಗಳು ಮಾಡಿರುವರು. ।।೭।।

'ನಾನು ಕೃಶ' 'ನಾನು ಸ್ಥೂಲ' ಎಂಬ ಅನುಭವದಿಂದ ದೇಹ ಜೀವ ಬೇರೆಯಲ್ಲವೆಂದು ತೋರಿಬರುತ್ತದೆ. ಆದ್ದರಿಂದ ದೇಹದಿಂದ ಭಿನ್ನನಾದ ಜೀವನೇ ಇಲ್ಲದಿರುವಾಗ ಹುಟ್ಟು ಮೊದಲಾದವು ದೇಹಕ್ಕೇ ಹೊರತು, ಜೀವನಿಗೆ ಅಲ್ಲವೆಂದು ತೋರುತ್ತದೆ. ಹೀಗಿರುವಾಗ ದೇಹೀ ನಿತ್ಯ, ದೇಹ ಅನಿತ್ಯ ಎಂದು ಹೇಳುವದು ಹೇಗೆ? ಎರಡೂ ನಾಶವಾಗಲಿ ಎಂದರೆ ಹೇಳುವರು-

 

**ದೇಹದೇಹ್ಯವಿಭಾಗೋಽಯಮವಿವೇಕಕೃತಃ ಪುರಾ ।**
**ಜಾತಿವ್ಯಕ್ತಿವಿಭಾಗೋಽಯಂ ಯಥಾ ವಸ್ತುನಿ ಕಲ್ಪಿತಃ ॥೮॥**

**ಅಯಂ** ಈ **ದೇಹದೇಹ್ಯವಿಭಾಗಃ** ದೇಹ ಮತ್ತು ದೇಹಿಗಳಿಗೆ ಐಕ್ಯವು **ಪುರಾ ಅವಿವೇಕಕೃತಂ** ಅನಾದಿಯಾದ ಅವಿದ್ಯಾಕಾರ್ಯವು. ಆದ್ದರಿಂದ ಜ್ಞಾನಿಗಳು ಈ ರೀತಿ ತಿಳಿಯಬಾರದು. **ಯಥಾ** ಹೇಗೆ **ವಸ್ತುನಿ** ಭಗವಂತನಲ್ಲಿ **ಜಾತಿ** ಆನಂದ ಧರ್ಮಗಳು **ವ್ಯಕ್ತಿ** ಭಗವಂತನು ಎಂಬ ವಿಭಾಗ ಬೇಧವು **ಕಲ್ಪಿತಃ** ಶಾಸ್ತ್ರದಲ್ಲಿ ಹೇಳದಿರುವದು ಶಾಸ್ತ್ರ ಸಮ್ಮತವಲ್ಲದ್ದು **ತಥಾ** ಹಾಗೆ ಎಂದರ್ಥ.

'ವಸನಾದ್ವಾಸನಾದ್ವಸ್ತು ನಿತ್ಯಾಪ್ರತಿಹತತ್ವತಃ । ವಾಸೇನೇದಂ ಯತಸ್ತುನ್ನಂ ತಸ್ಮಾತ್ತದ್ಬ್ರಹ್ಮ ಭಣ್ಯತೇ । ಅವಸ್ತ್ವಶಕ್ತಮುದ್ದಿಷ್ಟಂ ಶಕ್ತಂ ವಸ್ತ್ವಿತಿ ಭಣ್ಯತೇ । ತಸ್ಮಾದೇಕಂ ಪರಂ ಬ್ರಹ್ಮ ವಸ್ತುಶಬ್ದೋದಿತಸ್ಸದಾ । ಎಂದು ಪ್ರಥಮ-ಏಕಾದಶತಾತ್ಪರ್ಯಗಳಿರುವದರಿಂದ ವಸ್ತು ಎಂದರೆ ಭಗವಂತ.

ಪರಮಾತ್ಮನಿಗೂ ಅವನ ಧರ್ಮಗಳಿಗೂ ಭೇದವಿದೆ ಎಂಬುದು 'ವಿಷ್ಣೋಸ್ತದೀಯಧರ್ಮಾಣಾಂ ಭೇದದರ್ಶ್ಯಧರಂತಮಃ' 'ಏವಂ ಧರ್ಮಾನ್ ಪೃಥಕ್ ಪಶ್ಯನ್ ತಾನೇವಾನು ವಿಧಾವತಿ' ಎಂಬ ಪ್ರಮಾಣಗಳಿಗೆ ವಿರುದ್ಧವಾಗಿದೆ.

ಅಥವಾ ವೈಶೇಷಿಕಮತವನ್ನು ನಿರಾಕರಿಸುವರು. **ವಸ್ತುನಿ** ಘಟಾದಿಗಳಲ್ಲಿ **ಜಾತಿವ್ಯಕ್ತಿವಿಭಾಗಃ** ಘಟತ್ವಾದಿ ಜಾತಿ, ಘಟಾದಿ ವ್ಯಕ್ತಿ ಎಂಬ **ವಿಭಾಗಃ** ಭೇದವು **ಅವಿವೇಕಕೃತಃ** ಅಜ್ಞಾನನಿಮಿತ್ತಕವಾದುದು. ಇದು ಕಲ್ಪಿತವೆಂದು ಹೇಗೆ ಹೇಳುವಿರಿ. ಜಾತಿಯನ್ನು ಒಪ್ಪಿ ಆ ಜಾತಿಯು ಕೆಲವು ಕಡೆ ಇದೆ ಕೆಲವು ಕಡೆ ಇಲ್ಲ ಎಂದು ಹೇಳುವ ದೊಡ್ಡವ್ಯಕ್ತಿಗಳು ಗೌತಮಮತಾವಲಂಬಿಗಳು ಕಾಣುವರು. 'ವ್ಯಕ್ತೇರಭೇದಸ್ತುಲ್ಯತ್ವಂ ಸಂಕರೋಽಥಾನವಸ್ಥಿತಿಃ । ರೂಪಹಾನಿರಸಂಬಂಧೋ ಜಾತಿಬಾಧಕಸಂಗ್ರಹಃ' ಎಂದಿರುವದರಿಂದ ಸಮೂಲವಾಗಿದೆಯಲ್ಲ ಎನ್ನಬಾರದು. ಒಂದೇ ಜಾತಿಯನ್ನು ಒಪ್ಪುವದರಿಂದ ಎಲ್ಲಕಡೆಗೆ ನಿರ್ವಾಹವಾಗದಿರುವದರಿಂದ ಸಾಮಾನ್ಯಾದಿಗಳಲ್ಲಿ ಧರ್ಮವನ್ನು ಒಪ್ಪಲೇಬೇಕಾಗುವದು. ಆ ಧರ್ಮದಿಂದಲೇ ಎಲ್ಲ ಕಡೆ ನಿರ್ವಾಹವಾಗುವಾಗ ಜಾತಿಯನ್ನು ಒಪ್ಪುವದು ಗೌರವ. ಮತ್ತು ಅದಕ್ಕೆ ನಿತ್ಯತೆಯು ದೇವತೆಗಳಿಂದಾರಂಭಿಸಿ ಸಾಮಾನ್ಯಜನರೂ ಅಂಗೀಕರಿಸಲರ್ಹವಲ್ಲ. 'ಮಾಸೇನ ಶೂದ್ರೋ ಭವತಿ ಬ್ರಾಹ್ಮಣೋ ರಸವಿಕ್ರಯಾತ್' 'ನರತ್ವಾದಿಕಮಪ್ಯೇವಂ

ತತ್ತದ್ಧರ್ಮತಯೇಯತೆ ' ಎಂಬುದಕ್ಕೆ ವ್ಯಾಖ್ಯಾನಿಸುವಾಗ ಶ್ರೀಮನ್ನ್ಯಾಯಸುಧೆಯಲ್ಲಿ ವಿಸ್ತಾರವಾಗಿ ಹೇಳಿದ್ದಾರೆ.

ಪಾಮರರೂ ಸಹ ಸುರಾಪಾನ ಮುಂತಾದುವನ್ನು ಮಾಡುವವನಿಗೆ ಜಾತಿ ಹಾಳಾಯಿತು ಎಂದು ಹೇಳದೇ ಇರುವುದಿಲ್ಲ. ಅಂದಮೇಲೆ ಇದು ಕಲ್ಪಿತ ಹೇಗೆ ಎಂಬುದು ಹೇಗೆ. ಮತ್ತು 'ಭಿನ್ನಾಶ್ಚ ಭಿನ್ನಧರ್ಮಾಶ್ಚ ಪದಾರ್ಥಾ ನಿಖಿಲಾ ಅಪಿ' ಎಂದಿರುವದರಿಂದ ಜಾತಿಯ ಅನುಗತಿಯೂ ದುರ್ಗತಿ ಹೊಂದಿದೆ. ಘಟವಿದ್ದಾಗ ಅಲ್ಲಿ ವಿಶೇಷಣತಯಾ ತೋರುವ ಘಟತ್ವವು, ಘಟವಿಲ್ಲದಿರುವಾಗ ಎಲ್ಲಿ ಹೋಯಿತು ಎಂದು ಪ್ರಶ್ನಿಸಿದರೆ ತಾನು ಮಾಡಿದ ಜಾತಿಯ 'ನಿತ್ಯಂ ಏಕಂ ಅನೇಕಾನುಗತಂ' ಎಂಬ ಲಕ್ಷಣವನ್ನು ರಕ್ಷಿಸಲು ಯಾವ ಪ್ರಮಾಣವೂ ಇಲ್ಲದೇ ಕಾಲದಲ್ಲಿ ಹೋಯಿತು ಎಂದು ಹಾರಿಕೆಯ ಉತ್ತರ ಕೊಡಬೇಕು. ಮೂಕನಾದರೂ ಆಗಬೇಕು. ಆದ್ದರಿಂದ ಅವರು ಹೇಳಿದ್ದು ಅಲ್ಪಮತಿಗಳ ಕಲ್ಪನೆಯೇ ಎಂದು ಭಾವ.

ಅಥವಾ **ದೇಹದೇಹ್ಯವಿಭಾಗಃ** ಭಗವಂತನಲ್ಲಿ ಇದು ದೇಹ ಇವನು ದೇಹೀ ಎಂಬ **ಅವಿಭಾಗಃ** ಭಾಗವಿಲ್ಲದಿರುವದು ವಿಭಾಗ ಮಾಡದಿರುವದು **ಅಯಮವಿವೇಕಕೃತಃ ಅಯಮಃ** ಅಶದೃಶನು ಎಂಬ **ವಿವೇಕಕೃತಃ** ಜ್ಞಾನದಿಂದ ಮಾಡಲ್ಪಟ್ಟಿದ್ದು. **ಅಯಂ** ಜೀವಸಂಘವು ಕೂಡಾ ಶರೀರದ ಜೊತೆಗೆ ಜಾತಿ ವ್ಯಕ್ತಿ ವಿಭಾಗವುಳ್ಳವನು ಯಾವಾಗ ಎಂದರೆ ಹೇಳುವರು. **ಪುರಾ** ಎಂದು. ಲಿಂಗಭಂಗ ಆಗುವವರೆಗೆ ಎಂದರ್ಥ. ಆದರಲ್ಲಿಯೂ ಹೀಗೆಂದು ಹೇಳುವರು. **ಯಥಾವಸ್ತು** ಎಂದು. 'ಯಾವದ್ವಸ್ತು ನ ಭೇದವತ್ ಖಂಡಿತೇ ಭೇದ ಐಕ್ಯಂ ಚ' ಮುಂತಾಗಿ ಹೇಳಿದ್ದರಿಂದ ವಸ್ತು ಇರುವವರೆಗೆ ಇರುವ ಧರ್ಮಗಳಿಂದ ಅಭಿನ್ನನಾಗಿ ಮಧ್ಯದಲ್ಲಿ ಬಂದು ಹೋಗುವ ಧರ್ಮಗಳಿಂದ ಭಿನ್ನಾಭಿನ್ನನಾಗಿರುವನು. ಎಂಬ ಪ್ರಮಾಣಾನುಸಾರ ದೇಹ ಮತ್ತು ಜೀವನಿಗೆ ಭೇದವೇ ಸಿದ್ಧವಾಗುತ್ತದೆ. ಇದರಲ್ಲಿ ಯಾವ ಕಲ್ಪನೆಯೂ ಇಲ್ಲ. **ವಿಕಲ್ಪಿತಃ** ಎಂದರೆ ಕಲ್ಪಿತವಲ್ಲ ಅವಿಕಲ್ಪಿತ ಎಂದರ್ಥ. ।।೮।।

ಗೌರೋಽಹಂ ಕೃಶೋಽಹಂ ಮುಂತಾದ ನಿರ್ದುಷ್ಟ ಅನುಭವವಿರುವಾಗ ಐಕ್ಯ ಕಲ್ಪಿತವೇಕೆ ಎಂದು ಧಾರ್ಷ್ಟ್ಯದಿಂದ ಗರ್ಜಿಸುವನನ್ನು ತರ್ಜಿಸುವರು-

**ನಾನಾತ್ವಂ ಜನ್ಮನಾಶಶ್ಚ ಕ್ಷಯೋ ವೃದ್ಧಿಃ ಕ್ರಿಯಾಫಲಮ್ ।**
**ದ್ರಷ್ಟುಶ್ಚ ಭಾಂತ್ಯತದ್ಧರ್ಮಾ ಯಥಾಗ್ನೇರ್ದಾಹ್ಯವಿಕ್ರಿಯಾಃ ।।೯।।**




**ಯಥಾ** ಹೇಗೆ **ದಾಹ್ಯವಿಕ್ರಿಯಾಃ** ಬೆಂಕಿಯಿಂದ ಸುಟ್ಟು ಹೋಗುವ ಕಟ್ಟಿಗೆ ಮುಂತಾದವುಗಳಲ್ಲಿ ಆಗುವ ವೃದ್ಧಿ-ಕ್ಷಯ ಮುಂತಾದ ವಿಕಾರಗಳು **ಅಗ್ನೇಃ** ಸುಡುವ ಬೆಂಕಿಗೆ ಸಂಬಂಧಿಸಿದ್ದೆಂದು **ಭಾಂತಿ** ಭ್ರಮಾತ್ಮಕವಾಗಿ ತಿಳಿಯುವದೋ **ತಥಾ** ಹಾಗೆ **ಅತದ್ಧರ್ಮಾಃ** ಜೀವನಿಂದ ಭಿನ್ನವಾದ ಶರೀರಧರ್ಮಗಳಾದ **ಕ್ರಿಯಾಫಲಂ** ಜೀವನ ಕರ್ಮಫಲವಾಗಿ ಬಂದ **ನಾನಾತ್ವಂ** ನಾನು ದೇವತೆ ನಾನು ಮನುಷ್ಯ ಮುಂತಾದ ಆಯಾ ದೇಹ ಪ್ರಯುಕ್ತ ಭೇದಗಳು ಜನ್ಮ-ಹುಟ್ಟು-ನಾಶ-ಸಾವು **ಕ್ಷಯಃ** ಕೃಶತೆಯು **ಚ** ಮತ್ತು **ವೃದ್ಧಿಃ** ಬೆಳವಣಿಗೆ ಮುಂತಾದವು **ದ್ರಷ್ಟುಃ ಚ** ದೇಹಾಭಿಮಾನಿ ಜೀವನಿಗೆ ಸಂಬಂಧಿಸಿದವುಗಳೆಂದು **ಭಾಂತಿ** ಭ್ರಮೆಯಿಂದ ತೋರುವವು.

**ಕ್ರಿಯಾಫಲಂ** ಎಂಬುದು ಕರ್ಮಫಲವಾದುದರಿಂದ ಎಂದು ಹೇತುವನ್ನು ತಿಳಿಸುವ ವಿಶೇಷಣ. ಕಟ್ಟಿಗೆ ಮೊದಲಾದವು ಸಮೃದ್ಧವಾದರೆ ಅಗ್ನಿಯು ಸಮೃದ್ಧವೆಂದೂ ಅವು ಕ್ಷೀಣವಾದರೆ ಅಗ್ನಿಯು ಕ್ಷೀಣವೆಂದು ಭ್ರಾಂತಿಯಿಂದ ತಿಳಿಯುವಂತೆ ಶರೀರ ಧರ್ಮಗಳೆಂದು ಭ್ರಾಂತಿಯಿಂದ ತಿಳಿಯುವರೆಂದು ಭಾವ.

**ದ್ರಷ್ಟುಃ ಚ** ಜ್ಞಾನಿಯಾದ ಶ್ರೀಹರಿಗಾದರೂ **ಅತದ್ಧರ್ಮಾಃ** ಜೀವನ ಧರ್ಮಗಳಲ್ಲವೆಂದೇ **ಭಾಂತಿ** ತಿಳಿದು ಬರುವವು. 'ನಹಿ ದ್ರಷ್ಟುಃ ದೃಷ್ಟೇಃ ವಿಪರಿಲೋಪೋ ವಿದ್ಯತೇ' ಶ್ರೀಹರಿಯ ಜ್ಞಾನಕ್ಕೆ ವೈಪರಿತ್ಯವಿಲ್ಲ. ಎಂಬ ಶ್ರುತಿಯಂತೆ ಇವು ಜೀವನ ಧರ್ಮಗಳಲ್ಲವೆಂದು ತಿಳಿಯುವ ಶ್ರೀಹರಿಯ ಜ್ಞಾನವು ಯಾವ ಕಾಲದಲ್ಲಿಯೂ ಭ್ರಮವಾಗಲಾರದು. ಜೀವನ ಜ್ಞಾನವೇ ಭ್ರಮವು. ಇದರಿಂದ ಜೀವ ಮತ್ತು ದೇಹ ಭಿನ್ನವೆಂಬಲ್ಲಿ ಶ್ರೀಹರಿಯ ಜ್ಞಾನವೇ ಪ್ರಮಾಣವೆಂದು ತಿಳಿಸಿದಂತಾಯಿತು. ।।೯।।

ಇದರ ವಿಷಯವನ್ನು ಭಕ್ತಿಪಾದದ(೩-೨) 'ಕ್ವಚ ಪ್ರತ್ಯಕ್ಷತಃ ಪ್ರಾಪ್ತಮನುಮಾಗಮ-ಬಾಧಿತಂ' ಎಂಬ ಅನುವ್ಯಾಖ್ಯಾನ ವ್ಯಾಖ್ಯಾನ ಸುಧೆಯಲ್ಲಿ 'ಪ್ರತ್ಯಕ್ಷತಃ ಪ್ರಾಪ್ತಮಿತಿ' ಸಾಕ್ಷಾತ್ಕಾರಸಿದ್ಧಂ ಎಂದಾರಂಭಿಸಿ ಕ್ವಚಿತ್ ಪ್ರತೀತೇರೇವ ಅಭಾವಾತ್, ಕ್ವಚಿತ್ ಪ್ರತೀತಿಸದ್ಭಾವೇऽಪಿ ಪ್ರತ್ಯಕ್ಷಜತ್ವಾಭಾವಾತ್, ಕ್ವಚಿತ್ ಪ್ರತ್ಯಕ್ಷಪ್ರತೀತಿಭಾವೇಪಿ ಅಯಥಾರ್ಥತ್ವಾತ್, ಕ್ವಚಿತ್ ಯಥಾರ್ಥತ್ವೇऽಪಿ ಪ್ರಬಲಪ್ರತ್ಯಕ್ಷೇಣೈವ ಬಾಧಾತ್ ಇತ್ಯರ್ಥಃ । ಅತ ಏವ ಕ್ವಾಪೀತ್ಯುಕ್ತಂ ಅನ್ಯೇನೇತ್ಯನುಪಜೀವ್ಯೇನ ಮಾನಾದಿನಾ ಇತ್ಯರ್ಥಃ । ತದೇವಂ ಸ್ವಭಾವತಃ ಇತ್ಯಂತೇನ' ಎಂಬ ಗ್ರಂಥದಿಂದ ಹೇಳಿರುವರು.

ಅದರ ಭಾವ ಕೃಶೋऽಹಂ ಮುಂತಾದವು ದೇಹಾಭಿಪ್ರಾಯದಿಂದ ಹೇಳಿದ ಮಾತೇ ಹೊರತು ಜೀವವಿವಕ್ಷಯಾ ಅಲ್ಲ. ಜೀವವಿಷಯ ಎಂದರೆ ಅದು ಭ್ರಮಕಾರಣ. ಆದ್ದರಿಂದ ದೇಹೈಕ್ಯವು ಸಿದ್ಧವಾಗುವದಿಲ್ಲ. ॥೯॥

ಶೋಕಕಾಲವಾದ್ದರಿಂದ ಚಿತ್ರಕೇತುವಿನ ಮನಸ್ಸು ಭಗವಂತನಲ್ಲಿ ಪ್ರವೇಶಿಸಲಿಲ್ಲ ಎಂದು ಮತ್ತೆ ಹೇಳುವರು-

**ತ ಇಮೇ ದೇಹಸಂಯೋಗಾದಾತ್ಮನ್ಯಾಭಾಂತ್ಯಸದ್ಗ್ರಹಾತ್ ।**
**ಸ್ವಪ್ನೇ ಯಥಾ ತಥಾ ನಾನ್ಯದ್ ಧ್ಯಾಯೇತ್ಸರ್ವಂ ಭಯಂ ಚ ಯತ್ ॥ ೧೦॥**

**ತೇ ಇಮೇ** ಪ್ರಮಾಣಸಿದ್ಧವಾದ ಜನ್ಮ-ನಾಶಗಳು **(ಜೀವಸ್ಯ)** ಜೀವನಿಗೆ **ದೇಹಸಂಯೋಗಾತ್** ಕರ್ಮದ ಫಲವಾಗಿ ಬಂದ ದೇಹಸಂಬಂಧದಿಂದ **ಅಸದ್ಗ್ರಹಾತ್** ಅನಾದಿಯಿಂದ ಇದ್ದ ದೇಹವೇ ನಾನೆಂಬ ದುರಭಿಮಾನದಿಂದ **ಆತ್ಮನಿ** ಜೀವನಲ್ಲಿ ಮನಸ್ಸಿನಲ್ಲಿ **ಆ ಭಾಂತಿ** ತೋರುವವು. ಈ ವಿಷಯದಲ್ಲಿ ಉದಾಹರಣೆ ಕೊಡುತ್ತಾರೆ. **ಯತ್** ಯಾವ ಕಾರಣ **ಯಥಾ** ಹೇಗೆ **ಸ್ವಪ್ನೇ** ಕನಸಿನಲ್ಲಿ ಕಂಡ **ಸರ್ವಂ ಚ** ವಾಸನಾಮಯವಾದ ಹುಲಿ ಮುಂತಾದ ಎಲ್ಲ ಪದಾರ್ಥಗಳು **ಭಯಂ** ಭಯವನ್ನು ಉಂಟು ಮಾಡುವವೋ **ತಥಾ** ಹಾಗೆ ಅನಾದಿಕಾಲದ ಅಭಿಮಾನದಿಂದ ಸಂಸಾರವು ಅನರ್ಥಕರವಾಗುವದು. **ತತ್** ಆ ಕಾರಣ **ಅನ್ಯತ್** ಅನರ್ಥ ಮಾಡುವುದನ್ನು **ನ ಧ್ಯಾಯೇತ್** ಯೋಚಿಸಬಾರದು. ಅನರ್ಥಕರ ಸಂಸಾರ ನಿವೃತ್ತಿಗೆ ಉಪಾಯ ಹೇಳಿದಂತಾಯಿತು.

೨. ಶುಕ್ತಿ ಎಂಬ ಅಧಿಷ್ಠಾನದಲ್ಲಿ ರಜತವು ತೋರುವಂತೆ ಹುಟ್ಟು ಮೊದಲಾದವು ಯಾವ ಅಧಿಷ್ಠಾನದಲ್ಲಿ ತೋರುವವು ಎಂಬ ಮಂದರ ಶಂಕೆಗೆ ಪರಿಹಾರ ಹೇಳುತ್ತಾರೆ. ಈ ಹುಟ್ಟು ಮೊದಲಾದವು ನಾನೇ ದೇಹವೆಂಬ ದುರಭಿಮಾನದಿಂದ **ಆತ್ಮನಿ** ಆತ್ಮಾಧಿಷ್ಠಾನದಲ್ಲಿ **ಆ ಭಾಂತಿ** ತೋರುವವು. ಆತ್ಮನೇ ಅಧಿಷ್ಠಾನವೆಂದರ್ಥ. ಹಾಗಾದರೆ ಶುಕ್ತಿ ರಜತದಂತೆ ಸುಳ್ಳೋ ಎಂದರೆ ಸ್ವಪ್ನಪದಾರ್ಥಗಳು ಅರ್ಥಕ್ರಿಯಾಕಾರಿಯಾದುದರಿಂದ ಹೇಗೆ ಅವುಗಳನ್ನು ಸತ್ಯವೆಂದು ಒಪ್ಪಬೇಕೋ ಹಾಗೆ ಹುಟ್ಟು ಮೊದಲಾದವುಗಳನ್ನು ಸತ್ಯವೆಂದು ಒಪ್ಪಬೇಕು ಎಂಬ ಅಭಿಪ್ರಾಯದಿಂದ ಹೇಳುತ್ತಾರೆ. ಸ್ವಪ್ನದಲ್ಲಿ ಕಂಡ ಪದಾರ್ಥಗಳು ಹೇಗೆ ಹಾಗೆ **ಸರ್ವಭಯಂ** ಆತ್ಮಾಧಿಷ್ಠಾನದಲ್ಲಿ ಕಂಡ ಹುಟ್ಟು ಮುಂತಾದ ಅನರ್ಥಕರ ಪದಾರ್ಥಗಳೆಲ್ಲವೂ ಸತ್ಯಗಳೇ **ಯತ್** ಯಾವ ಕಾರಣ

 

ಆತ್ಮನಲ್ಲಿ ಕಂಡ ಇವು ಅನರ್ಥಕರಗಳೋ **ತತ್** ಆ ಕಾರಣ **ಅನ್ಯತ್** ದೇಹವೇ ಆತ್ಮವೆಂಬುದನ್ನು **ನ ಧ್ಯಾಯೀತ್** ತಿಳಿಯಬಾರದು.

೩. **ತೇ** ದೇಹದಲ್ಲಿ ಪ್ರಸಿದ್ಧವಾದ **ಇಮೇ** ಹುಟ್ಟು ಮೊದಲಾದವುಗಳು **ದೇಹಯೋಗಾತ್** ದೇಹಸಂಬಂಧದಿಂದ **ಆತ್ಮನಿ** ಆತ್ಮನಲ್ಲಿ ತೋರುವವು. ದೇಹ ಸಂಯೋಗವಿದ್ದರೂ ಜ್ಞಾನಿಗಳಿಗೆ ತೋರುವದಿಲ್ಲ. ಆದ್ದರಿಂದ ಆದಕ್ಕೆ ಮುಖ್ಯ ಕಾರಣ ಅಸದ್ಗ್ರಹವೆಂದು ತಿಳಿಸಲು **ಅಸದ್ಗ್ರಹಾತ್** ಎಂದಿರುವರು. ಇದಕ್ಕೆ ಉದಾಹರಣ **ಯಥಾ** ಹೇಗೆ **ಸ್ವಪ್ನೇ** ಸ್ವಪ್ನಾವಸ್ಥೆಯಲ್ಲಿ ಜಾಗ್ರತ್ತ್ವ ತೋರುವದೋ **ತಥಾ** ಹಾಗೆ ಎಂದರ್ಥ. ಮಿಥ್ಯಾಜ್ಞಾನಕ್ಕೆ ಫಲವನ್ನು ಹೇಳಿ ನಿಷೇಧಿಸುತ್ತಾರೆ. **ಯತ್ ಅನ್ಯತ್** ಯಾವುದು ಯಾವುದಲ್ಲವೋ ದೇಹಾತ್ಮೈಕ್ಯ ಮುಂತಾದವು **ತತ್ಸರ್ವಂ** ಅವೆಲ್ಲವನ್ನು **ಭಯಂ** ಭಯಪ್ರದವಾದ್ದರಿಂದ **ನ ಧ್ಯಾಯೀತ್** ತಿಳಿಯಬಾರದು. 'ಯತ್ಕಿಂಚಿದನ್ಯಥಾ-ಸಂಸ್ಥಮನ್ಯಥಾ ಧ್ಯಾತಮಂಜಸಾ । ಅನರ್ಥಕಾರಣಂ ಲೋಕೇ ಕಿಮು ಸರ್ವೇಶ್ವರೋ ಹರಿಃ' ಎಂಬ ಪ್ರಮಾಣವು ಅನ್ಯಥೋಪಾಸನೆಯು ಅನರ್ಥಕರವೆಂದು ತಿಳಿಸುವದು.

ವಿಜಯಧ್ವಜರು ಚೆಟ್ಟಿ ಆಚಾರ್ಯರ ಪ್ರಕಾರ ಈ ರೀತಿಯಾಗಿ ಅರ್ಥ. ಶ್ರೀ ಸತ್ಯಧರ್ಮರ ಪ್ರಕಾರ ಅರ್ಥವನ್ನು ಹೀಗೆ ತಿಳಿಯಬೇಕು.

ಶೋಕಕಾಲವಾದ್ದರಿಂದ ಭಗವಂತನನನ್ನು ಬಿಟ್ಟು ಬೇರೆಡೆ ಮನಸ್ಸು ಇಡಬಾರದೆಂದು ಮತ್ತೆ ಹೇಳುವರು.

**ಇಮೇ** ಹಿಂದೆ ಹೇಳಿದ ಜನ್ಮಾದಿಗಳು **ಆತ್ಮನಿ** ಜೀವನಲ್ಲಿ **ದೇಹಸಂಯೋಗಾತ್** ದೇಹಸಂಬಂಧದಿಂದ **ಅಸದ್ಗ್ರಹಾತ್** ದುರಭಿಮಾನದಿಂದ **ಆತ್ಮನಿ** ಈ ರೀತಿ ದಾತಾ ಆದ ಭಗವಂತನು ಇರುವಾಗ **ಆಭಾಂತಿ** ತೋರುವವು. ಇದೇ ಏಕೆ ಎಂದು ಹೇಳುವರು. **ಅಸದ್ಗ್ರಹಾತ್** ಇದೆಲ್ಲ ಸತ್ ಆಗಿದ್ದರೂ ಅಸಾಮರ್ಥ್ಯದಿಂದ ಅಸತ್ತಿದ್ದಂತೆ ತಿಳಿದು ಬರುವದು. ಇದಕ್ಕೆ ಅನುರೂಪ ದೃಷ್ಟಾಂತ ಕೊಡುವರು **ಸ್ವಪ್ನೇ** ಕನಸಿನಲ್ಲಿ **ಸರ್ವಂ** ಎಲ್ಲವೂ ಜಾಗ್ರತ್ ಕಾಲದಲ್ಲಿ ಕಂಡ ಸರ್ಪ ಮುಂತಾದವುಗಳ ಸಂಸ್ಕಾರದಿಂದ **ಭಯಂ** **ಯತ್** ಭಯವನ್ನು ಹೊಂದಿಸುವದು. ಇಣ್ ಧಾತುವಿನ ಅಂತರ್ಗತ ಣಿಜಂತದ ರೂಪ ಏತಿ ಪ್ರಾಪಯತೀತಿ ಯತ್ 'ಯತಶ್ಚ ಯತ್' ಎಂಬುದರ ವ್ಯಾಖ್ಯಾನ ಮಾಡುವಾಗ ಗೀತಾಭಾಷ್ಯ-ತಾತ್ಪರ್ಯ-ಪ್ರಮೇಯದೀಪಿಕಾಗಳಲ್ಲಿ ಹೀಗೆ ಹೇಳಿದೆ. 'ಯತಶ್ಚ ಯತ್ ಯತೋ ಯಾತಿ ಪ್ರವರ್ತತೇ ಇತಿ । ಯತೋ ಯಸ್ಯ ಪ್ರೇರಣಯಾ । ಯದಿತಿ ಇಣೋ ಲಡಾದೇಶೆ ಶತ್ರಂತಸ್ಯ ರೂಪಂ ಇಣೋ ಯಾತೇಶ್ಚ ಅನತಿಭಿನ್ನತ್ವಾತ್ ।

ಇಣ್ ಧಾತು ಮತ್ತು ಯಾಧಾತುವಿಗೆ ಸಮಾನಾರ್ಥತೆ ಇದೆ. ಭಯ ಎಂಬುದು ಉಪಲಕ್ಷಣ. ಭಯ-ಅಭಯ-ಹರ್ಷ-ಅಹರ್ಷಾದಿಗಳು ಆಗುವವು. ಸಂಸಾರಾವಸ್ಥೆಯಲ್ಲಿ ಸತ್ಯವಾಗಿಯೇ ಇವೆಲ್ಲ ಆಗುವವು. ಆದ್ದರಿಂದ ಅದನ್ನು ದಾಟಲು ಕಾರಣ ಹೇಳುವರು. **ನಾನ್ಯದ್ ಧ್ಯಾಯೀತ್** ಭಗವಂತನಿಂದ ಭಿನ್ನವಾದುದನ್ನು ಧ್ಯಾನ ಮಾಡಬಾರದು. ಅಂದರೆ ಮಾತ್ರ ಸಂಸಾರ ಸರಿಯುವದು ಎಂದು ಭಾವ. 'ನಿರ್ಮಾತಾರಂ ಚೈಕೇ ಪುತ್ರಾದಯಶ್ಚ' 'ನ ತತ್ರ ರಥಾಃ' ಮುಂತಾದ ಸೂತ್ರ-ಶ್ರುತಿಸಿದ್ಧವಾದದ್ದರಿಂದ ವಿಶ್ವಸನೀಯವೆಂದು ತಿಳಿಸಲು ತಂ ಧ್ಯಾಯೇತ್ ಎನ್ನದೇ ನಿಷೇಧ ಮುಖವಾಗಿ ಹೇಳಿದ್ದೆಂದು ತಿಳಿಯಬೇಕು.

**ಅಸದ್‌ಗ್ರಹಾತ್** ಸದಾ ಸರ್ವತ್ರ ಇರುವ ಭಗವಂತ, ಅಲ್ಲಲ್ಲಿ ಇರುವ ಜೀವ ಇವರಿಬ್ಬರ ಜ್ಞಾನವಿಲ್ಲದ್ದರಿಂದ ಮತ್ತು ದೇಹಸಂಬಂಧದಿಂದಲೂ **ತೇ** ಜನ್ಮಾದಿಗಳು ಜೀವನವಾಗದಿದ್ದರೂ **ಇಮೇ** ಇವು ನನ್ನವು ಎಂಬ ಭ್ರಾಂತಿ ಎಲ್ಲಿ ಎಂದರೆ **ಆತ್ಮನಿ** ಮನಸ್ಸಿನಲ್ಲಿ ಎಂದರ್ಥ.

'ಸ್ವಪ್ನೇ ಯಥಾ ತದೇವೇತಿ ತಥೇತಿ' ಸ್ವಪ್ನದಲ್ಲಿ ಹೇಗೆ ಜಾಗ್ರತ್ಪದಾರ್ಥಗಳೇ ಎಂದು ತಿಳಿಯುವನೋ ಹಾಗೆ ಎಂದರ್ಥ. ಹೇಗೆ ತಿಳಿಯಬೇಕು ಎಂದರೆ ಅದನ್ನು ಹೇಳುವರು. 'ಯಥಾತಥಾ ನ ಕಿಂತು ಭಾತಂ ಸರ್ವಂ ಭಯಮಭಯಂ ಚೇತಿ ಯತ್ ತತ್ ಅನ್ಯತ್' ಅಂದರೆ ಕನಸಿನಲ್ಲಿ ಕಂಡದ್ದು ಮೊದಲು ನೋಡಿದ್ದರಿಂದ ಭಿನ್ನವಾದುದು, ಭಗವಂತನಿಂದ ಸೃಷ್ಟವಾದದ್ದು, ಸತ್ಯವಾದುದು. ಎಂದು ಜನ್ಮಾದಿಗಳೆಲ್ಲ ದೇಹಕ್ಕೇ ಹೊರತು ನನಗಲ್ಲ. ಯಾವ ಶರೀರವಿದೆಯೋ ಅದು **ಅನ್ಯತ್** ಬೇರೇ ಎಂದು ತಿಳಿಯಬೇಕು ಎಂದು ದೃಷ್ಟಾಂತ-ದಾರ್ಷ್ಟಾಂತಿಕವಾಗಿ ಯೋಜಿಸಬೇಕು.

ಬೇರೆಯವರ ಧ್ಯಾನ ಮಾಡಬಾರದೆಂದು ಹೇಳಿದರು. ಆದರ ಫಲವೇನೆಂದು ಹೇಳುವರು-

**ಪ್ರಸುಪ್ತಸ್ಯಾನಹಮ್ಮಾನಾನ್ನ ಘೋರಾ ಭಾತಿ ಸಂಸೃತಿಃ ।**
**ಜೀವತೋಽಪಿ ಯಥಾ ತದ್ವದ್ವಿಮುಕ್ತಸ್ಯಾನಹಂಮತೇಃ ॥೧೧॥**

**ಪ್ರಸುಪ್ತಸ್ಯ** ಗಾಢವಾಗಿ ನಿದ್ರಿಸುವವನಿಗೆ **ಜೀವತಃ ಅಪಿ** ಬದುಕಿದ್ದರೂ ಜ್ಞಾನಪೂರ್ವಕ ಬಾಹ್ಯ ಪ್ರವೃತ್ತಿ ಇಲ್ಲದವನಿಗೆ **ಅನಹಮ್ಮಾನಾತ್** ನಾನೇ ದೇಹವೆಂಬ

ಭ್ರಮವಿಲ್ಲದ್ದರಿಂದ **ಘೋರಾ** ಅನರ್ಥಕಾರಿಯಾದ **ಸಂಸೃತಿಃ** ವಿಷಯಜ್ಞಾನಸ್ವರೂಪ ಸಂಸಾರವು **ನ ಭಾತಿ** ತೋರುವದಿಲ್ಲವೋ **ತದ್ವತ್** ಹಾಗೆ **ಅನಹಂಮತೇಃ** ಅಹಂಭಾವ ಇಲ್ಲದ **ವಿಮುಕ್ತಸ್ಯ ಜೀವತಃ ಅಪಿ** ಜೀವನ್ಮುಕ್ತನಿಗೂ ಘೋರವಾದ ಸಂಸಾರವು **ನ ಭಾತಿ** ತೋರುವದಿಲ್ಲ.

ಪ್ರಸುಪ್ತಿ ಅಂದರೆ ದೀರ್ಘನಿದ್ರೆ ಎಂದರೆ ಮರಣವೆಂದಾಗುವದು. ಅದನ್ನು ನಿವಾರಿಸಲು **ಜೀವತಃ** ಎಂದಿರುವರು. ಇದರಿಂದ ಅನನ್ಯಧ್ಯಾನದಿಂದ ಕೈವಲ್ಯ ದೊರೆಯುವದು ಎಂದು ಸೂಚಿಸಿದಂತಾಯಿತು.

**ಅನಹಮ್ಮಾನಾತ್** ನಿರಭಿಮಾನದಿಂದ **ಜಾನತಃ** ಚೇತನನಿಗೆ **ಸಂಸೃತಿಃ** ಸಂಸಾರವು ನಿದ್ರೆಯಲ್ಲಿ ಹೇಗೆ ಘೋರವಾಗುವದಿಲ್ಲ ಮನಸ್ಸು ಉಪರತವಾಗಿರುವದು ಹಾಗೆ **ಜಾನತಃ** ನನ್ನದೇನಲ್ಲ ಎಲ್ಲವೂ ಶ್ರೀಹರಿಯ ಅಧೀನವೆಂದು ತಿಳಿದವನಿಗೆ ಸಂಸಾರಾವಸ್ಥೆಯಲ್ಲಿಯೂ ಸಂಸಾರವು ಘೋರವಾಗಿ ತೋರುವದಿಲ್ಲ. ಕನಸಿನಲ್ಲಿ ಕಂಡದ್ದು ಕಾಲಾಂತರದಲ್ಲಿ ಫಲಕೊಡುವದು. ಅದರಂತೆ ಜ್ಞಾನಿಗೆ ಕಾಲಾಂತರದಲ್ಲಿ ಸಂಸಾರ ಮತ್ತೆ ಬರುವದೆನಿಸುವದು. ಆದ್ದರಿಂದ ಬೇರೆ ದೃಷ್ಟಾಂತವನ್ನು ಕೊಡುವರು. **ವಿಮುಕ್ತಸ್ಯ** ಲಿಂಗಭಂಗವನ್ನು ಹೊಂದಿದವನಿಗೆ ಹೇಗೆ ಸಂಸಾರ ಘೋರವಲ್ಲವೋ ಹಾಗೆ **ಅನಹಮ್ಮತೇಃ** ಅಹಂಕಾರವಿಲ್ಲದವನಿಗೆ **ಜಾನತಃ** ಜ್ಞಾನಿಗೆ ಸನಕಾದಿಗಳಂತೆ ಜನಕಾದಿಗಳಂತೆ ಘೋರವಲ್ಲ.

ಸಂಸಾರದಲ್ಲಿದ್ದರೂ ಅವನೆಂಥವನು ಎಂದು ತಿಳಿಸುವರು. ಭಾತಿಸಂಸೃತಿಃ ಎಂದು **ಭಯಾ** ಭಗವಂತನ ಜ್ಞಾನದಿಂದ **ಅತಿಸಂಸೃತಿಃ** ಅತಿಕ್ರಾಂತವಾದ ಸಂಸಾರವುಳ್ಳವನು ಜೀವನ್ಮುಕ್ತನೆಂದರ್ಥ. ಅತಿಕ್ರಾಂತಃ ಸಂಸೃತಿಂ ಇತಿ ಅತಿಸಂಸೃತಿಃ ಹೀಗೂ ವಿಗ್ರಹ. 'ಅತ್ಯಾದಯಃ ಕ್ರಾಂತಾದ್ಯರ್ಥೇ ದ್ವಿತೀಯಯಾ' ಎಂದಿದೆ. ।।೧೧।।

ಯಾವುದಕ್ಕಾಗಿ ಇಷ್ಟು ಆಯಾಸ ಪಟ್ಟರೋ ಅದನ್ನು ನಿಗಮಿಸುವರು-

ನಿನಗೇನಾಗುವುದಿದೆಯೋ ಅದು ಹಾಗೇ ಆಗುವದು. ನೀನು ಅದಕ್ಕೆ ಯಾರು? ಯಾರೂ ಅಲ್ಲ. ಹಾಗಾದರೆ ಕ್ಲೇಶಕಾರಣ ಯಾವುದು ಎಂದರೆ ಮನಸ್ಸು ಎಂದು ಹೇಳುವರು. ಅಭಿಮಾನತ್ಯಾಗವು ಸಂಸಾರನಿವೃತ್ತಿಗೆ ಕಾರಣವಾದುದರಿಂದ ಅಭಿಮಾವನ್ನು ಬಿಟ್ಟು ಶ್ರೀಹರಿಯನ್ನು ಭಜಿಸು ಎಂದು ಫಲಿತವನ್ನು ಹೇಳುವರು-

**ತಸ್ಮಾದನ್ಯನ್ಮನೋಮಾತ್ರಂ ಜಹ್ಯಹಮ್ಮಮತಾತಮಃ ।**
**ವಾಸುದೇವೇ ಭಗವತಿ ಮನೋ ಧೇಹ್ಯಾತ್ಮನೀಶ್ವರೇ ॥೧೨॥**

**ತಸ್ಮಾತ್** ನಾನು ನನ್ನದು ಎಂಬ ಅಭಿಮಾನವಿಲ್ಲದವನಿಗೆ ಘೋರಸಂಸಾರವು ಇಲ್ಲದ್ದರಿಂದ, ಅಭಿಮಾನವಿದ್ದವಗೆ ಸಂಸಾರವಿರುವುದರಿಂದ **ಅನ್ಯತ್** ಮಗ ಮುಂತಾದುದು **ಮನೋಮಾತ್ರಂ** ಮನಸ್ಸಿನಲ್ಲಿರುವ ರಾಗ-ದ್ವೇಷಗಳಿಂದ ಬಂದ ಪುಣ್ಯ-ಪಾಪಗಳೇ ನಿಮಿತ್ತವಾಗಿ ಉಳ್ಳವುಗಳು ಆದ್ದರಿಂದ **ಅಹಮ್ಮಮತಾತಮಃ** ನಾನು ನನ್ನದು ಎಂಬ ಅನ್ಯಥಾಜ್ಞಾನವನ್ನು **ಜಹಿ** ಬಿಡು. ಬಿಡುವ ಉಪಾಯ ಹೇಳುವರು.

**ಆತ್ಮನಿ ಚ** ಬಿಂಬರೂಪಿಯಾದ **ಈಶ್ವರೇ** ಬ್ರಹ್ಮಾದಿ ಸರ್ವನಿಯಾಮಕನಾದ ಆದ್ದರಿಂದಲೇ ದೇಹದಲ್ಲಿದ್ದರೂ ದುಃಖಾದಿಗಳ ಸ್ಪರ್ಶವಿಲ್ಲದೇ ಇರಲು ಸಮರ್ಥನಾದ **ಭಗವತಿ** ಷಡ್ಗುಣೈಶ್ವರ್ಯಸಂಪನ್ನನಾದ **ವಾಸುದೇವೇ** ಸರ್ವತ್ರವ್ಯಾಪ್ತನಾದ ಶ್ರೀಹರಿಯಲ್ಲಿ **ಮನಃ** ಮನಸ್ಸನ್ನು **ಧೇಹಿ** ಇಡು. (ಆದರಿಂದ ಉಂಟಾದ ಶ್ರೀಹರಿಯ ಅನುಗ್ರಹದಿಂದುಂಟಾದ ಜ್ಞಾನವೆಂಬ ಖಡ್ಗದಿಂದ ಅಹಂ-ಮಮತೆ ಎಂಬ ಅಜ್ಞಾನವನ್ನು ಸಮೂಲವಾಗಿ ನಾಶಮಾಡು ಎಂದರ್ಥ. ಮನೋಮಾತ್ರವೆಂದು ಹೇಳಿದ್ದರಿಂದ ಅವರ ಧೀರ್ಘಾಯುಷ್ಯಾದಿಗಳು ಪುಣ್ಯ-ಪಾಪನಿಮಿತ್ತಗಳೇ ಎಂದು ಹೇಳಿದಂತಾಯಿತು.

ಇದರ ಅಭಿಪ್ರಾಯವಿದು- ಅಹಂ ಮಾನದಿಂದ ಮನಸ್ಸಿನಲ್ಲಿ ರಾಗ ದ್ವೇಷಗಳು, ಅವುಗಳಿಂದ ಪುಣ್ಯ-ಪಾಪಗಳು ಅವುಗಳ ಫಲವಾಗಿ ಮಕ್ಕಳು ಮೊದಲಾದವುಗಳು ಆಗುತ್ತವೆ. 'ಮನಸೋ ದ್ವೇಷರಾಗಾಭ್ಯಾಂ ಪುಣ್ಯಪಾಪಸಮುದ್ಭವಃ । ಪುತ್ರಾದಿಪುಣ್ಯಪಾಪಾಭ್ಯಾಂ ತಸ್ಮಾತ್ಸರ್ವಂ ಮನೋಮಯಮ್' ಈ ಪ್ರಮಾಣವು ಪುತ್ರಾದಿಗಳು ಮನೋಮಯ ಹೇಗೆಂದು ತಿಳಿಸುವದು. ಇಲ್ಲಿ 'ದೇಹದೇಹ್ಯ-ವಿಭಾಗೋಽಯಮವಿವೇಕಕೃತಃ ಪುರಾ' ಎಂದಾರಂಭಿಸಿ ಅಲ್ಲಲ್ಲಿ ದೇಹಾತ್ಮೈಕ್ಯ ಪ್ರತೀತಿಯನ್ನು ಹೇಳಿದ್ದು ಸ್ಪಷ್ಟವಾದ ಭೇದಜ್ಞಾನವಿಲ್ಲವೆಂಬ ಅಭಿಪ್ರಾಯದಿಂದ. ನನ್ನ ದೇಹವೆಂದು ಎಲ್ಲರಿಗೂ ಭೇದಾನುಭವವಿರುವದರಿಂದ ಐಕ್ಯಜ್ಞಾನ ಯಾರಿಗೂ ಇಲ್ಲ. ಇದನ್ನೇ ಅನುವ್ಯಾಖ್ಯಾನದಲ್ಲಿ 'ಮಮ ದೇಹ ಇತಿ ಹ್ಯೇವ ನ ದೇಹೋಽಹಮಿತಿ ಭ್ರಮಃ' ಎಂದಾರಂಭಿಸಿ 'ವ್ಯಾಪ್ತತ್ವಾದಾತ್ಮನೋ ದೇಹೇ ವ್ಯವಹಾರೇಷ್ವಪಾಟವಾತ್ । ಭೇದಜ್ಞಾನೇಽಪಿ ಚಾಂಗರವಹ್ನಿವತ್ ಸ್ವಾವಿವಿಕ್ತವತ್ । ಭವಂತಿ ವ್ಯವಹಾರಾಶ್ಚ ನಹಿ

ಪ್ರತ್ಯಕ್ಷಗಾನಪಿ । ಅರ್ಥಾನ್ಯನುಭವತಃ ಪ್ರತಿಪಾದಯಿತುಂ ಕ್ಷಮಾ ಎಂದು ಸುಧಾದಲ್ಲಿ ಭೇದೇ ಜ್ಞಾತೇಽಪಿ ಆತ್ಮನಃ ದೇಹೇ ವ್ಯಾಪ್ತತ್ವಾದಂಗಾರವಹ್ನಿವತ್ ಲೋಕಾನಾಂ ವ್ಯವಹಾರೇಷ್ವಪಾಟವಾದತ್ಯಂತವಿವಿಕ್ತವೇದನೇಷ್ವಸಾಮರ್ಥ್ಯಾತ್ ಪುರಾದಿವ್ಯವಹಾರಶ್ಚ ಸ್ವಾವಿವಿಕ್ತವದ್ಭವಂತಿ । ವಿಷಯವಿವೇಕಾಭಾವವಿವಕ್ಷಯೈವ ತೇ ವ್ಯವಹಾರಾಃ ಇತ್ಯಾಶಯಃ । ಅತ ಏವ ವಿವೇಕಾರ್ಥಾನಾಮುಪದೇಶಾನಾಂ ಚ ಸಾರ್ಥಕ್ಯಮುಪಪದ್ಯತೇ । ವಿಶದೋ ಹಿ ವಿವೇಕಃ ಪುರುಷಾರ್ಥಾಯ ಕಲ್ಪತೇ ನತೌತ್ಪತ್ತಿಕಃ । ಆತ್ಮನೋ ದೇಹೇ ವಾಪ್ತತ್ವಾದತ್ಯಂತಪ್ರೇಮಾಸ್ಪದತ್ವಾದ್ರಾಗಾದಯೋಽಪಿ ಯುಜ್ಯಂತೇ ಏವೇತಿ । ಎಂದಿದ್ದಾರೆ.

**ಅನುವ್ಯಾಖ್ಯಾನ ಸಾರಾಂಶ**

ಯದ್ಯಪಿ ಸ್ವಾಭಾವಿಕವಾಗಿ ದೇಹಭೇದ ಜ್ಞಾನ ಎಲ್ಲರಿಗೂ ಇದೆ. ಆದರೆ ಅದು ಮೋಕ್ಷ ಸಾಧನವಲ್ಲ. ಆದ್ದರಿಂದ ವಿಶದವಾದ ಭೇದಜ್ಞಾನವನ್ನು ಸಂಪಾದಿಸಬೇಕು. ಸಾಮಾನ್ಯವಾದ ಭೇದಜ್ಞಾನವಿದ್ದರೂ ಪ್ರತ್ಯಕ್ಷವಾಗಿ ಕಂಡ ಅವಳಿ ಮಕ್ಕಳ ವ್ಯತ್ಯಾಸವೇನೆಂದು ಕೇಳಿದರೆ ತಾಯಿಗೆ ಹೇಳಲಾಗುವುದಿಲ್ಲ. ಅದರಂತೆ ದೇಹದಲ್ಲಿ ಜೀವನು ವ್ಯಾಪ್ತನಾದುದರಿಂದ ಇದ್ದಲ್ಲಿಯಲ್ಲಿ ವ್ಯಾಪ್ತವಾದ ಬೆಂಕಿಯನ್ನು ಪ್ರತ್ಯೇಕಿಸಿ ತಿಳಿಯಲಾಗದಂತೆ ನಾನು ಕೆಂಪು ಕರಿ ಮುಂತಾಗಿ ದೇಹಧರ್ಮಗಳನ್ನು ತನ್ನಲ್ಲಿ ಹೇಳಿಕೊಳ್ಳುವನು. ದೇಹದ ಮೇಲಿನ ವಿಶೇಷ ಅಭಿಮಾನದಿಂದ ರಾಗಾದಿಗಳು ಉಪಪನ್ನವಾಗುವವು. ಆದರಿಂದ ಪಾಪ-ಪುಣ್ಯ, ಸುಖ-ದುಃಖಗಳಾಗುವವು. ಆದ್ದರಿಂದ ಅಭಿಮಾನವನ್ನು ಬಿಟ್ಟು, ಅತ್ಯಂತಭೇದವನ್ನು ತಿಳಿದು, ನಿರಭಿಮಾನದಿಂದ ಮುಕ್ತಿ ಪಡೆಯಬೇಕು.

ಇಷ್ಟಾದರೂ ಇನ್ನು ರಾಜನ ಪಾಪದ ಉಪಶಮನವಾಗಲಿಲ್ಲವೇ ಎಂಬ ಪರೀಕ್ಷಿತನ ಮಾನಸಿಕ ಸಂಶಯವನ್ನು ಶುಕಾಚಾರ್ಯರು ಪರಿಹರಿಸುವರೆಂದು ಹೇಳುವರು.

**ಶ್ರೀಶುಕ ಉವಾಚ –**

**ಏವಮಾಶ್ವಾಸಿತೋ ರಾಜಾ ಚಿತ್ರಕೇತುರ್ದ್ವಿಜೋಕ್ತಿಭಿಃ ।**
**ವಿಮೃಜ್ಯ ಪಾಣಿನಾ ವಕ್ತ್ರಮಾಧಿಮ್ಲಾನಮಭಾಷತ ॥೧೩॥**

**ದ್ವಿಜೋಕ್ತಿಭಿಃ** ಅಂಗಿರಸ-ನಾರದರೆಂಬ ಬ್ರಾಹ್ಮಣರ ಮಾತುಗಳಿಂದ **ಏವಂ** ಮೇಲೆ ಹೇಳಿದಂತೆ **ಆಶ್ವಾಸಿತಃ** ಸಮಾಧಾನ ಮಾಡಲ್ಪಟ್ಟ **ರಾಜಾ ಚಿತ್ರಕೇತುಃ** ರಾಜನಾದ

**ತಸ್ಮಾದನ್ಯನ್ಮನೋಮಾತ್ರಂ ಜಹ್ಯಹಮ್ಮಮತಾತಮಃ ।**
**ವಾಸುದೇವೇ ಭಗವತಿ ಮನೋ ಧೇಹ್ಯಾತ್ಮನೀಶ್ವರೇ ॥೧೨॥**

**ತಸ್ಮಾತ್** ನಾನು ನನ್ನದು ಎಂಬ ಅಭಿಮಾನವಿಲ್ಲದವನಿಗೆ ಘೋರಸಂಸಾರವು ಇಲ್ಲದ್ದರಿಂದ, ಅಭಿಮಾನವಿದ್ದವಗೆ ಸಂಸಾರವಿರುವುದರಿಂದ **ಅನ್ಯತ್** ಮಗ ಮುಂತಾದುದು **ಮನೋಮಾತ್ರಂ** ಮನಸ್ಸಿನಲ್ಲಿರುವ ರಾಗ-ದ್ವೇಷಗಳಿಂದ ಬಂದ ಪುಣ್ಯ-ಪಾಪಗಳೇ ನಿಮಿತ್ತವಾಗಿ ಉಳ್ಳವುಗಳು ಆದ್ದರಿಂದ **ಅಹಮ್ಮಮತಾತಮಃ** ನಾನು ನನ್ನದು ಎಂಬ ಅನ್ಯಥಾಜ್ಞಾನವನ್ನು **ಜಹಿ** ಬಿಡು. ಬಿಡುವ ಉಪಾಯ ಹೇಳುವರು.

**ಆತ್ಮನಿ ಚ** ಬಿಂಬರೂಪಿಯಾದ **ಈಶ್ವರೇ** ಬ್ರಹ್ಮಾದಿ ಸರ್ವನಿಯಾಮಕನಾದ ಆದ್ದರಿಂದಲೇ ದೇಹದಲ್ಲಿದ್ದರೂ ದುಃಖಾದಿಗಳ ಸ್ಪರ್ಶವಿಲ್ಲದೇ ಇರಲು ಸಮರ್ಥನಾದ **ಭಗವತಿ** ಷಡ್ಗುಣೈಶ್ವರ್ಯಸಂಪನ್ನನಾದ **ವಾಸುದೇವೇ** ಸರ್ವತ್ರವ್ಯಾಪ್ತನಾದ ಶ್ರೀಹರಿಯಲ್ಲಿ **ಮನಃ** ಮನಸ್ಸನ್ನು **ಧೇಹಿ** ಇಡು. (ಆದರಿಂದ ಉಂಟಾದ ಶ್ರೀಹರಿಯ ಅನುಗ್ರಹದಿಂದುಂಟಾದ ಜ್ಞಾನವೆಂಬ ಖಡ್ಗದಿಂದ ಅಹಂ-ಮಮತೆ ಎಂಬ ಅಜ್ಞಾನವನ್ನು ಸಮೂಲವಾಗಿ ನಾಶಮಾಡು ಎಂದರ್ಥ. ಮನೋಮಾತ್ರವೆಂದು ಹೇಳಿದ್ದರಿಂದ ಅವರ ಧೀರ್ಘಾಯುಷ್ಯಾದಿಗಳು ಪುಣ್ಯ-ಪಾಪನಿಮಿತ್ತಗಳೇ ಎಂದು ಹೇಳಿದಂತಾಯಿತು.

ಇದರ ಅಭಿಪ್ರಾಯವಿದು- ಅಹಂ ಮಾನದಿಂದ ಮನಸ್ಸಿನಲ್ಲಿ ರಾಗ ದ್ವೇಷಗಳು, ಅವುಗಳಿಂದ ಪುಣ್ಯ-ಪಾಪಗಳು ಅವುಗಳ ಫಲವಾಗಿ ಮಕ್ಕಳು ಮೊದಲಾದವುಗಳು ಆಗುತ್ತವೆ. 'ಮನಸೋ ದ್ವೇಷರಾಗಾಭ್ಯಾಂ ಪುಣ್ಯಪಾಪಸಮುದ್ಭವಃ । ಪುತ್ರಾದಿಪುಣ್ಯಪಾಪಾಭ್ಯಾಂ ತಸ್ಮಾತ್ಸರ್ವಂ ಮನೋಮಯಮ್' ಈ ಪ್ರಮಾಣವು ಪುತ್ರಾದಿಗಳು ಮನೋಮಯ ಹೇಗೆಂದು ತಿಳಿಸುವದು. ಇಲ್ಲಿ 'ದೇಹದೇಹ್ಯ-ವಿಭಾಗೋಽಯಮವಿವೇಕಕೃತಃ ಪುರಾ' ಎಂದಾರಂಭಿಸಿ ಅಲ್ಲಲ್ಲಿ ದೇಹಾತ್ಮೈಕ್ಯ ಪ್ರತೀತಿಯನ್ನು ಹೇಳಿದ್ದು ಸ್ಪಷ್ಟವಾದ ಭೇದಜ್ಞಾನವಿಲ್ಲವೆಂಬ ಅಭಿಪ್ರಾಯದಿಂದ. ನನ್ನ ದೇಹವೆಂದು ಎಲ್ಲರಿಗೂ ಭೇದಾನುಭವವಿರುವದರಿಂದ ಐಕ್ಯಜ್ಞಾನ ಯಾರಿಗೂ ಇಲ್ಲ. ಇದನ್ನೇ ಅನುವ್ಯಾಖ್ಯಾನದಲ್ಲಿ 'ಮಮ ದೇಹ ಇತಿ ಹ್ಯೇವ ನ ದೇಹೋಽಹಮಿತಿ ಭ್ರಮಃ' ಎಂದಾರಂಭಿಸಿ 'ವ್ಯಾಪ್ತತ್ವಾದಾತ್ಮನೋ ದೇಹೇ ವ್ಯವಹಾರೇಷ್ವಪಾಟವಾತ್ । ಭೇದಜ್ಞಾನೇಽಪಿ ಚಾಂಗರವಹ್ನಿವತ್ ಸ್ವಾವಿವಿಕ್ತವತ್ । ಭವಂತಿ ವ್ಯವಹಾರಾಶ್ಚ ನಹಿ

ಪ್ರತ್ಯಕ್ಷಗಾನಪಿ । ಅರ್ಥಾನ್ಯನುಭವತಃ ಪ್ರತಿಪಾದಯಿತುಂ ಕ್ಷಮಾ ಎಂದು ಸುಧಾದಲ್ಲಿ ಭೇದೇ ಜ್ಞಾತೇಽಪಿ ಆತ್ಮನಃ ದೇಹೇ ವ್ಯಾಪ್ತತ್ವಾದಂಗಾರವಹ್ನಿವತ್ ಲೋಕಾನಾಂ ವ್ಯವಹಾರೇಷ್ವಪಾಟವಾದತ್ಯಂತವಿವಿಕ್ತವೇದನೇಷ್ವಸಾಮರ್ಥ್ಯಾತ್ ಪುರಾದಿವ್ಯವಹಾರಶ್ಚ ಸ್ವಾವಿವಿಕ್ತವದ್ಭವಂತಿ । ವಿಷಯವಿವೇಕಾಭಾವವಿವಕ್ಷಯೈವ ತೇ ವ್ಯವಹಾರಾಃ ಇತ್ಯಾಶಯಃ । ಅತ ಏವ ವಿವೇಕಾರ್ಥಾನಾಮುಪದೇಶಾನಾಂ ಚ ಸಾರ್ಥಕ್ಯಮುಪಪದ್ಯತೇ । ವಿಶದೋ ಹಿ ವಿವೇಕಃ ಪುರುಷಾರ್ಥಾಯ ಕಲ್ಪತೇ ನತ್ವೌತ್ಪತ್ತಿಕಃ । ಆತ್ಮನೋ ದೇಹೇ ವಾಪ್ತತ್ವಾದತ್ಯಂತಪ್ರೇಮಾಸ್ಪದತ್ವಾದ್ರಾಗಾದಯೋಽಪಿ ಯುಜ್ಯಂತೇ ಏವೇತಿ । ಎಂದಿದ್ದಾರೆ.

**ಅನುವ್ಯಾಖ್ಯಾನ ಸಾರಾಂಶ**

ಯದ್ಯಪಿ ಸ್ವಾಭಾವಿಕವಾಗಿ ದೇಹಭೇದ ಜ್ಞಾನ ಎಲ್ಲರಿಗೂ ಇದೆ. ಆದರೆ ಅದು ಮೋಕ್ಷ ಸಾಧನವಲ್ಲ. ಆದ್ದರಿಂದ ವಿಶದವಾದ ಭೇದಜ್ಞಾನವನ್ನು ಸಂಪಾದಿಸಬೇಕು. ಸಾಮಾನ್ಯವಾದ ಭೇದಜ್ಞಾನವಿದ್ದರೂ ಪ್ರತ್ಯಕ್ಷವಾಗಿ ಕಂಡ ಅವಳಿ ಮಕ್ಕಳ ವ್ಯತ್ಯಾಸವೇನೆಂದು ಕೇಳಿದರೆ ತಾಯಿಗೆ ಹೇಳಲಾಗುವುದಿಲ್ಲ. ಆದರಂತೆ ದೇಹದಲ್ಲಿ ಜೀವನು ವ್ಯಾಪ್ತನಾದುದರಿಂದ ಇದ್ದಲ್ಲಿಯಲ್ಲಿ ವ್ಯಾಪ್ತವಾದ ಬೆಂಕಿಯನ್ನು ಪ್ರತ್ಯೇಕಿಸಿ ತಿಳಿಯಲಾಗದಂತೆ ನಾನು ಕೆಂಪು ಕರಿ ಮುಂತಾಗಿ ದೇಹಧರ್ಮಗಳನ್ನು ತನ್ನಲ್ಲಿ ಹೇಳಿಕೊಳ್ಳುವನು. ದೇಹದ ಮೇಲಿನ ವಿಶೇಷ ಅಭಿಮಾನದಿಂದ ರಾಗಾದಿಗಳು ಉಪಪನ್ನವಾಗುವವು. ಆದರಿಂದ ಪಾಪ-ಪುಣ್ಯ, ಸುಖ-ದುಃಖಗಳಾಗುವವು. ಆದ್ದರಿಂದ ಅಭಿಮಾನವನ್ನು ಬಿಟ್ಟು, ಅತ್ಯಂತಭೇದವನ್ನು ತಿಳಿದು, ನಿರಭಿಮಾನದಿಂದ ಮುಕ್ತಿ ಪಡೆಯಬೇಕು.

ಇಷ್ಟಾದರೂ ಇನ್ನು ರಾಜನ ಪಾಪದ ಉಪಶಮನವಾಗಲಿಲ್ಲವೇ ಎಂಬ ಪರೀಕ್ಷಿತನ ಮಾನಸಿಕ ಸಂಶಯವನ್ನು ಶುಕಾಚಾರ್ಯರು ಪರಿಹರಿಸುವರೆಂದು ಹೇಳುವರು.

**ಶ್ರೀಶುಕ ಉವಾಚ –**

**ಏವಮಾಶ್ವಾಸಿತೋ ರಾಜಾ ಚಿತ್ರಕೇತುರ್ದ್ವಿಜೋಕ್ತಿಭಿಃ ।**
**ವಿಮೃಜ್ಯ ಪಾಣಿನಾ ವಕ್ತ್ರಮಾಧಿಮ್ಲಾನಮಭಾಷತ ॥೧೩॥**

**ದ್ವಿಜೋಕ್ತಿಭಿಃ** ಅಂಗಿರಸ-ನಾರದರೆಂಬ ಬ್ರಾಹ್ಮಣರ ಮಾತುಗಳಿಂದ **ಏವಂ** ಮೇಲೆ ಹೇಳಿದಂತೆ **ಆಶ್ವಾಸಿತಃ** ಸಮಾಧಾನ ಮಾಡಲ್ಪಟ್ಟ **ರಾಜಾ ಚಿತ್ರಕೇತುಃ** ರಾಜನಾದ

ಚಿತ್ರಕೇತುವು **ಪಾಣಿನಾ** ಕೈಯಿಂದ **ಆಧಿಮ್ಲಾನಂ** ಮನೋವ್ಯಥೆಯಿಂದ ಬಾಡಿದ **ವಕ್ತ್ರಂ** ಮುಖವನ್ನು **ವಿಮೃಜ್ಯ** ಒರಿಸಿಕೊಂಡು **ಅಭಾಷತ** ಹೇಳಿದನು.

ಆಧಿಃ ಮ್ಲಾನೋ ಯಥಾ ಭವತಿ ತಥಾ ಆಧಿಮ್ಲಾನಂ ಅಭಾಷತ ಮನೋವ್ಯಥೆ ಹೋಗುವಂತೆ ಮಾತಾಡಿದನು. ಎಂದು ಅನ್ವಯ ಮಾಡಿಕೊಳ್ಳಬೇಕು. ।।೧೩।।

**ರಾಜೋವಾಚ -**

**ಕೌ ಯುವಾಂ ಜ್ಞಾನಸಂಪನ್ನೌ ಮಹಿಷ್ಠೌ ಚ ಮಹೀಯಸಾಮ್ ।**
**ಅವಧೂತೇನ ವೇಷೇಣ ಗೂಢಾವಿಹ ಸಮಾಗತೌ ।।೧೪।।**

**ಜ್ಞಾನಸಂಪನ್ನೌ** ಜ್ಞಾನಿಗಳಾದ **ಮಹಿಯಸಾಂ ಚ** ಮಹನೀಯರಿಗೂ **ಮಹಿಷ್ಠೌ** ಪೂಜ್ಯರಾದ **ಅವಧೂತೇನ ವೇಷೇಣ** ಧೂಳು ಮುಚ್ಚಿಕೊಂಡಿರುವ ಆಕಾರದಿಂದ **ಗೂಢೌ** ಸ್ವರೂಪವನ್ನು ಮರೆ ಮಾಚಿರುವ **ಇಹ** ಇಲ್ಲಿಗೆ **ಸಮಾಗತೌ** ಬಂದಿರುವ **ಯುವಾಂ** ನೀವಿಬ್ಬರೂ **ಕೌ** ಯಾರು **ಯದ್ಯಪಿ** ಅಂಗಿರಸರನ್ನು ಮೊದಲೇ ನೋಡಿದವರೇ ಆದರೂ ವ್ಯಥೆಯಿಂದ ಅತ್ಯಂತ ಪೀಡಿತನಾಗಿ ಮೈಮೇಲೆ ಎಚ್ಚರವಿಲ್ಲದೆ ಈ ರೀತಿ ಪ್ರಶ್ನೆ ಮಾಡಿರುವನೆಂದು ತಿಳಿಯಬೇಕು. ಅಥವಾ **ಅವಧೂತೇನ ವೇಷೇಣ** ಎಂದು ಹೇಳಿದ್ದರಿಂದ ಪರಿಯಚವಿದ್ದರೂ ಪೂಜೆಯನ್ನು ಮಾಡಿದ್ದರೂ ಅವನಿಗೆ ಅಂಗಿರಸರ ಅಪರಿಸ್ಫೂರ್ತಿ ಸಂಭಾವಿತವಾದ್ದರಿಂದ ಪ್ರಶ್ನೆಯು ಸಂಭಾವಿತವಾಗಿದೆ. **ಸಮಾಗತೌ** ಕೂಡಿಕೊಂಡು ಬಂದಿರುವ ನೀವು ಯಾರು **ನೌ** ಗಂಡ-ಹೆಂಡತಿಯರಿಗೆ **ಜ್ಞಾನಸಂಪತ್** ಜ್ಞಾನಸಂಪತ್ತಾಗಿ ಬಂದವರು ಯಾರು ಎಂದೂ ಅನ್ವಯಾರ್ಥ ಹೇಳಬಹುದು. ।।೧೪।।

ಜ್ಞಾನವಂತರಾದ ಮಹಾತ್ಮರ ಸ್ವಭಾವವಿದು ಎಂದು ಈ ಒಂದು ನಿಮಿತ್ತದಿಂದ ಬಹುಶಃ ಮನಃಶುದ್ಧಿಯಾಗುವದು ಎಂದು ತಿಳಿದ ಕೆಲವು ಜ್ಞಾನಿಗಳ ನಾಮನಿರ್ದೇಶ ಮಾಡಿ ಅವರಲ್ಲಿ ನೀವಾರು ಎಂದು ವಿಕಲ್ಪ ಮಾಡಿ ರಾಜನು ಪ್ರಶ್ನಿಸಿ ಈ ರೀತಿ ಅವಧೂತವೇಷ ಹಿಂದೆ ಅನುಭವಿಸಿದ್ದೆಂದು ಹೇಳುವನು-

**ಚರಂತಿ ಹ್ಯವನೌ ಕಾಮಂ ಬ್ರಾಹ್ಮಣಾ ಭಗವತ್ಪ್ರಿಯಾಃ ।**
**ಮಾದೃಶಾಂ ಗ್ರಾಮ್ಯಬುದ್ಧೀನಾಂ ಬೋಧಾಯೋನ್ಮತ್ತಲಿಂಗಿನಃ ।।೧೫।।**

**ಮಾದೃಶಾಂ** ನನ್ನಂತಹ **ಗ್ರಾಮ್ಯಬುದ್ಧೀನಾಂ** ವಿಷಯಸುಖದಲ್ಲಿಯೇ ಆಸಕ್ತರಾದ ಜನರ **ಬೋಧಾಯ** ಜ್ಞಾನೋಪದೇಶಕ್ಕಾಗಿ **ಉನ್ಮತ್ತಲಿಂಗಿನಃ** ಹುಚ್ಚರಂತೆ ಚಿಹ್ನೆಗಳನ್ನು

ಧರಿಸಿದ **ಭಗವತ್ಪ್ರಿಯಾಃ** ಶ್ರೀಹರಿಗೆ ಪ್ರಿಯರಾದ ಭಗವಂತನೇ ಪ್ರಿಯವಾಗಿವುಳ್ಳ **ಬ್ರಾಹ್ಮಣಾಃ** ಬ್ರಹ್ಮಾಪರೋಕ್ಷಿಗಳು **ಅವನೌ** ಭೂಮಿಯಲ್ಲಿ **ಕಾಮಂ** ಶ್ರೀಹರಿಯ ಇಚ್ಛೆಯಂತೆ **ಚರಂತಿ** ಸಂಚರಿಸುವರು.

ಹಿ ಶಬ್ದದಿಂದ 'ಜಗತ್ಯಟಂತಿ ನಾತ್ಮಾರ್ಥಂ ಭಾಸ್ಕರಾ ಇವ ಭಾಸ್ವರಾಃ' ಎಂಬ ಪ್ರಸಿದ್ಧಿಯನ್ನು ಸೂಚಿಸುವರು. ಅಸ್ಮಾದೃಶಾಂ ಎನ್ನದೇ ಮಾದೃಶಾಂ ಎಂದದ್ದರಿಂದ ಮಾ ನ ವಿದ್ಯತೇ ದೃಕ್ ಯೇಷಾಂ ಇತಿ ಮಾದೃಶಃ ಅಜ್ಞಾನಿಗಳಾದ ಎಂಬ ಅಭಿಪ್ರಾಯ ತಿಳಿಸಿರುವರು. ಗ್ರಾಮ್ಯಬುದ್ಧೀನಾಂ ಸುರತಾದಿಗಳಲ್ಲಿ ರತವಾದ ಮನಸ್ಸುಳ್ಳ ಅಶ್ಲೀಲ ಮನಸ್ಸುಳ್ಳ 'ಗ್ರಾಮ್ಯಮಶ್ಲೀಲಬಂಧಯೋಃ' ಎಂದು ವಿಶ್ವ. ಅವರಿಗೇನು ಪ್ರಯೋಜನವಿಲ್ಲದಿದ್ದರೂ ನಮ್ಮ ಉದ್ಧಾರಕ್ಕಾಗಿಯೇ ಜ್ಞಾನಿಗಳು ಸಂಚರಿಸುವರು ಎಂದು ಸಾಮಾನ್ಯವಾಗಿ ತಿಳಿದಿದ್ದರೂ ಇಂಥವರೇ ಎಂದು ತಿಳಿಯದ್ದರಿಂದ ಪ್ರಶ್ನೆಯು ಯುಕ್ತವೇ ಆಗಿದೆ ಎಂದು ಭಾವ. ।।೧೫।।

ಅವರಾರೆಂದು ಹೇಳುವರು-

**ಕುಮಾರೋ ನಾರದ ಋಭುರಂಗಿರಾ ದೇವಲೋಽಸಿತಃ ।**
**ಅಪಾಂತರತಮೋ ವ್ಯಾಸೋ ಮಾರ್ಕಂಡೇಯೋಽಥ ಗೌತಮಃ ।।೧೬।।**

**ವಸಿಷ್ಠೋ ಭಗವಾನ್ ರಾಮಃ ಕಪಿಲೋ ಬಾದರಾಯಣಃ ।**
**ದುರ್ವಾಸಾ ಯಾಜ್ಞವಲ್ಕ್ಯಶ್ಚ ಜಾತೂಕರ್ಣ್ಯಸ್ತಥಾರುಣಿಃ ।।೧೭।।**

**ರೋಮಶಶ್ಚ್ಯವನೋ ದತ್ತ ಆಸುರಿಃ ಸಪತಂಜಲಿಃ ।**
**ಪರಾಶರೋಽಥ ಮೈತ್ರೇಯೋ ಭಾರದ್ವಾಜಶ್ಚ ಆರುಣಃ ।।**
**ಋಷಿರ್ವೇದಶಿರಾ ಬೋಧ್ಯೋ ಮುನಿಃ ಪಂಚಶಿಖಸ್ತಥಾ ।।೧೮।।**

**ಹಿರಣ್ಯನಾಭಃ ಕೌಶಲ್ಯಃ ಶ್ರುತದೇವಃ ಕ್ರತುಧ್ವಜಃ ।**
**ಏತೇ ಪರೇ ಚ ಸಿದ್ಧೇಶಾಶ್ಚರಂತಿ ಜ್ಞಾನಹೇತವಃ ।।೧೯।।**

ಸನತ್ಕುಮಾರರು, ನಾರದರು, ಋಭುಗಳು, ಅಂಗಿರಸರು, ದೇವಲರು, ಅಸಿತರು, ಅಪಾಂತರತಮರು, ವ್ಯಾಸರು, ಮಾರ್ಕಂಡೇಯರು, ಗೌತಮರು, ವಸಿಷ್ಠರು, ಶ್ರೀ ಹರಿಯ ಅವತಾರರಾದ ಪರಶುರಾಮದೇವರು, ಕಪಿಲರು, ಮಾರ್ಕಂಡೇಯ ಮತ್ತು ಗೌತಮರ ಮಧ್ಯೇ ಬೇರೊಬ್ಬರಿಲ್ಲವೆಂದು ಸೂಚಿಸಲು ಅಥ ಶಬ್ದವನ್ನು

ಪ್ರಯೋಗಿಸಿರುವರು. ಶುಕಾಚಾರ್ಯರು (ಬಾದರಾಯಣ ಪುತ್ರರು) ದುರ್ವಾಸರು, ಯಾಜ್ಞವಲ್ಕ್ಯರು (ಇವರಿಬ್ಬರಲ್ಲಿ ವಿಶೇಷ ತಿಳಿಸಲು ಚ ಶಬ್ದವನ್ನು ಪ್ರಯೋಗಿಸಿರುವರು) ಜಾತೂಕರ್ಣ್ಯರು ಮತ್ತು ಆರುಣಿಗಳು ರೋಮಶರು, ಚ್ಯವನರು, ದತ್ತರು, ಆಸುರಿಗಳು (ಸಜ್ಜನರು) ಪಂತಜಲಿಗಳು, ಪರಾಶರರು, ಮೈತ್ರೇಯರು ಭಾರದ್ವಾಜರು, ಆರುಣರು, ಋಷಿಗಳಾದ ವೇದಶಿರರು, ಬೋಧ್ಯರು, ಮುನಿಗಳಾದ ಪಂಚಶಿಖರು, ಹಿರಣ್ಯನಾಭರು, ಕೌಶಲ್ಯರು, ಶ್ರುತದೇವರು, ಕ್ರತುಧ್ವಜರು, **ಲೋಕಾನಾಂ** ಅಜ್ಞಾನಿಗಳಿಗೆ **ಜ್ಞಾನಹೇತವಃ** ಜ್ಞಾನಕ್ಕೆ ಕಾರಣರಾದ **ಏತೇ** ಇವರೂ **ಚ** ಮತ್ತು **ಪರೇ** ಇತರರೂ **ಸಿದ್ಧೇಶಾಃ** ಯೋಗಸಿದ್ಧಿಯನ್ನು ಪಡೆದವರಲ್ಲಿ ಶ್ರೇಷ್ಠರು **ಚರಂತಿ** ಸಂಚರಿಸುವರು.

ಬ್ರಾಹ್ಮಣಾಃ, ಭಗವತ್ಪ್ರಿಯಾಃ, ಸಿದ್ಧೇಶಾಃ, ಜ್ಞಾನಹೇತವಃ ಎಂಬ ವಿಶೇಷಣಗಳಿಂದ ವಿಶಿಷ್ಟತೆಯನ್ನು ಪ್ರತಿಪಾದಿಸಿದ್ದರಿಂದ ಇವರೆಲ್ಲರೂ ಸಮಾನರೆಂದು ತಿಳಿಯಬಾರದು ಎಂದು ಹೇಳಿದಂತಾಯಿತು.

**ತಸ್ಮಾದ್ಯುವಾಂ ಗ್ರಾಮ್ಯಪಶೋರ್ಮಮ ಮುಗ್ಧಧಿಯಃ ಪ್ರಭೂ ।**
**ಅಂಧೇ ತಮಸಿ ಮಗ್ನಸ್ಯ ಜ್ಞಾನದೀಪ ಉದೀರ್ಯತಾಮ್ ॥೨೦॥**

**ತಸ್ಮಾತ್** ಅಜ್ಞಾನಿಗಳ ಉಪದೇಶಕ್ಕಾಗಿಯೇ ತಮ್ಮಂತಹ ಜ್ಞಾನಿಗಳು ಸಂಚರಿಸುವದರಿಂದ **ಯುವಾಂ** ನೀವು **ಮುಗ್ಧಧಿಯಃ** ಮೂಢಬುದ್ಧಿಯುಳ್ಳ **ಗ್ರಾಮ್ಯಪಶೋಃ** ಪಶುವಿನಂತೆ ವಿಷಯಸುಖದಲ್ಲಿ ಮಗ್ನನಾದ **ಮಮ** ನನಗೆ **ಪ್ರಭೂ** ರಕ್ಷಕರೂ, ಸಮರ್ಥರೂ **ಅಂಧೇ ತಮಸಿ ಮಗ್ನಸ್ಯ** ಅಜ್ಞಾನದ ಕಗ್ಗತ್ತಲೆಯಲ್ಲಿ ಮುಳುಗಿದ **ಮಮ** ನನಗೆ **ಜ್ಞಾನದೀಪಃ ಉದೀರ್ಯತಾಂ** ನಿಮ್ಮಿಂದ ಜ್ಞಾನವೆಂಬ ದೀಪವು ಪ್ರಾರಂಭಿಸಲ್ಪಡಲಿ. ॥೨೦॥

೧೭ನೇ ಶ್ಲೋಕದಲ್ಲಿ ಹೇಳಿದ **ಭಗವಾನ್** ಎಂಬುದು ಕೇವಲ ರಾಮನಿಗೆ ಮಾತ್ರ ವಿಶೇಷಣವಲ್ಲ, ವ್ಯಾಸ, ಕಪಿಲ ಮುಂತಾದ ಭಗವದ್ರೂಪಗಳಿಗೂ ವಿಶೇಷಣ. 'ಸುಖಂ ಪಿಬನ್ ಲೀಲಯೈವ ಕಪಿಲೋ ವ್ಯಾಸ ಏವ ಚ । ವಿಶಿಷ್ಟತ್ವಾತ್' ಎಂದು ಗೀತಾತಾತ್ಪರ್ಯದಲ್ಲಿ ಹೇಳಿದ ಅರ್ಥವನ್ನು ತಿಳಿಯಬೇಕು. ಲೀಲೆಯಿಂದಲೇ ಸುಖಪಾನ ಮಾಡುವದರಿಂದ ಕಪಿಲ. ಎಲ್ಲರಿಗಿಂತ ವಿಶಿಷ್ಟನಾದ್ದರಿಂದ ವಿ ಸರ್ವತ್ರ ಇರುವದರಿಂದ ಆಸ ಎರಡೂ ಸೇರಿ ವ್ಯಾಸ ಎಂದು ಭಾವ.

'ಕೃಷ್ಣವ್ಯಾಸೌ ರಾಮಕೃಷ್ಣೌ ರಾಮಕಪಿಲೌ ಯಜ್ಞಪ್ರಮುಖಾಃ ಸ್ವಯಂ ಸಃ' ಎಂದು ಗೀತಾಭಾಷ್ಯದಲ್ಲಿ ಹೇಳಿದೆ. 'ಕಪಿಲವ್ಯಾಸಕೃಷ್ಣಾದ್ಯಂ ಪ್ರತ್ಯಕ್ಷಂ ವೈಭವಂ ಸ್ಮೃತಮ್' ಎಂದು ಗೀತಾಭಾಷ್ಯದಲ್ಲಿ ಹೇಳಿದೆ. ಅದರಂತೆ ಆಗ್ನೇಯಶಾಖೆಯಲ್ಲಿ 'ಸ ವ್ಯಾಸೋ ವೀತಿ ತಮಂ ಸ ವೈ ವಿ ಸೋಽಧಸ್ತಾತ್ ಸ ಉತ್ತರತಃ ಸ ಪಶ್ಚಾತ್ ಸ ಪೂರ್ವಸ್ಮಾತ್ ಸ ದಕ್ಷಿಣತಃ ಸ ಉತ್ತರತ ಇತಿ' ಎಂದು ಹೇಳಿದೆ.

ಕಪಿಲೋ ವಾಸುದೇವಾಂಶಃ ತಂತ್ರಂ ಸಾಂಖ್ಯಂ ಜಗಾದ ಹ ।
ಬ್ರಹ್ಮಾದಿಭ್ಯಶ್ಚ ದೇವೇಭ್ಯೋ ಭೃಗ್ವಾದಿಭ್ಯಸ್ತಥೈವ ಚ ।

ತಥೈವಾಸುರಯೇ ಸರ್ವಂ ವೇದಾರ್ಥಪರಿಬೃಂಹಿತಮ್ ।
ಸರ್ವವೇದವಿರುದ್ಧಂ ಚ ಕಪಿಲೋಽನ್ಯೋ ಜಗಾದ ಹ ।
ಸಾಂಖ್ಯಮಾಸುರಯೇಽನ್ಯಸ್ಮೈ ಕುತರ್ಕಪರಿಬೃಂಹಿತಮ್ ॥

ಎಂದು ಪ್ರಥಮತಾತ್ಪರ್ಯದಲ್ಲಿದೆ. ಛಾಂದೋಗ್ಯದಲ್ಲಿಯೂ ವಿಸ್ತಾರವಾಗಿದೆ. ಹದಿನಾರನೇ ಶ್ಲೋಕದಲ್ಲಿ ದೇವಲೋಽಸಿತಃ ಎಂದಿದೆ. ಕೆಲವರು ಅಸಿತ, ದೇವಲ, ಎಂದು ಒಬ್ಬನಿಗೆ ಎರಡು ಹೆಸರು ಎನ್ನುವರು. ವಿಶ್ವಾಮಿತ್ರನೇ ಅಸಿತ ಗೃತ್ಸಮದ ಅಸಿತ, ಅಪಾಂತರತಮ ಅಸಿತ ಎಂದು ಕೆಲವರು ಹೇಳುವರು. ಇಲ್ಲಿಯೇ ಮುಂದೆ 'ಅಪಾಂತರಪ್ರಾಗ್ಯತಮಃ ಪುರೋಗಾಃ' ಎಂದು ಸಂಗ್ರಹರಾಮಾಯಣದಲ್ಲಿ ಹೇಳಿದೆ. ಸಾಕ್ಷಾದ್ ಭಗವಂತನೇ ಮೇಧಾತಿಥಿಃ ದೇವಲಃ ಎಂದು ಇಲ್ಲಿಯೇ ವಿಶಕಲಿತನಾಮಗಳು ಕೇಳಿ ಬರುವದರಿಂದ ಭಿನ್ನರಾದ ಮುನಿಗಳು ಎಂದು ಹೇಳುವರು.

ಮೋಕ್ಷಧರ್ಮದಲ್ಲಿ

ಜೈಗೀಷವ್ಯಸ್ಯ ಸಂವಾದಮಸಿತಸ್ಯ ಚ ಭಾರತ ।
ಜೈಗೀಷವ್ಯಂ ಮಹಾಪ್ರಾಜ್ಞಂ ಧರ್ಮಾಣಾಮಾಗತಾಗತಮ್ ।
ಅಕ್ರುಧ್ಯಂತಮದೃಷ್ಯಂತಮಸಿತೋ ದೇವಲೋಽಬ್ರವೀತ್ ॥

ಆದರಂತೆ ಅಲ್ಲೇ ಬೇರೇ ಸ್ಥಳದಲ್ಲಿ 'ಉವಾಚಾಸಿತದೇವಲಃ' ಎಂದು ಇರುವದರಿಂದ ಭಾಗವತದಲ್ಲಿಯೂ ಸಾಮಾನಾಧಿಕರಣ್ಯೇನ ಅನ್ವಯ ಮಾಡಿದರೆ ಎರಡಕ್ಕೂ ಐಕಕಂಠತೆ ಬರುವದು. ॥೧೬-೨೦॥

**ಅಂಗಿರಾ ಉವಾಚ -**

ನೀವಿಬ್ಬರೂ ಯಾರು ಎಂಬ ಪ್ರಶ್ನೆಗೆ ಉತ್ತರ ಕೊಡುತ್ತಾರೆ. ವಿಶ್ವಾಸ ಬರುವದಕ್ಕಾಗಿ ಮೊದಲು ಪ್ರತ್ಯಕ್ಷವಾಗಿ ಅನುಭವಿಸಿದ್ದನ್ನು ಜ್ಞಾಪಿಸಲು ಒಬ್ಬನೇ ಹೇಳುವನು. ಅಹಂ ಎಂದು-

**ಅಹಂ ತೇ ಪುತ್ರಕಾಮಸ್ಯ ಪುತ್ರದೋಽಸ್ಮ್ಯಂಗಿರಾ ನೃಪ ।**
**ಏಷ ಬ್ರಹ್ಮಸುತಃ ಸಾಕ್ಷಾನ್ನಾರದೋ ಭಗವಾನೃಷಿಃ ॥೨೦॥**

**ಪುತ್ರದಃ** ಎಂದು ಪರಿಚಾಯಕವನ್ನು ಹೇಳಿದ್ದು. **ನೃಪ** ಚಿತ್ರಕೇತುವೇ **ಅಹಂ** ನಾನು **ಪುತ್ರಕಾಮಸ್ಯ** ಮಗನನ್ನು ಅಪೇಕ್ಷಿಸಿದ **ತೇ** ನಿನಗೆ **ಪುತ್ರದಃ** ಸುಖ-ದುಃಖ ಪ್ರದನಾದ ಮಗನನ್ನು ಇತ್ತ **ಅಂಗಿರಾಃ ಅಸ್ಮಿ** ಅಂಗಿರಸ ಋಷಿಯು ಆಗಿದ್ದೇನೆ. **ಏಷಃ** ಈತನು **ಸಾಕ್ಷಾತ್** ಸಾಕ್ಷಾತ್ತಾಗಿ **ಬ್ರಹ್ಮಸುತಃ** ಬ್ರಹ್ಮದೇವರ ಮಗನಾದ **ಋಷಿಃ** ತ್ರಿಕಾಲಜ್ಞಾನಿಯಾದ **ಭಗವಾನ್** ಪೂಜ್ಯನಾದ **ನಾರದಃ** ನಾರದನು.

**ಬ್ರಹ್ಮಸುತಃ** ಎಂಬುದು ಇಬ್ಬರಿಗೂ ಅನ್ವಯಿಸುವದೆಂದು ನಾವು ತಿಳಿಯಬೇಕು. ತಾನೇ ತನ್ನನ್ನು ಬ್ರಹ್ಮಪುತ್ರನೆಂದು ಹೇಳಲು ಸಂಕೋಚದಿಂದ ದ್ವಿತೀಯಾರ್ಧದಲ್ಲಿ ಅಲ್ಲಿಯೂ ನಾರದನಿಗೆ ಮಾತ್ರ ವಿಶೇಷಣವಾಗಿ ಹೇಳಿರುವರು. ॥೨೦॥

**ಇತ್ಥಂ ತ್ವಾಂ ಪುತ್ರಶೋಕೇನ ಮಗ್ನಂ ತಮಸಿ ದುಸ್ತರೇ ।**
**ಅತದರ್ಹಮನುಸ್ಮೃತ್ಯ ಮಹಾಪುರುಷಗೋಚರಮ್ ॥೨೧॥**

**ಅನುಗ್ರಹಾದ್ಭಗವತಃ ಪ್ರಾಪ್ತಾವಾವಾಮಿಹ ಪ್ರಭೋ ।**
**ಬ್ರಹ್ಮಣ್ಯೋ ಭಗವದ್ಭಕ್ತೋ ನಾವಸೀದತುಮರ್ಹತಿ ॥೨೨॥**

**ಪ್ರಭೋ** ರಾಜನೇ **ಪುತ್ರಶೋಕೇನ** ಮಗನ ಮರಣದಿಂದುಂಟಾದ ದುಃಖದಿಂದ **ಇತ್ಥಂ** ಹೀಗೆ **ದುಸ್ತರೇ** ನಾವಿಲ್ಲದೇ ದಾಟಲಾಗದ **ತಮಸಿ** ಅಜ್ಞಾನವೆಂಬ ಕತ್ತಲೆಯಲ್ಲಿ **ಮಗ್ನಂ** ಮುಳುಗಿದ **ಮಹಾಪುರುಷಗೋಚರಂ** ಭಗವತ್ಪ್ರಿಯನಾದ, ನಿನ್ನಿಂದ ಕೀರ್ತಿತರಾದವರಿಂದ ಭಿನ್ನರಾದ, ಸತ್ಪುರುಷರ ವಿಷಯದಲ್ಲಿ ಬೋಧಿಸಲು **ಭಗವತಃ** ಶ್ರೀಹರಿಯ ಅನುಗ್ರಹದಿಂದ ಉದಿತವಾದುದರಿಂದ ನೀನಿರುವಾಗ (ನನ್ನ ಮೇಲಿನ ಅನುಗ್ರಹದಿಂದಲೇ ಮನೆಗೆ ಬಂದಿರುವರು ಎಂದು ತಿಳಿಯಬೇಡ. ಭಗವದ್ಭಕ್ತರೆಲ್ಲರೂ ನಮ್ಮ ಉಪದೇಶಕ್ಕೆ ಪಾತ್ರರು ಎಂದು ತಿಳಿಸಲು ಬ್ರಹ್ಮಣ್ಯ ಮುಂತಾಗಿ ಸಾಮಾನ್ಯವಾಗಿ ಹೇಳುವರು.) **ಅತದರ್ಹಂ** ಅಜ್ಞಾನದಲ್ಲಿ ಮಗ್ನನಾಗಲು ಯೋಗ್ಯನಲ್ಲದ **ತ್ವಾಂ** ನಿನ್ನನ್ನು

**ಅನುಸ್ಮೃತ್ಯ** ಯೋಚಿಸಿ **ಭವತಃ** ನಿನಗೆ **ಅನುಗ್ರಹಾಯ** ಅನುಗ್ರಹ ಮಾಡಲು **ಇಹ** ಇಲ್ಲಿಗೆ **ಆವಾಂ** ನಾವಿಬ್ಬರೂ **ಪ್ರಾಪ್ತೌ** ಬಂದಿರುವೆವು. 'ನ ಮೇ ಭಕ್ತಃ ಪ್ರಣಶ್ಯತಿ' ಎಂದು ಭಗವಂತನು ಪ್ರತಿಜ್ಞೆ ಮಾಡಿರುವದರಿಂದ ಭಗವದ್ಭಕ್ತನಿಗೆ ನಾಶವಿಲ್ಲವೆಂಬ ಅಭಿಪ್ರಾಯದಿಂದ ಹೇಳುವರು. **ಬ್ರಹ್ಮಣ್ಯಃ** ಭಗವಂತನಲ್ಲಿ ಸಾಧುವಾದ ಬ್ರಹ್ಮಜ್ಞಾನಿಗಳಲ್ಲಿ ಭಕ್ತಿಯುಳ್ಳ **ಭಗವದ್ಭಕ್ತಃ** ಶ್ರೀಹರಿಯ ಭಕ್ತನು **ಅವಸೀದತುಂ ನ ಅರ್ಹತಿ** ಹಾಳಾಗಲು ಅರ್ಹನಲ್ಲ. ಪುತ್ರಶೋಕದಿಂದ ನೀನು ಹಾಳಾಗಬಾರದೆಂದು ನಮ್ಮ ಆಗಮನವೆಂದು ಭಾವ. ।।೨೦-೨೨।।

ಬ್ರಹ್ಮಣಿ ಅಃ ಎಂದು ಛೇದ ಮಾಡಿ ಬ್ರಹ್ಮಣ್ಯಃ ಎಂಬುದಕ್ಕೆ ಮತ್ತೊಂದು ರೀತಿಯಾಗಿಯೂ ಅರ್ಥ ಮಾಡಬಹುದು. **ಬ್ರಹ್ಮಣಿ** ಪರಮಾತ್ಮನಲ್ಲಿ **ಅಃ ಇವ** ದುರ್ಜನ ಅಭಗವದ್ಭಕ್ತನಂತೆ **ಅವಸೀದತುಂ** ದುಃಖವನ್ನು ಅನುಭವಿಸಲು **ನಾರ್ಹತಿ** ಯೋಗ್ಯನಲ್ಲ. ।।೨೩।।

ಹಿಂದೆಯೇ ಮನೆಗೆ ಬಂದಿದ್ದೀರಿ. ತಾವು ಏಕೆ ಅನುಗ್ರಹ ಮಾಡಲಿಲ್ಲ ಎಂದರೆ ಅದು ಸರಿಯಾದ ಸಮಯವಲ್ಲವೆಂದು ಹಾಗೆ ತಿರುಗಿ ಹೋದೆವೆಂದು ಹೇಳುವರು-

**ತದೈವ ತೇ ಪರಂ ಜ್ಞಾನಂ ದದಾಮಿ ಗೃಹಮಾಗತಃ ।**
**ಜ್ಞಾತ್ವಾನ್ಯಾಭಿನಿವೇಶಂ ತೇ ಪುತ್ರಮೇವ ದದಾವಹಮ್ ।।೨೪।।**

**ತದಾ** ಹಿಂದೆ ನಾನು ಬಂದಾಗ **ತೇ** ಸ್ವರೂಪತಃ ಭಗವದ್ಭಕ್ತನಾದ ನಿನಗೆ **ಪರಂ ಜ್ಞಾನಂ** ಏವ ಸಂಸಾರತಾರಕವಾದ (ಮೋಕ್ಷಜನಕವಾದ) ಜ್ಞಾನವನ್ನೇ **ದದಾಮಿ ಇತಿ** ಕೊಡುತ್ತೇನೆಂದೇ **ಗೃಹಂ ಆಗತಃ** ಮನೆಗೆ ಬಂದ **ಅಹಂ** ನಾನು **ತೇ** ನಿನಗೆ **ಅನ್ಯಾಭಿನಿವೇಶಂ** ಪುತ್ರ ಮುಂತಾದ ಅಶಾಶ್ವತ ವಿಷಯದಲ್ಲಿರುವ ಆಸಕ್ತಿಯನ್ನು **ಜ್ಞಾತ್ವಾ** ತಿಳಿದು **ಪುತ್ರಂ** ಏವ ಮಗನನ್ನೇ **ದದಾಮೀತಿ ಅದದಾಂ** ಕೊಡಬೇಕೆಂದು ಕೊಟ್ಟೆನು. 'ಕ್ರಿಯಾಪ್ರಬಂಧೇ ಲಟ್' ಎಂದಿರುವದರಿಂದ ದದಾಮಿ ಎಂಬುದಕ್ಕೇ ಅದದಾಂ ಎಂದರ್ಥ. 'ಲಟ್ ಸ್ಮೇ' (ಸಿ.ಕೌ.೨೭೭೮) ಎಂದಿರುವದರಿಂದ ಸ್ಮ ಶಬ್ದ ಅಧ್ಯಾಹಾರದಿಂದಲೂ ಉಪಪನ್ನವಾಗುವದು. ।।೨೪।।

ಈಗ ವಿಷಯದಲ್ಲಿ ದೋಷದರ್ಶನದಿಂದ ವಿರಕ್ತನಾದ ನಿನಗೆ ಜ್ಞಾನಕ್ಕೆ ಅಧಿಕಾರ ಬಂದಿದೆ. ಉಪದೇಶಕ್ಕೆ ಸರಿಯಾದ ಕಾಲವೆಂದು ಹೇಳುತ್ತಾರೆ-

**ಅಧುನಾ ಪುತ್ರಿಣಾಂ ತಾಪೋ ಭವತೈವಾನುಭೂಯತೇ ।**
**ಏವಂ ದಾರಾ ಗೃಹಾ ರಾಯೋ ವಿವಿಧೈಶ್ವರ್ಯಸಂಪದಃ ॥೨೫॥**

**ಅಧುನಾ** ಈಗ **ಪುತ್ರಿಣಾಂ** ಮಕ್ಕಳನ್ನು ಹೊಂದಿದವರಿಗೆ ಆಗುವ **ತಾಪಃ** ದುಃಖವು **ಭವತಾ ಏವ** ನಿನ್ನಿಂದಲೇ **ಅನುಭೂಯತೇ** ಅನುಭವಿಸಲ್ಪಡುವದು **ಏವಂ** ಇದರಂತೆ ತಮ್ಮ ವಿಯೋಗದಿಂದ **ದಾರಾಃ** ಹೆಂಡತಿಯು **ಗೃಹಾಃ** ಮನೆಗಳು **ರಾಯಃ** ಹಣವು **ವಿವಿಧೈಶ್ವರ್ಯಸಂಪದಃ** ಅನೇಕ ರೀತಿಯ ಸಂಪತ್ತುಗಳು ತಾಪದಾಯಕಗಳೇ. ॥೨೫॥

'ಅಧುನಾ ಪುತ್ರಿಣಾಂ' ಎಂಬ ಈ ಶ್ಲೋಕದಿಂದ ಆರಂಭಿಸಿ 'ಮನೋಭವಾಃ' (೨೮) ಎಂಬಲ್ಲಿವರೆಗಿನ ಪದ್ಯಗಳನ್ನು ಪುತ್ರಾದಿಗಳಿಗೆ ಮನೋಭವತ್ವವು ಇಂಥದು (ಏತಾದೃಶ) ಎಂದು ಪ್ರಮಾಣದಿಂದ ತೋರಿಸುತ್ತ ವ್ಯಾಖ್ಯಾನಿಸುವರು.

ತಾತ್ಪರ್ಯ

**ಮನಸೋ ದ್ವೇಷರಾಗಾಭ್ಯಾಂ ಪುಣ್ಯಪಾಪಸಮುದ್ಭವಃ ।**
**ಪುತ್ರಾದಿಪುಣ್ಯಪಾಪಾಭ್ಯಾಂ ತಸ್ಮಾತ್ ಸರ್ವಂ ಮನೋಭವಮ್ ॥**
**ಇತಿ ನಾರದೀಯೇ ॥೨೫॥**

ಮನಸ್ಸಿನಿಂದುಂಟಾದ ರಾಗ-ದ್ವೇಷಗಳಿಂದ ಪುಣ್ಯ-ಪಾಪಗಳು ಹುಟ್ಟುವವು. ಪುಣ್ಯ-ಪಾಪಗಳಿಂದ ಪುತ್ರಾದಿಗಳ ದೇಹವು ಹುಟ್ಟುತ್ತದೆ. ಆದಕಾರಣ ಎಲ್ಲವೂ ಮನಸ್ಸಿನಿಂದ ಹುಟ್ಟಿದ್ದು ಎಂದು ನಾರದೀಯ ಪುರಾಣದಲ್ಲಿ ಹೇಳಿದೆ ಎಂದು ಭಾವ. ರಾಗ-ದ್ವೇಷಾಭ್ಯಾಂ ಎಂದು ಹೇಳದೇ ದ್ವೇಷವನ್ನು ಮೊದಲು ಹೇಳಿದ್ದು ದ್ವೇಷದಲ್ಲಿಯೇ ಪರ್ಯವಸಾನವಾಗುವ ಪುಣ್ಯಕ್ಕೆ ಅನಿಷ್ಟತ್ವವನ್ನು ತಿಳಿಸಲು ಎಂದು ತಿಳಿಯಬೇಕು.

**ಶಬ್ದಾದಯಶ್ಚ ವಿಷಯಾಶ್ಚಲಾ ರಾಜನ್ ವಿಭೂತಯಃ ।**
**ರಾಜ್ಯಂ ಮಹೀ ಬಲಂ ಕೋಶೋ ಭೃತ್ಯಾಮಾತ್ಯಸುಹೃಜ್ಜನಾಃ ॥೨೬॥**

**ಸರ್ವೇಽಪಿ ಶೂರಸೇನೇಮೇ ಶೋಕಮೋಹಭಯಾರ್ತಿದಾಃ ।**
**ಗಂಧರ್ವನಗರಪ್ರಖ್ಯಾಃ ಸ್ವಪ್ನಮಾಯಾಮನೋರಥಾಃ ॥೨೭॥**

**ದೃಶ್ಯಮಾನಾ ವಿನಾರ್ಥೇನ ನ ದೃಶ್ಯಂತೇ ಮನೋಭವಾಃ ।**
**ಕರ್ಮಾಭಿಧ್ಯಾಯತೋ ನಾನಾಕರ್ಮಾಣಿ ಮನಸೋಽಭವನ್ ॥೨೮॥**

**ಶಬ್ದಾದಯಃ ಚ ವಿಷಯಾಃ** ಶಬ್ದ-ಸ್ಪರ್ಶ-ರೂಪ-ರಸ-ಗಂಧಗಳೆಂಬ ವಿಷಯಗಳು **ವಿಭೂತಯಃ** ಬಗೆ ಬಗೆಯ ಸಿದ್ಧಿಗಳು **ಚಲಾಃ** ಅನಿತ್ಯವಾದವುಗಳು. **ರಾಜನ್ ಶೂರಸೇನ** ಚಿತ್ರಕೇತುವೇ **ಗಂಧರ್ವನಗರಪ್ರಖ್ಯಾಃ** ಗಂಧರ್ವನಗರದಂತೆ ಯಾವಾಗಲೋ ಬಂದು ಹೋಗುವ (ನಶ್ವರಗಳಾದ) (ಮೋಡಗಳ ಸಮೂಹದಲ್ಲಿ ಗಂಧರ್ವರ ನಗರದಂತೆ ಕಾಣುತ್ತದೆ ಮತ್ತೆ ಕಾಣುವದಿಲ್ಲ ಕಾರಣ ಅದರಂತೆ ಶೋಭೆ ಉಳ್ಳ) **ಇಮೇ** ಪ್ರತ್ಯಕ್ಷಸಿದ್ಧಗಳಾದ **ರಾಜ್ಯಂ** ರಾಜ್ಯವು **ಮಹೀ** ಭೂಮಿಯು **ಬಲಂ** ಬಲವು **ಕೋಶಃ** ಧನವನ್ನು ಇಡುವ ಸ್ಥಳ **ಭೃತ್ಯಾಃ** ದಾಸರು **ಅಮಾತ್ಯಾಃ** ಮಂತ್ರಿಗಳು **ಸುಹೃಜ್ಜನಾಃ** ಬಾಂಧವರು **ಸರ್ವೇಽಪಿ** ಎಲ್ಲರೂ ಜೀವನಿಗೆ **ಶೋಕಮೋಹ-ಭಯಾರ್ತಿದಾಃ** ದುಃಖ-ಮೋಹ-ಭಯ- ಮನೋವ್ಯಥೆಯನ್ನು ಕೊಡುವವು. **ಯತಃ** ಯಾವ ಕಾರಣ **ಕರ್ಮ** ತನಗಿಷ್ಟವಾದ ಕರ್ಮವನ್ನು **ಅಭಿಧ್ಯಾಯತಃ ಚ** ಯಾವಗಾಲೂ ಯೋಚಿಸುವವನಿಗೆ **ಮನಸಃ ಚ** ರಾಗ-ದ್ವೇಷಗಳಿಂದ ಕ್ಷೋಭೆಗೊಂಡ ಮನಸ್ಸಿನಿಂದ **ನಾನಾಕರ್ಮಾಣಿ** ನರಕ- ಮನುಷ್ಯಲೋಕ-ಸ್ವರ್ಗ-ಮುಕ್ತಿ ಮುಂತಾದವುಗಳಿಗೆ ಕಾರಣಗಳಾದ ಪಾಪ-ಪುಣ್ಯಾತ್ಮಕವಾದ ಅನೇಕ ಕರ್ಮಗಳು **ಅಭವನ್** ಆಗುವವೋ **ತತಃ ಚ** ಆದ್ದರಿಂದ **ಮನೋಭವಾಃ** ಮನಸ್ಸಿನ ನಿಮಿತ್ತದಿಂದ ಬಂದ ಕರ್ಮಗಳ ಫಲಗಳಾದ್ದರಿಂದ ಮನಸ್ಸಿನಿಂದ ಹುಟ್ಟಿದವುಗಳಾದ ಈ ಹೆಂಡತಿ ಮಕ್ಕಳು ಮುಂತಾದವು **ಸ್ವಪ್ನಮಾಯಾಮನೋರಥಾಃ** ಇವ ಸ್ವಪ್ನದಲ್ಲಿ ಕಾಣುವ ಜಾಗ್ರತ್ವ ಇಂದ್ರಜಾಲ ಮನೋಭಿಲಾಷೆಗಳಂತೆ **ದೃಶ್ಯಮಾನಾಃ** ಕೇವಲ ಕಾಣುವವುಗಳಾಗಿ **ಅರ್ಥೇನ ವಿನಾ** ಪುರುಷಾರ್ಥವೆಂಬ ಪ್ರಯೋಜನವಿಲ್ಲದೆಯೇ **ದೃಶ್ಯಂತೇ** ಕಂಡುಬರುವವು ಎಂಬ ನಿಯಮವು **ನ** ಇರುವದಿಲ್ಲ. ಏಕೆಂದರೆ ಯೋಗ್ಯತಾನುಸಾರವಾಗಿ ಕೆಲವು ವೇಳೆ ಪುರುಷಾರ್ಥಕ್ಕೆ ಕಾರಣವಾಗುವವು. ಕೆಲವು ವೇಳೆ ಆಗುವದಿಲ್ಲವೆಂಬ ನಿಯಮವೇ ಇರುವದು. ಅಥವಾ **ಅರ್ಥೇನ ವಿನಾ** ಪಾರಮಾರ್ಥಿಕ ಸ್ವರೂಪವಿಲ್ಲದವುಗಳೆಂದು (ಮಿಥ್ಯಾ ಎಂದು) **ನ ದೃಶ್ಯಂತೇ** ಕಂಡು ಬರುವದಿಲ್ಲ. ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸತ್ಯವೇ ಆಗಿರುವವೆಂದರ್ಥ. (ವಿಜಯಧ್ವಜ, ಚೆಟ್ಟಿ)

**ಶ್ರೀ ಸತ್ಯಧರ್ಮರ ಪ್ರಕಾರ**

**ಸ್ವಪ್ನಮಾಯಾಮನೋರಥಾಃ ಸ್ವಪ್ನಃ** ಸ್ವಪ್ನದಲ್ಲಿ ಕಾಣುವ ಪದಾರ್ಥಗಳು **ಮಾಯಯಾ** ಐಶ್ವರೇಚ್ಛೆಯಿಂದ **ಮನಸಾ** ತನ್ನ ಮನಸ್ಸಿನಿಂದ **ರಥಾಃ** ಬಹುವಚನಂ

ಆದ್ಯರ್ಥೇ ರಥಮಾರ್ಗಗಳು ಮುಂತಾದವುಗಳೆಂದರ್ಥ. ಇವೆಲ್ಲವೂ **ಸ್ವಪ್ನಃ** ಎಂದರೆ ಹರಿಯು ಅವನೇ ಕರ್ತೃವು ಅವನ ಇಚ್ಛೆ ಕರಣವು ಮನಸ್ಸಿನಿಂದ ರಥಾದಿಗಳು ಉಂಟಾಗುವವು ಅಂದರೆ ಶ್ರೀಹರಿಯು ತನ್ನ ಇಚ್ಛೆಯಿಂದ ಜೀವನ ಮನಸ್ಸಿನಲ್ಲಿಯ ಸಂಸ್ಕಾರದಿಂದ ರಥಾದಿಗಳನ್ನು ಕನಸಿನಲ್ಲಿ ಸೃಷ್ಟಿಸುವನು ಎಂದರ್ಥ. ಅಥವಾ ಮನೋರಥಾಃ ಎಂದರೆ ಮನೋರಥಸದೃಶವೆಂದರ್ಥ.

ಸ್ವಪ್ನೋ ಭೂತ್ವಾ ಸ್ವಾಪಕೋ ಭೂತ್ವಾ । ಸ್ವಾಪಂ ನಯತೀತಿ ಸ್ವಪ್ನಃ ಎಂಬ ವ್ಯುತ್ಪತ್ತಿಯನ್ನು ಬೃಹದ್ಭಾಷ್ಯವು ಹೇಳುತ್ತದೆ. ಶಬ್ದಾದಿವಿಷಯಗಳು **ಚಲಾಃ** ಅಸ್ಥಿರವಾಗಿವೆ. ರಾಜನು ಇರುವಾಗ ಕಾಲಬಲದಿಂದ ರಾಜ್ಯ-ಮಹೀ-ಬಲ-ಸೇನಾ- ಕೋಶ-ದಾಸ- ಮಂತ್ರಿ-ಬಾಂಧವರು **ಸರ್ವೇ** ಎಲ್ಲರೂ **ವಿಭೂತಯಃ ವಿಭೋಃ** ಪ್ರಭುವಿನ **ಊತಯಃ** ಅಭಿಪ್ರೇತಾರ್ಥಗಳು. ಆದ್ದರಿಂದ ಶೋಕ-ಮೋಹ-ಭಯ-ಆರ್ತಿ ಕೊಡುವವು. (ತೇನ ಏತಾದೃಶಾಃ) **ಗಂಧರ್ವನಗರಪ್ರಖ್ಯಾಃ** ಹೇಗೆ ಮೇಘಮಂಡಲದಲ್ಲಿ ಗಂಧರ್ವನಗರಗಳು **ದೃಶ್ಯಂತೇ** ಕಾಣುವವು **ನ ದೃಶ್ಯಂತೇ** ಮತ್ತೆ ಕಾಣುವದಿಲ್ಲ. ಅದರಂತೆ **ಪ್ರಖ್ಯಾ** ಶೋಭೆಯುಳ್ಳವುಗಳು. ಅಥವಾ 'ಗಾಂಧಾರಯನ್ ವರ್ತತೇ ಯತ್ ಗಂಧರ್ವಸ್ತೇನ ಕೇಶವಃ' ಎಂದು ಋಗ್ಭಾಷ್ಯದಲ್ಲಿ ಟೀಕಾದಲ್ಲಿ ಗೋಪದೋಪಪದಾಭ್ಯಾಂ ಧೃಞ ಅವಸ್ಥಾನೇ, ವೃತು ವರ್ತನೇ ಎಂಬ ಧಾತುಗಳ ಮೇಲೆ ಡ ಪ್ರತ್ಯಯ, ಉಪಪದಕ್ಕೆ ಗಂಭಾವ. ಗಾಂ ವಾಚಂ ಎಂದು ಹೇಳಿರುವದರಿಂದ ಅಂತೂ ಗಂಧರ್ವ ಎಂದರೆ ಭಗವಂತ ಅವನಿಂದಲೇ ನಗರ ಅಮೃತ ತತ್ಕಾಲದಲ್ಲಿ ಅಮೃತದಂತೆ ಕಾಣುವ (ತತ್ಪ್ರಖ್ಯಾಃ) **ವಿಷಯಾಃ** ತ್ರೈಗುಣ್ಯವೆಂಬ ವಿಷವನ್ನು ಹೊಂದಿಸುವ ವಿಷಯಗಳು 'ತ್ರೈಗುಣ್ಯವಿಷಹಾರಿಣಃ' ಎಂದು ಗೀತಾತಾತ್ಪರ್ಯದ ವಚನವಿದೆ. ಇವನ ಕರ್ಮಾನುಸಾರ ವಿಷದಂತೆ ವಿಷಮವಾದ ವಿಷಯಗಳಲ್ಲಿ ಅಮೃತವೆಂಬ ಬುದ್ಧಿಯನ್ನು ಕೊಡುವವನು ಎಂದರ್ಥ.

ಹಿಂದೆ ಮಾಡಿದ ಅರ್ಥದಲ್ಲಿ ಶೂನ್ಯಪ್ರಾಯತೆ ತೋರುವುದು. ಅದನ್ನು ಬೇರೆ ದೃಷ್ಟಾಂತ ಕೊಟ್ಟು ಕಾಣದಂತೆ ಮಾಡುವನು 'ಸ್ವಪ್ನಮಾಯಾಮನೋರಥಾಃ' ಎಂದು. **ಸ್ವಪ್ನಃ** ಕನಸಿನಲ್ಲಿ ಕಾಣುವ ಪದಾರ್ಥಗಳು **ಮಾಯಯಾ** ಭಗವಂತನ ಇಚ್ಛೆಯಿಂದ **ಮನೋರಥಾಃ** ಮನೋಗತಾಃ ಪೂರ್ವಾನುಭೂತಸಂಸ್ಕಾರದ್ವಾರಾ ಅರ್ಥೇನ ತತ್‌ಕ್ಷಣದಲ್ಲಿ ನೋಡುವದೆಂಬ ಪ್ರಯೋಜನದ ಹೊರತು ಬೇರೆ ಪ್ರಯೋಜನವಿಲ್ಲದೆ ಕಾಣುವವು. ಪುನಃ ಜಾಗ್ರದವಸ್ಥೆಯಲ್ಲಿ **ನ ದೃಶ್ಯಂತೇ** ಕಾಣಲಾರವು. ಆದ್ದರಿಂದ




ಮನೋಭವಾಃ ವಾಸನಾಮಯವಾದವುಗಳು. ಆದ್ದರಿಂದಲೇ **ಚಲಾಃ** ಅಸ್ಥಿರವಾದವು. ಮಿಥ್ಯಾ ಅಲ್ಲ 'ನ ತತ್ರ ರಥಾ ನ ರಥಯೋಗಾ ನ ಪಂಥಾನೋ ಭವಂತ್ಯಥ ರಥಾನ್ ರಥಯೋಗಾನ್ ಪಥಃ ಸೃಜತೇ' ಎಂದಿದೆ. **ಕರ್ಮ** ಕರ್ಮಫಲವನ್ನು **ಅಭಿಧ್ಯಾಯತಃ** ಚಿಂತಿಸುವವನಿಗೆ ಆ ಕಾಲದಲ್ಲಿ **ಕರ್ಮಾಣಿ** ಶುಭಾಶುಭಫಲಕೊಡುವ ಕರ್ಮಗಳು **ಮನಸಃ ಸಕಾಶಾತ್** ಮನಸ್ಸಿನಿಂದ ಹುಟ್ಟುವವು. ಆದ್ದರಿಂದ **ಇಮೇ ದಾರಾದಯಃ** ಹೆಂಡತಿ ಮುಂತಾದವುಗಳೆಲ್ಲ ಮಾನಸವಾಗಿವೆ, **ಚಲಾಃ** ಅಸ್ಥಿರವಾಗಿವೆ ಆದ್ದರಿಂದ ಅವುಗಳಲ್ಲಿ ಅತ್ಯಂತ ಅಭಿಲಾಷೆಯನ್ನು ಮಾಡಕೂಡದು ಎಂದು ಭಾವ. ।।೨೬-೨೮।।

ದೇಹ ಮೊದಲಾದವು ಅರ್ಥಕ್ರಿಯಾಕಾರಿಗಳಾದ್ದರಿಂದ ಅವುಗಳನ್ನು ಮಿಥ್ಯೆಯೆಂದು ಹೇಳಲಾಗುವದಿಲ್ಲ. ಆದ್ದರಿಂದ ಗಂಧರ್ವನಗರ ದೃಷ್ಟಾಂತವು ಅನಿತ್ಯವೆಂಬ ವಿಷಯದಲ್ಲಿಯೇ ಹೊರತು ಸುಳ್ಳು ಎಂಬುದಕ್ಕೆ ಅಲ್ಲವೆಂಬ ಅಭಿಪ್ರಾಯದಿಂದ ಹೇಳುತ್ತಾರೆ-

**ಅಯಂ ಹಿ ದೇಹಿನೋ ದೇಹೋ ದ್ರವ್ಯಜ್ಞಾನಕ್ರಿಯಾತ್ಮಕಃ ।**
**ದೇಹಿನೋ ವಿವಿಧಕ್ಲೇಶಸಂತಾಪಕೃದುದಾಹೃತಃ ।।೨೯।।**

**ಹಿ** ಯಾವ ಕಾರಣ **ಅಯಂ** ಸ್ಥೂಲವಾಗಿ ಕಣ್ಣಿಗೆ ಕಾಣುವ ಈ **ದೇಹಿನಃ ದೇಹೀ** ಅಪೇಕ್ಷಿತಂ ಇತಿ ವಾ ಉಪಚಿತಂ ಇತಿ ವಾ ನಮಗೆ ಬೇಕೆಂದು ಅಪೇಕ್ಷಿಸಿದ್ದರಿಂದ ಅಥವಾ ಉಪಚಯ ಹೊಂದಿದ್ದರಿಂದ **ದೇಹಿನಃ** ದಿಹ ಉಪಚಯೇ ಎಂದು ಧಾತು.

**ದೇಹಿನಃ** ಜೀವನ **ದೇಹಃ** ದೇಹವು **ದ್ರವ್ಯಜ್ಞಾನಕ್ರಿಯಾತ್ಮಕಃ** ಪಂಚಭೂತಾತ್ಮಕವಾದ್ದರಿಂದ ದ್ರವ್ಯಾತ್ಮಕವು, ಜ್ಞಾನೇಂದ್ರಿಯಾತ್ಮಕವಾದದ್ದರಿಂದ ಜ್ಞಾನಾತ್ಮಕವು ಚಕ್ಷುಃ-ಶ್ರೋತ್ರ-ಘ್ರಾಣ-ರಸನ-ತ್ವಕ್-ಮನಸ್ಸು ಇವು ಜ್ಞಾನೇಂದ್ರಿಯಗಳು. ವಾಕ್-ಪಾಣಿ-ಪಾದ-ಪಾಯು-ಉಪಸ್ಥ ಎಂಬ ಕರ್ಮೇಂದ್ರಿಯಾತ್ಮಕವಾದ್ದರಿಂದ ಕ್ರಿಯಾತ್ಮಕವೂ ಆದ್ದರಿಂದ **ದೇಹಿನಃ** ನನ್ನ ದೇಹವೆಂದು ಅಭಿಮಾನವುಳ್ಳ ಜೀವನಿಗೆ **ವಿವಿಧಕ್ಲೇಶಸಂತಾಪಕೃತ್** ಅನೇಕ ಬಗೆಯ ಕಷ್ಟ ಅವುಗಳಿಂದ ಅಂತಸ್ತಾಪಕರವೆಂದು **ಉದಾಹೃತಃ** ಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ. **ದೇಹಿನಃ** ಎಂದು ಮತ್ತೊಂದು ಸಲ ಹೇಳಿದ್ದು ಅಭಿಮಾನದಿಂದ ಚೇತನನಿಗೆ ಸುಖಾದಿಗಳ ಅನುಭವವೇ ಹೊರತು ಕೇವಲ ದೇಹದಿಂದಲ್ಲವೆಂದು ತಿಳಿಸಲು. ಅಯಂ ಎಂಬುದರಿಂದ ಸ್ಥೂಲ ದೇಹ ಸಿದ್ಧವಾಗಿದ್ದರೂ ಸ್ಪಷ್ಟತೆಗಾಗಿ ದ್ರವ್ಯಾತ್ಮಕವೆಂದೂ, (ಗಂಡಶೈಲ) ಬೆಟ್ಟದಿಂದ ಉರುಳಿ

ಹೊರಕ್ಕೆ ಬಿದ್ದಿರುವ ದೊಡ್ಡ ಬಂಡೆ ಸ್ಥೂಲವಾಗಿದ್ದರೂ ಸುಖ-ದುಃಖ ಭೋಗಾಶ್ರಯವಾಗಿಲ್ಲ ಆದ್ದರಿಂದ ಜ್ಞಾನ-ಕ್ರಿಯಾತ್ಮಕವೆಂದು ಹೇಳಿರುವರು. ಬರೀ ಸ್ಥೂಲವಲ್ಲ ಜ್ಞಾನೇಂದ್ರಿಯ-ಕರ್ಮೇಂದ್ರಿಯ-ಮನಸ್ಸು ಇವೆಲ್ಲ ಇರುವದರಿಂದ ಭೋಗಾಶ್ರಯತ್ವವು ಕೂಡುವದು ಎಂದು ಅಭಿಪ್ರಾಯ.

ಇಂದ್ರಿಯಕಾರ್ಯಗಳಾದ ಜ್ಞಾನಕ್ರಿಯೆಗಳನ್ನು ಹೇಳುವ ಪದಗಳಿಂದ ಇಂದ್ರಿಯಗಳನ್ನು ಹೇಳಿರುವರು. ಉದಾಹೃತ ಎಂಬುದರಿಂದ 'ಕ್ಲೇಶದ ಆಸ ದೇಹಃ' ಎಂಬ ವಾಕ್ಯದಲ್ಲಿ ಸಿದ್ಧವೆಂದು ತಿಳಿಸಿರುವರು. ಇದರಿಂದ ದೇಹದಂತೆ ಅಸದುಪಾಸನೆಯು ಕ್ಲೇಶಕಾರಕವೆಂಬ ವಿಷಯವನ್ನು ಸೂಚಿಸಿರುವರೆಂದು ತಿಳಿಯಬೇಕು. 'ಅಯಂ ಹಿ' ಎಂಬ ಶ್ಲೋಕದಲ್ಲಿ ದೇಹಕ್ಕೆ ದ್ರವ್ಯಾತ್ಮಕತ್ವ ಹೇಳಿದೆ. ಹಾಗೆಂದರೇನು ಎಂದು ತಿಳಿಸಲು ಪ್ರಮಾಣ ಹೇಳುವರು-

ತಾತ್ಪರ್ಯ

**ದ್ರವ್ಯಾತ್ಮಕಃ ಸ್ಥೂಲದೇಹಃ ಕ್ರಿಯಾ ಕರ್ಮೇಂದ್ರಿಯಾಣಿ ಚ ।**
**ಜ್ಞಾನೇಂದ್ರಿಯಾಣಿ ಚ ಮನೋ ಜ್ಞಾನಾತ್ಮಕಮುದಾಹೃತಮ್ ॥**
**-ಇತಿ ಬ್ರಹ್ಮವೈವರ್ತೇ ॥**
**ಕಾರ್ಯಕಾರಣಯೋರೇಕಶಬ್ದವ್ಯವಹೃತಿರ್ಭವೇತ್ ॥ಇತಿ ಶಬ್ದನಿರ್ಣಯೇ ॥೨೬॥**

ಪಂಚಭೂತಗಳೇ ಉಪಾದಾನ ಕಾರಣವಾಗಿ ಉಳ್ಳ ಸ್ಥೂಲದೇಹವು ದ್ರವ್ಯಾತ್ಮಕವೆನಿಸುತ್ತದೆ. ಕ್ರಿಯಾ ಎಂದರೆ ಕರ್ಮೇಂದ್ರಿಯಗಳು, ಜ್ಞಾನೇಂದ್ರಿಯಗಳು, ಮನಸ್ಸು ಜ್ಞಾನಶಬ್ದದಿಂದ ಹೇಳಲ್ಪಡುವವು. ಜ್ಞಾನೇಂದ್ರಿಯಕಾರ್ಯವಾದ ಜ್ಞಾನ ವಾಚಕವಾದ ಜ್ಞಾನಶಬ್ದದಿಂದ ಜ್ಞಾನಕಾರಣವಾದ ಇಂದ್ರಿಯಗಳು ಕರೆಯಲ್ಪಡುವವು. ಕಾರ್ಯವಾಚಕ ಪದದಿಂದ ಕಾರಣಗಳನ್ನು, ಕಾರಣವಾಚಕಪದಗಳಿಂದ ಕಾರ್ಯಗಳನ್ನು ಕರೆಯಬಹುದು ಎಂದು ಶಬ್ದನಿರ್ಣಯದಲ್ಲಿದೆ.

ದೇಹವು ಜ್ಞಾನಾತ್ಮಕಕ್ರಿಯಾತ್ಮಕವಲ್ಲದಿದ್ದರೂ ದ್ರವ್ಯಾತ್ಮಕತ್ವವಂತೂ ಇದೆ. ಕಾರ್ಯ-ಕಾರಣಗಳನ್ನು ಒಂದೇ ಶಬ್ದದಿಂದ ಕರೆಯುವದರಿಂದ ಜ್ಞಾನೇಂದ್ರಿಯ-ಕರ್ಮೇಂದ್ರಿಯಾತ್ಮಕತ್ವವೂ ಇದೆ ಎಂಬ ಅಭಿಪ್ರಾಯದಿಂದ ದ್ರವ್ಯಜ್ಞಾನಕ್ರಿಯಾತ್ಮಕವೆಂದಿದ್ದಾರೆ ಎಂದು ಭಾವ. ॥೨೯॥

**ತಸ್ಮಾತ್ ಸ್ವಸ್ಥೇನ ಮನಸಾ ವಿಮೃಶ್ಯ ಗತಿಮಾತ್ಮನಃ ।**
**ದ್ವೈತೇ ಧ್ರುವಾರ್ಥವಿಸ್ರಂಭಂ ತ್ಯಜೋಪಶಮಮಾವಿಶ ॥೩೦॥**

**ತಸ್ಮಾತ್** ದೇಹ ಮೊದಲಾದವು ಕ್ಲೇಶಕರವಾದ್ದರಿಂದ **ಸ್ವಸ್ಥೇನ** ವ್ಯಗ್ರವಾಗದ **ಮನಸಾ** ಮನಸ್ಸಿನಿಂದ **ಆತ್ಮನಃ** ಶ್ರೀಹರಿಯ **ಗತಿಂ** ೧. ಸ್ವಾತಂತ್ರ್ಯವನ್ನು ೨. ಜೀವನ ಅಸ್ವಾತಂತ್ರ್ಯವನ್ನು **ವಿಮೃಶ್ಯ** ವಿಚಾರ ಮಾಡಿ ತಿಳಿದು **ದ್ವೈತೇ** ಅನ್ಯಾಪೇಕ್ಷನಾದ್ದರಿಂದ ದ್ವಯನೆಂದು ಕರೆಸುವ ಜೀವನಿಂದ ಪ್ರಾಪ್ತವಾದ ದೇಹದಲ್ಲಿ **ಧ್ರುವಾರ್ಥವಿಸ್ರಂಭಂ** ಶಾಶ್ವತವಾದುದೆಂಬ ವಿಶ್ವಾಸವನ್ನು **ತ್ಯಜ** ಬಿಡು. ವೈರಾಗ್ಯವನ್ನು ಪಡೆ ಇಷ್ಟೇ ಸಾಲದು **ಉಪಶಮಂ** ೧. ನಾನು ಸ್ವತಂತ್ರ ಕರ್ತೃವೆಂಬ ಅಭಿಮಾನದ ಅಭಾವವನ್ನು ೨. ಶ್ರೀಹರಿಯಲ್ಲಿ ನಿರಂತರ ಮನೋನಿಷ್ಠೆ ಎಂಬ ಉಪಶಾಂತಿಯನ್ನು **ಆವಿಶ** ಆಶ್ರಯಿಸು.

ಮೇಲಿನ ಶ್ಲೋಕದಲ್ಲಿ ದ್ವೈತೇ ಜೀವ-ದೇವ ಭೇದದಲ್ಲಿ ವಿಸ್ರಂಭಂ ತ್ಯಜ ವಿಶ್ವಾಸ ಬಿಡು ಎಂದು ವಿಪರೀತ ಅರ್ಥ ಆಗುವದನ್ನು ಪ್ರಮಾಣದಿಂದ ತಪ್ಪಿಸುವರು-

ತಾತ್ಪರ್ಯ

**ಅನನ್ಯಾಪೇಕ್ಷಿ(ಕ್ಷ) ತಸ್ತ್ವೇಕೋ ಹರಿರನ್ಯದ್ದ್ವಯಂ ಸ್ಮೃತಮ್ ।**
**ಅನ್ಯಾಪೇಕ್ಷತ್ವತಸ್ತೇನ ಪ್ರಾಪ್ತತ್ವಾತ್ ದ್ವೈತಮುಚ್ಯತೇ' ಇತಿ ಚ ॥೩೦॥**

ಶ್ರೀಹರಿಗೆ ಇತರ ವಸ್ತುಗಳ ಅಪೇಕ್ಷೆಯೇ ಇಲ್ಲದ್ದರಿಂದ ಶ್ರೀಹರಿಯು ಏಕಃ ಎನಿಸುತ್ತಾನೆ. ಶ್ರೀಹರಿಯಿಂದ ಭಿನ್ನವಾದ ಜೀವನೆಂಬ ವಸ್ತುವು ದ್ವಯವೆನಿಸುತ್ತದೆ. ಜೀವನು ತನ್ನಿಂದ ಇತರರಾದ ಈಶ್ವರ-ಅದೃಷ್ಟಾದಿಗಳನ್ನು ಅಪೇಕ್ಷಿಸಿಯೇ ದೇಹಾದಿಗಳನ್ನು ಹೊಂದಿರುವದರಿಂದ ದೇಹಾದಿಗಳೂ ದ್ವೈತವೆನಿಸುತ್ತವೆ ಎಂದು ಭಾವ. ಅನ್ಯನ್ಯಾಪೇಕ್ಷಿತಃ ಅನ್ಯೇ ಅಪೇಕ್ಷಿತಾಃ ಯೇನ ಸಃ ನ ಭವತಿ ಇತ್ಯನನ್ಯಾಪೇಕ್ಷಿತಃ ಎಂದರ್ಥ. ಅನನ್ಯಾಪೇಕ್ಷಿತಃ ಎಂಬಲ್ಲಿ ಏಕವಚನವು ಜಾತ್ಯಾದಿ ಪರವೆಂದು ತಿಳಿದು ಈ ರೀತಿ ಅನನ್ಯಾಭಿಲಾಷಿಗಳು ಬಹಳ ಜನರಿದ್ದಾರೆ ಎಂದು ಯಾವನಾದರೂ ಅಂದಾನು ಎಂದು ಅವನ ಬಾಯಿ ಕಟ್ಟಲು **ಏಕಃ** ಎಂದಿದ್ದಾರೆ. ಆ ಒಬ್ಬನು ಶ್ರೀಕಾಂತನನ್ನು ಬಿಟ್ಟು ಬೇರೇ ಯಾರೂ ಅಲ್ಲ ಎಂದು ತಿಳಿಸಲು **ಹರಿಃ** ಎಂದಿದ್ದಾರೆ. ಅನ್ಯಾಪೇಕ್ಷತ್ವತಃ ಅನ್ಯತ್ ಭಗವಂತನಿಂದ ಭಿನ್ನವಾದುದು ದ್ವಯವೆಂದು ಹೇಳಲ್ಪಡುವದು. ದ್ವಯವೇ ಏಕದೇಶವಿಕೃತನ್ಯಾಯದಿಂದ ದ್ವೀ ಎನಿಸುತ್ತದೆ. ದ್ವಿನಾ ದ್ವಯೇನ ಇತಂ ದ್ವೀತಂ ತದೇವ ಸ್ವಾರ್ಥಿಕೇ ಅಣಿ ದ್ವೈತಂ ಉಚ್ಯತೇ । ಎಂದು ಶಬ್ದನಿರ್ಣಯದಲ್ಲಿ ಹೇಳಿದೆ.

ಹಿಂದೆ ಎಲ್ಲ ಪದಾರ್ಥಗಳು ಸಾಕ್ಷಾತ್ತಾಗಿಯಯೋ ಪರಂಪರಯಾನೋ ಮಾನಸಗಳೆಂದು ಹೇಳಿದೆ. ಆದ್ದರಿಂದ ಮನಸ್ಸಿನ ನಿಯಮನದಿಂದ ಈ ಸಂಸಾರದ ಶಮನ ಅನಾಯಾಸವಾಗಿ ಆಗುವದು. ಆದ್ದರಿಂದ ಇದನ್ನು ಮಾಡೆಂದು ತಸ್ಮಾತ್ ಎಂಬುದರಿಂದ ಹೇಳುವರು.

**ಸ್ವಷ್ಟೇನ** ವಿಷಯಗಳಲ್ಲಿ ಹೋಗದಿರುವ ಅಥವಾ ಭಗವಂತನಲ್ಲೇ ನೆಲೆಸಿರುವ ಮನಸ್ಸಿನಿಂದ **ದ್ವೈತೇ** ಅನ್ಯಾಪೇಕ್ಷವಾದ ಅಸ್ವತಂತ್ರವಾದ ದೇಹಾದಿಗಳಲ್ಲಿ ಪುತ್ರಾದಿಗಳಲ್ಲಿ **ಧ್ರುವಾರ್ಥವಿಸ್ರಂಭಂ** ಇವು ನಿತ್ಯವೆಂಬ ವಿಶ್ವಾಸವನ್ನು **ತ್ಯಜ** ಬಿಡು **ಉಪಶಮಂ** ದೇಹಗೇಹಾದಿಸ್ಪೃಹಾಭಾವವನ್ನು ಭಗವನ್ನಿಷ್ಠಾವನ್ನು **ಆವಿಶ** ಪ್ರವೇಶಿಸು. ಅವುಗಳನ್ನು ಬಿಟ್ಟರೆ ತಾನೇ ಆವೇಶ ಆಗುವದು ಎಂದು ತಿಳಿಸಲು **ಆವಿಶ** ಎಂದಿರುವರು. **ಧ್ರುವಾರ್ಥವಿಸ್ರಂಭಂ ಧ್ರುವವತ್** ಧ್ರುವರಾಜನಂತೆ **ಅರ್ಥೇ** ಭಗವಂತನಲ್ಲಿ **ವಿಸ್ರಂಭಂ ಆವಿಶ** ವಿಶ್ವಾಸ ಮಾಡು ಎಂದೂ ಅರ್ಥ ಮಾಡಿರುವರು. 'ಅದ್ಯ ವಾಽಬ್ದಶತಾಂತೇ ವಾ ಮೃತ್ಯುರ್ವೈ ಪ್ರಾಣಿನಾಂ ಧ್ರುವಃ' ಎಂದಿರುವದರಿಂದ **ಉಪಶಮಂ** ತಾತ್ಕಾಲಿಕವಾದ ಶಮವನ್ನು **ತ್ಯಜ** ಬಿಡು. ।।೩೦।।

ವಿಷಯೇಚ್ಛೆಯನ್ನು ತುಚ್ಛೀಕರಿಸಿದರೆ ಎಲ್ಲ ಸಂಪತ್ತು ದೊರೆಯುವದು ಎಂದು ಇತಿಹಾಸದಿಂದ ತಿಳಿಸುವರು-

**ಭೋಜೋ ನಾಮ ನೃಪಃ ಸ್ವಪ್ನೇ ಶತ್ರುಗ್ರಸ್ತಾನ್ನಭೋಜನಃ ।**
**ದುಃಖಂ ದುರ್ವಿಷಹಂ ಪ್ರಾಪ್ತಃ ಶೋಕಮೋಹಭಯಾರ್ತಿದಮ್ ।।೩೧।।**

**ಭೋಜೋ ನಾಮ ನೃಪಃ** ಭೋಜನೆಂಬ ರಾಜನು **ಸ್ವಪ್ನೇ** ಕನಸಿನಲ್ಲಿ **ಶತ್ರುಗ್ರಸ್ತಾನ್ನಭೋಜನಃ ಸನ್** ಶತ್ರುವು ತಿಂದು ಮಿಕ್ಕ ಅನ್ನವನ್ನೇ ತಿಂದು (ಎಂಜಲು ತಿಂದವನಾಗಿ) **ಶೋಕಮೋಹಭಯಾರ್ದಿತಃ** ಶೋಕ, ಮೋಹ, ಭಯ ಮತ್ತು ದುಃಖಗಳಿಂದ ಪೀಡಿತನಾಗಿ, **ದುರ್ವಿಷಹಂ** ಸಹಿಸಲಾಗದ, **ದುಃಖಂ** ದುಃಖವನ್ನು **ಪ್ರಾಪ** ಹೊಂದಿದನು. ।।೩೧।।

**ಕೇಚಿದ್ವಿಲುಲುಪುರ್ಭೋಗಾನಪರೇಽವಧಿಷುಃ ಶ್ರಿತಾನ್ ।**
**ಪೂರ್ವವೈರಗ್ರಹೈರ್ಜಾಯಾ ಅನ್ಯ ಆತ್ಮಶಿರೋಽಹರನ್ ।।೩೨।।**

**ಕೇಚಿತ್** ಕೆಲವರು **ಭೋಗಾನ್** ಭೋಗಸಾಧನವಾದ ಮನೆ ಉದ್ಯಾನಾದಿಗಳನ್ನು **ವಿಲುಲುಪುಃ** ನಾಶಪಡಿಸಿದರು. **ಅಪರೇ** ಮತ್ತೆ ಕೆಲವು ಶತ್ರುಗಳು **ಶ್ರಿತಾನ್** ರಾಜ

ಸಮೀಪವರ್ತಿಗಳನ್ನು **ಅವಧಿಷುಃ** ಹಿಂಸಿಸಿದರು. **ಅನ್ಯೇ** ಮತ್ತೆ ಕೆಲವರು **ಜಾಯಾಃ** ಹೆಂಡತಿಯರನ್ನು **ಆಹರನ್** ಅಪಹರಿಸಿದರು. **ಪೂರ್ವವೈರಗ್ರಹೈಃ** ಹಿಂದಿನ ವೈರದ ಸ್ಮರಣೆ ಉಳ್ಳ ಕೆಲವರು **ಆತ್ಮಶಿರಃ** ಭೋಜನ ತಲೆಯನ್ನು **ಅಹರನ್** ಕತ್ತರಿಸಿದರು. ||೩೨||

ಕನಸಿನಲ್ಲಿ ನೋಡಬೇಕಾದರೆ ಮೊದಲು ನೋಡಿರಬೇಕು ಇಲ್ಲ ಕೇಳಿರಬೇಕು ಅಂದರೆ ಮಾತ್ರ ವಸ್ತುವನ್ನು ಸ್ವಪ್ನದಲ್ಲಿ ನೋಡಬಹುದು. ತನ್ನ ತಲೆ ಕತ್ತರಿಸಿದ್ದನ್ನು ನೋಡಿಲ್ಲವಲ್ಲ ಹೇಗೆ ಎಂದರೆ 'ಉದ್ಯತಾಯುಧದೋರ್ದಂಡಾಃ ಪತಿತ್ವೈಃ ಸ್ವಶಿರೋಕ್ಷಿಭಿಃ । ಪಶ್ಯಂತಃ ಪಾತಯಂತಿ ಸ್ಮ ಕಬಂಧಾ ಅಪ್ಯರೀನ್ ಯುಧಿ' ಎಂದಿರುವದರಿಂದ ತಲೆ ಕಡಿದು ಬಿದ್ದದ್ದನ್ನು ಕೇಳಿರುವದರಿಂದ ಅದನ್ನು ನೋಡಲು ಸಾಧ್ಯವಾಯಿತು ಎಂದು ಭಾವ.

ಈ ಮಹಾಭಾರತ ಯುದ್ಧದಲ್ಲಿ ಮುಂಡಗಳು ಕೈಯಲ್ಲಿ ಆಯುಧಗಳನ್ನು ಹಿಡಿದು ಕೆಳಗೆ ಉರುಳಿದ ತಮ್ಮ ರುಂಡದಲ್ಲಿಯ ಕಣ್ಣುಗಳಿಂದ ನೋಡುತ್ತಾ ವೈರಿಗಳನ್ನು ಹೊಡೆದು ಕೆಡವುತ್ತಿದ್ದರು ಎಂದು ಹೇಳಿದೆ.

**ಇತ್ಥಂ ದುರಂತದುಃಖೌಘಾದುತ್ಥಿತಸ್ತದನುಸ್ಮರನ್ ।**
**ತಾವದ್ ಭೃಶಂ ಸುನಿರ್ವಿಣ್ಣೋ ನಿರ್ಜಗಾಮ ತತೋ ಗೃಹಾತ್ ||೩೩||**

**ಇತ್ಥಂ** ಈ ರೀತಿಯಾಗಿ **ದುರಂತದುಃಖೌಘಾತ್** ದುಃಖದಲ್ಲಿ ಕೊನೆಗೊಳ್ಳುವ ದುಃಖಗಳ ಸಮೂಹವುಳ್ಳ ಆ ಸ್ವಪ್ನದಿಂದ **ಉತ್ಥಿತಃ** ಎಚ್ಚೆತ್ತವನಾಗಿ **ತತ್** ಆ ಸ್ವಪ್ನದಲ್ಲಿ ಅನುಭವಿಸಿದ್ದನ್ನು **ಅನುಸ್ಮರನ್** ಮತ್ತೆ ಮತ್ತೆ ನೆನೆದು **ಭೃಶಂ** ಬಹಳವಾಗಿ **ಸುನಿರ್ವಿಣ್ಣಃ** ಅತ್ಯಂತ ವಿರಕ್ತನಾಗಿ **ತತಃ ಗೃಹಾತ್** ಆ ಮನೆಯಿಂದ **ತಾವತ್** ಆಗಲೇ ಹೊರಹೊರಟನು. ಸನ್ಯಾಸಿಯಾದನು ಎಂದು ಅಭಿಪ್ರಾಯ. ||೩೩||

**ದರ್ಶಯನ್ನಾತ್ಮನಾತ್ಮಾನಂ ನಿಸ್ಸಂಗಃ ಶಾಂತವಿಗ್ರಹಃ ।**
**ಪ್ರವಿಷ್ಟೋ ಬ್ರಹ್ಮ ನಿರ್ವಾಣಂ ಕುಲಾಯಂ ನಾವಿದಚ್ಚ ತಮ್ ||೩೪||**

**ಆತ್ಮಾನಂ** ತನ್ನ ಶರೀರವನ್ನು **ನಾತ್ಮನಾ** ಅಶರೀರವೆಂದು ನಿರಭಿಮಾನದಿಂದ **ದರ್ಶಯನ್** ಜನರಿಗೆ ತೋರಿಸುತ್ತ **ನಿಸ್ಸಂಗಃ** ದುಷ್ಟಸಂಗವನ್ನು ಬಿಟ್ಟವನಾಗಿ **ನಿರ್ವಾಣಂ** ಉದ್ದಿಶ್ಯ ಮೋಕ್ಷಕ್ಕಾಗಿ ಬ್ರಹ್ಮ **ಪ್ರವಿಷ್ಟಃ** ಧ್ಯಾನದಿಂದ ಶ್ರೀಹರಿಯಲ್ಲಿ ಪ್ರವೇಶಿಸಿದನು.

ಕೇವಲ ಜನರಿಗಷ್ಟೇ ತೋರಲಿಲ್ಲ. ತಾನು ಅಸಂಪ್ರಜ್ಞಾತ ಸಮಾಧಿಯನ್ನು ಹೊಂದಿ **ಕುಲಾಯಂ ತಂ** ಆ ದೇಹವನ್ನು **ನ ಅವಿದತ್** ತಿಳಿದುಕೊಳ್ಳಲಿಲ್ಲ.

**ಆತ್ಮಾನಂ ದರ್ಶಯನ್** ತನ್ನನ್ನು ಜಡನಂತೆ ಉನ್ಮತ್ತನಂತೆ ಜನರಿಗೆ ತೋರಿಸುತ್ತ **ಆತ್ಮನಾ** ಸ್ವೇಚ್ಛೆಯಿಂದ ಎಂದರ್ಥ ಮಾಡಿರುವರು. **ಆತ್ಮನಾ** ಮನಸ್ಸಿನಿಂದ **ಆತ್ಮನಾಂ** ಶ್ರೀಹರಿಯನ್ನು **ದರ್ಶಯನ್** ಆಲೋಚಿಸುತ್ತ **ನಿಸ್ಸಂಗಃ** ದುಷ್ಟಸಂಗವನ್ನು ಬಿಟ್ಟು **ಶಾಂತ ವಿಗ್ರಹಃ** ವೈರವನ್ನು ತೊರೆದು **ನಿರ್ವಾಣಂ** ಅಪ್ರಾಕೃತ ಶರೀರವುಳ್ಳ ಪ್ರಾಕೃತ ಶರೀರವಿಲ್ಲದ **ಬ್ರಹ್ಮ** ಗುಣಪೂರ್ಣನಾದ ನಾರಾಯಣನೆಂಬ ಪರಬ್ರಹ್ಮನನ್ನು **ಪ್ರವಿಷ್ಟಃ ಸನ್** ಪ್ರವೇಶಿಸಿದವನಾಗಿ **ತಂ** ತಾನಿರುವ **ಕುಲಾಯಂ** ದೇಹವನ್ನು **ಚ** ಕೂಡ **ನ ಅವಿದತ್** ತಿಳಿಯಲಿಲ್ಲ ಹೀಗೂ ಅರ್ಥ ಮಾಡಿರುವರು. ।।೩೪।।

ನಾನೂ ಈ ರೀತಿ ಅವಸ್ಥೆ ಹೊಂದಲು ಉಪಾಯವೇನೆಂದರೆ ಹೇಳುವರು- ಇಲ್ಲಿಯ ವರೆಗೆ ಅಂಗಿರಸರ ಮಾತನ್ನು ಕೇಳಿ ರಾಜನು ಉಪದೇಶ ಯೋಗ್ಯನೆಂದು ತಿಳಿದು ಕೃಪಾಪರವಶರಾದ ಯೋಗಿಗಳು ನಾರದರೆಂಬ ತಮ್ಮ ಹೆಸರನ್ನು ಅನ್ವರ್ಥ ಮಾಡಲು ಬ್ರಹ್ಮಪುತ್ರರು ರಾಜನಿಗೆ ಹೇಳಿದರೆಂದು ಹೇಳುವರು-

**ನಾರದ ಉವಾಚ –**

**ಇಮಾಂ ಮಂತ್ರೋಪನಿಷದಂ ಪ್ರತೀಚ್ಛ ಪ್ರಯತೋ ಮಮ ।**
**ಯಾಂ ಧಾರಯನ್ ಸಪ್ತರಾತ್ರಾದ್ದ್ರಷ್ಟಾ ಸಂಕರ್ಷಣಂ ವಿಭುಮ್ ।।೩೫।।**

ರಾಜನೇ, **ಪ್ರಯತಃ ಸನ್** ವಿನಯಾದಿಗುಣಗಳಿಂದ ಕೂಡಿದವನಾಗಿ **ಇಮಾಂ** ಮುಂದಿನ ಅಧ್ಯಾಯದಲ್ಲಿ ತಿಳಿಸುವ **ಮಂತ್ರೋಪನಿಷದಂ** ಅತ್ಯಂತ ಶ್ರೇಯಸ್ಕರವಾದ ಉಪನಿಷದ್ರಹಸ್ಯವಾದ ಮಂತ್ರವನ್ನು **ಮಮ ಸಕಾಶಾತ್** ನನ್ನಿಂದ **ಪ್ರತೀಚ್ಛ** ಪರಿಗ್ರಹಿಸು. ಇದು ಬಹುಕಾಲದ ನಂತರ ಫಲಪ್ರದವಾದರೆ ಇದರಿಂದ ನನಗೇನು ಎಂದು ಅಸಡ್ಡೆ ಮಡಬೇಡವೆಂದು ಹೇಳುವರು. **ಯಾಂ** ಯಾವ ಈ ಮಂತ್ರವನ್ನು **ಧಾರಯನ್ ಸಪ್ತರಾತ್ರಾತ್** ಏಳು ರಾತ್ರಿ ಉಪಾಸನೆ ಮಾಡಿದ್ದಾದರೆ **ಭವಾನ್** ನೀನು **ವಿಭುಂ** ಸರ್ವೋತ್ತಮನಾದ **ಸಂಕರ್ಷಣಂ** ಶೇಷಾಂತರ್ಯಾಮಿಯಾದ ಸಂಕರ್ಷಣನಾಮಕನಾದ ಶ್ರೀಹರಿಯನ್ನು **ದ್ರಷ್ಟಾ** ನೋಡುವೆ. ಇದರಿಂದ ಈ ವಿದ್ಯೆ ಶೀಘ್ರಫಲಪ್ರದವೆಂದು ಹೇಳಿದಂತಾಯಿತು.

**ಮಂತ್ರಂ** ಎಂದಿಷ್ಟೇ ಹೇಳದೆ **ಉಪನಿಷದಂ ಇಮಾಂ** ಎಂದು ಹೇಳಿದ್ದರಿಂದ, ಹೆಂಡತಿ ಮಕ್ಕಳನ್ನು ಕೂಡಲೇ ಬಿಡು ಎಂದು ಹೇಳಿದರೆ ಅದರಲ್ಲಿ ರುಚಿ ಉಳ್ಳವರಿಗೆ ರುಚಿಸುವದಿಲ್ಲವಾದ್ದರಿಂದ ಅವರನ್ನು ಬಿಡಲಾಗುವದಿಲ್ಲವಾದರೆ ಅವಳನ್ನು ಸ್ವೀಕರಿಸು ಎಂದು ನಾರದರು ಮತ್ತೆ ಸಾಂತ್ವನಗೊಳಿಸಿದರು ಎಂದು ಭಾವ. (ವಿರಕ್ತಿರಮಣೀಂ ಸಂಶ್ಲಿಷ್ಯತೇ) ಮುಂತಾಗಿ ಮಹಾಕಾವ್ಯದಲ್ಲಿ ಹೇಳಿದೆ. ಅಂತಹ ಹೆಂಡತಿಯು ಬೇಕಾದರೆ ಉಪನಿಷತ್ (ಸ್ತ್ರೀಲಿಂಗ ಶಬ್ದ) ಉಪನಿಷತ್ ಎಂಬ ಹೆಂಡತಿಯನ್ನು ಸ್ವೀಕರಿಸೆಂದು ಭಾವ. ಉಪನಿಷದಂ ಎಂದು ರಹಸ್ಯವನ್ನು ಉಪದೇಶಿಸುವೆನು ಎಂದು ಹೇಳಿದ್ದರಿಂದ ಜ್ಞಾನಿತ್ವವನ್ನು ಇವನಿಗೆ ಧ್ವನಿತ ಪಡಿಸಿರುವರು.

ವಾಸುದೇವಾದಿಗಳನ್ನು ಬಿಟ್ಟು ಸಂಕರ್ಷಣನಲ್ಲಿ ಮನಸ್ಸಿಡೆಂದು ಉಪದೇಶ ಮಾಡಲು ಏನು ಕಾರಣ ಎಂದರೆ ನಿನ್ನ ಪ್ರಶ್ನೆಯೇನೋ ಒಳ್ಳೆಯದೇ ಆಗಿದೆ. ಉತ್ತರ ಹೇಳುವೆವು ಸೂಕ್ಷ್ಮದೃಷ್ಟಿಯಿಂದ ಕೇಳು. ವೃತ್ರಾಸುರನಿಗೆ ಅಹಿ ಎಂದು ಹೆಸರು ಮೊದಲು ಅವನೇ ಚಿತ್ರಕೇತು. 'ಅಹಿಃ ವೃತ್ರಾಸುರೇ ಸರ್ಪೇ' ಎಂದು ವಿಶ್ವವಿದೆ. 'ಸಂಕರ್ಷಣಾಖ್ಯರೂಪೇಣ ವಿವೇಶಾನಂತಮೇವ ಚ । ತಂ ಧ್ಯಾಯತಿ ಸದಾನಂತಸ್ತಸ್ಮಾನ್ಮುಕ್ತಿಪದೇಚ್ಛಯಾ' ಇತಿ ತತ್ವನಿರ್ಣಯಗೀತಾಯಾಂ' ಎಂದು ಬೃಹದ್ಭಾಷ್ಯದಲ್ಲಿದೆ. ವಿಷದಿಂದ ಮೃತನಾದ ಮಗನ ದುಃಖದ ಶಾಂತಿಯು ಶೇಷಾಂತರ್ಗತ ಸಂಕರ್ಷಣನಿಂದ ಆಗುವದು. ಆದ್ದರಿಂದ ಅನಂತಾಂತರ್ಗತ ಸಂಕರ್ಷಣನನ್ನು ಭಜಿಸು ಎಂದು ಹೇಳಿದ್ದು ಯುಕ್ತವೇ ಆಗಿದೆ. ಮತ್ತು ಮಂತ್ರೋಪನಿಷತ್ತಿನಿಂದ ಶೀಘ್ರದಲ್ಲಿ ಫಲವೂ ಆಗುವದು ಈ ಕಾರಣದಿಂದಲೂ ಹೇಳಿರುವರು. ।।೩೪।।

ಸಂಕರ್ಷಣನು ಸಾಧಾರಣ ಅಲ್ಲವೆಂದು ಅವನ ಮಹಿಮೆಯನ್ನು ಹೇಳುವರು-

ಇಲ್ಲಿ ಸಂಕರ್ಷಣನು ಶೇಷನಲ್ಲವೆಂದು ತೋರಿಸಲು ಶೇಷನಿಗೆ ಸಂಭಾವಿತವಲ್ಲದ ವಿಶೇಷಣಗಳನ್ನು ಸಂಕರ್ಷಣನಿಗೆ ಹೇಳುವರು-

**ಯತ್ಪಾದಮೂಲಮುಪಸೃತ್ಯ ನರೇಂದ್ರ ಪೂರ್ವೇ**
**ಶರ್ವಾದಯೋ ಭ್ರಮಮಿಮಂ ದ್ವಿತಯಂ ವಿಸೃಜ್ಯ ।**
**ಸದ್ಯಸ್ತದೀಯಮತುಲಾನಧಿಕಂ ಮಹಿತ್ವಂ**
**ಪ್ರಾಪುರ್ಭವಾನಪಿ ಪರಂ ನಚಿರಾದುಪೈತಿ ।।೩೬।।**

।। ಇತಿ ಶ್ರೀಮದ್ಭಾಗವತೇ ಷಷ್ಠಸ್ಕಂಧೇ ಪಂಚದಶೋಽಧ್ಯಾಯಃ ।।

**ನರೇಂದ್ರ** ಚಿತ್ರಕೇತುವೇ **ಪೂರ್ವೇ** ತಮ್ಮ ತಮ್ಮ ಪದವಿಗಳನ್ನು ಹೊಂದದಿರುವ **ಶರ್ವಾದಯಃ** ರುದ್ರಾದಿಪದ ಹೊಂದಲು ಯೋಗ್ಯರಾದ ಜೀವರು **ಯತ್ಪಾದಮೂಲಂ** ಯಾವ ಶೇಷಾಂತರ್ಯಾಮಿಯಾದ ಈ ಸಂಕರ್ಷಣನನ್ನು ಶ್ರೀಹರಿಯ ಪಾದಗಳನ್ನು **ಉಪಸೃತ್ಯ** ಉಪಾಸನೆ ಮಾಡಿ **ಇಮಂ ಭ್ರಮಂ** ದೇಹಾದಿಗಳು ನನ್ನದು ಎಂಬ ಭ್ರಮವನ್ನು **ಇಮಂ ದ್ವಿತಯಂ** (ಭ್ರಾಂತಿಯಿಂದ ಬಂದ) ಅನ್ಯಥಾ ಜ್ಞಾನದ ಕಾರ್ಯವಾದ ಮಕ್ಕಳು ಮೊದಲಾದವರಲ್ಲಿ ಇರುವ ಸ್ನೇಹ ರೂಪವಾದ ಈ ಬಂಧವನ್ನೂ **ವಿಸೃಜ್ಯ** ಸಂಪೂರ್ಣವಾಗಿ ಬಿಟ್ಟು **ಸದ್ಯಃ** ಸಾಧನ ಸಾಮಗ್ರಿಯಲ್ಲಿ ಕಾಲಕ್ಷೇಪವಿಲ್ಲದೆ **ತದೀಯಂ** ೧. ಅವರವರಿಗೆ ಯೋಗ್ಯವಾದ ೨. ಶ್ರೀಹರಿಯ ಅನುಗ್ರಹದಿಂದಲೇ ಲಭ್ಯವಾದ್ದರಿಂದ ಪರಮಾತ್ಮನದೇ ಎನಿಸಿದ ೩. ಶ್ರೀಹರಿಯ ಅಧಿ ೀನವಾದ ೪. ಅವರವರಲ್ಲಿಯೇ (ಅವ್ಯಕ್ತವಾಗಿ) ಇರುವ **ಅತುಲಾನಧಿಕಂ** ೧. ಸಮಾನಯೋಗ್ಯತೆಯವರನ್ನು ಬಿಟ್ಟು ಸಾಮ್ಯಾಧಿಕ್ಯಗಳಿಲ್ಲದ ೨. ಶ್ರೀಹರಿಯ ಮಹಿಮೆಗೆ ಸಮಾನವೂ ಅಧಿಕವೂ ಅಲ್ಲದ ಏಕಪ್ರಕಾರವಾದ ಸಮಾಧಿಕ ಪ್ರಾಪ್ತಿರಹಿತವಾದ **ಮಹಿತ್ವಂ** ೧. ಆಯಾ ಪದವಿಯನ್ನು ೨. ಮುಕ್ತಿಯಲ್ಲಿ ತಮ್ಮ ತಮ್ಮ ಯೋಗ್ಯಾನಂದಾಭಿವ್ಯಕ್ತಿರೂಪ ಮಹಿಮೆಯನ್ನು **ಪ್ರಾಪುಃ** ಹೊಂದಿದರೋ (ಹೊಂದುವರೋ) **ಭವಾನ್ ಅಪಿ** ನೀನೂ ಸಹ ಆ ಶೇಷಾಂತರ್ಯಾಮಿ ಶ್ರೀಹರಿಯನ್ನು ಉಪಾಸಿಸಿ ಅವನನ್ನು ಕಂಡು ಅವನ ಪ್ರಸಾದದಿಂದ **ನ ಚಿರಾತ್** ಬೇಗನೇ ನಿನ್ನ ಪ್ರಾರಬ್ಧ ಕರ್ಮದ ಫಲವಾಗಿ ಬಂದ ಕೊನೆಯ ಶರೀರವು ಹೋದ ಮೇಲೆ **ತದೀಯಂ** ಶ್ರೀಹರಿಯ ಅನುಗ್ರಹದಿಂದಲೇ ಸಿಗುವ **ಅತುಲಾನಧಿಕಂ** ಹಿಂದಿನ ನಿನ್ನ ಮಹಿಮೆಗೆ ಸಮವಲ್ಲದ (ಉತ್ತಮವಾದ) ಆದರೆ ಮುಂದೆ ಅಭಿವೃದ್ಧಿಯಾಗದ (ಯೋಗ್ಯತೆಗೆ ತಕ್ಕಷ್ಟೂ ಪೂರ್ಣವಾದ **ಪರಂ** ರುದ್ರಾದಿ ಮಹಿಮೆಗಿಂತ ಭಿನ್ನವಾದ **ಮಹಿತ್ವಂ** ಸ್ವರೂಪಾನಂದಾನುಭವರೂಪವಾದ ನಿನಗೆ ಯೋಗ್ಯವಾದ ಮಹಿಮೆಯನ್ನು **ಉಪೈತಿ** ಹೊಂದುವೆ. ।।೩೬।।

ಈ ಶ್ಲೋಕದಲ್ಲಿ ಹಿಂದಿನ ಶ್ಲೋಕದಲ್ಲಿಯೂ ರುದ್ರಾದಿದೇವತೆಗಳು 'ದರ್ವೀಕರೋರ್ವೀವರವರಿವಸ್ಯಯಾ ಮಹತ್ತ್ವಮಾಪುರಿತಿ ಪ್ರತೀಯತೇ' ಸರ್ಪರಾಜನಾದ ಶೇಷದೇವರ ಸೇವೆಯಿಂದ ಮಹತ್ವವನ್ನು ಹೊಂದಿದರೆಂದು ತೋರುವದು ಅದು ಸರಿಯಲ್ಲ. 'ದ್ವಿಜಫಣಿಪಮೃಡಾ' ಎಂದು ತಾರತಮ್ಯಸ್ತೋತ್ರದಲ್ಲಿ ಸಮತೆಯನ್ನು ಹೇಳಿದ್ದರಿಂದ (ಕಿಂಚಿತ್ ಸಂಕುಚಿತಮಹತ್ತ್ವಸ್ಯ ಮಹತ್ತಾನುಪಯೋಗಿನಃ

ಸತ್ತ್ವೇऽಪಿ ಸ್ವಲ್ಪ ಹೆಚ್ಚು ಕಡಿಮೆ ಇರುವ ಮಹತ್ವವಿದ್ದರೂ ಪೂಜ್ಯತೆಗೆ ಉಪಯೋಗವಿಲ್ಲದ್ದರಿಂದ) ಉಪಾಸ್ಯ-ಉಪಾಸಕತ್ವವು ಹೇಗೆ ಎಂಬುದನ್ನು ಅತಂತ್ರಯಿತುಂ ಅಪ್ರಯೋಜಕಗೊಳಿಸಲು ತಂತ್ರಭಾಗವತ ವಚನವನ್ನು ಉದಾಹರಿಸಿರುವರು.

ತಾತ್ಪರ್ಯ

**ರುದ್ರಾದ್ಯಾಃ ಶೇಷದೇಹಸ್ಥಂ ವಿಷ್ಣುಂ ಸಂಕರ್ಷಣಾಭಿದಮ್ ।**
**ಶೇಷಾಂತರ್ಯಾಮಿಣಂ ಜ್ಞಾತ್ವಾ ಸ್ವಪದಂ ಪ್ರಾಪುರಂಜಸಾ ।।**

**-ಇತಿ ತಂತ್ರಭಾಗವತೇ ।**

ರುದ್ರಾದಿಪದವಿಯನ್ನು ಹೊಂದಲು ಯೋಗ್ಯರಾದ ಜೀವರು ಶೇಷನ ದೇಹದಲ್ಲಿರುವ ಶೇಷಾಂತರ್ಯಾಮಿಯಾದ ಸಂಕರ್ಷಣನೆಂದು ಹೆಸರುಳ್ಳ ಶ್ರೀಹರಿಯನ್ನು ಚೆನ್ನಾಗಿ ತಿಳಿದು ತಮ್ಮ ತಮ್ಮ ಪದವಿಯನ್ನು ಹೊಂದಿದರು ಎಂದು ತಂತ್ರಭಾಗವತದಲ್ಲಿ ಹೇಳಿದೆ. ಇಲ್ಲಿ ಆದಿಪದದಿಂದ ಶೇಷದೇವರನ್ನೂ ತೆಗೆದುಕೊಳ್ಳಬೇಕು. ದೇಹಸ್ಥಂ ಎಂದಿಷ್ಟೇ ಹೇಳಿದರೆ ಅಧಮರು ಉತ್ತಮರ ದೇಹದಲ್ಲಿ ಇರುವರು. ಹಾಗಲ್ಲವೆಂದು ತಿಳಿಸಲು ಶೇಷಾಂತರ್ಯಾಮಿಣಂ ಎಂದಿರುವರು. ಅಂಜಸಾ ಜ್ಞಾತ್ವಾ ಎಂದು ಅನ್ವಯ ಮಾಡಬೇಕು. ಅಂತರ್ಯಾಮಿ ಎಂದು ತಿಳಿದು ಎಂದು ಭಾವ.

ದ್ವಿತೀಯಂ ಭ್ರಮಮಿಮಂ ವಿಸೃಜ್ಯ ಎಂಬುದರಿಂದ ದೇಹವನ್ನೇ ಬಿಟ್ಟು ಎಂದಾಗಲಿ ಅಥವಾ ಭ್ರಮವಿಷಯವಾದ ದೇಹದಿಗಳು ಮಿಥ್ಯಾ ಎಂದಾಗಲಿ ತೋರುವುದು. ಅದನ್ನು ನಿವಾರಿಸಲು ಮೊದಲು ಪ್ರಮಾಣವನ್ನು ಹೇಳಿ ತಾವೂ ವ್ಯಾಖ್ಯಾನಿಸುವರು-

ತಾತ್ಪರ್ಯ

**ದ್ವೈತೇನ ಬಂಧಸಂತ್ಯಾಗಾತ್ ದ್ವೈತತ್ಯಾಗೀ ಭವತ್ಯುತ ।।ಇತಿ ಶಬ್ದನಿರ್ಣಯೇ।।**

ಇಲ್ಲಿ ದ್ವೈತವೆನಿಸುವ ದೇಹಾದಿಗಳ ಸ್ವರೂಪ ತ್ಯಾಗ ಹೇಳುವದಿಲ್ಲ. ಕಿಂತು ತನ್ನಿಮಿತ್ತ ಬಂಧತ್ಯಾಗವು ಹೇಳಲ್ಪಡುವದು ಎಂದು ಭಾವ. ದೇಹದಿಂದ ತನಗೆ ಇರುವ ನಿಯಮ್ಯ-ನಿಯಾಮಕ ಭಾವವೇನಿದೆಯೋ ಅದನ್ನು ಬಿಟ್ಟರೆ ದ್ವೈತತ್ಯಾಗಿ ಎನಿಸುತ್ತಾನೆ ಎಂದು ಶಬ್ದನಿರ್ಣಯದಲ್ಲಿದೆ. ನಾನು ನನ್ನದು ಎಂಬುದೇ ಬಂಧ. ಅದರ ತ್ಯಾಗದಿಂದ ದ್ವೈತತ್ಯಾಗಿ ಎನಿಸುವನು. ಇಲ್ಲಿ ಭ್ರಮ ಯಾವುದು ಎಂದು ತಿಳಿಸುವರು.

ತಾತ್ಪರ್ಯ

'ದೇಹಾದ್ಯೇಽಹಂ ಮಮೋಭಿಮಾನೋ ಭ್ರಮಃ'

ದೇಹಾದಿಗಳಲ್ಲಿ ನಾನು ನನ್ನದು ಎಂಬ ಅಭಿಮಾನವೇ ಭ್ರಮವೆಂದು ಭಾವ. ಯದ್ಯಪಿ ಇಲ್ಲಿ ದೇಹಾದಿವಿಷಯಕ ಸ್ವಾತಂತ್ರ್ಯ ಭ್ರಮ ನನ್ನದೇ ಎಂಬುದು ಯುಕ್ತವೇ ಹೊರತು ದೇಹವೇ ನಾನು ಎಂಬ ಭ್ರಮ ಕೂಡುವದಿಲ್ಲ. ಎಲ್ಲರಿಗೂ ದೇಹ-ಜೀವ ಬೇರೇ ಎಂದು ಸಿದ್ಧವಿದೆ. ಆದರೂ ನಾಸ್ತಿಕರ ಯುಕ್ತ್ಯಾಭಾಸದಿಂದ ಉಂಟಾದ ದೇಹಾತ್ಮತೆಯನ್ನು ಅಹಂ ಎಂಬ ಭ್ರಮವನ್ನೂ ಹೇಳಿರುವರು.

ತದೀಯಮತುಲಾನಧಿಕಂ ಮಹಿತ್ವಂ ಪ್ರಾಪುಃ ಎಂದದ್ದರಿಂದ ಶ್ರೀಹರಿಯ (ಸಂಕರ್ಷಣನ) ಮಾಹಾತ್ಮ್ಯ(ಸರ್ವೋತ್ತಮತ್ವ) ಹೊಂದಿದರೆಂದೂ ತೋರುವದು. ಅದನ್ನು ನಿವಾರಿಸಲು ಪ್ರಮಾಣ ಹೇಳುವರು-

ತಾತ್ಪರ್ಯ

ತೇಷಾಂತೇಷಾಂ ಪದಾನ್ಯೇವ ವೈಷ್ಣವಾನಿ ಪದಾನಿ ತು ।
ತೇಷಾಂ ಮಹಿತ್ವಂ ಚ ತಥಾ ಹರೇಸ್ತದ್ವಶಗಂ ಯತಃ ॥

ಅತುಲ್ಯಾನಧಿಕಂ ಚೈವ ತಸ್ಯ ತಸ್ಯೈವ ಮುಕ್ತಿಗಮ್ ।
ಸ್ವಸ್ಯೈವ ಪೂರ್ವಮಾಹಾತ್ಮ್ಯಮಪೇಕ್ಷ್ಯ ನ ಹರೇಃ ಕ್ವಚಿತ್ ।
ಮಾಹಾತ್ಮ್ಯಮನ್ಯಪ್ರಾಪ್ಯಂ ಸ್ಯಾನ್ನತೇ ವಿಷ್ಣಾವಿತಿ ಶ್ರುತೇಃ ॥ ಇತಿ ತಂತ್ರಭಾಗವತೇ

ತೇಷಾಂತೇಷಾಂ ಎಂಬುದು ಒಂದೇ ಪದ.

ಬ್ರಹ್ಮ-ರುದ್ರಾದಿಗಳಿಗೂ ಇಂದ್ರಾದಿದೇವತೆಗಳಿಗೂ ಯಾವ ಪದವಿಗಳಿವೆಯೋ ಆ ಪದವಿಗಳು ವಿಶೇಷವಾಗಿ ಭಗವತ್ಪ್ರಸಾದದಿಂದಲೇ ಪ್ರಾಪ್ಯವಾಗಿವೆ. ಆದ್ದರಿಂದ ವೈಷ್ಣವಪದವಿಗಳೆನಿಸುತ್ತವೆ. ಅದರಂತೆ ಅವರೆಲ್ಲರ ಮಹಿಮೆಗಳೂ ಕೂಡ ಶ್ರೀಹರಿಯ ಅಧೀನದಲ್ಲಿಯೇ ಇದ್ದುದರಿಂದ ಶ್ರೀಹರಿಯ ಮಹಿಮೆಗಳೇ ಎನಿಸುತ್ತವೆ.

ಬ್ರಹ್ಮಾದಿಗಳಿಗೂ ಇಂದ್ರಾದಿಗಳಿಗೂ ಯಾವುದು ಮುಕ್ತಿಯಲ್ಲಿದ್ದ ಮಾಹಾತ್ಮ್ಯವಿದೆಯೋ ಅದೇ ಬ್ರಹ್ಮ-ರುದ್ರಾದಿಗಳ ಸಂಸಾರಾವಸ್ಥೆಯಲ್ಲಿರುವ ಮಾಹಾತ್ಮಕ್ಕೆ ಸಾಮ್ಯಾಧಿಕ್ಯ ಇಲ್ಲವೆಂದು ಹೇಳಿದ್ದು. ಶ್ರೀಹರಿಯ ಮಾಹಾತ್ಮ್ಯದಂತೆ ಎಲ್ಲದಕ್ಕಿಂತಲೂ ಸಾಮ್ಯಾಧಿಕ್ಯ ರಹಿತವಲ್ಲ. ಶ್ರೀಹರಿಯ ಸ್ವರೂಪಭೂತವಾದ

ಮಾಹಾತ್ಮ್ಯವು ಯಾವ ಕಾಲದಲ್ಲೂ ಬ್ರಹ್ಮಾದಿಗಳಿಂದ ಸರ್ವಥಾ ಹೊಂದಲ್ಪಡುವದಿಲ್ಲ. ಏಕೆಂದರೆ 'ನ ತೇ ವಿಷ್ಣೋ ಜಾಯಮಾನಃ' ಎಂಬ ಶ್ರುತಿಯಲ್ಲಿ ಶ್ರೀಹರಿಯ ಮಾಹಾತ್ಮ್ಯವನ್ನು ಯಾರಿಗೂ ಹೊಂದಲು ಸಾಧ್ಯವಿಲ್ಲವೆಂದು ಹೇಳಿದೆ ಎಂದು ತಂತ್ರ ಭಾಗವತದಲ್ಲಿದೆ. ಬಹುಪ್ರಮಾಣಸಂವಾದ ದಾರ್ಢ್ಯಹೇತುವಾದ್ದರಿಂದ ತಾವು ಹೇಳಿದ ಅರ್ಥ ಸ್ಥಿರವಾಗಲು ಬ್ರಹ್ಮನನ್ನು ಅವಧಿ ಮಾಡಿರುವ ಸ್ಕಾಂದವಚನ ಹೇಳುವರು-

ತಾತ್ಪರ್ಯ

ಬ್ರಹ್ಮೇಶಾನಾದಿಭಿರ್ದೇವೈರ್ಯತ್ಪ್ರಾಪ್ತುಂ ನೈವ ಶಕ್ಯತೇ ।
ತದ್ಯತ್ ಸ್ವಭಾವಃ ಕೈವಲ್ಯಂ ಸ ಭವಾನ್ ಕೇವಲೋ ಹರೇ ॥ಇತಿ ಸ್ಕಾಂದೇ॥

ಎಲ್ಲವನ್ನು ತಮ್ಮ ಮಾತಿನಿಂದ ಪರ್ಯವಸಾನಗೊಳಿಸುವರು-

ತಾತ್ಪರ್ಯ

ತತ್ಪ್ರಸಾದಲಭ್ಯತ್ವಾತ್ತದೀಯಮಪಿ ತೇನಾತುಲಮನವಧಿಕಂ ಚ ಅನ್ಯಮಾಹಾತ್ಮ್ಯಮ್ ॥

ಹೇ ಶ್ರೀಹರಿಯೇ ಬ್ರಹ್ಮ-ರುದ್ರಾದಿದೇವತೆಗಳಿಂದ ಯಾವ ಸರ್ವೋತ್ತಮತ್ವವು ಹೊಂದಲೂ ಸಾಧ್ಯವಿಲ್ಲವೋ ಅಂತಹ ಸರ್ವೋತ್ತಮತ್ವವು ಯಾವ ಶ್ರೀಹರಿಯ ಸ್ವರೂಪವೇ ಆಗಿದೆಯೋ ಅಂತಹ ಸರ್ವೋತ್ತಮನು ನೀನೇ. ಎಂದು ಸ್ಕಾಂದ ಪುರಾಣದಲ್ಲಿ ಹೇಳಿದೆ.

ಬ್ರಹ್ಮ-ರುದ್ರಾದಿಗಳ ಮಾಹಾತ್ಮ್ಯವೆಲ್ಲವೂ ಭಗವತ್ಪ್ರಸಾದದಿಂದಲೇ ಪ್ರಾಪ್ತವಾದುದರಿಂದ ವೈಷ್ಣವವೆನಿಸಿಕೊಂಡಿದ್ದರೂ ವಿಷ್ಣುಮಾಹಾತ್ಮ್ಯಕ್ಕೆ ಸದೃಶವಾಗುವದಿಲ್ಲ. ವಿಷ್ಣುಮಾಹಾತ್ಮ್ಯಕ್ಕಿಂತ ಅಧಿಕವೂ ಆಗುವದಿಲ್ಲ.

ಇಲ್ಲಿಗೆ ಹದಿನೈದನೇ ಅಧ್ಯಾಯ ಮುಗಿಯಿತು

★★★★★

# ಅಥ ಶ್ರೀಮದ್ಭಾಗವತೇ - ಷಷ್ಠಸ್ಕಂಧೇ
# ಷೋಡಶೋಽಧ್ಯಾಯಃ

**ಅಧ್ಯಾಯಸಾರ**

ಶುಕಾಚಾರ್ಯರು ಹೇಳಿದರು. ರಾಜನ್ ! ದೇವರ್ಷಿಗಳಾದ ನಾರದರು ಮೃತನಾದ ರಾಜಪುತ್ರನನ್ನು ಕರೆದು ಎಲ್ಲರಿಗೂ ತೋರಿಸುತ್ತಾ ಹೇಳಿದರು. ಹೇ ಜೀವವೇ ! ನಿನಗಾಗಿ ಶೋಕಪಡುತ್ತಿರುವ ನಿನ್ನ ತಾಯಿ-ತಂದೆ, ಬಂಧು-ಬಳಗ, ಮಿತ್ರರನ್ನು ನೋಡು. ನಿನ್ನ ಈ ಶರೀರವನ್ನು ಪ್ರವೇಶ ಮಾಡಿ ರಾಜ್ಯಸುಖವನ್ನು ಭೋಗಮಾಡು. ಅವಶಿಷ್ಟವಾದ ಆಯುಷ್ಯವನ್ನು ಅನುಭವಿಸು. ಇವರಿಗೆ ಆನಂದವನ್ನು ನೀಡು.

ಜೀವ ಹೇಳಿದ. ಬ್ರಹ್ಮಜ್ಞಾನಿಗಳೇ ! ದೇವ-ಪಿತೃ-ಮನುಷ್ಯ-ಪ್ರಾಣಿ ಯೋನಿಗಳಲ್ಲಿ ನನ್ನ ಪ್ರಾರಬ್ಧಕ್ಕೆ ಅನುಗುಣವಾಗಿ ಅನೇಕ ಯೋನಿಗಳಲ್ಲಿ ನಾನು ಸಂಚರಿಸಿದ್ದೇನೆ. ಇವರು ಯಾವ ಜನ್ಮದಲ್ಲಿ ನನಗೆ ತಂದೆ-ತಾಯಿಗಳಾಗಿದ್ದರು. ಮಾರಾಟಕ್ಕಿರುವ ಪದಾರ್ಥ ಒಬ್ಬರ ಕೈಯಿಂದ ಮತ್ತೊಬ್ಬರ ಕೈಗಳಿಗೆ ಹೋಗುತ್ತಾ ಇರುತ್ತದೆ. ಹಾಗೆಯೇ ಈ ಜೀವ ಅನೇಕ ತಂದೆ-ತಾಯಿಗಳ ಕೈಗಳಿಗೆ ಬದಲಾಗುತ್ತಾ ಹೋಗುತ್ತಾನೆ.

ಹೀಗೆ ಹೇಳಿ ಜೀವ ಅಲ್ಲಿಂದ ಹೊರಟೇ ಬಿಟ್ಟ. ಆ ಜೀವನ ಔದಾಸೀನ್ಯವನ್ನು ಗಮನಿಸಿ, ಅವನಾಡಿದ ಮಾತುಗಳನ್ನು ಕೇಳಿ ತಂದೆ-ತಾಯಿಗಳಿಗೆ ಜ್ಞಾತಿಗಳಿಗೆ ಅತೀವ ವಿಸ್ಮಯವಾಯಿತು. ಎಲ್ಲರೂ ಶೋಕ-ಮೋಹಗಳನ್ನು ಪರಿತ್ಯಜಿಸಿದರು. ಆ ಶರೀರವನ್ನು ದಹನ ಮಾಡಿದರು. ಅಂತ್ಯೇಷ್ಟಿಕರ್ಮವನ್ನು ನೆರವೇರಿಸಿದರು. ಆ ಮಗನ ಮೇಲಿನ ವ್ಯಾಮೋಹವನ್ನು ತೊರೆದರು.




ಬಾಲಹತ್ಯೆಯಿಂದ ಕಾಂತಿವಿಹೀನರಾದ ಸವತಿಯರೆಲ್ಲ ತಪ್ತರಾದರು. ತಾವು ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಬ್ರಾಹ್ಮಣರಿಂದ ಕೇಳಿಕೊಂಡರು. ಯಮುನಾ ತೀರಕ್ಕೆ ಹೋಗಿ ಪ್ರಾಯಶ್ಚಿತ್ತವನ್ನು ಮಾಡಿಕೊಂಡರು. ತನ್ನ ಹೆಂಡತಿಯರೇ ಮಗುವನ್ನು ಕೊಂದಿದ್ದಾರೆಂದು ಆ ಪಾಪಕ್ಕಾಗಿ ಯೋಗ್ಯವಾದ ಪ್ರಾಯಶ್ಚಿತ್ತವನ್ನೂ ಮಾಡಿಕೊಂಡಿದ್ದಾರೆಂದು ಚಿತ್ರಕೇತುವಿಗೆ ತಿಳಿಯಿತು. ವಿರಕ್ತನಾದ. ಮನೆಯಿಂದ ಹೊರನಡೆದ. ಕಾಲಿಂದಿಯ ತೀರಕ್ಕೆ ಬಂದು ಸೇರಿದ. ಸ್ನಾನ-ತರ್ಪಣಾದಿ ಕಾರ್ಯಗಳನ್ನು ಮುಗಿಸಿಕೊಂಡ. ಅಲ್ಲಿಯೇ ಸನ್ನಿಹಿತರಾದ ನಾರದಾಂಗಿರಸರ ಹತ್ತಿರ ಬಂದ. ತತ್ತ್ವೋಪದೇಶಕ್ಕಾಗಿ ಪ್ರಾರ್ಥಿಸಿದ.

ಭಗವದ್ಭಕ್ತನಾದ ಚಿತ್ರಕೇತುವಿಗೆ ನಾರದರು ಸಂಕರ್ಷಣವಿದ್ಯೆಯನ್ನು ಉಪದೇಶ ಮಾಡಿದರು. ಈ ವಿದ್ಯೆಯನ್ನು ಉಪದೇಶ ಮಾಡಿದ ನಾರದರು ಮತ್ತು ಅಂಗಿರಸರು ಬ್ರಹ್ಮಲೋಕಕ್ಕೆ ತೆರಳಿದರು.

ಚಿತ್ರಕೇತುವು ಕೇವಲ ಜಲವನ್ನು ಮಾತ್ರ ಪಾನ ಮಾಡುತ್ತಾ ನಾರದೋಪದಿಷ್ಟವಾದ ಸಂಕರ್ಷಣವಿದ್ಯೆಯನ್ನು ಜಪಿಸಿದ. ಏಳು ದಿವಸದಲ್ಲಿಯೇ ತಾನು ವಿದ್ಯಾಧರರಿಗೆ ಸ್ವಾಮಿಯಾದ. ಕೆಲವು ದಿವಸಗಳು ಕಳೆದ ನಂತರ ದೇವದೇವನಾದ ಶೇಷನ ಹತ್ತಿರಕ್ಕೆ ಹೋದ. ಅಲ್ಲಿಗೆ ಹೋಗಿ ನೀಲಾಂಬರಕಿರೀಟಾದಿಗಳಿಂದ ಭೂಷಿತನಾದ ಶೇಷಾಂತರ್ಯಾಮಿಯಾದ ಶ್ರೀಹರಿಯ ದರ್ಶನ ಮಾಡಿಕೊಂಡ. ಶ್ರೀಹರಿಯ ದರ್ಶನದಿಂದ ಪಾಪಗಳನ್ನೆಲ್ಲ ಕಳೆದುಕೊಂಡ. ಭಕ್ತಿಯಿಂದ ಪರಮಾತ್ಮನನ್ನು ಸ್ತುತಿಸಿದ.

ಶುಕಾಚಾರ್ಯರು ಹೇಳಿದರು. ಚಿತ್ರಕೇತುವಿನಿಂದ ಸ್ತುತನಾದ ಪರಮಾತ್ಮ ಪ್ರೀತನಾದ. ವಿದ್ಯಾಧರರಿಗೆ ಸ್ವಾಮಿಯಾದ ಚಿತ್ರಕೇತುವಿಗೆ ಹೇಳಿದ. ನಾರದಾಂಗಿರಸರು ಉಪದೇಶ ಮಾಡಿದ ವಿದ್ಯೆಯನ್ನು ಭಕ್ತಿಯಿಂದ ನೀನು ಅಭ್ಯಾಸ ಮಾಡಿದಿ. ಆದರಿಂದಲೇ ನಿನಗೆ ನನ್ನ ದರ್ಶನವಾಗಿದೆ. ಈಗ ನೀನು ಸಿದ್ಧನಾಗಿರುವಿ. ಈ ಕಾರಣಕ್ಕಾಗಿಯೇ ಬೇಗದಲ್ಲಿಯೇ ನೀನು ಮುಕ್ತನಾಗುವಿ ಎಂದು ಚಿತ್ರಕೇತುವಿಗೆ ಆಶ್ವಾಸನೆ ನೀಡಿದ. ನೋಡುತ್ತಲೇ ಆದೃಶ್ಯನಾದ.

★★★★★

ಇಷ್ಟು ಹೇಳಿದರೂ ರಾಜನ ಬಂಧುಗಳ ಮನಸ್ಸು ಹತೋಟಿಗೆ ಬರಲಿಲ್ಲ. ಆವಾಗ ನಾರದರು ಮೃತನಾದ ಆ ಜೀವನನ್ನೇ ಕರೆಸಿದರು. ಜೀವರು ನಿತ್ಯರು ಆದರೆ ದೇಹವು ಮಾತ್ರ ಅನಿತ್ಯವೇ ಆಗಿದೆ. ಆದ್ದರಿಂದ ದೇಹದ ನಾಶದಿಂದ ಶೋಕವು ಯುಕ್ತವಲ್ಲ. ಅನಾದಿಯಾದ ಸಂಸಾರದಲ್ಲಿ ಎಷ್ಟು ಜನ ತಂದೆಗಳೋ? ಎಷ್ಟು ಜನ ತಾಯಂದಿರೋ? ನಾನ್ಯಾರು? ನೀವಾದರೂ ಯಾರು? ಎಂದು ಬಂದಿರುವ ಆ ಜೀವನಿಂದ ಹೇಳಿಸಿದರು. ಆವಾಗ ಎಲ್ಲರಿಗೂ ಸಮಾಧಾನವಾಯಿತು. ಈ ವಿಷಯವನ್ನು ಇಲ್ಲಿ ತಿಳಿಸುತ್ತಿದ್ದಾರೆ-

**ಶ್ರೀಶುಕ ಉವಾಚ -**

**ಅಥ ದೇವಋಷೀ ರಾಜನ್ ಸಂಪರೇತಂ ನೃಪಾತ್ಮಜಮ್ ।**
**ದರ್ಶಯಿತ್ವೇತಿ ಹೋವಾಚ ಜ್ಞಾತೀನಾಮನುಶೋಚತಾಮ್ ॥೧॥**

**ರಾಜನ್** ಪರೀಕ್ಷಿತನೇ **ಅಥ** ಅನಂತರ **ದೇವಋಷಿಃ** ನಾರದರು **ಅನುಶೋಚತಾಂ** ದುಃಖಿಸುತ್ತಿದ್ದ **ಜ್ಞಾತೀನಾಂ** ರಾಜ ಮುಂತಾದ ಬಂಧುಗಳಿಗೆ **ಸಂಪರೇತಂ** ಮೃತನಾದ **ನೃಪಾತ್ಮಜಂ** ರಾಜಕುಮಾರನನ್ನು ತಮ್ಮ ಮಂತ್ರ ಬಲದಿಂದ ಬದುಕಿಸಿ **ದರ್ಶಯಿತ್ವಾ** ತೋರಿಸಿ **ಇತಿ** ಮುಂದೆ ಹೇಳುವಂತೆ **ತಂ** ರಾಜಕುಮಾರನನ್ನು ಕುರಿತು **ಉವಾಚ ಹ** ಹೇಳಿದರಷ್ಟೇ. ॥೧॥

**ನಾರದ ಉವಾಚ -**

**ಜೀವಾತ್ಮನ್ ಪಶ್ಯ ಭದ್ರಂ ತೇ ಮಾತರಂ ಪಿತರಂ ಚ ತೇ ।**
**ಸುಹೃದೋ ಬಾಂಧವಾಂಸ್ತಪ್ತಾನ್ ಶುಚಾ ತ್ವತ್ಕೃತಯಾ ಭೃಶಮ್ ॥೨॥**

**ಹೇ ಆತ್ಮನ್** ಎಲೋ ಜೀವನೇ ಜೀವ ನಿನ್ನವರನ್ನು ಬದುಕಿಸು (ಅಂತರ್ಣೀತಣಿಜಂತ) **ತೇ** ನಿನಗೆ **ಭದ್ರಮಸ್ತು** ಮಂಗಳವಾಗಲಿ **ತೇ** ನಿನ್ನ **ಮಾತರಂ** ತಾಯಿಯನ್ನು **ಪಿತರಂ ಚ** ತಂದೆಯನ್ನೂ **ಪಶ್ಯ** ನೋಡು **ತ್ವತ್ಕೃತಯಾ** ನಿನ್ನ ನಿಮಿತ್ತದಿಂದ **ಭೃಶಂ** ಬಹಳವಾಗಿ **ಶುಚಾ** ದುಃಖದಿಂದ **ತಪ್ತಾನ್** ಪೀಡಿತರಾದ **ಸುಹೃದಃ** ಸ್ನೇಹಿತರನ್ನು **ಬಾಂಧವಾನ್** ಬಂಧುಗಳನ್ನು **ಪಶ್ಯ** ನೋಡು. ॥೨॥

**ಕಲೇವರಂ ಸ್ವಮಾವಿಶ್ಯ ಶೇಷಮಾಯುಃ ಸುಹೃದ್ವೃತಃ ।**
**ಭುಂಕ್ಷ್ವ ಭೋಗಾನ್ ಪಿತೃಪ್ರಾಪ್ತಾನಧಿತಿಷ್ಠನ್ನೃಪಾಸನಮ್ ॥೩॥**

ಸ್ವಂ ನಿನ್ನ ಪ್ರಾರಬ್ಧಕರ್ಮದಿಂದ ಬಂದಿರುವದರಿಂದ ನಿನ್ನದಾದ **ಕಲೇವರಂ** ದೇಹವನ್ನು **ಆವಿಶ್ಯ** ಪ್ರವೇಶಿಸಿ **ಶೇಷಂ** ಅಕಾಲಮರಣವಾದುದರಿಂದ ಉಳಿದಿರುವ ಆಯುಷ್ಯವನ್ನು **ಸುಹೃದ್ವೃತಃ** ಸ್ನೇಹಿತರಿಂದ ಕೂಡಿಕೊಂಡು **ಭೋಗಾನ್ ಭುಂಕ್ಷ್ವ** ವಿಷಯಗಳನ್ನು ಅನುಭವಿಸು. **ಪಿತೃಪ್ರಾಪ್ತಾನ್** ಪರಂಪರಾಗತವಾದ **ನೃಪಾಸನಂ** ರಾಜಸಿಂಹಾಸನವನ್ನು **ಅಧಿತಿಷ್ಠ** ಅಲಂಕರಿಸು. **ಅಧಿತಿಷ್ಠನ್ ನೃಪಾಸನಂ** ಎಂಬ ಪಾಠದಲ್ಲಿ ರಾಜಸನವನ್ನೇರಿ ಭೋಗಗಳನ್ನು ಅನುಭವಿಸು ಎಂದು ಅನ್ವಯಾರ್ಥ ಮಾಡಬೇಕು. ।।೩।।

ಹೀಗೆ ನಾರದರು ಹೇಳಿದಾಗ ಜೀವನೇನು ಹೇಳಿದನೆಂದು ಹೇಳುವರು-

**ಜೀವ ಉವಾಚ -**

**ಕಸ್ಮಿನ್ ಜನ್ಮನ್ಯಮೀ ಬ್ರಹ್ಮನ್ ಪಿತರೋ ಮಾತರೋಽಭವನ್ ।**
**ಕರ್ಮಭಿರ್ಭ್ರಾಮ್ಯಮಾಣಸ್ಯ ದೇವತಿರ್ಯಙ್ನೃಯೋನಿಷು ।।೪।।**

**ಬ್ರಹ್ಮನ್** ನಾರದರೇ **ಕರ್ಮಭಿಃ** ತಾನು ಮಾಡಿದ ಕರ್ಮಗಳಿಂದ **ದೇವತಿರ್ಯಙ್ ನೃಯೋನಿಷು** ದೇವ-ಪಶು-ಪಕ್ಷಿ-ಮನುಷ್ಯಯೋನಿಗಳಲ್ಲಿ (ದ್ವಂದ್ವದ ಕೊನೆಗೆ ಶ್ರುತವಾದ ಯೋನಿ ಶಬ್ದವು ಎಲ್ಲೆಡೆ ಸಂಬಂಧಿಸುವದು) **ಭ್ರಾಮ್ಯಮಾಣಸ್ಯ** ತಿರುಗುತ್ತಿರುವ (ಹುಟ್ಟುತ್ತಿರುವ) **ಮಮ** ನನಗೆ **ಅಮೀ** ಇವರು **ಕಸ್ಮಿನ್ ಜನ್ಮನಿ** ಯಾವ ಜನ್ಮದಲ್ಲಿ **ಮಾತರಃ ಪಿತರಃ ಅಭವನ್** ತಾಯಿ-ತಂದೆ ಗಳಾಗಿದ್ದರು?

ಅಮೂಶ್ಚ ಅಮೀ ಚ ಅಮೀ ಎಂದು ಏಕಶೇಷ. 'ಪುಮಾನ್ ಸ್ತ್ರಿಯಾ' ಎಂಬುದರಿಂದ ಎಂದು ತಿಳಿಯಬೇಕು. ಜನ್ಮಗಳು ಅನಂತವಾದುದರಿಂದ ಇಂತಹ ತಂದೆ-ತಾಯಿಗಳು ಅನೇಕರು ಆಗಿ ಹೋಗಿರುವರು. ಯಾರನ್ನು ತಾನೇ ಹೇಗೆ ಸಮಾಧಾನ ಪಡಿಸಲು ಸಾಧ್ಯ ಹೇಳಿರಿ. ನಾನಾರೋ ಅವರಾರೋ ಎಂಬುದು ಜೀವನ ಅಭಿಪ್ರಾಯ. ।।೪।।

ನಾನು ಸತ್ತರೆ, ಮಗನೆಂದು ತಿಳಿದು ದುಃಖಿಸುವುದಾದರೆ, ಶತ್ರುವೆಂದು ತಿಳಿದು ಸಂತೋಷಿಸಬಾರದೇಕೆ? ಎಂಬ ಅಭಿಪ್ರಾಯದಿಂದ ಸಂಬಂಧವು ಅನಿತ್ಯವೆಂದು ಹೇಳುತ್ತಾನೆ-

**ಬಂಧುಜ್ಞಾತ್ಯರಿಮಧ್ಯಸ್ಥಮಿತ್ರೋದಾಸೀನವಿದ್ವಿಷಃ ।**
**ಸರ್ವ ಏವ ಹಿ ಸರ್ವೇಷಾಂ ಭವಂತಿ ಕ್ರಮಶೋ ಮಿಥಃ ।।೫।।**

ಹಿ ಯಾವ ಕಾರಣ **ಸರ್ವೇಷಾಂ** ಎಲ್ಲರಿಗೂ **ಸರ್ವೇ** ಎಲ್ಲರೂ **ಕ್ರಮಶಃ** ಕ್ರಮವಾಗಿ **ಮಿಥಃ** ಪರಸ್ಪರ **ಬಂಧು** ಮಕುವೆ ಮೊದಲಾದವುಗಳಿಂದ ಸಂಬಂಧಿಗಳಾಗಲಿ **ಜ್ಞಾತಿ** ಸಪಿಂಡರಾದ ದಾಯಾದಿಗಳಾಗಲಿ **ಅರಿ** ವಧ ಮಾಡುವವರು **ಮಧ್ಯಸ್ಥ** ಉಪಕಾರ-ಅಪಕಾರ ಎರಡನ್ನೂ ಮಾಡುವವರು **ಮಿತ್ರ** ತಾವೇ ಕಷ್ಟಪರಿಸ್ಥಿತಿಯನ್ನು ತಿಳಿಸಿ ಉಪಕಾರ ಮಾಡುವವರು **ಉದಾಸೀನ** ಉಪಕಾರ ಅಪಕಾರ ಎರಡನ್ನೂ ಮಾಡದಿರುವವರು **ವಿದ್ವಿಷಃ** ಕುಲಪರಂಪರೆ ವೈರಿಗಳು ಅಪ್ರಿಯವನ್ನು ಮಾಡುವವರು **ಭವಂತಿ ಏವ** ಆಗಿಯೇ ಆಗುವರು.

ದ್ವೇಷ್ಯೋಽವಸಿತಕೃತ್ಕಾರ್ಯಮಾತ್ರಕಾರೀ ತು ಮಧ್ಯಮಃ ।
ಪ್ರಿಯಕೃತ್ ಪ್ರಿಯೋ ನಿರೂಪ್ಯಾಪಿ ಕ್ಲೇಶಂ ಯಃ ಪರಿರಕ್ಷತಿ ।

ಸ ಮಿತ್ರಮುಪಾಕರಂ ತು ಅನಪೇಕ್ಷ್ಯೋಪಕಾರಕೃತ್ ।
ಯಸ್ತತಃ ಸ ಸುಹೃತ್ ಪ್ರೋಕ್ತಃ ಶತ್ರುಶ್ಚಾಪಿ ವಧಾದಿಕೃತ್ ॥

ಅನಿಮಿತ್ತಸ್ನೇಹವಾಂಸ್ತು ಸುಹೃತ್ ಜ್ಞಾತ್ವೋಪಾಕರಕೃತ್
ಮಿತ್ರಂ ವಧಾದಿಕೃದರಿರ್ದ್ವೇಷ್ಯಸ್ತ್ವಪ್ರಿಯಮಾತ್ರಕೃತ್ ।

ಉದಾಸೀನಃ ಸ್ನೇಹವತೋಽಪ್ಯಸ್ನೇಹೀ ತತ್ಕೃತಾನುಕೃತ್ ॥
ಮಧ್ಯಸ್ಥ ಇತಿ ವಿಜ್ಞೇಯಃ ಸುಹೃದೇಷು ವಿಶಿಷ್ಯತೇ ॥೫॥

ನಾರದೀಯದಲ್ಲಿ ಈ ರೀತಿಯಾಗಿದೆ.

**ಯಥಾ ವಸ್ತೂನಿ ಪಣ್ಯಾನಿ ಹೇಮಾದೀನಿ ತತಸ್ತತಃ ।**
**ಪರ್ಯಟಂತಿ ನರೇಷ್ವೇವಂ ಜೀವೋ ಯೋನಿಷು ಕರ್ತೃಷು ॥೬॥**

**ಯಥಾ** ಹೇಗೆ **ಪಣ್ಯಾನಿ** ಮಾರಾಟಕ್ಕಿರುವ **ಹೇಮಾದೀನಿ** ಬಂಗಾರ ಮೊದಲಾದ **ವಸ್ತೂನಿ** ಪದಾರ್ಥಗಳು **ನರೇಷು ಕರ್ತೃಷು** ಖರೀದಿಸುವ ಮನುಷ್ಯರಲ್ಲಿ **ಪರ್ಯಟಂತಿ** ಸಂಚರಿಸುವವೋ **ಏವಂ** ಹಾಗೆಯೇ **ಜೀವಃ** ಜೀವನು **ಯೋನಿಷು ಪರ್ಯಟಂತಿ** ನಾನಾ ಯೋನಿಗಳಲ್ಲಿ (ತಂದೆ-ತಾಯಿಗಳಲ್ಲಿ) ಸುತ್ತುವನು. **ತತಸ್ತತಃ** ಒಬ್ಬರಿಂದೊಬ್ಬರಿಗೆ ಹೋಗುವವು. ವ್ಯವಹರಿಸುವ ಜನರಲ್ಲಿ **ನರೇಷು** ಖರೀದಿಸುವರಲ್ಲಿ **ತತಸ್ತತಃ** ಒಬ್ಬರಿಂದೊಬ್ಬರಿಗೆ **ಪರ್ಯಟಂತಿ** ವ್ಯವಹಾರ ವಿಷಯವಾಗುವವೋ (ಮಾರಲ್ಪಡುವವೋ) **ಏವಂ** ಹಾಗೆಯೇ **ಜೀವಃ** ಜೀವರು **ಕರ್ತೃಷು** ರೇತಸ್ಸೇಚನ ಮಾಡುವ ತಂದೆಗಳಲ್ಲಿ **ಯೋನಿಷು** ಪ್ರಸವಿಸುವ ತಾಯಿಯರಲ್ಲಿ **ಪರ್ಯಟಂತಿ** ಸಂಚರಿಸುವರು. (ಹುಟ್ಟುವರು) ॥೬॥

ಹಾಗಾದರೆ ಬಂಗಾರ ಮೊದಲಾದ ಪದಾರ್ಥಗಳಂತೆ ಜೀವರು ಅನಿತ್ಯರೆಂದು ಶಂಕಿಸಿ ಸಂಬಂಧ ಮಾತ್ರ ಅನಿತ್ಯ ಎಂದು ನೀನು ನಿತ್ಯನಾದುದರಿಂದ ಇದೇ ದೇಹದಲ್ಲಿ ವಾಸಮಾಡು ಸಂತೋಷವನ್ನುಂಟು ಮಾಡು ಎಂದರೆ ದೇಹ ಸಂಬಂಧವು ಭಂಗುರ ಅನಿತ್ಯವೆಂದು ಹೇಳುವರು-

**ನಿತ್ಯಸ್ಯಾರ್ಥಸ್ಯ ಸಂಬಂಧೋ ಹ್ಯನಿತ್ಯೋ ದೃಶ್ಯತೇ ನೃಷು ।**
**ಯಾವದ್ಯಸ್ಯ ಹಿ ಸಂಬಂಧೋ ಮಮತ್ವಂ ತಾವದೇವ ಹಿ ॥೭॥**

ನಿತ್ಯಸ್ಯ ಚೇತನನಿಗೆ **ಅರ್ಥಸ್ಯ** ದೇಹದ **ಸಂಬಂಧಃ** ಸಂಬಂಧವು **ಅನಿತ್ಯಃ** ಶಾಶ್ವತವಾಗುವದಿಲ್ಲವೆಂದು **ನೃಷು** ಸಂಸಾರಿಗಳಲ್ಲಿ **ದೃಶ್ಯತೇ** ಕಂಡು ಬರುವದು (ಇದರಿಂದ ಅನುಭವವನ್ನು ಪ್ರಮಾಣವಾಗಿ ಹೇಳಿದಂತಾಯಿತು) **ಯಸ್ಯ** ಯಾವ ಜೀವನಿಗೆ **ಯಾವತ್ ಸಂಬಂಧಃ** ಎಲ್ಲಿಯವರೆಗೆ ಶರೀರದಲ್ಲಿ ಸ್ಥಿತಿಯೋ **ತಾವದೇವ** ಅಲ್ಲಿಯವರೆಗೆ ಮಾತ್ರ **ಮಮತ್ವಂ** ಮಗ ಮುಂತಾದ ಮಮತೆ, **ಯಥಾ** ಹೇಗೆ **ನಿತ್ಯಸ್ಯ** ಬದುಕಿರುವ **ಅರ್ಥಸ್ಯ** ಪಶು ಮುಂತಾದವುಗಳಿಗೆ **ನೃಷು ಸಂಬಂಧಃ** ಯಜಮಾನನ ಸಂಬಂಧವು **ಅನಿತ್ಯಃ** ಅನಿಯತವಾದುದು. ಮಾರುವದು ಸ್ವೀಕರಿಸುವದರಿಂದ ಸಂಬಂಧ ಹೋಗುವದು. **ಅಸ್ಯ** ಪಶು ಮುಂತಾದವುಗಳಿಗೆ **ಯಾವತ್ ಸಂಬಂಧಃ** ಎಲ್ಲಿವರೆಗೆ ಸಂಬಂಧವಿರುವದೋ **ತಾವತ್** ಏವ ಅಲ್ಲಿಯ ವರೆಗೆ **ಮಮತ್ವಂ** ಇದು ನನ್ನದು ಎಂಬ ಅಭಿಮಾನವಿರುವದು.

ಎರಡು ಹಿ ಶಬ್ದಗಳಿಂದ ಇದು ಪ್ರತ್ಯಕ್ಷಸಿದ್ಧವೆಂದೂ ಏವ ಕಾರದಿಂದ ನಂತರ ಮಮತೆಯು ಇರುವದಿಲ್ಲವೆಂದೂ ಹೇಳಿರುವರು. ಅದೇ ಜನ್ಮದಲ್ಲಿಯೇ ಸಂಬಂಧವು ಅನಿತ್ಯವೆಂದು ಹೇಳಿದಂತಾಯಿತು. ॥೭॥

**ಏವಂ ಯೋನಿಗತೋ ಜೀವಃ ಸ ನಿತ್ಯೋ ನಿರಹಂಕೃತಃ ।**
**ಯಾವದ್ಯತ್ರೋಪಲಭ್ಯೇತ ತಾವತ್ ಸ್ವತ್ವಂ ಹಿ ತಸ್ಯ ತತ್ ॥೮॥**

**ಏವಂ** ಹೀಗೆ **ಯೋನಿಗತಃ** (ಅಪಿ) **ಜೀವಃ** ಬೇರೆ ಬೇರೆ ಜನ್ಮಗಳಲ್ಲಿ ಬಂದಿದ್ದರೂ **ನಿರಹಂಕೃತಃ** ಸ್ವಾಭಾವಿಕವಾಗಿ ದೇಹಾಭಿಮಾನರಹಿತನು (ದೇಹದ ಜನ್ಮದೊಡನೆ ಜೀವನು ಹುಟ್ಟುವದಿಲ್ಲ. ಆದಕಾರಣ ನನ್ನ ದೇಹ ನಾನಿವನ ಮಗ ಎಂಬ ಅಭಿಮಾನವಿರುವದಿಲ್ಲ) ಯೋನಿಯಲ್ಲಿ **ಯಾವತ್ ಉಪಲಭ್ಯೇತ** ಕರ್ಮದಿಂದ ಎಷ್ಟು ಕಾಲ ಸಂಬಂಧವಿರುವದೋ **ತಾವತ್** ಅಷ್ಟು ಕಾಲವೇ **ತಸ್ಯ** ಆ ಜೀವನಿಗೆ **ತತ್** ಆ

ಜನ್ಮದಲ್ಲಿ **ಸ್ವತ್ವಂ ಹಿ** ತನ್ನದೆಂಬ ಅಭಿಮಾನವು. 'ಕಲೇವರಂ ಸ್ವಮಾವಿಶ್ಯ' ಎಂದು ಹೇಳಿದ್ದಕ್ಕೆ ಈ ಎರಡು ಶ್ಲೋಕಗಳಿಂದ ನನಗೆ ಆ ದೇಹದಲ್ಲಿ ಅಭಿಮಾನವಿಲ್ಲವೆಂದು ಉತ್ತರ ಕೊಟ್ಟಿರುವನು ಎಂದಾದರೂ ಅರ್ಥ.

**ಶ್ರೀ ಸತ್ಯಧರ್ಮರ ಪ್ರಕಾರ**

ಇದೇ ರೀತಿ ಅನೇಕಯೋನಿಗಳಲ್ಲಿ ಬಂದ ಜೀವನು ನಿತ್ಯನು. ಎಲ್ಲಿವರೆಗೆ ಯಾವ ದೇಹದಲ್ಲಿ **ಅನಿರಹಂಕೃತಃ ಉಪಲಭ್ಯತೇ** ಅಭಿಮಾನಸಹಿತವಾಗಿರುವನೋ ಅಲ್ಲಿವರೆಗೆ ಅವನಿಗೆ **ಸ್ವತ್ವಂ** ಸ್ವಕೀಯತೆಯು ಇರುತ್ತದೆ. ಅವಿಯೋಗೇ ದೇಹ ವಿಯೋಗವಾಗದಿರುವಾಗ, ವಿಯೋಗೇ ದೇಹವಿಯೋಗವಾದ ಮೇಲೆ ನ ಕಿಮಪಿ ಯಾವುದೇ ರೀತಿಯಾದ ಮಮತೆ ಇರುವದಿಲ್ಲ.

ಈ ರೀತಿಯಾಗಿ ಅನಿತ್ಯ ಸಂಬಂಧವುಳ್ಳ ಪುತ್ರಾದಿಗಳಲ್ಲಿ ಮಮತೆಯನ್ನು ಬಿಟ್ಟು ನಿತ್ಯ ಸಂಬಂಧವುಳ್ಳ ಭಗವಂತನನ್ನು ಭಜಿಸಬೇಕು ಎಂಬ ಅಭಿಪ್ರಾಯದಿಂದ ಭಗವಂತನಿಗೆ ಜೀವನೊಡನೆ ನಿತ್ಯಸಂಬಂಧವನ್ನು ಹೇಳುವರು-

**ಏಷ ನಿತ್ಯೋऽವ್ಯಯಃ ಸೂಕ್ಷ್ಮ ಏಕಃ ಸರ್ವಾಶ್ರಯಃ ಸ್ವದೃಕ್ ।**
**ಆತ್ಮಮಾಯಾಗುಣೈರ್ವಿಶ್ವಮಾತ್ಮಾನಂ ಸೃಜತೇ ಪ್ರಭುಃ ॥೯॥**

**ಯಃ** ಯಾವನು **ಆತ್ಮಮಾಯಾಗುಣೈಃ** ತನ್ನ ಅಧೀನವಾದ ಪ್ರಕೃತಿಯ ಸತ್ತ್ವಾದಿಗುಣಗಳಿಂದ ಅಥವಾ **ಆತ್ಮನಃ** ತನ್ನ **ಮಾಯಯಾ** ಇಚ್ಛೆಯಿಂದ **ಗುಣೈಃ** ಅಪ್ರಧಾನರಾದ ಬ್ರಹ್ಮಾದಿಗಳಿಂದ ಅವರ ಪ್ರಾರ್ಥನೆಯಂತೆ **ವಿಶ್ವಂ** ಜಗತ್ತನ್ನು **ಸೃಜತೇ** ಸೃಷ್ಟಿಸುವನೋ **ಆತ್ಮಾನಂ** ತನ್ನನ್ನು **ಸೃಜತಿ** ಅವತಾರಗಳಿಂದ ವ್ಯಕ್ತಗೊಳಿಸುವನೋ **ಏಷಃ** ಈ **ನಿತ್ಯಃ** ಶಾಶ್ವತನಾದ **ಅವ್ಯಯಃ** ಚತುರ್ವಿಧ ನಾಶರಹಿತನಾದ **ಸೂಕ್ಷ್ಮಃ** ಅತ್ಯಂತಸೂಕ್ಷ್ಮನಾದ **ಏಕಃ** ಮುಖ್ಯನಾದ **ಸ್ವದೃಕ್** ಯಾವಾಗಲೂ ತನ್ನನ್ನು ತಿಳಿದುಕೊಂಡಿರುವ **ಪ್ರಭುಃ** ಅತ್ಯಂತ ಸಮರ್ಥನಾದ ಶ್ರೀಹರಿಯು **ಸರ್ವಾಶ್ರಯಃ** ಎಲ್ಲರಿಗೂ ಆಶ್ರಯನು.

ಎಲ್ಲರೊಡನೆ ಎಲ್ಲ ಕಾಲದಲ್ಲಿ ಸಂಬಂಧ ಉಳ್ಳವನೆಂದರ್ಥ. ಅನಿತ್ಯನಾದರೆ ನಿತ್ಯಸಂಬಂಧವು ಹೇಗೆ ಎಂಬ ಶಂಕೆಯನ್ನು ನಿತ್ಯಪದದಿಂದ ಪರಿಹರಿಸಿರುವರು. ಅವ್ಯಯವೆಂದರೆ ನಾಶರಹಿತ. ಧ್ವಂಸವೂ ನಾಶರಹಿತ ಆದರೆ ಉತ್ಪತ್ತಿವುಳ್ಳದ್ದು ಹಾಗಲ್ಲವೆಂದು ತಿಳಿಸಲು ನಿತ್ಯವೆಂದಿದ್ದಾರೆ. ಪ್ರಾಗಭಾವಾಪ್ರತಿಯೋಗಿ ಎಂದರ್ಥ.

ಅನಾದಿ ಎಂದು ಭಾವ. ಅವನೇಕೆ ಕಾಣುತ್ತಿಲ್ಲವೆಂದರೆ ಸೂಕ್ಷ್ಮನೆಂದಿರುವರು. ಏಕಃ ಸದಾ ಅವಿಯೋಗಿಯಾಗಿದ್ದರೂ ರಮೆಯನ್ನು ವಿಯುಕ್ತಳಂತೆ ಮಾಡುವನೋ ಆಗ ಏಕನೆನಿಸುತ್ತಾನೆ. ಆದ್ದರಿಂದ ಏಕನೆಂದು ತಿಳಿಯಬೇಕು. ಅವ್ಯಯಃ ನ ವ್ಯೇತಿ ಜೀವಂ ವಿಹಾಯ ನ ಗಚ್ಛತೀತಿ ಅವ್ಯಯಃ ಜೀವನನ್ನು ಬಿಟ್ಟು ಹೋಗುವುದಿಲ್ಲ. ಅಂದರೆ ನಿತ್ಯ ಸಂಬಂಧ ಉಳ್ಳವನೆಂದರ್ಥ. ಇದನ್ನೇ ಬೃಹದ್ಭಾಷ್ಯದಲ್ಲಿ ಹೀಗೆ ಹೇಳಿದೆ 'ವಿದ್ಯಮಾನಾಮಪಿ ಸದಾ ಭೋಗಾರ್ಥಂ ಪುರುಷೋತ್ತಮಃ । ನಿತ್ಯತ್ವೇಽಪ್ಯುಭಯೋಃ ದೇವೋ ವಿಯುಕ್ತಸ್ತು ಯದಾ ತದಾ । ಏಕ ಇತ್ಯುಚ್ಯತೇ' ಮುಂತಾಗಿ ಇಬ್ಬರೂ ನಿತ್ಯರಾದರೂ ಯಾವಾಗ ಶ್ರೀಹರಿಯು ಯಾವಾಗಲೂ ಇರುವ ಲಕ್ಷ್ಮೀದೇವಿಯಿಂದ ಭೋಗಕ್ಕಾಗಿ ವಿಯುಕ್ತನಾಗುವನೋ ಆಗ ಏಕನೆನಿಸುತ್ತಾನೆ ಎಂದು ಭಾವ. ಶ್ರೀಹರಿಗೂ ಒಬ್ಬ ಆಶ್ರಯನಿದ್ದರೆ ಅವನು ಅವನನ್ನು ತಿಳಿಯಬಹುದಲ್ಲ ಎಂದರೆ ಸರ್ವಾಶ್ರಯನೆಂದು ಹೇಳಿರುವರು. ಎಲ್ಲರಿಗೂ ಅವನೇ ಆಶ್ರಯ. ಅವನಿಗಾರೂ ಆಶ್ರಯನಿಲ್ಲ. ಜೀವರಿಗೆ ತಿಳಿದಿಲ್ಲವೆಂದರೆ ಅವನು ಇಲ್ಲವೆ ಇಲ್ಲ ಎನ್ನಬಾರದೇಕೆ ಎಂದರೆ ಸ್ವದೃಕ್ ಎಂದಿರುವರು. 'ಆತ್ಮಾನಂ ವೇದ ಸಃ ಸ್ವಯಮ್' ಎಂದಿರುವದರಿಂದ ಈಶ್ವರಜ್ಞಾನವಿಷಯನಾದ್ದರಿಂದ ಇಲ್ಲವೆನ್ನಲಾಗದು. ವಸ್ತು ಇರಬೇಕಾದರೆ ನಾವೇ ತಿಳಿಯಬೇಕಿಲ್ಲವಷ್ಟೇ.

ಜೀವರನ್ನು ಸೃಷ್ಟಿಸುವನು, ತನ್ನನ್ನು ವ್ಯಕ್ತಗೊಳಿಸುವನು ಎಂದು ಎರಡರ್ಥ ಮಾಡಲು ಕಾರಣವೇನು ಎಂದರೆ 'ಪ್ರಾದುರ್ಭಾವತಯಾ ಯೇ ಚ ತದನ್ಯಾನ್ ಜಾನತೇ ವಿಭೋಃ । ತೇಽಪಿ ಯಾಂತಿ ತಮೋ ಘೋರಂ ತಸ್ಮಾನ್ನೈವಂ ವಿದೋ ವಿದುಃ । ಎಂದಾರಂಭಿಸಿ 'ಪ್ರಾದುರ್ಭಾವಾಃ ಪ್ರಕೀರ್ತಿತಾಃ' ಎಂಬಲ್ಲಿ ವರೆಗೆ ಬೃಹದ್ಭಾಷ್ಯದಲ್ಲಿ ಹೇಳಿದ್ದನ್ನು ತಿಳಿಯಬೇಕು.

ಪರಮಾತ್ಮನಿಗೆ ಜನ್ಮ ಹೇಳಿದರೆ ಅನೇಕ ಪ್ರಮಾಣಗಳ ವಿರೋಧ ಬರುವದು. ಜೀವನಿಗೆ ಪ್ರಾದುರ್ಭಾವ ಹೇಳಿದರೆ ಭಗವಂತನಿಂದ ಭಿನ್ನರಾದವರನ್ನು ಅವನ ಅವತಾರವೆಂದು ತಿಳಿದವನಿಗೆ ತಮಸ್ಸಾಗುವದೆಂದು ಹೇಳಿರುವದರಿಂದ ಅನರ್ಥವಾಗುವದು. ಆದ್ದರಿಂದ ಎರಡರ್ಥ ಮಾಡಲೇಬೇಕು.

ಈ ಶ್ಲೋಕದಲ್ಲಿ ಏತಚ್ಛಬ್ದದಿಂದ ಅವ್ಯವಹಿತ ಜೀವ ಪರಾಮರ್ಶ ಎಂದು ತೋರುವದು. ಅಪದ್ಧ ಪರಾಮರ್ಶ ಪ್ರತೀತಿ ನಿವಾರಿಸಲು ಸ್ವಲ್ಪ ಅನುವಾದ ಮಾಡಿ ಪ್ರಮಾಣ ಉದಾಹರಿಸುವರು.

ತಾತ್ಪರ್ಯ

**ಏಷ ನಿತ್ಯೋಽವ್ಯಯಃ । ಅನಿತ್ಯಸಂಬಂಧಯುತಾಃ ಪಿತ್ರಾದ್ಯಾ ನಿತ್ಯಯುಗ್ ಹರಿಃ' ಇತಿ ಚ । ಆತ್ಮಾನಂ ಚ ಅವತಾರರೂಪೇಣ ಸೃಜತೇ ।**

ಶ್ರೀಹರಿಯು ನಿತ್ಯನು. ಅನಾದಿಯು. ಚತುರ್ವಿಧನಾಶ ರಹಿತನು. ತಂದೆ ಮುಂತಾದವರು ಅನಿತ್ಯವಾದ ದೇಹ ಸಂಬಂಧವೇನಿದೆಯೋ ಆ ದೇಹಸಂಬಂಧದಿಂದ ಕೂಡಿದವರು. ಆದ್ದರಿಂದ ಅನಿತ್ಯವಾದ ಸಂಬಂಧವುಳ್ಳವರು. ಶ್ರೀಹರಿಯು ನಿತ್ಯ ಸಂಬಂಧವುಳ್ಳವನು. ತನ್ನನ್ನು ಮತ್ಸ್ಯಾದಿರೂಪದಿಂದ ಪ್ರಾದುರ್ಭಾವಗೊಳಿಸುವನು ಎಂದು ಭಾವ. ಆ ಅವತಾರಗಳು ಅಂಶಿಯಿಂದ ವಿಸದೃಶಗಳಲ್ಲ ಎಂದು 'ಸರ್ವೈಃ ಗುಣೈಃ ಪೂರ್ತಿರಪಿ ಮತ್ಸ್ಯಾದಿರೂಪಿಣಃ' ಎಂದು ವೊದಲು ಮಾಡಿ 'ಸರ್ವಾವತಾರರೂಪಾಣಾಮಪಿ ಚಿತ್ಸುಖರೂಪತಾ' ಎಂಬಲ್ಲಿವರೆಗೆ ಬೃಹದ್ಭಾಷ್ಯದಲ್ಲಿ ಇದೆ. ॥೯॥

ಪ್ರಿಯರ ಜೊತೆಗೆ ಸದಾ ಸಂಬಂಧವು ಅಪ್ರಿಯರ ಜೊತೆಗೆ ಇಲ್ಲ ಕಾರಣ ಶ್ರೀಹರಿಯ ಸಂಬಂಧ ನಿತ್ಯವೆಂಬುದು ಅಸಂಬದ್ಧ ಮಾತು ಎಂದರೆ ಹೇಳುವರು-

ಭಗವಂತನು ಸ್ವದೃಕ್ ಎಂದು ಹೇಳಿದ್ದು ಸರಿಯಲ್ಲ. ಹಾಗಿದ್ದಲ್ಲಿ ಸರ್ವಜಗತ್ಸ್ರಷ್ಟೃತ್ವವು ಕೂಡುವದಿಲ್ಲ. ಸರ್ವಜ್ಞನಾದವನು ತನಗೆ ಪ್ರತಿಕೂಲರಾದ ದೈತ್ಯಾದಿಗಳನ್ನು ಸೃಷ್ಟಿಸುವನು ಎಂಬುದು ಯುಕ್ತವಲ್ಲ ಎಂದರೆ ಹೇಳುವರು. ಹೀಗೂ ಅವತಾರಿಕೆ ಕೊಡಬಹುದು.

**ನ ಹ್ಯಸ್ಯಾತಿಪ್ರಿಯಃ ಕಶ್ಚಿನ್ನಾಪ್ರಿಯಃ ಸ್ವಃ ಪರೋಽಪಿ ವಾ ।**
**ಏಕಃ ಸರ್ವಧಿಯಾಂ ದ್ರಷ್ಟಾ ಕರ್ತೄಣಾಂ ಗುಣದೋಷಯೋಃ ॥೧೦॥**

**ಅಸ್ಯ** ಶ್ರೀಹರಿಗೆ **ಕಶ್ಚಿತ್** ಯಾವನೊಬ್ಬನೂ **ಅತಿಪ್ರಿಯಃ** ತನ್ನ ಯೋಗ್ಯತೆಗೆ ಮೀರಿ ಪ್ರಿಯನಾದವನು **ನ ಹಿ** ಇಲ್ಲ. **ವಾ** ಮತ್ತು **ಅಪ್ರಿಯಃ** ತನ್ನ ಯೋಗ್ಯತೆಗೆ ಮೀರಿ ಅತಿ ಅಪ್ರಿಯನೂ **ನ ಹಿ** ಇಲ್ಲ. **ಸ್ವಃ** ತನ್ನವನು **ಪರಃ ಅಪಿ** ತನ್ನವನಲ್ಲದವನು ಯಾರೂ **ನ ಹಿ** ಇಲ್ಲ ಏಕೆಂದರೆ **ಗುಣದೋಷಯೋಃ** ಒಳ್ಳೆಯದು ಕೆಟ್ಟದ್ದು ಇವುಗಳ **ಕರ್ತೄಣಾಂ** ಮಾಡುವ ಸ್ತ್ರೀ-ಪುರುಷರ **ಸರ್ವಧಿಯಾಂ** ಎಲ್ಲ ಬುದ್ಧಿಗಳ **ದ್ರಷ್ಟಾ** ಸಾಕ್ಷಿಯಾದ ಶ್ರೀಹರಿಯು **ಏಕಃ** ಏಕಪ್ರಕಾರನು ಸರ್ವಸಮನು ಒಬ್ಬನೇ ಅಂತಹವರು ಮತ್ತೊಬ್ಬರಿಲ್ಲ.

ಎಲ್ಲರ ಪುಣ್ಯ-ಪಾಪಗಳಿಗೆ ಸಾಕ್ಷಿಯಾದ್ದರಿಂದ ಅದಕ್ಕನುಸಾರವಾಗಿ ಫಲ ಕೊಡುವನಾದ್ದರಿಂದ ಶ್ರೀಹರಿಗೆ ಅತಿಪ್ರಿಯರಾಗಲಿ ಇಲ್ಲ. ಇಂತಹವನು ಮತ್ತೊಬ್ಬನಿದ್ದರೆ ಅವನ ಹೆದರಿಕೆಯಿಂದ ಯಾರಾದರೊಬ್ಬರಲ್ಲಿ ಅತಿಪ್ರೀತಿ ಮಾಡಬಹುದಲ್ಲ ಎಂದರೆ ಅದಕ್ಕವಕಾಶವಿಲ್ಲ ಎಂಬುದನ್ನು ಏಕಃ ಎಂಬುದರಿಂದ ತಿಳಿಸಿರುವರು. ಸರ್ವ ಸಮಾನನಾದ ಶ್ರೀಹರಿಗೆ ಶತ್ರು-ಮಿತ್ರರೆಂಬ ಭಾವನೆ ಇಲ್ಲವಾದರೂ ಜೀವರ ಅನಾದಿಯೋಗ್ಯತೆ ಕರ್ಮಾನುಸಾರ ಅವರವರಿಗೆ ಫಲ ಕೊಡುವದರಿಂದ ಕಂಸನು ಶತ್ರು ಪಾಂಡವರು ಮಿತ್ರರು ಮುಂತಾದ ವ್ಯವಹಾರವು ಯುಕ್ತವೇ.

'ಸ್ವಭಾವತಃ ಪ್ರಿಯತ್ವಾತ್ತು ಸದಾ ದೇವಪ್ರಿಯೋ ಹರಿಃ । ಅಪ್ರಿಯಶ್ಚಾಸುರಾಣಾಂ ಸ ಸ್ವಭಾವಾತ್ತೂಭಯಂ ನೃಣಾಮ್ । 'ದೇಶಕಾಲೌ ಗುಣಾಂಶ್ಚೈವ' ಎಂದಾರಂಭಿಸಿ 'ಅತಃ ತದಿಷ್ಟಂ ಕೃಷ್ಣಸ್ಯ ಬ್ರಹ್ಮಸೂತ್ರ ಕೃತೋ ವಿಭೋಃ । ಇತಿ ತಂತ್ರನಿರ್ಣಯೇ' ಎಂಬಲ್ಲಿವರೆಗೆ ಇದನ್ನೇ ಸಪ್ತಮಸ್ಕಂಧ ತಾತ್ಪರ್ಯದಲ್ಲಿ ಹೇಳಿದ್ದಾರೆ.

ದೇವತೆಗಳು ಸ್ವಾಭಾವಿಕವಾಗಿ ಹರಿಯಲ್ಲಿ ಭಕ್ತಿ ಮಾಡುವದರಿಂದ ಹರಿಯು ದೇವಪ್ರಿಯನಾಗಿದ್ದಾನೆ. ಅಸುರರು ಸ್ವಭಾವ ದ್ವೇಷಿಗಳಾದ್ದರಿಂದ ಅವರಿಗೆ ಅಪ್ರಿಯನಾಗಿದ್ದಾನೆ. ಮನುಷ್ಯರು ಉಭಯಸ್ವಭಾವದವರಾದ್ದರಿಂದ ಮನುಷ್ಯರಿಗೆ ಪ್ರಿಯಾಪ್ರಿಯನಾಗಿದ್ದಾನೆ. ಈ ರೀತಿ ಯೋಗ್ಯತಾ ಕರ್ಮಾನುಗುಣ ಫಲದಾತೃತ್ವರೂಪ ವೈಷಮ್ಯ ಸೂತ್ರಕಾರರಿಗೆ ಇಷ್ಟವೇ ಎಂದು ಭಾವ ।।೧೦।।

ಓಂ ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್' ಎಂದಿದೆ.

ಭಗವಂತನ ಜಗತ್ಕರ್ತೃತ್ವ ಎಂದರೆ ಕರ್ಮಫಲೋಪಭೋಗ ಬರಬೇಕಾಗುವದು ಎಂದರೆ ಹೇಳುವರು. ಶ್ರೀಹರಿಯು ಸಾಕ್ಷಿ ಎಂಬುದನ್ನು ಸ್ಪಷ್ಟಪಡಿಸುವರು-

**ನಾದತ್ತ ಆತ್ಮಾ ದ್ವಿಗುಣಂ ನ ದೋಷಂ ನ ಕ್ರಿಯಾಫಲಮ್ ।**
**ಉದಾಸೀನ ಇವಾಸೀನಃ ಪರಾವರದೃಗೀಶ್ವರಃ ।।೧೧।।**

**ಹಿ** ಯಾವ ಕಾರಣ **ಆತ್ಮಾ** ಪರಮಾತ್ಮನು **ಉದಾಸೀನಃ ಇವ** ಉತ್ತಮನಾಗಿದ್ದುಕೊಂಡೇ **ಆಸೀನಃ** ಆಯಾ ವಸ್ತುಗಳಲ್ಲಿ ಒಳಗೂ ಹೊರಗೂ ಇದ್ದುಕೊಂಡು ಪರಾವರದೃಕ್ ಉತ್ತಮಾಧಮ ಜಗತ್ತನ್ನು ನೋಡುತ್ತಿರುವನೋ ಪರಾಪರ ಎಂಬ ಪಾಠದಲ್ಲಿ ಅತೀತ

ಅನಾಗತ ಕಳೆದ ಮುಂದೆ ಬರುವ ಜಗತ್ತನ್ನು ನೋಡುವನೋ **ಈಶ್ವರಃ** ಸರ್ವನಿಯಾಮಕನೋ ಆ ಕಾರಣದಿಂದ **ಗುಣಂ** ಶುಭ ವಿಷಯವನ್ನು **ನ ಆದತ್ತೇ** ಅನುಭವಿಸುತ್ತಿಲ್ಲ ಅಂದರೆ ಇತರರಂತೆ ಅದರಿಂದ ವೃದ್ಧಿಯನ್ನು ಹೊಂದುತ್ತಿಲ್ಲವೆಂದರ್ಥ. **ದೋಷಂ** ಅಶುಭವಿಷಯವನ್ನು **ನ ಆದತ್ತೇ** ಸರ್ವಥಾ ಅನುಭವಿಸುತ್ತಿಲ್ಲ. ಪುಣ್ಯ-ಪಾಪ ಲೇಪವಿಲ್ಲವೆಂದರ್ಥ. ಈ ಶ್ಲೋಕದಲ್ಲಿ ಭಗವಂತನಿಗೆ ಗುಣಭೋಕ್ತೃತ್ವ ಇಲ್ಲವೆಂದು ಹೇಳುತ್ತದೆ ಎಂದು ತೋರುತ್ತದೆ. ಅದು ಸರಿಯಲ್ಲ. 'ಓಂ ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್ ಓಂ' ಎಂಬ ಸೂತ್ರ 'ಷಾಡ್ವರ್ಗಿಕಂ ಜಿಘ್ರತಿ ಷಡ್ಗುಣೇಶಃ' ಎಂದು ಪ್ರಮಾಣವಿರುವುದರಿಂದ ವಿರುದ್ಧವಾಗಿದೆ. ಆದ್ದರಿಂದ ಪ್ರಮಾಣದಿಂದಲೇ ಅಭಿಪ್ರಾಯವನ್ನು ತಿಳಿಸುವರು.

ತಾತ್ಪರ್ಯ

**ಭೋಕ್ತಾ ಸದ್ಗುಣಭೋಕ್ತೃತ್ವಾತ್ ನ ಭೋಕ್ತಾ ತದವೃದ್ಧಿತಃ ।**
**ಅಚಿಂತ್ಯಶಕ್ತಿತಸ್ತಚ್ಚ ಯುಜ್ಯತೇ ಪರಮೇಶಿತುಃ' ಇತಿ ಚ ॥**

ಶ್ರೀಹರಿಯು ಶುಭಫಲಭೋಕ್ತವಾದುದರಿಂದ ಭೋಕ್ತನೆಂದು ಆ ಭೋಗದಿಂದ ವೃದ್ಧಿ ಇಲ್ಲದಿರುವದರಿಂದ ಅಭೋಕ್ತನೆಂದೂ ಕರೆಸಿಕೊಳ್ಳುವನು. ಅಚಿಂತ್ಯ ಶಕ್ತಿಯಿರುವದರಿಂದ ಒಂದೇ ವಸ್ತುವಿನಲ್ಲಿರುವ ಶುಭಭೋಗ ಮತ್ತು ಅಶುಭ ಅಭೋಗ ಎರಡೂ ಯುಕ್ತವಾಗುವದು. ಅಚಿಂತ್ಯಶಕ್ತಿ ಅವನಿಗೆ ಏಕೆ ಎಂದರೆ ಪರಮೇಶ್ವರನಾದ್ದರಿಂದ ಅಥವಾ ಅಚಿಂತ್ಯಶಕ್ತಿ ಇರುವದರಿಂದ ಪರಮೇಶ್ವರತ್ವವೆಂದೂ ಹೇಳಬಹುದು.

ಕ್ರಿಯಾಫಲವು ನಶ್ವರವಾಗಿರುವುದರಿಂದ ಅದನ್ನು ಭೋಗಿಸುವದಿಲ್ಲ. ಹಾಗಾದರೆ ಭಗವಂತ ಇರುವದಾದರೂ ಹೇಗೆ ಎಂದರೆ **ಉದಾಸೀನ ಇವ** ಎಂದಿರುವರು. ಇದನ್ನೇ ಗೀತಾಭಾಷ್ಯ-ಪ್ರಮೇಯದೀಪಿಕಾಗಳಲ್ಲಿ ಹೇಳಿದೆ. 'ಉದಾಸೀನವತ್ ನ ತೂದಾಸೀನಃ । ತದರ್ಥಮಾಹ- ಅಸಕ್ತಮಿತಿ ॥ (ಅಸಕ್ತಂ ಸರ್ವಕರ್ಮಸು) ಯಸ್ಯ ಅಸಕ್ತ್ಯೈವ ಸರ್ವಕರ್ಮಶಕ್ತಿಃ ಕುತಃ ತಸ್ಯ ಕರ್ಮಬಂಧಃ ಇತಿ ಭಾವಃ । 'ನ ಕರ್ಮಣಾ ವರ್ಧತೇ ನೋ ಕನಿಯಾನ್' ಇತಿ ಹಿ ಶ್ರುತಿಃ । ಯಃ ಕರ್ಮಾಽಪಿ ನಿಯಾಮಯತಿ ಕಥಂ ಚ ತನ್ನಿಬಧ್ನಾತಿ'




ಯಾವ ಕಾಲದಲ್ಲಿಯೂ ಫಲಾಸಕ್ತಿಯಿಲ್ಲದೆ ಕಾರ್ಯ ಮಾಡುವದರಿಂದ ಅವನಿಗೆ ಕರ್ಮಬಂಧವಿಲ್ಲ. ಯಾವನು ಕರ್ಮಗಳಿಗೂ ನಿಯಾಮಕನೋ ಅವನನ್ನು ಕರ್ಮಗಳು ಹೇಗೆ ಬಂಧಿಸುವವು?

**ಪ್ರಮೇಯದೀಪಿಕಾ-** ಉದಾಸೀನನೆಂದಾದರೆ ಪ್ರಕೃತಿಯು ತಾನೇ ಪ್ರಸವಿಸುವಳೇನು ಎಂದರೆ **ಮಯಾಧ್ಯಕ್ಷೇಣ** ಎಂದು ಹೇಳುವರು. ಪ್ರಕೃತಿಯನ್ನೂ ಸೃಷ್ಟಿಸಿದವನು ನಾನೇ ಎಂದು ಹೇಳಿರುವನು. 'ಸ್ವತಃ ಕರ್ತೃತ್ವೇ ಕಥಮುದಾಸೀನತ್ವ-ಮುಚ್ಯತೇ ಇತಿ ಚೇನ್ನ । ವತಿನಾ ತಸ್ಯ ನಿಷಿದ್ಧತ್ವಾತ್' ಎಂದಾರಂಭಿಸಿ ತದಜ್ಞಾತ್ವಾ ಕ್ರಿಯಾಭಾವ ಏವ ಉಕ್ತಃ ಇತಿ ಮತ್ವಾ ಶಂಕಿತಂ' ಎಂಬಲ್ಲಿ ವರೆಗೆ ಹೇಳಿರುವರು.

೯ ನೇ ಶ್ಲೋಕ- ಅಸಕ್ತನಾಗಿ ಅನಾಯಾಸವಾಗಿ ಕರ್ಮ ಮಾಡುವನನ್ನು ಕರ್ಮಗಳು ಬಂಧಿಸುವದಿಲ್ಲ. ಉದಾಸೀನ ಎಂದರೆ ಅಸಕ್ತ ಎಂಬ ಅರ್ಥವೆಂದು ಕೃಷ್ಣನೇ ಹೇಳಿರುವನು. ಆದರೂ ಅದನ್ನು ತಿಳಿಯದೆ ಕ್ರಿಯೆಗಳನ್ನೇ ಮಾಡುವದಿಲ್ಲವೆಂದು ತಿಳಿದು ಶಂಕಿಸಿದ್ದಕ್ಕೆ ಉತ್ತರ ಹೇಳಲು ೧೦ನೇ ಶ್ಲೋಕದಲ್ಲಿ 'ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ' ಎಂದು ಹೇಳಿದೆ. ಹಿಂದೆ 'ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ' ಎಂದು ಹೇಳಿದೆ. ಈಗ ಉದಾಸೀನ ಎಂದು ನಿಷ್ಕ್ರಿಯತ್ವವನ್ನು ಹೇಳುತ್ತಿದೆ. ಹಾಗಾದರೆ ಪ್ರಕೃತಿಯೇ ಸೃಷ್ಟಿಸುತ್ತದೆ. ನಿನ್ನಲ್ಲಿ ಉಪಚಾರ ಮಾತ್ರ ಎಂದಾಯಿತು ಎಂಬ ಶಂಕೆಗೆ ಉತ್ತರ, ಈ ವಾಕ್ಯ. ಅಧ್ಯಕ್ಷೇಣ ಎಂಬುದರಿಂದ ಪ್ರಕೃತಿಯ ಸೃಷ್ಟಿಯನ್ನು ನೋಡುವವನು ನಾನೇ ಎಂದು ಹೇಳುತ್ತಾ ತೃತೀಯಾದಿಂದ ಪ್ರಯೋಜಕ ಕರ್ತೃವಾದ್ದರಿಂದ ಪ್ರಯೋಜಕತ್ವವು ದರ್ಶನವನ್ನು ಹೇಳಿದ್ದು. ಇಲ್ಲವಾದರೆ ತೃತೀಯಾ ವ್ಯರ್ಥ. ಪ್ರಯೋಜಕತ್ವವನ್ನು 'ಯತಃ ಪ್ರಸೂತಾ ಜಗತಃ ಪ್ರಸೂತಿಃ' ಎಂಬ ಶ್ರುತಿಯು ಹೇಳುತ್ತದೆ.

ಹೀಗೆ ಮಹಾಮಹಿಮನಾಗಿದ್ದರೂ ಶ್ರೀಹರಿಯು ನಿತ್ಯವೂ ಜೀವನೊಂದಿಗೆ ಸಂಬದ್ಧನಾಗಿರುವದರಿಂದ ಅವನೇ ತಂದೆ, ಮಗ, ಸ್ನೇಹಿತ, ಎಲ್ಲ ರೀತಿಯಲ್ಲಿ ಸೇವಿಸಲ್ಪಡಬೇಕಾದವನು. ನಿಮ್ಮ ನಮ್ಮ ಸಂಬಂಧವು ಈಗ ಇಲ್ಲವೆಂದು ದುಃಖಿಸಬೇಕಿಲ್ಲವೆಂದು ಈ ಪ್ರಕರಣದ ಅಭಿಪ್ರಾಯ. ।।೧೧।।

ಜೀವನೇನು ಬಹುಕಾಲ ಶರೀರ ಪ್ರವೇಶ ಮಾಡಿದನೇ? ಅಥವಾ ಬೇಗನೆ ಹೊರಟು ಹೋದನೇ? ಎಂಬ ರಾಜನ 'ಚೇತೋನಿಕೇತಂ' ಮನಸ್ಸಿನಲ್ಲಿ ಮನೆ ಮಾಡಿದ ಸಂಶಯವನ್ನು ಪರಿಹರಿಸುವರು-

**ಶ್ರೀಶುಕ ಉವಾಚ –**

**ಇತ್ಯುದೀರ್ಯ ಗತೋ ಜೀವೋ ಜ್ಞಾತಯಸ್ತಸ್ಯ ತೇ ತದಾ ।**
**ವಿಸ್ಮಿತಾ ಮುಮುಚುಃ ಶೋಕಂ ಛಿತ್ತ್ವಾ ತ್ಮಸ್ನೇಹಶೃಂಖಲಾಮ್ ॥೧೨॥**

**ಜೀವಃ** ಋಷಿಗಳ ಯೋಗಸಾಮರ್ಥ್ಯದಿಂದ ಮರಳಿ ಬಂದಿದ್ದ ಆ ಜೀವನು **ಇತಿ ಉದೀರ್ಯ** ಮೇಲೆ ಹೇಳಿದಂತೆ ಮಾತನಾಡಿ **ಗತಃ** ಹೊರಟು ಹೋದನು. **ತದಾ** ಆಗ **ತಸ್ಯ** ಆ ಜೀವನ **ತೇ ಜ್ಞಾತಯಃ** ಆ ಜನ್ಮದ ದೇಹಸಂಬಂಧಿಗಳು **ವಿಸ್ಮಿತಾಃ** ಆಶ್ಚರ್ಯಚಕಿತರಾಗಿ **ಆತ್ಮಸ್ನೇಹಶೃಂಖಲಾಂ** ತಮಗೆ ಆ ಮಗುವಿನಲ್ಲಿದ್ದ ಸ್ನೇಹವೆಂಬ ಸರಪಳಿಯನ್ನು **ಛಿತ್ತ್ವಾ** ಕತ್ತರಿಸಿ **ಶೋಕಂ** ದುಃಖವನ್ನು **ಮುಮುಚುಃ** ಬಿಟ್ಟರು.

**ಸ್ನೇಹಂ** ಎಂಬ ಪಾಠದಲ್ಲಿ ಅದರ ಕಾರ್ಯವಾದ ಶೋಕವನ್ನು ಎಂದರ್ಥ ಮಾಡಬೇಕು. ಶ್ರೀಹರಿಯ ಇಚ್ಛೆ ಅದ್ಭುತ ಎಂದು ತಿಳಿದು ಆಶ್ಚರ್ಯ ಪಟ್ಟರು. ॥೧೨॥

**ನಿರ್ಹೃತ್ಯ ಜ್ಞಾತಯೋ ಜ್ಞಾತೇರ್ದೇಹಂ ಕೃತ್ವೋಚಿತಾಃ ಕ್ರಿಯಾಃ ।**
**ತತ್ಯಜುರ್ದುಸ್ತ್ಯಜಂ ಸ್ನೇಹಂ ಶೋಕಮೋಹಭಯಾರ್ತಿದಮ್ ॥೧೩॥**

**ಜ್ಞಾತಯಃ** ಬಂಧುಗಳು **ಜ್ಞಾತೇಃ** ಬಂಧುವಾದ ಅವನ **ದೇಹಂ** ಶರೀರವನ್ನು **ನಿರ್ಹೃತ್ಯ** ಸುಟ್ಟು **ಉಚಿತಾಃ ಕ್ರಿಯಾಃ ಕೃತ್ವಾ** ಅನುಪನೀತನಿಗೆ ಯೋಗ್ಯವಾದ ಕರ್ಮಗಳನ್ನು ಮಾಡಿ (ಮರಣ ಕಾಲದಲ್ಲಿ ಮಾಡಬೇಕಾದ ಶ್ರಾದ್ಧಾದಿಗಳನ್ನು) **ಶೋಕಮೋಹಭಯಾರ್ತಿದಂ** ಶೋಕ-ಮೋಹ-ಭಯ-ದುಃಖವನ್ನುಂಟು ಮಾಡುವ ಆದರೆ **ದುಸ್ತ್ಯಜಂ** ಸಾಮಾನ್ಯವಾಗಿ ಬಿಡಲಾಗದ **ಸ್ನೇಹಂ** ಪ್ರೀತಿಯನ್ನು **ತತ್ಯಜುಃ** ಬಿಟ್ಟರು.

ಸ್ಮಶಾನವೈರಾಗ್ಯ ಎಲ್ಲರಿಗೂ ಬರುವದು. ಮನೆಗೆ ಹೋದ ಮೇಲೂ ಮತ್ತೆ ವಿವೇಕಿಗಳಾದವರು ದುಃಖಿಸಿದರೇ? ಎಂದರೆ ಹಾಗೇನಿಲ್ಲ. ಎಂದು ತಿಳಿಸಲು **ದುಸ್ತ್ಯಜಂ ತತ್ಯಜುಃ** ಎಂದು ಮತ್ತೆ ಹೇಳಿದ್ದು ಎಂದು ತಿಳಿಯಬೇಕು.॥೧೩॥

**ಬಾಲಘ್ನ್ಯೋ ವ್ರೀಡಿತಾಸ್ತತ್ರ ಬಾಲಹತ್ಯಾಹತಪ್ರಭಾಃ ।**
**ಬಾಲಹತ್ಯಾವ್ರತಂ ಚೇರುರ್ಬ್ರಾಹ್ಮಣೈರ್ಯನ್ನಿರೂಪಿತಮ್ ।**
**ಯಮುನಾಯಾಂ ಮಹಾರಾಜ ಸ್ಮರಂತ್ಯೋ ದ್ವಿಜಭಾಷಿತಮ್ ॥೧೪॥**

**ಮಹಾರಾಜ** ಪರೀಕ್ಷಿತನೇ **ತತ್ರ**, ಆ ಕಾಲದಲ್ಲಿ **ವ್ರೀಡಿತಾಃ** ತಾವು ಮಾಡಿದ ಕೆಲಸದಿಂದ ನಾಚಿಕೆಗೊಂಡ **ಬಾಲಹತ್ಯಾಹತಪ್ರಭಾಃ** ಮಗುವನ್ನು ಸಂಹರಿಸಿದ್ದರಿಂದ ಕಳೆಗುಂದಿದ **ಬಾಲಘ್ನ್ಯಃ** ಮಗುವನ್ನು ವಿಷ ಹಾಕಿ ಕೊಂದ ಸವತಿಯರು **ದ್ವಿಜಭಾಷಿತಂ** ಅಂಗಿರಸರು-ನಾರದರು ಹೇಳಿದ ಮಗನು ಸುಖ-ದುಃಖಪ್ರದನು ಎಂಬ ಮಾತನ್ನು **ಸ್ಮರಂತ್ಯಃ** ನೆನೆಯುತ್ತ **ಯತ್** ಯಾವ ವ್ರತವು **ಬ್ರಾಹ್ಮಣೈಃ** ಧರ್ಮವನ್ನರಿತ ಬ್ರಹ್ಮಜ್ಞಾನಿಗಳಿಂದ **ನಿರೂಪಿತಂ** ಶಿಶುಹತ್ಯೆಯ ಪ್ರಾಯಶ್ಚಿತ್ತವಾಗಿ ಹೇಳಲ್ಪಟ್ಟಿತ್ತೋ **ತತ್** ಆ **ಬಾಲಹತ್ಯಾವ್ರತಂ** ಬಾಲಹತ್ಯೆಯಿಂದ ಬಂದ ಪಾಪವನ್ನು ಕಳೆಯುವ ವ್ರತವನ್ನು ಪ್ರಾಯಶ್ಚಿತ್ತವನ್ನು **ಯಮುನಾಯಾಂ** ಯಮುನಾತೀರದಲ್ಲಿ **ಚೇರುಃ** ಪುತ್ರಕಾಮನಾಶೂನ್ಯರಾಗಿ ನಿರ್ಮತ್ಸರರಾಗಿ ಮಾಡಿದರು.

**ಅದ್ವಿಜಭಾಷಿತಂ** ಎಂದೂ ಭೇದ ಮಾಡಿಕೊಳ್ಳಬಹುದು. ಹಲ್ಲು ಇಲ್ಲದ ಮಗುವಿನ ಮಾತನ್ನು ಎಂದು ಅರ್ಥ. 'ದಂತವಿಪ್ರಾಂಡಜಾ ದ್ವಿಜಾಃ' ಎಂದು ಅಮರವಿದೆ.

ಬೃಹದ್ಭಾಷ್ಯದಲ್ಲಿ 'ವಿಷ್ಣೋರ್ಬ್ರಾಹ್ಮಣಜಾತಿಃ ಸನ್ ಬ್ರಹ್ಮಾ ಜಜ್ಞೇ ಚತುರ್ಮುಖಃ' ಎಂದಿರುವದರಿಂದ ದ್ವಿಜಾಭ್ಯಾಂ ಎಂದರೆ ಬ್ರಾಹ್ಮಣರಾದ ಬ್ರಹ್ಮದೇವರ ಮಕ್ಕಳಾದ ಅಂಗಿರಸರು ಮತ್ತು ನಾರದರೆಂಬ ಬ್ರಾಹ್ಮಣರಿಂದ ಎಂದರ್ಥ. ।।೧೪।।

ಚಿತ್ರಕೇತುವು ಮನೆಯಲ್ಲೇ ಉಳಿದನೇ? ವನಕ್ಕೆ ತೆರಳಿದನೇ? ಎಂಬ ಶಂಕೆಯನ್ನು ಪರಿಹರಿಸುವರು-

**ಸ ಇತ್ಥಂ ಪ್ರತಿಬುದ್ಧಾತ್ಮಾ ಚಿತ್ರಕೇತುರ್ದ್ವಿಜೋಕ್ತಿಭಿಃ ।**
**ಗೃಹಾಂಧಕೂಪಾನ್ನಿಷ್ಕ್ರಾಂತಃ ಸರಃಪಂಕಾದಿವ ದ್ವಿಪಃ ।।೧೫।।**

**ಸಃ ಚಿತ್ರಕೇತುಃ** ಆ ಚಿತ್ರಕೇತುವು **ಇತ್ಥಂ** ಈ ರೀತಿಯಾಗಿ **ದ್ವಿಜೋಕ್ತಿಭಿಃ** ನಾರದಾಂಗಿರಸರ ಮಾತುಗಳಿಂದ **ಪ್ರತಿಬುದ್ಧಾತ್ಮಾ** ಜ್ಞಾನವನ್ನು ಪಡೆದ ಮನಸ್ಸುಳ್ಳವನಾಗಿ, ತತ್ತ್ವವನ್ನರಿತವನಾಗಿ **ಸರಃಪಂಕಾತ್** ಸರೋವರದ ಕೆಸರಿನಿಂದ **ದ್ವಿಪ ಇವ** ಆನೆಯಂತೆ **ಗೃಹಾಂಧಕೂಪಾತ್** ಮನೆಯೆಂಬ ಕತ್ತಲೆಯ ಬಾವಿಯಿಂದ **ನಿಷ್ಕ್ರಾಂತಃ** ಹೊರಗೆ ಹೊರಟವನಾಗಿ, ।।೧೫।।

**ಕಾಲಿಂದ್ಯಾಂ ವಿಧಿವತ್ ಸ್ನಾತ್ವಾ ಕೃತಪುಣ್ಯಜಲಕ್ರಿಯಃ ।**
**ಮೌನೇನ ಸಂಯತಪ್ರಾಣೋ ಬ್ರಹ್ಮಪುತ್ರಾವವಂದತ ।।೧೬।।**

**ಕಾಲಿಂದ್ಯಾಂ** ಯಮುನೆಯಲ್ಲಿ **ವಿಧಿವತ್** ಶಾಸ್ತ್ರೋಕ್ತ ಕ್ರಮದಿಂದ **ಸ್ನಾತ್ವಾ** ಸ್ನಾನ ಮಾಡಿ **ಕೃತಪುಣ್ಯಜಲಕ್ರಿಯಃ** ಪುಣ್ಯಕರಗಳಾದ ನೀರಿನಿಂದ ಪಿತೃತರ್ಪಣಾದಿ ಕ್ರಿಯೆಗಳನ್ನು ಮಾಡಿದವನಾಗಿ **ಮೌನೇನ** ಲೌಕಿಕಮಾತುಗಳನ್ನಾಡದೆ **ಸಂಯತಪ್ರಾಣಃ** ಇಂದ್ರಿಯಗಳನ್ನು ನಿಯಮನ ಮಾಡಿಕೊಂಡು **ಬ್ರಹ್ಮಪುತ್ರೌ** ನಾರದ ಮತ್ತು ಅಂಗಿರಸರನ್ನು **ಅವಂದತ** ನಮಸ್ಕರಿಸಿದನು.

ಆನೆಯ ದೃಷ್ಟಾಂತದಿಂದ ಕೆಸರು ತುಂಬಿದ ಸರೋವರಕ್ಕೆ ಸದೃಶವಾದ ವಿಷಯಪೂರ್ಣಗೃಹದಿಂದ ಹೊರ ಹೊರಡುವದು ಧೀರಮತಿಯಾದ ಚಿತ್ರಕೇತುವಿಗೆ ಮಾತ್ರ ಸಾಧ್ಯವೆಂದು ತಿಳಿಸುವರು. ಇಲ್ಲಿ ಪುತ್ರ ಶಬ್ದವು ರೂಢ. 'ಅಕ್ಷ್ಣಂ ಚ ಪುದಿತಿ ಛಿದ್ರಂ ಪುತ್ರಸ್ತತ್ ತ್ರಾಣತೋ ಭವೇತ್' ಎಂದು ಬೃಹದ್ಭಾಷ್ಯದಲ್ಲಿ ಹಾಗೂ 'ಪುನ್ನಾಮನರಕಾತ್ ತ್ರಾತಾ ಪುತ್ರ ಇತ್ಯಭಿಧೀಯತೇ' ಎಂದು ಬೇರೆ ಸ್ಥಳದಲ್ಲಿ ಹೇಳಿದ ನಿರ್ವಚನವು ಬ್ರಹ್ಮದೇವರ ವಿಷಯದಲ್ಲಿ ಅನಿರ್ವಚನೀಯವಾಗಿದೆ. ಕಾರಣ ರೂಢವೆಂದು ತಿಳಿಯಬೇಕು. ॥೧೬॥

ತತ್ಕಾಲಕ್ಕೆ ಉಚಿತವಾದುದನ್ನು ಆಲೋಚಿಸಿ ನಾರದರು ಆಚರಿಸಿದರು. ತದನಂತರ ವಂದನವು ದಂಧನೀಕರಿಸಲ್ಪಟ್ಟಿತೇ ಎಂದರೆ ಹೇಳುವರು-

> **ಅಥ ತಸ್ಮೈ ಪ್ರಪನ್ನಾಯ ಭಕ್ತಾಯ ಪ್ರಯತಾತ್ಮನೇ ।**
> **ಭಗವಾನ್ನಾರದಃ ಪ್ರೀತೋ ವಿದ್ಯಾಮೇತಾಮುವಾಚ ಹ ॥೧೭॥**

**ಅಥ** ಅನಂತರ **ಭಗವಾನ್** ಗುರುವಿನ ಲಕ್ಷಣವುಳ್ಳ **ನಾರದಃ** ನಾರದರು **ಪ್ರಪನ್ನಾಯ** ಶರಣಾಗತನಾದ **ಭಕ್ತಾಯ** ಶ್ರೀಹರಿಯ ಭಕ್ತನಾದ **ಪ್ರಯತಾತ್ಮನೇ** ಮನೋನಿಗ್ರಹವುಳ್ಳ **ತಸ್ಮೈ** ಆ ಚಿತ್ರಕೇತುವಿಗೆ **ಪ್ರೀತಃ ಸನ್** ಪ್ರಸನ್ನರಾಗಿ **ಏತಾಂ ವಿದ್ಯಾಂ ಉವಾಚ ಹ** ಮುಂದೆ ಹೇಳುವ ಸಂಕರ್ಷಣವಿದ್ಯೆಯನ್ನು ಉಪದೇಶ ಮಾಡಿದರು. **ಹ** ವಿದ್ಯೆಯು ಸಂಪೂರ್ಣ ಪ್ರಯೋಜನವನ್ನು ನೀಡಿತು.

**ಪ್ರಪನ್ನಾಯ** ಮುಂತಾದ ವಿಶೇಷಣಗಳಿಂದ ಶಿಷ್ಯನ ಅಧಿಕಾರಸಂಪತ್ತನ್ನು, **ಭಗವಾನ್** ಎಂಬುದರಿಂದ ಗುರುಗಳಿಗಿರಬೇಕಾದ ಗುಣಗಳನ್ನು, **ಪ್ರೀತಃ** ಎಂಬುದರಿಂದ ಗುರುಪ್ರಸಾದವನ್ನು ಹೇಳಿದ್ದರಿಂದ ಅಂಗವೈಕಲ್ಯವಿಲ್ಲದ್ದರಿಂದ ಉಪದೇಶಿಸಿದ ವಿದ್ಯೆಯು ಸಂಪೂರ್ಣ ಫಲಕಾರಿ ಎಂದು ಸೂಚಿಸಿರುವರು. ಅಂಗವಿಕಲವಾದ ವಿದ್ಯೆಯು ಯಥೋಕ್ತ ಫಲದಾಯಕವಲ್ಲ.

**ಗುರುಶಿಷ್ಯಯೋರಯೋಗ್ಯತ್ವಾತ್ ಗುರುವೃತ್ತೇರಪೂರ್ತಿತಃ ।**
**ಅಪ್ರಸಾದಾದ್ಗುರೋರ್ವಿದ್ಯಾ ನ ಯಥೋಕ್ತಫಲಪ್ರದಾ ॥**

ಎಂದು ಪ್ರಮಾಣವು ತಿಳಿಸುವದು.

ಇಷ್ಟು ದಿನ ಚಿತ್ರಕೇತುವು ಅಶುಚಿಯಾಗಿದ್ದ. ಆದ್ದರಿಂದ ಈ ವಿದ್ಯೆಯನ್ನು ನಾರದರು ಉಪದೇಶಿಸಿರಲಿಲ್ಲ. ಹೊರತು ಚಿತ್ರಕೇತು ಅನಧಿಕಾರಿಯಾಗಿದ್ದ ಎಂದಾಗಲೀ ಅಥವಾ ನಾರದರಾದ ತಮಗೆ ಈ ವಿದ್ಯೆಯು ತೋರಿರಲಿಲ್ಲವೆಂದಾಗಲೀ ಅಲ್ಲ.

ಹಿಂದೆ ಈ ಮಂತ್ರೋಪನಿಷತ್ತನ್ನು ನಾನು ಹೇಳುವೆನು ಸ್ವೀಕರಿಸು ಎಂದು ಪ್ರತಿಜ್ಞೆ ಮಾಡಿದ್ದ ಅವಂಧ್ಯಸಂಧಃ ಸಫಲವಾದ ಪ್ರತಿಜ್ಞೆಯುಳ್ಳ ನಾರದರು ಅದನ್ನು ಪೂರ್ಣಗೊಳಿಸಲಾರಂಭಿಸುವರು-

**ನಾರದ ಉವಾಚ –**

**ನಮಸ್ತುಭ್ಯಂ ಭಗವತೇ ವಾಸುದೇವಾಯ ಧೀಮಹಿ ।**
**ಪ್ರದ್ಯುಮ್ನಾಯಾನಿರುದ್ಧಾಯ ನಮಃ ಸಂಕರ್ಷಣಾಯ ಚ ॥೧೮॥**

**ಭಗವತೇ** ಷಡ್ಗುಣಪೂರ್ಣನಾದ **ತುಭ್ಯಂ** ಮನಸ್ಸಿನಲ್ಲಿ ಸನ್ನಿಹಿತನಾಗಿರುವ ಶ್ರೀಹರಿಯೇ ನಿನಗೆ **ನಮಃ** ನಮಸ್ಕಾರವು. **ಧೀಮಹಿ** ಧ್ಯಾನ ಮಾಡುತ್ತೇವೆ **ಚ** ಮತ್ತು **ವಾಸುದೇವಾಯ** ಎಲ್ಲ ಸ್ಥಳದಲ್ಲಿ ವಾಸಿಸುವ ಎಲ್ಲವನ್ನು ತನ್ನಲ್ಲಿಟ್ಟುಕೊಂಡಿರುವ ಕ್ರೀಡಾದಿಗುಣವಿಶಿಷ್ಟನಾದ **ಪ್ರದ್ಯುಮ್ನಾಯ** ಅತಿಶಯ ಪ್ರಕಾಶರೂಪನಾದ **ಅನಿರುದ್ಧಾಯ** ಯಾರಿಂದಲೂ (ವೈರಿಗಳಿಂದಲೂ) ತಡೆಯಲ್ಪಡದಿರುವ, ಪ್ರಯತ್ನ ಉಳ್ಳವರಿಂದ ಮುಖ್ಯಪ್ರಾಣದೇವರ ಸೇವಕರಿಂದ ಹೃದಯದಲ್ಲಿ ಕಟ್ಟಲ್ಪಟ್ಟ (ರುದ್ಧನಾದ) **ಸಂಕರ್ಷಣಾಯ** ಸಮಸ್ತ ಜೀವರಿಗೆ ಅವರವರ ಯೋಗ್ಯತೆಗೆ ತಕ್ಕಂತೆ ಶುಭಾಶುಭ ಫಲಗಳನ್ನು ತಂದುಕೊಡುವ **ತುಭ್ಯಂ ನಮಃ** ನಿನಗೆ ನಮಸ್ಕಾರವು.

**ಭಗವತೇ** ಮುಂತಾದ ವಿಶೇಷಣಗಳು ಆಯಾ ಪ್ರವೃತ್ತಿನಿಮಿತ್ತಗಳಂತೆ ಗುಣಸಾಮಗ್ರಿಯನ್ನು ಸೂಚಿಸುವವು. ಇಲ್ಲಿ ಭಗವತೇ ಎಂಬುದಕ್ಕೆ ಲಕ್ಷ್ಮೀಸಮೇತನಾದ ಜಗತ್ತಿನ ಸೃಷ್ಟ್ಯಾದಿಕರ್ತೃವಾದ ಎಂದೂ ಅರ್ಥ ಮಾಡಬಹುದು.

ಗುಣವಾನ್ ಭಗವಾನೇವ ಸೃಷ್ಟಿಸಂಹಾರರಕ್ಷಕಃ ।
ದ್ವೌ ದ್ವೌ ಗುಣಾವಧಿಷ್ಠಾಯ ಸರ್ಗಾದ್ಯಮಕರೋತ್ ಪ್ರಭುಃ ॥

ಪ್ರದ್ಯುಮ್ನಶ್ಚಾನಿರುದ್ಧಶ್ಚ ಸಂಕರ್ಷಣ ಇತೀರಿತಃ ।
ಭಗವಾನ್ ವಾಸುದೇವೋಽಸೌ ಸೃಷ್ಟ್ಯಾದ್ಯಮಕರೋತ್ ಸ್ವಯಮ್ ॥

ಐಶ್ವರ್ಯವೀರ್ಯವಾನ್ ಸರ್ಗೇ ಪ್ರದ್ಯುಮ್ನಃ ಪ್ರತ್ಯಪದ್ಯತ ।
ತೇಜಃ ಶಕ್ತಿಂ ಸಮಾವಿಶ್ಯ ಅನಿರುದ್ಧೋ ಹ್ಯಪಾಲಯತ್ ॥

ಬಲಜ್ಞಾನೇ ತಥಾ ದ್ವೇ ತು ಸಂಕರ್ಷಣ ಅಧಿಷ್ಠಿತಃ ।
ಅಕರೋದ್ಭಗವಾನೇವ ಸಂಹಾರಂ ಜಗತೋಽಸ್ಯ ಚ ॥

ಏವಂ ಷಡ್ಗುಣಪೂರ್ಣತ್ವಾದಪಿ ಚ ಶ್ರಿಯಃ ।
ಸರ್ಗಾದಿಕಾರಣತ್ವಾಚ್ಚ ಭಗವಾನಿತಿ ಚೋಚ್ಯತೇ ॥ ಇತಿ ಭಾರತೇ

ಎಂದು ಭಾರತದಲ್ಲಿದೆ.

ಸರ್ವತ್ರಾಸೌ ಸಮಸ್ತಂ ಚ ಸ್ವಸ್ಮಿನ್ ವಾಸಯತೇ ಯತಃ ।
ತತಃ ಸ ವಾಸುದೇವೇತಿ ವಿದ್ವದ್ಭಿಃ ಪರಿಪಠ್ಯತೇ ।
ಪ್ರದ್ಯುಮ್ನೋ ದ್ಯುತಿರೂಪತ್ವಾತ್ ವಿಷ್ಣುರೇವ ಪ್ರಕೀರ್ತಿತಃ ॥

ಮುಂತಾದ ಪ್ರಮಾಣಗಳು ಮೇಲೆ ಹೇಳಿದ ಅರ್ಥವನ್ನು ತಿಳಿಸುವವು. ತುಭ್ಯಂ ಎಂದು ಪ್ರತ್ಯಕ್ಷ ನಿರ್ದೇಶ ಮಾಡಿದ್ದರಿಂದ ಮಂತ್ರೋಪನಿಷತ್ತಿನಿಂದ ಶ್ರೀಹರಿಯ ಅಪರೋಕ್ಷವಾಗುವದು. ಇದರಲ್ಲಿ ಸಂದೇಹವಿಲ್ಲವೆಂದು ಸೂಚಿಸುವರು. ಭಗವತೇ ಎಂಬುದಕ್ಕೆ ನಾರಾಯಣನಿಗೆ ಎಂದರ್ಥ ಮಾಡಿ ಐದು ರೂಪ ಉಳ್ಳವನಿಗೆ ಎಂದೂ ಅರ್ಥ ಮಾಡಬಹುದು. ಸಂಕರ್ಷಣ ಶೇಷಾಂತರ್ಗತ ರೂಪ.

ಭಗವಾನ್ ಸರ್ವದೇವೇಭ್ಯೋ ವಿಶಿಷ್ಟೋ ಯತ್ಸದೈವ ಹಿ ।
ರೂಪಮಾಹುಃ ಪಂಚವಿಧಂ ತಸ್ಯ ವಿಷ್ಣೋರ್ಮಹಾತ್ಮನಃ ॥

ಶುಕ್ಲಂ ತು ವಾಸುದೇವಾಖ್ಯಮನಿರುದ್ಧಂ ತು ನೀಲಕಮ್ ।
ಸಂಕರ್ಷಣಂ ಪಿಂಗಲಂ ಚ ಪ್ರದ್ಯುಮ್ನಂ ಹರಿತಂ ಸ್ಮೃತಮ್ ।
ನಾರಾಯಣಂ ಲೋಹಿತಂ ಸ್ಯಾತ್ ಪಂಚರೂಪಾಣ್ಯಜೇ ಹರೌ ॥

ಎಂಬ ಬೃಹದಾರಣ್ಯಕಭಾಷ್ಯದಲ್ಲಿ ಹೇಳಿದ ಅವಾಂತರವಿಶೇಷವನ್ನು ತಿಳಿಯಬೇಕು. 'ವಾಸುದೇವಾಯ ಧೀಮಹಿ' ಎಂಬುದು ವಿಷ್ಣುಗಾಯತ್ರಿಯ ಅನುವಾದವು. ॥೧೮॥

**ನಮೋ ವಿಜ್ಞಾನಮಾತ್ರಾಯ ಪರಮಾನಂದರೂಪಿಣೇ ।**
**ಆತ್ಮಾರಾಮಾಯ ಶಾಂತಾಯ ನಿವೃತ್ತದ್ವೈತದೃಷ್ಟಯೇ ॥೧೯॥**

**ವಿಜ್ಞಾನಮಾತ್ರಾಯ** ಪೂರ್ಣಜ್ಞಾನಸ್ವರೂಪನಾದ, **ಪರಮಾನಂದಮೂರ್ತಯೇ** ನಿರವಧಿಕವಾದ ಆನಂದವೇ ದೇಹವಾಗಿ ಉಳ್ಳ **ಪರಮಾನಂದರೂಪಿಣೇ** ಆನಂದರೂಪನಾದ 'ಸಜ್ಞಾನಾನಂದಶೀರ್ಷೋಽಸೌ ಸಜ್ಞಾನಾನಂದಬಾಹುಕಃ' ಮುಂತಾಗಿ ಪ್ರಮಾಣವಿದೆ. ಅಥವಾ **ಪರಮಾಃ** ಶ್ರೇಷ್ಠರಾದ ಬ್ರಹ್ಮಾದಿಗಳು ಯಾವ ಪರಮಾತ್ಮನ ಅನುಗ್ರಹದಿಂದ ಆನಂದರೂಪರಾಗಿರುವರೋ **ಆತ್ಮಾರಾಮಾಯ** ಸ್ವರಮಣನಾದ **ಶಾಂತಾಯ** ಕೋಪವಿಲ್ಲದ ಪೂರ್ಣಸುಖನಾದ ಅಥವಾ ಸುಖದ ತರತಮಭಾವ ನಿರ್ಣಾಯಕನಾದ **ನಿವೃತ್ತದ್ವೈತದೃಷ್ಟಯೇ** ೧. ತನ್ನ ಅವತಾರಗಳಲ್ಲಿ ಭೇದಜ್ಞಾನವಿಲ್ಲದ ೨. ಅನ್ಯಥಾ ಜ್ಞಾನ (ಭ್ರಮ) ವಿಲ್ಲದ ೩. **ನಿವೃತ್ತದ್ವೈತವೃತ್ತಯೇ** ಎಂಬ ಪಾಠದಲ್ಲಿ ಭ್ರಮಜ್ಞಾನವಿಲ್ಲದೇ ಇರುವವನಾದ ಎಂದು ಅರ್ಥ ೪. ಅವಿದ್ಯೆಯ ಪಂಚಪರ್ವಗಳಿಲ್ಲದ (ಇಲ್ಲಿ ಭ್ರಮವಾಚಕವಾದ ದ್ವೈತಶಬ್ದದಿಂದ ತತ್ಕಾರಣವಾದ ಅವಿದ್ಯಾವನ್ನು ಲಕ್ಷಣಯಾ ಸ್ವೀಕರಿಸಿದೆ. ೫. ಅಶುಭದೃಷ್ಟಿ ಅಥವಾ ಅಶುಭ ವ್ಯಾಪಾರವಾಗಲಿ ಇಲ್ಲದ **ತುಭ್ಯಂ** ನಿನಗೆ **ನಮಃ** ನಮಸ್ಕಾರವು.

**ಭಿನ್ನಸ್ಯಾಭೇದತೋ ದೃಷ್ಟಿರಪಿ ಭೇದದೃಶಿರ್ಮತಾ ।**
**ವಸ್ತುಯಾಥಾತ್ಮತಸ್ತಸ್ಯ ಭಿನ್ನತ್ವಾದಿತಿ ಸೂರಿಭಿಃ ।**

**ಅನ್ಯಥಾಜ್ಞಾನಮೇವಾತೋ ಭೇದಜ್ಞಾನಂ ವಿನಿಂದಿತಮ್ ।**
**ನ ವಿದ್ಯಮಾನಭೇದಸ್ಯ ದರ್ಶನಂ ನಿಂದಿತಂ ಕ್ವಚಿತ್ ॥ ಸ್ಕಾಂದೇ**

**ತಮಸ್ತು ಶಾರ್ವರಂ ಪ್ರೋಕ್ತಂ ಮೋಹಶ್ಚೈವ ವಿಪರ್ಯಯಃ ।**
**ತದಾಗ್ರಹೋ ಮಹಾಮೋಹಃ ತಾಮಿಸ್ರಂ ಕ್ರೋಧ ಉಚ್ಯತೇ ।**
**ನರಕಂ ತ್ವಂಧತಾಮಿಸ್ರಂ ಅವಿದ್ಯಾ ಪಂಚಪರ್ವಿಕಾ ॥ ಭಾರತೇ**

ಎಂದು, ಮತ್ತು ತೃತೀಯಸ್ಕಂಧದಲ್ಲಿ 'ಯೋಽವಿದ್ಯಯಾನುಪಹತೋಽಪಿ ದಶಾರ್ಧವೃತ್ಯಾ' 'ಏಕಂ ತು ಶುಭಮುದ್ದಿಷ್ಟಮಶುಭಂ ದ್ವೈತಮುಚ್ಯತೇ' ಮುಂತಾದ ಪ್ರಮಾಣಗಳು ಮೇಲೆ ಹೇಳಿದ ಅರ್ಥಕ್ಕೆ ಸಾಧಕಗಳು ಎಂದು ತಿಳಿಯಬೇಕು.

**ಆತ್ಮಾನಂದಾನುಭೂತ್ಯೈವ ಸಮ್ಯಕ್‌ತ್ಯಕ್ತೋರ್ಮಯೇ ನಮಃ ।**
**ಹೃಷೀಕೇಶಾಯ ಮಹತೇ ನಮಸ್ತೇಽನಂತಮೂರ್ತಯೇ ॥೨೦॥**

**ಆತ್ಮಾನಂದಾನುಭೂತ್ಯಾ** ಸ್ವರೂಪಾನಂದಾನುಭವವಿರುವದರಿಂದ **ಸಮ್ಯಕ್ ತ್ಯಕ್ತೋರ್ಮಯೇ ತ್ಯಕ್ತಾಃ** ಅನಂಕುರಿತವಾದ (ಹುಟ್ಟದಿರುವ) ಜನ್ಮಾದಿ ಆರು

ಊರ್ಮಿಗಳು ಯಾರಿಂದಲೋ ಅವನು ಅಂದರೆ ಷಡೂರ್ಮಿಗಳನ್ನು ಪರಿಹರಿಸುವ ಅಥವಾ ಷಡೂರ್ಮಿಗಳಿಲ್ಲದ ಎಂದರ್ಥ. 'ಅಶನಾಯಾಪಿಪಾಸೇ ಶೋಕಂ ಮೋಹಂ ಜರಾಂ ಮೃತ್ಯುಂ ಅತ್ಯೇತಿ' ಎಂದು ಹೇಳಿದ ಷಡೂರ್ಮಿಗಳು. ಊರ್ಮಿ ಎಂಬುದು ಇವುಗಳಿಗೆ ಸೈದ್ಧಾಂತಿಕ ಸಂಜ್ಞೆ ಸಂಕೇತ. **ಹೃಷೀಕೇಶಾಯ** ಎಲ್ಲ ಇಂದ್ರಿಯಗಳಿಗೆ ನಿಯಾಮಕನಾದ **ಅನಂತಮೂರ್ತಯೇ** ಅಪರಿಮಿತ ರೂಪವುಳ್ಳ, ಶೇಷಾಂತರ್ಗತ ಆಕಾರನಿಗೆ **ಅನಂತಾ** ಅವನ ಸಾಮರ್ಥ್ಯದಿಂದ ಮಾತ್ರ ಬದ್ಧವಾದ **ಮೂರ್ತಿಃ** ಗಾತ್ರ ಉಳ್ಳ ದಾಮೋದರನಾದ **ತೇ** ನಿನಗೆ **ನಮಃ** ನಮಸ್ಕಾರವು.

ಅಥವಾ **ಹೃಷ್ಟಃ** ಹರ್ಷಕ್ಕೆ ಕಾರಣವಾದ **ಕೇಶಾಃ** ಕೂದಲುಗಳು ಯಾವನಿಗಿವೆಯೋ ಅವನು ಹೃಷೀಕೇಶ. ಅಗ್ನ್ಯಾದಿಗಳಲ್ಲಿದ್ದು ತನ್ನ ಕೇಶಗಳಿಂದ ನಿಯತವಾದ ಅವುಗಳ ಕಿರಣಗಳಿಂದ ಜಗತ್ತಿಗೆ ಜ್ಞಾನ-ಸ್ಥಿತಿಗಳಿಂದ ಸಂತೋಷ ಗೊಳಿಸುವದರಿಂದ ಹೃಷೀಕೇಶ ಎಂದರ್ಥ. ಈ ವಿಷಯವನ್ನು ಮೋಕ್ಷಧರ್ಮವು ಈ ಈ ರೀತಿಯಾಗಿ ತಿಳಿಸುತ್ತದೆ.

**ಸೂರ್ಯಾಚಂದ್ರಮಸೌ ಶಶ್ವತ್ ಕೇಶೈರ್ಮೇ ಅಂಶುಸಂಜ್ಞಿತೈಃ ।**
**ಬೋಧಯನ್ ಸ್ಥಾಪಯಂಶ್ಚೈವ ಜಗದುತ್ಪದ್ಯತೇ ಪೃಥಕ್ ।**

**ಬೋಧನಾತ್ ಸ್ಥಾಪನಾಚ್ಚೈವ ಜಗತೋ ಹರ್ಷಸಂಭವಾತ್ ।**
**ಅಗ್ನೀಷೋಮಕೃತೈರೇಭಿಃ ಕರ್ಮಭಿಃ ಪಾಂಡುನಂದನ ।**
**ಹೃಷಿಕೇಶೋಽಹಮೀಶಾನೋ ವರದೋ ಲೋಕಭಾವನಃ ॥**

ಎಂದು ಹೇಳಿರುವರು. ॥೨೦॥

**ವಚಸ್ಯುಪರತೇ ಪ್ರಾಪ್ಯೋ ಯ ಏಕೋ ಮನಸಾ ಸಹ ।**
**ಅನಾಮರೂಪಚಿನ್ಮಾತ್ರಃ ಸೋಽವ್ಯಾನ್ನಃ ಸದಸತ್ಪರಃ ॥೨೧॥**

**ಯಃ** ಯಾವನು **ಏಕಃ** ಮುಖ್ಯನು ಎಲ್ಲ ಜಗತ್ತಿನಿಂದ ಭಿನ್ನನೂ ಆದವನು **ಮನಸಾ ಸಹ** ಬಾಹ್ಯಮನಸ್ಸಿನ ಜೊತೆಯಲ್ಲಿ **ವಚಸಿ** ವಾಕ್ ಮೊದಲಾದ ಎಲ್ಲ ಇಂದ್ರಿಯಗಳು **ಉಪರತೇ ಸತಿ** ನಷ್ಟವಾಗುತ್ತಿರಲು ಲೀನವಾಗುತ್ತಿರಲು **ಮನಸಾ ಸಹ** ಸ್ವರೂಪಮನಸ್ಸಿನೊಂದಿಗೆ ಚಿನ್ಮಾತ್ರೇಂದ್ರಿಯಗಳಿಂದ **ಪ್ರಾಪ್ಯಃ** ಹೊಂದಲು ಯೋಗ್ಯನೋ **ಸಃ** ಅಂತಹ **ಸದಸತ್ಪರಃ** ಸ್ಥೂಲ-ಸೂಕ್ಷ್ಮಪ್ರಪಂಚವಿಲಕ್ಷಣನಾದ, ಕಾರ್ಯಕಾರಣವಿಲಕ್ಷಣನಾದ (ಕಾರ್ಯ-ಕಾರಣಗಳಿಗೆ ಕಾರಣನಾದ) **ಅನಾಮರೂಪಚಿನ್ಮಾತ್ರಃ** ಶಬ್ದಪ್ರವೃತ್ತಿನಿಮಿತ್ತಗಳು ಅನಂತವಾದ್ದರಿಂದ ತಿಳಿಯಲಾಗದ್ದ-

ರಿಂದಲೂ ಪ್ರಾಕೃತರೂಪರಹಿತನಾದ್ದರಿಂದ ಅನಾಮರೂಪನೆನಿಸಿ ಜ್ಞಾನ ಮಾತ್ರ ಸ್ವರೂಪನಾದ **ಭವಾನ್** ನೀನು **ನಃ** ನಮ್ಮನ್ನು **ಅವ್ಯಾತ್** ರಕ್ಷಿಸು.

**ಅಪ್ರಸಿದ್ಧೇಃ ತದ್ಗುಣಾನಾಂ ಅನಾಮಾಽಸೌ ಪ್ರಕೀರ್ತಿತಃ ।**
**ಅಪ್ರಾಕೃತತ್ವಾದ್ರೂಪಸ್ಯಾಪ್ಯರೂಪೋಽಸಾವುದೀರ್ಯತೇ ॥೨೧॥**

ಮೇಲಿನ ಶ್ಲೋಕದಲ್ಲಿ ಮನಸ್ಸು ಉಪರತವಾದ ಮೇಲೆ ಪ್ರಾಪಕವೇ ಇಲ್ಲದ್ದರಿಂದ ಯಾವುದರಿಂದ ಪ್ರಾಪ್ಯ ಎಂದು ಶಂಕೆ ಬರುವದು. ಕಾರಣ ಅದಕ್ಕೆ ಉಪಪತ್ತಿಯನ್ನು ಆಚಾರ್ಯರು ತಾವೇ ಹೇಳುವರು.

ತಾತ್ಪರ್ಯ

'ಬಾಹ್ಯಮನಸ್ಯುಪರತೇ ಚಿನ್ಮಾತ್ರಮನಸಾ ಸಹ ಪ್ರಾಪ್ಯಮ್'

ಬಾಹ್ಯವಾದ ಜಡವಾದ ಸ್ಥೂಲಮನಸ್ಸು ಇತರ ಇಂದ್ರಿಯಗಳೊಡನೆ ನಾಶವಾಗುತ್ತಿರಲು ಚಿನ್ಮಾತ್ರವಾದ ಸ್ವರೂಪಮನಸ್ಸಿನಿಂದ ಪರಮಾತ್ಮ ಪ್ರಾಪ್ಯನಾಗುವನು. ಆದ್ದರಿಂದ ಪ್ರಾಪಕವಿಲ್ಲವೆಂದಲ್ಲ. ಅವ್ಯಯಃ ನಾಶರಹಿತನೆಂದರ್ಥ.

**ವಚಸಿ** ಎಂಬ ಪಾಠ ಆಚಾರ್ಯರ ವಚಸ್ಸಿನಲ್ಲಿ (ಮಾತಿನಲ್ಲಿ) ಕಾಣದಿರುವದರಿಂದ ಅದು ಇಲ್ಲವೆಂದೇ ಶ್ರೀ ಸತ್ಯಧರ್ಮರ ಅಭಿಪ್ರಾಯ. **ಅವ್ಯಾನ್ನಃ** ಎಂಬ ಪಾಠವು ದಿವ್ಯವೆನ್ನುತ್ತಾರೆ ಶ್ರೀಗಳು. ॥೨೧॥

ಲಕ್ಷಣವನ್ನು ಹೇಳದೇ ಅಲೌಕಿಕವಾದ ವಸ್ತುವಿನ ಜ್ಞಾನ ಆಗಲಾರದು. ಆದ್ದರಿಂದ ಲಕ್ಷಣವನ್ನು ಹೇಳುವರು-

**ಯಸ್ಮಿನ್ನಿದಂ ಯತಶ್ಚೇದಂ ತಿಷ್ಠತ್ಯಪ್ಯೇತಿ ಜಾಯತೇ ।**
**ಮೃನ್ಮಯೇಷ್ವಿವ ಮೃಜ್ಜಾತಿಸ್ತಸ್ಮೈ ತೇ ಬ್ರಹ್ಮಣೇ ನಮಃ ॥೨೨॥**

**ಮೃಜ್ಜಾತಿಃ** ಮಣ್ಣಿನಿಂದ ಹುಟ್ಟುವ ಗಿಡ ಮೊದಲಾದವುಗಳು **ಮೃನ್ಮಯೇಷು ಇವ** ಮಣ್ಣಿನ ವಿಕಾರಗಳಾದ ಭೂಮಿ-ಪರ್ವತಗಳಲ್ಲಿ ಹೇಗೆ ಇರುವವೋ ನಾಶವಾಗುವವೋ ಮತ್ತು ಅವುಗಳಿಂದ ಹುಟ್ಟುವವೋ ಹಾಗೆ **ಯಸ್ಮಿನ್** ಜಗದ್ವಿಲಕ್ಷಣವಾದ ಯಾವನಲ್ಲಿ **ಇದಂ** ಈ ಎಲ್ಲ ಜಗತ್ತು **ತಿಷ್ಠತಿ** ಇರುವದೋ **ಯಸ್ಮಿನ್ ಇದಂ ಅಪ್ಯೇತಿ** ಯಾವನಲ್ಲಿ ಈ ಜಗತ್ತು ಲಯವಾಗುವದೋ **ಯತಃ ಚ** ಯಾವನಿಂದ **ಇದಂ** ಈ ಜಗತ್ತು **ಜಾಯತೇ** ಹುಟ್ಟುವದೋ **ತಸ್ಮೈ** ಅಂತಹ **ಬ್ರಹ್ಮಣೇ** ಗುಣಪೂರ್ಣನಾದ **ತೇ** ನಿನಗೆ **ನಮಃ** ನಮಸ್ಕಾರವು.

ಇಲ್ಲಿ **ಮೃಜ್ಜಾತಿಃ** ಮೃತ್ತ್ವವು **ಮೃನ್ಮಯೇಷು ಇವ** ಘಟಮುಂತಾದವುಗಳಲ್ಲಿದ್ದಂತೆ ಎಂಬ ಅರ್ಥ ತೋರುವದು. ಇದರಿಂದ ಬ್ರಹ್ಮನು ಜಗತ್ತಿಗೆ ಉಪಾದಾನ ಕಾರಣನೆಂದು ಹೇಳಲು ಹೊರಟಿದೆ ಎಂದು ವಿಪರೀತ ಅರ್ಥವಾಗುವದು. ಆದ್ದರಿಂದ ಸ್ವಲ್ಪ ಅನುವಾದ ಮಾಡಿ ಪ್ರಮಾಣದಿಂದ ನಿರಾಕರಿಸುವರು.

ತಾತ್ಪರ್ಯ

**'ಮೃನ್ಮಯೇಷ್ವಿವ ಮೃಜ್ಜಾತಿಃ' ।**

**ಪೃಥಿವೀ ಪರ್ವತಾಶ್ಚೈವ ಮೃನ್ಮಯಾಃ ಸಮುದೀರಿತಾಃ ।**
**ತೇಷು ಮೃಜ್ಜಾತಯಸ್ಸರ್ವೇ ಜಾಯಂತೇ ಸ್ಥಾವರಾದಯಃ ॥ ಇತಿ ಚ**

ಮೃನ್ಮಯೇಷು ಮೃಜ್ಜಾತಿಃ ಎಂಬುದಕ್ಕೆ ಮೃನ್ಮಯವೆಂದು ಕರೆಯಲ್ಪಡುವ ಪೃಥಿವೀ-ಪರ್ವತ ಮುಂತಾದವುಗಳಲ್ಲಿ ಮೃಜ್ಜಾತಿಃ ಮೃತ್ತಿನಿಂದ ಉತ್ಪತ್ತಿಯುಳ್ಳ ವೃಕ್ಷ ಮೊದಲಾದ ಸ್ಥಾವರಗಳು ಹುಟ್ಟುವವು. ಅಥವಾ ಭಾವಪ್ರಧಾನನಿರ್ದೇಶ ಮೃದಃ ಮೃತ್ತ್ವದ ಜಾತಿಃ ಅವಾಂತರ ಜಾತಿಯುಳ್ಳ ಸ್ಥಾವರಾದಿಗಳು ಎಂದಾದರೂ ಅರ್ಥ 'ಮೃತ್ವರೂಪಸಾಮಾನ್ಯಸದೃಶಸಾಮಾನ್ಯಕಾಃ' (ಸತ್ಯ) 'ಜಾತಿಶ್ಛಂದಸಿ ಸಾಮಾನ್ಯೇ ಮಾಲತ್ಯಾಂ ಗೋತ್ರಜನ್ಮನೋಃ' ಎಂದು ವಿಶ್ವವಿದೆ. ಅಂದರೆ ಇಲ್ಲಿ ಮೃನ್ಮಯಪದದಿಂದ ಪೃಥಿವೀ-ಪರ್ವತಗಳನ್ನು ತೆಗೆದುಕೊಂಡದ್ದರಿಂದ ಎಲ್ಲ ಸ್ಥಾವರಗಳನ್ನು ತಮ್ಮ ತಮ್ಮ ಬೀಜಗಳಿಂದ ಜನಿಸಿದ ವೃಕ್ಷಾದಿಗಳನ್ನು ಮೃಜ್ಜಾತಿಪದದಿಂದ ತೆಗೆದುಕೊಂಡದ್ದರಿಂದ ಉಪಾದಾನ-ಉಪಾದೇಯಭಾವ ತಿಳಿಸಲು ದೃಷ್ಟಾಂತವಾಗಲಾರದು. ಪರ್ವತಾದಿಗಳಿಗೂ ವೃಕ್ಷಕ್ಕೂ ಉಪಾದಾನೋಪಾದೇಯ ಭಾವವಿಲ್ಲ. ವೃಕ್ಷಾದಿಗಳ ಆಯಾ ಬೀಜೋಪಾದಾನಕ್ಕೆ ಪರ್ವತಾದಿಗಳು ಸಹಕಾರಿ ಮಾತ್ರ. ಹಾಗೆ ಶ್ರೀಹರಿಯೂ ಕೂಡ ಸಹಕಾರಿ-ನಿಮಿತ್ತಕಾರಣನೆಂದು ದೃಷ್ಟಾಂತಾನುಗುಣವಾಗಿ ಹೇಳುವದು ಪ್ರಾಮಾಣಿಕವಾದುದು. ॥೨೨॥

**ಯನ್ನ ಸ್ಪೃಶಂತಿ ನ ವಿದುರ್ಮನೋಬುದ್ಧೀಂದ್ರಿಯಾಸವಃ ।**
**ಅಂತರ್ಬಹಿಶ್ಚ ವಿತತಂ ವ್ಯೋಮವತ್ತಂ ನತೋಽಸ್ಮ್ಯಹಮ್ ॥೨೩॥**

**ವ್ಯೋಮವತ್** ಆಕಾಶದಂತೆ **ಅಂತಃ ಬಹಿಃ ಚ** ಒಳಗೂ ಹೊರಗೂ **ವಿತತಂ** ವ್ಯಾಪ್ತನಾದ **ಯಂ** ಯಾವನನ್ನು **ಮನೋಬುದ್ಧೀಂದ್ರಿಯಾಸವಃ** ಮನಸ್ಸು ಮೊದಲಾದ ಶಬ್ದಗಳಿಂದ ವಾಚ್ಯರಾದ ಅವುಗಳಿಗೆ ಅಭಿಮಾನಿಗಳಾದ ರುದ್ರ-ಸೂರ್ಯ ಮುಂತಾದ

ದೇವತೆಗಳು **ಯಂ** ಯಾವನನ್ನು **ನ ಸ್ಪೃಶಂತಿ** ಅಸಂಗನಾದುದರಿಂದ ಮುಟ್ಟಲಾರವು **ನ ವಿದುಃ** ಸಾಕಲ್ಯೇನ ತಿಳಿಯಲಾರರು ಅಥವಾ **ಅಸವಃ** ಪ್ರಾಣಗಳು ಕರ್ಮೇಂದ್ರಿಯಗಳು ಕ್ರಿಯಾಶಕ್ತಿಯಿಂದ **ನ ಸ್ಪೃಶಂತಿ** ವಿಷಯೀಕರಿಸಲಾರವು. **ಮನೋಬುದ್ಧೀಂದ್ರಿಯಾಣಿ** ಜ್ಞಾನೇಂದ್ರಿಯಗಳು ಜ್ಞಾನಶಕ್ತಿಯಿಂದ **ನ ವಿದುಃ** ತಿಳಿಯಲಾರವು. ಅಥವಾ ಜ್ಞಾನಕರ್ಮೇಂದ್ರಿಯಗಳು **ನ ಸ್ಪೃಶಂತಿ** ವಿಷಯೀಕರಿಸಲಾರವು. ಅವುಗಳ ಅಭಿಮಾನಿಗಳಾದ ರುದ್ರಾದಿದೇವತೆಗಳು ತಿಳಿಯಲಾರರು ಹೀಗೂ ಅರ್ಥ ಮಾಡಿರುವರು. ।।೨೩।।

ಅವನ ಅನುಗ್ರಹ ಅವನ ಜ್ಞಾನಕ್ಕೆ, ಅನುಗ್ರಹ ಇಲ್ಲದಿರುವದು ಅಜ್ಞಾನಕ್ಕೆ ಕಾರಣವೆಂದು ಹೇಳಿದ್ದನ್ನು ಸ್ಪಷ್ಟಪಡಿಸುವರು-

**ದೇಹೇಂದ್ರಿಯಪ್ರಾಣಮನೋಧಿಯೋಽಮೀ**
**ಯದಂಶವಿದ್ಧಾಃ ಪ್ರಚರಂತಿ ಕರ್ಮಸು ।**
**ನೈವಾನ್ಯದಾಲೋಹಮಿವ ಪ್ರತಪ್ತಂ**
**ಸ್ಥಾನೇಷು ತದ್ದ್ರಷ್ಟೃಪದೇಶಮೇತಿ ।।೨೪।।**

**ಅಮೀ** ಈ ಮೇಲೆ ಹೇಳಿದ ದೇಹೇಂದ್ರಿಯಪ್ರಾಣಮನೋಧಿಯಃ ದೇಹ, ಇಂದ್ರಿಯ, ಪ್ರಾಣ, ಮನಸ್ಸು ಮತ್ತು ಬುದ್ಧಿಗಳು ತದಭಿಮಾನಿದೇವತೆಗಳು **ಪ್ರತಪ್ತಂ** ಚೆನ್ನಾಗಿ ಕಾದಿರುವ **ಲೋಹಂ ಇವ** ಕಬ್ಬಿಣವು ಸುಡುವಂತೆ **ಯದಂಶವಿದ್ಧಾಃ** ಯಾವ ಶ್ರೀಹರಿಯ ರೂಪವಿಶೇಷಗಳಿಂದ ಪ್ರೇರಿತರಾಗಿ **ಕರ್ಮಸು** ತಮ್ಮ ತಮ್ಮ ವ್ಯಾಪಾರಗಳಲ್ಲಿ ವಿಷಯಗಳಲ್ಲಿ **ಪ್ರಚರಂತಿ** ಜಾಗ್ರತ್ ಸ್ವಪ್ನಗಳಲ್ಲಿ ಪ್ರವರ್ತಿಸುವರು. **ಅನ್ಯದಾ** ಪ್ರೇರಿತವಾಗದಿರುವಾಗ ಕಾಯದಿರುವ ಕಬ್ಬಿಣವು ಸುಡದಿರುವಂತೆ ಸುಷುಪ್ತಿ-ಮೋಹಾವಸ್ಥೆಗಳಲ್ಲಿ **ನೈವ ಪ್ರಚರಂತಿ** ತಮ್ಮ ತಮ್ಮ ವಿಷಯಗಳಲ್ಲಿ ಕಾರ್ಯಗಳಲ್ಲಿ ಪ್ರವೃತ್ತವಾಗುವದಿಲ್ಲವೋ **ತಂ** ಅಂತಹ **ಸ್ಥಾನೇಷು** ದೇಹೇಂದ್ರಿಯಾದಿಗಳಲ್ಲಿ ಜಾಗ್ರದಾದ್ಯವಸ್ಥೆಗಳಲ್ಲಿ ಇರುವ **ದ್ರಷ್ಟೃಪದೇಶಂ** ಸಾಕ್ಷಿ ಎನಿಸಿಕೊಳ್ಳುವ **ತತ್** ಪರಬ್ರಹ್ಮವಸ್ತುವನ್ನು ಏಮಿ ಶರಣು ಹೊಂದುವೆನು.

ಯಥಾ ಪ್ರತಪ್ತಂ ಲೋಹಂ ನ ದಹತಿ, ಎಂದು ಅನ್ವಯ ಮಾಡಿ, ಅಗ್ನಿಶಕ್ತಿಯಿಂದಲೇ ಸುಡುವ ಕಬ್ಬಿಣವು ಅಗ್ನಿಯನ್ನು ಹೇಗೆ ಸುಡುವದಿಲ್ಲವೋ ಹಾಗೆ ಶ್ರೀಹರಿಯ ಶಕ್ತಿಯಿಂದಲೇ ವಿಷಯಗಳನ್ನು ತಿಳಿಯುವ ಸಾಮರ್ಥ್ಯವುಳ್ಳ

ಇಂದ್ರಿಯಾದಿಗಳು ಅವುಗಳ ಅಭಿಮಾನಿಗಳು ಶ್ರೀಹರಿಯನ್ನು ಸಾಕಲ್ಯೇನ ತಿಳಿಯಲಾರವು. ಹೀಗೂ ಚಟ್ಟಿ ಆಚಾರ್ಯರು ಅರ್ಥ ಮಾಡಿರುವರು. ಲೋಹ ಎಂದರೆ ಸುವರ್ಣಾದಿಗಳೂ ಎಂದೂ ಅರ್ಥ ಮಾಡಬಹುದು. 'ಲೋಹಂ ಜೋಂಗಕೇ ಸರ್ವತ್ರೈಜಸೇ' ಎಂದು ವಿಶ್ವವಿದೆ. ಜೋಂಗಕ ಎಂದರೆ ಅಗರು ಸುಗಂಧ ದ್ರವ್ಯ. ॥೨೪॥

**ಓಂ ನಮೋ ಭಗವತೇ ಮಹಾಪುರುಷಾಯ ಮಹಾನುಭಾವಾಯ ಮಹಾವಿಭೂತಯೇ ಸಕಲಸಾತ್ವತಪರಿವೃಢನಿಕರಕಮಲಕುಡ್ಮಲೋಪಲಾಲಿತ-ಚರಣಾರವಿಂದಯುಗಲಪರಮ ಪರಮೇಷ್ಠಿನ್ನಮಸ್ತೇ ॥೨೫॥**

**ಸಕಲ** ಎಲ್ಲ **ಸಾತ್ವತ** ಜ್ಞಾನ ಭಕ್ತಿ ಮೊದಲಾದ ಗುಣಗಳುಳ್ಳ ಭಗವದ್ಭಕ್ತರಲ್ಲಿ **ಪರಿವೃಢ** ಶ್ರೇಷ್ಠರಾದ ಬ್ರಹ್ಮಾದಿಗಳ **ನಿಕರ** ಸಮೂಹದ **ಕರಕಮಲಕುಡ್ಮಲ** ಕೈಗಳೆಂಬ ಕಮಲಗಳ ಮೊಗ್ಗುಗಳಿಂದ **ಉಪಲಾಲಿತ** ಸೇವಿತವಾದ **ಚರಣಾರವಿಂದಯುಗಲ** ಪಾದಾರವಿಂದ-ದ್ವಂದ್ವವುಳ್ಳವನೇ **ಪರಮ** ಉತ್ಕೃಷ್ಟನೇ **ಪರಮೇಷ್ಠಿನ್** ಸರ್ವೇಶ್ವರನಾದ ಶ್ರೀಹರಿಯೇ **ಮಹಾಪುರುಷಾಯ** ಪುರುಷೋತ್ತಮನಾದ **ಮಹಾನುಭಾವಾಯ** ಮಹಾಸಮರ್ಥನಾದ **ಮಹಾವಿಭೂತಯೇ** ವಿಭೂತಿಸ್ವರೂಪನಾದ **ಭಗವತೇ** ಸಮಗ್ರೈಶ್ವರ್ಯಸಂಪನ್ನನಾದ **ಓಂ** ಗುಣಪೂರ್ಣನಾದ **ತೇ** ನಿನಗೆ **ನಮೋ ನಮಃ** ನಮಸ್ಕಾರವು. ॥೨೫॥

**ಶ್ರೀಶುಕ ಉವಾಚ –**

**ಭಕ್ತಾಯೈತಾಂ ಪ್ರಪನ್ನಾಯ ವಿದ್ಯಾಮಾದಿಶ್ಯ ನಾರದಃ ।**
**ಯಯಾವಂಗಿರಸಾ ಸಾಕಂ ಧಾಮ ಸ್ವಾಯಂಭುವಂ ವಿಭೋ ॥೨೬॥**

**ಹೇ ವಿಭೋ** ಸಮರ್ಥನಾದ ಪರೀಕ್ಷಿದ್ರಾಜನೇ **ನಾರದಃ** ನಾರದರು **ಪ್ರಪನ್ನಾಯ** ತನಗೆ ಶರಣಾಗತನಾದ **ಭಕ್ತಾಯ** ಚಿತ್ರಕೇತುವಿಗೆ **ಏತಾಂ ವಿದ್ಯಾಂ** ಈ ಸಂಕರ್ಷಣವಿದ್ಯೆಯನ್ನು **ಆದಿಶ್ಯ ಚ** ಉಪದೇಶಿಸಿ **ಅಂಗಿರಸಾ ಸಾಕಂ** ಅಂಗಿರಸರೊಂದಿಗೆ **ಸ್ವಾಯಂಭುವಂ ಧಾಮ** ಬ್ರಹ್ಮದೇವರ ಲೋಕವಾದ ಸತ್ಯಲೋಕಕ್ಕೆ **ಯಯೌ** ಹೋದರು. ಹಿಂದೆ 'ಅಂಗಿರಾ ಮುನಿರಾಜಗಾಮ ಸನಾರದಃ' ಎಂದು ಅಂಗಿರಸರಿಗೆ ಪ್ರಾಧಾನ್ಯವನ್ನು ನಾರದರಿಗೆ ಅಪ್ರಾಧಾನ್ಯವನ್ನು ಹೇಳಿದ್ದರೂ ಅದು ಚಿತ್ರಕೇತುವಿಗೆ ಮಗನನ್ನು ಕರುಣಿಸಿದ ಪ್ರಥಮಗುರುವಾದ್ದರಿಂದ ಉಚಿತವೇ ಆಗಿದೆ. ಈಗ 'ನಾರದಃ ಅಂಗೀರಸಾ ಸಾಕಂ' ಎಂದು ನಾರದರಿಗೆ ಪ್ರಾಧಾನ್ಯವನ್ನು

ಅಂಗಿರಸರಿಗೆ ಅಪ್ರಾಧಾನ್ಯವನ್ನು ಹೇಳಿದ್ದಾರೆ. ಇಲ್ಲಿ ನಾರದರು ಚಿತ್ರಕೇತುವಿಗೆ ಮಂತ್ರವಿದ್ಯೆಯನ್ನು ಹೇಳಿಕೊಟ್ಟು ಉತ್ತಮ ವೈರಾಗ್ಯ ಹುಟ್ಟುವಂತೆ ಮಾಡಿದ್ದರಿಂದ ಅವರಿಗೆ ಪ್ರಾಧಾನ್ಯವೆಂದು ತಿಳಿಯಬೇಕು. ಅಥವಾ ಇಬ್ಬರೂ ಬ್ರಹ್ಮಪುತ್ರರಾದ್ದರಿಂದ ತರತಮಭಾವವಿಲ್ಲವೆಂದು ತಿಳಿಸಲು ಹೀಗೂ ಹೇಳಿರುವರು ಎಂದು ತಿಳಿಯಬಹುದು.

ಮೊದಲು 'ಇಮಾಂ ಮಂತ್ರೋಪನಿಷದಂ' ಎಂದು, ಮಧ್ಯದಲ್ಲಿ ಕೊನೆಯಲ್ಲಿ ವಿದ್ಯಾಂ ಎಂದೂ ಹೇಳಿದ್ದು ರಹಸ್ಯವೆಂದು ತಿಳಿಸುವರಂತೆ ವಿದ್ಯಾಧರನೆಂಬ ಅಭಿಧಾಂ ಹೆಸರನ್ನು ಅಮುಧಾ ವಿಧಾತುಂ ಸಾರ್ಥಕ ಮಾಡಲು ಎಂದು ತಿಳಿಯಬೇಕು. ॥೨೬॥

**ಚಿತ್ರಕೇತುಸ್ತು ವಿದ್ಯಾಂ ತಾಂ ಯಥಾ ನಾರದಭಾಷಿತಾಮ್ ।**
**ಧಾರಯಾಮಾಸ ಸಪ್ತಾಹಮಬ್ಭಕ್ಷಃ ಸುಸಮಾಹಿತಃ ॥೨೭॥**

**ಚಿತ್ರಕೇತುಸ್ತು** ಚಿತ್ರಕೇತುವಾದರೋ **ನಾರದಭಾಷಿತಂ** ನಾರದರು ಹೇಳಿದ **ತಾಂ ವಿದ್ಯಾಂ** ಸಂಕರ್ಷಣವಿದ್ಯೆಯನ್ನು ವಿದ್ಯಾಂ ಎಂಬಲ್ಲಿ **ವಿತ್ ಯಾಂ** ಎಂದು ಪದ ವಿಭಾಗ ಮಾಡಿ **ಯಾಂ** ಯಾವುದನ್ನು **ವಿತ್** ಬ್ರಹ್ಮೋಪದೇಶದಿಂದ ತಾನು ತಿಳಿದಿದ್ದನೋ **ತಾಂ** ಅದನ್ನು ಎಂದು ಅರ್ಥ ಹೇಳಬಹುದು. **ಸುಸಮಾಹಿತಃ ಸನ್** ಅತ್ಯಂತ ಸಮಾಧಾನಮನಸ್ಕರಾಗಿ **ಅಬ್ಭಕ್ಷಃ** ನೀರನ್ನು ಮಾತ್ರ ಸೇವಿಸುತ್ತ **ಯಥಾ** ಚೆನ್ನಾಗಿ **ಸಪ್ತಾಹಂ** ಏಳು ದಿನ **ಧಾರಯಾಮಾಸ** ಉಪಾಸನೆ ಮಾಡಿದನು. ॥೨೭॥

**ತತಶ್ಚ ಸಪ್ತರಾತ್ರಾಂತೇ ವಿದ್ಯಯಾ ಧಾರ್ಯಮಾಣಯಾ ।**
**ವಿದ್ಯಾಧರಾಧಿಪತ್ಯಂ ಸ ಲೇಭೇಽಪ್ರತಿಹತಂ ನೃಪಃ ॥೨೮॥**

**ತತಃ** ಅನಂತರ **ಸ ನೃಪಃ** ಆ ಚಿತ್ರಕೇತು ರಾಜನು **ಸಪ್ತರಾತ್ರಾಂತೇ** ಏಳು ರಾತ್ರಿಗಳ ನಂತರ **ಧಾರ್ಯಮಾಣಯಾ** ಉಪಾಸನೆ ಮಾಡುತ್ತಿದ್ದ **ವಿದ್ಯಯಾ** ಆ ಸಂಕರ್ಷಣವಿದ್ಯೆಯ ಪ್ರಭಾವದಿಂದ **ಅಪ್ರತಿಹತಂ** ಆಜ್ಞಾಭಂಗವಿಲ್ಲದ (ಚ್ಯುತಿ ಇಲ್ಲದ ಅವಾಂತರ ಫಲವನ್ನಾಗಿ) **ವಿದ್ಯಾಧರಾಧಿಪತ್ಯಂ** ವಿದ್ಯಾಧರಾಧಿಪತ್ಯವನ್ನು **ಲೇಭೇ ಚ** ಹೊಂದಿದನು. ॥೨೮॥

**ತತಃ ಕತಿಪಯಾಹೋಭಿರ್ವಿದ್ಯಯೇದ್ಧಮನೋಗತಿಃ ।**
**ಜಗಾಮ ದೇವದೇವಸ್ಯ ಶೇಷಸ್ಯ ಚರಣಾಂತಿಕಮ್ ॥೨೯॥**

**ತತಃ** ಅನಂತರ **ಕತಿಪಯಾಹೋಭಿಃ** ಕೆಲವು ದಿನಗಳಲ್ಲಿ **ವಿದ್ಯಯಾ** ಸಂಕರ್ಷಣವಿದ್ಯೆಯಿಂದ **ಇದ್ಧಮನೋಗತಿಃ** ಅಭಿವೃದ್ಧವಾದ ಜ್ಞಾನ ಮಾರ್ಗ ಉಳ್ಳವನಾಗಿ ಚಿತ್ರಕೇತುವು **ದೇವದೇವಸ್ಯ** ರುದ್ರದೇವರಿಗೂ ಪದವೀಪ್ರಯುಕ್ತ ಪೂಜ್ಯರಾದ ಅಥವಾ ಇಂದ್ರಾದಿದೇವತೆಗಳಿಂದ ಪೂಜ್ಯರಾದ **ಶೇಷಸ್ಯ** ಶೇಷದೇವರ **ಚರಣಾಂತಿಕಂ** ಪಾದ ಸಮೀಪಕ್ಕೆ **ಜಗಾಮ** ಹೋದನು.

ಇಲ್ಲಿ ನಾರದರು ಹೇಳಿದ ವಿದ್ಯೆ ವಿಷ್ಣುವಿಷಯಕವಾದ್ದರಿಂದ ಅಚ್ಯುತಚರಣ ಪ್ರಾಪ್ತಿಯು ಉಚಿತವಾದುದು. ಶೇಷಸಮೀಪ ಪ್ರಾಪ್ತಿ ಹೇಳಿದ್ದು ಹೇಗೆ ಉಚಿತವಾದೀತು? ಅನ್ಯವಿದ್ಯೆಯಿಂದ ಅನ್ಯಪ್ರಾಪ್ತಿ ದೃಷ್ಟವಾಗಿಲ್ಲ ಇಷ್ಟವೂ ಅಲ್ಲ. ಎಂದು ಶಂಕಿಸಿದ್ದಕ್ಕೆ ಪ್ರಮಾಣದಿಂದ ಈ ಕೋಲಾಹಲವನ್ನು ಶಾಂತ ಮಾಡುವರು.

'ಯಾಂತಿ ದೇವವ್ರತಾ ದೇವಾನ್' 'ಯಾಂತಿ ಮದ್ಯಾಜಿನೋऽಪಿ ಮಾಂ' ಎಂದು ಗೀತೆಯಲ್ಲಿ ವಿಷ್ಣುವಿನ ಉಪಾಸನೆಯಿಂದ ವಿಷ್ಣುಪ್ರಾಪ್ತಿ ಹೇಳಿದೆ. ಅದಕ್ಕೆ ವಿರುದ್ಧ ಇದಾಯಿತಲ್ಲ ಎಂದು ಶಂಕೆ. ಇದಕ್ಕೆ ಸಮಾಧಾನ ಹೀಗಿದೆ-

ತಾತ್ಪರ್ಯ

**ಅನ್ಯಾಂತರ್ಯಾಮಿಣಂ ವಿಷ್ಣುಮುಪಾಸ್ಯಾನ್ಯಸಮೀಪಗಃ ।**
**ಭವೇದ್ಯೋಗ್ಯತಯಾ ತಸ್ಯ ಪದಂ ವಾ ಪ್ರಾಪ್ನುಯಾತ್ ನರಃ ।।ಇತಿ ನಾರದೀಯೇ**

ಆಯಾ ದೇವತೆಗಳಲ್ಲಿರುವ ವಿಷ್ಣುವಿನ ಉಪಾಸನೆ ಮಾಡುವದರಿಂದ ಆಯಾ ದೇವತೆಗಳ ಸಾಮೀಪ್ಯವು ದೊರೆಯುತ್ತದೆ. ಆಯಾ ಪದವಿ ಹೊಂದಲು ಯೋಗ್ಯನಾದ ಜೀವನು ಆಯಾ ದೇವತಾಂತರ್ಯಾಮಿಯನ್ನು ಉಪಾಸಿಸಿದರೆ ಆಯಾ ಪದವಿಯು ಲಭ್ಯವಾಗುವುದು. ಈಗ ಚಿತ್ರಕೇತುವು ಶೇಷಾಂತರ್ಗತನ ಉಪಾಸನೆ ಮಾಡಿರುವನು. ಆದ್ದರಿಂದ ಅವನ ಸಮೀಪ ಹೋಗಿರುವನು. ಈ ವಿಷಯದಲ್ಲಿ

**'ಶೇಷಾಂತರ್ಯಾಮಿಣಂ ವಿಷ್ಣುಂ ಚಿತ್ರಕೇತುರುಪಾಸ್ಯ ತು ।**
**ಶೇಷಾವಿಷ್ಟಹರೇಶ್ಚಾಪಿ ವರಾನ್ ಪ್ರಾಪ್ಯಾಪ ತದ್ಗತಿಮ್ ।।**

ಎಂದು ಪ್ರಮಾಣವಿದೆ.

 

ಗೀತೆಯು ಅನ್ನಾನಂತರ್ಗತ ಭಗವದುಪಾಸನೆ ಭಗವತ್ಪ್ರಾಪ್ತಿಸಾಧನವೆಂದು ಹೇಳಿದೆ. ಇಲ್ಲಿ ಅನ್ನಾಂತರ್ಗತ ರೂಪ ಉಪಾಸನೆಯಿಂದ ಅನ್ನಪ್ರಾಪ್ತಿ ಹೇಳಿದೆ. ಆದ್ದರಿಂದ ವಿರೋಧವಿಲ್ಲ. ಮತ್ತು ಅನ್ನಾಂತರ್ಗತ ರೂಪ ಉಪಾಸಕನು ಮೊದಲು ಅನ್ನಸಮೀಪಕ್ಕೆ ಹೋಗಿ ತದ್ವಾರಾ ಭಗವಂತನನ್ನು ಹೊಂದುವನು ಎಂದೂ ತಿಳಿಯಬೇಕು. ।।೨೯।।

ಶೇಷದೇವರ ಸ್ವರೂಪವನ್ನು ಕೆಲವು ಶ್ಲೋಕಗಳಿಂದ ತಿಳಿಸುವರು-

**ಮೃಣಾಲಗೌರಂ ಶಿತಿವಾಸಸಂ ಸ್ಫುರತ್ಕಿ-**
**ರೀಟಕೇಯೂರಕಟಿತ್ರಕಂಕಣಮ್ ।**
**ಪ್ರಸನ್ನವಕ್ತ್ರಾರುಣಲೋಚನಂ ವೃತಂ**
**ದದರ್ಶ ಸಿದ್ಧೇಶ್ವರಮಂಡಲೈಃ ಪ್ರಭುಮ್** ।।೩೦।।

**ಮೃಣಾಲಗೌರಂ** ಕಮಲದ ದೇಟಿನಂತೆ ಬೆಳ್ಳಗಿರುವ **ಶಿತಿವಾಸಸಂ** ನೀಲಿವಸ್ತ್ರವನ್ನು ಉಟ್ಟಿರುವ **ಸ್ಫುರತ್** ಹೊಳೆಯುವ **ಕಿರೀಟ** ಮತ್ತು **ಕೇಯೂರ** ವಂಕಿ **ಕಟಿತ್ರ** ಉಡದಾರ ಮತ್ತು **ಕಂಕಣಂ** ಕಡಗಗಳನ್ನು ಧರಿಸಿದ **ಪ್ರಸನ್ನವಕ್ತ್ರಾರುಣಲೋಚನಂ** ಅರಳಿದ ಸಾವಿರ ಮುಖಗಳು ಮತ್ತು ಕೆಂಪಾದ ಎರಡು ಸಾವಿರ ಕಣ್ಣುಗಳುಳ್ಳ **ಸಿದ್ಧೇಶ್ವರಮಂಡಲೈಃ ವೃತಂ** ಸನಕಾದಿ ಸಿದ್ಧಶ್ರೇಷ್ಠರ ಸಮೂಹಗಳಿಂದ ಸುತ್ತುವರೆದ **ಪ್ರಭುಂ** ಸಮರ್ಥರಾದ ಶೇಷದೇವರನ್ನು **ದದರ್ಶ** ನೋಡಿದನು. ।।೩೦।।

**ತದ್ದರ್ಶನಧ್ವಸ್ತಸಮಸ್ತಕಿಲ್ಬಿಷಃ**
**ಸ್ವಚ್ಛಾಮಲಾಂತಃಕರಣೋಽಭ್ಯಯಾನ್ಮುಹುಃ ।**
**ಪ್ರವೃದ್ಧಭಕ್ತ್ಯಾ ಪ್ರಣಯಾಶ್ರುಲೋಚನಃ**
**ಪ್ರಹೃಷ್ಟರೋಮಾ ತಮನಾದಿಪೂರುಷಮ್** ।।೩೧।।

**ತದ್ದರ್ಶನಧ್ವಸ್ತಸಮಸ್ತಕಿಲ್ಬಿಷಃ** ಆ ಶೇಷಾಂತರ್ಯಾಮಿಯಾದ ಶ್ರೀಹರಿಯ ದರ್ಶನದಿಂದ ಎಲ್ಲ ಪಾಪಗಳನ್ನು ಕಳೆದುಕೊಂಡ **ಸಚ್ಛಾಮಲಾಂತಃಕರಣಃ** ಸ್ವಚ್ಛ ನಿರ್ಮಲವಾದ **ಅಮಲ** ಮುಮುಕ್ಷೂಪಾಸ್ಯನಾದ ಶ್ರೀಹರಿಯಲ್ಲಿ ಮನಸ್ಸುಳ್ಳ ಸ್ವಸ್ಥ ಎಂಬ ಪಾಠದಲ್ಲಿ ಏಕಾಗ್ರವಾದ ರಾಗಾದಿದೋಷರಹಿತವಾದ ಮನಸ್ಸುಳ್ಳ **ಅಪ್ರಣಯಾಶ್ರುಲೋಚನಃ** ಸ್ವಲ್ಪ ಆನಂದಬಾಷ್ಪಗಳಿಂದ ತುಂಬಿದ ಕಣ್ಣುಗಳುಳ್ಳ **ಪ್ರವೃದ್ಧಭಕ್ತ್ಯಾ** ಬಹಳ ಬೆಳೆದ ಭಕ್ತಿಯಿಂದ **ಪ್ರಹೃಷ್ಟರೋಮಾ** ರೋಮಾಂಚನವುಳ್ಳ **ಸಃ**

ಆ ಚಿತ್ರಕೇತುವು **ಅನಾದಿಪೂರುಷಂ** ವಾಯುದೇವರಿಗೆ ಕಾರಣವಾದ ಪೌರುಷ ಉಳ್ಳ **ತಂ** ಶೇಷಾಂತರ್ಯಾಮಿ ಸಂಕರ್ಷಣನನ್ನು **ಮುಹುಃ** ಮತ್ತೆ ಮತ್ತೆ **ಅಭ್ಯಯಾತ್** ಈ ರೀತಿಯಾಗಿಯೇ ಹೊಂದುತ್ತಿದ್ದನು.

ಅವಶವಾಗಿ ಪ್ರವಹಿಸುವ ಆನಂದಬಾಷ್ಪಗಳು ಬಹಳವಾಗಿದ್ದರೂ ದೊಡ್ಡವರ ಸನ್ನಿಧಾನದಲ್ಲಿ ತೋರಿಸಬಾರದೆಂದು ತಡೆಹಿಡಿದಿದ್ದರಿಂದ ಸ್ವಲ್ಪವಾಗಿದ್ದವೆಂದು ಭಾವ. ಮುಂದಿನ ಶ್ಲೋಕದಲ್ಲಿಯ ಲೇಶ ಶಬ್ದ ಸ್ವಾರಸ್ಯದಿಂದ ಎಂದು ತಿಳಿಯಬೇಕು. ಅಥವಾ ಅವು ಬಹಳವಾಗಿದ್ದರೂ ಶೇಷದೇವರ ದೊಡ್ಡ ಆಕಾರದಲ್ಲಿ ಅವು ಅಲ್ಪವಾಗಿದ್ದವು ಎಂದು ಮುಂದಿನ ಶ್ಲೋಕದ ಅಭಿಪ್ರಾಯ. ಮೊದಲನೆಯ ಶ್ಲೋಕದಲ್ಲಿ ಆ ಚೆನ್ನಾಗಿ ಎಂದೇ ಅರ್ಥ. ಇಚ್ಛೆ ಇಲ್ಲದೇ ಬರುತ್ತಿರುವುದನ್ನು ತಡೆಯಲಾಗುವದಿಲ್ಲವೆಂಬುದು ಯುಕ್ತಿಯುಕ್ತವೇ ಆಗಿದೆ.

ಈ ಶ್ಲೋಕದಲ್ಲಿ ಪರಮಾತ್ಮನನ್ನು ಹೊಂದಿದನು ಎಂದು ವ್ಯವಧಾನೇನ ಭಗವಂತನ ಪ್ರಾಪ್ತಿಯೂ ಹೇಳಿದಂತೆ ತೋರುವದು. ಹಾಗೆ ಹೇಳಿದರೆ 'ಜಗಾಮ ದೇವದೇವಸ್ಯ ಶೇಷಸ್ಯ ಚರಣಾಂತಿಕಂ' ಎಂದು ಹೇಳಿದ್ದು ಯುಕ್ತವಾಗದು. ಮತ್ತು ಚಿತ್ರಕೇತುವಿಗೆ ಆಗಲೇ ಪರಮಾತ್ಮಪ್ರಾಪ್ತಿರೂಪವಾದ ಮೋಕ್ಷ ಆಗಿಲ್ಲ. ಶೇಷದರ್ಶನದಿಂದ ಪಾಪ ಕಳೆದುಕೊಂಡು ಶೇಷನನ್ನೇ ಹೊಂದಿದನೆಂದೂ ತೋರುತ್ತದೆ. ಅದನ್ನು ನಿರಾಕರಿಸಲು ಸ್ವಯಂ ತಾತ್ಪರ್ಯವನ್ನು (ಅನ್ವಯವನ್ನು) ಹೇಳಿ ಪ್ರಮಾಣವನ್ನು ಉದಾಹರಿಸುವರು.

ತಾತ್ಪರ್ಯ

ಅನೇನ ಪ್ರಕಾರೇಣ ಮುಹುಸ್ತತ್ಸಕಾಶಮಭ್ಯಯಾತ್ ।

ಶೇಷಾಂತರ್ಯಾಮಿಣಂ ವಿಷ್ಣುಂ ಚಿತ್ರಕೇತುರುಪಾಸ್ಯ ತು ।
ಶೇಷಾವಿಷ್ಟಹರೇಶ್ಚಾಪಿ ವರಾನ್ ಪ್ರಾಪ್ಯಾಪ ತದ್ಗತಿಮ್ ।

ಇತಿ ತಂತ್ರಮಾಲಾಯಾಮ್

'ನಮಸ್ತುಭ್ಯಂ' ಮುಂತಾಗಿ ನಾರದರು ಉಪದೇಶಿಸಿದ ಪ್ರಕಾರ ಅನೇಕಬಾರಿ ಶೇಷಾಂತರ್ಯಾಮಿಯಾದ ಶ್ರೀ ವಿಷ್ಣುವನ್ನು ಉಪಾಸನೆ ಮಾಡಿ ಶೇಷನಲ್ಲಿ ಆವಿಷ್ಟನಾದ ಶ್ರೀಹರಿಯಿಂದ ವರಗಳನ್ನು ಪಡೆದು ಶೇಷಾಂತರ್ಗತ ಪರಮಾತ್ಮನನ್ನು ಹೊಂದಿದನು ಎಂದು ತಂತ್ರಮಾಲಾ ಎಂಬ ಗ್ರಂಥವು ಹೇಳುತ್ತದೆ. ಇದರಿಂದ 'ಜಗಾಮ ದೇವದೇವಸ್ಯ ಶೇಷಸ್ಯ ಚರಣಾಂತಿಕಂ' ಎಂದಾರಂಭಿಸಿ 'ತಸ್ಮೈ ನಮೋ

ಭಗವತೇಽಸ್ತು ಸಹಸ್ರಮೂರ್ಧ್ನೇ ಎಂಬಲ್ಲಿವರೆಗಿನ ಭಾಗವತ ಶ್ಲೋಕಗಳು ಕೇವಲ ಶೇಷಪ್ರತಿಪಾದಕಗಳಲ್ಲ. ಮುಖ್ಯವಾಗಿ ಅಂತರ್ಗತ ವಿಷ್ಣುಪ್ರತಿಪಾದಕಗಳು ಎಂದು ಸೂಚಿಸಿದಂತಾಯಿತು. ಮತ್ತು ಇಲ್ಲಿ 'ಅನಾದಿಪುರುಷಂ ಅಭ್ಯಯಾತ್' ಎಂದು ಪರಮಾತ್ಮಪ್ರಾಪ್ತಿರೂಪ ಮುಕ್ತಿಯನ್ನು ಹೇಳುವದಿಲ್ಲ. ಕಿಂತು ಅವನಸಾಮೀಪ್ಯ ಪ್ರಾಪ್ತಿಯನ್ನು ಹೇಳುತ್ತದೆ. ಆದರಿಂದ ವಿಷ್ಣುಪಾರ್ಷದರು ಹೇಗೆ (ಅಮುಕ್ತರು) ವಿಷ್ಣುವಿನ ಸಮೀಪಕ್ಕೆ ಹೋಗಿ ಸಂಚರಿಸುವರೋ ಹಾಗೆ ಚಿತ್ರಕೇತುವು ಸಂಚರಿಸಿದನು ಎಂದು ವಿವಕ್ಷಿತವಾಗಿದೆ. ಹಾಗಾದರೆ ಶೇಷಪ್ರಾಪ್ತಿ ಹೇಳಿದ್ದು ಯಾಕೆ ಎಂದರೆ ಅದಕ್ಕೂ ಉತ್ತರ ಅನೇನ ಪ್ರಕಾರೇಣ ಅಂದರೆ ಉಪಾಸನೆಗೆ ದ್ವಾರವಾದುದರಿಂದ ಎಂದರ್ಥ. ಅಂದರೆ ನಾರದರು ಹೇಳಿದ ವಿದ್ಯೆಯಿಂದ ಶೇಷನನ್ನು ಹೊಂದಿ ಮತ್ತೆ ಅನಾದಿಪುರುಷನ ಹತ್ತಿರ ಚಿತ್ರಕೇತು ಸಂಚಾರ ಮಾಡಿದ ಎಂದರ್ಥ. **ತದ್ಗತಿಂ** ಎಂದರೆ ಅವನ ಸಮೀಪ ಎಂದರ್ಥ. ಗಮ್ಯತೇ ಇತಿ ಗತಿಃ ಸ ಚಾಸೌ ಗತಿಶ್ಚ ತದ್ಗತಿಃ ಶೇಷಾಂತರ್ಗತ ಗಮ್ಯನಾದ ಹರಿಯನ್ನು ಆಪ ಹೊಂದಿದನು ಎಂದರ್ಥ. ।।೩೧।।

**ಸ ಉತ್ತಮಶ್ಲೋಕಪದಾಬ್ಜವಿಷ್ಟರಂ**
**ಪ್ರೇಮಾಶ್ರುಲೇಶೈರುಪಸೇಚಯನ್ಮುಹುಃ ।**
**ಪ್ರೇಮೋಪರುದ್ಧಾಖಿಲವರ್ಣನಿರ್ಗಮೋ**
**ನೈವಾಶಕತ್ತಂ ಪ್ರಸಮೀಡಿತುಂ ಚಿರಮ್ ।।೩೨।।**

**ಪ್ರೇಮೋಪರುದ್ಧಾಖಿಲವರ್ಣನಿರ್ಗಮಃ** ಪ್ರೀತಿಯಿಂದ ಕಂಠ ಬಿಗಿದಿರುವುದರಿಂದ ಮಾತನಾಡಲಾಗದೇ ಇರುವ ಸಃ ಚಿತ್ರಕೇತುವು **ಪ್ರೇಮಾಶ್ರುಲೇಶೈಃ** ಭಕ್ತಿಯಿಂದ ಹೊರಹೊಮ್ಮಿದ ಕಣ್ಣೀರಿನ ಹನಿಗಳಿಂದ **ಉತ್ತಮಶ್ಲೋಕಪದಾಬ್ಜವಿಷ್ಟರಂ** ಶ್ರೀಹರಿಯ ಪಾದ ಕಮಲಗಳ ಆಸನವನ್ನು **ಮುಹುಃ** ಮತ್ತೆ ಮತ್ತೆ **ಉಪಸೇಚಯನ್** ಅಭಿಷೇಕಿಸುತ್ತ **ತಂ** ಶ್ರೀಹರಿಯನ್ನು **ಚಿರಂ** ಬಹುಕಾಲ **ಪ್ರಸಮೀಡಿತುಂ** ಭಕ್ತಿಯಿಂದ ಸ್ತೋತ್ರಮಾಡಲು **ನೈವ ಆಶಕತ್** ಸಮರ್ಥನಾಗಲಿಲ್ಲ. ।।೩೨।।

**ತತಃ ಸಮಾಧಾಯ ಮನೋ ಮನೀಷಯಾ**
**ಬಭಾಷ ಏತತ್ಪ್ರತಿಲಬ್ಧವಾಗ್ರಸಃ ।**
**ನಿಯಮ್ಯ ಸರ್ವೇಂದ್ರಿಯಬಾಹ್ಯವರ್ತನಂ**
**ಜಗದ್ಗುರುಂ ಸಾತ್ವತಶಾಸ್ತ್ರವಿಗ್ರಹಮ್ ।।೩೩।।**

**ತತಃ** ಅನಂತರ **ಮನಃ** ಮನಸ್ಸನ್ನು **ಸಮಾಧಾಯ** ಏಕಾಗ್ರವಾಗಿ ಮಾಡಿ **ಮನೀಷಯಾ** ಧೈರ್ಯಕ್ಕೆ ಕಾರಣವಾದ ಬುದ್ಧಿವಿಶೇಷದಿಂದ **ಪ್ರತಿಲಬ್ಧವಾಗ್ರಸಃ ಸನ್** ಮತ್ತೆ ಹೊಂದಲ್ಪಟ್ಟ ಮಾತನಾಡುವ ಶಕ್ತಿಯುಳ್ಳವನಾಗಿ ಅಥವಾ ಪ್ರತಿಲಬ್ಧ ಆವಿರ್ಭೂತವಾದ **ವಾಗ್ರಸಃ** ರಹಸ್ಯವಾದ ಉಪನಿಷತ್ತುಳ್ಳವನು **ಸರ್ವೇಂದ್ರಿಯ-ಬಾಹ್ಯವರ್ತನಂ** ಎಲ್ಲ ಇಂದ್ರಿಯಗಳ ಬಾಹ್ಯವಿಷಯಗಳ ವ್ಯಾಪಾರಗಳನ್ನು **ನಿಯಮ್ಯ** ನಿಗ್ರಹಿಸಿಕೊಂಡು **ಸಾತ್ವತಶಾಸ್ತ್ರವಿಗ್ರಹಂ** ೧. ತನ್ನ ಭಕ್ತರಿಗೆ ಸನ್ಮಾರ್ಗಶಿಕ್ಷಕವಾದ ಅವತಾರ ಉಳ್ಳ ೨. ಭಕ್ತರಿಗೆ ತತ್ತ್ವೋಪದೇಶವನ್ನು ಮಾಡುವ ಶರೀರವುಳ್ಳ ೩. ಭಕ್ತರ ಅಂತರ್ನಿಯಾಮಕ ವಿಗ್ರಹವುಳ್ಳ (ಇದು ಅಂತರ್ಯಾಮಿಗೆ ಹೇಳಿದ್ದು) ಶಾಸ್ತ್ರಂ ಅಂತರ್ಯಾಮಿ, 'ಸಂವಿತ್ ಶಾಸ್ತ್ರಂ ಪರಂ ಪದಂ' ಎಂದು ಭಾಷ್ಯವಿದೆ. ೪. ಸಾತ್ವತಶಾಸ್ತ್ರನಾದ ಭಗವಂತನ ವಿಗ್ರಹರೂಪನಾದ ೫. ಸಾತ್ವತ ಶಬ್ದದ ಮೇಲೆ ಅರ್ಶಾದ್ಯಜಂತವಾದುದು. ಸಾತ್ವತಶಬ್ದ ಸಾತ್ವತಾಂ ರಮಾದಿಗಳ ಸಂಬಂಧಿಯಾದ ಎಂದರ್ಥ. 'ಸಾತ್ವತಾಂ ನವಮೂರ್ತಿನಾಂ' ಮುಂತಾಗಿ ಏಕಾದಶಸ್ಕಂಧ-ತಾತ್ಪರ್ಯದಲ್ಲಿ 'ವಿಷ್ಣೋಃ ಶ್ರಿಯಃ' ಎಂದಾರಂಭಿಸಿ 'ಸುಪರ್ಣೋ ನವಧಾ ಪ್ರೋಕ್ತಃ' ಎಂಬಲ್ಲಿವರೆಗೆ ಹೇಳಿದ ಸಾತ್ವತ ಪದಾರ್ಥವನ್ನು ತಿಳಿಯಬೇಕು. **ಜಗದ್ಗುರುಂ** ಜಗತ್ತಿಗೆ ಗುರುವಾದ ಶೇಷಾಂತರ್ಯಾಮಿ ಹರಿಯನ್ನು ಕುರಿತು **ಏತತ್** ಮುಂದೆ ಹೇಳುವ ಸ್ತೋತ್ರವನ್ನು **ಬಭಾಷೇ** ಹೇಳಿದನು.

ಭಾಗವತ ೧೧ ನೇ ಸ್ಕಂಧ ೧೬ ನೇ ಅಧ್ಯಾಯ ೩೨ ನೇ ಶ್ಲೋಕದಲ್ಲಿ ಹೀಗಿದೆ. 'ಸಾತ್ವತಾಂ ನವಮೂರ್ತಿನಾಮಾದಿಮೂರ್ತಿರಹಂ ಪುರಾ' ಎಂದಿದೆ.

ತಾತ್ಪರ್ಯ

ವಿಷ್ಣೋಃ ಶ್ರಿಯಾ ಬ್ರಹ್ಮಣಶ್ಚ ವಾಯೋಃ ಸಂಕರ್ಷಣಸ್ಯ ಚ ।
ಸುಪರ್ಣಸ್ಯ ಚ ಸಂಪ್ರೋಕ್ತಾಃ ಪ್ರತ್ಯೇಕಂ ನವಮೂರ್ತಯಃ ।

ಪೂಜ್ಯಾಃ ಸಾತ್ವತತಂತ್ರೇಷು ತತ್ರಾದ್ಯಾ ಹರಿಮೂರ್ತಯಃ ।
ಅಭೇದಾದೇವ ಮೂರ್ತಿನಾಮೇಕಮೂರ್ತಿಶ್ಚ ಸಾ ಸ್ಮೃತಾ ।। ಇತಿ ಸಹಸ್ರಾವರಣೇ

ಸ್ವರೂಪತಶ್ಚ ಗುಣತೋ ನ ವಿಶೇಷಃ ಕಥಂಚನ ।
ವಿಷ್ಣೋಸ್ತು ನವಮೂರ್ತಿನಾಂ ಪೂಜಾ ಚ ನವಧೇಷ್ಯತೇ ।। ಇತಿ ಚ

ನಾರಾಯಣಃ ಪರಂ ಬ್ರಹ್ಮ ವಾಸುದೇವಾದಿಕಾಸ್ತಥಾ ।
ನರಸಿಂಹವರಾಹೌ ಚ ಪರಂಜ್ಯೋತಿರ್ಹರೇರ್ನವ ।

ಇಂದಿರಾ ಚ ರಮಾ ಲಕ್ಷ್ಮೀರ್ಹಿರಣ್ಯಾ ಗಗನಾ ತಥಾ ।
ರಕ್ತಾ ರಕ್ತಾತರಾ ಭೂತಿರ್ವಿಭೂತಿಶ್ಚ ಶ್ರಿಯಾ ನವ ।

ಬ್ರಹ್ಮಾ ಚತುರ್ಮುಖೋ ಧಾತಾ ವಿಧಾತಾ ವಿಧಿರೇವ ಚ ।
ಕರ್ತಾ ವಿರಿಂಚೋ ಭೂತೇಶೋ ಶತಾನಂದಶ್ಚ ತಾ ನವ ।

ಧನಂಜಯಮೃತೇ ಚೈವ ವಾಯೋಸ್ತು ನವಮೂರ್ತಯಃ ।
ಶೇಷೋಽನಂತೋ ನರಶ್ಚೈವ ಲಕ್ಷ್ಮಣೋ ಬಲ ಏವ ಚ ।

ಸಂಕರ್ಷಣೋ ನೀಲವಾಸಾ ಜಗದ್ರಕ್ಷೋ ಜಲೇಶಯಃ ।
ಸುಪರ್ಣೋ ಗರುಡಶ್ಚೈವ ವೈನತೇಯೋ ಮಹಾಶನಃ ।

ನವವರ್ಣಃ ಪಂಚವರ್ಣಃ ಪನ್ನಗಾಶೋಽಮೃತಾಕರಃ ।
ತಥೈವ ಸರ್ವವೇದಾತ್ಮಾ ಸುಪರ್ಣೋ ನವಧಾ ಸ್ಮೃತಃ ॥ ಇತಿ ಚ ॥

ಪ್ರಾಣಾದಿಪಂಚಕಂ ಚೈವ ತಥಾ ನಾಗಾದಿಪಂಚಕಮ್ ।
ಸನಾಗಕೂರ್ಮಕೃಕಲದೇವದತ್ತಧನಂಜಯಾಃ ॥

ಇತಿ ಭಾಗವತ ೩.೭.೯ ನೆಯ ಶ್ಲೋಕದ ತಾತ್ಪರ್ಯ ಇದು.

ವಿಷ್ಣು ಲಕ್ಷ್ಮೀ, ಬ್ರಹ್ಮ, ವಾಯು, ಸಂಕರ್ಷಣ, ಸುಪರ್ಣ ಹೀಗೆ ಆರು ಜನರಿಗೆ ಪ್ರತ್ಯೇಕವಾಗಿ ೯ ರೂಪಗಳನ್ನು ಹೇಳಿವೆ. ಅವುಗಳನ್ನು ಸ್ವೀಕರಿಸಬೇಕೆಂದು ಭಾವ. ॥೩೨॥

ಭಕ್ತವಾತ್ಸಲ್ಯ ಎಂಬ ಗುಣವನ್ನು ಸ್ಮರಿಸುವದರಿಂದ ಭಗವಂತನು ಬೇಗನೇ ಅನುಗ್ರಹಿಸುವನು ಎಂದು ಅದನ್ನು ಮೊದಲು ಸ್ಮರಿಸುವನು-

**ಚಿತ್ರಕೇತುರುವಾಚ -**

**ಅಜಿತಜಿತಃ ಸಮಮತಿಭಿಃ ಸಾಧುಭಿರ್ಭವಾನ್ ಜಿತಾತ್ಮಭಿರ್ಭವತಾ ।**
**ವಿಜಿತಾಸ್ತೇಽಪಿ ಭಜತಾಮಕಾಮಾನಾಂ ಯ ಆತ್ಮದೋಽತಿಕರುಣಃ ॥೩೪॥**

**ಹೇ ಅಜಿತ** ಯಾರಿಂದಲೂ ಗೆಲ್ಲಲ್ಪಡದಿರುವ ಶ್ರೀಹರಿಯೇ **ಅತಿಕರುಣಃ** ಅತ್ಯಂತ ಕೃಪಾಶಾಲಿಯಾದ **ಯಃ** (ತ್ವಂ) ಯಾವ ನೀನು **ಅಕಾಮಾನಾಂ** ನಿನ್ನ ವಿನಹ

ಮತ್ತೊಂದನ್ನು ಅಪೇಕ್ಷಿಸದಿರುವ **ಭಜತಾಂ** ನಿನ್ನನ್ನು ಸೇವಿಸುವ ಸಾಧುಗಳಿಗೆ **ಯತಃ** ಯಾವ ಕಾರಣ **ಆತ್ಮದಃ** ನಿನ್ನನ್ನೇ ಕೊಡುವಿಯೋ ಅಪರೋಕ್ಷನಾಗುವಿಯೋ **ಅತಃ** ಆದ್ದರಿಂದ **ತೇಽಪಿ** ಅವರೂ ಕೂಡಾ **ಭವತಾ** ನಿನ್ನಿಂದ **ವಿಜಿತಾಃ** ಜಯಿಸಲ್ಪಟ್ಟಿರುವರು. ಮತ್ತು **ಜಿತಾತ್ಮಭಿಃ** ಮನಸ್ಸನ್ನು ಜಯಿಸಿದ **ಸಮಮತಿಭಿಃ** ಎಲ್ಲ ಅಧಿಷ್ಠಾನಗಳಲ್ಲಿ ನಿರ್ದೋಷನಾದ ನಿನ್ನನ್ನು ಕಾಣುವ **ಸಾಧುಭಿಃ** ಭಕ್ತರಿಂದ **ಭವಾನ್ ಚ** ಯಾರಿಂದಲೂ ಗೆಲ್ಲಲಾಗದ ನೀನೂ ಕೂಡ **ಜಿತಃ** ವಶೀಕೃತನಾಗಿರುವಿ. **ಚ** ಶಬ್ದದಿಂದ ಭಕ್ತರನ್ನು ನೀನು ಆಕರ್ಶಿಸುವದು, ಭಕ್ತರು ಭಕ್ತಿಯಿಂದ ನಿನ್ನನ್ನು ವಶ ಮಾಡಿಕೊಳ್ಳುವದು ನಿಯತವೆಂದು ಸೂಚಿಸಿರುವರು. ಶ್ರೀಹರಿಯಲ್ಲಿ ಮಾಡುವ ಭಕ್ತಿ ಮತ್ತು ಹರಿಕರುಣೆ ಇವು ಅವನನ್ನು ವಶ ಮಾಡಿಕೊಳ್ಳಲು ಕಾರಣಗಳೆಂದು ಹೇಳಿದಂತಾಯಿತು.

ಸಮಮತಿಭಿಃ ಸಂ ಅತ್ಯಂತ ಅಮತಿಭಿಃ ಚ ಅಜ್ಞರಿಂದ ಎಂದರ್ಥ ಅಥವಾ ಮಮತಯಾ ಸಹಿತಾಃ ಸಮಮತಾಃ ತೇ ವಿದ್ಯಂತೇ ಯೇಷಾಂ ತೇ ತೈಃ ಮಮತೆ ಉಳ್ಳವರಿಂದ ಕೂಡಿದವರೆಂದರ್ಥ. ಅಥವಾ ಅತಿ ಮಮತೆಯುಳ್ಳವರು ಎಂದಾದರೂ ಅರ್ಥ ಮಾಡಿರುವರು.

ಅಜಿತ ತ್ವಂ ಜಿತಾತ್ಮಭಿಃ ಸಾಧುಭಿಃ ಜಿತಃ ತೇಽಪಿ ಭವತಾ ವಿಜಿತಾಃ ವಶ ಮಾಡಿಕೊಂಡಿರುವರು.

ನಿನ್ನನ್ನು ಅಸಾಧುಗಳು ಗೆದ್ದಿರುವರು ನೀನು ಅವರನ್ನು ಸ್ವಾಧೀನ ಮಾಡಿಕೊಂಡಿರುವಿ. ಚ ಶಬ್ದವು ತುಕಾರಾರ್ಥವುಳ್ಳದ್ದಾಗಿ ನೀನು ಅವರನ್ನು ಸೋಲಿಸಿದ್ದು ಸ್ವಾಭಾವಿಕ. ಅವರು ಮಾಡಿದ ನಿನ್ನ ಜಯವು ನಟನವಷ್ಟೇ ಎಂಬ ವಿಶೇಷ ತಿಳಿಸುವದು. ।।೩೪।।

ಶೇಷಾಂತರ್ಗತ ಭಗವಂತನ ಲಕ್ಷಣವನ್ನು ಹೇಳುವರು-

**ತವ ವಿಭವಃ ಖಲು ಭಗವನ್ ಜಗದುತ್ಪತ್ತಿಸ್ಥಿತಿಲಯಾದೀನಿ ।**
**ವಿಶ್ವಸೃಜಸ್ತೇಽಂಶಾಂಶಾಸ್ತತ್ರ ಮೃಷಾ ಸ್ಪರ್ಧಂತಿ ಪೃಥಗಭಿಮತ್ಯಾ ।।೩೫।।**

**ಹೇ ಭಗವನ್** ಶ್ರೀಹರಿಯೇ **ಜಗದುತ್ಪತ್ತಿಸ್ಥಿತಿಲಯಾದೀನಿ** ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯ ಆದಿ ಪದದಿಂದ ನಿಯಮನ ಜ್ಞಾನ ಅಜ್ಞಾನ ಬಂಧ, ಮೋಕ್ಷ ಇವುಗಳು **ತವ** ನಿನ್ನ **ವಿಭವಃ ಖಲು** ಸ್ವರೂಪಲಕ್ಷಣಗಳಷ್ಟೇ? **ತತ್ರ** ಶಾಸ್ತ್ರದಿಂದ ಇದು ಸಿದ್ಧವಾಗಿದ್ದರೂ

**ತೇ** ನಿನ್ನ **ಅಂಶಾಂಶಾಃ** ಜೀವ ಬಿಂಬ ಭೂ ಅಂಶಗಳ ಅಂಶರು ಪ್ರತಿಬಿಂಬರಾದ **ವಿಶ್ವಸೃಜಃ** ಬ್ರಹ್ಮಾದಿಪ್ರಜೇಶ್ವರರು **ಪೃಥಕ್** ನಾನು ಜಗನ್ನಿಯಾಮಕನು ನಾನು ಜಗತ್ತನ್ನು ಸೃಷ್ಟಿಸುವವನು ಎಂದು ಪ್ರತ್ಯೇಕವಾಗಿ **ಅಭಿಮತ್ಯಾ** ಜಗದೀಶ್ವರತ್ವಾಭಿಮಾನದಿಂದ **ಮೃಷಾ** ವ್ಯರ್ಥವಾಗಿ **ಸ್ಪರ್ಧಂತಿ** ಸ್ಪರ್ಧಿಸುವರು.

**ಶ್ರೀ ಸತ್ಯಧರ್ಮರ ಪ್ರಕಾರ**

ಜಗದುದಯಸ್ಥಿತಿಲಯಾವನಾದೀನಿ ಎಂದು ಪಾಠ. ಆಗ ಜಗತ್ತಿನ ಉದಯ ಉತ್ಪತ್ತಿ ಸ್ಥಿತಿ ಪಾಲನ ಲಯ ನಾಶ ಇವುಗಳ ಆವನಂ ಸಮ್ಯಕ್ ಸಂಭಜನಂ ವಿಯದಧಿ ಕರಣದಲ್ಲಿ ಹೇಳಿದಂತೆ ಯಾರಿಗೆ ಎಷ್ಟು ಮತ್ತು ಎಂತಹವು ಆ ರೀತಿ ಯಥಾಯೋಗ್ಯವಿಭಾಗ ಮಾಡಿಕೊಳ್ಳುವುದು. ಆದಿ ಪದದಿಂದ ನಿಯಮನಾದಿಗಳನ್ನು ಕೊಡುವ ವಿಷಯದಲ್ಲಿ 'ಜನ್ಮಾದ್ಯಸ್ಯ ಯತಃ ' 'ಯತೋ ವಾ ಇಮಾನಿ' 'ಸೃಷ್ಟಿಸ್ಥಿತಿಶ್ಚ' ಎಂಬ ಸೂತ್ರ-ಶ್ರುತಿ-ಸ್ಮೃತಿಗಳು ಪ್ರಮಾಣವಾಗಿವೆ. ಮಧ್ಯದಲ್ಲಿರುವ ಸ್ಥಿತಿಶಬ್ದವು ಮೂರು ಸ್ಥಳದಲ್ಲಿ ಎಂದಾದರೂ ಅನ್ವಯಿಸುವದು. ಉದಯಸ್ಥಿತಿ, ಲಯಸ್ಥಿತಿ, ಅವನಸ್ಥಿತಿ ಎಂದಾದರೂ ಮಾಡಬಹುದು. ಉದಯ ಅಥವಾ ಉದಾಯಾವನ ಸ್ಥಿತ್ಯವನ ಲಯಾವನ ಹೀಗೆ ಅವನವು ಸರ್ವತ್ರ ಅಪೇಕ್ಷಿತವಾದ್ದರಿಂದ ಎಲ್ಲ ಕಡೆಗೂ ಅನ್ವಯವಾಗುವದು ಅವನ ಶಬ್ದವು ಅಥವಾ ಅವನ ಎಂದರೆ ಜ್ಞಾನ ಎಂದಾದರೂ ಅರ್ಥ. 'ವನ ಷಣ ಸಂಭಕ್ತೌ' ಎಂದು ಧಾತು ಇದೆ.

ಹೀಗೆ ಮಾಡಿದ್ದರಿಂದ ಅವನ ಮತ್ತು ಸ್ಥಿತಿ ಶಬ್ದಗಳೆರಡೂ ಸಮಾನಾರ್ಥಕವಾದ್ದರಿಂದ ಪೌನರುಕ್ತ್ಯ ಶಂಕೆಗೆ ಅವಕಾಶವಿಲ್ಲ. ಹೀಗಿದ್ದರೂ ನಿನ್ನ ಸ್ವರೂಪಾವಿಷ್ಟಭಿನ್ನಾಂಶರಾದ ಬ್ರಹ್ಮಾದಿಗಳು **ಸ್ಪರ್ಧಂತಿ** ಸ್ಪರ್ಧಂತೇ ಸ್ಪರ್ಧಿಸುವರು. ಅಥವಾ ಸ್ಪರ್ಧಾ ಯೇಷಾಂ ಅಸ್ತೀತಿ ಸ್ಪರ್ಧಾಃ ತದ್ವದಾಚರಂತೀತಿ ಸ್ಪರ್ಧಂತಿ ಸ್ಪರ್ಧಿಸುವವರಂತೆ ಮಾಡುವರು ಎಂದರ್ಥ. ಮಹಾತ್ಮರಾದ ಬ್ರಹ್ಮಾದಿಗಳಿಗೆ ಸ್ಪರ್ಧಿಸುವಂತೆ ಆಚರಣವೇ ಹೊರತು ಸ್ವಾಭಾವಿಕವಾಗಿ ಸ್ಪರ್ಧೆ ಇಲ್ಲವೆಂದು ಹೇಳಿದಂತಾಯಿತು.

'ಸ್ವಾಂಶಶ್ಚಾತೋ ವಿಭಿನ್ನಾಂಶ ಇತಿ ದ್ವೇಧಾಂಶ ಇಷ್ಯತೇ ।
ವಿಭಿನ್ನಾಂಶೋಽಲ್ಪಶಕ್ತಿಃ ಸ್ಯಾತ್ ಕಿಂಚಿತ್ ಸಾದೃಶ್ಯಮಾತ್ರಯುಕ್ ।
ವಿಷ್ಣ್ವಾದೀನಿ ತು ಸ್ವರೂಪಾಣ್ಯೇವಾನ್ಯಾನಿ ತು ತೇಜೋಯುಕ್ತಾನಿ ।

ತಥಾ ಚ ಪೈಂಗಿಖಿಲೇಷು ।।

' ವಿಶೇಷಕೌ ರುದ್ರವೈನ್ಯೇಂದ್ರದೇವರಾಜನ್ಯಾದ್ಯಾ ಅಂಶಯುತಾ ಅನ್ಯಜೀವಾಃ' ಶ್ರೀ-ಭೂ-ದುರ್ಗಾ-ಅಂಭೃಣೀ ಎಂದಾರಂಭಿಸಿ ತೇನಾವಿಷ್ಟಾ ಎಂಬಲ್ಲಿವರೆಗೆ ಸೂತ್ರಭಾಷ್ಯ, ಗೀತಾಭಾಷ್ಯ, ಬೃಹದ್ಭಾಷ್ಯಗಳಲ್ಲಿ ಹೇಳಿರುವದರಿಂದ ಭಿನ್ನಾಂಶರು ಪ್ರಜೇಶರು ಎಂದು ತಿಳಿಯಬೇಕು.

ವಿ ಗರುಡ ಶೇಷ ರುದ್ರ ವೈನ್ಯ ಪೃಥು ಚಕ್ರವರ್ತಿ ಇಂದ್ರದೇವ ಅಗ್ನಿ, **ರಾಜನ್ಯಾದ್ಯಾಃ** ಮಿಕ್ಕ ಕ್ಷತ್ರಿಯರು ಶ್ರೀಹರಿಯ ಅಂಶದಿಂದ ಕೂಡಿದವರೆಂದರ್ಥ. (ವೇನಸ್ಯ ಅಪತ್ಯಂ ವೈನ್ಯಃ) ಹಿಂದೆ ಶೇಷಾಂತರ್ಯಾಮಿಣಂ ಎಂದು ಹೇಳಿದ ಪ್ರಕಾರ ಇದು ಹರಿಯ ಸ್ತೋತ್ರವೇ ಶೇಷದೇವರ ಸ್ತೋತ್ರವಲ್ಲ. ಬ್ರಹ್ಮಾದಿಗಳು ನಿನ್ನ ಅಧೀನ. ಜಗತ್ಕಾರಣತ್ವ ಅವರಿಗಿಲ್ಲ.

ವಿಭವ ಪದದಿಂದ ಸೃಷ್ಟ್ಯಾದಿಗಳು ಶ್ರೀಹರಿಗೆ ಕ್ರೀಡೆ ಹೊರತು ಆಯಾಸಕರವಲ್ಲವೆಂದು ತಿಳಿಸಿರುವರು. ಕ್ರಿಯಂತೇ ಸ್ತುತಯೋಽನ್ಯತ್ರ ತದಂತರ್ಯಾಮ್ಯಪೇಕ್ಷಯಾ । ನ ಜೀವೇಷು ಗುಣಾಃ ಪೂರ್ಣಾ ಯಥಾಯೋಗ್ಯಂ ಹಿ ತದ್ಗತಾಃ' ಎಂದಿದೆ.

ಜಗತ್ಕರ್ತೃತ್ವವನ್ನು ಹೇಳುವ ಮೂಲಕ ಗುಣಾನಂತ್ಯವನ್ನು ಹೇಳಿ ಈಗ ಅನಂತನಿಗೆ ಕಾಲಾನಂತ್ಯವನ್ನು ಹೇಳುವರು-

**ಪರಮಾಣುಪರಮಮಹತೋಸ್ತ್ವಮಾದ್ಯಂತಾಂತರವರ್ತೀ ತ್ರಯವಿಧುರಃ ।**
**ಆದಾವಂತೇ ಚ ಸತ್ತ್ವಾನಾಂ ಯದ್ಧ್ರುವಂ ತದೇವಾಂತರಾಲೇಽಪಿ ।।೩೬।।**

**ತ್ವಂ** ನೀನು **ತ್ರಯವಿಧುರಃ ಸ್ವತಃ** ಪ್ರಾಕೃತ ಪರಿಮಾಣವಿಲ್ಲದವನಾದ್ದರಿಂದ ಅಣು ಮಹತ್ತು ಮತ್ತು ಮಧ್ಯಮ ಪರಿಮಾಣವಿಲ್ಲದವನಾದರೂ ಅಥವಾ ಅಣುವೇ ಮಧ್ಯಮವೇ ಮಹತ್ತೇ ಆದ ಪರಿಮಾಣ ಉಳ್ಳವನಲ್ಲ (ಅಂದರೆ ಎಲ್ಲ ಪರಿಮಾಣ ಉಳ್ಳವನು ಎಂದರ್ಥ. ಅಥವಾ ಪರಿಮಾಣ ಗುಣವೆಂದು ಕರಿಸಿಕೊಳ್ಳುವದರಿಂದ ಅದಕ್ಕೆ ಪ್ರಯೋಜಕವಾದ ಸತ್ವರಜಸ್ತಮೋಗುಣ ರಹಿತನಾದ ಎಂದರ್ಥ. **ಪರಮಾಣುಪರಮಮಹತೋಃ** ಪರಮಾಣುಕಾಲದ ಪರಮ ಮಹತ್ ಕಾಲದ **ಆದ್ಯಂತಾಂತರವರ್ತೀ** ಆದಿ ಭಾಗ ಕೊನೆ ಭಾಗ ಮಧ್ಯಮಭಾಗಗಳಲ್ಲಿ ಅಂದರೆ ಸದಾಕಾಲ ಇರುವ ಸ್ವಭಾವದವನು (ತಾಚ್ಛೀಲ್ಯಾರ್ಥೇ ಣಿನಿಪ್ರತ್ಯಯ) **ಸತ್ವಾನಾಂ** ಪದಾರ್ಥಗಳ **ಆದೌ** ಉತ್ಪತ್ತಿಗೆ ಮೊದಲು **ಅಂತೇ ಚ** ನಾಶದ ನಂತರವು **ಯತ್**

ಯಾವ ನಿನ್ನ ಸ್ವರೂಪವು **ಧ್ರುವಂ** ತಪ್ಪದೇ ನಿಯಮೇನ ಇರುವದೋ **ತದೇವ** ಆದೇ ಸ್ವರೂಪವೇ **ಅಂತರಕಾಲೇಽಪಿ** ಮಧ್ಯದಲ್ಲಿ ಮಧ್ಯಕಾಲದಲ್ಲಿ ಇರುವದು (ವಿಜಯ ಧ್ವಜರು)

ಅಥವಾ ಪರಮಾಣುವೆಂದರೆ ಸೂಕ್ಷ್ಮವಾದ ಮೂಲಕಾರಣ ಪರಮ ಮಹತ್ತೆಂದರೆ ಅಂತಿಮಕಾರ್ಯ. ಇವುಗಳ ಆದಿ-ಅಂತ್ಯ-ಮಧ್ಯಗಳಲ್ಲಿಯೂ ಇರುವ ಸ್ವಭಾವದವನು. ಆದ್ದರಿಂದಲೇ ಆದ್ಯಂತಮಧ್ಯಶೂನ್ಯನು ನೀನೇ **ಧ್ರುವಂ** ಶಾಶ್ವತನು ನಿನ್ನಿಂದ ಸೃಷ್ಟರಾದ ಬ್ರಹ್ಮಾದಿಗಳು ಶಾಶ್ವತರಲ್ಲ. ಏಕೆಂದರೆ **ಯತ್** ಯಾವುದು **ಸತ್ವಾನಾಂ** ಗುಣತ್ರಯಕಾರ್ಯಗಳ ಮೊದಲಿನಲ್ಲಿಯೂ ಕೊನೆಯಲ್ಲಿಯೂ ಮಧ್ಯದಲ್ಲಿಯೂ ಇರುವದೋ **ತದೇವ** ಆದೇ **ಧ್ರುವಂ** ಶಾಶ್ವತವೆನಿಸುವದು ಎಂದೂ ಚಿಟ್ಟಿ ಆಚಾರ್ಯರು ಅರ್ಥ ಮಾಡಿರುವರು.

**ಶ್ರೀ ಸತ್ಯಧರ್ಮರ ವಿಶಿಷ್ಟ ಅರ್ಥ**

ಕೆಲವರು ರಕ್ಷಣ ನಿನ್ನಿಂದ, ಸೃಷ್ಟಿ-ನಷ್ಟಿಗಳು ಅಂಬುಜಭವ-ಭವರಿಂದ (ಬ್ರಹ್ಮ-ರುದ್ರರಿಂದ) ಎಂದು ಹೇಳುವರು. ಅವರು ಬುದ್ಧಿಮಂತರಲ್ಲ ಎಂದು ಹೇಳುವರು. **ಯದಂತರಾಲೇ** ಎಂದು. ಅಂದರೆ ಯಾವುದು ಸ್ಥಿತಿ ಸಮಯದಲ್ಲಿ ಧ್ರುವಂ ನಿಯತವೋ ತದೇವ ಆದೇ ಸತ್ವಾನಾಂ ಪದಾರ್ಥಗಳ ಆದೌ ಅಂತೇ ಚ ಧ್ರುವಂ ಪದಾರ್ಥಗಳ ಉತ್ಪತ್ತಿ ಮೊದಲು ನಾಶ ಅನಂತರ ಧ್ರುವಂ ನಿತ್ಯವಾದ ಆದೇ ಇರುವದು. ಬೇರೆಯದಲ್ಲ. ಅಂತರಾಲೇ ಮಧ್ಯದಲ್ಲಿಯೂ ಎಂದು ಯೋಜನೆ ಅಂದರೆ ಮೂರು ಮಾಡುವವನು ಒಬ್ಬನೇ ಎಂದು ಭಾವ. 'ಸತ್ತ್ವಂ ದ್ರವ್ಯಸ್ವಭಾವಯೋಃ' ಎಂದು ವಿಶ್ವವಿದೆ. ದ್ರವ್ಯ ಪದಾರ್ಥ. ।।೩೬।।

ದೇಶಾನಂತ್ಯವನ್ನು ಹೇಳುವರು-

> **ಕ್ಷಿತ್ಯಾದಿಭಿರೇಷ ಕಿಲಾವೃತಃ ಸಪ್ತಭಿರ್ದಶಗುಣೋತ್ತರೈರಾಂಡಕೋಶಃ ।**
> **ಯತ್ರ ಭಗವತ್ಯಣುಭ್ಯೋಽಣುಕಲ್ಪಃ ಸಹಾಂಡಕೋಟಿಭಿಸ್ತದನಂತಮ್ ।।**

**ಯಃ** ಯಾವ ಅಂಡಕೋಶವು **ದಶಗುಣೋತ್ತರೋತ್ತರೈಃ** ಹಿಂದಿನದಕ್ಕಿಂತ ಮುಂದಿನ ತತ್ತ್ವವು ಹತ್ತು ಹತ್ತು ಪಟ್ಟು ಹೆಚ್ಚಾಗಿರುವ **ಕ್ಷಿತ್ಯಾದಿಭಿಸಪ್ತಭಿಃ** ಭೂಮಿಯನ್ನು ಬಿಟ್ಟು (ಅತದ್ಗುಣಸಂವಿಜ್ಞಾನಬಹುವ್ರೀಹಿಃ) ನೀರು, ತೇಜಸ್ಸು , ವಾಯು, ಆಕಾಶ, ಅಹಂಕಾರ, ಮಹತ್ತತ್ತ್ವ ಗುಣತ್ರಯಗಳೆಂಬ ಏಳರಿಂದ **ಆವೃತಃ** ಆವರಿಸಲ್ಪಟ್ಟಿರುವದೋ

**ಸ ಏಷ ಆಂಡಕೋಶಃ** ಈ ಬ್ರಹ್ಮಾಂಡಕೋಶವು **ಅಂಡಕೋಟಿಭಿಃ ಸಹ** ಇಂತಹ ಕೋಟಿ ಕೋಟಿ ಬ್ರಹ್ಮಾಂಡಗಳೊಂದಿಗೆ **ಯತ್ರ ಭಗವತಿ** ಯಾವ ಶ್ರೀಹರಿಯಲ್ಲಿ **ಅಣುಭ್ಯಃ** ಸೂಕ್ಷ್ಮವಾದವುಗಳಿಗಿಂತ **ಅಣುಕಲ್ಪಃ** ಸೂಕ್ಷ್ಮವಾಗಿರುವದೋ **ತತ್** ಆ ಶ್ರೀಹರಿಯ ಸ್ವರೂಪವು **ಅನಂತಂ** ಅಪರಿಚ್ಛಿನ್ನವಾದುದು.

ಕ್ಷಿತ್ಯಾದಿ ಎಂಬಲ್ಲಿ ಅತದ್ಗುಣಸಂವಿಜ್ಞಾನಬಹುವ್ರೀಹಿ ಎಂದು ತಿಳಿಯಬೇಕು. ಆದ್ದರಿಂದ ಕ್ಷಿತಿಯನ್ನು ಬಿಟ್ಟು ಎಂದರ್ಥವಾಗುವದು. ಕ್ಷಿತಿಯನ್ನು ಸೇರಿಸಿಕೊಂಡರೆ ಎಂಟು ಆವರಣಗಳಾಗುವವು. **ಸಪ್ತಭಿಃ** ಎಂಬುದು ತಪ್ಪಾಗುವದು. ದಶಗುಣಾಧಿಕಗಳಾದವು ಏಳು. ಪೃಥಿವಿಯು ದಶಗುಣಾಧಿಕವಲ್ಲ. ಪೃಥಿವಿಗಿಂತ ಹತ್ತು ಪಟ್ಟು ಹೆಚ್ಚು ನೀರು ಎಂದು ತಿಳಿಸಲು ಕ್ಷಿತಿಪದವನ್ನಿಟ್ಟಿರುವರು 'ಅಬಗ್ನೀರನಭೋಽಹಂಕೃನ್ಮಹತ್ತತ್ತ್ವ-ಗುಣತ್ರಯೈಃ । ಕ್ರಮಾದ್ದಶೋತ್ತರೈರೇತದಾವೃತಂ ಪರತಸ್ತತಃ । ಎಂಬ ಪ್ರಮಾಣವೇ ಇದಕ್ಕೆ ಆಧಾರ. ಇದರಂತೆ ತಮಸ್ಸು ರಜಸ್ಸು ಮತ್ತು ಸತ್ವ ಮೂರು ಸೇರಿ ಹತ್ತು ಪಟ್ಟು ಮಾತ್ರ ಅಧಿಕ. ಆದ್ದರಿಂದಲೇ ಮೇಲಿನ ಪ್ರಮಾಣದಲ್ಲಿ ಗುಣೈಃ ಎನ್ನದೇ ಗುಣತ್ರಯೈಃ ಎಂದಿದ್ದಾರೆ. ಗುಣಗಳು ಪರಸ್ಪರ ದ್ವಿಗುಣ ಅಧಿಕವೆಂದು ಪ್ರಸಿದ್ಧ. 'ತಮಸೋ ರಜಸ್ತು ದ್ವಿಗುಣಂ ರಜಸಃ ಸತ್ವಮೇವ ಚ । ಪರಿಮಾಣತ ಏವಂ ಸ್ಯುಸ್ತ್ರಯಃ ಪ್ರಕೃತಿಜಾ ಗುಣಾಃ । ಎಂಬ ಪ್ರಮಾಣವು ಈ ಅರ್ಥವನ್ನು ಸ್ಪಷ್ಟಪಡಿಸುವದು. ಹೀಗೆ ಹೇಳದೇ ಒಂದೊಂದು ಗುಣವೂ ದಶಗುಣ ಅಧಿಕವೆಂದರೆ ಸಪ್ತಭಿಃ ಎಂಬುದರ ವಿರೋಧ ಬರುವದು ಎನ್ನುತ್ತಾರೆ.

ಶ್ರೀಸತ್ಯಧರ್ಮರ ಪ್ರಕಾರ 'ಆಂಡಕೋಶೇ ಶರೀರೇಽಸ್ಮಿನ್ ಸಪ್ತಾವರಣಸಂಯುತೇ' ಎಂಬ ತೃತೀಯಸ್ಕಂಧ ಯಾದುಪತ್ಯದಲ್ಲಿ ಪೃಥಿವ್ಯಾದಿ ಪಂಚಭೂತ ಅಹಂಕಾರ ಮಹತ್ತತ್ವಗಳೆಂಬ ಏಳರಿಂದ ಎಂದು ಹೇಳಿದೆ. ಕಿಲ ಎಂಬುದರಿಂದ 'ಅಬಗ್ನೀರನಭೋಽಹಂಕೃತ್' ಮುಂತಾಗಿ ಹೇಳಿದ ನವಾವರಣ ಪಕ್ಷವೂ ಒಂದು ಸಂಭಾವಿತ ಎಂದು ತಿಳಿಸುವರು. 'ಕಿಲಶಬ್ದಸ್ತು ವಾರ್ತಾ ಸಂಭಾವನೇ' ಎಂದು ವಿಶ್ವವಿದೆ ಎನ್ನುತ್ತಾರೆ. 'ಯದ್ರೋಮಕೂಪಮಪಿ ಪೂರಯಿತುಂ ನ ಶೇಕುಃ ಬ್ರಹ್ಮಾಂಡಖರ್ಪರಶತಾಯುತಕೋಟಯೋಽಪಿ' ಎಂದು ಪ್ರಮಾಣವಿದೆ. ।।೩೭।।

ಶ್ರೀಹರಿಯು ಇತರರಿಗಿಂತಲೂ ಶ್ರೇಷ್ಠ ಎಂದು ತಿಳಿಯುವುದರ ಫಲ ಹೇಳುವರು-

**ವಿಷಯತೃಷೋ ನರಪಶವೋ ಯೇ**
**ಉಪಾಸತೇ ವಿಭೂತೀರ್ನ ಪರಂ ತ್ವಾಮ್ ।**
**ತೇಷಾಮಾಶಿಷ ಈಶ ತದನು**
**ವಿನಶ್ಯಂತಿ ಯಥಾऽರಾಜಕುಲಮ್ ॥೩೮॥**

**ವಿಷಯತೃಷಃ** ವಿಷಯಗಳಲ್ಲೇ ಆಸಕ್ತಿಯುಳ್ಳ ಆದ್ದರಿಂದಲೇ **ನರಪಶವಃ** ಮನುಷ್ಯಾಕಾರದ ಪಶುಗಳಾದ **ಯೇ** ಯಾವ ಮಂದಾಧಿಕಾರಿಗಳು ಇರುವರೋ **ತೇ** ಅವರು **ವಿಭೂತೀಃ** ನಿನ್ನ ವಿಶೇಷಸನ್ನಿಧಾನದಿಂದ ಯುಕ್ತರಾದ ಬ್ರಹ್ಮ-ರುದ್ರ-ಇಂದ್ರ ಮೊದಲಾದವರನ್ನು **ಉಪಾಸತೇ** ತಮ್ಮ ಕಾರ್ಯಸಿದ್ಧಿಗಾಗಿ ಆರಾಧಿಸುವರೋ **ಪರಂ** ಅವರ ಪಾಲಕನೂ ಅವರಿಗೆ ಜ್ಞಾನಾದಿ ಸ್ಫೂರ್ತಿಯನ್ನು ಕೊಡುವವನೂ ಆದ್ದರಿಂದ ಅವರಿಗಿಂತ ಉತ್ತಮನೂ ಆದ ಅವರಿಂದ ಭಿನ್ನನಾದ **ತ್ವಾಂ** ನಿನ್ನನ್ನು **ನ ಉಪಾಸತೇ** ಉಪಾಸಿಸುವದಿಲ್ಲ. **ಹೇ ಈಶ** ನಿಯಾಮಕನಾದ ಶ್ರೀಹರಿಯೇ **ತೇಷಾಂ** ಬೇರೆ ದೇವತೆಗಳನ್ನು ಉಪಾಸಿಸುವ ಅವರ **ಆಶಿಷಃ** ಇಷ್ಟಾರ್ಥಗಳು **ತದನು** ಹೊಂದಿದ ಕೂಡಲೇ ಸ್ವಲ್ಪ ಕಾಲ ಫಲ ಅನುಭವಿಸಿದ ಕೂಡಲೇ **ಯಥಾ ಅರಾಜಕುಲಂ ತಥಾ** ಪಾಲಕನಾದ ರಾಜನಿಲ್ಲದ ಜನಸಮುದಾಯದಂತೆ ೨. ಧರ್ಮವಿರುದ್ಧರಾದ ರಾಜನ ವಂಶದಂತೆ (ರಾಜಕುಲಂ ಎಂದು ಪದವಿಭಾಗ ಮಾಡಿದಾಗ ರಾಜರ ವಂಶನಾಶವಾದ ಮೇಲೆ ಅವರ ಸೇವಕರ ಇಷ್ಟಾರ್ಥಗಳು ನಾಶವಾಗುವಂತೆ ಎಂದರ್ಥ) **ವಿನಶ್ಯಂತಿ** ನಾಶವಾಗುವವು. 'ತದ್ಧಾಸ್ಯ ಅಂತತಃ ಕ್ಷೀಯತ ಏವ' ಎಂದು ಶ್ರುತಿ ಇದೆ (ಚೆಟ್ಟಿ)

**ಶ್ರೀಸತ್ಯಧರ್ಮರ ಪ್ರಕಾರ**

**ವಿಷಯತೃಷಃ** ವಿಷಯಾಭಿಲಾಷೆಯುಳ್ಳ ತನ್ನಿಮಿತ್ತ **ನರಪಶವಃ** ನರಪಶುಗಳಾದ (ಇದಕ್ಕೆ ನಿಮಿತ್ತ ಭಗವದಿತರೋಪಾಸಕತ್ವವು) **ಯೇ** ಯಾರು **ವಿಭೂತೀಃ** ರಮಾತಾಮರಸಸಂಭವ ರಮಾ-ಬ್ರಹ್ಮಾದಿಗಳನ್ನು **ಉಪಾಸತೇ** ಉಪಾಸಿಸುವರೋ **ಪರಂ** ಅವರಿಗಿಂತ ಉತ್ತಮನಾದ **ತ್ವಾಂ** ನಿನ್ನನ್ನು ಉಪಾಸಿಸುವದಿಲ್ಲ **ತೇ** ಅವರು **ನರಪಶವಃ** ನರಪಶುಗಳು **ತೇಷಾಂ** ಉಪಾಸಕರಿಗೆ **ತೇಷಾಂ** ಧಾತೃಗಳ ದೆಸೆಯಿಂದ **ಆಶಿಷಃ** ಯಾವ ಸ್ವರ್ಗಾದಿ ಅಭಿಲಾಷೆಗಳು ಇವೆಯೋ **ತದನು** ತರತಮಭಾವ ಯೋಗ್ಯತೆ ಇರುವದರಿಂದ ನಾಶವಾಗುವವು. (ಸ್ವಲ್ಪ ಭೋಗವಾದ ಮೇಲೆ) 'ಕ್ಷೀಣೇ

ಪುಣ್ಯೇ ಮರ್ತ್ಯಲೋಕಂ ವಿಶಂತಿ' ಎಂದಿದೆಯಷ್ಟೇ. **ಯಥಾ ಅರಾಜಕುಲಂ** ರಾಜರಿಲ್ಲದ ದೇಶದ ಜನರಂತೆ ಎಂದು ಎರಡನೆಯ ಅರ್ಥ. **ಯೇ ವಿಷಯತೃಷಃ** ನಿತ್ಯವಿಷಯನಾದ ನಿನ್ನಲ್ಲಿ ತೃಷೆಯುಳ್ಳವರು **ವಿಭೂತೀಃ** ನಿನ್ನ ವಿಭೂತಿಗಳನ್ನು **ಪರಂ** ಅತ್ಯಂತಮುಖ್ಯವೆಂದು **ಉಪಾಸತೇ** ಉಪಾಸಿಸುವರು **ಪರತಂತ್ರಂ** ಮುಖ್ಯಸಾಧನವಾದ **ತ್ವಾಂ** ನಿನ್ನನ್ನು **ಉಪಾಸತೇ** ಉಪಾಸಿಸುತ್ತಾರೆ. **ಹೇ ನರ** ಅಚಲನೇ ಅವಿನಾಶಿಯೇ **ಈಶ** ಸ್ವಾಮಿಯೇ ನರಶಬ್ದವು ಅಮರ ಶಬ್ದಪರ್ಯಾಯವಾದ್ದರಿಂದ ಮೊದಲು ಮನುಷ್ಯಪಶುಗಳೆಂದರ್ಥ. ಈಗ ದೇವಪಶುಗಳೆಂದರ್ಥ. **ತೇಷಾಂ** ದೇವಪಶುಗಳಿಗೆ **ಅನು** ಮೋಕ್ಷದಲ್ಲಿಯೂ ಕೂಡ ಯತ್ ತತ್ ನ ಪುನರಾವೃತ್ತಿಯು ಇಲ್ಲ. ಅಂದರೆ ಮೋಕ್ಷನಾಶವಾಗುವದಿಲ್ಲ. 'ಅನು ಮೋಕ್ಷೇ ದಾನಕರ್ಮಣಿ ದರ್ಶತಃ' ಎಂದು ವಿಶ್ವವಿದೆ. ಈ ಪಕ್ಷದಲ್ಲಿ **ಯಥಾ ರಾಜಕುಲಂ** ರಾಜನಿರುವ ದೇಶದಂತೆ ಎಂದರ್ಥ.

ಬೃಹದ್ಭಾಷ್ಯದಲ್ಲಿ 'ಸ ನ ವೇದ ಯಥಾ ಪಶುಃ' ಎಂಬುದರ ವ್ಯಾಖ್ಯಾನ ಮಾಡುವಾಗ 'ಅಹೇಯೋಽನ್ಯೋ ಹರಿಶ್ಚಾನ್ಯಃ ಇತಿ ಮತ್ವಾಽನ್ಯಮೇವ ವಾ । ಯ ಉಪಾಸ್ತೇ ನ ಸ ಜ್ಞಾನೀ ಮನುಷ್ಯಾಣಾಂ ಪಶುರ್ಹಿ ಸಃ । ಸಮ್ಯಜ್ಜ್ಞಾನೀ ತು ದೇವಾನಾಂ ಪಶುರಿತ್ಯಭಿಧೀಯತೇ ।।ಇತಿ ಚ।। ಎಂದು ಹೇಳಿದ್ದಾರೆ.

'ಧಿಯಾ ನರ' ಎಂಬ ಋಗ್ವ್ಯಾಖ್ಯಾನ ಭಾಷ್ಯದಲ್ಲಿ ನರ ಶಬ್ದಕ್ಕೆ ಅಚಲೌ ನರೌ ತಾವವಿನಾಶಿತ್ವಾದುಪಚಾರಃ ಕ್ವಚಿದ್ಭವೇತ್ । ಅಮರತ್ವವತ್ ಎಂದಿದೆ. ಆದರ ಟೀಕೆಯಲ್ಲಿ ನರೌ ತಾವಿತ್ಯನೂದ್ಯ ಅಚಲಾವಿತಿ ವ್ಯಾಖ್ಯಾನಂ ನಿರ್ವಿಕಾರೌ ಇತಿ । ಲಾ ಪರಿವರ್ತನೇ ಧಾತುವಿಗೆ ನಞ್‌ಪೂರ್ವಕವಾದುದಕ್ಕೆ ಕ ಪ್ರತ್ಯಯ. ಅವಿನಾಶಿತ್ವಾತ್ ಎಂಬುದು ಅರ್ಥಾಂತರ. ರೀಜ್ ಕ್ಷಯೇ ರಿಷ್ ಹಿಂಸಾಯಾಂ ಧಾತುವಿಗೆ ಡ ಪ್ರತ್ಯಯ ಮಾಡಿದೆ. ಎಲ್ಲ ಕಡೆ ನರ ಶಬ್ದಕ್ಕೆ ಹೀಗೆ ವ್ಯಾಖ್ಯಾನವೇ ಎಂದರೆ ಅಲ್ಲ ಎಂದಿರುವರು ಉಪಚಾರ ಎಂದು. ಆದರ ಟಿಪ್ಪಣಿಯಲ್ಲಿ ಲಾ ಪರಿವರ್ತನೇ ಇತಿ. ಯದ್ಯಪಿ ಲಾ ಆದಾನೇ ಎಂದು ಧಾತುಪಾಠದಲ್ಲಿ ಲಾ ಧಾತುವಿಗೆ ಆದಾನಾರ್ಥತ್ವ ಹೇಳಿದೆ. ಉತ್ತರಧಾತು ವೃತ್ತಿಯಲ್ಲಾದರೋ ರಾತಿ ಲಾತೀತಿ ಎಂದು ದ್ವಾವಪಿ ಪದಾರ್ಥೌ ಎಂದು ಚಾಂದ್ರಾಃ ಇತಿ ದಾನಾರ್ಥತ್ವಂ ಉಕ್ತಮ್ । ನತು ಪರಿವರ್ತನಾರ್ಥತ್ವಂ ಆದರೂ ಧಾತೂನಾಂ ಎಂದಾರಂಭಿಸಿ ಬೀಜಮಾಹೇತ್ಯರ್ಥಃ ಎಂಬಲ್ಲಿವರೆಗೆ ಮಾಡಿದ ವ್ಯಾಖ್ಯಾನವನ್ನು ನೋಡಬೇಕು. ।।೩೮।।

ವಿಷಯ ಕಾಮನೆಯಿಂದಾದರೂ ದೇವರನ್ನು ಸೇವಿಸಿದಲ್ಲಿ ಕ್ರಮವಾಗಿ ಮೋಕ್ಷವೇ ಸಿಗುವದು. ಇದು ಧ್ರುವರಾಜನೇ ಮುಂತಾದವರಲ್ಲಿ ಕಂಡಿದೆ ಎಂಬ ಅಭಿಪ್ರಾಯದಿಂದ ಹೇಳುವರು-

**ಕಾಮಧಿಯಸ್ತ್ವಯೀಶ ರಚಿತಾನ ಪುನರಾರೋಹಂತಿ ಯಥಾ ಕರಂಭಬೀಜಾನಿ ।**
**ಜ್ಞಾನಾತ್ಮನ್ಯಗುಣಮಯೇ ಗುಣಗಣತೋಽಸ್ಯ ದ್ವಂದ್ವಜಾಲಾನಿ ॥೩೯॥**

**ಹೇ ಈಶ** ನಿಯಾಮಕನೇ **ಜ್ಞಾನಾತ್ಮನಿ** ಜ್ಞಾನಾನಂದಾದಿಕಲ್ಯಾಣಗುಣಾತ್ಮಕನಾದ **ಅಗುಣಮಯೇ** ತ್ರಿಗುಣಾತ್ಮ ದೇಹರಹಿತನಾದ ಅಥವಾ ಸರ್ವಪ್ರಧಾನ ಪ್ರಧಾನನಾದ (ಗುಣ ಅಪ್ರಧಾನ ಅಗುಣ ಪ್ರಧಾನ ಮಯ ಪ್ರಧಾನ) 'ಮಯಂ ಪ್ರಧಾನಮುದ್ದಿಷ್ಟಂ' ಎಂದಿದೆ. **ತ್ವಯಿ** ನಿನ್ನಲ್ಲಿ **ಕಾಮಧಿಯಃ** ಶಬ್ದಾದಿವಿಷಯ-ಕಾಮನೆಗಳು **ರಚಿತಾ ಯದಿ** ಮಾಡಿದವುಗಳಾದಲ್ಲಿ **ಕರಂಭಬೀಜಾನಿ ಯಥಾ ತಥಾ** ಹುರಿದ ಬೀಜಗಳಂತೆ **ಪುನಃ ನ ರೋಹಂತಿ** ಮತ್ತೆ ಅಂಕುರ ವಾಗುವದಿಲ್ಲ. 'ಉಪ್ತಾನಿ ಗುಪ್ತಾನಿ ಭವಂತಿ ನ ಭವಂತ್ಯಂಕುರಾತ್ಮನಾ ತಥಾ' ಎಂದು ಶ್ರೀಸತ್ಯಧರ್ಮರು ಹೇಳಿರುವರು. ದೇಹಾಂತರಗಳು ಬರುವದಕ್ಕೆ ಕಾರಣವಾಗುವದಿಲ್ಲವೆಂದರ್ಥ. **ಅಸ್ಯ ಚ** ಈ ಜೀವಜಗತ್ತಿಗೆ **ಗುಣಗಣತಃ** ಪ್ರಾಕೃತಗುಣ ಸಂಬಂಧದಿಂದಲೇ **ದ್ವಂದ್ವಜಾಲಾನಿ** ಸುಖ-ದುಃಖಸಮೂಹಗಳು **ಭವಂತಿ** ಆಗುವವೋ ನಿರ್ಗುಣನಾದ ನಿನ್ನ ಸಂಬಂಧದಿಂದ ಕ್ರಮವಾಗಿ ಮೋಕ್ಷವಾಗುವದು. ಯದ್ಯಪಿ ಕರಂಭಾ ದಧಿಸಕ್ತವಃ ಎಂಟನೇ ಆಧ್ಯಾಯ ಇಪ್ಪತ್ತೆರಡನೆಯ ವರ್ಗದ ಮೊದಲನೇ ಋಕ್ ವ್ಯಾಖ್ಯಾನದಲ್ಲಿ ಘೃತಮಿಶ್ರಯವಾಃ ಸಕ್ತವಃ ಎಂದೂ ಎರಡನೇ ಋಕ್ ವ್ಯಾಖ್ಯಾನದಲ್ಲಿ 'ಸಕ್ತುಮಿವ ತಿತವುನಾ' ಎಂಬಲ್ಲಿ ಧಾನಾಃ ಭ್ರಷ್ಟಯವಾಃ ಎಂದಿದ್ದಾರೆ. ಈ ವಿಷಯದಲ್ಲಿ ಭರ್ಜಿತಯವಾದಿಬೀಜಾನಿ ಎಂದು ಮಾಧವನ ಮಾತು ಇದೆ. ಆದ್ದರಿಂದ ನಿರ್ಬೀಜವ್ಯಾಕರಣ ವ್ಯಾಖ್ಯಾನವೆಂದು ತಿಳಿಯಬಾರದು. 'ಧಾನಾ ಭ್ರಷ್ಟಯವಾಸ್ತ್ರಿಯಾಂ' ಎಂದು ಅಮರವು ಇದೆ.

ಫಲಕಾಮನೆಯಿಂದ ಮಾಡಿದ ಭಗವದಾರಾಧನೆಯೂ ಮೋಕ್ಷಸಾಧಕವೆಂದ ಮೇಲೆ ಭಾಗವತಧರ್ಮಮಾಹಾತ್ಮ್ಯ ಮತ್ತೆಷ್ಟು ದೊಡ್ಡದು ಎಂದು ತಿಳಿಸಲು ಭಾಗವತಧರ್ಮಸಂಪ್ರದಾಯಪ್ರವರ್ತಕತ್ವೇನ ಪರಮಾತ್ಮನ ಸ್ತೋತ್ರವನ್ನು ಮಾಡುತ್ತಿದ್ದಾರೆ-

**ಜಿತಮಜಿತ ತದಾ ಭಗವತಾ**
**ಯದಾಹ ಭಾಗವತಂ ಧರ್ಮಮನವದ್ಯಮ್ ।**
**ನಿಷ್ಕಿಂಚನಾ ಯೇ ಮುನಯ ಆತ್ಮಾರಾಮಾ**
**ಯಮುಪಾಸತೇಽಪವರ್ಗಾಯ ॥೪೦॥**

**ಅಜಿತ** ಸೋಲಿಲ್ಲದ ಸ್ವಾಮಿಯೇ **ಯೇ** ಯಾರು **ನಿಷ್ಕಿಂಚನಾಃ** ನಿನ್ನ ಹೊರತು ಏನನ್ನು ಅಪೇಕ್ಷಿಸದವರೋ ಆದ್ದರಿಂದಲೇ **ಆತ್ಮಾರಾಮಾಃ ಮುನಯಃ** ಮನನ ಶೀಲರಾದ ಸನಕಾದಿಗಳು **ಅಪವರ್ಗಾಯ** ಮೋಕ್ಷಕ್ಕಾಗಿ **ಯಂ** ಯಾವ ಭಾಗವತ ಧರ್ಮವನ್ನು **ಉಪಾಸತೇ** ಉಪಾಸಿಸುವರೋ **ತಂ** ಆ **ಅನವದ್ಯಂ** ಸಂಸಾರಕಾರಣತ್ವ ಮುಂತಾದ ದೋಷವಿಲ್ಲದ **ಭಾಗವತಂ ಧರ್ಮಂ** ನಿವೃತ್ತಧರ್ಮವನ್ನು **ಯದಾ** ಯಾವಾಗ **ಭವಾನ್** ನೀನು **ಆಹ** ಅವರಿಗೆ ಉಪದೇಶಿಸಿದೆಯೋ **ತದಾ** ಆಗಲೇ **ಭವತಾ** ನಿನ್ನಿಂದ **ಜಿತಂ** ಸಂಸಾರವು ಜಯಿಸಲ್ಪಟ್ಟಿತು. ಭಾಗವತಧರ್ಮವನ್ನು ಹೇಳುವ ಮೂಲಕ ಭಕ್ತರಿಗೆ ಸಂಸಾರವನ್ನು ಜಯಿಸುವ ಉಪಾಯವನ್ನು ಹೇಳಿದೆ ಎಂದರ್ಥ.

'ಯಥಾ ತಥಾ' ಎಂಬ ಪಾಠದಲ್ಲಿ ನೀನು ಭಾಗವತಧರ್ಮವನ್ನು ಹೇಗೆ ಹೇಳಿದೆಯೋ ಹಾಗೆ ನೀನು ಸರ್ವೋತ್ಕೃಷ್ಟನಾಗಿಯೇ ಸ್ಥಿತನಾಗಿದ್ದಿ. ಅಥವಾ ನೀನು ಯಥಾವತ್ತಾಗಿ ಉಪದೇಶಿಸಿದೆ ಮತ್ತು ನಿನ್ನಿಂದ ಜಯಿಸಲ್ಪಟ್ಟಿತು. ಎಂದೂ ಅರ್ಥ. **ಯಂ** ಯಾವ ಪರಮಾತ್ಮನನ್ನು ಉಪಾಸಿಸುವರೋ ಆ ನಿನ್ನಿಂದ ಎಂದೂ ಅನ್ವಯ ಮಾಡಿರುವರು. ಇದರಿಂದ ಫಲಕಾಮನೆಯಿಂದ ಆರಾಧಿಸಿದರೂ ಮೋಕ್ಷ ಸಿಗುವಾಗ ಭಾಗವತಧರ್ಮಕ್ಕೆ ನೀನೇ ಸಂಪ್ರದಾಯಪ್ರವರ್ತಕ ಅದರ ಮಹಿಮೆ ಹೇಳುವದೇನು ಎಂದಂತಾಯಿತು.

**ಸತ್ಯಧರ್ಮರ ವಿಶಿಷ್ಟ ಅರ್ಥ**

ಯಂ ಧರ್ಮಂ ಅಪವರ್ಗಾಯ ಉಪಾಸತೇ । ಯಂ ಚ ಭಗವಾನ್ ಭಾಗವತಂ ಅನವದ್ಯಂ ಧರ್ಮಂ ಆಹ । ತದ್ ದ್ವಂದ್ವಜಾಲಂ ಅಭವತಾ ಅ ಶಬ್ದವಾಚ್ಯನಾದ ನೀನುಳ್ಳ 'ಅಃ ಭವಾನ್ ಯಸ್ಯ ಸಃ ಅಭವಾನ್ ಅಭವತಾ' ಆ ಭವಾನ್ ಯಸ್ಯ ಸಃ ಆಭವಾನ್ ತೇನ ಸಮೀಚೀನನಾದ ನೀನುಳ್ಳ ಭಕ್ತನಿಂದ **ಜಿತಂ** ಸಂಸಾರವು ಸೋತಿತು. **ತದಾ ಭವತಾ** ನಿಮಿತ್ತನಾದ ನಿನ್ನಿಂದ ಗೆಲ್ಲಲ್ಪಟ್ಟಿತು. ತೇನ ಧರ್ಮೇಣ ತ್ವೈಃ ಜಿತಂ ನೀನು ಉಪದೇಶಿಸಿದ ಧರ್ಮದಿಂದ ಮುನಿಗಳಿಂದ ಗೆಲ್ಲಲ್ಪಟ್ಟಿತು. ಯಂ ಧರ್ಮಂ

ಭವಾನ್ ಯಾನ್ ಪ್ರತಿ ಯದಾ ಯಸ್ಮಾತ್ ಆಹ ತದಾ ತಸ್ಮಾತ್ ತವ ಅಂದರೆ ಸಂಸಾರ ಗೆಲ್ಲಲು ಬೇಕಾದ ಧರ್ಮ ಉಪದೇಶಿಸಿದವನು ನೀನಾದ್ದರಿಂದ ಅವರು ಗೆದ್ದದ್ದು ನೀನೇ ಗೆದ್ದಂತೆಯೇ ಎಂದು ಭಾವ. ।।೪೦।।

**ವಿಷಮಮತಿರ್ನ ಯತ್ರ ನೃಣಾಂ**
**ತ್ವಮಹಮಿತಿ ಮಮ ತವೇತಿ ಚ ಯೋಽನ್ಯತ್ರ ।**
**ವಿಷಮಧಿಯಾ ರಚಿತಃ ಸ ಹ್ಯಶುದ್ಧಃ**
**ಕ್ಷಯಿಷ್ಣುರಧರ್ಮಬಹುಲಃ ।।೪೧।।**

**ಯತ್ರ** ನಿನ್ನಿಂದ ಉಪದಿಷ್ಟವಾದ ನಿವೃತ್ತಧರ್ಮವನ್ನು ತಿಳಿದರೆ ಅನುಷ್ಠಾನ ಮಾಡಿದರೆ **ನೃಣಾಂ** ಅಧಿಕಾರಿಗಳಾದ ಜನರಿಗೆ **ತ್ವಂ** ಸ್ವತಂತ್ರನಾದ ನೀನು **ಅಹಂ** ಅಸ್ವತಂತ್ರನಾದ ನಾನು **ಇತಿ** ಎಂಬ **ತವ** ನಿನ್ನದು **ಮಮ** ನನ್ನದು **ಇತಿ** ಎಂಬ **ವಿಷಮಮತಿಃ** ಶಾಸ್ತ್ರ ನಿಷಿದ್ಧಬುದ್ಧಿಯು ಅಥವಾ ಅಭಿಮಾನಕ್ಕೆ ಕಾರಣವಾದ ಬುದ್ಧಿಯು **ನ ಭವತಿ** ಉಂಟಾಗುವದಿಲ್ಲವೋ **ಚ** ಎಲ್ಲವೂ ಶ್ರೀಹರಿಯ ಅಧೀನ ಅವನಿಂದ ಪ್ರೇರಿತರಾದ ನಾನು ನೀನು ಕಾರ್ಯದಲ್ಲಿ ಪ್ರವೃತ್ತರಾಗುವೆವು ಎಂಬ ಶಾಸ್ತ್ರ ವಿಹಿತವಾದ ಸಮಬುದ್ಧಿಯು ಉಂಟಾಗುವದು. ಅಂತಹ ಅನವದ್ಯಧರ್ಮವನ್ನು ನೀನು ಉಪದೇಶಿಸಿದೆ ಎಂದು ಹಿಂದೆ ಅನ್ವಯ. **ಯತ್ರ** ಯಾವ ಪ್ರವೃತ್ತಧರ್ಮವು **ಅನ್ಯತ್ರ** ಶ್ರೀಹರಿಯನ್ನು ಬಿಟ್ಟು (ಅವನ ಸ್ವಾತಂತ್ರ್ಯ ಅರಿಯದೆ) ಅಥವಾ ಈ ಕಾಮುಕನಲ್ಲಿ **ವಿಷಮಧಿಯಾ** ವಸ್ತುಸ್ಥಿತಿಗೆ ವಿರುದ್ಧವಾದ ಜ್ಞಾನದಿಂದ ನಾನೇ ಸ್ವತಂತ್ರನೆಂಬ ಅಹಂಕಾರದಿಂದ ಅಲ್ಪಫಲವಾದ ಸ್ವರ್ಗಾದಿಗಳ ಅಪೇಕ್ಷೆಯಿಂದ **ರಚಿತಃ** ಮಾಡಲ್ಪಡುವದೋ **ಸಃ** ಆ ಪ್ರವೃತ್ತಧರ್ಮವು ಜ್ಯೋತಿಷ್ಟೋಮಾದಿಯಾಗಗಳು **ಹಿ** ಯಾವ ಕಾರಣ **ಅಧರ್ಮಬಹುಲಃ** ಸಾಂಗತೆ ಇಲ್ಲದ್ದರಿಂದ **ಅಶುದ್ಧಃ** ಸಂಸಾರಕ್ಕೆ ಕಾರಣವಾದ್ದರಿಂದ ದೋಷರಹಿತವಲ್ಲ ರಾಗಾದಿ ದೋಷವುಳ್ಳದ್ದು **ಕ್ಷಯಿಷ್ಣುಃ** ನಶ್ವರವಾದ ಸ್ವರ್ಗಾದಿ ಫಲವುಳ್ಳದ್ದಾದ್ದರಿಂದ ನಶ್ವರವಾದುದು **ಅಧರ್ಮಬಹುಲಃ** ಅಹಂಕಾರ-ಮಮಕಾರಗಳಿಂದ ಪ್ರಚುರವಾದುದು ಹಿಂಸಾದಿಗಳಿಂದ ತುಂಬಿದುದು **ಹಿ** ಇದು ಶಾಸ್ತ್ರ ಪ್ರಸಿದ್ಧ. ಇಂಥದನ್ನು ಸಜ್ಜನರು ಅನುಷ್ಠಾನ ಮಾಡಬಾರದೆಂದರ್ಥ.

ಅಥವಾ **ಹೇ ನಯತ್ರ** ನೀತಿಯನ್ನು ರಕ್ಷಿಸುವವನೇ (ನಯಂ ತ್ರಾಯತೇ ಇತಿ ತತ್ಸಂಬುದ್ಧಿಃ) ನ ಯತ್ರ ಎಂಬುದನ್ನು ಆವೃತ್ತಿಮಾಡಿಕೊಂಡು **ಯತ್ರ** ಅಧಿಕಾರಿಯಲ್ಲಿ

**ತ್ವಂ** ನೀನು **ನವಿಷಮಮತಿಃ ಸನ್** ನೀನು ನನ್ನ ದಾಸನು ಯಾವಾಗಲೂ ನಾನು ನಿನ್ನ ಸ್ವಾಮಿ ಎಂದು ಅವಿಷಮಮತಿಯಾದವನಾಗಿ **ತೇಷಾಂ ನೃಣಾಂ** ಆ ಜನರ ಯೋಧರ್ಮಃ ಸಹ್ಯಃ ಅಹೇಯವಾದುದು ವಿಶುದ್ಧಃ ಸ್ವಯಂಶುದ್ಧಿಪ್ರದನು. **ಅನ್ಯತ್ರ** ನನ್ನಿಂದ ಭಿನ್ನವಾದ **ವಿಷಮಧಿಯಾ ತ್ವಯಾ** ವಿಪರೀತ ಬುದ್ಧಿಯುಳ್ಳ ನಿನ್ನಿಂದ ಅವನಿಗೆ ಯೋಗ್ಯವೆಂದು ತೋರಿದವರಿಂದ **ರಚಿತಃ** ಮಾಡಲ್ಪಟ್ಟ ತಿಳಿಸಲ್ಪಟ್ಟ ಧರ್ಮವು **ಅಧರ್ಮಬಹುಲಃ ಕ್ಷಯಿಷ್ಣುಶ್ಚ** ಅಧರ್ಮಪೂರಿತವಾದುದು ನಶ್ವರವು. 'ಧರ್ಮಚ್ಛಲಂ ಪಾಪಜನೇಷು ಧರ್ಮಃ' ಎಂದು ಶ್ರೀಮದಾಚಾರ್ಯರು ಹೇಳಿರುವರು. ।।೪೧।।

**ಕಃ ಕ್ಷೇಮೋ ನಿಜಪರಯೋಃ**
**ಕಿಯಾನರ್ಥಃ ಸ್ವಪರದ್ರುಹಾ ಧರ್ಮೇಣ ।**
**ಸ್ವದ್ರೋಹಾತ್ತವ ಕೋಪಃ**
**ಪರಸಂಪೀಡಯಾ ಚ ತಥಾಽಧರ್ಮಃ ।।೪೨।।**

**ಸ್ವಪರದ್ರುಹಾ** ಕರ್ಮಮಾಡುವ ತನಗೆ ಕಾಯಕ್ಲೇಶ ರೂಪವಾಗಿ ದ್ರೋಹ ಮಾಡುವ ತನ್ನಿಂದ ಸಾಯಲ್ಪಡುವ ಪಶುವಿಗೆ ಹಿಂಸಾಜನಕವಾದ್ದರಿಂದ ದ್ರೋಹಮಾಡುವ **ಧರ್ಮೇಣ** ಧರ್ಮವೆಂದು ಮಾಡಿದ ಯಾಗಾದಿಕರ್ಮಗಳಿಂದ **ನಿಜಪರಯೋಃ** ಕರ್ಮಮಾಡುವ ತನಗೇ ಆಗಲಿ ಪಶುವಿಗಾಗಲಿ **ಕ್ಷೇಮು ಕಃ** ಮೋಕ್ಷವೆಲ್ಲಿ? ತಮಸ್ಸೇ ಗತಿ ಎಂದರ್ಥ. ಸ್ವರ್ಗಾದಿಗಳು ಪ್ರಯೋಜನಗಳು ನಶ್ವರವಾದ್ದರಿಂದ ಅದು ಪ್ರಯೋಜನವೇ ಅಲ್ಲವೆಂದು ಭಾವ. ಏಕೆಂದರೆ **ಸ್ವದ್ರೋಹಾತ್** ನಿನ್ನ ಆ ಜ್ಞಾನರೂಪಗಳಾದ ಶ್ರುತಿ-ಸ್ಮೃತಿಗಳಲ್ಲಿ ವಿಹಿತವಾದ ರೀತಿಯಲ್ಲಿ ಕಾಯಕ್ಲೇಶ ಹೊಂದದೇ ತನ್ನ ನಾಶಕ್ಕೆ ಕಾರಣವಾದ್ದರಿಂದ **ಪರಸಂಪೀಡಯಾ** ಪಶುಹಿಂಸಾರೂಪವಾದ್ದರಿಂದಲೂ **ತವ** ಫಲ ಕೊಡುವವನಿಗೆ **ಕೋಪಃ** ಕೋಪವು ಬರುವದು **ತಥಾ ಅಧರ್ಮಃ** ಸ್ವಾತಂತ್ರ್ಯಾಭಿಮಾನದಿಂದ ಮಾಡಿದ ಕರ್ಮ ಅಧರ್ಮ. ಆದ್ದರಿಂದ ಕ್ಷೇಮವಿಲ್ಲ. ಅನರ್ಥವೇ ಎಂದು ಭಾವ. ।।೪೨।।

**ಕರ್ಷಯಂತಃ ಶರೀರಸ್ಥಂ ಭೂತಗ್ರಾಮಮಚೇತಸಃ ।**
**ಮಾಂ ಚೈವಾಂತಃಶರೀರಸ್ಥಂ ತಾನ್ವಿದ್ಧ್ಯಾಸುರನಿಶ್ಚಯಾನ್ ।।**

ಎಂದು ಗೀತಾದಲ್ಲಿದೆ. 'ಇಂದ್ರಿಯಾಣಿ ಜಯಂತ್ಯಾಶು ನಿರಾಹಾರಾ ಮನೀಷಿಣಃ' ಎಂದು ಹೇಳಿದ್ದು ಸದ್ಧರ್ಮಪರವಾದ್ದರಿಂದ ವಿರೋಧವಿಲ್ಲ.

**ಸಕಾಮಂ ತು ತಪಃ ಕ್ರೂರಂ ಲೋಕಾನಾಂ ಕ್ಷೋಭಕೃದ್ಭವೇತ್ ।**
**ಇತರಚ್ಛಾಂತಯೇ ಸರ್ವಲೋಕಾನಾಂ ಭವತಿ ಧ್ರುವಮ್ ॥**

ಎಂದು ಪ್ರಕಾಶಿಕೆಯಲ್ಲಿ ಹೇಳಿದೆ. ॥೪೨॥

ಕಾಮ್ಯಧರ್ಮವನ್ನು ಭಗವಂತನೇ ಹೇಳಿದ್ದಾನೆ. ಆದ್ದರಿಂದ ಅದು ಏಕೆ ನಿರ್ದುಷ್ಟವಲ್ಲ ಎಂದರೆ ಕಾಮನೆ ಉಳ್ಳವರನ್ನೂ ಹೇಗೋ ಒಂದು ರೀತಿಯಿಂದ ವೇದಮಾರ್ಗದಲ್ಲಿ ಪ್ರವರ್ತಿಸಲು ಕಾಮ್ಯಧರ್ಮ ಹೇಳಿದ್ದು ತತ್ತ್ವದೃಷ್ಟಿಯಿಂದ ಅಲ್ಲಿ ಭಾಗವತ ಧರ್ಮವನ್ನೇ (ನಿವೃತ್ತ) ಹೇಳಿದ್ದು ಎಂದು ಹೇಳುವರು- (ಚೆಟ್ಟಿ ಆಚಾರ್ಯರು)

ಶಿವನೇ ಮೊದಲಾದವರು ಹೇಳಿದ ಪ್ರವೃತ್ತಮಾರ್ಗಗಳಂತೆ ನೀನು ಹೇಳಿದ ಪ್ರವೃತ್ತಧರ್ಮವು ವಸ್ತುಸ್ಥಿತಿಗೆ ವಿರುದ್ಧವಾದ್ದರಿಂದ ನೀನು ಹೇಳಿದ್ದೆಂಬ ಆಜ್ಞೆಯ ಉಲ್ಲಂಘನೆ ನಿಮಿತ್ತ ಕೋಪವಿಲ್ಲವಾಗುತ್ತದೆ. ನಿನ್ನ ದೃಷ್ಟಿಯೂ ಅಯಥಾರ್ಥವೇ ಎಂದರೆ ಉತ್ತರ ಹೇಳುವರು- (ಶ್ರೀವಿಜಯಧ್ವಜರು)

ಪಾಶುಪತಾದಿಗಳಲ್ಲಿ ಹೇಳಿದ ಧರ್ಮಗಳನ್ನು ಅನುಷ್ಠಾನ ಮಾಡುವುದರಿಂದ ಪಾತವಾಗುತ್ತದೆ. ನೀನು ಹೇಳಿದ ಧರ್ಮಗಳನ್ನು ಅನುಷ್ಠಾನ ಮಾಡುವುದರಿಂದ ಸಂಸಾರವನ್ನು ದಾಟಲಾಗುತ್ತದೆ ಎಂಬ ವಿಶೇಷವನ್ನು ತಿಳಿಸುವರು- (ಶ್ರೀಸತ್ಯಧರ್ಮರು)

**ನ ವ್ಯಭಿಚರತಿ ತವೇಕ್ಷಾ ಯಥಾ**
**ಹ್ಯಭಿಹಿತೋ ಭಾಗವತೋ ಧರ್ಮಃ ।**
**ಸ್ಥಿರಚರಸತ್ವಕದಂಬೇಷ್ವಪೃಥಗ್ಧಿಯೋ**
**ಯಮುಪಾಸತೇ ತ್ವಾರ್ಯಾಃ** ॥೪೩॥

ಹೆ ಯಾವ ಕಾರಣ **ಯಥಾ** ಯಥಾವತ್ತಾಗಿ ತತ್ತ್ವದೃಷ್ಟಿಯಿಂದ **ಭಾಗವತೋ ಧರ್ಮಃ** ಭಾಗವತ ಧರ್ಮವು (ನಿವೃತ್ತಿಮಾರ್ಗವು) **ಅಭಿಹಿತಃ** ನಿನ್ನಿಂದ ಹೇಳಲ್ಪಟ್ಟಿದೆಯೋ ಆ ಕಾರಣದಿಂದ **ತವ ಈಕ್ಷಾ** ನಿನ್ನ ಜ್ಞಾನವು **ನ ವ್ಯಭಿಚರತಿ** ಅಯಥಾರ್ಥವಲ್ಲ. ಯಥಾರ್ಥವಾದುದು. **ಯಯಾ** ಎಂಬ ಪಾಠದಲ್ಲಿ ಯಾವ ನಿನ್ನ ಜ್ಞಾನದಿಂದ ಎಂದರ್ಥ. ಯಥಾರ್ಥವಾಗಿರುವದಕ್ಕೆ ಕಾರಣವೇನೆಂದರೆ ಹಿಂದೆ ಹೇಳಿದುದನ್ನೇ ಸ್ಮರಣೆಗೆ ತಂದು ಕೊಡುವರು. ಸ್ಥಿರ ಸ್ಥಾವರ **ಚರ** ಜಂಗಮ

**ಸತ್ವಕದಂಬೇಷು** ಪ್ರಾಣಗಳ ಸಮೂಹದಲ್ಲಿ **ಅಪೃಥಗ್ಧಿಯಃ** ಇದ್ದಂತೆಯೇ ತಿಳಿಯುವ **ಆರ್ಯಾಃ ತು** ಆದ್ದರಿಂದಲೇ ಜ್ಞಾನಿಗಳಾದ ಸನಕಾದಿಗಳು ಮಾತ್ರ ತಮ್ಮ ತಮ್ಮ ತಾರತಮ್ಯಕ್ಕೆ ತಕ್ಕಂತೆ **ಯಂ** ಯಾವ ಭಾಗವತಧರ್ಮವನ್ನು **ಉಪಾಸತೇ** ಉಪಾಸಿಸುವರು. ನೀನು ಪ್ರವೃತ್ತಿಧರ್ಮವನ್ನು ಹೇಳಿದ್ದರೂ ಅದು ವೇದಮಾರ್ಗದಲ್ಲಿ ಹೇಗಾದರೂ ಜನರನ್ನು ಪ್ರವೃತ್ತರನ್ನಾಗಿ ಮಾಡಲು ಹೇಳಿದ್ದೇ ಹೊರತು ತತ್ತ್ವ ದೃಷ್ಟಿಯಿಂದಲ್ಲ. ಭಾಗವತ ಧರ್ಮವನ್ನಾದರೋ ತತ್ತ್ವದೃಷ್ಟಿಯಿಂದಲೇ ಹೇಳಿರುವಿ ಆದ್ದರಿಂದ ತತ್ತ್ವಜ್ಞಾನಿಗಳು ಉಪಾಸಿಸುವರು. ಆದ್ದರಿಂದ ಭಾಗವತಧರ್ಮವೇ ಅನವದ್ಯವೆಂದು ಅಭಿಪ್ರಾಯ. ಇರುವ ಪ್ರಕಾರಕ್ಕಿಂತ ವಿರುದ್ಧವಾದ ಪ್ರಕಾರಕ್ಕೆ ಪೃಥಕ್ ಎಂದು ಹೆಸರು. ಅದನ್ನು ವಿಷಯೀಕರಿಸುವ ಬುದ್ಧಿ ಪೃಥಗ್ಬುದ್ಧಿ ಎನಿಸುವದು. ಅದಿಲ್ಲದವರು ಅಪೃಥಗ್ಧೀಗಳು. ಇದನ್ನೇ 'ವಿಷ್ಣ್ವಧೀನಾ ಜಗತ್ಸತ್ತಾ ಪ್ರತೀತಿಶ್ಚೇಷ್ಟಿತಂ ಗತಿಃ । ಇತಿ ಯನ್ನಿಶ್ಚಿತಂ ಜ್ಞಾನಮಪೃಥಗ್ದರ್ಶನಂ ಸ್ಮೃತಮ್ । ಮಿಥ್ಯಾಜ್ಞಾನಂ ಪೃಥಗ್ ಜ್ಞಾನಂ ತತ್ ಪೃಥಗ್ ದೃಷ್ಟಿರುಚ್ಯತೇ' ಎಂಬ ಪ್ರಮಾಣವು ತಿಳಿಸುವದು.

**ಸತ್ಯಧರ್ಮರ ಪ್ರಕಾರ**

ಅಪೃಥಗ್ಧಿಯಃ ಎಲ್ಲ ಕಡೆಗಳಲ್ಲಿ ಸನ್ನಿಹಿತನಾದವನು ಭಗವಂತನೊಬ್ಬನೇ ಎಂಬ ಸಮಬುದ್ಧಿಯುಳ್ಳವರು ಎಂದರ್ಥ. 'ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ' ಎಂದು ಗೀತಾದಲ್ಲಿದೆ. ಯಯಾ ಈಕ್ಷಯಾ ಧರ್ಮಃ ಅಭಿಹಿತಃ ಯಾವ ಬುದ್ಧಿಯಿಂದ ಧರ್ಮವನ್ನು ಹೇಳಿರುವಿಯೋ ಅಂದರೆ ಬುದ್ಧಿಪೂರ್ವಕ ಹೇಳಿದ್ದು ಅಭಿ ಅಭಿತಃ ಹಿತಂ ಯೇನ ಇತಿ ಸಃ ಎಲ್ಲ ರೀತಿಯಿಂದ ಹಿತಕರವಾದುದು ಜಿನಾದಿಗಳಂತಲ್ಲ. 'ಏಷ ಮೋಹಂ ಸೃಜಾಮಿ' ಮುಂತಾಗಿ ಇದೆ. ಆರ್ಯಾಃ ಎಂಬುದರಿಂದ ಆ ಬಗೆಯ ಯಥಾರ್ಥಜ್ಞಾನವು ಅವರಿಗೆ ಯುಕ್ತವೆಂದು ತು ಎಂಬುದರಿಂದ ಅದರಲ್ಲಿಯೂ ತಾರತಮ್ಯವಿದೆ ಎಂದೂ, ಆರ್ಯರಿಗೆ ಮಾತ್ರ ಅಂತಹ ಜ್ಞಾನವಿರುವದೆಂದೂ ತಿಳಿಸಿರುವರು.

ಅಗ್ರ್ಯಾಃ ವರ್ಯಾಃ ಎಂದು ಹೇಳದೇ ಆರ್ಯಾಃ ಎಂದು ಹೇಳಿದ್ದರಿಂದ ಹಿಂದಿನ ೯ ಶ್ಲೋಕಗಳು ಮುಂದಿನ ನಾಲ್ಕು ಶ್ಲೋಕಗಳು ಮತ್ತು ಈ ಶ್ಲೋಕ ಹೀಗೆ ಎಲ್ಲ ಸೇರಿ ೧೪ ಶ್ಲೋಕಗಳು ಆರ್ಯಾವೃತ್ತಗಳೆಂದು ಸೂಚಿಸಿರುವರು ವ್ಯಾಸರು ಎನ್ನುತ್ತಾರೆ ಶ್ರೀಗಳವರು. ಸೂಚನೆಯನ್ನು ಎಲ್ಲಿಯಾದರೂ ಮಾಡಬಹುದು ಅದು ಅಲಂಕಾರವೇ. ಕಾರಣ ಮೊದಲಾಗಲಿ, ಕೊನೆಗಾಗಲಿ ಏಕೆ ಇಡಲಿಲ್ಲ ಎಂಬ ಶಂಕೆಗೆ ಅವಕಾಶವಿಲ್ಲ. ।।೪೩।।

ಹೀಗೆ ಭಾಗವತಧರ್ಮಪ್ರವರ್ತಕನಾದ ನಿನ್ನ ದರ್ಶನದಿಂದ ಎಲ್ಲ ಪಾಪಗಳು ಕ್ಷೀಣವಾಗುತ್ತವೆ. ಈ ವಿಷಯದಲ್ಲಿ ಯಾವ ಆಶ್ಚರ್ಯವೂ ಇಲ್ಲವೆಂದು ಹೇಳುತ್ತಾರೆ-

**ನ ಹಿ ಭಗವನ್ನಘಟಿತಮಿದಂ ತ್ವದ್ದರ್ಶನಾನ್ನೃಣಾಮಖಿಲಪಾಪಕ್ಷಯಃ ।**
**ಯನ್ನಾಮ ಸಕೃಚ್ಛ್ರವಣಾತ್ ಪುಲ್ಕಸಕೋಽಪಿ ವಿಮುಚ್ಯತೇ ಸಂಸಾರಾತ್ ॥**

**ಭಗವನ್** ಸಮಗ್ರೈಶ್ವರ್ಯಸಂಪನ್ನನಾದ ಶ್ರೀಹರಿಯೇ **ತ್ವದ್ದರ್ಶನಾತ್** ನಿನ್ನನ್ನು ನೋಡುವದರಿಂದ **ನೃಣಾಂ** ಜನರಿಗೆ **ಅಖಿಲಪಾಪಕ್ಷಯಃ ಇತಿ ಇದಂ** ಎಲ್ಲ ಪಾಪಗಳು ನಾಶವಾಗುವದೆಂಬುವದು **ಅಘಟಿತಂ ನ ಹಿ** ಅಸಂಭಾವಿತವೇನೂ ಅಲ್ಲ. **ಯನ್ನಾಮ** ಯಾವ ನಿನ್ನ ಹೆಸರನ್ನು **ಸಕೃತ್** ಒಂದು ಸಲ **ಶ್ರವಣಾತ್** ಭಕ್ತಿಯಿಂದ ಕೇಳುವದರಿಂದ **ಪುಲ್ಕಸಕೋಽಪಿ** ಅಂತ್ಯಜರಲ್ಲಿಯೂ ಅಧಮನಾದ ಕುತ್ಸಿತನು (ಹೊರಗೆ ಕಾಣಸದ ಒಳಗೆ ಹುಟ್ಟಿದ ಜ್ಞಾನವುಳ್ಳವನೆಂದರ್ಥ) **ಸಂಸಾರಾತ್ ಮುಚ್ಯತೇ** ಸಂಸಾರದಿಂದ ಮುಕ್ತನಾಗುವನು ಅಂದಮೇಲೆ ಕಾಣುವಂತೆ ಜ್ಞಾನ ಉಳ್ಳವರಿಗೆ ಎಲ್ಲ ಪಾಪಕ್ಷಯ ಆಗುವದೆಂದೇನು ಹೇಳುವದು. 'ತದಧಿಗಮ ಉತ್ತರಪೂರ್ವಾಘಯೋರಶ್ಲೇಷ-ವಿನಾಶೌ ತದ್ವ್ಯಪದೇಶಾತ್' ಎಂಬ ಅಧಿಕರಣದಲ್ಲಿ ಹೇಳಿದಂತೆ ನಿನ್ನ ಅಪರೋಕ್ಷಜ್ಞಾನದಿಂದ ಎಲ್ಲ ಖಿಲಾನಿ ದುರ್ಬಲಾನಿ ಅನಿಜಫಲೋಪಲಂಭಕಾನಿ ನ ಭವಂತಿ ತಾನಿ ಪಾಪಾನಿ ಅಂದರೆ ಬೇರೆ ಯಾವುದರಿಂದಲೂ ತನ್ನ ಫಲವನ್ನು ಕೊಡದಿರುವುದಿಲ್ಲ. ಕೊಟ್ಟೇ ಕೊಡುತ್ತವೆ ಎಂದು ಅರ್ಥ. ಇದರಿಂದ ಕೇವಲ ಭಗವದಪರೋಕ್ಷದಿಂದ ನಾಶವಾಗುವವು ಎಂದಂತಾಯಿತು.

ಅವರವರು ತಮ್ಮ ತಮ್ಮ ಯೋಗ್ಯತೆಯಂತೆ ಹಾಗೆ ಹಾಗೆ ಆಗಲಿ ಕಿಂ ಆರ್ದ್ರಕವಣಿಜೋ ವಹಿತ್ರಚಿಂತಯಾ (ಹಸಿ ಶುಂಠಿ ಮಾರುವವಗೆ ನೌಕೆಯ ಚಿಂತೆಯೇಕೆ ಎಂಬಂತೆ ನಿನಗೇನು ಬಂತು ಎಂದರೆ ಹೇಳುವನು-

**ಅಥ ಭಗವನ್ ವಯಮಧುನಾ ತ್ವದವಲೋಕಪರಿಮೃಷ್ಟಾಶಯಮಲಾಃ ।**
**ಸುರಋಷಿಣಾ ಯದುದಿತಂ ತಾವಕೇನ ಕಥಮನ್ಯಥಾ ಭವತಿ ॥೪೫॥**

**ಅಥ** ಸಂಸಾರ ದಾಟಲು ಒಂದು ಸಲ ನಾಮಶ್ರವಣವೇ ಸಾಕು ಅಂದ ಮೇಲೆ ನಿನ್ನ ದರ್ಶನ ಸಾಕೆಂದು ಹೇಳಬೇಕಿಲ್ಲವಾದ್ದರಿಂದ **ಭಗವನ್** ಶ್ರೀಹರಿಯೇ **ವಯಂ** ನಾವು **ಅಧುನಾ** ಈಗ **ತ್ವದವಲೋಕ** ನಿನ್ನ ದರ್ಶನದಿಂದ **ಪರಿಮೃಷ್ಟ** ಸಂಪೂರ್ಣ ಹೋಗಲ್ಪಟ್ಟ **ಆಶಯಮಲಾಃ ಚ** ಮನಸ್ಸಿನ ದೋಷಗಳುಳ್ಳವರಾಗಿರುವೆವು **ತಾವಕೇನ**

ನಿನ್ನ ಭಕ್ತರಾದ **ಸುರಋಷಿಣಾ** ನಾರದರಿಂದ **ಯತ್ ಉದಿತಂ** ಏನು ಹೇಳಲ್ಪಟ್ಟಿತ್ತೋ **ತತ್** ಅದು **ಕಥಂ ಅನ್ಯಥಾ ಭವತಿ** ಹೇಗೆ ವ್ಯರ್ಥವಾಗುವದು. ನಾರದರ ಉಪದೇಶದಿಂದ ನಿನ್ನ ದರ್ಶನವಾಯಿತು ಎಂದರ್ಥ.

ಇಲ್ಲಿ 'ಅಸ್ಮದೋ ದ್ವಯೋಶ್ಚ' ಎಂಬ ಸೂತ್ರದಿಂದ ವಯಂ ಎಂದಾಗಿದೆ. 'ಸವಿಶೇಷಣಸ್ಯ ಪ್ರತಿಷೇಧೋ ವಕ್ತವ್ಯಃ' ಎಂದು ಬಹುವಚನ ನಿಷೇಧವು ಇಲ್ಲಿ ಪ್ರಸಕ್ತವಲ್ಲ. ಅವಿಧೇಯವಿಶೇಷಣವಿದ್ದಲ್ಲಿ ನಿಷೇಧ. ವ್ಯಾವರ್ತಕ ವಿಶೇಷಣವಿದ್ದಲ್ಲಿ ನಿಷೇಧ ಇಲ್ಲ. ಆ ಕಾರಣ 'ಶೈವಾ ವಯಂ ಪಂಚಾಕ್ಷರೀ ಜಪಪರಾ ಎಂಬಲ್ಲಿಯಂತೆ 'ತ್ವಂ ರಾಜಾ ವಯಮಪ್ಯುಪಾಸಿತಗುರುಪ್ರಜ್ಞಾಭಿಮಾನೋನ್ನತಾಃ' ಎಂಬಲ್ಲಿಯಂತೆ ಉಪಪನ್ನವಾಗುವದು. 'ತ್ವದವಲೋಕಪರಿಮೃಷ್ಟಾಶಯಾಮಲಾಃ' ಎಂಬುದು ವಿಧೇಯವೇ ಹೊರತು ವ್ಯಾವರ್ತಕವಿಶೇಷಣವಲ್ಲ. 'ಯುಷ್ಮದಸ್ಮದೋರನ್ಯತರಸ್ಯಾಂ ಖಂ ಚ' ಎಂಬ ಸೂತ್ರದಿಂದ 'ತಾವಕಮಮಕೌ' ಎಂಬುದರಿಂದ ಯುಷ್ಮಚ್ಛಬ್ದದ ಮಪರ್ಯಂತಕ್ಕೆ ತವಕಾದೇಶವಾಗಿ ಅಣ ಪ್ರತ್ಯಯ ಮಾಡಿದಾಗ ತಾವಕ ಎಂದಾಗುವದು ಎಂದು ಭಾವ. ।।೪೫।।

ವಿಸ್ತಾರವಾಗಿ ನಿನ್ನ ವಾರ್ತೆಯನ್ನು ಹೇಳು ಎಂದರೆ ಉತ್ತರಿಸುವನು-

**ವಿದಿತಮನಂತ ಸಮಸ್ತಂ ತವ ಜಗದಾತ್ಮನೋ ಜನೈರಿಹಾಚರಿತಮ್ ।**
**ವಿಜ್ಞಾಪ್ಯಂ ಪರಮಗುರೋಃ ಕಿಯದಿಹ ಸವಿತುರಿವ ಖದ್ಯೋತೈಃ ।।೪೬।।**

**ಹೇ ಅನಂತ** ಶೇಷಾಂತರ್ಯಾಮಿಯೇ **ಜಗದಾತ್ಮನಃ** ಎಲ್ಲರ ಅಂತರ್ಯಾಮಿಯಾದ **ಪರಮಗುರೋಃ** ಜಗದ್ಗುರುಗಳಾದ ಬ್ರಹ್ಮಾದಿಗಳಿಗೆ ಗುರುವಾದ ಸರ್ವಜ್ಞನಾದ **ತವ** ನಿನಗೆ **ವಿದಿತಂ** ಎಲ್ಲವೂ ತಿಳಿದಿದೆ. **ಇಹ** ಈ ಜಗತ್ತಿನಲ್ಲಿ **ಜನೈಃ** ಜೀವರಿಂದ **ಆಚರಿತಂ** ಮಾಡಿದ್ದು **ಸಮಸ್ತಂ ವಿಜ್ಞಾಪ್ಯಂ** ನಾವು ತಿಳಿಯಬೇಕಾದುದು **ಕಿಯತ್** ಎಷ್ಟಿದೆ **ಇಹ** ಜ್ಯೋತಿಗಳಲ್ಲಿ **ಸವಿತುಃ** ಅತ್ಯಂತ ಪ್ರಕಾಶವುಳ್ಳ ಸೂರ್ಯನಿಗೆ **ಖದ್ಯೋತೈಃ ಇವ** ಅಲ್ಪ ಪ್ರಕಾಶ ಉಳ್ಳ ದೀಪದ ಹುಳಗಳಿಂದ ಹೇಗೆ ಹಾಗೆ ತಿಳಿದದ್ದನ್ನೇ ತಿಳಿಸುವದಷ್ಟೇ. ಇದರಿಂದ ನಾನು ಹಿಂದೆ ಮೂಢನಾಗಿದ್ದೆ ನಾರದರಿಂದ ಅನುಗ್ರಹೀತನಾಗಿ ನಿನ್ನ ದರ್ಶನಕ್ಕೆ ಅರ್ಹನಾದೆ ಎಂಬುದನ್ನು ನಾನು ಹೇಳಬೇಕಿಲ್ಲ ಎಂದು ಭಾವ. ।।೪೬।।

ನಿನ್ನ ಕಾಣಿಕೆ (ಪೂಜೆ) ಏನು ಎಂದರೆ ಹೇಳುವನು-

**ನಮಸ್ತುಭ್ಯಂ ಭಗವತೇ ಸಕಲಜಗತ್‌ಸ್ಥಿತಿಲಯೋದಯೇಶಾಯ ।**
**ದುರವಸಿತಾತ್ಮಗತಯೇ ಕುಯೋಗಿನಾಂ ನಮಃ ಪರಮಹಂಸಾಯ ॥೪೭॥**

**ಸಕಲಜಗತ್‌ಸ್ಥಿತಿಲಯೋದಯೇಶಾಯ** ಎಲ್ಲ ಜಗತ್ತಿನ ರಕ್ಷಣೆ ಲಯ ಉತ್ಪತ್ತಿಗಳಿಗೆ ನಿಯಾಮಕನಾದ **ಕುಯೋಗಿನಾಂ** ದುಷ್ಟ ಉಪಾಯ ಉಳ್ಳವರಿಗೆ (ಅಭಕ್ತರಿಗೆ) **ದುರವಸಿತಾತ್ಮಗತಯೇ** ತಿಳಿಯದಿರುವ ನಿಜತ್ವ ಉಳ್ಳ **ಪರಮಹಂಸಾಯ** ಅತ್ಯಂತ ಶುದ್ಧನಾದ ನಿರ್ದೋಷನಾದ **ಭಗವತೇ** ಸಮಗ್ರೈಶ್ವರ್ಯಸಂಪನ್ನನಾದ **ತುಭ್ಯಂ** ನಿನಗೆ **ನಮಃ** ನಮಸ್ಕಾರವು. ॥೪೭॥

ನೀನಿಲ್ಲದೆ ನಮಃ ಎಂದು ಹೇಳಲೂ ಸಮರ್ಥನಲ್ಲವೆಂದು ಹೇಳುವರು-

**ಯಂ ವೈ ಶ್ವಸಂತಮನುವಿಶ್ವಸೃಜಃ ಶ್ವಸಂತಿ**
**ಯಂ ಚೇಕಿತಾರಮನುವೃತ್ತಯ ಉಚ್ಚಕಂತಿ ।**
**ಭೂಮಂಡಲಂ ಸರ್ಷಪಾಯತಿ ಯಸ್ಯ ಮೂರ್ಧ್ನಿ**
**ತಸ್ಮೈ ನಮೋ ಭಗವತೇಽಸ್ತು ಸಹಸ್ರಮೂರ್ಧ್ನೇ ॥೪೮॥**

**ಶ್ವಸಂತಂ** ಶ್ವಾಸೋಚ್ಛ್ವಾಸ ಮಾಡುವ **ಯಂ** ಯಾವನನ್ನು **ಅನು** ಅನುಸರಿಸಿ **ವಿಶ್ವಸೃಜಃ** ಬ್ರಹ್ಮಾದಿಗಳು **ಶ್ವಸಂತಿ** ಚೇಷ್ಟಿಸುವರು ಉಸಿರಾಡಿಸುವರು **ವೈ** ಇದು 'ಪ್ರಾಣಂತಮನು ಪ್ರಾಣಂತಿ' ಎಂಬ ಶ್ರುತಿ ಸಿದ್ಧವಾದುದು. **ಚೇಕಿತಾರಂ** (ನಂ) ತಿಳಿಯುತ್ತಿರುವ (ಜ್ಞಾನ ಮಾಡಿಕೊಳ್ಳುತ್ತಿರುವ) **ಯಂ ಅನು** ಯಾವನನ್ನು ಅನುಸರಿಸಿ **ವೃತ್ತಯಃ** ವೃತ್ತಿ ಉಳ್ಳವರು **ಉಚ್ಚಕಂತಿ** ಜ್ಞಾನ ಮಾಡಿಕೊಳ್ಳುತ್ತಿರುವರು. ನೋಡುತ್ತಿರುವ ನಿನ್ನನ್ನು ಅನುಸರಿಸಿ ಜ್ಞಾನೇಂದ್ರಿಯಗಳು ಚೆನ್ನಾಗಿ ನೋಡುವವೋ **ಯಸ್ಯ** ಯಾವ ನಿನ್ನ **ಮೂರ್ಧ್ನಿ** ಶಿರಸ್ಸಿನಲ್ಲಿ **ಭೂಮಂಡಲಂ** ಬ್ರಹ್ಮಾಂಡವು **ಸರ್ಷಪಾಯತಿ** ಸಾಸಿವೆ ಕಾಳಿನಂತೆ ಹಗುರವಾಗಿರುವದೋ **ತಸ್ಮೈ** ಅಂತಹ **ಸಹಸ್ರಮೂರ್ಧ್ನೇ** ಸಾವಿರ ತಲೆಗಳುಳ್ಳ **ಭಗವತೇ** ಶೇಷನಿಗೆ ಅನಂತತಲೆಗಳುಳ್ಳ ಶ್ರೀಹರಿಗೆ **ನಮಃ ಅಸ್ತು** ನಮಸ್ಕಾರವಿರಲಿ. 'ಸಹಸ್ರಶೀರ್ಷಾಃ ಪುರುಷಃ' 'ಅನಂತಶೀರ್ಷೋ ಅನಂತಾಕ್ಷಃ' ಎಂದು ಶ್ರುತಿ ಇರುವದರಿಂದ ಶ್ರೀಹರಿಗೂ ಸಾವಿರ ತಲೆ ಇವೆ ಎಂದು ತಿಳಿಯಬೇಕು. ॥೪೮॥

ಸ್ತುತಿಯನ್ನು ಕೇಳಿದ ನಂತರ ಅನಂತನು ಏನು ಮಾಡಿದನು ಎಂಬ ಸಂಶಯವನ್ನು ಶುಕಾಚಾರ್ಯರು ಪರಿಹರಿಸುವರು-

**ಶ್ರೀಶುಕ ಉವಾಚ -**

**ಸಂಸ್ತುತೋ ಭಗವಾನೇವಮನಂತಸ್ತಮಭಾಷತ ।**
**ವಿದ್ಯಾಧರಪತಿಂ ಪ್ರೀತಶ್ಚಿತ್ರಕೇತುಂ ಕುರೂದ್ವಹ ॥೪೯॥**

**ಕುರೂದ್ವಹ** ಪರೀಕ್ಷಿದ್ರಾಜನೇ ಏವಂ ಈ ರೀತಿಯಾಗಿ **ಸಂಸ್ತುತಃ** ಭಕ್ತಿಯಿಂದ ಸ್ತೋತ್ರ ಮಾಡಿಸಿಕೊಂಡ **ಭಗವಾನ್** ಸರ್ವೋತ್ತಮನಾದ **ಅನಂತಃ** ಶೇಷಾಂತರ್ಯಾಮಿಯಾದ ಅನಂತನಾಮಕನಾದ ಶ್ರೀಹರಿಯು **ಪ್ರೀತಃ ಸನ್** ಸಂತುಷ್ಟನಾಗಿ **ವಿದ್ಯಾಧರಪತಿಂ** ವಿದ್ಯಾಧರರ ರಾಜನಾದ **ಚಿತ್ರಕೇತುಂ** ಚಿತ್ರಕೇತುವನ್ನು ಕುರಿತು **ಅಭಾಷತ** ಹೇಳಿದನು.

**ಶ್ರೀಭಗವಾನುವಾಚ -**

**ಯನ್ನಾರದಾಂಗಿರೋಭ್ಯಾಂ ತೇ ವ್ಯಾಹೃತಂ ಮಮ ಶಾಸನಮ್ ।**
**ಸಂಸಿದ್ಧೋಽಸಿ ತಯಾ ರಾಜನ್ ವಿದ್ಯಯಾ ದರ್ಶನಾಚ್ಚ ಮೇ ॥೫೦॥**

**ರಾಜನ್** ಚಿತ್ರಕೇತುವೇ **ನಾರದಾಂಗಿರೋಭ್ಯಾಂ** ನಾರದರು ಮತ್ತು ಅಂಗಿರಸರಿಂದ **ಯತ್** ಯಾವ **ಮಮ ಶಾಸನಂ** ನನ್ನ ವಿಷಯಕವಾದ ವಿದ್ಯೋಪದೇಶವು **ವ್ಯಾಹೃತಂ** ಮಾಡಲ್ಪಟ್ಟಿತೋ **ತಯಾ** ಅದರಿಂದ ಆದ **ಮೇ** ನನ್ನ **ದರ್ಶನಾತ್ ಚ** ದರ್ಶನದಿಂದಲೂ **ಸಂಸಿದ್ಧಃ ಅಸಿ** ಎಲ್ಲ ಅಪೇಕ್ಷಿತ ಪುರುಷಾರ್ಥಗಳನ್ನು ಹೊಂದಿರುವಿ ಜೀವನ್ಮುಕ್ತನಾಗಿರುವಿ. **ವಿದ್ಯಯಾ ಸಂಸಿದ್ಧಃ** ಜ್ಞಾನಯೋಗ್ಯನು ಆಗಿ **ಮೇ ದರ್ಶನಾತ್ ಸಂಸಿದ್ಧಃ** ಮುಕ್ತಿಯೋಗ್ಯನಾಗಿರುವಿ ಎಂದರ್ಥ. ॥೫೦॥

ನಾರದರು ಅಂಗಿರಸರ ಮಾತಿನಲ್ಲಿ ವಿಶ್ವಾಸ ಹುಟ್ಟಿಸುತ್ತ ಸ್ವಲ್ಪ ವಿಸ್ತಾರವಾಗಿ ಹೇಳುವನು-

**ಅಹಂ ವೈ ಸರ್ವಭೂತಾನಿ ಭೂತಾತ್ಮಾ ಭೂತಭಾವನಃ ।**
**ಶಬ್ದಬ್ರಹ್ಮ ಪರಂ ಬ್ರಹ್ಮ ಮಮೋಭೇ ಶಾಶ್ವತೀ ತನೂ ॥೫೧॥**

**ಭೂತಾತ್ಮಾ** ಎಲ್ಲರಲ್ಲಿದ್ದು ಆದಾನಾದಿ ಕರ್ತೃವಾದ **ಭೂತಭಾವನಃ** ಎಲ್ಲ ಪ್ರಾಣಿಗಳನ್ನು ಹುಟ್ಟಿಸುವ **ಅಹಂ** ನಾನು **ಸರ್ವಭೂತಾನಿ** ಎಲ್ಲ ಪ್ರಾಣಿಗಳು ನಾನಾಗಿರುವೆನು ಎನಿಸಿಕೊಳ್ಳುವೆನು. ಮೇಲೆ ಹೇಳಿದ ವಿಶೇಷಣಗಳಿಂದ ಅಭೇದ

ಹೇಳಿದ್ದು ಇದರಿಂದಲೇ ಹೊರತು ವಾಸ್ತವವಲ್ಲವೆಂದು ತಿಳಿಸಿರುವರು. ವೈ 'ಸರ್ವಂ ಖಲ್ವಿದಂ ಬ್ರಹ್ಮ' 'ಸೋऽಹಮಸ್ಮಿ' 'ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್' ಮುಂತಾದ ಶ್ರುತಿಸಿದ್ಧವು. **ಶಬ್ದಬ್ರಹ್ಮ** ವೇದರಾಶಿಯು **ಪರಂ ಬ್ರಹ್ಮ** ಅದಕ್ಕೆ ವಿಷಯನಾದ ಗುಣಪೂರ್ಣ ವಸ್ತುವೂ ನನ್ನನ್ನೇ ತಿಳಿಸುವ **ಉಭೇ** ಇವೆರಡು **ಮಮ** ನನ್ನ **ಶಾಶ್ವತೀ** ಎಲ್ಲ ಕಾಲದಲ್ಲಿರುವ **ತನೂ** ರೂಪಗಳಾಗಿವೆ. ಇವೆರಡರಲ್ಲಿ ವೇದಗಳು ಪ್ರತಿಮಾರೂಪವಾಗಿವೆ. ಸ್ವರೂಪವು ಸಚ್ಚಿದನಾಂದಾತ್ಮಕವಾಗಿದೆ. ಇವೆರಡಕ್ಕೂ ನಾಶವಿಲ್ಲ. 'ಯಾವದ್ಬ್ರಹ್ಮ ವಿಷ್ಠಿತಂ ತಾವತೀ ವಾಕ್' ಎಂಬ ಶ್ರುತಿಯು ವೇದವು ನಿತ್ಯವಾಗಿದೆ ಎಂದು ತಿಳಿಸುತ್ತದೆ. 'ಏಷ ನಿತ್ಯೋऽವ್ಯಯಃ ಸೂಕ್ಷ್ಮಃ' ಎಂದು ಹಿಂದೆಯೇ ಸ್ವರೂಪ ನಿತ್ಯವೆಂದು ಹೇಳಿದೆ. **ಪರಂ ಬ್ರಹ್ಮ** ಮಹದ್ಬ್ರಹ್ಮ ಲಕ್ಷ್ಮೀದೇವಿಯು ನನ್ನ ಪ್ರತಿಮೆ ಹೀಗೂ ಅರ್ಥ. **ಮಮ ಶಾಶ್ವತೀ ತನೂ** ನಿತ್ಯ ಅಧಿಷ್ಠಾನವಾದ್ದರಿಂದ ಶರೀರವೆಂದು ಕರೆಸಿಕೊಳ್ಳುವವು. **ಮಮ** ಎಂಬ ಪದ ಸ್ವಾರಸ್ಯದಿಂದ 'ಮಮ ಯೋನಿರ್ಮಹದ್ಬ್ರಹ್ಮ' 'ಪ್ರಕೃತಿಃ ಪರಮಂ ಬ್ರಹ್ಮ' ಮುಂತಾಗಿದೆ. ಮಹದ್‌ಬ್ರಹ್ಮ ಎಂದರೇನೇ ವೇದ-ವೇದಾಭಿಮಾನಿ, ರಮಾ ಮತ್ತು ಪರಂ ಬ್ರಹ್ಮ ನಾರಾಯಣನೆಂಬುವನು ಮಮ ತನೂ ಒಂದು ಕಡೆ ಪ್ರತಿಮಾ ಇನ್ನೊಂದು ರಾಹೋಃ ಶಿರ ಎಂಬಂತೆ ಮಮ ಎಂದು ಹೇಳಿದ್ದು.

ಇಲ್ಲಿ ಸರ್ವಭೂತಾನಿ ಎಂದು ಸರ್ವಾಧಿಪತಿಯಾದ ಶ್ರೀಹರಿಗೆ ಸರ್ವತಾದಾತ್ಮ್ಯ ಹೇಳಿದಂತೆ ತೋರುವದು. ಅದನ್ನು ಪ್ರಮಾಣದಿಂದ ನಿಸ್ತ್ರಾಣಗೊಳಿಸುವರು-

ತಾತ್ಪರ್ಯ

**ಹರಿಸ್ತು ಸರ್ವಭೂತಾನಿ ತದಂತರ್ಯಾಮ್ಯಪೇಕ್ಷಯಾ ।**
**ತಿಙ್‌ಪದಾನ್ಯಪಿ ಸರ್ವಾಣಿ ಸುಪ್ಪದಾನಿ ತಥೈವ ಚ ।**
**ತಸ್ಮಿನ್ನೇವ ಪ್ರವರ್ತಂತೇ ಮುಖ್ಯವೃತ್ತ್ಯಾ ವಿಶೇಷತಃ ॥ ಇತಿ ಚ**

ಶ್ರೀಹರಿಯು ಎಲ್ಲ ಪ್ರಾಣಿಗಳಲ್ಲಿ ನಿಯಾಮಕನಾಗಿದ್ದುದರಿಂದಲೇ **ಸರ್ವಭೂತಾನಿ** ಎನಿಸಿಕೊಳ್ಳುವನು. ಅಸ್ಮಿ ಮುಂತಾದ ತಿಙ್ ಪದಗಳು ಅಹಂ ಮುಂತಾದ ಸುಬಂತ ಪದಗಳೂ ಅಂತರ್ಯಾಮಿಯಾದ ಶ್ರೀಹರಿಯಲ್ಲಿಯೇ ಮುಖ್ಯವೃತ್ತಿಯಿಂದ ಭೇದ ಪ್ರತಿನಿಧಿರೂಪವಾದ ವಿಶೇಷಬಲದಿಂದಲೇ ಅಪರ್ಯಾಯ ಶಬ್ದಗಳಾಗಿ ಇರುತ್ತವೆ. ಇದರಿಂದಲೇ 'ಭೂತಾನಿ ವಿಷ್ಣುರ್ಭುವನಾನಿ ವಿಷ್ಣುಃ' ಎಂಬ ಬೇರೆ ಕಡೆಯ ವಾಕ್ಯಕ್ಕೂ ಅರ್ಥ ಹೇಳಿದಂತಾಯಿತು.

**ಅಂತರ್ಯಾಮಿಣಮೀಶೇಷಮಪೇಕ್ಷ್ಯಾಽಹಂ ತ್ವಮಿತ್ಯಪಿ ।**
**ಸರ್ವೇ ಶಬ್ದಾಃ ಪ್ರಯುಜ್ಯಂತೇ ಸತಿ ಭೇದೇಽಪಿ ವಸ್ತುಷು ॥**

**'ಅಸ್ಮಿ ನಿತ್ಯಾಸ್ತಿತಾಮಾನಾತ್' 'ಅಹೇಯತ್ವಾದಹಂ ನಾಮಾ ॥**

ಮುಂತಾದ ಪ್ರಮಾಣಗಳನ್ನು ಉದಾಹರಿಸಿ ಅಭೇದ ತೋರುವ ವಾಕ್ಯಗಳನ್ನು ತತ್ವನಿರ್ಣಯದಲ್ಲಿ ವ್ಯಾಖ್ಯಾನಿಸಿದ್ದಾರೆ. ॥೫೦॥

**ಲೋಕೇ ವಿತತಮಾತ್ಮಾನಂ ಲೋಕಂ ಚಾಽತ್ಮನಿ ಸಂತತಮ್ ।**
**ಉಭಯಂ ಚ ಮಯಾ ವ್ಯಾಪ್ತಂ ಮಯಿ ಚೈವೋಭಯಂ ಕೃತಮ್ ॥೫೨॥**

**ಆತ್ಮಾನಂ** ೧. ಜೀವನನ್ನು ೨. ಮನಸ್ಸನ್ನು **ಲೋಕೇ** ಪ್ರಪಂಚದಲ್ಲಿ **ಅವಿತತಂ** ವ್ಯಾಪ್ತನಲ್ಲವೆಂದೂ **ವಿತತಂ** ತನ್ನ ವಿಷಯದಲ್ಲಿ ವ್ಯಾಪ್ತವಾದುದೆಂದು **ವಿಜಾನೀಹಿ** ತಿಳಿ **ಲೋಕಂ ಚ** ಪ್ರಪಂಚವನ್ನು **ಆತ್ಮನಿ** ಜೀವನಲ್ಲಿ ಮನಸ್ಸಿನಲ್ಲಿ **ಸಂತತಂ** ವಾಸನಾರೂಪದಿಂದ ಸೇರಿರುವನಾಗಿ ತಿಳಿ. ವಿಸ್ತೃತವಾದ ಪ್ರಪಂಚಕ್ಕೆ ಜೀವಪ್ರದೇಶ ವ್ಯಾಪ್ತಿಯಿಲ್ಲದೆ ಬಾಹುಲ್ಯ ಕೂಡುವದಿಲ್ಲ. **ಉಭಯಂ ಚ** ಲೋಕ ಮತ್ತು ಆತ್ಮ ಇವೆರಡು **ಮಯಾ** ಬ್ರಹ್ಮನಾದ ನನ್ನಿಂದ **ವ್ಯಾಪ್ತಂ** ವ್ಯಾಪ್ತವೆಂದು ತಿಳಿ ಲೋಕ-ಜೀವರಿಗೆ ಆಧಾರ ಯಾವುದು ಎಂದರೆ **ಉಭಯಂ ಚ ಮಯಿ ಕೃತಂ ವಿದ್ಧಿ** ಎರಡೂ ನನ್ನನ್ನು ಸಮಾಶ್ರಿತವೆಂದು ತಿಳಿ. ಏಕೆಂದರೆ ಎರಡಕ್ಕೂ ನಾನೇ ಆಧಾರನೆಂದು ಸಮಾಧಾನ ತಂದುಕೋ ಎಂದರ್ಥ.

ಇಲ್ಲಿ ಅವಿತತ ಎಂದು ಪದಚ್ಛೇದ ಮಾಡಿ ಆತ್ಮಶಬ್ದಕ್ಕೆ ಜೀವ ಎಂದು ಅರ್ಥ ಮಾಡುವುದು ಪ್ರಕೃತ ಅನುಪಯುಕ್ತವಾಗಿದೆ. ಮತ್ತು ಪ್ರಕರಣಾನನುಗುಣವೂ ಆಗಿದೆ. ಆದ್ದರಿಂದ ಎರಡನೆಯ ವ್ಯಾಖ್ಯಾನವೇ ಸರಿಯಾಗಿದೆ ಎಂದು ಹೇಳುತ್ತಾರೆ.

ಸತ್ಯಧರ್ಮರ ಪ್ರಕಾರ ಲೋಕೇ ವಿತತಂ 'ಮನಃ ಪೂರ್ವರೂಪಂ' 'ಮನಸ್ಯೈವಾಗ್ರೇ ಸಂಕಲ್ಪಯತಿ' ಮುಂತಾಗಿ ಇರುವದರಿಂದ ಅರ್ಥಗಳನ್ನು ಗ್ರಹಣ ಮಾಡಲು ಕಾರಣವಾಗಿ ವ್ಯಾಪ್ತವಾದ **ಅವಿತತಂ** ವಸ್ತುತಃ ಸೂಕ್ಷ್ಮವಾದ **ಆತ್ಮನಿ** ಮನಸ್ಸಿನಲ್ಲಿ **ಲೋಕಂ** ಜಗತ್ತನ್ನು ವಾಸನಾಮಯವಾಗಿ **ಸಂತತಂ ಜಾನೀಹಿ** ಚೆನ್ನಾಗಿ ವ್ಯಾಪ್ತವೆಂದು ತಿಳಿ. **ಉಭಯಂ** ಲೋಕ-ಮನಸ್ಸು ಇವೆರಡು **ಮಯಾ ವ್ಯಾಪ್ತಂ** ನನ್ನಿಂದ ವ್ಯಾಪ್ತವಾಗಿದೆ. ದೇಶ-ಕಾಲಗಳಿಂದ ಭಗವಂತನಿಗೆ ಸಮಳಾದುದರಿಂದ ಲಕ್ಷ್ಮೀದೇವಿಯಿಂದ ಎರಡು ವ್ಯಾಪ್ತವಾಗಿವೆ ಎಂದೂ ಮಯಾ ಎಂಬುದರಿಂದ

ಧ್ವನಿತವಾಗುವದು ಮಯಾ ಚ ವ್ಯಾಪ್ತಂ ಎಂದೂ ಅನ್ವಯ. ಉಭಯಂ ಇವೆರಡೂ ಮಯಾ ಕೃತಂ ನನ್ನಿಂದ ನಿರ್ಮಿತ. **ಮಯಿ** ನಾನೇ ಅಧಿಕರಣ ಉಳ್ಳದ್ದಾಗಿ **ಮಯಾ ಕೃತಂ** ನನ್ನಿಂದ ಮಾಡಲ್ಪಟ್ಟಿದೆ. (ಮಯಾ ಮಯಿ ಕೃತಂ) ಅಥವಾ ಮಯಿ ಮಯಾ ರಮಯಾ ಕೃತಂ ನಿವೇಶಿತಂ ಇತಿ ವಾ ನನ್ನಲ್ಲಿ ಲಕ್ಷ್ಮೀದೇವಿಯಿಂದ ಇರಿಸಲ್ಪಟ್ಟಿದೆ ಎಂದರ್ಥ.

ಗೀತಾಭಾಷ್ಯದಲ್ಲಿ ೯ ನೇ ಅಧ್ಯಾಯದಲ್ಲಿ ನಿಧಾನ ಶಬ್ದ ವ್ಯಾಖ್ಯಾನ ಮಾಡುವಾಗ 'ಸಂಹಾರಕಾಲೇ ಪ್ರಕೃತ್ಯಾ ಜಗದತ್ರ ನಿಧೀಯತೇ ಇತಿ ನಿಧಾನಂ' ಎಂದು ಹೇಳಿದೆ. ಅದರಂತೆ ಋಗ್ವೇದ ಖಿಲದಲ್ಲಿ 'ಅಪಶ್ಯಮಪ್ಯಯೇ ಮಾಯಯಾ ವಿಶ್ವಕರ್ಮಣಿ ಅದೋ ಜಗನ್ನಿಹಿತಂ ಶುಭ್ರಚಕ್ಷುಃ ಎಂದು ಹೇಳಿದೆ. ।।೫೨।।

ಲೋಕೇಽವಿತತಮಾತ್ಮಾನಂ ಎಂಬ ಶ್ಲೋಕದಲ್ಲಿ ಲೋಕವನ್ನು ಮನಸ್ಸಿನಲ್ಲಿ ಯಾವಾಗಲೂ ನೋಡು ಎಂಬ ಅರ್ಥವು ತೋರುತ್ತದೆ. ಅಣುರೂಪವಾದ ಮನಸ್ಸಿನಲ್ಲಿ ಇದು ಸಂಭಾವಿತವಲ್ಲ. ಆದ್ದರಿಂದ ಶ್ರೀಮದಾಚಾರ್ಯರು ಅರ್ಥವನ್ನು ಹೇಳುತ್ತಾರೆ-

ತಾತ್ಪರ್ಯ

**ಲೋಕಂ ಚಾತ್ಮನಿ ಸಂತತಂ ವಾಸನಾರೂಪೇಣ ।।**

ಲೋಕಾವಲೋಕನದಿಂದ ಜನಿತವಾದ ಸಂಸ್ಕಾರಗಳು ಮನೋಗತವಾಗಿರುವುದರಿಂದ ತತ್ಕಾರಣಕವಾದ ಲೋಕವು ಮನೋಗತವಾಗಿರುವುದು ಯುಕ್ತವೇ ಆಗಿದೆ.

ಮನೋಪಾದಾನಕ ಲೋಕಾವಲೋಕನ ಯಾವುದು ಎಂದರೆ ಹೇಳುವರು-

**ಯಥಾ ಸುಷುಪ್ತಃ ಪುರುಷೋ ವಿಶ್ವಂ ಪಶ್ಯತಿ ಚಾತ್ಮನಿ ।**
**ಆತ್ಮಾನಮೇಕದೇಶಸ್ಥಂ ಮನ್ಯತೇ ಸ್ವಪ್ನ ಉತ್ಥಿತಃ ।।೫೩।।**

**ಏವಂ ಜಾಗರಣಾದೀನಿ ಜೀವಸ್ಥಾನಾನಿ ಚಾಽತ್ಮನಃ ।**
**ಮಾಯಾಮಾತ್ರಾಣಿ ವಿಜ್ಞಾಯ ತದ್‌ದ್ರಷ್ಟಾರಂ ಪರಂ ಸ್ಮರೇತ್ ।।೫೪।।**

**ಪ್ರಸುಪ್ತಃ** ಸ್ವಪ್ನಾವಸ್ಥೆಯಲ್ಲಿ ಇರುವವನಾಗಿ **ಪುರುಷಃ** ಈ ಶರೀರಸಂಬಂಧಿಯಾದ ಜೀವನು **ವಿಶ್ವಂ** ವಾಸನಾಮಯವಾದ ಸ್ವಾಪ್ನಪ್ರಪಂಚವನ್ನು **ಆತ್ಮನಿ** ಮನಸ್ಸಿನಲ್ಲಿ **ಆತ್ಮನಾ** ಮನಸ್ಸಿನಿಂದ **ಯಥಾ** ಹೇಗೆ **ಏಕದೇಶಸ್ಥಂ** ತನ್ನೊಡನೆ ಒಂದೇ ಸ್ಥಾನದಲ್ಲಿ ಇರುವಂತೆ

**ಪಶ್ಯತಿ** ನೋಡುವನೋ **ಸ್ವಪ್ನೇ** ಸ್ವಪ್ನದಲ್ಲಿ (ಆತ್ಮನಿ ಆತ್ಮನಾ ಎಂದೂ ಸ್ವಪ್ನೇ ಸ್ವಪ್ನಾತ್ ಎಂದೂ ವಿಪರಿಣತವಾಗಿ ಅನ್ವಯಿಸುವದು) **ತಥಾ** ಹಾಗೆಯೇ **ಸ್ವಪ್ನಾದುತ್ಥಿತಃ** ಕನಸಿನಿಂದ ಎದ್ದವನಾಗಿ **ಆತ್ಮನಾ** ತನ್ನಿಂದ **ವಿಶ್ವಂ ಏಕದೇಶಸ್ಥಂ** ತಾನಿರುವ ಏಕದೇಶದಿಂದ ಭಿನ್ನವಾದ ದೇಶದಲ್ಲಿರುವದೆಂದು **ಆತ್ಮಾನಂ** ತನ್ನನ್ನು **ಏಕದೇಶಸ್ಥಂ** ಸ್ವಪ್ನಪದಾರ್ಥಗಳು ಇರುವ ದೇಶದಿಂದ ಭಿನ್ನವಾದ ದೇಶದಲ್ಲಿರುವವನೆಂದೂ **ಮನ್ಯತೇ** ತಿಳಿಯುವನು. (ಚೆಟ್ಟಿ ಆಚಾರ್ಯರು)

**ಸತ್ಯಧರ್ಮರ ವಿಶಿಷ್ಟ ಅರ್ಥ**

**ಸ್ವಪ್ನಾದುತ್ಥಿತಃ ಏಕದೇಶಸ್ಥಂ** ಮಲಗಿದ ಸ್ಥಳದಲ್ಲಿ **ಆತ್ಮಾನಮೇವ ಪಶ್ಯತಿ** ತನ್ನನ್ನು ಮಾತ್ರ ನೋಡುವನು ಸ್ವಪ್ನಪ್ರಪಂಚವನ್ನು ನೋಡುವದಿಲ್ಲ. ಇದರಿಂದ ಸ್ವಪ್ನವನ್ನು ಮಾಯಾಮಾತ್ರಂ ಮನ್ಯತೇ ಎಂದಿಟ್ಟುಕೊಳ್ಳಬೇಕು. ಅಂದರೆ ಈ ಸ್ವಾಪ್ನಪದಾರ್ಥಗಳಿಗೆ ಭಗವಂತನ ಇಚ್ಛೆಯು ನಿಮಿತ್ತವಾಗಿದೆ ಎಂದು, ಜೀವರ ವಾಸನಾ ಉಪಾದಾನವಾಗಿದೆ ಎಂದು ತಿಳಿಯುವನು ಎಂದರ್ಥ. **ಏವಮೇವ** ಇದರಂತೆ **ಜಾಗರಣಾದೀನಿ** ಜಾಗ್ರತ್-ಸುಷುಪ್ತಿ-ಮೂರ್ಛಾದಿಗಳೆಂಬ **ಜೀವಸ್ಥಾನಾನಿ** ಜೀವರ ಅವಸ್ಥೆಗಳನ್ನು **ಆತ್ಮನಃ** ಪರಮಾತ್ಮನ **ಮಾಯಾಮಾತ್ರಾಣಿ ಮಾಯಯಾ** ನಿಮಿತ್ತವಾದ ಇಚ್ಛೆಯಿಂದ ಮತ್ತು ಇಚ್ಛಾನಿಯತವಾದ ಉಪಾದಾನವಾದ ಪ್ರಕೃತಿಯಿಂದ **ಮಾತ್ರಾಣಿ** ನಿರ್ಮಿತವಾದವು-ಗಳೆಂದು 'ಮಾ ನಿರ್ಮಾಣೇ' ಎಂದು ಧಾತು ಇದೆ. **ವಿಜ್ಞಾಯ** ತಿಳಿದು **ತದ್‌ದ್ರಷ್ಟಾರಂ** ಜೀವರ ಅವಸ್ಥೆಗಳನ್ನು ತೋರಿಸುವ ಸಾಕ್ಷಾತ್ ನೋಡುವ **ಪರಂ** ಹರಿಯನ್ನು **ಸ್ಮರೇತ್** ಸ್ಮರಿಸಬೇಕು. ಅಂದರೆ ಜಾಗ್ರದಾದ್ಯವಸ್ಥೆಗಳಿಂದ ಜೀವಬಂಧಕನೆಂದರ್ಥ. 'ಸ್ವತಂತ್ರೇ ಕರ್ತೃಶಬ್ದಃ ಸ್ಯಾತ್ ಪ್ರಜ್ಞಸ್ಯಾವೇದನಂ ಯಥಾ । ಸರ್ವಪ್ರದರ್ಶಕೇ ಚೈವ ತುರೀಯೇ ಸರ್ವದರ್ಶಿತಮ್' ಎಂದು ಬ್ರಹ್ಮತರ್ಕವಚನವಿದೆ.

'ಪ್ರಾಜ್ಞಃ ಕಿಂಚನ ಸಂವೇತ್ತಿ ತುರ್ಯಃ ತತ್ಸರ್ವದೃಕ್ ಸದಾ' ಎಂದು ಶ್ರುತಿ ಇದೆ. ಅಥವಾ **ದ್ರಷ್ಟಾರಂ** ಸ್ವತಂತ್ರವಾಗಿ ಜೀವಾವಸ್ಥೆಗಳಿಗೆ ಸಾಕ್ಷಿಯಾದ ವಿಶ್ವಾದಿ ಮೂರು ರೂಪವನ್ನು **ಪರಂ** ಅವುಗಳಿಂದ ವಿಲಕ್ಷಣವಾದ ಮೋಕ್ಷಪ್ರದವಾದ ತುರ್ಯರೂಪಿ ಭಗವಂತನನ್ನು **ಸ್ಮರೇತ್** ಉಪಾಸಿಸಬೇಕು. ಈ ವಿಷಯದಲ್ಲಿ 'ಕಾರ್ಯಕಾರಣಬದ್ಧೌ ತಾವಿಷ್ಯೇತೇ ವಿಶ್ವತೈಜಸೌ । ಪ್ರಾಜ್ಞಃ ಕಾರಣಬದ್ಧಸ್ತು ದ್ವೌ ತು ತುರ್ಯೇ ನ ಸಿದ್ಧ್ಯತಃ' ಎಂದು ಶ್ರುತಿ ಇದೆ. ಕಾರ್ಯಕಾರಣಬಂಧಸ್ಯ ತದಧೀನತ್ವತೋ ವಿಭುಃ ।

ವಿಶ್ವಾದಿರೂಪೋ ಭಗವಾನ್ ಬದ್ಧ ಇತ್ಯುಚ್ಯತೇ ಶ್ರುತೌ । ಕುತೋ ಬಂಧಃ ಪರಸ್ಯಾಸ್ಯ ಬಂಧೇಶಸ್ಯ ಚಿದಾತ್ಮನಃ ।।ಇತಿ ಚ।।

ಅಥವಾ **ಸ್ವಪ್ನೇ** ಕನಸಿನಲ್ಲಿ **ಸುಷುಪ್ತಃ** ಮಲಗಿದ **ಪುರುಷಃ** ಜೀವನು **ಆತ್ಮನಿ** ಮನಸ್ಸಿನಲ್ಲಿ ವಾಸನಾರೂಪವಾಗಿರುವ **ವಿಶ್ವಂ** ಪರ್ವತ-ವನ ಮುಂತಾದ ಪ್ರಪಂಚವನ್ನು ದೇಶಾಂತರದಲ್ಲಿದೆ ಎಂದು ತಿಳಿಯುವನು. ಅಂದರೆ ಕನಸಿನಲ್ಲಿ ಸುಷುಪ್ತಿ-ಸ್ವಪ್ನಗಳನ್ನು ಕೂಡಾ ಕಾಣುವನು. ಆಗ **ಸ್ವಪ್ನೇ ಏವ ಉತ್ಥಿತಃ ಸನ್** ಕನಸಿನಿಂದ ಎದ್ದು **ಆತ್ಮಾನಂ** ತನ್ನನ್ನು **ಏಕದೇಶಸ್ಥಂ** ಮಲಗಿದ ಸ್ಥಳದಲ್ಲಿರುವೆನೆಂದು ತಿಳಿಯುವನು. ಅಂದರೆ ಕನಸಿನಲ್ಲೇ ಜಾಗ್ರದವಸ್ಥೆಯನ್ನು ಅನುಭವಿಸುವನು. ಆ ಕನಸು-ಜಾಗರಗಳು ಆಗ ಜೀವನಿಗೆ ಸ್ವಾತಂತ್ರ್ಯ ಇಲ್ಲದಿರುವದರಿಂದ ಹೇಗೆ ಈಶ್ವರೇಚ್ಛಾನಿರ್ಮಿತಗಳೋ ಹಾಗೆ ಪ್ರಸಿದ್ಧ ಜಾಗರ ಮುಂತಾದ ಅವಸ್ಥೆಗಳು ಪರಮಾತ್ಮನ ಇಚ್ಛೆಯಿಂದ ನಿರ್ಮಿತಗಳೆಂದು ಅರ್ಥ. ಮಿಕ್ಕಿದ್ದು ಮೊದಲಿನಂತೆ ತಿಳಿಯಬೇಕು. ಇದನ್ನೇ 'ಮಾಯೇತೀಚ್ಛಾ ಸಮುದ್ದಿಷ್ಟಾ ಮಾಯಾಮಾತ್ರಂ ತದುದ್ಭವಮ್' ಎಂದು ಹೇಳಿದೆ. 'ವಿಶ್ವಂ ಪಶ್ಯತಿ ಚಾತ್ಮನಿ' ಎಂಬುದರಿಂದ ಮನೋಗತವಾದ ವಾಸನಾಮಯವಾದ ಪದಾರ್ಥಗಳನ್ನು ನೋಡುವದು ಸ್ವಪ್ನ ಎಂದು ಸ್ವಪ್ನದ ಲಕ್ಷಣವನ್ನು ಹೇಳಿದಂತಾಯಿತು. 'ಮನೋಗತಾಂಶ್ಚ ಸಂಸ್ಕಾರಾನ್ ಸ್ವೇಚ್ಛಯಾ ಪರಮೇಶ್ವರಃ । ಪ್ರದರ್ಶಯತಿ ಜೀವಾಯ ಸ ಸ್ವಪ್ನ ಇತಿ ಗೀಯತೇ । ಎಂದಿದೆ. 'ಆತ್ಮಾನಮೇಕದೇಶಸ್ಥಂ ಮನ್ಯತೇ' ಎಂಬುದರಿಂದ ಬಾಹ್ಯಪದಾರ್ಥದರ್ಶನವು ಜಾಗ್ರತ್ ಎಂದು ಜಾಗ್ರತ್ ಲಕ್ಷಣ ಹೇಳಿದಂತಾಯಿತು.

ಇಲ್ಲಿ ಮಾಯಾಮಾತ್ರಾಣಿ ಎಂದರೆ ಅನಿರ್ವಚೀಯ ಎಂಬ ಸಂಶಯ ಪರಿಹರಿಸಲು ಆಚಾರ್ಯರು ಸ್ವಯಂ ಅನುವಾದ ಮಾಡಿ ವ್ಯಾಖ್ಯಾನಿಸುವರು-

ತಾತ್ಪರ್ಯ

**ಮಾಯಾಮಾತ್ರಾಣಿ ಪ್ರಕೃತಿನಿರ್ಮಿತಾನಿ ।**

ಪ್ರಕೃತಿ ಎಂದರೆ ಭಗವಂತ ಮತ್ತು ಭಗವತಿಯಾದ ಲಕ್ಷ್ಮೀದೇವಿಯು. ಇವರಿಂದ ಅಭಿಮನ್ಯಮಾನವಾದ ಜಡಪ್ರಕೃತಿ. ಇವುಗಳಿಂದ ನಿರ್ಮಿತವೆಂದರ್ಥ. ಪ್ರಕೃಷ್ಟ ಕೃತಿಯುಳ್ಳ ಪರಮಾತ್ಮನ ಇಚ್ಛೆಯಿಂದಲೂ ಇಚ್ಛೆಯಿಂದ ನಿಯತವಾದ ಚಿತ್ ಪ್ರಕೃತಿಯಿಂದ ಅಭಿಮನ್ಯಮಾನವಾದ ಉಪಾದಾನಕಾರಣವಾದ ಜೀವನ

ವಾಸನಾರೂಪ ಪ್ರಕೃತಿಯಿಂದ ನಿರ್ಮಿತ ಸ್ವಾಪ್ನ. ಪ್ರಕೃತಿನಿರ್ಮಿತ ಜಗತ್ತು ಎಂದು ಭಾವ.

(ವಿಜಯಧ್ವಜರು) 'ವ್ಯಾಪ್ತಾ ಹ್ಯಾತ್ಮಾನಃ ಚೇತನಾ ನಿರ್ಗುಣಾಶ್ಚ' ಎಂಬ ಶ್ರುತಿಯನ್ನು ಅನುಸರಿಸಿ ಲೋಕೇ ವಿತತಂ ಆತ್ಮಾನಂ ಎಂಬುದಕ್ಕೆ ಯಥಾಶ್ರುತವಾದ ಲೋಕದಲ್ಲಿ ವ್ಯಾಪ್ತವಾದ ಎಂಬರ್ಥವನ್ನೇ ಏಕೆ ಹೇಳಬಾರದು. (ಅವಿತತಂ ಎಂದೇಕೆ ಛೇದಿಸಬೇಕು ಎಂದು ಭಾವ) ಎಂದರೆ ದೃಷ್ಟಾಂತಕ್ಕೆ ಅನುಗುಣವಾಗಿ ಹಾಗೆ ಅರ್ಥ ಮಾಡಿದ್ದೇವೆ ಎಂಬ ಅಭಿಪ್ರಾಯದಿಂದ ಹೇಳುತ್ತಾರೆ.

**ಸುಷುಪ್ತಃ** ಸ್ವಪ್ನವನ್ನು ಅನುಭವಿಸುತ್ತಿರುವ **ಪುರುಷಃ** ಜೀವನು **ವಿಶ್ವಂ** ಜಗತ್ತನ್ನು **ಆತ್ಮನಿ** ವಾಸನಾರೂಪದಿಂದ ಮನಸಿನಲ್ಲಿ ತೋರಿದುದನ್ನು **ಚ** ತನಗಿಂತ ಭಿನ್ನವಾದುದನ್ನು **ಯಥಾ** ಹೇಗೆ **ಪಶ್ಯತಿ** ನೋಡುವನೋ **ಸ್ವಪ್ನೇ** ಸ್ವಪ್ನದಲ್ಲಿ **ಆತ್ಮಾನಂ** ತನ್ನನ್ನು **ಏಕದೇಶಸ್ಥಂ** ಜಗತ್ತಿನ ಯಾವುದೋ ಒಂದು ಕಡೆ ಇದ್ದವನನ್ನಾಗಿ ವ್ಯಾಪ್ತನಲ್ಲವೆಂದು **ಮನ್ಯತೇ** ತಿಳಿಯುವನೋ **ಉತ್ಥಿತಶ್ಚ** ಸ್ವಪ್ನದಿಂದ ಎಚ್ಚತ್ತವನೂ ಸಹ **ಆತ್ಮಾನಂ** ತನ್ನನ್ನು **ಏಕದೇಶಸ್ಥಂ** ಎಲ್ಲಿಯೋ ಒಂದು ಕಡೆ ಮಂಚದಲ್ಲಿ ಇರುವವನನ್ನಾಗಿ **ಮನ್ಯತೇ** ತಿಳಿಯುವನೋ ಹಾಗೆ ಅವನು ಲೋಕದಲ್ಲಿ ಅವ್ಯಾಪ್ತನು. ಹಾಗಾದರೆ ಮೇಲಿನ ಶ್ರುತಿಗೆ ಅರ್ಥವೇನೆಂದರೆ ಆ ಶ್ರುತಿಯಲ್ಲಿರುವ ಆತ್ಮಶಬ್ದವು ಪರಮಾತ್ಮನನ್ನು ಹೇಳುವದು. **ಆತ್ಮಾನಃ** ಪರಮಾತ್ಮನ ರೂಪಗಳು ವ್ಯಾಪ್ತವಾಗಿವೆ ಎಂದರ್ಥ. ಅಥವಾ **ಆತ್ಮಾನಃ** ಜೀವನ ಸ್ವರೂಪಗುಣಗಳು ಜ್ಞಾನಾತ್ಮಕವಾಗಿವೆ **ವ್ಯಾಪ್ತಾಃ** ಜೀವನು ಇರುವವರೆಗೆ ಅಥವಾ ಜೀವನಿರುವ ಕಡೆಗೆಲ್ಲ ಇರುವವುಗಳು ಎಂದು ಅರ್ಥ ಮಾಡಬೇಕು. ।।೫೩।।

'ಮಾಯಾಮಾತ್ರಂ ತು ಕಾರ್ತ್ಸ್ನ್ಯೇನಾನಭಿವ್ಯಕ್ತಸ್ವರೂಪತ್ವಾತ್' ಎಂಬ ಸೂತ್ರದಂತೆ ಭಗವಂತನೇ ಸ್ವಪ್ನಾದಿನಿಮಿತ್ತಕಾರಣನೆಂದು ಸಿದ್ಧವಾಗುವಂತೆ 'ಅತಃ ಪ್ರಬೋಧೋಽಸ್ಮಾತ್' ಎಂಬ ಸೂತ್ರದಂತೆ ಜಾಗ್ರದಾದ್ಯವಸ್ಥೆಗಳಿಗೂ ಭಗವಂತನೇ ಕಾರಣನು ಎಂಬ ಅಭಿಪ್ರಾಯವನ್ನು ಹೇಳುತ್ತಾರೆ-

**ಏವಂ** ಹೇಗೆ ಸ್ವಪ್ನಾವಸ್ಥೆಯು ಮಾಯಾ-ಪ್ರಕೃತಿ ಎಂದು ಕರೆಸುವ ಈಶ್ವರೇಚ್ಛಾನಿರ್ಮಿತವೋ ಹಾಗೆ **ಜಾಗರಣಾದೀನಿ** ಜಾಗ್ರತ್ ಮುಂತಾದ **ಜೀವಸ್ಥಾನಾನಿ** ಜೀವನ ಸುಖಾದ್ಯನುಭವಸ್ಥಾನಗಳು **ಆತ್ಮನಃ** ಶ್ರೀಹರಿಯ **ಮಾಯಾಮಾತ್ರಾಣಿ** ಇಚ್ಛೆ

ಎಂಬ ಪ್ರಕೃತಿಯಿಂದ ನಿರ್ಮಿತವಾದುದು ಎಂದು **ವಿಜ್ಞಾಯ** ತಿಳಿದು **ತದ್ದ್ರಷ್ಟಾರಂ** ಆ ಅವಸ್ಥೆಯಲ್ಲಿದ್ದ ಜೀವನ ಸುಖಾದ್ಯನುಭವಗಳಿಗೆ ಕಾರಣನಾದ ಸಾಕ್ಷಿಯಾದ ಶ್ರೀಹರಿಯನ್ನು **ಪರಂ** ಜೀವಭಿನ್ನನೆಂದು **ಸ್ಮರೇತ್** ತಿಳಿಯಬೇಕು. 'ಅನಶ್ನನ್ನನ್ಯೋ ಅಭಿಚಾಕಶೀತಿ' ಎಂಬುದರ ಅರ್ಥವಿದು. ಅಂತೂ ಸ್ವಪ್ನದಲ್ಲಿ ನಿದ್ರಿಸುವ ಪುರುಷನು ತನ್ನ ಮನಸಿನಲ್ಲಿ ವಾಸನಾರೂಪದಿಂದಿರುವ ಜಗತ್ತನ್ನು ಆದರಲ್ಲಿ ತನ್ನನ್ನು ಕಾಣುವನು. ಸ್ವಪ್ನದಲ್ಲಿ ಸ್ವಪ್ನವನ್ನು ಕಾಣುವನು. ಸ್ವಪ್ನದಲ್ಲೇ ಎಚ್ಚರಗೊಳ್ಳುವನು. ತನ್ನನ್ನು ಎಲ್ಲಿಯೋ ಒಂದು ಮೂಲೆಯಲ್ಲಿ ಇರುವವನೆಂದು ತಿಳಿಯುವನು. ಜೀವನಿಗೆ ಸ್ವಾತಂತ್ರ್ಯ ಇಲ್ಲದಿರುವುದರಿಂದ ಈ ಅವಸ್ಥೆಗಳು ಹೇಗೆ ಈಶ್ವರೇಚ್ಛಾನಿರ್ಮಿತವಾಗಿವೆಯೋ ಹಾಗೆ ಪ್ರಸಿದ್ಧವಾದ ಜಾಗರಾದಿಗಳು ಕೂಡಾ ಈಶ್ವರೇಚ್ಛಾನಿರ್ಮಿತವಾಗಿವೆ ಎಂದು ತಿಳಿದು ಇವುಗಳ ಸಾಕ್ಷಿಯಾದ ಶ್ರೀಹರಿಯನ್ನು ಸರ್ವೋತ್ತಮನೆಂದು ಉಪಾಸಿಸಬೇಕು. ಇದರಿಂದ ಅವಸ್ಥಾತ್ರಯವೆಂಬ ಬಂಧವು ಅನಾದಿವಿಷಯವಾಸನಾಗಳಿಂದ ತುಂಬಿದ ಅಂತಃಕರಣಪ್ರಯುಕ್ತವಾದ್ದರಿಂದ ಅವೆರಡೂ ಶ್ರೀಹರಿಯ ಅಧೀನವಾದದ್ದರಿಂದ ಅದರ ನಿವೃತ್ತಿಗಾಗಿ ಪರಮಾತ್ಮನನ್ನು ಮೇಲೆ ಹೇಳಿದ ಮಹಿಮೋಪೇತನೆಂದು ಸ್ಮರಿಸಬೇಕೆಂದು ತಿಳಿಸುವರು ಎಂದು ಭಾವ. ॥೫೪॥

ಸುಷುಪ್ತಿಯ ಸ್ವರೂಪವನ್ನು ತಿಳಿಸುತ್ತ ಜಾಗ್ರದಾದಿನಿಯಾಮಕನಾದ ವಿಶ್ವ-ತೈಜಸ-ಪ್ರಾಜ್ಞ-ತುರೀಯ ರೂಪಗಳಿಗೆ ಭೇದ ಶಂಕೆಯನ್ನು ಇಲ್ಲಿ ನಿರಾಕರಿಸುತ್ತಿದ್ದಾರೆ-

ಹಿಂದಿನ ಶ್ಲೋಕದಲ್ಲಿ 'ತದ್ದ್ರಷ್ಟಾರಂ' ಎಂಬಲ್ಲಿ ಜೀವ-ಪರಮಾತ್ಮರಿಗೆ ಭೇದವು ಸ್ಪಷ್ಟವಾಗಿ ತೋರುವದಿಲ್ಲ ಕಾರಣ ಇಲ್ಲಿ ಸ್ಪಷ್ಟಪಡಿಸುತ್ತಾರೆ-

**ಯೇನ ಪ್ರಸುಪ್ತಃ ಪುರುಷಃ ಸ್ವಾಪಂ ವೇದಾತ್ಮನಸ್ತದಾ ।**
**ಸುಖಂ ಚ ನಿರ್ಗುಣಂ ಬ್ರಹ್ಮ ತಮಾತ್ಮಾನಮವೇಹಿ ಮಾಮ್ ॥೫೫॥**

**ಯೇನ** ಪ್ರಾಜ್ಞನಾಮಕನಾದ ಯಾವ ಶ್ರೀಹರಿಯಿಂದ **ಪ್ರಸುಪ್ತಃ** (ಅಂತರ್ನೀತ-ಣಿಜಂತ) ಪ್ರಸ್ವಾಪಿತಃ ಗಾಢನಿದ್ರೆಯನ್ನು ಹೊಂದಿಸಲ್ಪಟ್ಟವನಾಗಿ **ಪುರುಷಃ** ಜೀವನು **ತದಾ** ನಿದ್ರೆ ಮಾಡುವಾಗ **ಸ್ವಾಪಂ** ಇಷ್ಟು ಕಾಲ ನಾನು ಏನನ್ನೂ ತಿಳಿಯಲಿಲ್ಲವೆಂಬ ಅಜ್ಞಾನವನ್ನು, ಕಾಲವನ್ನು **ಸುಖಂ ಚ** ಸುಖವನ್ನು ಅನುಭವಿಸುವ ತನ್ನನ್ನು **ವೇದ** ತಿಳಿದಿರುವನು. ಬೇರೆ ಏನನ್ನೂ ತಿಳಿಯುವದಿಲ್ಲ. ಎದ್ದ ಮೇಲೆ ಇದುವರೆಗೆ ಸುಖವಾಗಿ ಮಲಗಿದ್ದೆ ಎಂದು ಸ್ಮರಣ ಬರುವದಿರಂದ ಜ್ಞಾನವಿಲ್ಲದೇ ಸ್ಮರಣೆ ಬರಲು

ಸಾಧ್ಯವಿಲ್ಲವಾದ್ದರಿಂದ ಸುಖ ಮತ್ತು ತನ್ನ ಜ್ಞಾನ ಇತ್ತೆಂದು ತಿಳಿಯುವದು. **ತಂ** ಇವುಗಳಿಗೆ ಕಾರಣನಾದ **ಆತ್ಮಾನಂ** ಅಂತರ್ಯಾಮಿಯಾದ **ನಿರ್ಗುಣಂ** ಪ್ರಾಕೃತಗುಣರಹಿತನಾದ ಭಿನ್ನಗುಣಗಳಿಲ್ಲದ **ಬ್ರಹ್ಮ** ಗುಣಪೂರ್ಣನಾದ ಶ್ರೀಹರಿ ಎಂದು **ಮಾಂ ಅವೇಹಿ** ನನ್ನನ್ನು ತಿಳಿ. ಇದು ಶೇಷಾಂತರ್ಯಾಮಿಯ ಮಾತು. ಇದರಿಂದ ನನಗೆ ಈ ಅವಸ್ಥೆಗಳಿಲ್ಲ. ಜೀವರಿಗೆ ಈ ಅವಸ್ಥೆ ತಂದು ಕೊಡುವ ಸಾಮರ್ಥ್ಯವಿದೆ ಎಂದು ಸೂಚಿತವಾಗುವದು. **ಯೇನ ಪ್ರಸುಪ್ತಃ** ಎಂಬುದು ಉಪಲಕ್ಷಣ. ಯೇನ ಜಾಗ್ರದಾದಿಕಂ ಪ್ರಾಪಿತೋ ಭವತಿ ಎಂದು ಇಟ್ಟುಕೊಳ್ಳಬೇಕು. **ಆತ್ಮಾನಂ** ನಾಲ್ಕು ರೂಪದ ಪರಮಾತ್ಮನನ್ನು **ಮಾಂ ಅವೇಹಿ** ನನ್ನಿಂದ ಅಭಿನ್ನನೆಂದು ತಿಳಿ ಹೀಗೂ ವ್ಯಾಖ್ಯಾನಿಸುವರು.

ನಾತ್ಮಾನಂ ನ ಪರಾಂಶ್ಚೈವ ನ ಸತ್ಯಂ ನಾಽಪಿ ಚಾನೃತಮ್ ।
ಪ್ರಾಜ್ಞಃ ಸ ವೇದಯೇತ್ ಕಿಂಚಿತ್ ಜೀವಕಾಲತಮೋ ವಿನಾ ।

ಸುಪ್ತಾವಸ್ಥಾಂ ಸುಖಂ ಚಾಽಪಿ ವಿನಾ ನಾನ್ಯತ್ ಪ್ರದರ್ಶಯೇತ್ ।
ಸರ್ವಂ ತು ದರ್ಶಯೇನ್ಮುಕ್ತೌ ತುರೀಯಃ ಪರಮೇಶ್ವರಃ ।

ಎಂದು ಮಾಂಡೂಕಭಾಷ್ಯದಲ್ಲಿದೆ. ।।೩೩।।

ಕೇವಲ ಭಗವಂತನು ಜಾಗ್ರದಾದಿ ನಿಯಾಮಕನೆಂದು ತಿಳಿಯುವದು ಮಾತ್ರ ಬಂಧನಿವರ್ತಕವಲ್ಲ. ಕಿಂತು ಭೇದಜ್ಞಾನವೂ ಬೇಕು ಎಂಬ ಅಭಿಪ್ರಾಯದಿಂದ ಜೀವೇಶ್ವರಭೇದವನ್ನು ಸಯುಕ್ತಿಕವಾಗಿ ಇಲ್ಲಿ ನಿರೂಪಿಸುವರು-

**ಉಭಯಂ ಸ್ಮರತಃ ಪುಂಸಃ ಪ್ರಸ್ವಾಪಪ್ರತಿಬೋಧಯೋಃ ।**
**ಅನ್ವೇತಿ ವ್ಯತಿರಿಚ್ಯೇತ ತಜ್‌ಜ್ಞಾನಂ ಬ್ರಹ್ಮ ತತ್ಪರಮ್ ।।೩೬।।**

**ಉಭಯಂ** ಜಾಗ್ರದವಸ್ಥೆ ಮತ್ತು ಸುಪ್ತಿ ಅವಸ್ಥೆ ಗಾಢಸುಪ್ತಿ ನಿದ್ರೆ ಮತ್ತು ಸ್ವಪ್ನ ಎರಡನ್ನೂ ತೆಗೆದುಕೊಳ್ಳಬೇಕು. ಈ ಎರಡು ಅವಸ್ಥೆಗಳನ್ನು **ಸ್ಮರತಃ** ಅನುಭವಿಸುವ **ಪುಂಸಃ** ಜೀವನಿಗೆ **ಪ್ರಸ್ವಾಪಪ್ರತಿಬೋಧಯೋಃ** ಆಯಾ ವಸ್ತುಗಳ ಜ್ಞಾನವೆಂಬ ಜಾಗ್ರದವಸ್ಥೆಯಲ್ಲಿ **ಯತ್** ಯಾವ ಬ್ರಹ್ಮವೆಂಬ ವಸ್ತುವು **ಅನ್ವೇತಿ** ತಾನೂ ಜ್ಞಾನ ಉಳ್ಳದ್ದರಿಂದ ಪ್ರತಿಬುದ್ಧವೆನಿಸಿ ಅನುಸರಿಸುವದೋ **ವ್ಯತಿರಿಚ್ಯೇತ** ಜೀವನು ಜ್ಞಾನರಹಿತನಾದರೂ ತಾನು ಸರ್ವಜ್ಞಾನ ಹೊಂದಿರುವದರಿಂದ ಅನುಸರಿಸುವದಿಲ್ಲವೋ ಆದರಂತೆ ಸ್ವಪ್ನಕ್ಕೂ ಪ್ರಸ್ವಾಪವೆಂಬ ಹೆಸರಿರುವದರಿಂದ ಅನ್ಯಥಾಜ್ಞಾನವೆಂಬ

ಸ್ವಪ್ನಾವಸ್ಥೆಯಲ್ಲಿ ತನಗೆ ಅನ್ಯಥಾಜ್ಞಾನವಿಲ್ಲದಿರುವದರಿಂದ ಯಾವುದು ಅನುಸರಿಸುವದಿಲ್ಲವೋ **ತತ್** ಆ ವಸ್ತುವೇ **ಪರಂ ಬ್ರಹ್ಮ** ಭಿನ್ನವಾದ ಗುಣಪೂರ್ಣವಾದ ವಸ್ತುವು **ತತ್** ಅದೇ **ಜ್ಞಾನಂ** ಸರ್ವದಾ ಜ್ಞಾನಾತ್ಮಕವೇ ಆದ್ದರಿಂದ ಮುಖ್ಯ ಜ್ಞಾನಶಬ್ದ ಮುಖ್ಯವಾಚ್ಯವು. **ಮಾಂ ಅವೇಹಿ** ಎಂದು ಹಿಂದಕ್ಕೂ ಅನ್ವಯ.

'ಬ್ರಹ್ಮವಿದಾಪ್ನೋತಿ ಪರಂ' 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ಶ್ರುತಿಗಳಲ್ಲಿ ಪರ ಮತ್ತು ಜ್ಞಾನ ಶಬ್ದಗಳು ಬ್ರಹ್ಮವಾಚಕಗಳೆಂದು ಸ್ಪಷ್ಟವಾಗಿರುವದು. ಇದರಿಂದ ಸುಪ್ತ್ಯಾದಿ ಅವಸ್ಥೆಗಳಲ್ಲಿ ಜೀವನು ಅನುಭವಿಸುತ್ತಿದ್ದರೂ ಅವುಗಳನ್ನು ಅನುಭವಿಸದೇ ಜೀವನೊಂದಿಗೆ ಇರುವ ಪರಮಾತ್ಮನು ಭಿನ್ನನೆಂದು ಹೇಳಿದಂತಾಯಿತು. ಅಥವಾ ಜ್ಞಾನವೇ ಎಂಬ ಅವಧಾರಣದಿಂದ ಜೀವನಿಗೆ ಅಜ್ಞಾನ ಬರಬಹುದೆಂದೂ ಪರಮಾತ್ಮನಿಗೆ ಅದಿಲ್ಲವೆಂದೂ ಬ್ರಹ್ಮನೇ ಎಂಬ ಅವಧಾರಣದಿಂದ ಪೂರ್ಣಗುಣನೇ ಹೊರತು ಜೀವನಂತೆ ಪರಿಚ್ಛಿನ್ನನಲ್ಲವೆಂದೂ ಈ ಶ್ಲೋಕದಲ್ಲಿ ತಿಳಿಸಿರುವರು. ತದೇವ ಜ್ಞಾನಂ ತದೇವ ಬ್ರಹ್ಮ ತದೇವ ಪರಂ ಎಂದು ಅನ್ವಯ. 'ತದೇವರ್ತಂ ತದು ಸತ್ಯಮಾಹುಸ್ತದೇವ ಬ್ರಹ್ಮ ಪರಮಂ ಕವೀನಾಮ್' ಎಂಬ ಶ್ರುತಿಯೂ ಹೇಳುವದು.

'ಸ್ವಪ್ನೇನ ಶಾರೀರಮಭಿಪ್ರಹತ್ಯ ಅಸುಪ್ತಃ ಸುಪ್ತಾನಭಿಚಾಕಶೀತಿ' ಎಂಬ ಶ್ರುತಿಯು ಪರಮಾತ್ಮನಿಗೆ ಸ್ವಪ್ನಾದಿಗಳಿಲ್ಲವೆಂದು ತಿಳಿಸುವದು. ಪ್ರತಿಬೋಧವೆಂದರೆ ಸಮ್ಯಜ್ಜ್ಞಾನ ಅದು ಇರುವಾಗ ಜೀವನು ತಾನು ಬ್ರಹ್ಮನಲ್ಲವೆಂದು ತಿಳಿಯುವನು. ಆದ್ದರಿಂದ ಬ್ರಹ್ಮನಿಗಿರುವ ಭೇದಜ್ಞಾನಕ್ಕೆ ಅನುಗುಣವಾಗಿರುವದು. ಅಜ್ಞಾನ ಅನ್ಯಥಾಜ್ಞಾನಾವಸ್ಥೆಗಳಲ್ಲಿ ಜೀವನು ಹಾಗೆ ತಿಳಿಯುವದಿಲ್ಲವಾದ್ದರಿಂದ ಬ್ರಹ್ಮನಿಗಿರುವ ಭೇದಜ್ಞಾನವು ಇದಕ್ಕಿಂತ ವ್ಯತಿರಿಕ್ತವಾದುದು. ಚೆಟ್ಟಿ ಆಚಾರ್ಯರು ಹೀಗೂ ಅರ್ಥ ಮಾಡಿರುವರು. 'ಸುಷುಪ್ತಿಸ್ವಪ್ನಯೋಶ್ಚೈವ ಸ್ವರ್ಗವ್ಯೋಮ್ನೋಸ್ತಥೈವ ಚ । ಅನ್ಯೋನ್ಯನಾಮತಾ ಜ್ಞೇಯಾ ಮನೋಬುದ್ಧ್ಯೋಸ್ತಥೈವ ಚ' ಎಂದು ಶಬ್ದನಿರ್ಣಯವಿದೆ. 'ಅಜ್ಞಾನಂ ಸುಪ್ತಿಶಬ್ದೋಕ್ತಮ್' ಎಂದೂ ಇದೆ.

ಈ ಶ್ಲೋಕದಲ್ಲಿ ಪ್ರಸ್ವಾಪಪ್ರತಿಬೋಧಯೋಃ ಅನ್ವೇತಿ ವ್ಯತಿರಿಚ್ಯೇತ ಎಂದು ಕ್ರಮವಾಗಿ ಅನ್ವಯಿಸಿದರೆ ಭಗವಂತನಿಗೆ ಪ್ರಸ್ವಾಪವಿದೆ ಪ್ರಬೋಧವಿಲ್ಲ ಎಂದು ತೋರುವದು. ಇದು ಸರಿಯಲ್ಲ ಆದ್ದರಿಂದ ಸರಿಯಾದ ಅನ್ವಯ ಹೇಳುವರು-

ತಾತ್ಪರ್ಯ

**ಪ್ರತಿಭೋಧೋऽನ್ವೇತಿ ಸ್ವಯಮಪಿ ಪ್ರತಿಬುದ್ಧಃ । ಸುಪ್ತಾವಸ್ವಪನ್ ವ್ಯತಿರಿಚ್ಯೇತ ।**

ಜೀವನು ಎಚ್ಚರವಾಗಿರುವಾಗ ತಾನೂ ಎಚ್ಚರವಾಗಿದ್ದು ಜೀವನನ್ನು ಅನುಸರಿಸುವನು. ಜೀವನು ನಿದ್ರಿಸುವಾಗ ಕನಸು ಕಾಣುವಾಗ ತಾನು ನಿದ್ರಿಸದೇ ಕನಸು ಕಾಣದೆ ಇರುವದರಿಂದ ಜೀವವಿಲಕ್ಷಣನಾಗಿರುವನು ಎಂದರ್ಥ. ಇದರಿಂದ ಅನ್ವೇತಿ ವ್ಯತಿರಿಚ್ಯೇತ ಎಂದರೆ ಅನ್ವಯ-ವ್ಯತಿರೇಕಗಳಿಂದ ತಿಳಿಯುವನು ಎಂಬ ಅರ್ಥಭ್ರಮವನ್ನೂ ನಿವಾರಿಸಿದಂತಾಯಿತು. ಜಾಗ್ರತ್ಕಾಲದಲ್ಲಿ ಜೀವನಿಗೆ ಉದ್ಬೋಧಕನಾಗಿ ಸಂಬಂಧಿಸುವನು. ಮಲಗಿದಾಗ ಜ್ಞಾನವಿರದಿರುವಾಗ ಭಿನ್ನನಾಗಿರುವನು.

**ಯತ್** ಯಾವ ಕಾರಣ **ತಜ್ಜ್ಞಾನಂ** ಅವಸ್ಥೆಯನ್ನು ಅನುಭವಿಸುವ ಪುರುಷನ ಜ್ಞಾನ ಉಳ್ಳವನಾಗಿ ಸಾಕ್ಷಾದ್‌ದ್ರಷ್ಟೃವಾಗಿ ಜೀವಭಿನ್ನನಾಗಿ ಇರುವದೋ **ತತ್** ಆದ್ದರಿಂದ **ತತ್ ಬ್ರಹ್ಮ ಪರಂ** ಆ ಬ್ರಹ್ಮ ಜೀವನಿಗಂತ ಉತ್ತಮನು. ಅಥವಾ **ತಜ್ಜ್ಞಾನಂ** ಅವನ ಜ್ಞಾನವು **ಪರಂ** ವಿಲಕ್ಷಣವು ಹೀಗೂ ಅರ್ಥ. ಜೀವನಿಗೆ ಅಜ್ಞಾನ ಭಗವಂತನಿಗೆ ಜ್ಞಾನವೆಂಬುದು ಜಾಗರಣ. ಜೀವನ ಜ್ಞಾನವು ಭಗವಂತನ ಅಧೀನವೆಂಬುದು ಶ್ರೀಹರಿಯ ಪರತ್ವಕ್ಕೆ ಸಾಧಕವೆಂದು ತಿಳಿಯಬೇಕು. ॥೫೬॥

ಭೇದಜ್ಞಾನವು ಬಂಧನಿವರ್ತಕವೆಂದು ಹೇಳಿದರು. ವಿಪಕ್ಷೇ ಬಾಧಕ ಹೇಳುವರು-

**ಯದ್ಯೇಷ ವಿಸ್ಮೃತಃ ಪುಂಸೋ ಮದ್ಭಾವೋ ಭಿನ್ನ ಆತ್ಮನಃ ।**
**ತತಃ ಸಂಸಾರ ಏಕಸ್ಯ ದೇಹಾದ್ದೇಹೋ ಮೃತೇರ್ಮೃತಿಃ ॥೫೭॥**

**ಆತ್ಮನಃ** ಜೀವನಿಗಂತ **ಭಿನ್ನಃ** ಶ್ರೀಹರಿಯು ಭಿನ್ನನು **ಏಷಃ** ಎಂಬ **ಮದ್ಭಾವಃ** ನನ್ನ ಸ್ಥಿತಿಯ ಪ್ರಕಾರವು **ಪುಂಸಃ** ಜೀವನಿಗೆ **ವಿಸ್ಮೃತಃ ಯದಿ** ಮರೆತದ್ದೇ ಆದರೆ **ತತಃ** ಆ ಅಜ್ಞಾನದಿಂದ **ಏಕಸ್ಯ** ಸಯುಜರೂ ಸಖಾಯರೂ ಆದ ಜೀವ-ಪರಮಾತ್ಮರಿಬ್ಬರಲ್ಲಿ ಒಬ್ಬನಾದ ಜೀವನಿಗೆ **ದೇಹಾತ್ ದೇಹಃ ಚ** ದೇಹದಿಂದ ದೇಹ ಬರುವದು ಹೋಗುವದು ಎಂಬ **ಸಂಸಾರಃ** ಸಂಸಾರವು ಬಂಧವು **ಭವತಿ** ಆಗುವದು. **ವಿಸ್ಮೃತಃ ಯದಿ** ವಿರುದ್ಧವಾಗಿ ತಿಳಿಯಲ್ಪಟ್ಟದ್ದಾದರೆ (ಅಭೇದ ತಿಳಿದರೆ) **ಏಕಸ್ಯ** ಐಕ್ಯಜ್ಞಾನಿಗೆ **ಮೃತೇಃ ಮೃತಿಃ** ದುಃಖದಿಂದ ದುಃಖವು ಅಂದರೆ ಸತತ ದುಃಖರೂಪ ಅಂಧಂತಮಸ್ಸಾಗುವದುದೆಂದರ್ಥ.

ಈ ಶ್ಲೋಕದಲ್ಲಿ 'ಪುಂಸಃ ಮದ್ಭಾವಃ' ಎಂದು ಜೀವೇಶಾಭೇದ ಹೇಳಿದಂತೆ ತೋರುವದು. ಅದನ್ನು ಪ್ರಮಾಣದಿಂದ ಪರಿಹರಿಸುವರು-

ತಾತ್ಪರ್ಯ

**ಸರ್ವಭಿನ್ನಂ ಪರಾತ್ಮಾನಂ ವಿಸ್ಮರನ್ ಸಂಸರೇದಿಹ ।**
**ಅಭಿನ್ನಂ ಸಂಸ್ಮರನ್ ಯಾತಿ ತಮೋ ನಾಸ್ತ್ಯತ್ರ ಸಂಶಯಃ ॥ ಇತಿ ಚ**

ತನ್ನಿಂದ ಹಿಡಿದು ಎಲ್ಲರಿಂದ ವಿಲಕ್ಷಣವಾದ ಪರಮಾತ್ಮನನ್ನು ಭಿನ್ನನೆಂದು ಅನುಸಂಧಾನ ಮಾಡದಿರುವವನು ಮತ್ತೆ ಮತ್ತೆ ಸಂಸಾರವನ್ನು ಹೊಂದುವನು. ಅಭಿನ್ನನೆಂದು ತಿಳಿಯುವವನು ತಮಸ್ಸನ್ನು ಹೊಂದುವನು. ಈ ವಿಷಯದಲ್ಲಿ ಸಂಶಯವಿಲ್ಲ.

**ಏಷಃ** ಈ ಶ್ರೀಹರಿಯು **ಅಹಂ ಭಿನ್ನಃ** ನಾನು ಅವನಿಂದ ಭಿನ್ನನು **ಇತಿ** ಎಂದು **ಪುಂಸಃ ಪುಂಸಾ** ಪುರುಷನಿಂದ **ವಿಸ್ಮೃತಃ** ಮರೆಯಲ್ಪಟ್ಟಿತು. **ತತಃ** ಆದ್ದರಿಂದ **ಏತಸ್ಯ ಆತ್ಮನಃ** ಈ ಜೀವನಿಗೆ **ದೇಹಾದ್ದೇಹಃ** ದೇಹದ ಕೊನೆಯೇ ಇಲ್ಲ ಇವನು ನಿತ್ಯ ಸಂಸಾರಿ ಎಂದು ಸಾರಾಂಶ. **ಏಷ ಮದ್ಭಾವಃ** ಈ ಹರಿಯು ನಾನೇ ಮಮ ಭಾವಃ ತಾದಾತ್ಮ್ಯಂ ಯಸ್ಯ ಸಃ **ಇತಿ** ಎಂದು **ವಿಸ್ಮೃತಃ** ವಿಶೇಷವಾಗಿ ತಿಳಿಯುವನೋ **ಏತಸ್ಯ ಪುಂಸಃ ಮೃತೇಃ ಮೃತಿಃ** ಆ ಪುರುಷನಿಗೆ ಮತ್ತೆ ಎಂದಿಗೂ ಏಳಲಾಗದಂತೆ ತಮಸ್ಸಾಗುವದು. ವಿ ಎಂಬುದು ಪ್ರಮಾಣದಲ್ಲಿರುವ ಸಂ ಎಂಬ ಪದದ ವಾಖ್ಯೇಯವಾದ ಮೂಲ. **ಏಕಸ್ಯ** ಎಂಬ ಪಾಠ ಅನೇಕ ಪುಸ್ತಕಗಳಲ್ಲಿ ಇಲ್ಲ. ಆದರೂ ಭಿನ್ನಃ ಏಷಃ ಇತಿ ವಿಸ್ಮೃತೋಽಹಂ ಯೇನ ತಸ್ಯೈಕಸ್ಯ ದೇಹಾದ್ದೇಹಃ ಏಕಸ್ಯೈವ ಮದ್ಭಾವಃ ಮದಾತ್ಮಾ ಇತಿ ಯೇನೈಕೇನ ವಿಸ್ಮೃತಃ ತಸ್ಯೈಕಸ್ಯ ಮೃತೇಃ ಮೃತಿಃ ತಮೋ ಭವತಿ ಇತಿ ವಾಖ್ಯೇಯಃ । ಸಂಸರೇತ್ ಎಂದು ತಮೋ ಯಾತಿ ಎಂದು ತಾತ್ಪರ್ಯದಲ್ಲಿ ವಿಲಕ್ಷಣಫಲಲಬ್ಧತ್ವೇನ ಹೇಳಿದ್ದಕ್ಕೆ ಅನುಕೂಲವಾಗುವದು ಎನ್ನುತ್ತಾರೆ ಶ್ರೀಗಳು. ॥೫೭॥

ಯೋಗ್ಯವಾದ ಶರೀರ ಬಂದಾಗಲೂ ಶ್ರೀಹರಿಯನ್ನು ತನ್ನನ್ನೂ ತಿಳಿಯದವಗೆ ಕ್ಷೇಮವಿಲ್ಲವೆಂದು ಹೇಳುವರು-

**ಲಬ್ಧ್ವೇಹ ಮಾನುಷೀಂ ಯೋನಿಂ ಜ್ಞಾನವಿಜ್ಞಾನಸಂಭವಾಮ್ ।**
**ಆತ್ಮಾನಂ ಯೋ ನ ಬುದ್ಧ್ಯೇತ ನ ಕ್ವಚಿತ್ ಕ್ಷೇಮಮಾಪ್ನುಯಾತ್ ॥೫೮॥**

**ಇಹ** ಕರ್ಮಭೂಮಿಯಾದ ಈ ಭರತಖಂಡದಲ್ಲಿ **ಜ್ಞಾನವಿಜ್ಞಾನಸಂಭವಾಂ** ಶಾಸ್ತ್ರಜನ್ಯಜ್ಞಾನವನ್ನು ಅಪರೋಕ್ಷಜ್ಞಾನವನ್ನು ಹೊಂದಬಹುದಾದ **ಮಾನುಷೀಂ ಯೋನಿಂ** ಬ್ರಾಹ್ಮಣ-ಕ್ಷತ್ರಿಯ-ವೈಶ್ಯರೆಂಬ ಮನುಷ್ಯ ಜನ್ಮವನ್ನು **ಲಬ್ಧ್ವಾ** ಹೊಂದಿ **ಯಃ** ಯಾವ ಅಧಿಕಾರಿ ಚೇತನನು **ಆತ್ಮಾನಂ** ತನ್ನ ಸ್ವಾಮಿಯಾದ ಪರಮಾತ್ಮನನ್ನು ಮತ್ತು ತನ್ನನ್ನು, **ಆ ಆತ್ಮಾನಂ** ಈಷದಾತ್ಮಾನಂ ದಾಸನಾದ ತನ್ನನ್ನು **ನ ಬುದ್ಧ್ಯೇತ** ಯಥಾವತ್ತಾಗಿ ತಿಳಿಯುವದಿಲ್ಲವೋ **ಸಃ** ಅವನು **ಕ್ವಚಿತ್** ಮತ್ತೆ ಯಾವ ಜನ್ಮದಲ್ಲಿಯೂ **ಕ್ಷೇಮಂ** ಮೋಕ್ಷಸಾಧನವಾದ ಜ್ಞಾನವನ್ನು **ನ ಆಪ್ನುಯಾತ್** ಹೊಂದುವದಿಲ್ಲ. **ಕ್ವಚಿತ್** ಎಂದೂ **ಕ್ಷೇಮಂ** ಮೋಕ್ಷವನ್ನು **ನ ಆಪ್ನುಯಾತ್** ಹೊಂದಲಾರನು.

**ಕ್ವಚಿತ್** ಇಹ-ಪರಗಳಲ್ಲಿ **ಕ್ಷೇಮಂ** ಸ್ಥಿತಪರಿಪಾಲನವನ್ನು ಮೋಕ್ಷವನ್ನು **ನ ಆಪ್ನುಯಾತ್** ಹೊಂದುವದಿಲ್ಲ. **ಯಃ** ಯಾವನು **ನ ಬುದ್ಧ್ಯೇತ** ಸಾಮಗ್ರೀ ಇದ್ದಾಗಲೂ ತಿಳಿಯುವದಿಲ್ಲವೋ ಅವನೇ **ಕ್ವಚಿತ್** ಕೌ ಭೂಮಿಯಲ್ಲಿ ನ ಚಿತ್ ಯಸ್ಯ ಸಃ ಬುದ್ಧಿಯಿಲ್ಲದವನು. ಕಲ್ಲಿಗೆ ಸಮಾನ. **ಯಃ** ಯಾವನು **ಆತ್ಮಾನಂ** ತನ್ನನ್ನೇ **ನ ಬುದ್ಧ್ಯೇತ** ತಿಳಿದಿಲ್ಲವೋ **ತಸ್ಯ** ಅವನಿಗೆ **ಚಿತ್** ಜ್ಞಾನರೂಪಿಯಾದ ಭಗವಂತನು ಕ್ವ ಎಲ್ಲಿ? ದೂರನಾಗುವನೆಂದರ್ಥ. ಹೀಗೆ ಅನೇಕ ಅರ್ಥಗಳನ್ನು ಶ್ರೀಗಳು ತಿಳಿಸಿರುವರು.

'ಶ್ರವಣಾನ್ಮನನಾಚ್ಚೈವ ಯಜ್ಜ್ಞಾನಮುಪಜಾಯತೇ । ತಜ್ಜ್ಞಾನಂ ದರ್ಶನಂ ವಿಷ್ಣೋಃ ವಿಜ್ಞಾನಂ ಶಂಭುರಬ್ರವೀತ್ । ಎಂದಿದೆ. 'ನಿತ್ಯಾತತಗುಣತ್ವಾತ್ಸ ಆತ್ಮೇತಿ ಶ್ರುತಿಷೂದಿತಃ' 'ಇಹ ಚೇದವೇದೀದಥ ಸತ್ಯಮಸ್ತಿ ನ ಚೇದಿಹಾವೇದೀನ್ಮಹತೀ ವಿನಷ್ಟಿಃ' ಎಂದು ಶ್ರುತಿ ಇದೆ. ಇವುಗಳು ಮೇಲಿನ ಅರ್ಥಕ್ಕೆ ಪೂರಕವಾಗಿವೆ. ।।೨೮।।

ಜ್ಞಾನವು ಬೇಡ. ಯಜ್ಞದಿಂದ ಮೋಕ್ಷವನ್ನು ಸಂಪಾದಿಸಬಹುದು ಎಂದರೆ ಹೇಳುತ್ತಾರೆ-

**ಸ್ಮೃತ್ವೇಹಾಯಾಂ ಪರಿಕ್ಲೇಶಂ ತತಃ ಫಲವಿಪರ್ಯಯಮ್ ।**
**ನೋಭಯಂ ವಾಪ್ಯನೀಹಾಯಾಂ ಪಶ್ಯಂಸ್ತದ್ವಿರಮೇತ್ಕವಿಃ ।।೨೯।।**

**ಈಹಾಯಾಂ** ಯಜ್ಞ ಮುಂತಾದ ಪ್ರವೃತ್ತ ಕರ್ಮ ಮಾಡುವದರಲ್ಲಿ **ಪರಿಕ್ಲೇಶಂ** ಕಾಯಕಷ್ಟವನ್ನು **ಸ್ಮೃತ್ವಾ** ತಿಳಿದು **ತತಃ** ಆ ಕರ್ಮದಿಂದ **ಫಲವಿಪರ್ಯಯಂ** ನಿರತಿಶಯಸುಖರೂಪವಾದ ಫಲ ಬರದಿರುವದು ದುಃಖ ಪರಿಹಾರವಾಗದಿರುವದು

ಅಥವಾ ಕರ್ಮದಿಂದ ಬಂದ ಫಲವಾದ ಸ್ವರ್ಗದಿಂದ ಕೆಳಗೆ ಬೀಳುವದನ್ನು **ಪಶ್ಯನ್** ಕಂಡು **ತತ್** ಪ್ರವೃತ್ತಕರ್ಮದಿಂದ **ವಿರಮೇತ್** ವಿರಮಿಸಬೇಕು ಅದನ್ನು ಮಾಡಬಾರದು. **ಅನೀಹಾಯಾಂ** ಯಾವ ಕಾಮನೆಯೂ ಇಲ್ಲದೇ ಶ್ರೀಹರಿಯ ಪ್ರೀತಿಗಾಗಿ ಮಾಡುವ ನಿವೃತ್ತಕರ್ಮಗಳನ್ನು ಶ್ರೀಹರಿಗೆ ಸಮರ್ಪಿಸುವ ಜ್ಞಾನಮಾರ್ಗದಲ್ಲಿ ಪ್ರವರ್ತಿಸಲು (ನಡೆಯಲು) **ಉಭಯಂ ಅಪಿ** ಕಾಯ ಕ್ಲೇಶವಾಗಲಿ ಫಲವಿಪರ್ಯಯವಾಗಲೀ **ನೋ** ಇಲ್ಲವೆಂದು **ಕವಿಃ** ಜ್ಞಾನಿಯು **ಪಶ್ಯನ್** ತಿಳಿದವನಾಗಿ **ರಮೇತ** ಅಲ್ಲಿ ಆಸಕ್ತನಾಗಬೇಕು. ಅಥವಾ **ಭಯಂ ಪುನಃ** ಜನನ-ಮರಣ ಭಯವನ್ನು **ನ ಪಶ್ಯನ್** ಕಾಣದೇ ನಿತ್ಯಸುಖವಾಗುವದೆಂದು ತಿಳಿದು ನಿವೃತ್ತಕರ್ಮದಲ್ಲಿ ವಿಶೇಷವಾದ ಆಸಕ್ತಿಯನ್ನು, ಪ್ರವೃತ್ತಕರ್ಮದಲ್ಲಿ ವಿರಕ್ತಿಯನ್ನು ಹೊಂದಬೇಕು. ।।೫೯।।

'ಅಪತ್ನೀಕೋಽಪ್ಯಗ್ನಿಹೋತ್ರಮಾಹರೇತ್' ಎಂದು ವಚನಗಳಿರುವದರಿಂದ ವಿಧುರನು ಮಾಡಿದ ಯಜ್ಞಾದಿಗಳು ಕಷ್ಟದಾಯಕಗಳಾದರೂ ಪತ್ನೀ ಸಹಿತನಿಗೆ ಅಂಧ-ಪಂಗುನ್ಯಾಯದಿಂದ (ಕಾಲಿಲ್ಲದವನು ಕುರುಡನ ಮೇಲೆ ಕುಳಿತು ನಡೆಯುವಂತೆ) ಅವನು ಮಾಡಿದ ಕರ್ಮ ನಾಶರಹಿತವಾದ ಫಲ ಸಂಪಾದಕವಾಗುವದಲ್ಲ ಎಂದರೆ ಹಾಗಲ್ಲವೆಂದು ಹೇಳುವರು-

**ಸುಖಾಯ ದುಃಖಮೋಕ್ಷಾಯ ಕುರ್ವಾತೇ ದಂಪತೀ ಕ್ರಿಯಾಃ ।**
**ತತೋ ನಿವೃತ್ತಿರಪ್ರಾಪ್ತಿರ್ದುಃಖಸ್ಯ ಚ ಸುಖಸ್ಯ ಚ ।।೬೦।।**

**ದಂಪತೀ** ಅಗ್ನಿಹೋತ್ರ ಮಾಡಲು ಯೋಗ್ಯರಾದ ಸ್ತ್ರೀ-ಪುರುಷರು **ಸುಖಾಯ** ಸುಖವನ್ನು ಹೊಂದಲು **ದುಃಖಮೋಕ್ಷಾಯ** ದುಃಖ ಹೋಗಲೆಂದು **ಕ್ರಿಯಾಃ** ಪ್ರವೃತ್ತಕರ್ಮಗಳನ್ನು **ಕುರ್ವಾತೇ** ಮಾಡುವರು. **ತತಃ** ಆ ಪ್ರವೃತ್ತಕರ್ಮಗಳಿಂದ **ದುಃಖಸ್ಯ ಅನಿವೃತ್ತಿಃ** ದುಃಖವು ಹೋಗುವದಿಲ್ಲ. **ಸುಖಸ್ಯ ಚ ಅಪ್ರಾಪ್ತಿಃ** ಶಾಶ್ವತವಾದ ಸುಖವು ದೊರೆಯಲಾರದು. ಆದ್ದರಿಂದ ಪ್ರವೃತ್ತಕರ್ಮವನ್ನು ಮಾಡಬಾರದು ಎಂದು ಭಾವ. ।।೬೦।।

**ಏವಂ ವಿಪರ್ಯಯಂ ಬುದ್ಧ್ವಾ ನೃಣಾಂ ವಿದ್ಯಾಭಿಮಾನಿನಾಮ್ ।**
**ಆತ್ಮನಶ್ಚ ಗತಿಂ ಸೂಕ್ಷ್ಮಾಂ ಸ್ಥಾನತ್ರಯವಿಲಕ್ಷಣಾಮ್ ।।೬೧।।**

**ದೃಷ್ಟಶ್ರುತಾಭಿರ್ಮಾತ್ರಾಭಿರ್ವಿಮುಕ್ತಃ ಸ್ವೇನ ತೇಜಸಾ ।**
**ಜ್ಞಾನವಿಜ್ಞಾನಸಂತೃಪ್ತೋ ಮದ್ಭಕ್ತಃ ಪುರುಷೋ ಭವೇತ್ ॥೬೨॥**

**ಏವಂ** ಮೇಲೆ ಹೇಳಿದಂತೆ **ವಿದ್ಯಾಭಿಮಾನಿನಾಂ** ಅವಿದ್ಯೆಯನ್ನೇ ವಿದ್ಯೆ ಎಂದು ತಿಳಿದ ಪಂಡಿತರೆಂದು ತಿಳಿದ (ವಸ್ತುತಃ ಪಂಡಿತರಲ್ಲದ ಕರ್ಮವನ್ನು ಹೇಳುವ ವಿದ್ಯಾಭ್ಯಾಸದಲ್ಲಿ ವಿದ್ಯೆಯೆಂಬ ಅಭಿಮಾನ ಉಳ್ಳ) **ನೃಣಾಂ** ಜನರ **ವಿಪರ್ಯಯಂ** ಅಭೀಷ್ಟ ಬರದಿರುವದನ್ನು **ಬುದ್ಧ್ವಾ** ತಿಳಿದು **ಆತ್ಮನಃ** ಜೀವನ **ಸ್ಥಾನತ್ರಯವಿಲಕ್ಷಣಾಂ** ಜಾಗ್ರದಾದಿ ಮೂರು ಅವಸ್ಥೆಗಳಲ್ಲಿಯೂ ಶ್ರೀಹರಿಯ ಅಧೀನತೆ ಎಂಬ **ಸೂಕ್ಷ್ಮಾಂ** ವಿಮರ್ಶೆಯಿಲ್ಲದೇ ತಿಳಿಯಲಾಗದ **ಗತಿಂ** ಸ್ಥಿತಿಯನ್ನು **ಆತ್ಮನಃ** ಪರಮಾತ್ಮನ **ಸ್ಥಾನತ್ರಯವಿಲಕ್ಷಣಾಂ** ೧. ವೈಕುಂಠ-ಶ್ವೇತದ್ವೀಪ-ಅನಂತಾಸನಗಳೆಂಬ ತ್ರಿಧಾಮ-ಗಳನ್ನು ಹೊಂದಿರುವ ವಿಲಕ್ಷಣವಾದ ೨. ದೇಶ-ಕಾಲ-ಗುಣಗಳಿಂದ ವ್ಯಾಪ್ತತೆಯಿಂದ ವಿಲಕ್ಷಣವಾದ ೩. ಜಾಗ್ರದಾದಿ ಅವಸ್ಥಾತ್ರಯವಿಲ್ಲದ **ಸೂಕ್ಷ್ಮಾಂ** ಆದ್ದರಿಂದಲೇ ಗಹನವಾದ **ಗತಿಂ ಚ** ಸ್ವರೂಪವನ್ನು **ಬುದ್ಧ್ವಾ** ತಿಳಿದು ಅಥವಾ **ಆತ್ಮನಃ** ತನಗೆ ವೈಕುಂಠಾದಿ ತ್ರಯಗಳಿರುವದರಿಂದ **ವಿಲಕ್ಷಣಾಂ** ನಾಶರಹಿತವಾದ ಫಲವಿರುವದರಿಂದ ಸ್ವರ್ಗಾದಿ ವಿರುದ್ಧ ಲಕ್ಷಣ ಉಳ್ಳ **ಗತಿಂ** ಗಮ್ಯಸ್ಥಾನವನ್ನು **ಬುದ್ಧ್ವಾ** ತಿಳಿದು **ಮದ್ಭಕ್ತಃ** ಸ್ವರೂಪತಃ ನನ್ನ ಭಕ್ತನಾದ ಅಂದರೆ ಮುಕ್ತಿಯೋಗ್ಯನಾದ **ಪುರುಷಃ** ಅಧಿಕಾರಿಯು **ದೃಷ್ಟಶ್ರುತಾಭಿಃ ಮಾತ್ರಾಭಿಃ** ಐಹಿಕ-ಆಮುಷ್ಮಿಕವಿಷಯಗಳಿಂದ **ಸ್ವೇನ ತೇಜಸಾ** ಇಂದ್ರಿಯಲೋಲುಪತೆಯ ರಾಹಿತ್ಯದಿಂದ ಉಂಟಾದ ಸಾಮರ್ಥ್ಯದಿಂದ **ವಿಮುಕ್ತಃ ಸನ್** ವಿರಕ್ತನಾಗಿ **ಸ್ವೇನ ತೇಜಸಾ** ಇದರಿಂದ ಬಂದ ವಿಶುದ್ಧವಾದ ಬುದ್ಧಿಯ ಅತಿಶಯದಿಂದ **ಜ್ಞಾನವಿಜ್ಞಾನಸಂತೃಪ್ತಃ** ಜ್ಞಾನ-ವಿಜ್ಞಾನಗಳಿಂದ ಸಂತುಷ್ಟನಾಗಿ ಇದೇ ಸಾಕು ಎಂದು ಅಲಂಬುದ್ಧಿಯುಳ್ಳವನಾಗಿ ಅಪರೋಕ್ಷವನ್ನು ಹೊಂದಿ **ಮುಕ್ತೋ ಭವೇತ್** ಮುಕ್ತನಾಗಬೇಕು ಅಥವಾ **ಪುರುಷಃ ಮದ್ಭಕ್ತಃ ಭವೇತ್** ಅಧಿಕಾರಿಯು ನನ್ನ ಭಕ್ತನಾಗಬೇಕು. **ಸ್ವೇನ ತೇಜಸಾ ಸಹಿತಃ** ಸ್ವರೂಪಭೂತ ಧಾಮದಿಂದ ಯುಕ್ತನಾಗಬೇಕು. 'ತೇಜೋ ಧಾಮ್ನಿ ಪರಾಕ್ರಮೇ' ಎಂದು ವಿಶ್ವವಿದೆ. ಮುಕ್ತೋ ಭವೇತ್ ಎಂದಾಗಲಿ ವಿಮುಕ್ತಃ ಎಂದು ಆವೃತ್ತಿ ಮಾಡಿಯಾಗಲೀ ಅನ್ವಯ ತಿಳಿಯಬೇಕು. ॥೬೧-೬೨॥

ಶ್ರೀಹರಿಯ ಜ್ಞಾನಕ್ಕಿಂತ ಬೇರೇ ಪುರುಷಾರ್ಥವಿಲ್ಲವೆಂದು ಪ್ರಶಂಸಿಸುತ್ತಾರೆ-

**ಏತಾವಾನೇವ ಮನುಜೈರ್ಯೋಗನೈಪುಣ್ಯಬುದ್ಧಿಭಿಃ ।**
**ಸ್ವಾರ್ಥಃ ಸರ್ವಾತ್ಮನಾ ಜ್ಞೇಯೋ ಯತ್ಪರಾತ್ಮೈಕದರ್ಶನಮ್ ॥೬೩॥**

**ಯತ್** ಯಾವ **ಪರಮಾತ್ಮೈಕದರ್ಶನಂ** ಸರ್ವೋತ್ತಮನಾದ ಶ್ರೀಹರಿಗೆ ಸಮರೂ ಅಧೀನರೂ ಇಲ್ಲವೆಂಬ ಜ್ಞಾನವೇನಿದೆಯೋ **ಏತಾವಾನೇವ** ಇದಿಷ್ಟೇ **ಯೋಗನೈಪುಣ್ಯ-ಬುದ್ಧಿಭಿಃ** ಶ್ರೀಹರಿಯ ಭಕ್ತಿಯೋಗದಿಂದ ನಿಪುಣವಾದ (ತತ್ತ್ವವಿಮರ್ಶೆಗೆ ಯೋಗ್ಯವಾದ) ಬುದ್ಧಿಯುಳ್ಳ **ಮನುಜೈಃ** ಅಧಿಕಾರಿಗಳಾದ ಜನರಿಂದ **ಸರ್ವಾತ್ಮನಾ** ಎಲ್ಲ ರೀತಿಯ **ಸ್ವಾರ್ಥಃ** ಪುರುಷಾರ್ಥವೆಂದು **ಜ್ಞೇಯಃ** ತಿಳಿಯಲ್ಪಡಬೇಕಾದುದು.

ಯೋಗಕೌಶಲ್ಯದಲ್ಲಿ ಅಂದರೆ ಸಂಪಾದನೆಯಲ್ಲಿ ಬುದ್ಧಿಯುಳ್ಳವರಿಂದ ಆ ಬುದ್ಧಿಗಳೆಂಬ ಸಾಧನಗಳಿಂದ **ಮನುಜೈಃ** ಕರ್ತೃಗಳಿಂದ ಇದೇ ಸ್ವಾರ್ಥವೆಂದು ತಿಳಿಯಬೇಕು. ಅದೇನೆಂದರೇ **ಯತ್ ಪರಾತ್ಮೈಕದರ್ಶನಂ** ಏತಿ ವತ್ಸಂ ಗೌರಿವೇತಿ ಯನ್ ಸ ಚಾऽಸೌ ಪರಮಾತ್ಮಾ ಚ ಯತ್ಪರಮಾತ್ಮಾ ಅಂದರೆ ಕರುವಿದ್ದಲ್ಲಿಗೆ ಆಕಳು ಬರುವಂತೆ ಭಕ್ತರೆಡೆಗೆ ಬರುವ ಪರಮಾತ್ಮನು ಎಂದರ್ಥ. 'ಸಃ ಶ್ರುತಂ ಚೇದಾಗಮಿಷ್ಯತಿ' ಎಂದು ಋಗ್ಭಾಷ್ಯದಲ್ಲಿ ಹೇಳಿದೆ. ಜ್ಞೇಯವೆಂದು ಪ್ರಸ್ತುತ ಜ್ಞಾನವನ್ನು ಸ್ತುತಿಸುವರು. **ಏಕದರ್ಶನಂ** ಮುಖ್ಯಜ್ಞಾನವಿದೆಂದರ್ಥ. **ಹೇ ಸ್ವ** ಸ್ವಕೀಯನಾದ ಚಿತ್ರಕೇತುವೇ **ಅರ್ಥಃ** ನಾಶರೂಪನು ಶ್ರೀಹರಿ ಎಂದು **ಸರ್ವಾತ್ಮನಾ** ನ **ಜ್ಞೇಯಃ** ಸರ್ವಥಾ ತಿಳಿಯಬಾರದು ಹೀಗೆ ವಿಶೇಷಾರ್ಥವನ್ನು ಶ್ರೀಗಳು ಮಾಡಿರುವರು.

**ತ್ವಮೇತಚ್ಛ್ರದ್ಧಯಾ ರಾಜನ್ನಪ್ರಮತ್ತೋ ವಚೋ ಮಮ ।**
**ಜ್ಞಾನವಿಜ್ಞಾನಸಂಪನ್ನೋ ಧಾರಯನ್ನಾಶು ಶುಧ್ಯತಿ ॥೬೪॥**

**ರಾಜನ್** ರಾಜನೇ **ಅಪ್ರಮತ್ತಃ ತ್ವಂ** ಪ್ರಮಾದವಿಲ್ಲದ ನೀನು **ಏತತ್** ಈ **ಮಮ** ನನ್ನ **ವಚಃ** ಮಾತನ್ನು **ಶ್ರದ್ಧಯಾ** ಶ್ರದ್ಧೆಯಿಂದ **ಧಾರಯನ್** ಧರಿಸುತ್ತ (ಉಪಾಸಿಸುತ್ತ) **ಜ್ಞಾನವಿಜ್ಞಾನಸಂಪನ್ನಃ** ಜ್ಞಾನ-ವಿಜ್ಞಾನಗಳಿಂದ ಕೂಡಿದವನಾಗಿ **ಆಶು** ಬೇಗನೇ **ಸಿಧ್ಯಸಿ** ಜೀವನ್ಮುಕ್ತನಾಗುವಿ. ಶುಧ್ಯತಿ ಎಂಬ ಪಾಠವೂ ಇದೆ.

**ಏತತ್** ಬ್ರಹ್ಮನು **ತ್ವಂ** ಭಿನ್ನನು 'ತ್ವಂತ್ವಾವನ್ಯಪರ್ಯಾಯೌ' ಲೋಕದಲ್ಲಿ ಪ್ರಯೋಗವಿದೆ. ವೇದದಲ್ಲಿಯೂ 'ಬ್ರಹ್ಮಾ ತ್ವೋ ವದತಿ' ಎಂದಿದೆ (ತ್ವಃ ಅನ್ಯಃ ಕಶ್ಚಿತ್ ಬ್ರಹ್ಮಾ ಎಂದರ್ಥ) **ವಚಃ** ಭಗವಂತನು ನನ್ನಿಂದ ಭಿನ್ನನು ಎಂಬುವ ವಿದ್ಯಾರೂಪವಾದ

ಮಾತು **ಶುದ್ಧ್ಯತಿ** ಅಂತರಂಗವನ್ನು ಶುದ್ಧಿ ಮಾಡುವದು. ಇದರಿಂದ **ಶುದ್ಧ್ಯಸಿ** ಎನ್ನಬೇಕಿತ್ತು ಶುದ್ಧ್ಯತಿ ಎಂದು ಹೇಗೆ ಹೇಳಿರುವರು ಎಂಬ ಶಂಕೆಗೆ ಅವಕಾಶವಿಲ್ಲ.

**ಶ್ರೀಶುಕ ಉವಾಚ –**

**ಆಶ್ವಾಸ್ಯ ಭಗವಾನಿತ್ಥಂ ಚಿತ್ರಕೇತುಂ ಜಗದ್ಗುರುಃ ।**
**ಪಶ್ಯತಸ್ತಸ್ಯ ವಿಶ್ವಾತ್ಮಾ ತತಶ್ಚಾಂತರ್ದಧೇ ಹರಿಃ ॥೬೫॥**

॥ ಇತಿ ಶ್ರೀಮದ್ಭಾಗವತೇ ಷಷ್ಠಸ್ಕಂಧೇ ಷೋಡಶೋಽಧ್ಯಾಯಃ ॥

**ವಿಶ್ವಾತ್ಮಾ** ಜಗನ್ನಿಯಾಮಕನಾದ **ಜಗದ್ಗುರುಃ** ಜಗತ್ತಿಗೆ ಗುರುವಾದ **ಭಗವಾನ್** ಶ್ರೀಹರಿಯು **ಇತ್ಥಂ** ಹೀಗೆ **ಚಿತ್ರಕೇತುಂ** ಚಿತ್ರಕೇತುವನ್ನು **ಆಶ್ವಾಸ್ಯ** ಸಮಾಧಾನ ಪಡಿಸಿ **ತಸ್ಯ ಪಶ್ಯತಃ** ಅವನು ನೋಡುತ್ತಿರುವಾಗಲೇ **ತತಃ** ಆ ಸ್ಥಳದಿಂದ **ಅಂತರ್ದಧೇ** ಕಾಣದಾದನು. **ಚಿತ್ರಕೇತುಂ** ಚಿತ್ರಕೇತುವನ್ನು **ಕೃತ್ವಾ** ತನ್ನ ವಿಷಯಕ ಜ್ಞಾನ ಉಳ್ಳವನನ್ನಾಗಿ ಮಾಡಿ **ಚಿತ್ರಃ** ಆಶ್ಚರ್ಯಕರವಾದ **ಕೇತುಃ** ಭಗವದ್ವಿಷಯಕ ಜ್ಞಾನಂ ಯಸ್ಯ ಸಃ ತಂ ಕೃತ್ವಾ ಎಂದು ಶ್ರೀಗಳು ಅರ್ಥ ಹೇಳಿದ್ದಾರೆ. 'ಕೇತುಂ ಕೃಣ್ವನ್ ಎಂಬಲ್ಲಿ ಹೀಗೇ ಅರ್ಥಮಾಡಿದೆ.

ಇಲ್ಲಿಗೆ ಹದಿನಾರನೇ ಅಧ್ಯಾಯ ಮುಗಿಯಿತು

★★★★★




# ಅಥ ಶ್ರೀಮದ್ಭಾಗವತೇ ಷಷ್ಠಸ್ಕಂಧೇ

# ಸಪ್ತದಶೋಽಧ್ಯಾಯಃ

**ಅಧ್ಯಾಯಸಾರಾಂಶ**

ಶುಕಾಚಾರ್ಯರು ಹೇಳಿದರು. ಯಾವ ದಿಕ್ಕಿನಲ್ಲಿ ಶ್ರೀಹರಿ ಅಂತರ್ಹಿತನಾದನೋ ಆ ದಿಕ್ಕಿಗೆ ಭಕ್ತಿಯಿಂದ ಚಿತ್ರಕೇತುವು ನಮಸ್ಕರಿಸಿದ. ಗಗನದಲ್ಲಿ ಸಂಚರಿಸುವ ಶಕ್ತಿಯಿಂದ ಸಂಪನ್ನನಾದ. ಅವ್ಯಾಹತವಾದ ಬಲದಿಂದ ಯುಕ್ತನಾದ. ಸಿದ್ಧಚಾರಣಾದಿಗಳಿಂದ ಸ್ತುತನಾದ. ಮಹಾಯೋಗಿಯಾದ. ವಿದ್ಯಾಧರಸ್ತ್ರೀಯರೊಡನೆ ಕೂಡಿಕೊಂಡು ಅಗಮ್ಯವಾದ ಪರ್ವತಗಳ ಪ್ರಾಂತಗಳಲ್ಲಿ ಸಂಚರಿಸಿದ. ಲಕ್ಷವರ್ಷಗಳ ಲಕ್ಷದಷ್ಟು ಕಾಲ ನಿರಾತಂಕವಾಗಿ ಸುಖವನ್ನು ಅನುಭವಿಸಿದ. ಆದರೂ ಅವನ ಇಂದ್ರಿಯಗಳು ಕುಂಠಿತವಾಗಲಿಲ್ಲ. ತರುಣನಂತೆಯೇ ಉಳಿದುಕೊಂಡ.

ಒಂದುದಿನ ವಿಷ್ಣುದತ್ತವಾದ ವಿಮಾನವನ್ನೇರಿ ಆಕಾಶದಲ್ಲಿ ಸಂಚಾರಕ್ಕೆ ಹೊರಟ. ಕೈಲಾಸದಲ್ಲಿಯ ಸಭೆ ಚಿತ್ರಕೇತುವಿಗೆ ಕಾಣಿಸಿತು. ಆ ಸಭೆಯಲ್ಲಿ ಪಾರ್ವತಿಯನ್ನು ತೊಡೆಯ ಮೇಲೆ ಕೂಡಿಸಿಕೊಂಡು ಆಲಿಂಗನ ಮಾಡಿಕೊಂಡಿರುವ ರುದ್ರದೇವರನ್ನು ನೋಡಿದ. ಸಿದ್ಧ-ಚಾರಣ-ಮುನಿಗಳೆಲ್ಲ ಆ ಸಭೆಯಲ್ಲಿ ಸೇರಿದ್ದಾರೆ. ರುದ್ರದೇವರ ಈ ವ್ಯಾಪಾರವನ್ನು ಕಂಡು ಗಹಗಹಿಸಿ ನಕ್ಕ. ಪಾರ್ವತಿಯು ಕೇಳುತ್ತಿರುವಂತೆಯೇ ಹೇಳಿದ.

ಈ ಶಂಕರರು ಲೋಕಕ್ಕೆಲ್ಲ ಗುರುಗಳಾಗಿದ್ದಾರೆ. ಧರ್ಮಪ್ರಚಾರಕರಾಗಿದ್ದಾರೆ. ಆದರೆ ಸಭೆಯಲ್ಲಿಯೇ ಹೆಂಡತಿಯನ್ನು ತೊಡೆಯ ಮೇಲೆ ಕೂಡಿಸಿಕೊಂಡಿದ್ದಾರೆ. ಪ್ರಾಕೃತಪುರುಷರಂತೆ ವರ್ತಿಸುತ್ತಿದ್ದಾರೆ. ಪ್ರಾಕೃತರಾದ ಪುರುಷರು ಕೂಡಾ

ಏಕಾಂತದಲ್ಲಿಯೇ ತಮ್ಮ ಪತ್ನಿಯರನ್ನು ತೊಡೆಯ ಮೇಲೆ ಕೂಡಿಸಿಕೊಳ್ಳುತ್ತಾರೆ. ಈ ರುದ್ರರಾದರೋ ಸಭೆಯಲ್ಲಿಯೇ ಲಜ್ಜಾರಹಿತರಾಗಿ ಈ ಕೆಲಸವನ್ನು ಮಾಡುತ್ತಿದ್ದಾರೆ.

ಚಿತ್ರಕೇತುವಿನ ಮಾತನ್ನು ಕೇಳಿ ರುದ್ರದೇವರು ನಕ್ಕು ಸುಮ್ಮನಾದರು. ರುದ್ರದೇವರು ಸುಮ್ಮನಾದದ್ದು ನೋಡಿ ಸಭಿಕರೆಲ್ಲರೂ ಸುಮ್ಮನಾದರು. ಸ್ತ್ರೀನಿಮಿತ್ತವಾಗಿ ಆದ ಅವಮಾನಕ್ಕೆ ಪ್ರತೀಕಾರ ಸ್ತ್ರೀಯಿಂದಲೇ ಆಗಬೇಕೆಂಬ ರುದ್ರದೇವರ ಮನದಿಂಗಿತವನ್ನು ಪಾರ್ವತಿಯು ಅರಿತಳು. ಕುಪಿತಳಾಗಿ ಹೇಳಿದಳು.

ನಾವು ಹೀಗೆ ಅನ್ಯೋನ್ಯವಾಗಿ ಇರುವುದನ್ನು ಬ್ರಹ್ಮದೇವರು ನೋಡಿಲ್ಲವೇ? ನಾರದರಿಗೆ ಗೊತ್ತಿಲ್ಲವೇ? ಇವರಾರೂ ನಮಗೆ ಯಾವ ನಿಷೇಧವನ್ನೂ ಮಾಡಿಲ್ಲ. ಕ್ಷತ್ರಿಯಾಧಮನಾದ ಇವನು ಮಾತ್ರ ನಮ್ಮನ್ನು ಆಕ್ಷೇಪಿಸುತ್ತಿದ್ದಾನೆ. ಜ್ಞಾನಿಗಳೆಂಬುದನ್ನೂ ತಿಳಿಯದೇ ಶಾಸನ ಮಾಡುತ್ತಿದ್ದಾನೆ. ಆದ್ದರಿಂದ ಇವನು ದಂಡ್ಯನಾಗಿದ್ದಾನೆ. ಆದ್ದರಿಂದ ಪರಮಾತ್ಮನ ಪಾದಗಳನ್ನು ಸೇರಲು ಇವನು ಯೋಗ್ಯನಲ್ಲ. ಹೀಗಾಗಿ ಪಾಪಿಷ್ಠವಾದ ಆಸುರಯೋನಿಯಲ್ಲಿ ನೀನು ಜನಿಸು. ಈ ಶಿಕ್ಷೆಯಿಂದ ಮತ್ತೆ ನೀನು ಮಹದಪರಾಧವನ್ನು ಮಾಡಲು ಮುಂದಾಗುವುದಿಲ್ಲ.

ಶುಕಾಚಾರ್ಯರು ಹೇಳಿದರು. ರುದ್ರಾಣಿಯಿಂದ ಈ ರೀತಿಯಾಗಿ ಶಪ್ತನಾದ ಚಿತ್ರಕೇತುವಿಗೆ ಎಚ್ಚರವಾಯಿತು. ವಿಮಾನದಿಂದ ಕೆಳಗಿಳಿದ. ವಿನೀತನಾಗಿ ಸತೀ-ಸದಾಶಿವರಿಗೆ ಸಾಷ್ಟಾಂಗವೆರಗಿದ. ಸತಿಯನ್ನು ಸಂತೋಷಪಡಿಸಿದ. ಅಮ್ಮಾ ಪಾರ್ವತೀ ! ನೀನು ನೀಡಿದ ಶಾಪವನ್ನು ಸಂತೋಷದಿಂದ ನಾನು ಸ್ವೀಕರಿಸುತ್ತೇನೆ. ಅನ್ಯೋನ್ಯದಂಪತಿಗಳಾದ ನಿಮ್ಮನ್ನು ನಿಂದಿಸಿ ಹಿರಿದಾದ ಅಪರಾಧವನ್ನು ನಾನು ಮಾಡಿದ್ದೇನೆ. ಪೂರ್ವಜನ್ಮದಲ್ಲಿ ಮಾಡಿದ ಪಾಪ-ಪುಣ್ಯಗಳ ಫಲವನ್ನೇ ಮನುಷ್ಯನು ಅನುಭವಿಸುತ್ತಾನೆ. ಆದ್ದರಿಂದ ಶಾಪಮೋಕ್ಷಕ್ಕಾಗಿ ನಾನು ಪ್ರಯತ್ನ ಮಾಡುವುದಿಲ್ಲ. ನಾನು ಮಾಡಿದ ಅಪರಾಧಕ್ಕೆ ತಕ್ಕುದಾದ ಶಿಕ್ಷೆಯನ್ನೇ ನೀನು ನೀಡಿರುವಿ. ಸಂತೋಷದಿಂದ ಆ ಶಿಕ್ಷೆಯನ್ನು ಅನುಭವಿಸುತ್ತೇನೆ. ಆದರೆ ನಾನು ಮಾಡಿದ ಅಪರಾಧವನ್ನು ಮಾತ್ರ ನೀನು ಕ್ಷಮಿಸಬೇಕು.

ಶುಕಾಚಾರ್ಯರು ಹೇಳಿದರು. ಚಿತ್ರಕೇತುವಿನ ವಿಚಿತ್ರವಾದ ವರ್ತನೆಯಿಂದ ಪಾರ್ವತೀ-ಪರಮೇಶ್ವರರು ಪ್ರಸನ್ನರಾದರು. ಅವರು ಮಂದಹಾಸವನ್ನು ಮಾಡುತ್ತಿರುವಾಗಲೇ ವಿಮಾನವನ್ನೇರಿ ಚಿತ್ರಕೇತು ಹೊರಟುಹೋದ.

ನಂತರ ಮಹದೇವರು ಪಾರ್ವತಿಗೆ ಹೇಳಿದರು. ದೇವತೆಗಳು ಋಷಿಗಳೂ ಕೇಳುತ್ತಿರುವಂತೆಯೇ ಹೇಳಿದರು. ಪ್ರಿಯೇ ! ಶ್ರೀಹರಿಯ ಭಕ್ತರು ಹೇಗೆ ನಿರಪೇಕ್ಷರಾಗಿರುತ್ತಾರೆಂಬುದನ್ನು ಪ್ರತ್ಯಕ್ಷವಾಗಿ ನೀನು ನೋಡಿರುವಿ.

ಯದ್ಯಪಿ ಯೋಗ್ಯತೆಯಲ್ಲಿ ನಿನಗಿಂತಲೂ ತುಂಬಾ ಚಿಕ್ಕವ. ಆದರೂ ಪ್ರತಿಯಾಗಿ ಶಾಪಕೊಡಲು ಸಮರ್ಥನಾಗಿದ್ದಾನೆ ಈ ಚಿತ್ರಕೇತು. ಆದರೂ ಪ್ರತಿಯಾಗಿ ಶಾಪಕೊಡಲಿಲ್ಲ. ಇದು ಸಾಧುಗಳಾದ ಭಗವದ್ಭಕ್ತರ ಲಕ್ಷಣವಾಗಿದೆ. ಭಗವದ್ಭಕ್ತರ ಈ ವರ್ತನೆಗೆ ಆಶ್ಚರ್ಯಪಡುವ ಕಾರಣವಿಲ್ಲ.

ರುದ್ರದೇವರ ಮಾತನ್ನು ಕೇಳಿದ ಪಾರ್ವತಿಯು ಸುಮ್ಮನಾದಳು.

ಪಾರ್ವತಿಯ ಶಾಪದಿಂದಲೇ ತ್ವಷ್ಟೃವಿನ ಯಾಗದಲ್ಲಿ ಜನಿಸಿದ. ವೃತ್ರಾಸುರನೆಂದು ಪ್ರಸಿದ್ಧನಾದ.

ವೃತ್ರಾಸುರನ ಉತ್ಪತ್ತಿಯ ವಿಷಯದಲ್ಲಿ ನೀನು ಕೇಳಿದ ಪ್ರಶ್ನೆಗೆ ನಾನು ಉತ್ತರವನ್ನು ನೀಡಿದ್ದೇನೆ. ಈ ಚಿತ್ರಕೇತುವಿನ ಇತಿಹಾಸವನ್ನು ಪ್ರಾತಃಕಾಲದಲ್ಲಿ ಯಾರು ಪಠಿಸುತ್ತಾರೋ ಅವರು ಉತ್ತಮವಾದ ಗತಿಯನ್ನು ಹೊಂದುತ್ತಾರೆ.

★★★★★

ಭಗವಂತನು ಅಪರೋಕ್ಷಜ್ಞಾನಕ್ಕೆ ವಿಷಯನಾಗಿ ಮುಕ್ತಿಯನ್ನು ನೀಡುತ್ತಾನೆ. ಇದನ್ನು ತಿಳಿಸಲು ಉಪಯುಕ್ತವಾದ ವಿಷಯಗಳನ್ನೆಲ್ಲ ಶುಕಾಚಾರ್ಯರು ಪರೀಕ್ಷಿತನಿಗೆ ಈ ಅಧ್ಯಾಯದಲ್ಲಿ ಹೇಳುತ್ತಿದ್ದಾರೆ. ಚಿತ್ರಕೇತುವು ಇಷ್ಟು ಪರಿಯಾಗಿ ಪರಮಾತ್ಮನ ಸೇವೆಯನ್ನು ಮಾಡಿದ್ದರೂ ಪ್ರಾರಬ್ಧಕರ್ಮವಶದಿಂದ ಕಠಿಣವಾದ ಶಾಪವನ್ನು ಪಡೆಯಬೇಕಾಯಿತು. ಈ ವಿಷಯವನ್ನು ಮೊದಲು ಇಲ್ಲಿ ಹೇಳುತ್ತಿದ್ದಾರೆ-

**ಶ್ರೀಶುಕ ಉವಾಚ –**

**ಯತಶ್ಚಾಂತರ್ಹಿತೋಽನಂತಸ್ತಸ್ಯೈ ಕೃತ್ವಾ ದಿಶೇ ನಮಃ ।**
**ವಿದ್ಯಾಧರಶ್ಚಿತ್ರಕೇತುಶ್ಚಚಾರ ಗಗನೇಚರಃ ॥೧॥**

**ಯತಃ** ಯಾವ ದಿಕ್ಕಿನಲ್ಲಿ **ಅನಂತಃ** ಅನಂತನಾಮಕ ಶ್ರೀಹರಿಯು **ಅಂತರ್ಹಿತಃ** ಕಾಣದಾದನೋ **ತಸ್ಯೈ ದಿಶೇ** ಆ ದಿಕ್ಕಿಗೆ **ನಮಃ ಕೃತ್ವಾ** ನಮಸ್ಕಾರ ಮಾಡಿ **ಗಗನೇಚರಃ** ಆಕಾಶದಲ್ಲಿ ಸಂಚರಿಸುವ **ವಿದ್ಯಾಧರಃ ಚಿತ್ರಕೇತುಃ** ವಿದ್ಯಾಧರನಾದ ಚಿತ್ರಕೇತುವು **ಚಚಾರ** ಸಂಚರಿಸಿದನು.

'ಹಲದಂತಾತ್ ಸಪ್ತಮ್ಯಾಃ ಸಂಜ್ಞಾಯಾಂ' ಎಂಬ ಸೂತ್ರದಿಂದ ಗಗನೇ ಎಂಬ ಸಪ್ತಮಿಗೆ ಲೋಪವಾಗಿಲ್ಲ' ಸಂಜ್ಞಾತ್ವದಲ್ಲಿ ವಿವಾದವಿದ್ದದ್ದಾದರೆ 'ತತ್ಪುರುಷೇ ಕೃತಿ ಬಹುಲಂ' ಎಂಬುದರಿಂದ ಲೋಪವಾಗಿಲ್ಲವೆಂದು ತಿಳಿಯಬೇಕು. ।।೧।।

**ಸ ಲಕ್ಷಂ ಲಕ್ಷವರ್ಷಾಣಾಮವ್ಯಾಹತಬಲೇಂದ್ರಿಯಃ ।**
**ಸ್ತೂಯಮಾನೋ ಮಹಾಯೋಗೀ ಮುನಿಭಿಃ ಸಿದ್ಧಚಾರಣೈಃ ।।೨।।**

**ಕುಲಾಚಲೇಂದ್ರದ್ರೋಣೀಷು ನಾನಾಸಂಕಲ್ಪಸಿದ್ಧಿಷು ।**
**ರೇಮೇ ವಿದ್ಯಾಧರಸ್ತ್ರೀಭಿರ್ಗಾಯಯನ್ ಹರಿಮೀಶ್ವರಮ್ ।।೩।।**

**ಲಕ್ಷವರ್ಷಾಣಾಂ ಲಕ್ಷಂ** ಒಂದು ಸಾವಿರ ಕೋಟಿ ವರ್ಷಗಳ ಕಾಲ **ಮುನಿಭಿಃ** ಋಷಿಗಳಿಂದ **ಸಿದ್ಧಚಾರಣೈಃ** ಸಿದ್ಧಚಾರಣರಿಂದ **ಸ್ತೂಯಮಾನಃ** ಸ್ತೋತ್ರ ಮಾಡಿಸಿಕೊಳ್ಳುತ್ತಿದ್ದ **ಮಹಾಯೋಗೀ** ಶ್ರೀಹರಿಭಕ್ತನಾದ **ಸಃ** ಚಿತ್ರಕೇತುವು **ಅವ್ಯಾಹತಬಲೇಂದ್ರಿಯಃ** ಕುಗ್ಗದಿರುವ ಬಲ-ಇಂದ್ರಿಯಸಾಮರ್ಥ್ಯ ಉಳ್ಳವನಾಗಿ **ಈಶ್ವರಂ** ಸರ್ವನಿಯಾಮಕನಾದ **ಹರಿಂ** ಶ್ರೀಹರಿಯನ್ನು **ವಿದ್ಯಾಧರಸ್ತ್ರೀಭಿಃ** ವಿದ್ಯಾಧರಸ್ತ್ರೀಯರಿಂದ **ಗಾಯಯನ್** ಗಾನಮಾಡಿಸುತ್ತಾ **ನಾನಾಸಂಕಲ್ಪಸಿದ್ಧಿಷು** ಸ್ತ್ರೀ-ಪುರುಷರ ಅನೇಕ ಸಂಕಲ್ಪಗಳಿಂದಲೇ ಸಿದ್ಧಿ ಉಂಟಾಗುವ ಪ್ರದೇಶಗಳಾದ **ಕುಲಾಚಲೇಂದ್ರದ್ರೋಣೀಷು** ಕುಲಪರ್ವತಶ್ರೇಷ್ಠವಾದ ಕಂದರಗಳಲ್ಲಿ **ರೇಮೇ** ವಿದ್ಯಾಧರಿಯರೊಂದಿಗೆ ಕ್ರೀಡಿಸುತ್ತಿದ್ದನು. 'ದ್ರೋಣೀ ಕಾಷ್ಠಾಂಬುವಾಹಿನ್ಯಾಂ ಗ್ರಾವದರ್ಯಾವಪ್' ಇತಿ ವಿಶ್ವಾತ್ ಅತ್ರ ಅಚಲೇಂದ್ರಪದಸ್ಯ ಸತ್ವಾತ್ ಕೇವಲದರೀಮಾತ್ರಪರತಾ ಜ್ಞೇಯಾ ।।೨-೩।।

**ಏಕದಾ ಸ ವಿಮಾನೇನ ವಿಷ್ಣುದತ್ತೇನ ಭಾಸ್ವತಾ ।**
**ಗಿರಿಶಂ ದದೃಶೇ ಗಚ್ಛನ್ ಪರೀತಂ ಸಿದ್ಧಚಾರಣೈಃ ।।೪।।**

**ಸಃ** ಆ ಚಿತ್ರಕೇತುವು **ಏಕದಾ** ಒಂದು ದಿನ **ವಿಷ್ಣುದತ್ತೇನ** ಶ್ರೀಹರಿಯು ಕೊಟ್ಟಿರುವ ಅಥವಾ ವಿಷ್ಣುದತ್ತ ಎಂಬ ಹೆಸರಿನ **ಭಾಸ್ವತಾ** ಪ್ರಕಾಶಮಾನವಾದ **ವಿಮಾನೇನ** ವಿಮಾನದಿಂದ **ಗಚ್ಛನ್** ಹೋಗುತ್ತ **ಸಿದ್ಧಚಾರಣೈಃ** ಸಿದ್ಧ ಮತ್ತು ಚಾರಣರಿಂದ **ಪರೀತಂ** ಸುತ್ತುವರೆಯಲ್ಪಟ್ಟ **ಗಿರಿಶಂ** ರುದ್ರದೇವರನ್ನು **ದದೃಶೇ** ಕಂಡನು.

ಅನುವಾದಾತ್ ವಿಷ್ಣುದತ್ತೇನ ಎಂದು ಅನುವಾದ ಮಾಡಿದ್ದರಿಂದ ಪ್ರಾಕ್ ಹಿಂದೆ ತಾದೃಶವಾದ ವಿಮಾನವನ್ನು ವಿಷ್ಣುವು ಕೊಟ್ಟನು ಎಂಬ ಮಾತಿದೆ ಎಂದು

ಇಟ್ಟುಕೊಳ್ಳಬೇಕು (ವಿಷ್ಣುಃ ವಿಮಾನಂ ದತ್ತವಾನ್) ಇದು ಸತ್ಯಧರ್ಮರ ವಾಕ್ಯದ ಅರ್ಥ ಬರೆಯಲಾಗಿದೆ.

**ಆಲಿಂಗ್ಯಾಂಕೇ ಕೃತಾಂ ದೇವೀಂ ಬಾಹುನಾ ಮುನಿಸಂಸದಿ ।**
**ಉವಾಚ ದೇವ್ಯಾಂ ಶೃಣ್ವಂತ್ಯಾಂ ಜಹಾಸೋಚ್ಚೈಸ್ತದಂತಿಕೇ ॥೫॥**

**ಮುನಿಸಂಸದಿ** ಋಷಿಗಳ ಸಭೆಯಲ್ಲಿ **ಅಂಕೇ ಕೃತಾಂ** ತೊಡೆಯಲ್ಲಿ ಕೂಡಿಸಿಕೊಂಡ **ದೇವೀಂ** ಪಾರ್ವತಿಯನ್ನು **ಬಾಹುನಾ** ತೋಳಿನಿಂದ **ಆಲಿಂಗ್ಯ** ಆಲಿಂಗನ ಮಾಡಿಕೊಂಡು **ಸ್ಥಿತಂ** ಇರುವ ರುದ್ರದೇವರನ್ನು ಕಂಡು **ದೇವ್ಯಾಂ ಶೃಣ್ವಂತ್ಯಾಂ** ಪಾರ್ವತಿಯು ಕೇಳುತ್ತಿರುವಾಗಲೇ **ತದಂತಿಕೇ** ರುದ್ರದೇವರ ಸಮೀಪದಲ್ಲಿ ನಿಂತು **ಉಚ್ಚೈಃ ಜಹಾಸ** ಗಟ್ಟಿಯಾಗಿ ನಕ್ಕನು. **ಉವಾಚ** ಮಾತನಾಡಿದನು.

**ಅಂಕೀಕೃತಾಂ** ಎಂಬ ಪಾಠದಲ್ಲಿ ಭೂಷಣವಾಗಿ ಮಾಡಿಕೊಳ್ಳಲ್ಪಟ್ಟ ಎಂದರ್ಥ. ಅನಂಕಾ ಅಭೂಷಣರೂಪಾ ಅಂಕತ್ವೇನ ಕೃತಾ ಭೂಷಣವಾಗಿ ಮಾಡಲ್ಪಟ್ಟ 'ಅಂಕಶ್ಚಿತ್ರಯುದ್ಧೇ ವಿಭೂಷಣೇ' ಎಂದು ವಿಶ್ವವಿದೆ. ಅಥವಾ ಅಂಕಃ ಅಸ್ಯ ಅಸ್ತೀತಿ ಅಂಕೀ ಅಂಕತ್ವೇನ ಕೃತಳಾದ ಎಂದರ್ಥ. ದೃಢವಾಗಿ ತೊಡೆಗೆ ಅಂಟಿಕೊಂಡಿದ್ದರಿಂದ ಉತ್ಸಂಗವಾಗಿ ಮಾಡಲ್ಪಟ್ಟವಳು ಹೀಗೂ ಅರ್ಥ. ॥೫॥

**ಚಿತ್ರಕೇತುರುವಾಚ -**

**ಏಷ ಲೋಕಗುರುಃ ಸಾಕ್ಷಾದ್ಧರ್ಮವಕ್ತಾ ಶರೀರಿಣಾಮ್ ।**
**ಆಸ್ತೇ ಮುಖ್ಯಃ ಸಭಾಯಾಂ ವೈ ಮಿಥುನೀಭೂಯ ಭಾರ್ಯಯಾ ॥೬॥**

**ಏಷಃ** ಇವರು **ಸಾಕ್ಷಾತ್ ಲೋಕಗುರುಃ** ಇಂದ್ರಾದಿ ಜಗತ್ತಿಗೆ ಸಾಕ್ಷಾತ್ತಾಗಿ ಉಪದೇಶಕರು ಓಂಕಾರೋಪದೇಶಕರು **ಶರೀರಿಣಾಂ** ಜನರಿಗೆ **ಧರ್ಮವಕ್ತಾ** ಧರ್ಮ ಹೇಳುವವರು **ಸಭಾಯಾಂ ಮುಖ್ಯಃ** ಸಭೆಯಲ್ಲಿ ಪ್ರಧಾನರೂ ಆಗಿ **ಭಾರ್ಯಯಾ ಮಿಥುನೀಭೂಯ ಆಸ್ತೇ** ಹೆಂಡತಿಯೊಡನೆ ಸೇರಿಕೊಂಡು ಇರುವರು ಎಂದು **ಉವಾಚ** ಹೇಳಿದನು.

**ಜಟಾಧರಸ್ತೀವ್ರತಪಾ ಬ್ರಹ್ಮವಾದೀ ಸತಾಂ ಪತಿಃ ।**
**ಅಂಕೇ ಕೃತ್ಯ ಸ್ತ್ರಿಯಂ ಚಾऽಸ್ತೇ ಗತಹ್ರೀಃ ಪ್ರಾಕೃತೋ ಯಥಾ ॥೭॥**

**ಜಟಾಧರಃ** ಜಟಾಧಾರಿಯೂ **ತೀವ್ರತಪಾಃ** ಕಠಿಣ ತಪಸ್ಸು ಮಾಡುವವನೂ **ಬ್ರಹ್ಮವಾದೀ** ಶ್ರೀಹರಿಯನ್ನು ಹೇಳುವವನೂ **ಸತಾಂ ಪತಿಃ** ಸಜ್ಜನ ಪಾಲಕನು ಸಜ್ಜನೋತ್ತಮನಾದ ಇವನು **ಪ್ರಾಕೃತಃ ಯಥಾ** ಮೂಢನಂತೆ **ಗತಹ್ರೀಃ** ನಿರ್ಲಜ್ಜನಾಗಿ **ಸ್ತ್ರಿಯಂ** ಹೆಂಡತಿಯನ್ನು **ಅಂಕೇ ಕೃತ್ಯ ಆಸ್ತೇ** ತೊಡೆಯಲ್ಲಿ ಕೂಡಿಸಿ ಕೊಂಡಿರುವನು. **ಸತಾಂ ಪತಿಃ** ನಕ್ಷತ್ರಗಳಿಗೆ ಅಧಿಪತಿಯಾದ ಚಂದ್ರನು **ಅಂಕೇ** ಚಿಹ್ನೆಯ ಸ್ಥಾನದಲ್ಲಿರುವನು ಎಂದೂ ಅರ್ಥ. ।।೭।।

**ಪ್ರಾಯಶಃ ಪ್ರಾಕೃತಾಶ್ಚಾಪಿ ಸ್ತ್ರಿಯಂ ರಹಸಿ ಬಿಭ್ರತಿ ।**
**ಅಯಂ ಮಹಾವ್ರತಧರೋ ಬಿಭರ್ತಿ ಸದಸಿ ಸ್ತ್ರಿಯಮ್ ।।೮।।**

**ಪ್ರಾಯಶಃ** ಬಹಳವಾಗಿ **ಪ್ರಾಕೃತಾಃ ಚ** ಮೂಢರೂ ಸಹ **ಸ್ತ್ರಿಯಂ ಅಪಿ** ಹೆಂಡತಿಯನ್ನೂ ಸಹ **ರಹಸಿ** ಏಕಾಂತದಲ್ಲಿ **ಬಿಭರ್ತಿ** ಧರಿಸುವರು. **ಮಹಾವ್ರತಧರಃ** ಮಹಾವ್ರತವನ್ನಾಚರಿಸುವ **ಅಯಂ** ರುದ್ರದೇವರು **ಸದಸಿ** ತುಂಬು ಸಭೆಯಲ್ಲಿ **ಸ್ತ್ರಿಯಂ ಬಿಭರ್ತಿ** ಹೆಂಡತಿಯನ್ನು ಧರಿಸಿರುವನು. ಮೂಢರಿಗಿಂತ ಮೂಢನೆಂದರ್ಥ. ।।೮।।

ಮನೋನಿಯಾಮಕನಿಗೆ ಮನೋವಿಕಾರವಾಗಲಾರದು ಎಂದು ಹೇಳುವರು-

**ಭಗವಾನಪಿ ತಚ್ಛ್ರುತ್ವಾ ಪ್ರಹಸ್ಯಾಗಾಧಧೀರ್ನೃಪ ।**
**ತೂಷ್ಣೀಂ ಬಭೂವ ಸದಸಿ ಸಭ್ಯಾಶ್ಚ ತದನುವ್ರತಾಃ ।।೯।।**

**ನೃಪ** ಪರೀಕ್ಷಿತನೇ **ಅಗಾಧಧೀಃ** ತನಗಿಂತ ಕಡಿಮೆಯವರಿಂದ ತಿಳಿಯಲಾಗದ ಜ್ಞಾನದ ಆಳ ಉಳ್ಳ **ಭಗವಾನ್ ಅಪಿ** ಪೂಜ್ಯರಾದ ರುದ್ರದೇವರು **ತತ್** ಚಿತ್ರಕೇತುವಿನ ಆಕ್ಷೇಪವಚನಗಳನ್ನು **ಶ್ರುತ್ವಾ** ಕೇಳಿ **ಸದಸಿ** ಸಭೆಯಲ್ಲಿ **ಪ್ರಹಸ್ಯ** ನಕ್ಕು **ತೂಷ್ಣೀಂ ಬಭೂವ** ಮೌನವಾಗಿದ್ದರು **ತದನುವ್ರತಾಃ** ಅವರ ಅನುಯಾಯಿಗಳಾದ **ಸಭ್ಯಾಶ್ಚ** ಸಭಿಕರೂ **ತೂಷ್ಣೀಂ ಬಭೂವುಃ** ಮೌನವಾಗಿದ್ದು ಬಿಟ್ಟರು. ।।೯।।

ನನ್ನಿಂದಾಗಿ ನನ್ನೊಡೆಯನ ನಿಂದನೆಯನ್ನು ಮತ್ತನಾದ ಇವನು ಮಾಡಿರುವನು. ಈಗ ನಾನು ಸುಮ್ಮನೆ ಕುಳಿತರೆ ಪಾಪಿಯಾಗುವೆನು. ಇವನು ಭಗವಂತನ ದಯಾಪಾತ್ರನಾದ್ದರಿಂದ ನರಕಕ್ಕೆ ಹೋಗಲಾರನು. ದೇವಕಾರ್ಯ ಏನೋ ಆದಾಗಬೇಕು ಎಂದು ವಿಚಾರಮಾಡಿ ಪ್ರಾಯಶ್ಚಿತ್ತರೂಪವಾದ ಶಾಪವನ್ನು ಇವನಿಗೆ ಕೊಡಬೇಕು ಎಂದು ದೇವಿಯು ಹೆಚ್ಚು ಕೋಪಗೊಂಡಳು ಎಂದು ಶುಕಾಚಾರ್ಯರು ರಾಜನಿಗೆ ಹೇಳುವರು-

**ಇತ್ಯೇತದ್ವೀರ್ಯವಿದುಷಿ ಬ್ರುವಾಣೇ ಬಹ್ವಶೋಭನಮ್ ।**
**ರುಷಾऽऽಹ ದೇವೀ ಧೃಷ್ಟಾಯ ನಿರ್ಜಿತಾತ್ಮಾಭಿಮಾನಿನೇ ॥೧೦॥**

**ಅತದ್ವೀರ್ಯವಿದುಷಿ** ರುದ್ರದೇವರ ಸಾಮರ್ಥ್ಯವನ್ನರಿಯದ ಚಿತ್ರಕೇತುವು ಇತಿ ಮೇಲೆ ಹೇಳಿದಂತೆ **ಬಹ್ವಶೋಭನಂ** ಬಹಳ ಅಮಂಗಳ ಮಾತುಗಳನ್ನು **ಬ್ರುವಾಣೇ** ಸತಿ ಹೇಳುತ್ತಿರಲು **ದೇವೀ** ಪಾರ್ವತಿಯು **ರುಷಾ** ಸಿಟ್ಟಿನಿಂದ **ಧೃಷ್ಟಾಯ** ಗರ್ವಿಷ್ಠನಾದ **ನಿರ್ಜಿತಾತ್ಮಾಭಿಮಾನಿನೇ** ಜಿತೇಂದ್ರಿಯನೆಂದು ಅಭಿಮಾನವುಳ್ಳ ಸ್ವಾಭಿಮಾನದಲ್ಲಿ ಸೋಲದಿರುವ ಚಿತ್ರಕೇತುವಿಗೆ **ಆಹ** ಹೇಳಿದಳು.

**ಪಾರ್ವತ್ಯುವಾಚ -**

**ಅಯಂ ಕಿಮಧುನಾ ಲೋಕೇ ಶಾಸ್ತಾ ದಂಡಧರಃ ಪ್ರಭುಃ ।**
**ಅಸ್ಮದ್ವಿಧಾನಾಂ ದುಷ್ಟಾನಾಂ ನಿರ್ಲಜ್ಜಾನಾಂ ನಿಷೇಧಕೃತ್ ॥೧೧॥**

**ಅಯಂ** ಈ ಚಿತ್ರಕೇತುವು **ಅಧುನಾ** ಈಗ **ಲೋಕೇ** ಜಗತ್ತಿನಲ್ಲಿ **ಶಾಸ್ತಾ** ಮಾತಿನಿಂದ ಶಿಕ್ಷಿಸುವವನು **ಪ್ರಭುಃ** ಸಮರ್ಥನಾದ **ದಂಡಧರಃ ಕಿಂ** ಯಮನೇನು ಏಕೆಂದರೆ **ಅಸ್ಮದ್ವಿಧಾನಾಂ** ನಮ್ಮಂತಹ **ನಿರ್ಲಜ್ಜಾನಾಂ** ನಾಚಿಕೆಯಿಲ್ಲದ **ದುಷ್ಟಾನಾಂ** ದುಷ್ಟರಿಗೆ **ನಿಷೇಧಕೃತ್** ಹೀಗೆ ಮಾಡಬೇಡವೆಂದು ಹೇಳುವವನು ಇವನು ಯಾರು? ವಿಪ್ರಕೃತ್ ಎಂಬ ಪಾಠದಲ್ಲಿ ವಿರೋಧಿಸುವವನು ಯಾರು ಎಂದು ಅರ್ಥ. ಅಂದರೆ ಇವನೇನು ಯಮನಂತೆ ಅಧಿಕಾರ ಪಡೆದವನೇನು ಎಂದು ಭಾವ. ॥೧೧॥

**ನ ವೇದ ಧರ್ಮಂ ಕಿಲ ಪದ್ಮಯೋನಿಃ**
**ನ ಬ್ರಹ್ಮಪುತ್ರಾ ಭೃಗುನಾರದಾದ್ಯಾಃ ।**
**ನ ವೈ ಕುಮಾರಃ ಕಪಿಲೋ ಮನುಶ್ಚ**
**ಯೇ ನೋ ನಿಷೇಧಂತ್ಯತಿವರ್ತಿನಂ ಹರಮ್ ॥೧೨॥**

**ಪದ್ಮಯೋನಿಃ** ಬ್ರಹ್ಮದೇವರು **ಧರ್ಮಂ ನ ವೇದ ಕಿಲ** ಧರ್ಮವನ್ನು ತಿಳಿದಿಲ್ಲ ತಾನೇ? ತಿಳಿದಿದ್ದರೆ ಹೇಳದೇ ಇರುತ್ತಿದ್ದರೇ ? ಅಂದ ಮೇಲೆ ತಿಳಿದಿಲ್ಲ. **ಬ್ರಹ್ಮಪುತ್ರಾಃ** ಬ್ರಹ್ಮದೇವರ ಮಕ್ಕಳಾದ **ಭೃಗುನಾರದಾದ್ಯಾಃ** ಭೃಗು-ನಾರದ ಮೊದಲಾದವರು **ಧರ್ಮಂ ನ ವಿದುಃ ಕಿಲ** ಧರ್ಮವನ್ನು ತಿಳಿದಿಲ್ಲವಷ್ಟೇ **ಕುಮಾರಃ** ಸನತ್ಕುಮಾರನು **ಕಪಿಲಃ** ಮುನಿಯು ಅಥವಾ ಹರಿಯು **ಮನುಃ ಚ** ವೈವಸ್ವತ ಮನುವು **ನ ವಿದುಃ ವೈ** ಧರ್ಮವನ್ನು ತಿಳಿದಿಲ್ಲವಲ್ಲವೇ **ಯೇ** ಯಾರಿವರು **ಅತಿವರ್ತಿನಂ ಹರಂ** ಶಾಸ್ತ್ರವನ್ನು

ಅತಿಕ್ರಮಿಸುವ ರುದ್ರನನ್ನು **ನೋ ನಿಷೇಧಂತಿ** ನಿವಾರಿಸುತ್ತಿಲ್ಲ. ಇವರೆಲ್ಲರೂ ಧರ್ಮವನ್ನು ತಿಳಿದೇ ಇರುವರು. ಆದರೂ ನಿಷೇಧಿಸಿಲ್ಲ. ಅಂದಮೇಲೆ ನಿಷೇಧಿಸುವ ಇವನು ಶಾಪ ಕೊಡಬೇಕಾದ ಮಹಾಪರಾಧ ಮಾಡಿರುವನು ಎಂದು ಭಾವ. ||೧೨||

**ಏಷಾಮನುಧ್ಯೇಯಪದಾಬ್ಜಯುಗ್ಮಂ**
**ಜಗದ್ಗುರುಂ ಮಂಗಲಮಂಗಲಂ ಸ್ವಯಮ್ ।**
**ಯಃ ಕ್ಷತ್ರಬಂಧುಃ ಪರಿಭೂಯ ಸೂರೀನ್**
**ಪ್ರಶಾಸ್ತಿ ಧೃಷ್ಟಸ್ತದಯಂ ಹಿ ದಂಡ್ಯಃ ||೧೩||**

**ಏಷಾಂ** ಈ ಬ್ರಹ್ಮಾದಿಗಳ ಪಕ್ಷದಲ್ಲಿ **ತದವರಾಣಾಂ** ರುದ್ರದೇವರಿಗಿಂತ ಕೆಳಗಿನವರಾದ ಇಂದ್ರಾದಿಗಳಿಂದ **ಅನುಧ್ಯೇಯಪದಾಬ್ಜಯುಗ್ಮಂ** ಯಾವಾಗಲೂ ಧ್ಯಾನ ಮಾಡಬೇಕಾದ ಪಾದಕಮಲದ್ವಂದ್ವ ಉಳ್ಳ ಆದ್ದರಿಂದಲೇ **ಜಗದ್ಗುರುಂ** ಇಂದ್ರಾದಿಗಳಿಗೆ ಗುರುವಾದ **ಸ್ವಯಂ** ಸ್ವರೂಪದಿಂದ **ಮಂಗಲಮಂಗಲಂ** ಅತ್ಯಂತ ಮಂಗಲನಾದ ರುದ್ರದೇವರನ್ನು **ಯಃ** ಯಾವ **ಕ್ಷತ್ರಬಂಧುಃ** ಕ್ಷತ್ರಿಯಧರ್ಮನು **ಹಿ** ಯಾವ ಕಾರಣ **ಸೂರೀನ್** ಜ್ಞಾನಿಗಳಾದ ಬ್ರಹ್ಮಾದಿಗಳನ್ನು **ಪರಿಭೂಯ** ಧರ್ಮ ತಿಳಿದವರಲ್ಲ ಎನ್ನುವಂತೆ ತಿರಸ್ಕರಿಸಿ **ಪ್ರಶಾಸ್ತಿ** ಸಭೆಯಲ್ಲಿ ಸ್ತ್ರೀಯರೊಂದಿಗೆ ಇರಬಾರದೆಂದು ಶಾಸನ ಮಾಡುತ್ತಿರುವನೋ **ತತ್** ಆದಕಾರಣ **ಅಯಂ ಧೃಷ್ಟಃ** ಧೃಷ್ಟನಾದ ಇವನು **ದಂಡ್ಯಃ** ಶಿಕ್ಷಾರ್ಹನು. ||೧೩||

ಮೇಲಿನ ಶ್ಲೋಕದಲ್ಲಿ ಹಿಂದೆ ಪ್ರಕೃತರಾದ ಬ್ರಹ್ಮಾದಿಗಳಿಂದ ಧ್ಯೇಯವಾದ ಪಾದಕಮಲ ಉಳ್ಳವನು ಸ್ಮರಹರನು (ರುದ್ರನು) ಎಂದು ತೋರುವದು ಅದು ಸಮಂಜಸವಲ್ಲ. ಆದ್ದರಿಂದ ಸ್ವಲ್ಪ ಅಧ್ಯಾಹಾರ ಮಾಡಿ ಅಸಂಗತಿಯನ್ನು ಪರಿಹರಿಸಲು ಪ್ರಮಾಣವನ್ನೂ ಉದಾಹರಿಸುವರು.

ತಾತ್ಪರ್ಯ

ಏಷಾಂ ಪಕ್ಷೇ ತದವರಾಣಾಂ ಅನುಧ್ಯೇಯಪದಾಬ್ಜಯುಗ್ಮಮ್ ।

ವಿಷ್ಣುಬ್ರಹ್ಮ ಪ್ರಾಣವೀಂದ್ರಸ್ತದ್ದಾರಾನಪ್ಯೃತೇ ಹರಃ ।
ಧ್ಯೇಯೋ ಹರೇಃ ಪಾರ್ಷದಾದ್ಯೈಃ ಧ್ಯಾಯನ್ ಹರಿಚತುರ್ಮುಖೌ ।
ಪ್ರಾಣಮೇಷಾಂ ತಥಾ ದಾರಾನ್ ನ ಸ್ವತಂತ್ರತಯಾ ಕ್ವಚಿತ್ ॥
-ಇತಿ ತಂತ್ರಮಾಲಾಯಾಮ್

ಚತುರ್ಮುಖಾದಿಗಳ ಮತದಲ್ಲಿ ರುದ್ರನಿಗಿಂತ ನಿಕೃಷ್ಟರಾದ ಇಂದ್ರಾದಿದೇವತೆ-ಗಳಿಂದ ಧ್ಯಾನಿಸಲಿಕ್ಕೆ ಯೋಗ್ಯವಾದ ಪಾದಕಮಲದ್ವಂದ್ವ ಉಳ್ಳವನನ್ನು ಶ್ರೀವಿಷ್ಣು-ಬ್ರಹ್ಮ-ಪ್ರಾಣ-ಗರುಡರನ್ನು ರಮಾ-ಸರಸ್ವತಿ-ಭಾರತಿಯರನ್ನು ಹೊರತು ಪಡಿಸಿ ಅವರಿಂದ ನಿಕೃಷ್ಟನೆಂದು ರುದ್ರನನ್ನು ಭಗವದ್ಭಕ್ತರು ಧ್ಯಾನಿಸಬೇಕು. ಹರಿ-ವಿರಿಂಚ-ಪ್ರಾಣರನ್ನು ಧ್ಯಾನಿಸುತ್ತಿರುವನು ರುದ್ರನು. ಎಲ್ಲಿಯೂ ಲಕ್ಷ್ಮೀದೇವಿಯನ್ನು ಹಾಗೆಯೇ ಸಪತ್ನೀಕರಾದ ಚತುರ್ಮುಖಪ್ರಾಣರನ್ನು ಸ್ವತಂತ್ರರೆಂದು ಧ್ಯಾನಿಸಕೂಡದು. ಶ್ರೀಹರಿಯನ್ನೇ ಸ್ವತಂತ್ರನೆಂದು ಧ್ಯಾನಿಸಬೇಕು. ಎಂದು ತಂತ್ರಮಾಲೆಯಲ್ಲಿ ಹೇಳಿದೆ. ಶ್ರೀಹರಿಯ ಪಾರ್ಷದರಿಂದ ಅಥವಾ ಹರಿಯ ಪಾರ್ಷದನು ರುದ್ರನು (ಹರೇಃ ಪಾರ್ಷದ ಇತಿ ಪಾಠೋऽಪಿ ಹರ್ಷದಃ ಎಂದಿದ್ದಾರೆ ಶ್ರೀಗಳು) ಪಾರ್ವತಿಯಂತೆ ಸೌಪರ್ಣಿಯು ರುದ್ರನನ್ನು ಸೇವಿಸಲು ಯೋಗ್ಯಳಾದ್ದರಿಂದ ತದ್ದಾರಾನ್ ಎಂಬಲ್ಲಿ ಸೌಪರ್ಣಿಯನ್ನು ತೆಗೆದುಕೊಳ್ಳಬಾರದು.

ಬ್ರಹ್ಮಾದಿಗಳ ಉಪಾಸಕನೆಂದು ಅಧಮರಿಂದ ಉಪಾಸ್ಯನೆಂದು ಗಂಡನ ಔನ್ನತ್ಯ ಮತ್ತು ನ್ಯೂನತೆ ಎರಡನ್ನೂ ಹೇಳಿದರೆ ಭವನ ಅಪ್ರೀತಿಪಾತ್ರಳಾಗುವೆನೆಂದು ಏಕೆ ಭವಾನಿಯು ವಿಚಾರಮಾಡಲಿಲ್ಲ ಅಂದರೆ ವಿದ್ಯಮಾನ ಗುಣವರ್ಣನವೇ ಸ್ತುತಿಯಾದ್ದರಿಂದ ಎಂದು ತಿಳಿ.

ನಾಲೀಕಲೋಚನಾಂ ಲೋಚನಾಂ ಚಿತ್ತೇ ಚಕಾರೈವಮಿತ್ಯಾವೇದಯತಿ ಸುಳ್ಳಾದ ದೃಷ್ಟಿಯಿಲ್ಲದ ಪಾರ್ವತಿಯು ಮನಸ್ಸಿನಲ್ಲಿ ಈ ರೀತಿ ಆಲೋಚಿಸಿದಳು ಎಂದು ತಿಳಿಸುವರು-

**ನಾಯಮರ್ಹತಿ ವೈಕುಂಠಪಾದಮೂಲೋಪಸರ್ಪಣಮ್ ।**
**ಸಂಭಾವಿತಾತ್ಮಾ ನಿಸ್ತಬ್ಧಃ ಸಾಧುಭಿಃ ಪರ್ಯುಪಾಸಿತಮ್ ॥೧೪॥**

**ಸಂಭಾವಿತಾತ್ಮಾ** ತಾನೇ ಅಧಿಕನೆಂದು ತಿಳಿದಿರುವ ಆದ್ದರಿಂದಲೇ **ನಿಸ್ತಬ್ಧಃ** ಅತ್ಯಂತ ಗರ್ವಿಷ್ಠನಾದ **ಅಯಂ** ಇವನು **ಸಾಧುಭಿಃ** ತಾವು ಅಲ್ಪರು ಎಂದು ತಿಳಿದವರೂ ಅತ್ಯಂತ ನಮ್ರರಾದ ಸಜ್ಜನರಿಂದ **ಪರ್ಯುಪಾಸಿತಂ** ಎಲ್ಲ ರೀತಿಯಿಂದ ಸೇವಿತವಾದ **ವೈಕುಂಠಪಾದಮೂಲೋಪಸರ್ಪಣಂ** ಶ್ರೀಹರಿಯ ಪಾದ ಮೂಲಗಳ ಸೇವೆಯನ್ನು **ನ ಅರ್ಹತಿ** ಹೊಂದಲು ಯೋಗ್ಯನಲ್ಲ. **ಸಾಧುಭಿಃ ಪರ್ಯುಪಾಸಿತಂ** ಎಂಬುದಕ್ಕೆ ಯೋಗ್ಯತಯಾ ಪಾದಮೂಲ ಪದಾರ್ಥದಲ್ಲಿ ಅನ್ವಯ ಮಾಡಿ ಸಾಧುಗಳಿಂದ

ಸೇವಿತವಾದ ಏನು ವೈಕುಂಠ ಪಾದಮೂಲವಿದೆಯೋ ಅದರ ಪ್ರಾಪ್ತಿಯು ಎಂದರ್ಥ. ಅಥವಾ ಉಪಸೃಪ್ಯತೇ ಇತ್ಯುಪಸರ್ಪಣಂ ಪಾದಮೂಲಂ ಚ ತತ್ ಉಪಸರ್ಪಣಂ ಚ ಪಾದಮೂಲೋಪಸರ್ಪಣಂ ಎಂದು ಮಾಡಿ **ಸಾಧುಭಿಃ ಪರ್ಯುಪಾಸಿತಂ** ಎಂಬುದಕ್ಕೆ ಯಥಾಸ್ಥಿತಾನ್ವಯ. ಅಂದರೆ ಸಾಧುಗಳಿಂದ ಸೇವಿತವಾದ ಶ್ರೀಹರಿಯ ಪಾದಮೂಲವೆಂಬ ಪ್ರಾಪ್ಯವನ್ನು ಎಂದರ್ಥ. ಇವನು ಪಾದಮೂಲವನ್ನು ಹೊಂದಲರ್ಹನಲ್ಲವಾದರೆ ಏನನ್ನು ಹೊಂದುವನು ಹೇಳು ಪಾರ್ವತಿ ಎಂದರೆ ಸಾಧುಭಿಃ ಪರ್ಯುಪಾಸಿತಂ ಎಂದು ಹೇಳುವಳು. 'ಅಪ ಪರೀವರ್ಜನೇ' ಎಂದಿರುವದರಿಂದ ಪರಿ ವರ್ಜಿತರಿಂದ ಅಸಾಧುಗಳಿಂದ ಉಪಾಸಿತಂ ಹೊಂದಲ್ಪಟ್ಟ ಅಂದರೆ ಸಾಧುಗಳಿಂದ ನಿಂದಿತವಾದ ಆಸುರ ಜನ್ಮವನ್ನು ಹೊಂದುವನು ಎಂದರ್ಥ. ಸಂಭಾವಿತಂ ಸಾಧುಭಿಃ ಪರ್ಯುಪಾಸಿತಂ ಸಾಧುಗಳಿಂದ ಸೇವಿತನಾದ ಮಹಾದೇವನನ್ನು **ಅತಿಸ್ತಬ್ಧಃ** ಅತಿಗರ್ವಿಷ್ಠನು **ಪ್ರಶಾಸ್ತಿ** ಶಾಸನ ಮಾಡುವನು ಎಂದು ಅನ್ವಯ. ಸಂಭಾವಿತಮತಿಶ್ಚಾಸೌ ಸ್ತಬ್ಧಶ್ಚ ಎಂದು ಒಂದೇ ಪದ ಮಾಡಬಹುದು. ।।೧೪।।

ಪರೋಕ್ಷವಾಗಿ ಹೀಗೆ ಉತ್ಪ್ರೇಕ್ಷಿಸಿ ಅಪರೋಕ್ಷವಾಗಿ ಏನು ಮಾಡಿದಳು ತ್ರ್ಯಕ್ಷಪದ್ಮಾಕ್ಷಿ ಎಂದರೆ ತಿಳಿಸುವರು-

**ಅತಃ ಪಾಪೀಯಸೀಂ ಯೋನಿಮಾಸುರೀಂ ಯಾಹಿ ದುರ್ಮತೇ ।**
**ಯಥೇಹ ಭೂಯೋ ಮಹತಾಂ ನ ಕರ್ತಾಽಮುತ್ರ ಕಿಲ್ಬಿಷಮ್ ।।೧೫।।**

**ದುರ್ಮತೇ** ದುರ್ಬುದ್ಧಿಯುಳ್ಳವನೇ **ಅತಃ** ಶ್ರೀಹರಿಯ ಪಾದಸೇವನೆಗೆ ಅನರ್ಹನಾದ್ದರಿಂದ **ಯಥಾ** ಹೇಗೆ **ಭೂಯಃ** ಮತ್ತೆ ಇಹ ಇಲ್ಲಿ ಇರುವ ನಮ್ಮ ಸಮೀಪದಲ್ಲಿ **ಅಮುತ್ರ** ಪರಲೋಕದಲ್ಲಿರುವ **ಮಹತಾಂ** ದೊಡ್ಡವರಲ್ಲಿ **ಕಿಲ್ಬಿಷಂ** ಅಪರಾಧವನ್ನು **ನ ಕರ್ತಾ** ಮಾಡದಿರುವೆಯೋ **ತಥಾ** ಹಾಗೆ **ಪಾಪೀಯಸೀಂ** ಅತ್ಯಂತ ಪಾಪಯುಕ್ತವಾದ **ಆಸುರೀಂ ಯೋನಿಂ** ಅಸುರ ಜನ್ಮವನ್ನು **ಯಾಹಿ** ಹೊಂದು. ಈಗ ಮಾಡಿದ ಅಪರಾಧಕ್ಕೆ ಶಿಕ್ಷೆಯಾದ್ದರಿಂದ ಮುಂದೆ ಹೀಗೆ ಮಾಡಲಾರಿ ಎಂದು ಭಾವ.

ಮುದಂ ತ್ರಾಯತೇ ಇತಿ ಮುತ್ರಃ ಸಃ ನ ಭವತೀತಿ ಅಮುತ್ರಃ ತತ್ಸಂಬುದ್ಧಿ ಅಮುತ್ರ ಅನಂತನ ಉಪಾಸನೆಯಿಂದ ಬಂದ ಸಂತೋಷವನ್ನು ರಕ್ಷಿಸಿಕೊಳ್ಳದವನೇ ಎಂದು ಚಿತ್ರಕೇತುವಿಗೆ ಸಂಬೋಧನ. **ಅಮುತ್ರ** ಪರರಲೋಕದಲ್ಲಿ **ಕಿಲ್ಬಿಷಂ**

ಅಪರಾಧಫಲವನ್ನು ಯಥಾ ನ ಭೋಕ್ತಾ ಅನುಭವಿಸದಿರುವಂತೆ ಹೀಗೂ ಅರ್ಥ ಮಾಡಿರುವರು. ||೧೫||

**ಶ್ರೀಶುಕ ಉವಾಚ -**

**ಏವಂ ಶಪ್ತಶ್ಚಿತ್ರಕೇತುರ್ವಿಮಾನಾದವರುಹ್ಯ ಸಃ ।**
**ಪ್ರಸಾದಯಾಮಾಸ ಸತೀಂ ಮೂರ್ಧ್ನಾ ನಮ್ರೇಣ ಭಾರತ ||೧೬||**

**ಭಾರತ** ಪರೀಕ್ಷಿತನೇ **ಏವಂ** ಈ ರೀತಿಯಾಗಿ **ಶಪ್ತಃ** ಶಾಪಕ್ಕೊಳಗಾದ **ಸಃ** ಭಗವದ್ಭಕ್ತನಾದ ಆ ಚಿತ್ರಕೇತುವು **ವಿಮಾನಾತ್ ಅವರುಹ್ಯ** ವಿಮಾನದಿಂದ ಇಳಿದು **ನಮ್ರೇಣ ಮೂರ್ಧ್ನಾ** ತಲೆ ಬಾಗಿಸಿ **ಸತೀಂ** ಪಾರ್ವತಿಯನ್ನು **ಪ್ರಸಾದಯಾಮಾಸ** ಪ್ರಸನ್ನೀಕರಿಸಿಕೊಂಡನು. ಈ ಪ್ರಸನ್ನೀಕರಣವು ಶಾಪವನ್ನು ಕಳೆದು ಕೊಳ್ಳಲು ಅಲ್ಲ. ಕಿಂತು ಸಿಟ್ಟು ಹೆಚ್ಚಾಗದಿರಲು ಎಂದು ತಿಳಿಯಬೇಕು. ||೧೬||

**ಚಿತ್ರಕೇತುರುವಾಚ -**

**ಪ್ರತಿಗೃಹ್ಣಾಮಿ ತೇ ಶಾಪಮಾತ್ಮನೋಽಂಜಲಿನಾಂಬಿಕೇ ।**
**ದೇವೈರ್ಮರ್ತ್ಯಾಯ ಯತ್ಪ್ರೋಕ್ತಂ ಪೂರ್ವದಿಷ್ಟಂ ಹಿ ತಸ್ಯ ತತ್ ||೧೭||**

**ಹೇ ಅಂಬಿಕೇ** ತಾಯಿಯಾದ ಪಾರ್ವತಿಯೇ **ತೇ ಶಾಪಂ** ನೀನಿತ್ತ ಶಾಪವನ್ನು **ಆತ್ಮನಃ** ನನ್ನ **ಅಂಜಲಿನಾ** ಬೊಗಸೆಯಿಂದ **ಪ್ರತಿಗೃಹ್ಣಾಮಿ** ಸ್ವೀಕರಿಸುವೆನು **ದೇವೈಃ** ದೇವತೆಗಳಿಂದ **ಮರ್ತ್ಯಾಯ** ಮನುಷ್ಯನ ವಿಷಯದಲ್ಲಿ **ಯತ್ ಪ್ರೋಕ್ತಂ** ಯಾವ ವರ-ಶಾಪಗಳು ಹೇಳಲ್ಪಡುವವೋ **ತತ್** ಅವು **ತಸ್ಯ** ಆ ಮನುಷ್ಯನ **ಪೂರ್ವದಿಷ್ಟಂ ಹಿ** ಜನ್ಮಾಂತರದಲ್ಲಿ ಮಾಡಿದ ಧರ್ಮಪ್ರೇರಕನಾದ ಶ್ರೀಹರಿಯಿಂದ ಕ್ಲೃಪ್ತವಾದುದು ಅದೇ ನಡೆಯುವದು. ಪೂರ್ವಂ ಕಾರಣಂ ದಿಷ್ಟಂ ದೈವಂ ಯಸ್ಯ ತತ್ ಪೂರ್ವದಿಷ್ಟಂ ಅದೃಷ್ಟವೇ ಕಾರಣವೆಂದರ್ಥ. ಆದ್ದರಿಂದ ಶಾಪಕೊಟ್ಟಿರುವೆ. ನಿನ್ನ ಮೇಲೆ ಕೋಪವಿಲ್ಲವೆಂದು ಭಾವ. ಅಂಬಿಕೆ ಎಂಬುದರಿಂದ 'ತಾಯಿಯೇ ವಿಷಕೊಟ್ಟರೇ' ಎಂಬ ನೀತಿಯನ್ನು ತಿಳಿಸುವನು. ||೧೭||

ಭಗವದ್ಭಕ್ತರು ಶ್ರೀಹರಿಯ ಇಚ್ಛೆಯಿಂದ ಬರುವ ಸುಖ-ದುಃಖಗಳಿಂದ ಹಿಗ್ಗುವದಿಲ್ಲ ಕುಗ್ಗುವದಿಲ್ಲ ಎಂದು ಪರೋಕ್ಷವಾಗಿ ಆರು ಶ್ಲೋಕಗಳಿಂದ ಹೇಳುವನು-

**ಸಂಸಾರಚಕ್ರ ಏತಸ್ಮಿನ್ ಜಂತುರಜ್ಞಾನಮೋಹಿತಃ ।**
**ಭ್ರಾಮ್ಯನ್ ಸುಖಂ ಚ ದುಃಖಂ ಚ ಭುಂಕ್ತೇ ಸರ್ವತ್ರ ಸರ್ವದಾ ||೧೮||**

**ಅಜ್ಞಾನಮೋಹಿತಃ** ಶ್ರೀಹರಿಯ ಅಜ್ಞಾನದಿಂದ ಮೋಹಗೊಂಡ **ಜಂತುಃ** ಜೀವನು **ಏತಸ್ಮಿನ್** ಈ **ಸಂಸಾರಚಕ್ರೇ** ಸಂಸಾರಚಕ್ರದಲ್ಲಿ **ಭ್ರಾಮ್ಯನ್** ತಿರುಗುತ್ತ **ಸರ್ವತ್ರ** ಎಲ್ಲ ಜನ್ಮಗಳಲ್ಲಿ **ಸರ್ವದಾ** ಯಾವಾಗಲೂ **ಸುಖಂ ದುಃಖಂ ಚ ಭುಂಕ್ತೇ** ಸುಖವನ್ನೂ ದುಃಖವನ್ನೂ ಅನುಭವಿಸುವನು. ಇದು ಸ್ವಾಭಾವಿಕವಾದ್ದರಿಂದ ಆಶ್ಚರ್ಯವೇನಲ್ಲ ಎಂದು ಅಭಿಪ್ರಾಯ. ||೧೮||

ಇಷ್ಟು ಜ್ಞಾನವಿದ್ದವನು ಏಕೆ ಅನರ್ಥವನ್ನು ಸಂಪಾದಿಸಿದನು ಎಂದರೆ ಜನರು ಸ್ವತಂತ್ರರಲ್ಲವೆಂದು ಹೇಳುವರು-

**ನೈವಾತ್ಮಾ ನ ಪರಶ್ಚಾಪಿ ಕರ್ತಾ ಸ್ಯಾತ್ಸುಖದುಃಖಯೋಃ ।**
**ಕರ್ತಾರಂ ಮನ್ಯತೇಽಪ್ರಾಜ್ಞ ಆತ್ಮಾನಂ ಪರಮೇವ ಚ ||೧೯||**

**ಆತ್ಮಾ** ತಾನಾಗಲಿ **ಪರಶ್ಚಾಪಿ** ಬೇರೆಯವನೇ ಆಗಲಿ **ಸುಖ-ದುಃಖಯೋಃ ಕರ್ತಾ ನೈವ ಸ್ಯಾತ್** ಸುಖ-ದುಃಖಸಾಧಕಕರ್ಮಗಳಿಗೆ ಕರ್ತನಾಗಲಾರ. ಆದರೂ **ಅತ್ರ ಅಜ್ಞಃ** ಈ ಜ್ಞಾನವಿಲ್ಲದವನು **ಆತ್ಮಾನಂ** ತನ್ನನ್ನು **ಪರಂ ಚ** ಬೇರೆಯವರನ್ನು **ಕರ್ತಾರಂ ಮನ್ಯತೇ ಏವ** ಕರ್ತನೆಂದು ತಿಳಿಯುವನು. ಇದು ಭ್ರಾಂತಿ ಎಂದು ಭಾವ. **ಅಜ್ಞಃ** ಅಕಾರವಾಚ್ಯ ಭಗವಂತನನ್ನು ತಿಳಿದವನು **ಪರಂ ಆತ್ಮಾನಮೇವ** ಪರಮಾತ್ಮನನ್ನೇ **ಕರ್ತಾರಂ ಮನ್ಯತೇ** ಕರ್ತಾ ಎಂದು ತಿಳಿಯುವನು. ಹೀಗೂ ಅರ್ಥ. ||೧೯||

**ಗುಣಪ್ರವಾಹ ಏತಸ್ಮಿನ್ ಕಃ ಶಾಪಃ ಕೋ ನ್ವನುಗ್ರಹಃ ।**
**ಕಃ ಸ್ವರ್ಗೋ ನರಕಃ ಕೋ ವಾ ಕಿಂ ದುಃಖಂ ಸುಖಮೇವ ಚ ||೨೦||**

**ಗುಣಪ್ರವಾಹೇ** ಸತ್ವರಜಸ್ತಮೋಗುಣಗಳ ಪ್ರವಾಹ ರೂಪವಾದ **ಏತಸ್ಮಿನ್** ಈ ಸಂಸಾರಾವಸ್ಥೆಯಲ್ಲಿ **ಶಾಪಃ ಕಃ** ಶಾಪವಾವುದು **ಕಃ ನು ಅನುಗ್ರಹಃ** ಯಾವುದು ತಾನೇ ಅನುಗ್ರಹವು **ಕಃ ಸ್ವರ್ಗಃ** ಸ್ವರ್ಗವಾವುದು **ಕಃ ನರಕಃ** ನರಕವಾವುದು **ಕಿಂ ದುಃಖಂ** ದುಃಖ ಯಾವುದು **ಸುಖಂ ಚ ಕಃ** ಸುಖ ಯಾವುದು. ಶಾಪಾನುಗ್ರಹಗಳಿಗೆ ಶ್ರೀಹರಿಯ ಇಚ್ಛಾಧೀನಗಳಾದ ಹಿಂದಿನ ಪುಣ್ಯ-ಪಾಪಗಳೇ ಕಾರಣ. ಸ್ವರ್ಗ ಅನಿತ್ಯ ಅಲ್ಪ ಸುಖವಾದ್ದರಿಂದ ಉಪಯೋಗವಿಲ್ಲ ನರಕವಾದರೂ ಸ್ವಲ್ಪಕಾಲ ಅನುಭವಿಸಿದ ಮೇಲೆ ಮುಗಿಯುವದರಿಂದ ಅದೂ ಶಾಶ್ವತವಲ್ಲ. ಸುಖ-ದುಃಖಗಳೂ ಅಲ್ಪ ಮತ್ತು ಅನಿತ್ಯವಾದ್ದರಿಂದ ಗುಣಪ್ರವಾಹದಲ್ಲೇ ಬಿದ್ದಿರುವವನಿಗೆ ಇವು ಯಾವ ಲೆಕ್ಕ. ದುಃಖ ಪಡುವ ಕಾರಣವಿಲ್ಲವೆಂದು ಭಾವ.

ಶ್ರೀ ವಿಜಯಧ್ವಜತೀರ್ಥರು ಇಲ್ಲಿ ಈ ತಾತ್ಪರ್ಯೋಕ್ತ ಪ್ರಮಾಣಗಳನ್ನು ಉದಾಹರಿಸಿರುವರು-

'ಅತೋಽನ್ಯೇಷಾಂ ವರಃ ಶಾಪೋ ಗುಣದೋಷಪ್ರಕರ್ತೃತಾ । ಸ್ವತಃ ಪ್ರಾಪ್ತಾಭೇದಕೃತಿರ್ವಾಸನಾರೂಪಿಣೋ ಯಥಾ । ವಿದ್ಯಮಾನಸ್ಯ ಮನಸಿ ಪುನಃ ಸ್ವಪ್ನೇಽಪಿ ದರ್ಶನಮ್ । ಭಗವದ್ವಶತಾ ಯಸ್ಮಾತ್ ಸರ್ವೇಷಾಂ ಜ್ಞೇಯಮೇವ ತತ್' ಆದ್ದರಿಂದ ಪ್ರತಿಯೊಬ್ಬರಿಂದ ಬರುವ ವರ-ಶಾಪ, ಪುಣ್ಯ-ಪಾಪಗಳ ಕರ್ತೃತ್ವ ಇವೆಲ್ಲವೂ ಶ್ರೀಹರಿಯಿಂದಲೇ ಬಂದವುಗಳು. ಆದರೆ ಇತರರೇ ಇದಕ್ಕೆ ಸ್ವತಂತ್ರರೆಂಬುದು ಮನಸ್ಸಿನಲ್ಲಿ ಇರುವ ವಾಸನಾಮಯವಾದ ಆನೆ ಮೊದಲಾದವು ಸ್ವಪ್ನದಲ್ಲಿ ಕಂಡವುಗಳನ್ನು ಜಾಗ್ರದವಸ್ಥೆಯಲ್ಲಿ ಕಂಡ ಆನೆ ಮೊದಲಾದವು ಎಂದು ತಿಳಿಯುವದು ಹೇಗೆ ಭ್ರಾಂತಿಯೋ ಹಾಗೆ ಭ್ರಾಂತಿಯು. ಎಲ್ಲವೂ ಶ್ರೀಹರಿಯ ಆಧೀನ ವಾದ್ದರಿಂದ ಹಾಗೆಯೇ ಅದನ್ನು ತಿಳಿಯಬೇಕು ಎಂದರ್ಥ. ಇದರಿಂದ ಇಷ್ಟು ಹೇಳಿದಂತಾಯಿತು. ಮನಸ್ಸಿನಲ್ಲಿರುವ ವಾಸನಾರೂಪಿಯಾದ ವಸ್ತುವು ಸ್ವಪ್ನದಲ್ಲಿ ಕಾಣುವಂತೆ ಇತರರಿಂದ ಅನಿತ್ಯಸುಖಾದಿಗಳು ಕಾಣುವವು. ಇವೆಲ್ಲ ಅವರವರ ಆಧೀನವಲ್ಲ. ಶ್ರೀಹರಿಯ ಇಚ್ಛೆಗೆ ಆಧೀನವಾದುದು. ಈ ಶ್ಲೋಕದಲ್ಲಿ ಕಿಂ ಶಬ್ದ ಆಕ್ಷೇಪಾರ್ಥಕ. ಎಷ್ಟು ಮಾತ್ರ? ಅಲ್ಪವೆಂದರ್ಥ. 'ಆಕ್ಷಿಪ್ಯತೇ ಕಿಮಿತ್ಯೇತದ್ಯತ್ರಾಲ್ಪ ಫಲತಾ ಭವೇತ್ । ಯಸ್ಯ ವಸ್ತುಷು ಚಾಲ್ಪತ್ವಂ ಪುಂಸೋ ವಾ ನೇತಿ ಚೋಚ್ಯತೇ' ಎಂಬ ಪ್ರಮಾಣವು ಈ ಅರ್ಥ ತಿಳಿಸುವದು. (ಚೆಟ್ಟಿ) ಪ್ರಕಾಶಸಂಹಿತಾ ವಚನವಿದು.

ಈಶ್ವರನಿಗೆ ಸ್ವಾತಂತ್ರ್ಯ ಇತರರಿಗೆ ಅಸ್ವಾತಂತ್ರ್ಯವೆಂದು ಸ್ಪಷ್ಟವಾಗಿ ಹೇಳುವರು-

**ಏಕಃ ಸೃಜತಿ ಭೂತಾನಿ ಭಗವಾನಾತ್ಮಮಾಯಯಾ ।**
**ಏಷಾಂ ಬಂಧಂ ಚ ಮೋಕ್ಷಂ ಚ ಸುಖಂ ದುಃಖಂ ಚ ನಿಷ್ಕಲಃ ॥೨೦॥**

**ನಿಷ್ಕಲಃ** ಸ್ವಯಂ ಬಂಧಾದಿಶೂನ್ಯನಾದ ಭಿನ್ನಾಂಶರಹಿತನಾದ **ಭಗವಾನ್** ಶ್ರೀಹರಿಯು **ಏಕಃ** ಒಬ್ಬನೇ **ಆತ್ಮಮಾಯಯಾ** ನಿಮಿತ್ತ ಕಾರಣವಾದ ತನ್ನ ಇಚ್ಛೆಯಿಂದ, ತನ್ನ ಆಧೀನವಾದ ಪ್ರಕೃತಿ ಎಂಬ ಉಪಾದಾನಕಾರಣದಿಂದ **ಭೂತಾನಿ** ಜೀವರನ್ನು **ಸೃಜತಿ** ದೇಹಾದಿಸಂಬಂಧವನ್ನು ಕೊಟ್ಟು ಸೃಷ್ಟಿಸುವನು **ಏಷಾಂ** ಜೀವರ **ಬಂಧಂ** ಬಂಧವನ್ನು **ಮೋಕ್ಷಂ** ಮೋಕ್ಷವನ್ನು **ಸುಖಂ** ಸುಖವನ್ನು **ದುಃಖಂ** ದುಃಖವನ್ನು **ಸೃಜತಿ** ಸೃಷ್ಟಿಸುವನು. **ಏಕಃ** ಎಂದದ್ದರಿಂದ ಕಾಲ-ಕರ್ಮಾದಿಗಳು ಅಸ್ವತಂತ್ರವೆಂದು ಸೂಚಿಸಿರುವರು. ॥೨೦॥

**ನ ಚಾಽಸ್ಯ ಕಶ್ಚಿದ್ದಯಿತಃ ಪ್ರತೀಪೋ**
**ನ ಜ್ಞಾತಿಬಂಧುರ್ನ ಪರೋ ನ ಚ ಸ್ವಃ ।**
**ಸಮಸ್ಯ ಸರ್ವತ್ರ ನಿರಂಜನಸ್ಯ**
**ಕುತೋಽನುರಾಗಃ ಕುತ ಏವ ರೋಷಃ ॥೨೨॥**

**ಸರ್ವತ್ರ** ಎಲ್ಲ ಜೀವರ ವಿಷಯದಲ್ಲಿಯೂ **ಸಮಸ್ಯ** ಅವರವರ ಯೋಗ್ಯತೆಗೆ ತಕ್ಕಂತೆ ಸುಖ-ದುಃಖ ಫಲ ಕೊಡುವ **ನಿರಂಜನಸ್ಯ** ನಿಸ್ಸಂಗನಾದ ನಿರ್ದೋಷನಾದ **ಅಸ್ಯ** ಶ್ರೀಹರಿಗೆ **ಕಶ್ಚಿತ್** ಯಾವನೊಬ್ಬನೂ **ದಯಿತಃ ನ ಚ** ಪ್ರೇಮಪಾತ್ರನಾದವನು ಇಲ್ಲ **ಪ್ರತೀಪಃ** ಅಪ್ರೀತಿಪಾತ್ರನಾದವನು ನ ಇಲ್ಲ **ಜ್ಞಾತಿಃ** ಜ್ಞಾತಿಯು **ಬಂಧುಃ** ಬಂಧುವು ನ ಇಲ್ಲ **ಪರಃ** ಇತರನು **ಸ್ವಃ** ತನ್ನವನು ಇಲ್ಲ ಅಂದಮೇಲೆ **ಅನುರಾಗಃ** ಪ್ರೀತಿಯು **ಕುತಃ** ಹೇಗೆ ಬಂದೀತು. ಪ್ರೀತಿಯೇ ಇಲ್ಲದ ಮೇಲೆ **ರೋಷಃ** ತನ್ನಿಮಿತ್ತ ಕೋಪವೆಲ್ಲಿಯದು.

ಈ ಶ್ಲೋಕದಲ್ಲಿ ಇಷ್ಟ-ದ್ವಿಷ್ಟ ಈರ್ವರೂ ಸಮರೆಂದು ಹೇಳಿದಂತೆ ತೋರುವದು ಕಾರಣ ಅನ್ಯಥಾಪ್ರತೀತಿಯನ್ನು ಪರಿಹರಿಸುವರು-

ತಾತ್ಪರ್ಯ

ಸೇವಾಯೋಗ್ಯಾತಿರೇಕೇಣ ಸ್ವಾನಾಮಪಿ ನ ದಾಸ್ಯತಿ ।
ಅಪರಾಧಾತಿರೇಕೇಣ ನಾನ್ಯಸ್ಯಾತಃ ಸಮೋ ಹರಿಃ ॥ ಇತಿ ಮಾಹಾತ್ಮ್ಯೇ

ಸ್ವಕೀಯರಾದ ದೇವತೆಗಳಿಗೆ ಆಗಲಿ ಸೇವೆ ಮತ್ತು ಯೋಗ್ಯತೆಗೆ ಮೀರಿ ಫಲ ಕೊಡುವದಿಲ್ಲ. ಅದರಂತೆ ಬೇರೆಯವರಾದ ಅಸುರರಿಗೂ ಅಪರಾಧಯೋಗ್ಯತೆಗಿಂತ ಹೆಚ್ಚಾಗಿ ಫಲ ಕೊಡುವದಿಲ್ಲ. ಆದ್ದರಿಂದ ಶ್ರೀಹರಿಯು ಸಮನು. ಎಂದು ಮಾಹಾತ್ಮ್ಯ ಎಂಬ ಗ್ರಂಥದಲ್ಲಿ ಇದೆ. ॥೨೨॥

**ತಥಾಪಿ ತಚ್ಛಕ್ತಿವಿಸರ್ಗ ಏಷಾಂ**
**ಸುಖಾಯ ದುಃಖಾಯ ಹಿತಾಹಿತಾಯ ।**
**ಬಂಧಾಯ ಮೋಕ್ಷಾಯ ಚ ಮೃತ್ಯುಜನ್ಮನೋಃ**
**ಶರೀರಿಣಾಂ ಸಂಸೃತಯೇ ಚ ಕಲ್ಪತೇ ॥೨೩॥**

**ತಥಾಪಿ** ಸಾಮ್ಯವಿದ್ದರೂ **ತಚ್ಛಕ್ತಿವಿಸರ್ಗಃ** ಶ್ರೀಹರಿಯ ಶಕ್ತಿಯ ಲೀಲಾ ರೂಪವಾದ ಜೀವನ ಕರ್ಮ ಮೂಲಕವಾದ ಆವಿರ್ಭಾವವು **ಹಿತಾಯ ಅಹಿತಾಯ** ವೃದ್ಧಿ-




ಅವೃದ್ಧಿಗಾಗಿ 'ಹಿ ಗತೌ ವೃದ್ಧೌ ಚ' ಎಂದು ಧಾತು ಇದೆ. 'ವಿಚಿತ್ರಾಃ ಶಕ್ತಯೋಽಸ್ಯ ಹಿ' ಎಂದು ಪ್ರಮಾಣವಿದೆ. ಹೀಗೆ ಅರ್ಥ ಮಾಡಿದ್ದರಿಂದ ಸುಖಾಯ ದುಃಖಾಯ ಎಂಬುದರಿಂದ (ಸುಖೇನ ವಿಶೇಷಃ ಸಂಪಾದಿತಃ) ಸುಖವಾಗಿ ವಿಶೇಷ ವ್ಯತ್ಯಾಸ ಸಂಪಾದಿಸಲ್ಪಟ್ಟಿತು ಎಂದು ತಿಳಿಯಬೇಕು. **ಸುಖಾಯ** ಸುಖಕ್ಕೆ **ದುಃಖಾಯ** ದುಃಖಕ್ಕೆ **ಬಂಧಾಯ** ಬಂಧಕ್ಕೆ **ಮೋಕ್ಷಾಯ** ಮೋಕ್ಷಕ್ಕೆ **ಮೃತ್ಯುಜನ್ಮನೋಃ** ಮರಣ-ಜನ್ಮಗಳಿಗೆ **ಇತಿ** ಈ ರೀತಿ **ಸಂಸೃತಯೇ** ಸಂಸಾರಕ್ಕೆ **ಏಷಾಂ ಶರೀರಿಣಾಂ** ಈ ಜೀವರಿಗೆ **ಕಲ್ಪತೇ** ಸಮರ್ಥವಾಗುವದು ಅಥವಾ **ಬಂಧಾಯ** ತಾಮಸರಿಗೆ ತಮಸ್ಸಿನಲ್ಲಿ ಬಂಧಿಸಲು **ಸಂಸೃತಯೇ** ನಿತ್ಯಸಂಸಾರಕ್ಕೆ **ಮೋಕ್ಷಾಯ** ಎಂಬುದರಿಂದ ಕ್ರಮವಾಗಿ ಅಧಮ-ಮಧ್ಯಮ-ಉತ್ತಮ ಅಧಿಕಾರಿ ವಿವಕ್ಷಯಾ ಫಲಗಳನ್ನು ಹೇಳಿದಂತಾಯಿತು. **ತಥಾಪಿ** ಶ್ರೀಹರಿಗೆ ಅವರವರ ಯೋಗ್ಯತೆಗೆ ಮೀರಿ ವಿಶೇಷ ಅನುರಾಗಾದಿಗಳು ಇಲ್ಲದಿದ್ದರೂ **ತಚ್ಛಕ್ತಿವಿಸರ್ಗಃ** ೧. ಶ್ರೀಹರಿಯ ಸಾಮರ್ಥ್ಯದಿಂದ ನಿಯತವಾದ ಪುಣ್ಯ-ಪಾಪಾದಿ ಕರ್ಮವು ೨. ಶ್ರೀಹರಿಯ ಶಕ್ತಿಯ ವಿಶಿಷ್ಟ ಭಾವವು (ಅವರವರ ಯೋಗ್ಯತೆ-ಕರ್ಮಗಳನ್ನು ಅನುಸರಿಸಿ ಫಲಕೊಡುವೆನೆಂಬ ತಾನೇ ಮಾಡಿಕೊಂಡ ನಿಯಮವು) **ಏಷಾಂ** ಲಿಂಗಶರೀರ ಉಳ್ಳ ಸಂಸಾರಿ ಜೀವರ ಸುಖ-ದುಃಖ, ಹಿತ-ಅಹಿತ, ಬಂಧ-ಮೋಕ್ಷ, ಸಾವು-ಹುಟ್ಟು ಸಂಸಾರ-ಮೋಕ್ಷಕ್ಕೂ **ಕಲ್ಪತೇ** ಸಮರ್ಥವಾಗುವದು. **ತಥಾಽಪಿ** ಭಗವಂತನೆ ಮುಖ್ಯಕರ್ತೃವಾದರೂ ಎಂದೂ ಅರ್ಥ.

'ಭೂತಭಾವೋದ್ಭವಕರೋ ವಿಸರ್ಗಃ ಕರ್ಮಸಂಜ್ಞಿತಃ' ಎಂದು ಗೀತಾಭಾಷ್ಯದಲ್ಲಿದೆ. ಆದ್ದರಿಂದ ಕರ್ಮವೆಂದರ್ಥ. ವಿವಿಧಃ ಸರ್ಗಃ ಸಾತ್ವಿಕ ರಾಜಸ ತಾಮಸವೆಂಬ ವಿಸರ್ಗ ಸ್ವಭಾವಯೋಗ್ಯತಾ ಎಂದೂ ಅರ್ಥ ಮಾಡಿದೆ. ಭಗವಂತನು ಯೋಗ್ಯತಾನುಸಾರ ಫಲದಾತನಾದ್ದರಿಂದ ಶ್ರೀಹರಿಯು ಎಲ್ಲರಲ್ಲಿ ಸಮನೆಂದು ಹೇಳಿದ್ದನ್ನು ಸಮರ್ಥಿಸಿದಂತಾಯಿತು. ಇದನ್ನೇ ಸೂತ್ರಕಾರರು 'ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್ ತಥಾ ಹಿ ದರ್ಶಯತಿ' ಎಂದು ನಿರ್ಣಯಿಸಿರುವರು. ಸಾಪೇಕ್ಷನಾದರೆ ಪರತಂತ್ರನಾಗಲಿಲ್ಲವೇ ಎಂಬ ಶಂಕೆಯನ್ನು 'ತಚ್ಛಕ್ತಿವಿಸರ್ಗಃ' ಎಂಬುದರಿಂದ ಪರಿಹರಿಸಿರುವರು. ಅವನ ಶಕ್ತಿ ನಿಯತವೆಂದಮೇಲೆ ಮತ್ತೆ ವೈಷಮ್ಯಾದಿಗಳು ಬರಲಿಲ್ಲವೇ? ಎಂದರೆ ಅಂತಹ ವೈಷಮ್ಯಾದಿಗಳು ಅಂಗೀಕಾರ್ಯಗಳೆಂದು ಅದೇ ಸೂತ್ರಕಾರರು 'ಉಪಪದ್ಯತೇ ಚಾಪ್ಯುಪಲಭ್ಯತೇ ಚ' ಎಂಬ ಸೂತ್ರದಲ್ಲಿ

ನಿರ್ಣಯಿಸಿದ್ದಾರೆ. ವೇದಾನುಗುಣವಾದ ವೈಷಮ್ಯಾದಿ ದೋಷವಿಲ್ಲವೆಂದು ತೀರ್ಮಾನ. 'ವೈಷಮ್ಯಂ ನಿಘೃಣತ್ವಂ ಚ ವೇದಾಪ್ರಾಮಾಣ್ಯಕಾರಣಮ್ । ನಾಂಗೀಕಾರ್ಯಮತೋಽನ್ಯತ್ತು ನ ವೈಷಮ್ಯಾದಿನಾಮಕಮ್' ಎಂದು ಪ್ರಮಾಣ. ಹೀಗೂ ವ್ಯಾಖ್ಯಾನಿಸಿರುವರು. ।।೨೩।।

ವಸ್ತುತಃ ಎಲ್ಲವೂ ಭಗವದಧೀನವಾಗಲಿ ನನಗೇಕೆ ಹೇಳುವೆ ಎಂದರೆ ನಾನು ಹೇಳುವುದು ಇಷ್ಟೇ ಎಂದು ಹೇಳುತ್ತಿದ್ದಾರೆ-

**ಅಥ ಪ್ರಸಾದಯೇ ನ ತ್ವಾಂ ಶಾಪಮೋಕ್ಷಾಯ ಭಾಮಿನಿ ।**
**ಯನ್ಮನ್ಯಸೇ ಅಸಾಧೂಕ್ತಂ ಮಮ ತತ್ಕ್ಷಮ್ಯತಾಂ ಸತಿ ।।೨೪।।**

**ಅಥ** ಶಾಪದಾನಾನಂತರ ಅಥವಾ ಎಲ್ಲವೂ ಭಗವದಧೀನವಾದುದರಿಂದ 'ತಸ್ಮಾತ್ ಅಥ ಅಥೋ ಇತ್ಯೇತತ್ ಹೇತ್ವರ್ಥೇ ಸಮುದೀರಿತಃ' ಎಂದು ಅಭಿಧಾನವಿದೆ. **ಹೇ ಭಾಮಿನಿ** ಕೋಪ ಸುಂದರಿಯೇ **ಶಾಪವಿಮೋಕ್ಷಾಯ** ವಿಶಾಪ ಕೊಟ್ಟು ನನ್ನನ್ನು ಮೋಚನೆ ಮಾಡೆಂದು **ತ್ವಾಂ** ನಿನ್ನನ್ನು **ನ ಪ್ರಸಾದಯೇ** ಸಂತೋಷ ಪಡಿಸುತ್ತಿಲ್ಲ. **ಹೇ ಸತಿ ಮಮ ಅಸಾಧೂಕ್ತಂ ಮನ್ಯಸೇ** ನಾನಾಡಿರುವ ಮಾತನ್ನು ಅಸಾಧು ಎಂದು ತಿಳಿದಿದ್ದೀಯೋ **ತತ್** ಅದನ್ನು **ಕ್ಷಮ್ಯತಾಂ** ಕ್ಷಮಿಸು ಎಂದಿಷ್ಟೇ. ನಿನ್ನ ಮನಸ್ಸಿನಲ್ಲಿ ಕೋಪಾದಿಗಳಿದ್ದರೆ ಜ್ಞಾನಾದಿವಿಲೋಪರೂಪವಾದ ಮಹಾನರ್ಥ ಆಗುವದು. ಆದ್ದರಿಂದ ನಿನ್ನನ್ನು ಕ್ಷಮೆ ಯಾಚಿಸುವೆನೆಂದು ಭಾವ. ನನ್ನ ಅಪರಾಧ ದೊಡ್ಡದಾದ್ದರಿಂದ ಮಹಾಫಲವು ಭಗವಂತನಿಂದ ಕ್ಲೃಪ್ತವಾದಾಗ ನೀನು ಕೂಡ ಅದನ್ನು ತಪ್ಪಿಸಲು ಸಮರ್ಥಳಲ್ಲ. ಆದ್ದರಿಂದ ಅದನ್ನು ಕೇಳಿ ಪ್ರಯೋಜನವಾದರೂ ಏನು ಎಂದು ಒಳಗಿನ ಭಾವ. ।।೨೪।।

**ಬಾದರಾಯಣಿರುವಾಚ -**

**ಇತಿ ಪ್ರಸಾದ್ಯ ಗಿರಿಶೌ ಚಿತ್ರಕೇತುರರಿಂದಮ ।**
**ಜಗಾಮ ಸ್ವವಿಮಾನೇನ ಪಶ್ಯತೋಃ ಸ್ಮಯತೋಸ್ತಯೋಃ ।।೨೫।।**

**ಹೇ ಅರಿಂದಮ** ಶತ್ರುಸಂಹಾರಕನಾದ ಪರೀಕ್ಷಿತನೇ **ಚಿತ್ರಕೇತುಃ** ಚಿತ್ರಕೇತುವು **ಇತಿ** ಮೇಲೆ ಹೇಳಿದಂತೆ **ಗಿರಿಶೌ** ಪಾರ್ವತಿ-ಪರಮೇಶ್ವರರನ್ನು **ಪ್ರಸಾದ್ಯ** ಕ್ಷಮಿಸಿರೆಂದು ಪ್ರಾರ್ಥಿಸಿ **ಸ್ಮಯತೋಃ** ಮಂದಹಾಸ ಮಾಡುತ್ತಿರುವ **ತಯೋಃ** ಅವರು **ಪಶ್ಯತೋಃ** ನೋಡುತ್ತಿದ್ದಂತೆಯೇ **ಸ್ವವಿಮಾನೇನ** ತನ್ನ ವಿಮಾನದಿಂದ **ಜಗಾಮ** ಹೊರಟು

ಹೋದನು. ಹೆಂಡತಿಯ ಕೋಪದಿಂದ ಕೋಪ, ಅವಳ ಶಾಂತಿಯಿಂದ ಗಂಡನಿಗೆ ಶಾಂತಿ ಎಂದು ತಿಳಿಸಲೂ ಗಿರಿಶೌ ಎಂದಿರುವರು. ಗಿರಿಶಾ ಚ ಗಿರಿಶಶ್ಚ ಗಿರಿಶೌ ಎಂದು ಪುಮೇಕಶೇಷ. ಸ್ಮಯತೋಃ ಎಂದದ್ದರಿಂದ ಅವರು ಕ್ಷಮಿಸಿರುವರು ಎಂದು ತೋರಿಸಿರುವರು. ಸ್ಮಯತೋಃ ಆಶ್ಚರ್ಯ ಪಡುತ್ತಿರಲು ಹೀಗೂ ಅರ್ಥ. ।।೨೫।।

**ತತಸ್ತು ಭಗವಾನ್ ರುದ್ರೋ ರುದ್ರಾಣೀಮಿದಮಬ್ರವೀತ್ ।**
**ದೇವರ್ಷಿದೈತ್ಯಸಿದ್ಧಾನಾಂ ಪಾರ್ಷದಾನಾಂ ಚ ಶೃಣ್ವತಾಮ್ ।।೨೬।।**

**ತತಃ** ಚಿತ್ರಕೇತುವು ಹೋದ ನಂತರ **ಭಗವಾನ್ ರುದ್ರಃ** ಪೂಜ್ಯರಾದ ರುದ್ರದೇವರು **ದೇವರ್ಷಿದೈತ್ಯಸಿದ್ಧಾನಾಂ ಪಾರ್ಷದಾನಾಂ ಚ** ದೇವತೆಗಳು ಋಷಿಗಳು, ದೈತ್ಯರು, ಸಿದ್ಧರು, ದ್ವಾರಪಾಲಕರು **ಶೃಣ್ವತಾಂ** ಕೇಳುತ್ತಿರುವಾಗಲೇ **ರುದ್ರಾಣೀಂ** ಪಾರ್ವತಿಯನ್ನು ಕುರಿತು **ಇದಂ** ಮುಂದೆ ಹೇಳುವ ಮಾತನ್ನು **ಅಬ್ರವೀತ್** ಹೇಳಿದರು.

ಇಷ್ಟು ಅನರ್ಥವಾದ ಮೇಲೂ ಕಾಂತೆಯನ್ನು ಏಕಾಂತದಲ್ಲಿ ಒಬ್ಬಳನ್ನೇ ಕರೆದುಕೊಂಡು ಹೋಗಿ ಹೇಳಿದನೇನು ಎಂದರೆ ಇಲ್ಲ ಎಂದು ದೇವರ್ಷಿ... ಇತ್ಯಾದಿ ವಚನದಿಂದ ತಿಳಿಸಿರುವರು. ಅವರೂ ಎಲ್ಲೋ ಲಕ್ಷ್ಯವಿಟ್ಟರಲಿಲ್ಲ ಎಂದು ತಿಳಿಸಲು ಶೃಣ್ವತಾಂ ಎಂದಿದ್ದಾರೆ.

ಕಾವ್ಯಪ್ರಕಾಶಿಕಾದಲ್ಲಿ ಏಳನೇ ಉಲ್ಲಾಸದಲ್ಲಿ ದೋಷವನ್ನು ಹೇಳುವ ಸಂದರ್ಭದಲ್ಲಿ ಅದರಲ್ಲೂ ವಿರುದ್ಧಮತಿಕೃದುದಾಹರಣದಲ್ಲಿ 'ಅಕಾರ್ಯಮಿತ್ರಮೇಕೋಽಸೌ ... । ಕಾಂತಾ ಕಾಂತಸ್ಯ ಸಹಸಾ ವಿದಧಾತಿ ಗಲಗ್ರಹಮ್ । ನ ತ್ರಸ್ತಂ ಯದಿ ನಾಮ ಭೂತಕರುಣಾ ಸಂತಾನಶಾಂತಾತ್ಮನಸ್ತೇನ ವ್ಯಾರುಜತಾ ಧನುರ್ಭಗವತೋ ದೇವಾದ್ಭವಾನೀಪತೇಃ । ...ಪಾಯಾದ್ವಃ ಸೋಽಂಬಿಕಾರಮಣಃ' ಮುಂತಾಗಿ ಹೇಳಿದೆ. ಅದರಂತೆ ಪರಮಾನಂದಚಕ್ರವರ್ತಿ ಮಾಡಿದ ವ್ಯಾಖ್ಯಾಸಂಹಿತೆಯಲ್ಲಿದೆ. ಹಾಗೆಯೇ ಅಲಂಕಾರಶಿರೋಭೂಷಣದಲ್ಲಿ ಇಂದ್ರಾಣೀರಮಣಮುಖ್ಯೈಃ ಎಂದು ಉದಾಹರಿಸಿ, ಇಂದ್ರಾಣೀರಮಣ ಪದಂ ವಿರುದ್ಧಮತಿಕೃತ್ । ಇಂದ್ರಸ್ಯ ಪತ್ನೀ ಇಂದ್ರಾಣೀ ಇತಿ ಯೌಗಿಕತ್ವಾತ್ ಇಂದ್ರಾಣೀರಮಣಶಬ್ದೇನ । ಶಚ್ಯಾಃ ಪತ್ಯಂತರೋಪಸ್ಥಿತಿಃ ಜಾಯತೇ ಎಂದು ಹೇಳಿದೆ.

ಆದ್ದರಿಂದ ಅದರಂತೆ ಇರುವ ರುದ್ರೋ ರುದ್ರಾಣೀಂ ಎಂಬಲ್ಲಿ, ಇಂದ್ರವರುಣ ಇತ್ಯಾದಿನಾ ಆನುಕಿ ಜೀಷಿ ಚ (ಸಿ.ಕೌ.೫೦೫) ರುದ್ರಸ್ಯ ಸ್ತ್ರೀ ರುದ್ರಾಣೀ ಎಂದು

ಯೌಗಿಕವಾದ್ದರಿಂದ ರುದ್ರಾಣೀಂ ರುದ್ರೋ ಅಬ್ರವೀತ್ ಎಂದು ಹೇಳಿದರೆ, ರುದ್ರಾಣಿಯನ್ನು ಕುರಿತು ಹೇಳುವ ರುದ್ರನು ಬೇರೆ ಯಾರೋ ಎಂದು ತೋರುವದಲ್ಲ ಎಂದರೆ ಅದು ಸರಿಯಲ್ಲ. ಅದಕ್ಕೆ ಉಪಪತ್ತಿ ಇದು ಅಖಂಡ ಶಬ್ದವೆಂದಾಗಲೀ ವಿಶಿಷ್ಟವಾಚಕನೀತಿಯಿಂದಾಗಲಿ ವೇದದಲ್ಲಿರುವ ಆಣೀಸ್ಥ ಮುಂತಾದ ಐತರೇಯಭಾಷ್ಯದಲ್ಲಿ 'ಆಣ ಶಬ್ದಸ್ಯ ಗತಿವಾಚಕತ್ವಾತ್ ಚಲಂ ಆಣಂ ಉಚ್ಯತೇ' ಎಂದು ಹೇಳಿರುವದರಿಂದ ಆಣಂ ಚಲಂ, ಮನಃ ತದಸ್ಯಾ ಅಸ್ತೀತಿ ನಿಯಮ್ಯತಯಾ ಇತಿ ಸಾ ಆಣೀ । ಅರುದ್ರಾ ಕಿಂಚಿಚ್ಛಾಂತಿಮತೀ ಎಂದಾಗಲಿ ಅಕ್ರೂರಗಳೆಂದಾಗಲಿ ಅರುದ್ರಾ ಚ ಸಾ ಆಣೀ ಚ ಅರುದ್ರಾಣೀ ತಾಂ ಅಬ್ರವೀತ್ ಎಂದರ್ಥ.

'ಮನೋ ದುರ್ನಿಗ್ರಹಂ ಚಲಂ' ಎಂದಿರುವದರಿಂದ ಮನಸ್ಸು ಚಲವು. ಪ್ರಾಣೋ ವಾ ಆಶಾಯಾ ಭೂಯಾನ್' ಎಂಬ ಛಾಂದೋಗ್ಯೋಪನಿಷದ್ಭಾಷ್ಯದಲ್ಲಿ 'ಪ್ರಾಣನಾಮಾ ಣ ಇತ್ಯೇವ ಹ್ಯಾನಂದಃ ಸಮುದೀರಿತಃ । ಆಣಾ ಸರಸ್ವತೀ ಪ್ರೋಕ್ತಾ' ಎಂದು ಹೇಳಿರುವುದರಿಂದ ಆಣ ಎಂದರೆ ವಾಯು-ಬ್ರಹ್ಮರು. ತಸ್ಯೇಯಂ ಅವರ ಸ್ನುಷಾ ಸೊಸೆ ಆದ್ದರಿಂದ ಆಣೀ ಅವಳನ್ನು ಕುರಿತು ಮಾತನಾಡಿದ ಎಂದು ಅರ್ಥ.

ಆಣಾ ಸರಸ್ವತೀ ಅಭಿಮಾನಿತ್ವೇನ ಅಸ್ತೀತಿ ಆಣೀ ವಾಣೀ ಮಾತು. **ಇದಂ** ಕಾಮಿತವಾದುದನ್ನು ಅಬ್ರವೀತ್. ಮತ್ವರ್ಥೇ ಇಕಾರ. ವಸ್ತುತಸ್ತು ಇದು ಕಾವ್ಯದೋಷ. ಮಹಾಶಾಸ್ತ್ರದಲ್ಲಿ ದೋಷವಲ್ಲವೆಂದು ತಿಳಿಯಬೇಕು.

**ದೇವದೇವ ಉವಾಚ –**

> **ದೃಷ್ಟವತ್ಯಸಿ ಸುಶ್ರೋಣಿ ಹರೇರದ್ಭುತಕರ್ಮಣಃ ।**
> **ಮಾಹಾತ್ಮ್ಯಂ ಭೃತ್ಯಭೃತ್ಯಾನಾಂ ನಿಸ್ಪೃಹಾಣಾಂ ಮಹಾತ್ಮನಾಮ್॥೨೭॥**

**ಹೇ ಸುಶ್ರೋಣಿ** ಸುಂದರಿಯೇ **ನಿಸ್ಪೃಹಾಣಾಂ** ಶ್ರೀಹರಿಯನ್ನು ಬಿಟ್ಟು ಬೇರೆ ಹೆಂಡತಿ, ಮನೆ, ಮಕ್ಕಳನ್ನು ಅಪೇಕ್ಷಿಸದ **ಮಹಾತ್ಮನಾಂ** ಮಹನೀಯರಾದ **ಅದ್ಭುತಕರ್ಮಣಃ** ಆಶ್ಚರ್ಯಕರ ಕೆಲಸಗಳನ್ನು ಮಾಡುವ **ಹರೇಃ** ಶ್ರೀಹರಿಯ **ಭೃತ್ಯಭೃತ್ಯಾನಾಂ** ಸೇವಕರ ಸೇವಕರ ಅಥವಾ **ಭೃತ್ಯರ್ಥಂ** ಉದರ ಪೋಷಣೆಗಾಗಿ **ಅಭೃತ್ಯಾನಾಂ** ಸೇವಕರಾಗದವರ **ಮಹಾತ್ಮ್ಯಂ** ದೇಹ ಹೋಗುವ ಪ್ರಸಂಗ ಬಂದರೂ ಹೆದರದಿರುವದೆಂಬ ಅಸುರಜಾತಿಪ್ರಾಪಕವಾದ ಶಾಪವನ್ನು ಕೊಡುತ್ತಿದ್ದರೂ ನ ಪ್ರಸಾದಯೇ ಎಂದು ಹೇಳುತ್ತಾ ಹೆದರದೇ ಇರುವ ಚಿತ್ರಕೇತುವಿನ ರೂಪವನ್ನು

**ದೃಷ್ಟವತೀ ಅಸಿ** ನೋಡಿದವಳಾಗಿರುವಿ. **ಭೃತ್ಯಭೃತ್ಯಾನಾಂ** ಎಂದದ್ದರಿಂದ ಕೆಳಗಿನ ಭಕ್ತರೇ ಹೀಗಿದ್ದ ಮೇಲೆ ಉತ್ತಮಭಕ್ತರು ಹೇಗಿರಲಿಕ್ಕಿಲ್ಲವೆಂದು ಕೈಮುತ್ಯ ಹೇಳಿರುವರು.

ಚಿತ್ರಕೇತು ಮೊದಲಾದವರು ಉಪದೇವಕೂಟದಲ್ಲಿ ಸೇರಿದವರಾದ್ದರಿಂದ ಭೃತ್ಯರಾದ ದೇವತೆಗಳ ಭೃತ್ಯರೆಂದಿರುವರು. ।।೨೭।।

ಆಶ್ಚರ್ಯವನ್ನು ನೋಡುವದರಿಂದ ಪರವಶನಾದ ಹರನು ಪಾರ್ವತಿಗೆ ಸೂಚಿಸಿದ್ದನ್ನು ಬಿಡಿಸಿ ತಿಳಿಸುವನು-

**ನಾರಾಯಣಪರಾಃ ಸರ್ವೇ ನ ಕುತಶ್ಚನ ಬಿಭ್ಯತಿ ।**
**ಸ್ವರ್ಗಾಪವರ್ಗನರಕೇಷ್ವಪಿ ತುಲ್ಯಾರ್ಥದರ್ಶಿನಃ ।।೨೮।।**

**ನಾರಾಯಣಪರಾಃ** ಶ್ರೀಹರಿಯಲ್ಲಿಯೇ ಆಸಕ್ತರಾದ **ಸರ್ವೇ** ಎಲ್ಲರೂ **ಕುತಶ್ಚನ** ಯಾವ ಕಾರಣದಿಂದಲೂ **ನ ಬಿಭ್ಯತಿ** ಹೆದರುವದಿಲ್ಲ ಏಕೆಂದರೆ **ಸ್ವರ್ಗ** ಸ್ವರ್ಗದಲ್ಲಿಯೂ **ಅಪವರ್ಗ** ಮೋಕ್ಷದಲ್ಲಿಯೂ ಜೀವನ್ಮುಕ್ತಿಯಲ್ಲಿಯೂ **ನರಕೇಷ್ವಪಿ** ನರಕಗಳಲ್ಲಿಯೂ **ತುಲ್ಯಾರ್ಥದರ್ಶಿನಃ** ಸಮಾನವಾದ ಪ್ರಯೋಜನವೆಂದು ತಿಳಿಯುವ ಸ್ವಭಾವದವರು.

ಸ್ವರ್ಗ-ನರಕಗಳು ನಶ್ವರ ಅವನ್ನು ಸಮಾನವೆಂದು ತಿಳಿಯಲಿ. ಅಪವರ್ಗವು ಶಾಶ್ವತ ಮತ್ತು ದುಃಖರಹಿತಸುಖವಾದ್ದರಿಂದ ಅದನ್ನು ಇವುಗಳಿಗೆ ಸಮಾನ ಪ್ರಯೋಜನವೆಂದು ಹೇಗೆ ಕಾಣುವರು ಎಂಬುದಕ್ಕೆ 'ನಾರಾಯಣ ಪರಾಃ' ಎಂಬುದು ಉತ್ತರ. ನಾರಾಯಣನೇ ಅವರಿಗೆ ಪರಮಪುರುಷಾರ್ಥ. ಮೋಕ್ಷದಲ್ಲಿಯೂ ಸ್ವರ್ಗದಂತೆ ಅವರಿಗೆ ಆದರವಿಲ್ಲವೆಂದು ಅಭಿಪ್ರಾಯ. ಜೀವನ್ಮುಕ್ತಿ ಎಂಬ ಅರ್ಥದಲ್ಲಿ ಈ ಬಗೆಯ ಶಂಕೆಗೂ ಅವಕಾಶವಿಲ್ಲ. ಶ್ರೀಹರಿಯು ಕೊಟ್ಟದ್ದು ಎಂದು ಎಲ್ಲವನ್ನೂ ಸಂತೋಷದಿಂದ ಅನುಭವಿಸುವರೆಂದು ತಾತ್ಪರ್ಯ. ।।೨೮।।

**ದೇಹಿನಾಂ ದೇಹಸಂಯೋಗಾದ್ ದ್ವಂದ್ವಾನೀಶ್ವರಲೀಲಯಾ ।**
**ಸುಖಂ ದುಃಖಂ ಮೃತಿರ್ಜನ್ಮ ಶಾಪೋಽನುಗ್ರಹ ಏವ ಚ ।।೨೯।।**

**ಈಶ್ವರಲೀಲಯಾ** ಶ್ರೀಹರಿಯ ಇಚ್ಛಾರೂಪವಾದ ಕ್ರೀಡೆಯಿಂದ **ದೇಹಿನಾಂ** ಜೀವರಿಗೆ **ದೇಹಸಂಯೋಗಾತ್** ಸ್ಥೂಲದೇಹ ಸಂಬಂಧದಿಂದ **ಸುಖಂ ದುಃಖಂ** ಸುಖ-ದುಃಖಗಳು **ಮೃತಿಃ ಜನ್ಮ** ಸಾವು-ಹುಟ್ಟು **ಶಾಪಃ ಅನುಗ್ರಹಃ** ಶಾಪ-ಅನುಗ್ರಹಗಳೆಂಬ **ದ್ವಂದ್ವಾನಿ** ಜೋಡಿಗಳು **ಭವಂತಿ** ಆಗುವವು. **ಈಶ್ವರಲೀಲಯಾ** ಎಂದದ್ದರಿಂದ

ಈಶ್ವರೇಚ್ಛಾಕ್ಲೃಪ್ತವಾದ್ದರಿಂದ ಅಪರಿಹಾರ್ಯವೆಂದು, ಅವರು ಅದಕ್ಕಾಗಿ ಹೆದರುವದಿಲ್ಲವೆಂದು ತಿಳಿಸಿದಂತಾಯಿತು. ।।೨೯।।

೧. ಈಶ್ವರನೇ ಸುಖಾದಿಕರ್ತಾ. ದ್ವಂದ್ವಗಳು ಈಶ್ವರೇಚ್ಛೆಯಿಂದ ಎಂದು ಹೇಳಿದ್ದು ಸರಿಯಲ್ಲ. ದೇವದತ್ತನು ಸುಖ ಪಡಿಸುವನು. ಯಜ್ಞದತ್ತನು ದುಃಖ ಪಡಿಸುವನು. ಮುಂತಾಗಿ ಜೀವಕರ್ತೃತ್ವ ತೋರುವದಲ್ಲ ಎಂದರೆ ಅದು ಭ್ರಾಂತಿ ಎಂದು ಹೇಳುವರು. ೨. ದೇಹ ಸಂಬಂಧದಿಂದ ಜೀವನಿಗೆ ದ್ವಂದ್ವಗಳು ಬರಲಿ. ನಾಯಿ-ನರಿ ಮೊದಲಾದ ಆಕಾರಗಳಿಂದ ಭೇದವು ಹೇಗೆ ಬಂತು ಎಂದರೆ ಹೇಳುತ್ತಾರೆ-

**ಅವಿವೇಕಕೃತಃ ಪುಂಸೋ ಹ್ಯರ್ಥಭೇದ ಇಹಾತ್ಮನಿ ।**
**ಗುಣದೋಷವಿಕಲ್ಪಶ್ಚ ಭಿದೇವ ಸ್ವಪ್ನಕಲ್ಪಿತಾ ।।೩೦।।**

**ಇಹ** ಪ್ರಪಂಚದಲ್ಲಿ **ಆತ್ಮನಿ** ಜೀವರಲ್ಲಿ **ಅರ್ಥಭೇದಃ** ಇದು ನಾಯಿ ಇದು ನರಿ ಎಂಬ ಆಕಾರ ನಿಮಿತ್ತ ವ್ಯವಹಾರಭೇದವೂ **ಚ** ಮತ್ತು **ಆತ್ಮನಿ** ಜೀವರಲ್ಲಿ **ಗುಣದೋಷವಿಕಲ್ಪಃ** ಈ ಗುಣವಿದೆ ಈ ದೋಷವಿದೆ ಎಂಬ ವಿವಿಧ ಕಲ್ಪನೆಯು **ಸ್ವಪ್ನಕಲ್ಪಿತಾ** ಸ್ವಪ್ನಾವಸ್ಥೆಯಲ್ಲಿ ಮನಸ್ಸಿನ ಸಂಸ್ಕಾರವನ್ನು ಉಪಾದಾನವಾಗಿಟ್ಟುಕೊಂಡು ಬಂದ ಆನೆ ಮೊದಲಾದವು ಎಂಬ **ಭಿದಾ ಇವ** ವ್ಯವಹಾರಭೇದದಂತೆ **ಹಿ** ಯಾವ ಕಾರಣ **ಪುಂಸಃ** ಚೇತನನ **ಅವಿವೇಕಕೃತಃ** ಶ್ರೀಹರಿಯ ಮತ್ತು ತನ್ನ ಸ್ವರೂಪ ಜ್ಞಾನವಿಲ್ಲದ ಪ್ರಯುಕ್ತ ಬಂದದ್ದೋ ಆ ಕಾರಣದಿಂದ ಈ ಅನರ್ಥ ಪರಂಪರೆ ಉಂಟಾಗಿರುವದು ಎಂದನ್ವಯ. ೨. **ಪುಂಸಃ** ಜೀವರಿಗೆ **ಆತ್ಮನಿ** ಜೀವರಲ್ಲಿ **ಅರ್ಥಭೇದಃ** ಪರಮಾತ್ಮಕರ್ತೃಕ ಸುಖಾದಿಗಳ ವೈಲಕ್ಷಣ್ಯವು ಅಂದರೆ ಅವು ಜೀವ ಕರ್ತೃಕಗಳೆಂದು ತಿಳಿಯುವದು ಅವಿವೇಕ. **ಕೃತಃ ಹಿ** ಭ್ರಾಂತಿಕಲ್ಪಿತವಷ್ಟೇ **ಗುಣದೋಷವಿಕಲ್ಪಶ್ಚ** ಈಶ್ವರಕರ್ತೃಕ ಗುಣ-ದೋಷಗಳ ಅಂದರೆ ಸುಖ-ದುಃಖ ಕಾರಣಗಳಾದ ಪುಣ್ಯ-ಪಾಪಗಳನ್ನು ಜೀವನೇ ಸ್ವತಂತ್ರವಾಗಿ ಮಾಡಿ ಮಾಡುವನೆಂದು ತಿಳಿಯುವದೂ ಭ್ರಾಂತಿಯಿಂದಲೇ. ಇದಕ್ಕೆ ಉದಾಹರಣೆ **ಆತ್ಮನಿ** ಮನಸ್ಸಿನಲ್ಲಿ ಇರುವ ಪದಾರ್ಥಗಳನ್ನು **ಭಿದಾ** ಅವು ವಾಸನಾಮಯವಲ್ಲ ಬಾಹ್ಯವಸ್ತುಗಳೇ ಎಂದು ತಿಳಿಯುವದು **ಸ್ವಪ್ನಕಲ್ಪಿತಾ ಇವ** ಸ್ವಪ್ನಾವಸ್ಥೆಯಲ್ಲಿ ಭ್ರಾಂತಿಯಿಂದ ತಿಳಿದಂತೆ ಎಂದರ್ಥ. ಈ ಎರಡನೆಯ ಅರ್ಥದಲ್ಲಿ ೨೦ನೇ ಪದ್ಯದಲ್ಲಿ ಹೇಳಿದ ಪ್ರಮಾಣವನ್ನು ಇಲ್ಲಿಯೂ ಪ್ರಮಾಣವಾಗಿ ತೆಗೆದುಕೊಳ್ಳಬೇಕು (ಚಟ್ಟಿ)

ಶ್ರೀ ಸತ್ಯಧರ್ಮರ ಪ್ರಕಾರ- 'ದೇಹಿನಾಂ ದೇಹಸಂಯೋಗಾತ್' ಎಂಬ ಶ್ಲೋಕವು ಹಾಗೂ ಅವಿವೇಕಕೃತಃ ಪುಂಸಃ ಎಂಬ ಶ್ಲೋಕವೂ ಅರ್ಥವಾಗುವುದಿಲ್ಲ, ವಿರುದ್ಧವಾಗಿ ಅರ್ಥವಾಗುತ್ತದೆ ಆದ್ದರಿಂದ ಪ್ರಮಾಣದಿಂದ ಆ ಶ್ಲೋಕಗಳ ಅರ್ಥವನ್ನು ವಿವರಿಸುವರು-

ತಾತ್ಪರ್ಯ

ಯತ್ತದ್ಭಗವತಾ ಕ್ಲೃಪ್ತಂ ತದೇವ ನಿಯತಂ ಭವೇತ್ ।
ಅತೋಽನ್ಯೇಷಾಂ ವರಃ ಶಾಪೋ ಗುಣದೋಷಪ್ರಕರ್ತೃತಾ ।

ಸ್ವತಃ ಪ್ರಾಪ್ತಾ ಭೇದಕೃತಿರ್ವಾಸನಾರೂಪಿಣೋ ಯಥಾ ।
ವಿದ್ಯಮಾನಸ್ಯ ಮನಸಿ ಪುನಃ ಸ್ವಪ್ನೇಷು ದರ್ಶನಮ್ ।
ಭಗವದ್ವಶತಾ ಯಸ್ಮಾತ್ ಸರ್ವೇಷಾಂ ಜ್ಞೇಯಮೇವ ತತ್ ॥

-ಇತಿ ಪ್ರಕಾಶಸಂಹಿತಾಯಾಮ್

ಯಾವ ಕಾರಣ ಶ್ರೀಹರಿಯಿಂದ ಯಾರಿಗೆ ಯಾವುದು ಅಂದರೆ ಸುಖ ವರ ಮೊದಲಾದುದು ಸಂಕಲ್ಪಿತವಾಗಿದೆಯೋ ಅದೇ ನಿಯಮದಿಂದ ಆಗುವದು. ಶ್ರೀಹರಿಯೇ ಸರ್ವಕರ್ತನು ಎಂದು ಅಭಿಪ್ರಾಯ. ಆದ್ದರಿಂದ ಶ್ರೀಹರಿಯ ಹೊರತು ಬೇರೆಯವರಿಂದ ವರವು ಶಾಪವು ಭೇದಕಾರಣವಾದ ಪುಣ್ಯ-ಪಾಪರೂಪ ಕರ್ಮವೂ ಸುಖಾದಿಗಳು ಎಲ್ಲವೂ ಸರ್ವಾಂತರ್ಯಾಮಿಯೂ ಸರ್ವಸ್ವತಂತ್ರನಾದ್ದರಿಂದ ಸ್ವಶಬ್ದವಾಚ್ಯನಾದ ಶ್ರೀಹರಿಯಿಂದಲೇ ಉಂಟಾಗುತ್ತದೆ. ಇತರರಿಗೆ ಸ್ವಾತಂತ್ರ್ಯವಿಲ್ಲ. ಶ್ರೀಹರಿಯೇ ಎಲ್ಲರಿಗೂ ವರಾದಿಗಳನ್ನು ಕೊಡುವವನು. ಸ್ವಪ್ನಾವಸ್ಥೆಯಲ್ಲಿ ಮನಸ್ಸಿನಲ್ಲಿ ಯಥಾರ್ಥವಾಗಿರುವ ಸಂಸ್ಕಾರವೇ ಉಪಾದಾನ ಕಾರಣವಾಗಿ ಉಳ್ಳ ವಸ್ತುಗಳು ಹೊರಗಿನವು ಎಂದು ತಿಳಿಯುವದು ಹೇಗೆ ಭ್ರಮವೋ ಹಾಗೆಯೇ ಭ್ರಮವಾಗಿದೆ.

ಶಾಪಾದಿಗಳೆಲ್ಲ ಭಗವದಧೀನಗಳೇ ಆಗಿರುವದರಿಂದ ಭಗವತ್ಸ್ವರೂಪವನ್ನು ಸ್ವತಂತ್ರವೆಂದು ತಿಳಿಯಬೇಕು ಎಂದು ಪ್ರಕಾಶಸಂಹಿತೆಯಲ್ಲಿ ಹೇಳಿದೆ. ।।೨೯-೩೦।।

ತದ್ಭಗವತಾ ಸ ಚಾಽಸೌ ಭಗವಾಂಶ್ಚ ತದ್ಭಗವಾನ್ ತೇನ ತದ್ಭಗವತಾ ಅಂದರೆ ಚಿತ್ರಕೇತು ಮುಂತಾದ ದಾಸರಿಂದ ಕೂಡಿದ ಭಗವಂತನಿಂದ ಎಂದರ್ಥ.

ಅತೋ ಅನ್ಯೇಷಾಂ ಭಗವದಿತರೇಷಾಂ ಎಂದರ್ಥ. ಅನ್ಯಾಶ್ಚ ಅನ್ಯೇ ಚ, ಅನ್ಯೇ 'ಪುಮಾನ್ ಸ್ತ್ರಿಯಾ' ಎಂದು ಏಕಶೇಷವು ಪ್ರಸ್ತುತವಾದ್ದರಿಂದ ನೀನೇ ಮೊದಲಾದ

ಸ್ತ್ರೀಯರು ನಾನೇ ಮುಂತಾದವರು ಕೊಡುವ ಶಾಪ-ವರ, ನಿಗ್ರಹಾನುಗ್ರಹಗಳು ಎಲ್ಲವೂ ಸ್ವತಃ ಸ್ವಶಬ್ದವಾಚ್ಯ ಶ್ರೀಹರಿಯಿಂದಲೇ ಎಂದೂ ಅರ್ಥ ಮಾಡಿರುವರು. **ಇಹ** ಪ್ರತ್ಯಕ್ಷಸಿದ್ಧನಾದ ಆತ್ಮನಲ್ಲಿ ತನ್ನಂತೆ ವರರಲ್ಲಿ ಗುಣದೋಷವಿಕಲ್ಪಃ ವರಶಾಪಾದಿ ವಿತರಣೋಪಯುಕ್ತ ಗುಣಯುಕ್ತನಿವನು ಇವನಲ್ಲ ಎಂಬ ಅರ್ಥಭೇದವು ಹರಿಯನ್ನು ಬಿಟ್ಟು ತಾನು ತನ್ನಿಂದ ಇತರರಾದ ಅನೀಶ್ವರರಚಿತ ತತ್ತ್ವಜ್ಞಾನ ಮುಂತಾದವು ಅವಿವೇಕಕೃತ. ಭಗವಂತನ ಸ್ವರೂಪದ ಜ್ಞಾನವಿಲ್ಲದಿರುವುದರಿಂದ ಎಂದು ಭಾವ.

ಅವಿವೇಕ ಪ್ರತಿಯೋಗಿ ವಿಶೇಷವನ್ನು ಸ್ವಯಂ ಅವಲಂಬಿಸಿ ಹೇಳುವರು-

**ವಾಸುದೇವೇ ಭಗವತಿ ಭಕ್ತಿಮುದ್ವಹತಾಂ ನೃಣಾಮ್ ।**
**ಜ್ಞಾನವಿಜ್ಞಾನವೀರ್ಯಾಣಾಂ ನ ಹಿ ಕಶ್ಚಿದ್ವ್ಯಪಾಶ್ರಯಃ ॥೩೦॥**

**ಭಗವತಿ ವಾಸುದೇವೇ** ಭಗವಂತನಾದ ವಾಸುದೇವನಲ್ಲಿ **ಭಕ್ತಿಂ** ಭಕ್ತಿಯನ್ನು **ಉದ್ವಹತಾಂ** ಹೊಂದಿರುವ ಆದ್ದರಿಂದಲೇ **ಜ್ಞಾನವಿಜ್ಞಾನವೀರ್ಯಾಣಾಂ** ಶಾಸ್ತ್ರಜ್ಞಾನ-ಅಪರೋಕ್ಷಜ್ಞಾನಗಳೇ ಸಾಮರ್ಥ್ಯವಾಗಿ ಉಳ್ಳ **ನೃಣಾಂ** ಜನರಿಗೆ **ಕಶ್ಚಿತ್** ಮತ್ತೊಂದು **ವ್ಯಪಾಶ್ರಯಃ** ವಿಶೇಷವಾಗಿ ಆಶ್ರಯಿಸುವ ವಸ್ತುವು **ನ ಹಿ** ಇರುವದಿಲ್ಲ. ಈಶ್ವರನ ಭಕ್ತಿ -ಜ್ಞಾನಗಳೇ ಅಪೇಕ್ಷಣೀಯಗಳು ಅವೇ ಅನರ್ಥನಿವೃತ್ತಿಗೆ ಸಾಧನ.

**ನಾಽಹಂ ವಿರಿಂಚೋ ನ ಕುಮಾರನಾರದೌ**
**ನ ಬ್ರಹ್ಮಪುತ್ರಾ ಮುನಯಃ ಸುರೇಶಾಃ ।**
**ವಿದಾಮ ಯಸ್ಯೇಹಿತಮಂಶಕಾಂಶಕಾ-**
**ನ ತತ್ಸ್ವರೂಪಂ ಪೃಥಗೀಶಮಾನಿನಃ ॥೩೨॥**

**ಅಂಶಕಾಂಶಕಾಃ** ಶ್ರೀಹರಿಯ ಪ್ರತಿಬಿಂಬರಿಗೂ ಪ್ರತಿಬಿಂಬರಾದ ಭಿನ್ನಾಂಶಕರಾದ **ಪೃಥಕ್** ತಾರತಮ್ಯಾನುಗುಣವಾಗಿ ಒಬ್ಬೊಬ್ಬರೂ **ಈಶಮಾನಿನಃ** ಲೋಕೇಶರು ಸಮರ್ಥರು ಎಂಬ ಅಭಿಮಾನ ಉಳ್ಳ **ಸುರೇಶಾಃ** ದೇವಶ್ರೇಷ್ಠರಾದ ನಾವೆಲ್ಲರೂ **ಬ್ರಹ್ಮಪುತ್ರಾಃ** ಬ್ರಹ್ಮದೇವರ ಮಕ್ಕಳಾದ ಸನಕಾದಿಗಳು **ಮುನಯಃ** ಇತರ ಋಷಿಗಳೂ **ಯಸ್ಯ** ಯಾವ ಶ್ರೀಹರಿಯ **ಈಹಿತಂ** ಅಭಿಪ್ರಾಯವನ್ನು ಲೀಲೆಯನ್ನೂ **ತತ್ಸ್ವರೂಪಂ** ಶ್ರೀಹರಿಯ ಸ್ವರೂಪವನ್ನು **ನ ವಿದಾಮ** ತಿಳಿಯಲಾರೆವು. ಅದನ್ನೇ ಬಿಡಿಸಿ ಹೇಳುವರು **ಅಹಂ** ನಾನು **ನ ವೇದ್ಮಿ** ತಿಳಿದಿಲ್ಲ. **ವಿರಿಂಚಃ** ಬ್ರಹ್ಮದೇವರು **ನ ವೇತ್ತಿ** ಸಾಕಲ್ಯೇನ ತಿಳಿದಿಲ್ಲ **ಕುಮಾರನಾರದೌ** ಕುಮಾರ-ನಾರದರೂ **ನ ವೇತ್ತಿ** ತಿಳಿದಿಲ್ಲ ಇಂತಹ

ಮಹಿಮೋಪೇತ ಶ್ರೀಹರಿಯ ದಾಸನಾದ ಚಿತ್ರಕೇತುವಿನಲ್ಲಿ ಇದೇನೂ ಆಶ್ಚರ್ಯವಲ್ಲ.

ಸಂಪಾದನೀಯವೆಂದು ತಿಳಿಸಿದ ವೇದನವು ಯಥಾಯೋಗ್ಯವೇ ಹೊರತು ಸಂಪೂರ್ಣವಾಗಿ ತಿಳಿಯಲು ಇವರಾರಿಂದಲೂ ಸಾಧ್ಯವಲ್ಲವೆಂದು ತಿಳಿಸಲು ತಾನು ಈಗ ಧರ್ಮಪ್ರವರ್ತಕ ಆಚಾರ್ಯನಾದ್ದರಿಂದ ಪತ್ನಿಯು ಮುಖ್ಯ ಶ್ರೋತೃವಾದ್ದರಿಂದ ಸ್ವದ್ವಾರಕವಾಗಿದೆ ಆ ಜ್ಞಾನ ಎಂಬ ಕಾರಣದಿಂದ ಬ್ರಹ್ಮನಿಗಿಂತ ತನ್ನನ್ನು ಮೊದಲು ಸದಾಶಿವನು ಹೇಳಿರುವನು ಎಂಬ ಅಭಿಪ್ರಾಯವನ್ನು 'ನಾಹಂ' ಎಂಬುದಕ್ಕೆ ತಿಳಿಯಬೇಕು.

ಕುಮಾರ-ನಾರದರಲ್ಲಿ ಭಗವಂತನ ಆವೇಶವಿಶೇಷವಿದ್ದುದರಿಂದ ಬ್ರಹ್ಮಪುತ್ರರೇ ಆಗಿದ್ದರೂ ಪ್ರತ್ಯೇಕ ಹೇಳಿರುವರು. **ಈಶಮಾನಿನಃ** ಎಂಬುದು ಬ್ರಹ್ಮದೇವರ ವಿಷಯದಲ್ಲಿ ಛತ್ರಿನ್ಯಾಯದಿಂದ ಪ್ರವೃತ್ತವಾದುದು. ಸ್ವಲ್ಪವಾದರೂ ಪ್ರಾಪ್ಯವಾದ ಜ್ಞಾನ ಹುಟ್ಟದಿರಲು ಈ ಅಭಿಮಾನವೇ ನಿಮಿತ್ತವೆಂದು ಭಾವ. ||೩೨||

**ನಹ್ಯಸ್ಯಾತಿಪ್ರಿಯಃ ಕಶ್ಚಿನ್ನಾಪ್ರಿಯಃ ಸ್ವಃ ಪರೋಽಪಿ ವಾ ।**
**ಆತ್ಮತ್ವಾತ್ಸರ್ವಭೂತಾನಾಂ ಸರ್ವಭೂತಪ್ರಿಯೋ ಹರಿಃ ||೩೩||**

**ಅಸ್ಯ** ಈ ಶ್ರೀಹರಿಗೆ **ಕಶ್ಚಿತ್** ಯಾವ ಜೀವನೂ **ಅತಿಪ್ರಿಯಃ** ಯೋಗ್ಯತೆಯನ್ನು ಅತಿಕ್ರಮಿಸಿ ಪ್ರಿಯನು ನ ಇಲ್ಲ **ವಾ** ಮತ್ತು **ಸ್ವಃ** ತನ್ನವನು **ಪರಃ ಅಪಿ** ಇವನು ಬೇರೆಯವನೂ ಎಂದೂ ನ ಇಲ್ಲ **ಸರ್ವಭೂತಾನಾಂ** ಎಲ್ಲ ಪ್ರಾಣಿಗಳ **ಆತ್ಮತ್ವಾತ್** ಅಂತರ್ಯಾಮಿಯಾದ್ದರಿಂದ ಸ್ವಾಮಿಯಾದ್ದರಿಂದ **ಹರಿಃ** ಶ್ರೀಹರಿಯು **ಸರ್ವಭೂತಪ್ರಿಯಃ** ಎಲ್ಲ ಜೀವ ಪ್ರಿಯನು.

ಯತೋ ಹರಿಃ ಸರ್ವೇಷಾಂ ಭೂತಾನಾಂ ಪ್ರಿಯಃ ಪ್ರಿಯತಮಶ್ಚ ಇತ್ಯರ್ಥಃ । ನ ಹಿ ವಿಷ್ಣೋಃ ಸರ್ವಭೂತಾನಿ ಪ್ರಿಯಂತೇ ಇತಿ ಭಾವಃ ।

ಸರ್ವಭೂತ ಸ್ವಾಮಿಗೆ ಭೂತಗಳಲ್ಲಿ ತಾರತಮ್ಯಭಾವದಿಂದ ಸ್ವಕೀಯ-ಪರಕೀಯ ಬುದ್ಧಿ ಬರಲಾರದು. ಇವನಿಗೆ ಎಲ್ಲರೂ ಪ್ರಿಯರು. ಆದರೆ ಎಲ್ಲರೂ ಇವನನ್ನು ಪ್ರೀತಿಸುವದಿಲ್ಲ. ಇವನು ಎಲ್ಲರಿಗೆ ಪ್ರಿಯನು. ಇವನಿಗೆ ಎಲ್ಲರೂ ಪ್ರಿಯರಲ್ಲ. ಎಂದು ಅಭಿಪ್ರಾಯ.

**ತಸ್ಯ ಚಾಯಂ ಮಹಾಭಾಗಶ್ಚಿತ್ರಕೇತುಃ ಪ್ರಿಯೋಽನುಗಃ ।**
**ಸರ್ವತ್ರ ಸಮದೃಕ್ ಶಾಂತೋ ಹ್ಯಹಂ ಚೈವಾಚ್ಯುತಪ್ರಿಯಃ ॥೩೪॥**

**ಅಯಂ** ಈ **ಮಹಾಭಾಗಃ** ಪುಣ್ಯಶಾಲಿಯಾದ **ಚಿತ್ರಕೇತುಃ** ಚಿತ್ರಕೇತುವು **ತಸ್ಯ** ಮಹಿಮೋಪೇತನಾದ ಶ್ರೀಹರಿಯ **ಪ್ರಿಯಃ** ಪ್ರೀತಿಪಾತ್ರನಾದ **ಅನುಗಃ** ಸೇವಕನು **ಸರ್ವತ್ರ** ಎಲ್ಲ ವಿಷಯದಲ್ಲಿಯೂ **ಸಮದೃಕ್** ನಿರ್ದೋಷನಾದ ಶ್ರೀಹರಿಯೇ ಕಾರಣನೆಂದು ತಿಳಿದವನು. ಆದ್ದರಿಂದಲೇ **ಶಾಂತಃ** ಭಗವನ್ನಿಷ್ಠಬುದ್ಧಿಯುಳ್ಳವನು (ಶಾಂತನು ಅವನ ಶಮ ಶಾಂತತೆ ನಿನ್ನ ಅನುಭವಕ್ಕೆ ಬಂದಿದೆ ಎಂದು ತಿಳಿಸಲು ಈ ಮಾತು) **ಅಚ್ಯುತಪ್ರಿಯಃ** ಶ್ರೀಹರಿಯನ್ನು ಪ್ರೀತಿಸುವ **ಅಹಂ ಚ** ನಾನೂ ಕೂಡ **ಸಮದೃಕ್ ಶಾಂತಃ** ಎಂಬುದು **ಹಿ** ಶಾಸ್ತ್ರಸಿದ್ಧವಾಗಿದೆ. ಆದ್ದರಿಂದ ಇವನ ಮೇಲೆ ನಾನು ಕೋಪಮಾಡಲಿಲ್ಲವೆಂದು ಭಾವ. ॥೩೪॥

**ತಸ್ಮಾನ್ನ ವಿಸ್ಮಯಃ ಕಾರ್ಯಃ ಪುರುಷೇಷು ಮಹತ್ಸು ಚ ।**
**ಮಹಾಪುರುಷಭಕ್ತೇಷು ಶಾಂತೇಷು ಸಮದರ್ಶಿಷು ॥೩೫॥**

**ತಸ್ಮಾತ್** ಆದ್ದರಿಂದಲೇ **ಮಹಾಪುರುಷಭಕ್ತೇಷು** ಶ್ರೀಹರಿಯ ಭಕ್ತರಾದ ಆದ್ದರಿಂದ **ಮಹತ್ಸು ಪುರುಷೇಷು** ಉತ್ತಮಜೀವರಲ್ಲಿ **ಶಾಂತೇಷು** ಶಾಂತರಲ್ಲಿ **ಸಮದರ್ಶಿಷು** ಸಮದರ್ಶಿಗಳಲ್ಲಿ **ವಿಸ್ಮಯಃ ನ ಕಾರ್ಯಃ** ಶಾಪಕೊಟ್ಟರೂ ಸಿಟ್ಟಾಗಲಿಲ್ಲವೆಂದು ಆಶ್ಚರ್ಯಪಡಬೇಕಿಲ್ಲವೆಂದು ಹೇಳಿದರು. ॥೩೫॥

**ಶ್ರೀಶುಕ ಉವಾಚ -**

**ಇತಿ ಶ್ರುತ್ವಾ ಭಗವತಃ ಶಿವಸ್ಯೋಮಾಭಿಭಾಷಿತಮ್ ।**
**ಬಭೂವ ಶಾಂತಧೀ ರಾಜನ್ ದೇವೀ ವಿಗತವಿಸ್ಮಯಾ ॥೩೬॥**

**ರಾಜನ್** ಪರೀಕ್ಷಿತನೇ **ಭಗವತಃ ಶಿವಸ್ಯ** ಪೂಜ್ಯರಾದ ರುದ್ರದೇವರ **ಇತಿ** ಮೇಲೆ ಹೇಳಿದ **ಅಭಿಭಾಷಿತಂ** ಪ್ರಮೇಯಪೂರ್ಣವಾದ ಮಾತನ್ನು **ಶ್ರುತ್ವಾ** ಕೇಳಿ **ದೇವಿ ಉಮಾ** ಉಮಾದೇವಿಯು **ವಿಗತವಿಸ್ಮಯಾ** ಆಶ್ಚರ್ಯರಹಿತಳಾಗಿ **ಶಾಂತಧೀಃ** ಸಮಾಧಾನ ಬುದ್ಧಿಯುಳ್ಳವಳು ಇವೆಲ್ಲದಕ್ಕೂ ಕಾರಣನಾದ ಶ್ರೀಹರಿಯನ್ನು ಧ್ಯಾನಿಸುವವಳಾಗಿ **ಬಭೂವ** ಆದಳು. ॥೩೬॥

**ಇತಿ ಭಾಗವತೋ ದೇವ್ಯಾಃ ಪ್ರತಿಶಪ್ತುಮಲಂ ಕ್ಷಮಃ ।**
**ಮೂರ್ಧ್ನಾ ಸಂಜಗೃಹೇ ಶಾಪಮೇತಾವತ್ಸಾಧುಲಕ್ಷಣಮ್ ॥೩೭॥**

'ಅಥ ಪ್ರಸಾದಯೇ ನ ತ್ವಾಂ ಶಾಪಮೋಕ್ಷಾಯ ಭಾಮಿನಿ' ಎಂಬುದಕ್ಕೆ ನಾಲ್ಕು ರೀತಿಯಲ್ಲಿ ಅರ್ಥ ಹೇಳಲು ಬರುವದು.

೧. ಶಾಪವು ಇಷ್ಟವಾದುದರಿಂದ ಅದರ ಬಿಡುಗಡೆಗಾಗಿ ಪ್ರಸನ್ನೀಕರಿಸಿಕೊಳ್ಳ-ದಿರುವದು, ೨. ಶಾಪವು ಅನಿಷ್ಟವಾದರೂ ಅನಿರೀಕ್ಷಿತವಾಗಿ ಬಂದಿದೆಯಾದ್ದರಿಂದ ಅಭಿಮತವೇ ಎಂದಿಟ್ಟುಕೊಂಡು, ೩. ಶಾಪವನ್ನು ಪರಿಹರಿಸಿಕೊಳ್ಳಲು ಸಮರ್ಥನೆಂದು, ೪. ಪ್ರತಿಯಾಗಿ ಶಾಪಕೊಡಲು ಸಮರ್ಥನೆಂದು ತಿಳಿದುಕೊಂಡು. ಈ ನಾಲ್ಕರಲ್ಲಿ ಇವನು ಅಂಗೀಕರಿಸಿದ ಪಕ್ಷವಾವುದು ಎಂದರೆ ಹೇಳುತ್ತಾರೆ.

**ದೇವ್ಯಾಃ** ಪಾರ್ವತಿದೇವಿಗೆ **ಪ್ರತಿಶಪ್ತುಂ** ಪ್ರತಿಯಾಗಿ ಶಾಪ ಕೊಡಲು **ಅಲಂತಮಃ** ಅತ್ಯಂತ ಸಮರ್ಥನಾದರೂ ಅತಿಶಯೇನ ಅಲಂ ಅಲಂತಮಃ ಎಂದು ವಿಗ್ರಹ **ಭಾಗವತಃ** ಭಗವದ್ಭಕ್ತನಾದ ಚಿತ್ರಕೇತುವು **ಇತಿ ಶಾಪಂ** ಪಾರ್ವತಿಯು ಕೊಟ್ಟ ಮೇಲೆ ಹೇಳಿದ ಶಾಪವನ್ನು **ಮೂರ್ಧ್ನಾ ಸಂಜಗೃಹೇ** ತಲೆ ಬಾಗಿ ಸ್ವೀಕರಿಸಿದನು **ಏತಾವತ್** ಇದು **ಸಾಧುಲಕ್ಷಣಂ** ಭಗವದ್ಭಕ್ತರ ಲಕ್ಷಣವು. 'ಮೂರ್ಧ್ನಾ ಸಂಜಗೃಹೇ' ಎಂಬುದರಿಂದ ಎರಡನೆಯ ಪಕ್ಷವೇ ಅಭಿಮತವೆಂದು ತಿಳಿಸುವರು. ನಮ್ರತೆಯು ಸಾಧುಗಳ ಲಕ್ಷಣ. ಇವನೂ ಸಾಧುಗಳಲ್ಲಿ ಒಬ್ಬ. ಆದ್ದರಿಂದ ನಾಲ್ಕನೇ ಪಕ್ಷವನ್ನೇ ಅಂಗೀಕರಿಸಲು ಸಾಧ್ಯವಿಲ್ಲ. ದೇವತೆಗಳು ಇತರರಿಗೆ ಶಾಪಕೊಡಲು ಶಕ್ತರು ಎಂದು ಪ್ರಮಾಣವಿರುವದು. ಆದ್ದರಿಂದ 'ಪ್ರತಿಶಪ್ತುಮಲಂತಮಃ' ಎಂಬುದಕ್ಕೆ ಚಿತ್ರಕೇತುವು ಪಾರ್ವತಿಗಿಂತ ಅಧಿಕನೆಂದು ಅಭಿಪ್ರಾಯವಲ್ಲ. ಮತ್ತೇನೆಂದರೆ ಕೆಳಗಿನವರೂ ಉತ್ತಮರಿಗೆ ಶಾಪಕೊಡುವ ಸಂಭವವಿದೆ ಎಂಬ ಅಭಿಪ್ರಾಯದಿಂದ ಹೇಳಿದ ಮಾತು.

ಇಲ್ಲಿ ಚಿತ್ರಕೇತುವಿಗೆ ಲೋಕೇಶ್ವರಿಯಾದ ಪಾರ್ವತಿಯ ಸಾಮರ್ಥ್ಯ ಇನ್ನೂ ಹೆಚ್ಚು ಎಂದು ತೋರುವದು. ಆದ್ದರಿಂದ ಪ್ರಮಾಣದಿಂದ ನಿವಾರಿಸುವರು-

ತಾತ್ಪರ್ಯ

'ಪ್ರತಿಶಪ್ತುಮಲಂತಮಃ ।

ದೇವಾ ಏವ ತದನ್ಯೇಭ್ಯಃ ಶಕ್ತಾ ನಾಸ್ತ್ಯತ್ರ ಸಂಶಯಃ ।
ಅಶಕ್ತಾ ಅಪಿ ಶಕ್ತಾನಾಂ ಶಕ್ತಾಃ ಶಾಪಾದಿಷು ಸ್ಫುಟಮ್ ॥

ತಥಾಪ್ಯಶಕ್ತೈರ್ವಿಹಿತಾಃ ಶಾಪಾದ್ಯಾಃ ಶಕ್ತಿಮತ್ಸು ವೈ ।
ಅತ್ಯಲ್ಪಾಶ್ಚಾಲ್ಪಕಾಲಾಶ್ಚ ನ ಸಮ್ಯಕ್ ಪ್ರಭವಂತಿ ಚ ॥

**ತಸ್ಯ ಚಾಯಂ ಮಹಾಭಾಗಶ್ಚಿತ್ರಕೇತುಃ ಪ್ರಿಯೋಽನುಗಃ ।**
**ಸರ್ವತ್ರ ಸಮದೃಕ್ ಶಾಂತೋ ಹ್ಯಹಂ ಚೈವಾಚ್ಯುತಪ್ರಿಯಃ ॥೩೪॥**

**ಅಯಂ** ಈ **ಮಹಾಭಾಗಃ** ಪುಣ್ಯಶಾಲಿಯಾದ **ಚಿತ್ರಕೇತುಃ** ಚಿತ್ರಕೇತುವು **ತಸ್ಯ** ಮಹಿಮೋಪೇತನಾದ ಶ್ರೀಹರಿಯ **ಪ್ರಿಯಃ** ಪ್ರೀತಿಪಾತ್ರನಾದ **ಅನುಗಃ** ಸೇವಕನು **ಸರ್ವತ್ರ** ಎಲ್ಲ ವಿಷಯದಲ್ಲಿಯೂ **ಸಮದೃಕ್** ನಿರ್ದೋಷನಾದ ಶ್ರೀಹರಿಯೇ ಕಾರಣನೆಂದು ತಿಳಿದವನು. ಆದ್ದರಿಂದಲೇ **ಶಾಂತಃ** ಭಗವನ್ನಿಷ್ಠಬುದ್ಧಿಯುಳ್ಳವನು (ಶಾಂತನು ಅವನ ಶಮ ಶಾಂತತೆ ನಿನ್ನ ಅನುಭವಕ್ಕೆ ಬಂದಿದೆ ಎಂದು ತಿಳಿಸಲು ಈ ಮಾತು) **ಅಚ್ಯುತಪ್ರಿಯಃ** ಶ್ರೀಹರಿಯನ್ನು ಪ್ರೀತಿಸುವ **ಅಹಂ ಚ** ನಾನೂ ಕೂಡ **ಸಮದೃಕ್ ಶಾಂತಃ** ಎಂಬುದು **ಹಿ** ಶಾಸ್ತ್ರಸಿದ್ಧವಾಗಿದೆ. ಆದ್ದರಿಂದ ಇವನ ಮೇಲೆ ನಾನು ಕೋಪಮಾಡಲಿಲ್ಲವೆಂದು ಭಾವ. ॥೩೪॥

**ತಸ್ಮಾನ್ನ ವಿಸ್ಮಯಃ ಕಾರ್ಯಃ ಪುರುಷೇಷು ಮಹತ್ಸು ಚ ।**
**ಮಹಾಪುರುಷಭಕ್ತೇಷು ಶಾಂತೇಷು ಸಮದರ್ಶಿಷು ॥೩೫॥**

**ತಸ್ಮಾತ್** ಆದ್ದರಿಂದಲೇ **ಮಹಾಪುರುಷಭಕ್ತೇಷು** ಶ್ರೀಹರಿಯ ಭಕ್ತರಾದ ಆದ್ದರಿಂದ **ಮಹತ್ಸು ಪುರುಷೇಷು** ಉತ್ತಮಜೀವರಲ್ಲಿ **ಶಾಂತೇಷು** ಶಾಂತರಲ್ಲಿ **ಸಮದರ್ಶಿಷು** ಸಮದರ್ಶಿಗಳಲ್ಲಿ **ವಿಸ್ಮಯಃ ನ ಕಾರ್ಯಃ** ಶಾಪಕೊಟ್ಟರೂ ಸಿಟ್ಟಾಗಲಿಲ್ಲವೆಂದು ಆಶ್ಚರ್ಯಪಡಬೇಕಿಲ್ಲವೆಂದು ಹೇಳಿದರು. ॥೩೫॥

**ಶ್ರೀಶುಕ ಉವಾಚ -**

**ಇತಿ ಶ್ರುತ್ವಾ ಭಗವತಃ ಶಿವಸ್ಯೋಮಾಭಿಭಾಷಿತಮ್ ।**
**ಬಭೂವ ಶಾಂತಧೀ ರಾಜನ್ ದೇವೀ ವಿಗತವಿಸ್ಮಯಾ ॥೩೬॥**

**ರಾಜನ್** ಪರೀಕ್ಷಿತನೇ **ಭಗವತಃ ಶಿವಸ್ಯ** ಪೂಜ್ಯರಾದ ರುದ್ರದೇವರ **ಇತಿ** ಮೇಲೆ ಹೇಳಿದ **ಅಭಿಭಾಷಿತಂ** ಪ್ರಮೇಯಪೂರ್ಣವಾದ ಮಾತನ್ನು **ಶ್ರುತ್ವಾ** ಕೇಳಿ **ದೇವಿ ಉಮಾ** ಉಮಾದೇವಿಯು **ವಿಗತವಿಸ್ಮಯಾ** ಆಶ್ಚರ್ಯರಹಿತಳಾಗಿ **ಶಾಂತಧೀಃ** ಸಮಾಧಾನ ಬುದ್ಧಿಯುಳ್ಳವಳು ಇವೆಲ್ಲದಕ್ಕೂ ಕಾರಣನಾದ ಶ್ರೀಹರಿಯನ್ನು ಧ್ಯಾನಿಸುವವಳಾಗಿ **ಬಭೂವ** ಆದಳು. ॥೩೬॥

**ಇತಿ ಭಾಗವತೋ ದೇವ್ಯಾಃ ಪ್ರತಿಶಪ್ತುಮಲಂ ಕ್ಷಮಃ ।**
**ಮೂರ್ಧ್ನಾ ಸಂಜಗೃಹೇ ಶಾಪಮೇತಾವತ್ಸಾಧುಲಕ್ಷಣಮ್ ॥೩೭॥**

'ಅಥ ಪ್ರಸಾದಯೇ ನ ತ್ವಾಂ ಶಾಪಮೋಕ್ಷಾಯ ಭಾಮಿನಿ' ಎಂಬುದಕ್ಕೆ ನಾಲ್ಕು ರೀತಿಯಲ್ಲಿ ಅರ್ಥ ಹೇಳಲು ಬರುವದು.

೧. ಶಾಪವು ಇಷ್ಟವಾದುದರಿಂದ ಅದರ ಬಿಡುಗಡೆಗಾಗಿ ಪ್ರಸನ್ನೀಕರಿಸಿಕೊಳ್ಳ-ದಿರುವದು, ೨. ಶಾಪವು ಅನಿಷ್ಟವಾದರೂ ಅನಿರೀಕ್ಷಿತವಾಗಿ ಬಂದಿದೆಯಾದ್ದರಿಂದ ಅಭಿಮತವೇ ಎಂದಿಟ್ಟುಕೊಂಡು, ೩. ಶಾಪವನ್ನು ಪರಿಹರಿಸಿಕೊಳ್ಳಲು ಸಮರ್ಥನೆಂದು, ೪. ಪ್ರತಿಯಾಗಿ ಶಾಪಕೊಡಲು ಸಮರ್ಥನೆಂದು ತಿಳಿದುಕೊಂಡು. ಈ ನಾಲ್ಕರಲ್ಲಿ ಇವನು ಅಂಗೀಕರಿಸಿದ ಪಕ್ಷವಾವುದು ಎಂದರೆ ಹೇಳುತ್ತಾರೆ.

**ದೇವ್ಯಾಃ** ಪಾರ್ವತಿದೇವಿಗೆ **ಪ್ರತಿಶಪ್ತುಂ** ಪ್ರತಿಯಾಗಿ ಶಾಪ ಕೊಡಲು **ಅಲಂತಮಃ** ಅತ್ಯಂತ ಸಮರ್ಥನಾದರೂ ಅತಿಶಯೇನ ಅಲಂ ಅಲಂತಮಃ ಎಂದು ವಿಗ್ರಹ **ಭಾಗವತಃ** ಭಗವದ್ಭಕ್ತನಾದ ಚಿತ್ರಕೇತುವು **ಇತಿ ಶಾಪಂ** ಪಾರ್ವತಿಯು ಕೊಟ್ಟ ಮೇಲೆ ಹೇಳಿದ ಶಾಪವನ್ನು **ಮೂರ್ಧ್ನಾ ಸಂಜಗೃಹೇ** ತಲೆ ಬಾಗಿ ಸ್ವೀಕರಿಸಿದನು **ಏತಾವತ್** ಇದು **ಸಾಧುಲಕ್ಷಣಂ** ಭಗವದ್ಭಕ್ತರ ಲಕ್ಷಣವು. 'ಮೂರ್ಧ್ನಾ ಸಂಜಗೃಹೇ' ಎಂಬುದರಿಂದ ಎರಡನೆಯ ಪಕ್ಷವೇ ಅಭಿಮತವೆಂದು ತಿಳಿಸುವರು. ನಮ್ರತೆಯು ಸಾಧುಗಳ ಲಕ್ಷಣ. ಇವನೂ ಸಾಧುಗಳಲ್ಲಿ ಒಬ್ಬ. ಆದ್ದರಿಂದ ನಾಲ್ಕನೇ ಪಕ್ಷವನ್ನೇ ಅಂಗೀಕರಿಸಲು ಸಾಧ್ಯವಿಲ್ಲ. ದೇವತೆಗಳು ಇತರರಿಗೆ ಶಾಪಕೊಡಲು ಶಕ್ತರು ಎಂದು ಪ್ರಮಾಣವಿರುವದು. ಆದ್ದರಿಂದ 'ಪ್ರತಿಶಪ್ತುಮಲಂತಮಃ' ಎಂಬುದಕ್ಕೆ ಚಿತ್ರಕೇತುವು ಪಾರ್ವತಿಗಿಂತ ಅಧಿಕನೆಂದು ಅಭಿಪ್ರಾಯವಲ್ಲ. ಮತ್ತೇನೆಂದರೆ ಕೇಳಗಿನವರೂ ಉತ್ತಮರಿಗೆ ಶಾಪಕೊಡುವ ಸಂಭವವಿದೆ ಎಂಬ ಅಭಿಪ್ರಾಯದಿಂದ ಹೇಳಿದ ಮಾತು.

ಇಲ್ಲಿ ಚಿತ್ರಕೇತುವಿಗೆ ಲೋಕೇಶ್ವರಿಯಾದ ಪಾರ್ವತಿಯ ಸಾಮರ್ಥ್ಯ ಇನ್ನೂ ಹೆಚ್ಚು ಎಂದು ತೋರುವದು. ಆದ್ದರಿಂದ ಪ್ರಮಾಣದಿಂದ ನಿವಾರಿಸುವರು-

ತಾತ್ಪರ್ಯ

**'ಪ್ರತಿಶಪ್ತುಮಲಂತಮಃ ।**

**ದೇವಾ ಏವ ತದನ್ಯೇಭ್ಯಃ ಶಕ್ತಾ ನಾಸ್ತ್ಯತ್ರ ಸಂಶಯಃ ।**
**ಅಶಕ್ತಾ ಅಪಿ ಶಕ್ತಾನಾಂ ಶಕ್ತಾಃ ಶಾಪಾದಿಷು ಸ್ಫುಟಮ್ ॥**

**ತಥಾಪ್ಯಶಕ್ತೈರ್ವಿಹಿತಾಃ ಶಾಪಾದ್ಯಾಃ ಶಕ್ತಿಮತ್ಸು ವೈ ।**
**ಅತ್ಯಲ್ಪಾಶ್ಚಾಲ್ಪಕಾಲಾಶ್ಚ ನ ಸಮ್ಯಕ್ ಪ್ರಭವಂತಿ ಚ ॥**

ಯತ್ನೇನಾಪೋಹಿತುಂ ಶಕ್ಯಾ ಉತ್ತಮೈಸ್ತು ನ ಸಂಶಯಃ ।
ಉತ್ತಮೇಷು ಕೃತಾಃ ಶಾಪಾಃ ಕರ್ತೄಣಾಂ ಜ್ಞಾನಪುಣ್ಯಯೋಃ ॥

ನಿಃಶೇಷೇಣ ನಿಹಂತಾರಸ್ತದನುಗ್ರಹಮಂತರಾ ।
ಸದಾರಯೋರ್ಬ್ರಹ್ಮವಿಷ್ಣ್ವೋರ್ವರಶಾಪಾದಯೋಽಖಿಲಾಃ ।

ತದನ್ಯೇನ ಕೃತಾಃ ಸರ್ವೇ ನಿಷ್ಫಲಾ ಏವ ನಿಶ್ಚಯಾತ್ ।
ನಚಾಪ್ಯವಾಂತರಾಃ ಶಾಪಾಃ ಭವಂತ್ಯೇಷಾಂ ತು ಕುತ್ರಚಿತ್ ॥

ವರಾ ವಿಷ್ಣೋಃ ಶ್ರಿಯಶ್ಚ ಸ್ಯುರ್ಬ್ರಹ್ಮಣಶ್ಚ ಯಥಾಕ್ರಮಮ್ ।
ಉತ್ತಮೈರಧಮಾನಾಂ ತು ವರಾಃ ಶಾಪಾ ಯಥೋದಿತಮ್ ।
ಸಂಪೂರ್ಣಫಲದಾ ಏವ ನಾತ್ರ ಕಾರ್ಯಾ ವಿಚಾರಣಾ ॥ ಇತಿ ಸ್ಕಾಂದೇ ॥೩೭॥

ದೇವತೆಗಳೇ ಇತರರಿಗೆ ಶಾಪಕೊಡಲಿಕ್ಕೆ ಶಕ್ತರು. ಈ ವಿಷಯದಲ್ಲಿ ಸಂದೇಹವಿಲ್ಲ. ಅಶಕ್ತರಾದ (ಅಧಮರಾದ) ದೇವತೆಗಳು ಶಕ್ತರಾದ (ಉತ್ತಮರಾದ) ದೇವತೆಗಳಿಗೆ ಶಾಪಾದಿಗಳನ್ನು ಕೊಡಲು ಶಕ್ತರೇ ಆಗಿದ್ದಾರೆ. ಆದರೂ ಶಕ್ತಿಯುಳ್ಳವರಲ್ಲಿ ಅಶಕ್ತರು ಕೊಟ್ಟಿರತಕ್ಕ ಶಾಪಾದಿಗಳು ಅತ್ಯಲ್ಪಫಲ ಉಳ್ಳವುಗಳು. ಅಲ್ಪಕಾಲ ಉಳ್ಳವುಗಳೂ ಆಗುತ್ತವೆ. ಆದ್ದರಿಂದ ಚೆನ್ನಾಗಿ ಸಮರ್ಥಗಳಾಗುವುದಿಲ್ಲ. ಪ್ರಯತ್ನದಿಂದಲೇ ವಿಶೇಷವಾಗಿ ಉತ್ತಮರಿಗೆ ಅಧಮರ ಶಾಪಗಳು ನಿರಾಕರಿಸಲು ಶಕ್ಯಗಳಾಗಿವೆ. ಸಂದೇಹವಿಲ್ಲ. ಉತ್ತಮರಿಗೆ ಅಧಮರು ಕೊಟ್ಟಿರುವ ಶಾಪಗಳು ಸ್ವೋತ್ತಮರ ಅನುಗ್ರಹವಿಲ್ಲವಾದರೆ ಶಾಪಕೊಟ್ಟವರ ಜ್ಞಾನ-ಪುಣ್ಯಗಳನ್ನು ನಿಃಶೇಷವಾಗಿ ನಾಶಪಡಿಸುತ್ತವೆ. ಉತ್ತಮರು ಅಧಮರಿಗೆ ಅನುಗ್ರಹ ಮಾಡಿದರೆ ಶಾಪ ಕೊಟ್ಟವರ ಜ್ಞಾನ-ಪುಣ್ಯಗಳು ನಾಶವಾಗುವುದಿಲ್ಲ. ಸಪತ್ನೀಕರಾದ ಬ್ರಹ್ಮ-ವಿಷ್ಣುಗಳಿಗೆ ವಿಷ್ಣ್ವಾದಿಗಳಿಂದ ಇತರರು ಕೊಟ್ಟಿರುವ ಎಲ್ಲ ವರ-ಶಾಪಾದಿಗಳು ನಿಶ್ಚಯವಾಗಿಯೂ ನಿಷ್ಫಲಗಳೇ ಆಗುವವು. ವಿಷ್ಣ್ವಾದಿಗಳಿಗೆ ಐಹಿಕ ಶಾಪಾದಿಗಳೂ ಕೂಡ ಯಾವ ದೇಶದಲ್ಲಿಯೂ ಯಾವ ಕಾಲದಲ್ಲಿಯೂ ಸಫಲವಾಗುವುದೇ ಇಲ್ಲ. ಶ್ರೀವಿಷ್ಣುವಿನಿಂದಲೂ, ಲಕ್ಷ್ಮೀದೇವಿಯಿಂದಲೂ ಚತುರ್ಮುಖನಿಗೆ ಕೊಟ್ಟ ಯಾವ ವರಗಳೂ ಹಾಗೆಯೇ ವಿಷ್ಣು ಲಕ್ಷ್ಮೀದೇವಿ, ಚತುರ್ಮುಖ ಇವರಿಂದ ಶೇಷಾದಿಗಳಿಗೆ ಕೊಟ್ಟ ವರಗಳೂ ಶಾಸ್ತ್ರದಲ್ಲಿ ಹೇಳಿದ ಪ್ರಕಾರ ಸಂಪೂರ್ಣ ಫಲದಾಯಕಗಳು. ಹೀಗೆ ಕ್ರಮಾನುಸಾರವಾಗಿಯೇ ಉತ್ತಮರು ಅಧಮರಿಗೆ ಕೊಟ್ಟ ವರಗಳೂ ಶಾಪಗಳೂ ಶಾಸ್ತ್ರದಲ್ಲಿ ಹೇಳಿದ ಪ್ರಕಾರ ಸಂಪೂರ್ಣ ಫಲದಾಯಕಗಳು. ಈ ವಿಷಯದಲ್ಲಿ

ಸಂದೇಹವಿಲ್ಲ ಎಂದು ಸ್ಕಾಂದ ಪುರಾಣದಲ್ಲಿದೆ. ಇಲ್ಲಿ ಸದಾರಯೋಃ ಬ್ರಹ್ಮವಿಷ್ಣ್ವೋಃ ಎಂಬಲ್ಲಿ ಬ್ರಹ್ಮ-ಸರಸ್ವತೀ ಸಮರಾದ ಮಾರುತಿ-ಭಾರತಿಯರನ್ನು ತೆಗೆದು ಕೊಂಡಂತಾಯಿತು.

'ನ ಚಾಪ್ಯವಾಂತರಾಃ ಶಾಪಾ ಭವಂತ್ಯೇಷಾಂ ತು ಕುತ್ರಚಿತ್' ಎಂಬುದಕ್ಕೆ ಮಹಾಹಾನಿ ಇಲ್ಲದಿದ್ದರೂ ಸ್ವಲ್ಪ ಐಹಿಕ ದೈಹಿಕ ಶ್ರಮಾದಿಗಳಾಗಬಹುದು ಎಂದರೆ ಇಲ್ಲವೆಂದು ಹೇಳುವರು ಎಂದಾಗಲಿ ಅಥವಾ ಮೂಲರೂಪದಲ್ಲಿ ಶಾಪ ವಿಫಲವಾಗಲಿ ಅವತಾರಗಳಲ್ಲಿ ವಿಫಲವಾಗಲಾರವು ಎಂದಲ್ಲ ಎಂದೂ ಹೇಳುವರು. ಅವಾಂತರಾಃ ಅವತಾರಗಳಲ್ಲಿ ಕೊಟ್ಟ ಶಾಪಗಳೂ ವಿಫಲವೇ ಆಗಿವೆ. ಹೀಗೆ ವಿಶೇಷಾರ್ಥ ತಿಳಿಯುವದು. ॥೩೭॥

ಇವನು ಎಲ್ಲಿ ಜನಿಸಿದನೆಂದು ಹೇಳುವರು-

**ಜಜ್ಞೇ ತ್ವಷ್ಟುರ್ದಕ್ಷಿಣಾಗ್ನೌ ದಾನವೀಂ ಯೋನಿಮಾಶ್ರಿತಃ ।**
**ವೃತ್ರ ಇತ್ಯಭಿವಿಖ್ಯಾತೋ ಜ್ಞಾನವಿಜ್ಞಾನಸಂಯುತಃ ॥೩೮॥**

**ಸಃ** ಚಿತ್ರಕೇತುವು **ಜ್ಞಾನವಿಜ್ಞಾನಸಂಯುತಃ** ಜ್ಞಾನ-ವಿಜ್ಞಾನಗಳಿಂದ ಕೂಡಿದವನಾಗಿ **ವೃತ್ರ ಇತಿ ಅಭಿವಿಖ್ಯಾತಃ** ವೃತ್ರ ಎಂಬ ಹೆಸರಿನಿಂದ ಪ್ರಸಿದ್ಧನಾಗಿ **ತ್ವಷ್ಟುಃ** ತ್ವಷ್ಟ್ರುವಿನ ಆಭಿಚಾರಿಕ ಯಾಗದಲ್ಲಿ **ದಕ್ಷಿಣಾಗ್ನೌ** ದಕ್ಷಿಣವೆಂಬ ಅಗ್ನಿಯಲ್ಲಿ **ದಾನವೀಂ ಯೋನಿಂ** ಅಸುರ ಜನ್ಮವನ್ನು **ಆಶ್ರಿತಃ ಚ** ಆಶ್ರಯಿಸಿ **ಜಜ್ಞೇ** ಹುಟ್ಟಿದನು.

ಯದ್ಯಪಿ ತ್ವಷ್ಟಾ ದಾನವನಲ್ಲ. ಆದರೂ ಅವನ ಹೆಂಡತಿಯೇನೊ ದಾನವಿ ನಿಜ. ಆದರೂ ಅವಳಿಂದ ಇವನು ಹುಟ್ಟಿರುವದರಿಂದ ಅವಳ ಮಗನಾದ್ದರಿಂದ ದಾನವನೆನ್ನಲಾಗದು. ಆದರೂ ಪಾರ್ವತಿಯ ಶಾಪಮಾಹಾತ್ಮ್ಯದಿಂದ ಅಸುರ ಹೊರತು ಅಸುರವಂಶಜನಲ್ಲ. ಅವನ ಆಚರಣದಿಂದ ಜ್ಞಾನ-ವಿಜ್ಞಾನಗಳು ಅವನಿಗಿದ್ದವೆಂದು ತಿಳಿಯುವದು. ॥೩೮॥

**ಏತತ್ತೇ ಸರ್ವಮಾಖ್ಯಾತಂ ಯನ್ಮಾಂ ತ್ವಂ ಪರಿಪೃಚ್ಛಸಿ ।**
**ವೃತ್ರಸ್ಯಾಸುರಜಾತೇಶ್ಚ ಕಾರಣಂ ಭಗವನ್ಮತೇಃ ॥೩೯॥**

**ವೃತ್ರಸ್ಯ** ವೃತ್ರನಿಗೆ **ಅಸುರಜಾತೇಃ** ಅಸುರ ಸ್ವಭಾವ ಬರಲು ಮತ್ತು **ಭಗವನ್ಮತೇಃ** ಭಗವಂತನ ಜ್ಞಾನವಿರುವದಕ್ಕೂ **ಕಾರಣಂ** ಕಾರಣವನ್ನು **ತ್ವಂ** ನೀನು **ಮಾಂ** ನನ್ನನ್ನು

**ಪರಿಪೃಚ್ಛಸಿ** ಕೇಳಿದೆಯೋ **ಏತತ್ಸರ್ವಂ** ಅದೆಲ್ಲವನ್ನೂ **ತೇ** ನಿನಗೆ **ಮಯಾ** ನನ್ನಿಂದ **ಆಖ್ಯಾತಂ** ಹೇಳಲ್ಪಟ್ಟಿತು. ಅಸುರ ಜಾತಿಯವನಿಗೆ ಭಗವನ್ಮತಿ ಹೇಗೆ ಅಥವಾ ಭಗವನ್ಮತಿಯುಳ್ಳವಗೆ ಅಸುರ ಜಾತಿ ಹೇಗೆ ಎಂದೂ ಅನ್ವಯಾರ್ಥ ಮಾಡಬಹುದು. ।।೩೯।।

**ಇತಿಹಾಸಮಿಮಂ ಪುಣ್ಯಂ ಚಿತ್ರಕೇತೋರ್ಮಹಾತ್ಮನಃ ।**
**ಮಾಹಾತ್ಮ್ಯಂ ವಿಷ್ಣುಭಕ್ತಾನಾಂ ಶ್ರುತ್ವಾ ಬಂಧಾದ್ವಿಮುಚ್ಯತೇ ।।೪೦।।**

**ವಿಷ್ಣುಭಕ್ತಾನಾಂ** ಶ್ರೀಹರಿಯ ಭಕ್ತರಾದ ರುದ್ರ-ರುದ್ರಾಣೀ, ನಾರದ-ಅಂಗಿರಸರ **ಮಾಹಾತ್ಮ್ಯಂ** ಮಹಿಮೆಯುಳ್ಳ ಅಥವಾ ಮಹಿಮೆಯನ್ನು ಪ್ರತಿಪಾದಿಸುವ **ಮಹಾತ್ಮನಃ ಚಿತ್ರಕೇತೋಃ** ಭಗವದ್ಭಕ್ತನಾದ ಚಿತ್ರಕೇತುವಿನ **ಇಮಂ ಇತಿಹಾಸಂ** ಈ ಪವಿತ್ರಕರ ಇತಿಹಾಸವನ್ನು **ಶ್ರುತ್ವಾ** ಕೇಳಿ ಅಧಿಕಾರಿಯು **ಬಂಧಾತ್** ಬಂಧನದಿಂದ **ವಿಮುಚ್ಯತೇ** ಮುಕ್ತನಾಗುವನು. ।।೪೦।।

**ಯ ಏತತ್ ಪ್ರಾತರುತ್ಥಾಯ ಶ್ರದ್ಧಯಾ ವಾಗ್ಯತಃ ಪಠೇತ್ ।**
**ಇತಿಹಾಸಂ ಹರಿಂ ಸ್ಮೃತ್ವಾ ಸ ಯಾತಿ ಪರಮಾಂ ಗತಿಮ್ ।।೪೧।।**

।। ಇತಿ ಶ್ರೀಮದ್ಭಾಗವತೇ ಷಷ್ಠಸ್ಕಂಧೇ ಸಪ್ತದಶೋಽಧ್ಯಾಯಃ ।।

**ಯಃ** ಯಾವನು **ಪ್ರಾತಃ** ಬೆಳಿಗ್ಗೆ **ಉತ್ಥಾಯ** ಎದ್ದು **ಹರಿಂ ಸ್ಮೃತ್ವಾ** ಶ್ರೀಹರಿಯನ್ನು ಸ್ಮರಿಸಿ **ವಾಗ್ಯತಃ** ಮೌನದಿಂದ **ಶ್ರದ್ಧಯಾ** ಶ್ರದ್ಧೆಯಿಂದ **ಏತತ್ ಇತಿಹಾಸಂ** ಈ ಇತಿಹಾಸವನ್ನು **ಪಠೇತ್** ಪಠಿಸುವನೋ **ಸಃ** ಅವನು **ಹರಿಂ ಸ್ಮೃತ್ವಾ** ಶ್ರೀಹರಿಯ ಸ್ಮರಣೆಯನ್ನು ಹೊಂದಿ **ಪರಮಾಂ ಗತಿಂ** ಪರಮಪುರುಷಾರ್ಥವಾದ ಮೋಕ್ಷವನ್ನು **ಯಾತಿ** ಹೊಂದುವನು. ಅಪರೋಕ್ಷಜ್ಞಾನ ಪಡೆದು ಮುಕ್ತನಾಗುವನು. ಕೇವಲ ಬೇಡಿ ಮುಂತಾದ ಬಂಧನದಿಂದಷ್ಟೇ ಅಲ್ಲವೆಂದು ಭಾವ. ।।೪೧।।

ಇಲ್ಲಿಗೆ ಹದಿನೇಳನೇ ಅಧ್ಯಾಯವು ಮುಗಿಯಿತು

★★★★★




# ಅಥ ಶ್ರೀಮದ್ಭಾಗವತೇ - ಷಷ್ಠಸ್ಕಂಧೇ

# ಅಷ್ಟಾದಶೋಽಧ್ಯಾಯಃ

**ಅಧ್ಯಾಯಸಾರ**

ಶುಕಾಚಾರ್ಯರು ಹೇಳಿದರು. ಕಶ್ಯಪರಿಂದ ದಿತಿಯಲ್ಲಿ ನಲವತ್ತೊಂಭತ್ತು ಮರುತ್ತುಗಳು ಮಕ್ಕಳಾದರು. ಅವರೆಲ್ಲರೂ ಸಹೋದರಭಾವದಿಂದ ಇಂದ್ರನಿಗೆ ಸಹಾಯಕರಾದರು.

ರಾಜ ಪ್ರಶ್ನೆ ಮಾಡಿದ. ಗುರುಗಳೇ ! ಆ ಮರುತ್ತುಗಳು ಸ್ವಾಭಾವಿಕವಾದ ಆಸುರಭಾವವನ್ನು ಪರಿತ್ಯಜಿಸಿ ಹೇಗೆ ದೇವತೆಗಳಾದರು. ಈ ವಿಷಯವನ್ನು ಕೇಳಲು ನಾವೆಲ್ಲ ತವಕದಿಂದ ಇದ್ದೇವೆ. ಆದ್ದರಿಂದ ಆ ಇತಿಹಾಸವನ್ನು ಉಪದೇಶ ಮಾಡಬೇಕು.

ಶುಕಾಚಾರ್ಯರು ಹೇಳಿದರು. ಇಂದ್ರನ ಪ್ರಾರ್ಥನೆಯನ್ನು ಆಲಿಸಿ ವಿಷ್ಣುವು ದಿತಿಯ ಮಕ್ಕಳನ್ನು ಸಂಹರಿಸಿದ. ಮಕ್ಕಳನ್ನು ಕಳೆದುಕೊಂಡ ದಿತಿದೇವಿಯು ಶೋಕದಿಂದ ಪರಿತಪ್ತಳಾಗಿ ಆಲೋಚಿಸಿದಳು. ನನ್ನ ಮಕ್ಕಳ ಸಂಹಾರಕ್ಕೆ ಕಾರಣನಾದ ಇಂದ್ರನ ಸಂಹಾರವಾಗಬೇಕು. ಆದರಿಂದಲೇ ನನಗೆ ಸುಖ. ಈ ಅಭಿಪ್ರಾಯದಿಂದಲೇ ಪತಿಯಾದ ಕಶ್ಯಪರ ಸೇವೆಯನ್ನು ನಿಷ್ಠೆಯಿಂದ ಮಾಡಿದಳು. ದಿತಿಯ ಸೇವೆಯಿಂದ ಪರಿತುಷ್ಟರಾದ ಕಶ್ಯಪರು ಹೇಳಿದರು.

ಪ್ರಿಯೇ ! ನಿನ್ನ ಸೇವೆಯಿಂದ ನಾನು ಸಂತುಷ್ಟನಾಗಿದ್ದೇನೆ. ಪತಿಯು ಪ್ರೀತನಾದಾಗ ಸ್ತ್ರೀಯರಿಗೆ ದುರ್ಲಭವಾದದ್ದು ಯಾವುದೂ ಇಲ್ಲ. ಸ್ತ್ರೀಯರು

ಪತಿಯಲ್ಲಿಯೇ ದೇವರ ಆರಾಧನೆಯನ್ನು ಮಾಡಬೇಕು. ಪತಿಯ ಪ್ರೀತಿಯಿಂದ ಪರಮಾತ್ಮನು ಪ್ರೀತನಾಗುತ್ತಾನೆ. ನಿನ್ನ ಅಭಿಲಾಷೆ ಏನಾದರೂ ಇದ್ದರೇ ಹೇಳು. ಅದನ್ನು ನಾನು ಪೂರ್ಣ ಮಾಡುತ್ತೇನೆ.

ದಿತಿಯು ಹೇಳಿದಳು. ಇಂದ್ರನಿಂದಲೇ ನನ್ನ ಮಕ್ಕಳೆಲ್ಲ ಮೃತರಾಗಿದ್ದಾರೆ. ಆದ್ದರಿಂದ ಇಂದ್ರನನ್ನು ಸಂಹರಿಸುವ ಮಗ ನನಗಾಗಬೇಕು. ಇದೇ ನನ್ನ ಅಭಿಲಾಷೆ.

ದಿತಿಯ ಮಾತನ್ನು ಕೇಳಿ ಕಶ್ಯಪರು ಶೋಕಗ್ರಸ್ತರಾದರು. ಸ್ತ್ರೀಯರ ಮಾತುಗಳು ಅತಿ ಕೋಮಲವಾಗಿರುತ್ತವೆ. ಆದರೆ ಹೃದಯ ಮಾತ್ರ ಮಹಾಕಠೋರವಾಗಿರುತ್ತದೆ. ಆಗಲಿ. ನಾನು ಮಾತು ಕೊಟ್ಟಾಗಿದೆ. ನನ್ನ ಮಾತು ಸುಳ್ಳಾಗಬಾರದು. ಇಂದ್ರನೂ ಸಾಯಬಾರದು. ಅದಕ್ಕಾಗಿ ಉಪಾಯವನ್ನು ಯೋಚಿಸಿದರು. ಹೇಳಿದರು.

ಪ್ರಿಯೇ ! ನೀನು ಒಂದು ವರ್ಷದ ವರೆಗೆ ವ್ರತವನ್ನು ಮಾಡಬೇಕು. ಈ ವ್ರತ ಸಾಂಗವಾಗಿ ಪರಿಪೂರ್ಣವಾದರೆ ಇಂದ್ರಸಂಹಾರಕನಾದ ಮಗ ನಿನಗಾಗುತ್ತಾನೆ. ವ್ರತದಲ್ಲಿ ಏನಾದರೂ ಲೋಪವಾದರೆ ಇಂದ್ರನಿಗೆ ಬಂಧುವಾದ ಮಗನಾಗುತ್ತಾನೆ.

ದಿತಿಯು ಹೇಳಿದಳು. ಆಗಲಿ. ನಾನು ವರ್ಷವಿಡೀ ನಿಷ್ಠೆಯಿಂದ ವ್ರತವನ್ನು ಮಾಡುತ್ತೇನೆ. ಆ ವ್ರತದ ಕರ್ತವ್ಯಾಕರ್ತವ್ಯಗಳನ್ನು ನನಗೆ ಉಪದೇಶಿಸಿರಿ.

ಕಶ್ಯಪರು ನಿಯಮಗಳನ್ನು ಹೇಳಿದರು.

೧. ಯಾವ ಪ್ರಾಣಿಗಳನ್ನೂ ಹಿಂಸೆ ಮಾಡಬಾರದು. ೨. ಯಾರ ಮೇಲೂ ಆಕ್ರೋಶ ಮಾಡಬಾರದು. ೩. ಸುಳ್ಳನ್ನು ಹೇಳಬಾರದು. ೪. ಉಗುರುಗಳನ್ನು ಕೂದಲನ್ನು ಕತ್ತಿರಿಸಬಾರದು. ೫. ಅಶುಭವಾದ ತಲೆಬುರುಡೆ-ಮೂಳೆ ಮುಂತಾದವುಗಳನ್ನು ಮುಟ್ಟಬಾರದು. ೬. ನೀರಿನಲ್ಲಿಳಿದು ಸ್ನಾನ ಮಾಡಬಾರದು. ೭. ಯಾರ ಮೇಲೂ ಸಿಟ್ಟಾಗಬಾರದು. ೮ ವಿಷ್ಣುದ್ವೇಷಿಗಳಾದ ದುಷ್ಟರೊಡನೆ ಮಾತನಾಡಬಾರದು. ೯. ಯಾವ ಕಾಲದಲ್ಲಿಯೂ ಒಗೆಯದಿರುವ ಬಟ್ಟೆಯನ್ನು ಉಡಬಾರದು. ೧೦ ಮತ್ತೊಬ್ಬರು ಹಾಕಿಕೊಂಡ ಮಾಲೆಯನ್ನು ಧರಿಸಬಾರದು. ೧೧. ಒಂದು ಸಲ ತಾನೇ ಧರಿಸಿದ ಮಾಲೆಯನ್ನು ಧರಿಸಬಾರದು.

೧೨. ಪತಿವ್ಯತಿರಿಕ್ತರ ಎಂಜಲನ್ನು ಉಣ್ಣಬಾರದು. ೧೩. ಭದ್ರಕಾಳಿ ಮುಂತಾದ ಶಕ್ತಿದೇವತೆಗಳಿಗೆ ಅಥವಾ ಸಪ್ತಮಾತೃಗಳಿಗೆ ನಿವೇದಿತವಾದುದನ್ನು ತಿನ್ನಬಾರದು. ೧೪




ಮಾಂಸ ಸಹಿತವಾದ ಇರುವೆಯಿಂದ ಕೂಡಿದ ಪದಾರ್ಥವನ್ನು, ಇಲಿಯು ತಿಂದಿರುವ ಪದಾರ್ಥವನ್ನು, ನಿಂಬೆಹಣ್ಣಿನಿಂದ ಕೂಡಿದ್ದನ್ನು ತಿನ್ನಬಾರದು. ೧೫ ಶೂದ್ರರು ತಂದದ್ದನ್ನು ಅವರು ನೋಡಿದ್ದನ್ನು, ಧರ್ಮಭ್ರಷ್ಟರು, ಕರ್ಮಭ್ರಷ್ಟರು ತಂದುದನ್ನು ತಿನ್ನಬಾರದು. ೧೬. ರಜಸ್ವಲೆಯು ನೋಡಿದ ಆಹಾರವನ್ನು ತಿನ್ನಬಾರದು ನೀರನ್ನು ಬೊಗಸೆಯಿಂದ ಕುಡಿಯಲೇ ಬಾರದು.

೧೭ ಎಂಜಲು ಕೈಯಲ್ಲಿ ಹೊರಗೆ ಹೋಗಬಾರದು. ೧೮ ನೀರಿನಿಂದ ಶುದ್ಧಿ ಮಾಡಿಕೊಳ್ಳದೇ ಹೊರಗೆ ಹೋಗಬಾರದು. ೧೯ ಬೆಳಗಿನ, ಸಾಯಂಕಾಲದ ಸಂಧ್ಯಾಕಾಲಗಳಲ್ಲಿ ಹೊರಗೆ ಹೋಗಬಾರದು. ೨೦. ತಲೆಗೂದಲು ಹರವಿಕೊಂಡು ಹೊರಗೆ ಹೋಗಬಾರದು. ೨೧ ಅಲಂಕಾರ ಮಾಡಿಕೊಳ್ಳದೇ ಹೊರಗೆ ಹೋಗಬಾರದು. **22.** ಮಾತು ಹಿಡಿತದಲ್ಲಿಲ್ಲದೇ ಹೋಗಬಾರದು. ೨೩ ಮೇಲೆ ಹೊದ್ದು ಕೊಳ್ಳದೇ ಹೊರಗೆ ಹೋಗಬಾರದು.

೨೪ ಕಾಲುಗಳನ್ನು ತೊಳೆದುಕೊಳ್ಳದೇ ಮಲಗಬಾರದು. ೨೫. ವಿನಯವಿಲ್ಲದೇ ಮಲಗಬಾರದು. ೨೬ ಒದ್ದೆ ಕಾಲಿನಲ್ಲಿ ಮಲಗಬಾರದು. ೨೭ ಉತ್ತರಕ್ಕೆ ತಲೆಯಿಟ್ಟು ಮಲಗಬಾರದು. ೨೮ ಪಶ್ಚಿಮಕ್ಕೆ ತಲೆಯಿಟ್ಟು ಮಲಗಬಾರದು. ೨೯. ಗಂಡನ ಹೊರತು ಮತ್ತೊಬ್ಬರ ಜೊತೆಗೆ ಮಲಗಬಾರದು. ೩೦ ಬೆತ್ತಲೆಯಾಗಿ ಮಲಗಬಾರದು. ೩೧. ಸಂಧ್ಯಾಕಾಲಗಳಲ್ಲಿ ಮಲಗಬಾರದು. ಹೀಗೆ ಈ ಮುವತ್ತೊಂದು ನಿಯಮಗಳನ್ನು ಪ್ರತಿನಿತ್ಯವೂ ಪಾಲಿಸಬೇಕು.

ಪ್ರತಿದಿನವೂ ಒಗೆದ ಬಟ್ಟೆ ಉಟ್ಟು ಶುದ್ಧಳಾಗಿ ಅರಿಶಿನ-ಕುಂಕುಮ ಮುಂತಾದ ಎಲ್ಲ ಮಂಗಲದ್ರವ್ಯಗಳಿಂದ ಕೂಡಿಕೊಂಡು ವಾದ್ಯಘೋಷಪುರಸ್ಸರಳಾಗಿ ಬೆಳಗಿನ ಊಟಕ್ಕೆ ಮೊದಲು ಆಕಳನ್ನು ಮತ್ತು ಬ್ರಾಹ್ಮಣರನ್ನು, ಲಕ್ಷ್ಮಿಯನ್ನು, ಶ್ರೀಹರಿಯನ್ನು ಪೂಜಿಸಬೇಕು.

ಹೂವಿನ ಹಾರ, ಗಂಧ, ಉಪಹಾರ ಮತ್ತು ಆಭರಣಗಳಿಂದ ಬಳೆಗಳಿಂದ ಮುತ್ತೈದೆಯರಾದ ಸ್ತ್ರೀಯರನ್ನು ಪೂಜಿಸಬೇಕು. ಗಂಡನನ್ನು ಪೂಜಿಸಬೇಕು. ಪತ್ಯಂತರ್ಯಾಮಿಯಾದ ಪರಮಾತ್ಮನನ್ನು ಸ್ತುತಿಸಬೇಕು. ಪತ್ಯಂತರ್ಯಾಮಿಯಾದ ಪರಮಾತ್ಮ ತನ್ನ ಹೃದಯಗುಹಾದಲ್ಲಿ ವಾಸವಾಗಿದ್ದಾನೆಂದು ಧ್ಯಾನ ಮಾಡಬೇಕು. ಇದು ಪುಂಸವನವ್ರತ. ಈ ವ್ರತದ ಆಚರಣೆಯಿಂದ ಗಂಡುಮಗುವಾಗುತ್ತಾನೆ.

ಕಿಂಚಿತ್ತೂ ನ್ಯೂನತೆ ಇಲ್ಲದೇ ಈ ವ್ರತವನ್ನು ಪಾಲಿಸಿದರೆ ಇಂದ್ರಸಂಹಾರಕನಾದ ಮಗನು ನಿನಗಾಗುತ್ತಾನೆ.' ವ್ರತದಲ್ಲಿ ಲೋಪವಾದರೆ ಇಂದ್ರಬಾಂಧವನಾದ ಮಗನಾಗುತ್ತಾನೆ.

ಕಶ್ಯಪರು ಹೇಳಿದ ಎಲ್ಲ ನಿಯಮಗಳನ್ನು ಪಾಲಿಸುತ್ತೇನೆಂದು ದಿತಿದೇವಿಯು ಒಪ್ಪಿದಳು. ಕಶ್ಯಪರಿಂದ ಗರ್ಭಧಾರಣೆ ಮಾಡಿದಳು. ಅವಳು ಪುಂಸವನ ವ್ರತವನ್ನೂ ವಿಧಿವತ್ತಾಗಿ ಪಾಲಿಸಿದಳು.

ಜ್ಞಾನಿಯಾದ ಇಂದ್ರನು ದಿತಿಯ ಅಭಿಪ್ರಾಯವನ್ನು ತಿಳಿದನು. ದಿತಿಯ ಗರ್ಭವನ್ನೇ ನಾಶ ಮಾಡಲು ಯೋಚಿಸಿದನು. ಪುಂಸವನ ವ್ರತಕ್ಕಾಗಿ ಆಶ್ರಮದಲ್ಲಿ ವಾಸಿಸುವ ದಿತಿದೇವಿಯನ್ನು ಸೇವಿಸಿದನು. ಪ್ರತಿದಿನವೂ ಕಾಡಿನಿಂದ ಹೂಗಳನ್ನು ಹಣ್ಣುಗಳನ್ನು ಗಡ್ಡೆ-ಗೆಣಸುಗಳನ್ನು ಸಮಿತ್ತುಗಳನ್ನು ದರ್ಭೆಗಳನ್ನು ಎಲೆಗಳನ್ನು ಎಳೆ-ಮೊಳಕೆಗಳನ್ನು ಮಣ್ಣನ್ನು ನೀರನ್ನೂ ಆಯಾ ಕಾಲದಲ್ಲಿ ತಂದು ಕೊಡುತ್ತಿದ್ದನು.

ವ್ರತಲೋಪವನ್ನೇ ಕಾಯುತ್ತಾ ಇದ್ದನು. ಆದರೆ ಯಾವುದೇ ರೀತಿಯಾದ ಲೋಪಗಳು ಇಂದ್ರನಿಗೆ ಕಾಣಿಸಲಿಲ್ಲ. ವ್ರತದಲ್ಲಿ ಯಾವುದೇ ರೀತಿಯಾದ ಲೋಪವಾಗದೇ ಇರುವುದನ್ನು ಕಂಡು ಇಂದ್ರ ಆತಂಕಗೊಂಡ.

ವ್ರತದ ನಿಯಮಗಳನ್ನು ಪಾಲಿಸುತ್ತಾ ದಿತಿದೇವಿಯು ಶ್ರಾಂತಳಾಗಿದ್ದಳು. ಒಂದು ದಿನ ಸಂಜೆಯಲ್ಲಿ ಉಚ್ಛಿಷ್ಟಳಾಗಿ ಕಾಲು ತೊಳೆಯದೇ ಮಲಗಿದಳು. ಇದೇ ಅವಕಾಶಕ್ಕಾಗಿಯೇ ಕಾಯುತ್ತಿದ್ದ ಇಂದ್ರ ಯೋಗಸಾಮರ್ಥ್ಯದಿಂದ ದಿತಿಯ ಗರ್ಭವನ್ನು ಪ್ರವೇಶಿಸಿದನು. ವಜ್ರಾಯುಧದಿಂದ ದಿತಿಯ ಗರ್ಭವನ್ನು ಏಳು ಭಾಗವಾಗಿ ಕತ್ತರಿಸಿದನು. ಆ ಭಾಗಗಳೆಲ್ಲ ಅಳಲು ಪ್ರಾರಂಭಿಸಿದವು. ಅಳಬೇಡಿರೆಂದು ಸಮಾಧಾನ ಮಾಡುತ್ತಾ ಒಂದೊಂದು ಭಾಗವನ್ನೂ ಮತ್ತೆ ಏಳು ಭಾಗದಂತೆ ಕತ್ತರಿಸಿದನು. ಹೀಗೆ ದಿತಿಯ ಗರ್ಭವು ನಲವತ್ತೊಂಭತ್ತು ಭಾಗಗಳಾದವು.

ಇಂದ್ರನಿಂದ ಪೀಡಿತವಾದ ಆ ನಲವತ್ತೊಂಭತ್ತು ಭಾಗಗಳೂ ಕೈ ಮುಗಿದವು. ಇಂದ್ರನನ್ನು ಪ್ರಾರ್ಥಿಸಿದವು. ಹೇ ಇಂದ್ರ ! ನಾವು ನಿನ್ನ ಅನುಜರು. ಮರುತ್ತುಗಳು. ನಮ್ಮನ್ನು ಸಂಹರಿಸುವುದು ನಿನಗೆ ಯೋಗ್ಯವಲ್ಲ ಎಂದು ಅಂಗಲಾಚಿದವು.




ತನ್ನಲ್ಲಿ ಪ್ರೀತಿಯನ್ನು ಮಾಡುತ್ತಿರುವ ಆ ಮರುತ್ತುಗಳಿಗೆ ಇಂದ್ರ ಅಭಯವನ್ನು ನೀಡಿದ. ತನ್ನ ಪರಿವಾರದವರನ್ನಾಗಿ ಮಾಡಿಕೊಂಡ. ವಜ್ರಾಯುಧದಿಂದ ಪೀಡಿತವಾಗಿದ್ದರೂ ಆ ಗರ್ಭವು ಮೃತವಾಗಲಿಲ್ಲ. ಇದು ಕೇವಲ ಶ್ರೀನಿವಾಸನ ದಯೆ. ಅಶ್ವತ್ಥಾಮರು ಪ್ರಯೋಗಿಸಿದ ಬ್ರಹ್ಮಾಸ್ತ್ರದಿಂದ ನಿನ್ನನ್ನು ಪರಮಾತ್ಮ ಹೇಗೆ ಬದುಕಿಸಿದನೋ ಹಾಗೆಯೇ ಇಂದ್ರನು ಪ್ರಯೋಗಿಸಿದ ವಜ್ರಾಯುಧದಿಂದ ಮರುತ್ತುಗಳನ್ನು ಕೂಡಾ ಪರಮಾತ್ಮ ಬದುಕಿಸಿದ.

ಈ ಎಲ್ಲ ಮರುತ್ತುಗಳು ಸೋಮಪಾನಾರ್ಹರಾದರು. ತಾಯಿಯಾದ ದಿತಿದೇವಿಯು ಎದ್ದು ನೋಡಿದಳು. ಇಂದ್ರನ ಜೊತೆಗಿರುವ ತನ್ನ ಮಕ್ಕಳನ್ನು ನೋಡಿ ಸಂತೋಷಪಟ್ಟಳು. ವಜ್ರಾಯುಧದಿಂದಲೂ ಮೃತರಾಗದಿರುವುದನ್ನು ಕಂಡು ಸಂತೃಪ್ತಳಾದಳು. ಸ್ವಭಾವತಃ ಆ ದಿತಿದೇವಿಯು ಸಜ್ಜನಳೇ ಆಗಿದ್ದಾಳೆ. ಆದ್ದರಿಂದ ಇಂದ್ರನಲ್ಲಿ ದ್ವೇಷವನ್ನು ಪರಿತ್ಯಜಿಸಿದಳು.

ನಡೆದ ಘಟನೆಯನ್ನೆಲ್ಲ ಇಂದ್ರನಿಗೆ ಹೇಳಿದಳು. ನಿನ್ನನ್ನು ಸಂಹರಿಸುವ ಒಬ್ಬ ಮಗನನ್ನು ನಾನು ಬಯಸಿದ್ದೆ. ನಲವತ್ತೊಂಬತ್ತು ಮಕ್ಕಳು ಹೇಗೆ ಆದರು? ಇಂದ್ರನೇ! ನಿನಗೆ ತಿಳಿದಿದ್ದರೆ ನಿಜ ಹೇಳು ಸುಳ್ಳು ಹೇಳಬೇಡ ಎಂದು ಕೇಳಿದಳು.

ನನ್ನನ್ನು ಸಂಹರುಸುವ ಮಗನಿಗಾಗಿ ನೀನು ವ್ರತ ಮಾಡುತ್ತಿರುವಿ ಎಂಬ ವಿಷಯ ನನಗೆ ತಿಳಿಯಿತು. ಆ ಮಗುವನ್ನು ಸಂಹರಿಸಬೇಕೆಂದು ನಾನು ನಿನ್ನ ಗರ್ಭದಲ್ಲಿ ಪ್ರವೇಶಮಾಡಿದೆ. ನಿನ್ನ ಗರ್ಭವನ್ನು ನಲವತ್ತೊಂಭತ್ತು ಭಾಗವಾಗಿ ಕತ್ತರಿಸಿದೆ. ಆದರೂ ಶ್ರೀನಿವಾಸನ ದಯೆಯಿಂದಲೇ ಆ ಮಕ್ಕಳು ಸಾಯದೇ ಹೊರಗೆ ಬಂದಿವೆ. ಗರ್ಭಸದೃಶನಾದ ನಾನು ಕೂಡಾ ಹೊರಗೆ ಬಂದಿರುವೆನು. ನನ್ನ ಈ ಅಪರಾಧವನ್ನು ನೀನು ಕ್ಷಮಿಸಬೇಕು ಎಂದು ಪ್ರಾರ್ಥಿಸಿದನು.

ಈಗ ಇಂದ್ರನಲ್ಲಿ ಯಾವುದೇ ರೀತಿಯಾದ ದ್ವೇಷಭಾವವಿರಲಿಲ್ಲ. ಪರಿಶುದ್ಧನಾಗಿದ್ದ. ಹೀಗಾಗಿ ಇಂದ್ರನ ವಿಷಯದಲ್ಲಿ ದಿತಿಯು ಸಂತುಷ್ಟಳಾದಳು. ದಿತಿದೇವಿಯ ಅಪ್ಪಣೆಯನ್ನು ಪಡೆದ ಇಂದ್ರ ಮರುದ್ಗಣದೊಂದಿಗೆ ಸ್ವರ್ಗಕ್ಕೆ ತೆರಳಿದ.

ರಾಜನ್ ನೀನು ಕೇಳಿದ ಪ್ರಶ್ನೆಗೆ ನಾನು ಉತ್ತರ ಹೇಳಿರುವೆನು. ಮರುತ್ತರ ಜನನ ಶ್ರೀಹರಿಯ ಮಹಿಮೆಯೇ ಆಗಿದೆ. ಆದ್ದರಿಂದ ಪರಮಮಂಗಳಕರವಾಗಿದೆ.

★ ★ ★ ★ ★

ದಕ್ಷಪ್ರಜಾಪತಿಯ ಹೆಣ್ಣುಮಕ್ಕಳ ವಂಶವನ್ನು ನಿರೂಪಣ ಮಾಡುವ ಸಮಯದಲ್ಲಿ ಅದಿತಿಯ ಹನ್ನೆರಡು ಜನ ಮಕ್ಕಳ ಬಗ್ಗೆ ಹೇಳಿದರು. 'ವಿವಸ್ವಾನರ್ಯಮಾ ಪೂಷಾ ತ್ವಷ್ಟಾ ಚ ಸವಿತಾ ಭಗಃ । ಧಾತಾ ವಿಧಾತಾ ವರುಣಃ ಮಿತ್ರಃ ಶಕ್ರ ಉರುಕ್ರಮಃ' ಎಂದು. ಈ ಹನ್ನೆರಡು ಜನರಲ್ಲಿ ಎಂಟನೆಯ ಅಧ್ಯಾಯದ ಕೊನೆಯಿಂದ ಆರಂಭಿಸಿ ಈ ಅಧ್ಯಾಯದ ವರೆಗೆ ವಿಶ್ವರೂಪ, ವೃತ್ರ, ಚಿತ್ರಕೇತುಗಳ ಉಪಾಖ್ಯಾನದಿಂದ ತ್ವಷ್ಟೃವಿನ ವಂಶವನ್ನು ಹೇಳಿರುವರು. ಈಗ ಸವಿತೃವಿನ ವಂಶವನ್ನು ಶಂಸನ ಮಾಡುವರು-

**ಶ್ರೀಶುಕ ಉವಾಚ -**

**ಪೃಶ್ನಿಶ್ಚ ಪತ್ನೀ ಸವಿತುಃ ಸಾವಿತ್ರೀಂ ವ್ಯಾಹೃತೀಂ ತ್ರಯೀಮ್ ।**
**ಅಗ್ನಿಹೋತ್ರಂ ಪಶುಂ ಸೋಮಂ ಚಾತುರ್ಮಾಸ್ಯಂ ಮಹಾಮಖಾನ್ ॥೧॥**

**ಸವಿತುಃ** ಸವಿತೃವಿನ **ಪತ್ನೀ** ಹೆಂಡತಿಯಾದ **ಪೃಶ್ನಿಃ** ಪೃಶ್ನಿಯು **ವಾಹೃತೀಂ ತ್ರಯೀಂ** 'ಪ್ರಣವಾರ್ಥಾ ವಾಹೃತಯಃ ವ್ಯಾಹೃತಿಸ್ತ್ರಿಗುಣಾತ್ ಪುನಃ' ಮುಂತಾಗಿ ಹೇಳಿದ ಓಂಕಾರದ ಅರ್ಥವಾದ ವ್ಯಾಹೃತಿಗಳ ವ್ಯಾಖ್ಯಾನವಾದ ಗಾಯತ್ರೀ ಅಭಿಮಾನಿಯಾದ **ಸಾವಿತ್ರೀಂ** ಸಾವಿತ್ರಿಯನ್ನು ಅಥವಾ **ವ್ಯಾಹೃತಿಂ** ವ್ಯಾಹೃತಿಗಳನ್ನು **ತ್ರಯೀಂ** ಮೂರು ವೇದಗಳನ್ನು ಸಾವಿತ್ರೀಯನ್ನು **ಅಗ್ನಿಹೋತ್ರಂ** ಅಗ್ನಿಹೋತ್ರದ ಅಭಿಮಾನಿಯನ್ನು **ಪಶುಂ** ಪಶುಯಾಗಾಭಿಮಾನಿಯನ್ನು **ಸೋಮಂ** ಸೋಮಯಾಗಾಭಿಮಾನಿಯನ್ನು **ಚಾತುರ್ಮಾಸ್ಯಂ** ಚಾತುರ್ಮಾಸ್ಯ ಯಾಗಾಭಿಮಾನಿಯನ್ನು **ಮಹಾಮಖಾನ್** ಪಂಚಮಹಾಯಜ್ಞಾಭಿಮಾನಿಗಳನ್ನು **ಪ್ರಾಸೂತ** ಹಡೆದಳು. ॥೧॥

ಆರನೇ ಅಧ್ಯಾಯದ ಕೊನೆಯಿಂದ ಎಂದು ಚೆಟ್ಟಿ ವ್ಯಾಖ್ಯಾನ ಅದೂ ಸರಿಯೇ ಸ್ಪಷ್ಟ

**ಸಿದ್ಧಿರ್ಭಗಸ್ಯ ಭಾರ್ಯಾಂಗ ಮಹಿಮಾನಂ ವಿಭುಂ ಪ್ರಭುಮ್ ।**
**ಆಶಿಷಂ ಚ ವರಾರೋಹಾಂ ಕನ್ಯಾಂ ಪ್ರಾಸೂತ ಸುವ್ರತಾಮ್ ॥೨॥**

**ಭಗಸ್ಯ ಭಾರ್ಯಾ ಸಿದ್ಧಿಃ** ಭಗನ ಪತ್ನಿಯಾದ ಸಿದ್ಧಿ ಎಂಬುವವಳು **ವರಾರೋಹಾಂ** ಸುಂದರವಾದ ತೊಡೆಗಳುಳ್ಳ **ಆಶಿಷಂ** ಆಶೀಷ ಎಂಬ ಕನ್ಯೆಯನ್ನು ಅಥವಾ ಆಶಿಷ ಎಂಬ ಗಂಡುಮಗುವನ್ನು **ಸುವ್ರತಾಂ ಕನ್ಯಾಂ** ಸುವ್ರತಾ ಎಂಬ ಹೆಣ್ಣು ಮಗಳನ್ನು **ಪ್ರಾಸೂತ** ಪ್ರಸವಿಸಿದಳು. **ಅಂಗ** ಪರೀಕ್ಷಿತನೇ **ಮಹಿಮಾನಂ** ಮಹಿಮನನ್ನು **ವಿಭುಂ** ವಿಭುವನ್ನು **ಪ್ರಭುಂ** ಪ್ರಭುವನ್ನು **ಪ್ರಾಸೂತ ಚ** ಪ್ರಸವಿಸಿದಳು. ॥೨॥

**ಧಾತುಃ ಕುಹೂಃ ಸಿನೀವಾಲೀ ರಾಕಾ ಚಾನುಮತಿಸ್ತಥಾ ।**
**ಸಾಯಂ ದರ್ಶಮಥ ಪ್ರಾತಃ ಪೂರ್ಣಮಾಸಮನುಕ್ರಮಾತ್ ॥೩॥**

**ಧಾತುಃ** ಧಾತೃವಿನ ಹೆಂಡತಿಯರಾದ **ಕುಹೂಃ** (ಚಂದ್ರನ ಕಲೆಯಿಲ್ಲದ ದರ್ಶ) ಕುಹೂ ಎಂಬುವವಳು **ಸಿನೀವಾಲೀ** (ಚಂದ್ರನ ಕಲೆಯಿರುವ ದರ್ಶ) **ರಾಕಾ** (ಹದಿನಾರು ಕಲೆಗಳಿಂದ ಕೂಡಿದ ಹುಣ್ಣಿಮೆ) **ಅನುಮತೀ** (ಒಂದು ಕಲೆ ಕಡಿಮೆಯಾದ ಚಂದ್ರನಿರುವ ಹುಣ್ಣಿಮೆ) ಎಂಬುವವರು **ಅನುಕ್ರಮಾತ್** ಕ್ರಮವಾಗಿ **ಸಾಯಂ** ಸಾಯಂಕಾಲಾಭಿಮಾನಿಯನ್ನು **ದರ್ಶಂ** ಸೂರ್ಯ-ಚಂದ್ರರು ಒಂದೇ ಕಡೆ ಇರುವ ಅಮಾವಾಸ್ಯೆಗೆ ಅಭಿಮಾನಿಯಾದವನನ್ನು **ಪ್ರಾತಃ** ಪ್ರಾತಃಕಾಲಾಭಿಮಾನಿ-ಯನ್ನು ಮತ್ತು **ಪೂರ್ಣಮಾಸಂ** ಹುಣ್ಣಿಮಿಗೆ ಅಭಿಮಾನಿಯನ್ನು **ಆಧತ್ತ** ಪಡೆದರು.

ಕುಹೂ ಸಾಯಂ ಅಭಿಮಾನಿಯನ್ನು, ಸಿನೀವಾಲೀ ದರ್ಶನನ್ನು, ರಾಕಾ ಪ್ರಾತರಭಿಮಾನಿಯನ್ನು, ಅನುಮತಿಯು ಹುಣ್ಣಿಮೆಯ ಅಭಿಮಾನಿಯನ್ನು, ಹೀಗೆ ಕ್ರಮವಾಗಿ ಪಡೆದರು.

**ಅಗ್ನೀನ್ ಪುರೀಷಾನಾಧತ್ತ ಕ್ರಿಯಾಯಾಂ ಸಮನಂತರಃ ।**
**ಚರ್ಷಣೀ ವರುಣಸ್ಯಾಸೀದ್ ಯಸ್ಯಾಂ ಜಾತೋ ಭೃಗುಃ ಪುನಃ ॥೪॥**

**ಸಮನಂತರಃ** ಧಾತೃವಿನ ಸಾಕ್ಷಾತ್ ಭ್ರಾತೃವಾದ ವಿಧಾತನು (ತ್ವಷ್ಟುವು) **ಕ್ರಿಯಾಯಾಂ** ಕ್ರಿಯಾ ಎಂಬ ಹೆಂಡತಿಯಲ್ಲಿ **ಪುರೀಷಾನ್** ಈ ಹೆಸರಿನ **ಅಗ್ನೀನ್** ಇಪ್ಪತ್ತೈದು ಅಗ್ನಿಗಳನ್ನು **ಆಧತ್ತ** ಪಡೆದನು. **ವರುಣಸ್ಯ** ವರುಣನೆಂಬ ಸೂರ್ಯನಿಗೆ **ಚರ್ಷಣೀ** ಚರ್ಷಣೀ ಎಂಬ ಹೆಂಡತಿಯು **ಆಸೀತ್** ಇದ್ದಳು. **ಯಸ್ಯಾಂ** ಯಾವ ಚರ್ಷಣಿಯಲ್ಲಿ **ಭೃಗುಃ** ಹಿಂದೆ ಬ್ರಹ್ಮದೇವರಿಂದ ಜನಿಸಿದ ಭೃಗುವು **ಪುನಃ** ಮತ್ತೆ **ಜಾತಃ** ಹುಟ್ಟಿದನು. 'ಪುರಿಷ್ಯಾಸೋಽಗ್ನಯಃ' ಎಂಬ ಶ್ರುತಿಯನ್ನು ಚೆಟ್ಟಿ ಆಚಾರ್ಯರು ಉದಾಹರಿಸಿದ್ದಾರೆ.

ಶ್ರೀ ಸತ್ಯಧರ್ಮರ ಪ್ರಕಾರ- **ಪುರಿಷ್ಯಂ** ದಕ್ಷಿಣಾಗ್ನಿಯನ್ನು ಎಂದರ್ಥ. ಪ್ರೋಷ್ಯಾಗಮನಸಮಯೇಽಗ್ನಿಹೋತ್ರಿಭಿಃ ದಕ್ಷಿಣಾಗ್ನ್ಯುಪಸ್ಥಾನವಿಷಯೇ ಪಠನೀಯೇ ಮಂತ್ರೇ ಪುರಿಷ್ಯಪದಸ್ಯ ದಕ್ಷಿಣಾಶುಶುಕ್ಷಣಿಃ ಅರ್ಥತಯಾ ವ್ಯಾಖ್ಯಾತಃ ಎಂದಿದ್ದಾರೆ. ಆಶುಶುಕ್ಷಣಿ ಎಂದರೆ ಅಗ್ನಿ. ಆ ಮಂತ್ರವು ಹೀಗಿದೆ 'ಅಯಮಗ್ನಿಃ ಪುರಿಷ್ಯೋ ರಯಿಮಾನ್ ಪುಷ್ಟಿವರ್ಧನಃ' ಇತ್ಯಾದಿ. 'ಪುನರೇವ ವರುಣಂ ಪಿತರಮುಪಸಸಾರ'

ಎಂಬ ಶ್ರುತಿಯು ಭೃಗುವಿಗೆ ಎರಡನೆಯ ಜನ್ಮ ವರುಣನಿಂದ ಎಂಬುದನ್ನು ತಿಳಿಸುವದು.

**ವಾಲ್ಮೀಕಿಶ್ಚ ಮಹಾಯೋಗೀ ವಲ್ಮೀಕಾದಭವತ್ಕಿಲ ।**
**ಅಗಸ್ತ್ಯಶ್ಚ ವಸಿಷ್ಠಶ್ಚ ಮಿತ್ರಾವರುಣಯೋರ್ಋಷೀ ॥೫॥**

**ಮಹಾಯೋಗೀ** ಮಹಾಯೋಗಿಯಾದ **ವಾಲ್ಮೀಕಿಃ** ವಾಲ್ಮೀಕಿಯು **ವಲ್ಮೀಕಾತ್** ವರುಣನ ವೀರ್ಯದ ಉತ್ಸರ್ಗಯುತವಾದ ಹುತ್ತಿನಿಂದ **ಅಭವತ್ ಕಿಲ** ಹುಟ್ಟಿದನಷ್ಟೇ **ಋಷೀ** ಋಷಿಗಳಾದ **ಅಗಸ್ತ್ಯಶ್ಚ ವಸಿಷ್ಠಶ್ಚ** ಅಗಸ್ತ್ಯರೂ ವಸಿಷ್ಠರೂ **ಮಿತ್ರಾವರುಣಯೋಃ** ಮಿತ್ರಾ-ವರುಣರೆಂಬ ಇಬ್ಬರು ಸೂರ್ಯರ ವೀರ್ಯದಿಂದ ಮತ್ತೆ ಜನಿಸಿದರು. ವಸಿಷ್ಠರು ಬ್ರಹ್ಮದೇವರಿಂದ, ಅಗಸ್ತ್ಯರು ಪುಲಸ್ತ್ಯರಿಂದಲೂ ಹಿಂದೆ ಹುಟ್ಟಿದರು. ॥೫॥

ಅಗಸ್ತ್ಯ-ವಸಿಷ್ಠರು ಹುಟ್ಟಿದ ರೀತಿಯನ್ನು ಹೇಳುತ್ತಾರೆ-

**ರೇತಃ ಸಿಷಿಚತುಃ ಕುಂಭೇ ಉರ್ವಶ್ಯಾಃ ಸನ್ನಿಧೌ ದ್ರುತಮ್ ।**
**ರೇವತ್ಯಾಂ ಮಿತ್ರ ಉತ್ಸರ್ಗಮರಿಷ್ಟಂ ಪಿಪ್ಪಲಂ ವ್ಯಧಾತ್ ॥೬॥**

**ಯೌ** ಯಾರು **ಉರ್ವಶ್ಯಾಃ** ಉರ್ವಶಿಯ ದರ್ಶನದಿಂದ ಅವಳ ಸಮೀಪದಲ್ಲಿ **ದ್ರುತಂ** ಹೊರಬಂದ **ರೇತಃ** ತಮ್ಮ ವೀರ್ಯವನ್ನು **ಕುಂಭೇ** ಕೊಡದಲ್ಲಿ **ಸಿಷಿಚತುಃ** ಸುರಿದರೋ **ತಯೋಃ** ಆ **ಮಿತ್ರಾವರುಣಯೋಃ** ಮಿತ್ರ ಮತ್ತು ವರುಣರಿಂದ ಕುಂಭದಲ್ಲಿ ಜನಿಸಿದ್ದರಿಂದ ಅಗಸ್ತ್ಯ-ವಸಿಷ್ಠರು ಕುಂಭಸಂಭವರೆಂದು ಪ್ರಸಿದ್ಧಿ. **ರೇವತ್ಯಾಂ** ರೇವತಿ ಎಂಬ ತನ್ನ ಹೆಂಡತಿಯಲ್ಲಿ **ಮಿತ್ರಃ** ಮಿತ್ರನು **ಉತ್ಸರ್ಗಂ** ಉತ್ಸರ್ಗವನ್ನು **ಅರಿಷ್ಟಂ** ಅರಿಷ್ಟನನ್ನು **ಪಿಪ್ಪಲಂ** ಪಿಪ್ಪಲನನ್ನು **ವ್ಯಧಾತ್** ಪಡೆದನು. 'ಸತ್ರೇಹಜಾತಾ-ದಿಷಿತಾನಮೋಭಿಃ ಕುಂಭೇ ರೇತಃ ಸಿಷಿಚತುಃ ಸಮಾನಂ' ಎಂದು ಶ್ರುತಿ ಇದೆ.

**ಪೌಲೋಮ್ಯಾಮಿಂದ್ರ ಆಧತ್ತ ತ್ರೀನ್ ಪುತ್ರಾನಿತಿ ನಃ ಶ್ರುತಮ್ ।**
**ಜಯಂತಮೃಷಭಂ ತಾತ ತೃತೀಯಂ ಮೀಢುಷಂ ಪ್ರಭುಃ ॥೭॥**

**ತಾತ** ಪರೀಕ್ಷಿತನೇ **ಪ್ರಭುಃ** ಸಮರ್ಥನಾದ **ಇಂದ್ರಃ** ಶಕ್ರನೆಂಬ ಸೂರ್ಯನು (ಇಂದ್ರನು) **ಪೌಲೋಮ್ಯಾಂ** ಪುಲೋಮನೆಂಬ ಅಸುರನ ಮಗಳಾದ ಪೌಲೋಮಿಯಲ್ಲಿ ಶಚೀದೇವಿಯಲ್ಲಿ **ತ್ರೀನ್** ಮೂರು **ಪುತ್ರಾನ್** ಮಕ್ಕಳನ್ನು **ಆಧತ್ತ** ಪಡೆದನೆಂದು **ನಃ ಶ್ರುತಂ** ಗುರುಗಳಿಂದ ನಾವು ಕೇಳಿದ್ದೇವೆ. ಅವರಲ್ಲಿ ಮೊದಲಿಗನು

 

**ಜಯಂತಂ** ಜಯಂತನು **ದ್ವಿತೀಯಂ** ಎರಡನೆಯವನು **ಋಷಭಂ** ಋಷಭನು **ತೃತೀಯಂ** ಮೂರನೆಯವನು **ಮೀಢುಷಂ** ಮೀಢುಷನು ಎಂದು **ಆಹುಃ** ಕರೆದರು. ।।೭।।

**ಉರುಕ್ರಮಸ್ಯ ದೇವಸ್ಯ ಮಾಯಾವಾಮನರೂಪಿಣಃ ।**
**ಕೀರ್ತೌ ಪತ್ನ್ಯಾಂ ಬೃಹಚ್ಛ್ಲೋಕಾಸ್ತಸ್ಯಾಸನ್ ಸೌಭಗಾದಯಃ ।।೮।।**

**ಮಾಯಾವಾಮನರೂಪಿಣಃ** ತನ್ನ ಇಚ್ಛೆಯಿಂದ ಗಿಡ್ಡರೂಪವನ್ನು ಧರಿಸಿದ್ದ **ಉರುಕ್ರಮಸ್ಯ** ತ್ರಿವಿಕ್ರಮನಾದ **ದೇವಸ್ಯ** ಉಪೇಂದ್ರನಿಗೆ **ಕೀರ್ತೌ ಪತ್ನ್ಯಾಂ** ಕೀರ್ತಿ ಎಂಬ ಹೆಂಡತಿಯಲ್ಲಿ (ಲಕ್ಷ್ಮೀರೂಪವೇ) **ಬೃಹಚ್ಛ್ಲೋಕಾಃ** ಮಹಾಕೀರ್ತಿವಂತರಾದ **ಸೌಭಗಾದಯಃ** ಸೌಭಗಾದಿಗಳು **ತಸ್ಯ ಸಕಾಶಾತ್** ವಾಮನನಿಂದ **ಆಸನ್** ಜನಿಸಿದರು ಎಂದು ಸತ್ಯಧರ್ಮರ ಪ್ರಕಾರ, ಚೆಟ್ಟಿ ವಿಜಯ ಧ್ವಜರ ಪ್ರಕಾರ ವಾಮನನಿಗೆ ಕೀರ್ತಿಯಲ್ಲಿ ಬೃಹಚ್ಛ್ಲೋಕನೆಂಬ ಮಗ **ತಸ್ಯ** ಬೃಹಚ್ಛ್ಲೋಕನಿಗೆ ಸೌಭಗಾದಿಗಳು ಮಕ್ಕಳು ಆದರು ಎಂದರ್ಥ. ।।೮।।

**ತತ್ಕರ್ಮಗುಣವೀರ್ಯಾಣಿ ಕಶ್ಯಪಸ್ಯ ಮಹಾತ್ಮನಃ ।**
**ಪಶ್ಚಾದ್ವಕ್ಷ್ಯಾಮಹೇಽದಿತ್ಯಾಂ ಯಥೈವಾವತತಾರ ಹ ।।೯।।**

**ತತ್ಕರ್ಮಗುಣವೀರ್ಯಾಣಿ** ಆ ವಾಮನನ ಕಾರ್ಯಗುಣಸಾಮರ್ಥ್ಯಗಳನ್ನು **ಮಹಾತ್ಮನಃ ಕಶ್ಯಪಸ್ಯ ಸಕಾಶಾತ್** ಮಹಾತ್ಮರಾದ ಕಶ್ಯಪರಿಂದ **ಅದಿತ್ಯಾಂ** ಅದಿತಿ ದೇವಿಯಲ್ಲಿ **ಯಥಾ ಅವತತಾರ** ಹೇಗೆ ಅವತರಿಸಿದನೆಂಬುದನ್ನು **ಪಶ್ಚಾತ್** ಎಂಟನೇ ಸ್ಕಂಧದಲ್ಲಿ **ವಕ್ಷ್ಯಾಮಹೇ** ಹೇಳುತ್ತೇವೆ.

ಮಹಾ ಅಮಂಗಲವಾದ ದಾನವ ವಂಶವನ್ನು ಹೇಳುವದರಿಂದ ಬರುವ ಅನರ್ಥವನ್ನು ಕಳೆದು ಕೊಳ್ಳಲು ಮಂಗಲರೂಪವಾಗಿ ಇಲ್ಲಿ ಉರುಕ್ರಮಸ್ಯ ಎಂದು ಪ್ರಾರಂಭಿಸಿದ್ದಾರೆ. ಅದರಲ್ಲೂ ಬೇಗನೆ ಹೇಳಲು ಕುಂಠಿತವಾದ ಉತ್ಕಂಠಾವುಳ್ಳ ಕಂಠದಿಂದ ಮೊದಲಿಗೆ 'ಯತ್ರ ಭಾಗವತಃ ಶ್ರೀಮಾನ್' ಮುಂತಾಗಿ ಶ್ರೀಶುಕಾಚಾರ್ಯರು ಹೇಳಿರುವರೆಂದು ತಿಳಿಯಬೇಕು. ।।೯।।

**ಅಥ ಕಶ್ಯಪದಾಯಾದಾನ್ ದೈತೇಯಾನ್ ಕೀರ್ತಯಾಮಿ ತೇ ।**
**ಯತ್ರ ಭಾಗವತಃ ಶ್ರೀಮಾನ್ ಪ್ರಹ್ಲಾದೋ ಬಲಿರೇವ ಚ ।।೧೦।।**

**ಅಥ** ಇನ್ನು ಮುಂದೆ ಮಂಗಲವಾಗಲಿ. ಅದಿತಿಯ ಮಕ್ಕಳನ್ನು ಹೇಳಿದ ನಂತರ **ಕಶ್ಯಪದಾಯಾದಾನ್** ಕಶ್ಯಪರ ಮಕ್ಕಳಾದ ಜ್ಞಾತಿಗಳಾದ **ದೈತೇಯಾನ್** ದಿತಿಯ ಮಕ್ಕಳನ್ನು **ತೇ** ನಿನಗೆ **ಕೀರ್ತಯಾಮಿ** ಹೇಳುತ್ತೇನೆ. ದೈತ್ಯವಂಶ ವರ್ಣನೆ ಏಕೆ? ಅದರ ವರ್ಣನ ಶ್ರೇಯಃಸಾಧನವಲ್ಲವಲ್ಲ ಎಂದರೆ ಹೇಳುತ್ತಾರೆ. **ಯತ್ರ** ಯಾವ ರೀತಿಯ ಸಂತತಿಯಲ್ಲಿ **ಭಾಗವತಃ** ಭಗವದ್ಭಕ್ತರಾದ **ಶ್ರೀಮಾನ್** ಭಕ್ತ್ಯಾದಿಗುಣಸಂಪತ್ತಿನಿಂದ ಕೂಡಿದ **ಪ್ರಹ್ಲಾದಃ ಬಲಿಃ ಚ** ಪ್ರಹ್ಲಾದರಾಜರು ಬಲಿ ಚಕ್ರವರ್ತಿಗಳೂ **ಬಭೂವತುಃ** ಹುಟ್ಟಿದರು. ಈ ಈಶ್ವರ ಚರಿತ್ರ ಕೀರ್ತನ ಶ್ರವಣಗಳು ಶ್ರೇಯಃಸಾಧನಗಳೆಂದು ಭಾವ.

**ದಿತೇರ್ದ್ವಾವೇವ ದಾಯಾದೌ ದೈತ್ಯದಾನವವಂದಿತೌ ।**
**ಹಿರಣ್ಯಕಶಿಪುರ್ನಾಮ ಹಿರಣ್ಯಾಕ್ಷಶ್ಚ ಕೀರ್ತಿತೌ ॥೧೧॥**

**ದಿತೇಃ** ದಿತಿದೇವಿಯ **ದ್ವೌ** ಇಬ್ಬರು **ದಾಯಾದೌ** ಮಕ್ಕಳು **ದೈತ್ಯದಾನವ- ವಂದಿತೌ** ದೈತ್ಯರಿಂದಲೂ ದಾನವರಿಂದಲೂ ವಂದಿಸಲ್ಪಟ್ಟವರು **ಹಿರಣ್ಯಕಶಿಪುಃ ನಾಮ** ಹಿರಣ್ಯಕಶಿಪು ಎಂಬುವನು **ಹಿರಣ್ಯಾಕ್ಷಶ್ಚ ಕೀರ್ತಿತೌ ಏವ** ಹಿರಣ್ಯಾಕ್ಷನೆಂದು ಮೂರನೇ ಸ್ಕಂಧದಲ್ಲಿ ಹೇಳಿ ಆಗಿದೆ. ಇವರು ಅವಳಿ ಮಕ್ಕಳು ಇವರಲ್ಲಿ ಹಿರಣ್ಯಕಶಿಪು ಹಿರಿಯನು ಹಿರಣಾಕ್ಷ ಹುಟ್ಟಿದ ನಂತರ ಹುಟ್ಟಿದವನು. ಆದ್ದರಿಂದ ಮೊದಲು ಭೂಸ್ಪರ್ಶ ಹಿರಣ್ಯಾಕ್ಷನಿಗೆ. ಆದ್ದರಿಂದ ಚಿಕ್ಕವನಿವನು ಇದು ಅವಳಿಯಲ್ಲಿಯ ವ್ಯವಸ್ಥೆ. ಇದನ್ನು ಮೂರನೇ ಸ್ಕಂಧದಲ್ಲಿ೧೮ ನೇ ಅಧ್ಯಾಯದಲ್ಲಿ ಯಮೌ ಎಂಬುದರ ವಿವರಣದಲ್ಲಿ ಯಾದವಾರ್ಯರು ವಿಸ್ತರಿಸಿರುವರು ಎನ್ನುತ್ತಾರೆ ಶ್ರೀಗಳವರು. ॥೧೧॥

**ಹಿರಣ್ಯಕಶಿಪೋರ್ಭಾರ್ಯಾ ಕಯಾಧುರ್ನಾಮ ದಾನವೀ ।**
**ಜಂಭಸ್ಯ ತನಯಾ ದತ್ತಾ ಸುಷುವೇ ಚತುರಃ ಸುತಾನ್ ॥೧೨॥**

**ಜಂಭಸ್ಯ** ಜಂಭನೆಂಬ ಅಸುರನ **ತನಯಾ** ಮಗಳಾದ **ಕಯಾಧುಃ ನಾಮ** ಕಯಾಧು ಎಂಬುವಳು **ದತ್ತಾ** ಜಂಭನಿಂದ ಹಿರಣ್ಯಕಶಿಪುವಿಗೆ ವಿವಾಹಪೂರ್ವಕವಾಗಿ ಕೊಡಲ್ಪಟ್ಟವಳು. ಆದ್ದರಿಂದ **ಭಾರ್ಯಾ** ಹಿರಣ್ಯಕಶಿಪುವಿನ ಹೆಂಡತಿಯು **ಚತುರಃ ಸುತಾನ್ ಸುಷುವೇ** ನಾಲ್ಕು ಜನ ಮಕ್ಕಳನ್ನು ಹೆತ್ತಳು. ॥೧೨॥

ಇವರ ಹೆಸರನ್ನು ಹೇಳುವರು-

**ಸಹ್ಲಾದಂ ಪ್ರಾಗನುಹ್ಲಾದಂ ಪ್ರಹ್ಲಾದಂ ಹ್ಲಾದಮೇವ ಚ ।**
**ತತ್ಸ್ವಸಾ ಸಿಂಹಿಕಾ ನಾಮ ರಾಹುಂ ವಿಪ್ರಚಿತ್ತೋಽಗ್ರಹೀತ್ ॥೧೩॥**

ಪ್ರಾಕ್ ಪದವನ್ನು ಪ್ರಹ್ಲಾದ ಪದದೊಡನೆ ಅನ್ವಯಿಸಬೇಕು. **ಪ್ರಾಕ್ ಪ್ರಹ್ಲಾದಂ** ಮೊದಲು ಪ್ರಹ್ಲಾದನನ್ನು ಅನಂತರ **ಸಹ್ಲಾದಂ** ಸಹ್ಲಾದನನ್ನು **ಅನುಹ್ಲಾದಂ** ಅನುಹ್ಲಾದನನ್ನು **ಹ್ಲಾದಂ** ಹ್ಲಾದನನ್ನು ಪಡೆದಳು. 'ಪ್ರಹ್ಲಾದಾವರಜೋ ಯಃ ಸಹ್ಲಾದೋ ನಾಮತೋ ಹರೇರ್ಭಕ್ತಃ' ಎಂದು ಶ್ರೀಮದಾಚಾರ್ಯರು ಹೇಳಿದಂತೆ 'ಪ್ರಹ್ಲಾದಃ ಪೂರ್ವಜಸ್ತೇಷಾಂ ಸಹ್ಲಾದಸ್ತದನಂತರಃ ' ಎಂದು ಆದಿಪರ್ವದಲ್ಲಿಯೂ ಹೇಳಿದೆ. ಗ್ರಂಥಕಾರರೂ ಕೂಡ 'ಸಹ್ಲಾದಃ' ಎಂದು ಹೇಳಿದ ನನ್ನಿಂದ ಈ ಕ್ರಮವೇ ವಿವಕ್ಷಿತವಲ್ಲ ಕಿಂತು ಪ್ರಮಾಣಾನುಸಾರ ಕ್ರಮ ತಿಳಿಯಬೇಕು ಎಂದು ಸಹ್ಲಾದಸ್ಯ ಎಂದು ಹೇಳಿದ ನಂತರ ಅನುಹ್ಲಾದಸ್ಯ ಎಂದು ಹೇಳಬೇಕಾದಲ್ಲಿ 'ಹ್ಲಾದಸ್ಯ ಧಮನಿಃ' ಎಂದು ವ್ಯುತ್ಕ್ರಮವಾಗಿ ಇಲ್ಲಿಯೇ ಮುಂದು ಹೇಳುವ ಮೂಲಕ ಸೂಚಿಸಿರುವರು. **ತತ್ಸ್ವಸಾ** ಆ ನಾಲ್ವರ ತಂಗಿಯಾದ **ಸಿಂಹಿಕಾ ನಾಮ** ಸಿಂಹಿಕಾ ಎಂಬುವವಳು **ವಿಪ್ರಚಿತ್ತೇಃ** ವಿಪ್ರಚಿತ್ತಿಯಿಂದ **ರಾಹುಂ ಅಗ್ರಹೀತ್** ರಾಹುವನ್ನು ಗರ್ಭದಲ್ಲಿ ಧರಿಸಿದಳು (ಸತ್ಯಧರ್ಮರು)

**ತತ್‌ಸ್ವಸಾ** ಆ ಕಯಾಧುವಿನ ತಂಗಿಯಾದ ಸಿಂಹಿಕೆಯು ಎಂದಿರುವರು ವಿಜಯಧ್ವಜರು. ॥೧೨॥

**ಶಿರೋಽಹರದ್ ಯಸ್ಯ ಹರಿಶ್ಚಕ್ರೇಣ ಪಿಬತೋಽಮೃತಮ್ ॥೧೪॥**

**ಅಮೃತಂ ಪಿಬತಃ** ದೇವತೆಗಳ ಮಧ್ಯದಲ್ಲಿ ಅಡಗಿ ಕುಳಿತು ಅಮೃತ ಕುಡಿಯುವ **ಯಸ್ಯ** ಯಾವ ರಾಹುವಿನ **ಶಿರಃ** ತಲೆಯನ್ನು **ಹರಿಃ** ಶ್ರೀಹರಿಯು **ಚಕ್ರೇಣ** ಚಕ್ರದಿಂದ **ಅಹರತ್** ಕತ್ತರಿಸಿದನು. ಗಂಡಸು ಮಕ್ಕಳ ಮಕ್ಕಳನ್ನು ಹೇಳುವ ಸಂದರ್ಭದಲ್ಲಿ ಸಿಂಹಿಕೆಯ ಮಗನನ್ನು ಹೇಳಿದ್ದು ಮುಂದೆ ಇದನ್ನು ಹೇಳಲು (ವಿಶೇಷವಾಗಿ) ಬೀಜ ಬಿತ್ತಿದಂತೆ ಎಂದು ತಿಳಿಯಬೇಕು.

**ಸಂಹ್ಲಾದಸ್ಯ ಮತಿರ್ಭಾರ್ಯಾಸೂತ ಪಂಚಜನಂ ತತಃ ॥೧೫॥**

**ಸಹ್ಲಾದಸ್ಯ ಭಾರ್ಯಾ** ಸಹ್ಲಾದನ ಹೆಂಡತಿಯಾದ **ಮತಿಃ** ಮತಿಯು **ತತಃ** ಸಹ್ಲಾದನಿಂದ **ಪಂಚಜನಂ ಅಸೂತ** ಪಂಚಜನನೆಂಬ ಮಗನನ್ನು ಹೆತ್ತಳು. ॥೧೪॥

**ಹ್ಲಾದಸ್ಯ ಧಮನಿರ್ಭಾರ್ಯಾಸೂತ ವಾತಾಪಿಮಿಲ್ವಲಮ್ ।**
**ಯೋಽಗಸ್ತ್ಯಾಯಾಪ್ಯತಿಥಯೇ ಪೇಚೇ ವಾತಾಪಿಮಿಲ್ವಲಃ ॥೧೬॥**

**ಹ್ಲಾದಸ್ಯ** ಹ್ಲಾದನ **ಭಾರ್ಯಾ** ಹೆಂಡತಿಯಾದ **ಧಮನಿಃ ಚ** ಧಮನಿ ಎಂಬುವವಳು **ವಾತಾಪಿಂ ಇಲ್ವಲಂ ಅಸೂತ**, ವಾತಾಪಿಯನ್ನು ಇಲ್ವಲನನ್ನು ಹೆತ್ತಳು. **ಯಃ** ಯಾವ ಇಲ್ವಲನು **ಅತಿಥಯೇ** ಅತಿಥಿಯಾಗಿ ಬಂದಿದ್ದ **ಅಗಸ್ತ್ಯಾಯ ಅಪಿ** ಅಗಸ್ತ್ಯ ಋಷಿಗಳಿಗೂ ಕೂಡ **ವಾತಾಪಿಂ** ಮೇಕೆಯ ಆಕಾರದಲ್ಲಿದ್ದ ವಾತಾಪಿಯನ್ನು **ಪೇಚೇ** ಬೇಯಿಸಿ ಊಟ ಮಾಡಿಸಿದನು. ಬೇಯಿಸಿದ ಇಲ್ವಲನನ್ನು ಬೆಂದ ವಾತಾಪಿಯನ್ನೂ ಪಡೆದಳು.

ಇಲ್ಲಿ ಬೇರೆಡೆ ಹೇಳಿದ ಕಥೆಯನ್ನು ತಿಳಿದುಕೊಳ್ಳಬೇಕು. ಬಂದ ಬ್ರಾಹ್ಮಣರಿಗೆ ತಮ್ಮನನ್ನು ಬೇಯಿಸಿ ಹಾಕಿ ಭೋಜನಾನಂತರ ವಾತಾಪಿಯೇ ಹೊರಗೆ ಬಾ ಎನ್ನುತ್ತಿದ್ದನು. ಅವನು ಹೊಟ್ಟೆ ಹರಿದು ಹೊರಬರುತ್ತಿದ್ದ. ಆದರೆ ಆಗಸ್ತ್ಯರು ಇದನ್ನರಿತು ವಾತಾಪೀ ಜೀರ್ಣೋ ಭವ ಎಂದಾಗ ಒಳಗೆ ಜೀರ್ಣನಾದ. ಹೊರಗೆ ಬರಲಿಲ್ಲವೆಂದು ಕಥೆ ಕೇಳಿ ಬರುವದು. ।।೧೫।।

**ಅನುಹ್ಲಾದಸ್ಯ ಸೂರ್ಮ್ಯಾಯಾಂ ಬಾಷ್ಕಲೋ ಮಹಿಷಸ್ತಥಾ ।**
**ವಿರೋಚನಸ್ತು ಪ್ರಾಹ್ಲಾದಿರ್ಬಲಿಸ್ತಸ್ಯಾಭವತ್ಕಿಲ ।।೧೬।।**

**ಅನುಹ್ಲಾದಸ್ಯ** ಅನುಹ್ಲಾದನಿಗೆ **ಸೂರ್ಮ್ಯಾಯಾಂ** ಸೂರ್ಮ್ಯಾ ಎಂಬುವವಳಲ್ಲಿ **ಬಾಷ್ಕಲಃ ತಥಾ ಮಹಿಷಃ** ಬಾಷ್ಕಲ ಮಹಿಷರೆಂಬ ಮಕ್ಕಳಾದರು. **ವಿರೋಚನಃ ತು** ವಿರೋಚನನಾದರೋ **ಪ್ರಾಹ್ಲಾದಿಃ** ಪ್ರಹ್ಲಾದರಾಜನ ಮಗನು **ತಸ್ಯ ಚ** ಆ ವಿರೋಚನನಿಗೆ **ಬಲಿಃ** ಬಲಿ ಎಂಬ ಮಗನು. **ಅಭವತ್ ಕಿಲ** ಜನಿಸಿದರಷ್ಟೇ. ।।೧೬।।

**ಬಾಣಜ್ಯೇಷ್ಠಂ ಕೇತುಶತಮಶನಾಯಾಂ ತತೋ ಭವತ್ ।**
**ತಸ್ಯಾನುಭಾವಃ ಸುಶ್ಲೋಕ್ಯಃ ಪಶ್ಚಾದೇವಾಭಿಧಾಸ್ಯತೇ ।।೧೭।।**

**ತತಃ** ಆ ಬಲಿಯಿಂದ **ಅಶನಾಯಾಂ** ಅಶನಾ ಎಂಬುವವಳಲ್ಲಿ **ಬಾಣಜ್ಯೇಷ್ಠಂ** ಬಾಣಾಸುರನೇ ಹಿರಿಯನಾಗಿರುವ **ಕೇತುಶತಂ** ನೂರು ಕೇತುಗಳು **ಅಭವತ್** ಹುಟ್ಟಿದರು. **ತಸ್ಯ** ಬಲಿಚಕ್ರವರ್ತಿಗಳ **ಸುಶ್ಲೋಕ್ಯಃ** ಪುಣ್ಯಕೀರ್ತಿರೂಪವಾದ **ಅನುಭಾವಃ** ಮಹಿಮೆಯು **ಪಶ್ಚಾತ್** ಮುಂದೆ ಎಂಟನೆಯ ಸ್ಕಂಧದಲ್ಲಿ **ಅಭಿಧಾಸ್ಯತೇ ಏವ** ವ್ಯಾಸರಿಂದ ಅಥವಾ ನನ್ನಿಂದ ಹೇಳಲ್ಪಡುವದು.

'ವಿಂಧ್ಯಾವಲಿಸ್ತದೋಪೇತ್ಯ ಪತ್ನೀ ಜಾಲಕಮಾಲಿನೀ' ಎಂದು ಎಂಟನೆಯ ಸ್ಕಂಧದಲ್ಲಿ ಹೇಳಿದ್ದರಿಂದ ಅವಳಿಗೇನೇ ಅಶನಾ ಎಂದು ನಾಮಾಂತರವೆಂದು ತಿಳಿಯಬೇಕು ಎನ್ನುತ್ತಾರೆ ಶ್ರೀಗಳವರು. ।।೧೭।।

**ಬಾಣಸ್ತ್ವಾರಾಧ್ಯ ಗಿರಿಶಂ ಲೇಭೇ ತದ್ಗಣಮುಖ್ಯತಾಮ್ ।**
**ಯತ್ಪಾರ್ಶ್ವೇ ಭಗವಾನಾಸ್ತೇ ಅದ್ಯಾಪಿ ಪುರಪಾಲಕಃ ॥೧೮॥**

**ಬಾಣಃ ತು** ಬಲಿಯ ಹಿರಿಯ ಮಗನಾದ ಬಾಣಾಸುರನು **ಗಿರಿಶಂ** ರುದ್ರದೇವರನ್ನು **ಆರಾಧ್ಯ** ಆರಾಧಿಸಿ **ತದ್ಗಣಮುಖ್ಯತಾಂ** ರುದ್ರಗಣದಲ್ಲಿ ಪ್ರಧಾನತೆಯನ್ನು **ಲೇಭೇ** ಹೊಂದಿದನು **ಯತ್ ಪಾರ್ಶ್ವೇ** ಯಾವ ಬಾಣನ ಸಮೀಪದಲ್ಲಿ **ಭಗವಾನ್** ರುದ್ರದೇವರು **ಅದ್ಯಾಪಿ** ಇಂದಿಗೂ **ಪುರಪಾಲಕಃ ಆಸ್ತೇ** ಕರುಣೆಯಿಂದ ಬಾಣಾಸುರ ಪಟ್ಟಣ ರಕ್ಷಕರಾಗಿ ಇರುವರು. ॥೧೮॥

**ಮರುತಶ್ಚ ದಿತೇಃ ಪುತ್ರಾಶ್ಚತ್ವಾರಿಂಶನ್ನವಾಧಿಕಾಃ ।**
**ತ ಆಸನ್ನಪ್ರಜಾಃ ಸರ್ವೇ ನೀತಾ ಇಂದ್ರೇಣ ಸಾತ್ಮತಾಮ್ ॥೧೯॥**

**ದಿತೇಃ ಪುತ್ರಾಃ** ದಿತಿಯ ಮಕ್ಕಳಾದ **ಮರುತಃ ಚ** ಮರುತ್ತರಾದರೂ **ನವಾಧಿಕಾಃ ಚತ್ವಾರಿಂಶತ್** ನಲವತ್ತೊಂಭತ್ತು ಜನರು (ಒಂಭತ್ತು ಹೆಚ್ಚಾದ ನಲವತ್ತು) **ತೇ ಸರ್ವೇ** ಅವರೆಲ್ಲರೂ **ಇಂದ್ರೇಣ** ಇಂದ್ರದೇವರಿಂದ **ಸಾತ್ಮತಾಂ** ಸಮಾನಜಾತಿತ್ವವನ್ನು ಅಂದರೆ ಸೋದರಭಾವವನ್ನು ಅರ್ಥಾತ್ ದೇವತ್ವವನ್ನು ನೀತಾಃ ಹೊಂದಿದರು. ದೈತ್ಯರಾಗಲಿಲ್ಲ. **ಚತ್ವಾರಿಶಂತ್** ನಲವತ್ತು **ನವ ಚ** ಒಂಬತ್ತೂ ಹೀಗೂ ಮಾಡಬಹುದು. ಆ ಅಧಿಕಾಃ ಆ ಅತ್ಯಂತವಾಗಿ ಆಧಿಃ ಇಂದ್ರಸ್ಯ ತೇ ಆಧಯಃ ತೇ ಏವ ಆಧಿಕಾಃ ಮನೋವ್ಯಥಾರೂಪಾಃ ಮನೋವ್ಯಥೆಯ ರೂಪರಾದರು. ನ ವಿದ್ಯಂತೇ ಪ್ರಜಾಃ ಯೇಷಾಂ ತೇ ನಪ್ರಜಾಃ ಎಂದು ನ ಸಮಾಸ. ಆದ್ದರಿಂದ 'ನಞ್‌ದುಸ್ಸುಭ್ಯಃ' ಎಂಬುದಕ್ಕೆ ಪ್ರಾಪ್ತಿ ಇಲ್ಲ. ಚಕರ್ತ ಸಪ್ತಧಾ ಗರ್ಭಂ ಎಂದು ಹೇಳುವಂತೆ ಗರ್ಭದಲ್ಲಿ ಪ್ರವೇಶ ಮಾಡಿ ವಜ್ರಾಯುಧದಿಂದ ತುಂಡು ಮಾಡಲ್ಪಟ್ಟರು. **ಸಾತ್ಮತಾಂ ನೀತಾಃ** ಪ್ರಾಣ ಸಹಿತರಾಗಿಯೂ ಮಾಡಲ್ಪಟ್ಟರು. ಹೀಗೂ ಅರ್ಥ ಮಾಡಿರುವರು. ॥೧೯॥

**ರಾಜೋವಾಚ –**

**ಕಥಂ ತ ಆಸುರಂ ಭಾವಮಪೋಹ್ಯೌತ್ಪತ್ತಿಕಂ ಗುರೋ ।**
**ಇಂದ್ರೇಣ ಪ್ರಾಪಿತಾಃ ಸಾಮ್ಯಂ ಕಿಂ ನು ಸಾಧು ಕೃತಂ ಹಿ ತೈಃ ॥೨೦॥**

**ಇಮೇ ಶ್ರದ್ದಧತೇ ವಿದ್ವನ್ನೃಷಯೋ ಹಿ ಮಯಾ ಸಹ ।**
**ಪರಿಜ್ಞಾನಾಯ ಭಗವಂಸ್ತನ್ನೋ ವ್ಯಾಖ್ಯಾತುಮರ್ಹಸಿ ॥೨೧॥**

**ಗುರೋ** ಶುಕಾಚಾರ್ಯರೇ **ತೇ** ಆ ಮರುತ್ತುಗಳು **ಔತ್ಪತ್ತಿಕಂ** ಹುಟ್ಟಿನಿಂದ ಬಂದ (ಸ್ವಾಭಾವಿಕವಾದ) **ಆಸುರಂ ಭಾವಂ** ದೈತ್ಯತೆಯನ್ನು **ಅಪೋಹ್ಯ** ತೊರೆದು **ಇಂದ್ರೇಣ** ಇಂದ್ರದೇವರಿಂದ **ಸಾಮ್ಯಂ** ದೇವತ್ವವನ್ನು (ಸಖ್ಯಂ ಸ್ನೇಹವನ್ನು) **ಕಥಂ ಪ್ರಾಪಿತಾಃ** ಹೇಗೆ ಹೊಂದಿಸಲ್ಪಟ್ಟರು. **ತೈಃ** ಅವರಿಂದ **ಕಿಂ ನು ಸಾಧು ಕೃತಂ** ದೇವತ್ವಪ್ರಾಪಕವಾದ ಯಾವ ಪುಣ್ಯವು ಮಾಡಲ್ಪಟ್ಟಿತು. **ಹಿ ಚ** ಇದು ಶಾಸ್ತ್ರಸಿದ್ಧವು. **ವಿದ್ವನ್** ಜ್ಞಾನಿಗಳಾದ **ಭಗವನ್** ಪೂಜ್ಯರೇ **ಇಮೇ** ಇಲ್ಲಿ ನೆರೆದಿರುವ ಈ **ಋಷಯಃ** ಋಷಿಗಳೂ **ಮಯಾ ಸಹ** ನನ್ನೊಡನೆ **ಪರಿಜ್ಞಾನಾಯ** ತಿಳಿಯಲು **ಶ್ರದ್ದಧತೇ** ಶ್ರದ್ಧೆಯುಳ್ಳವರಾಗಿದ್ದಾರೆ **ತತ್** ಆದ ಕಾರಣ **ನಃ** ನಮಗೆ **ತತ್** ಆ ವಿಷಯವನ್ನು **ವ್ಯಾಖ್ಯಾತುಂ** ವಿಸ್ತಾರವಾಗಿ ಹೇಳಲು **ಅರ್ಹಸಿ** ಯೋಗ್ಯರಾಗಿರುವಿರಿ. **ಇಮೇ ಅಶ್ರದ್ದಧತೇ** ಎಂದು ಪದ ವಿಭಾಗ ಮಾಡಿ ವಿಶ್ವಾಸ ಮಾಡುವದಿಲ್ಲ. ಅಸುರ ಜಾತಿಯವರ ಸ್ವಭಾವ ಬದಲಾಗಲು ಸಾಧ್ಯವಿಲ್ಲ. ಆದ್ದರಿಂದ ಸ್ವಭಾವ ಬದಲಾಗುವದು ಅಸಂಭಾವಿತವಾದ್ದರಿಂದ ಸಂಶಯ ನಿವಾರಿಸಲು ಜ್ಞಾನಿಗಳಾದ ನೀವು ಹೇಳಿರಿ. **ನೋ ಶ್ರದ್ದಧತೇ** ಎಂದೂ ಅನ್ವಯ ಮಾಡಬಹುದು. ಇಷ್ಟು ಮಾತ್ರ ನಾನು ಕೇಳಿರುವೆನು. ಹೆಚ್ಚಿನದು ನನಗೆ ತಿಳಿಯದು ಎನ್ನುವಂತಿಲ್ಲ ಎಂಬುದನ್ನು ವಿದ್ವನ್ ಎಂಬುದರಿಂದ ತಿಳಿಸಿರುವನು. ಅ ಎಂಬುದೇ ನಞರ್ಥಕ ಅವ್ಯಯ. ॥೨೦-೨೧॥

**ಸೂತ ಉವಾಚ –**

**ತದ್ವಿಷ್ಣುರಾತಸ್ಯ ಸ ಬಾದರಾಯಣಿ**
**ರ್ವಚೋ ನಿಶಮ್ಯಾದೃತಮರ್ಥವನ್ಮುನಿಃ ।**
**ಸಭಾಜಯಂಸ್ತನ್ನಿಭೃತೇನ ಚೇತಸಾ**
**ಜಗಾದ ಸತ್ರಾಯಣ ಸರ್ವದರ್ಶನಃ ॥೨೨॥**

**ಹೇ ಸತ್ರಾಯಣ** ಸತ್ರಯಾಗವೇ ಆಶ್ರಯವಾಗಿ ಉಳ್ಳ ಸತ್ರಯಾಗದಲ್ಲಿ ಪ್ರಧಾನರಾದ ಶೌನಕರೇ **ಸರ್ವದರ್ಶನಃ** ಈ ಬಗೆಯ ಎಲ್ಲ ಕಥೆಗಳನ್ನು ಬಲ್ಲ ಅಥವಾ ಸರ್ವಃ ಶರ್ವಃ ಇತಿ ದರ್ಶನಂ ಯಸ್ಯ ಸಃ ಸರ್ವದರ್ಶನಃ ರುದ್ರದೇವರಿಂದ ತಿಳಿಯಲ್ಪಟ್ಟ 'ಸರ್ವಃ ಶರ್ವಃ ಕಾಲಂಜರಃ' ಎಂದು ನಾಮನಿಧಾನವಿದೆ. **ಮುನಿಃ** ಶ್ರೀಹರಿಯ ಮನನಶೀಲರಾದ **ಸಃ ಬಾದರಾಯಣಿಃ** ವ್ಯಾಸಪುತ್ರರಾದ ಶುಕಾಚಾರ್ಯರು **ವಿಷ್ಣುರಾತಸ್ಯ** ಪರೀಕ್ಷಿದ್ರಾಜನ **ಆದೃತಂ** ಆದರದಿಂದ ಕೂಡಿದ **ಅರ್ಥವತ್** ಬಹಳ ಅರ್ಥಗಳಿಂದ ಕೂಡಿದ ಮತ್ತು ಪುರುಷಾರ್ಥದಿಂದ ಕೂಡಿದ **ತದ್**

**ವಚಃ** ಆ ಪ್ರಶ್ನರೂಪವಾದ ಮಾತನ್ನು ನಿಶಮ್ಯ ಕೇಳಿ **ಸಭಾಜಯನ್** ಪರೀಕ್ಷಿತನನ್ನು ಪ್ರಶಂಸಿಸಿ **ತನ್ನಿಭೃತೇನ ಚೇತಸಾ** ಈ ವಿಧವಾದ ಪ್ರಶ್ನದಿಂದ ಪೂರ್ಣವಾದ ಮನಸ್ಸಿನಿಂದ ತೃಣೀಕೃತಮರಣನಿವನೆಂದು ಸ್ನೇಹಪೂರ್ಣವಾದ ಮನಸ್ಸಿನಿಂದ **ಜಗಾದ** ಹೇಳಿದರು. ।।೨೨।।

**ಶ್ರೀಶುಕ ಉವಾಚ -**

> **ಹತಪುತ್ರಾ ದಿತಿಃ ಶಕ್ರ ಪಾರ್ಷ್ಣಿಗ್ರಾಹೇಣ ವಿಷ್ಣುನಾ ।**
> **ಮನ್ಯುನಾ ಶೋಕದೀಪ್ತೇನ ಜ್ವಲಂತೀ ಪರ್ಯಚಿಂತಯತ್ ।।೨೩।।**

**ಶಕ್ರಪಾರ್ಷ್ಣಿಗ್ರಾಹೇಣ** ಇಂದ್ರನ ಹಿಂಭಾಗವನ್ನು ಧರಿಸಿದ 'ಪಾರ್ಷ್ಣಿಃ ಪಾಶ್ಚಾತ್ಯ ಭಾಗೇ ಸ್ಯಾತ್ ಸೇನಾಪೃಷ್ಠೇ ಚ' ಎಂದು ವಿಶ್ವವಿದೆ. ಸಹಾಯಕನಾದ ಎಂದರ್ಥ **ವಿಷ್ಣುನಾ** ಶ್ರೀಹರಿಯಿಂದ **ಹತಪುತ್ರಾ** ಮಕ್ಕಳಾದ ಹಿರಣ್ಯಾಕ್ಷ-ಹಿರಣ್ಯಕಶಿಪುರನ್ನು ಕಳೆದುಕೊಂಡ ಹತೌ ಪುತ್ರೌ ಯಸ್ಯಾ ಸಾ **ದಿತಿಃ** ದಿತಿದೇವಿಯು **ಶೋಕದೀಪ್ತೇನ** ದುಃಖದಿಂದ ಹೆಚ್ಚಾದ **ಮನ್ಯುನಾ** ಕೋಪದಿಂದ **ಜ್ವಲಂತೀ ಚ** ಪ್ರಜ್ವಲಿಸುವವಳಾಗಿ **ಪರ್ಯಚಿಂತಯತ್** ಆಲೋಚಿಸಿದಳು.

ಶ್ರೀಹರಿಯು ನಿನ್ನ ಮಕ್ಕಳನ್ನು ಸಂಹರಿಸಿದರೇ ಇಂದ್ರನ ಅಪರಾಧವೇನು? ಅವನನ್ನು ಕೊಲ್ಲುವ ಮಗನನ್ನೇಕೆ ಯಾಚಿಸುವಿ ಎಂದರೆ ಪಾರ್ಷ್ಣಿಗ್ರಾಹಿಣಾ ಎಂದು ಹೇಳುವಳು. ಮುಖ್ಯಕಾರಣ ಇಂದ್ರನೇ ಎಂದು ಭಾವ. ।।೨೩।।

> **ಕದಾ ನು ಭ್ರಾತೃಹಂತಾರಮಿಂದ್ರಿಯಾರಾಮಮುಲ್ಬಣಮ್ ।**
> **ಅಕ್ಲಿನ್ನಹೃದಯಂ ಪಾಪಂ ಘಾತಯಿತ್ವಾ ಸ್ವಪೇ ಸುಖಮ್ ।।೨೪।।**

**ಭ್ರಾತೃಹಂತಾರಂ** ತಮ್ಮಂದಿರಾದ ದೈತ್ಯರನ್ನು ಕೊಂದ **ಇಂದ್ರಿಯಾರಾಮಂ** ಇಂದ್ರಿಯಗಳನ್ನು ತೃಪ್ತಿಪಡಿಸುವಲ್ಲಿ ಸಂತೋಷಿಸುವ **ಉಲ್ಬಣಂ** ಕ್ರೂರಿಯಾದ **ಅಕ್ಲಿನ್ನಹೃದಯಂ** ನಿಷ್ಕರುಣೆಯಾದ **ಪಾಪಂ** ಪಾಪಿಯಾದ ಇಂದ್ರನನ್ನು **ಘಾತಯಿತ್ವಾ** ಹುಟ್ಟುವ ಮಕ್ಕಳಿಂದ ಸಂಹಾರ ಮಾಡಿಸಿ **ಕದಾ ನು** ಯಾವಾಗ **ಸುಖಂ ಸ್ವಪೇ** ನಾನು ಸುಖವಾಗಿ ನಿದ್ರಿಸುವೆನು ಎಂದೂ ಆಲೋಚಿಸಿದಳು.

> **ಕೃಮಿವಿಡ್ಭಸ್ಮಸಂಜ್ಞಾಂತೇ ಯಸ್ಯೇಶಾಭಿಹಿತಸ್ಯ ವಾ ।**
> **ಭೂತಧ್ರುಕ್ ತತ್ಕೃತೇ ಸ್ವಾರ್ಥಂ ಕಿಂ ವೇದ ನಿರಯೋ ಯತಃ ।।೨೫।।**

**ಈಶಾಭಿಹಿತಸ್ಯ ವಾ** ಈಶನು ನಾನು ರಾಜನು ನಾನು ಎಂದು ಕರೆಯಲ್ಪಡುವದಾಗಿದ್ದರೂ **ಯಸ್ಯ** ಯಾವ ದೇಹಕ್ಕೆ **ಅಂತೇ** ಮರಣಾನಂತರ **ಕ್ರಿಮಿವಿಡ್ಭಸ್ಮಸಂಜ್ಞಾ ಭವೇತ್** ಮೂರಾರು ದಿನಗಳಿಟ್ಟಲ್ಲಿ ಹುಳುಗಳು ಬಿದ್ದು ಹುಳು ಎಂಬ ಹೆಸರು, ನಾಯಿ ಮೊದಲಾದವು ತಿಂದು ಹೋದಲ್ಲಿ ವಿಟ್ (ಅಮೇಧ್ಯ) ಎಂಬ ಸಂಜ್ಞೆಯು, ಅಗ್ನಿಯಲ್ಲಿ ಸುಟ್ಟರೆ ಭಸ್ಮ ಬೂದಿ ಎಂಬ ಹೆಸರು ಬರುವದೋ **ತತ್ಕೃತೇ** ಅಂಥ ದೇಹಕ್ಕಾಗಿ **ಭೂತಧ್ರುಕ್** ಎಲ್ಲ ಪ್ರಾಣಿಗಳ ಹಿಂಸಕನು **ಸ್ವಾರ್ಥಂ** ಸ್ವಪ್ರಯೋಜನವನ್ನು **ಕಿಂ ವೇದ** ತಿಳಿದಿರುವನೇನು ? ತಿಳಿದಿಲ್ಲವೆಂದರ್ಥ. **ಯಃ** ಯಾವನು **ಸ್ವಾರ್ಥಂ ಕುರುತೇ** ಸ್ವಪ್ರಯೋಜನವನ್ನೇ ಮಾಡಿಕೊಳ್ಳುವನೋ **ಸಃ** ಅವನು **ವೇದ ಕಿಂ** ತಿಳಿದವನೇನು ಜ್ಞಾನಿಯಲ್ಲವೆಂದರ್ಥ. **ಯತಃ** ಏಕೆಂದರೆ **ಯತಃ** ಆ ಭೂತದ್ರೋಹದಿಂದ **ನಿರಯಃ ಭವತಿ** ನರಕವಾಗುವದು. ಆದ್ದರಿಂದ ತನ್ನ ಪ್ರಯೋಜವನ್ನು ಹಾಳು ಮಾಡಿಕೊಂಡವನೆಂದರ್ಥ. **ಸ್ವಾರ್ಥಂ ವೇದ** ತಾತ್ಕಾಲಿಕ ಸ್ವಾರ್ಥ ಮಾತ್ರ ತಿಳಿದವನು ಮುಂದೆ ಆಗುವ **ಸ್ವಾರ್ಥಂ** ತನ್ನ ನಾಶವನ್ನು **ವೇದ ಕಿಂ** ತಿಳಿದವನೇನು **ಸ್ವಾರ್ಥಂ** ಶಾಶ್ವತಿಕವಾದ ದೇವರು ಕೊಡುವದನ್ನು ತಿಳಿದಿರುವನೇ **ಅಸ್ವಾರ್ಥಂ ವೇದ** ಅನರ್ಥ ತಿಳಿದಿರುವನಷ್ಟೇ. ಭೂತದ್ರೋಹದಿಂದ ಇಲ್ಲಿ ದುಃಖ, ಪರತ್ರ ನರಕಾದಿಗಳನ್ನು ಅರಿತಿರುವನೇ ಇಲ್ಲ, ತಿಳಿದಿದ್ದರೆ ಕಾರ್ಯ-ಕಾರಣ ಭಾವ ತಿಳಿದಿದ್ದರೆ ಹೀಗೆ ಮಾಡಲಾರರೆಂದು ಭಾವ. ।।೨೫।।

**ಆಶಾಸಾನಸ್ಯ ತಸ್ಯೇದಂ ಧ್ರುವಮುನ್ನದ್ಧಚೇತಸಃ ।**
**ಮದಶೋಷಣಮಿಂದ್ರಸ್ಯ ಭೂಯಾದ್ಯೇನ ಸುತೋ ಹಿ ಮೇ ।।೨೬।।**

**ಇದಂ** ಈ ದೇಹ ಮೊದಲಾದ ಜಗತ್ತು **ಧ್ರುವಂ ಇತಿ** ಶಾಶ್ವತವೆಂದು **ಆಶಾಸಾನಸ್ಯ** ಅಪೇಕ್ಷಿಸುವ ತಿಳಿದಿರುವ ಆದ್ದರಿಂದಲೇ **ಉನ್ನದ್ಧಚೇತಸಃ** ಉದ್ಧತವಾದ ಮನಸ್ಸುಳ್ಳ **ತಸ್ಯ ಇಂದ್ರಸ್ಯ** ಆ ದ್ರೋಹಿ ಇಂದ್ರನ **ಮದಶೋಷಣಂ** ಅಹಂಕಾರನಾಶವು **ಯೇನ** ಯಾವ ಮಗನಿಂದ **ಭೂಯಾತ್** ಆಗುವದೋ **ಸಃ** ಅಂತಹ **ಸುತಃ** ಮಗನು **ಮೇ** ನನಗೆ **ಭೂಯಾತ್ ಹಿ** ಆಗಬೇಕಲ್ಲವೇ. ।।೨೬।।

ಇದು ಆಗುವದೋ ಇಲ್ಲವೋ ಎಂದಿಲ್ಲ, ಸರ್ವಥಾ ಆದರಿಂದ ನನಗೆ ಸಂತೋಷ ಎಂದೂ ಹೇಳುವರು. ಮದಶೋಷಣಂ ಇತಿ ಮಮ ನ ವಿದ್ಯತೇ ಶೋಷಣಂ ಯಸ್ಮಾತ್ ತತ್ ಮದಶೋಷಣಂ ಮಗನನ್ನು ಕೊಡುವದು ನನಗೆ ಪುಷ್ಟಿಕರವೆಂದು ಭಾವ. ।।೨೬।।

**ಇತಿ ಭಾವೇನ ಸಾ ಭರ್ತುರಾಚಚಾರಾಸಕೃತ್ಪ್ರಿಯಮ್ ।**
**ಶುಶ್ರೂಷಯಾನುರಾಗೇಣ ಪ್ರಶ್ರಯೇಣ ದಮೇನ ಚ ॥೨೭॥**

**ಇತಿ ಭಾವೇನ** ಈ ಅಭಿಪ್ರಾಯದಿಂದ **ಸಾ** ಆ ದಿತಿದೇವಿಯು **ಶುಶ್ರೂಷಯಾ** ಸೇವೆಯಿಂದಲೂ ಏನು ಹೇಳುವರೆಂದು ಕೇಳುವ ಇಚ್ಛೆಯಿಂದ ಎಂದೂ ಅರ್ಥ. 'ಶುಶ್ರೂಷಾ ಶ್ರೋತುಮಿಚ್ಛಾ ವಾ ಪರಿಚರ್ಯಾಕಥನಯೋಃ' ಎಂದು ವಿಶ್ವ. **ಅನುರಾಗೇಣ** ಪ್ರೀತಿಯಿಂದಲೂ **ಪ್ರಶ್ರಯೇಣ** ವಿನಯದಿಂದಲೂ **ದಮೇನ ಚ** ಇಂದ್ರಿಯನಿಗ್ರಹದಿಂದಲೂ **ಭರ್ತುಃ** ಪತಿಯಾದ ಕಶ್ಯಪರ **ಪ್ರಿಯಂ** ಇಷ್ಟವಾದುದನ್ನು **ಅಸಕೃತ್** ಅನೇಕ ಬಾರಿ **ಆಚಚಾರ** ಆಚರಿಸಿದಳು. ॥೨೭॥

**ಭಕ್ತ್ಯಾ ಪರಮಯಾ ರಾಜನ್ ಮನೋಜ್ಞೈರ್ವಲ್ಗುಭಾಷಿತೈಃ ।**
**ಮನೋ ಜಗ್ರಾಹ ಭಾವಜ್ಞಾ ಸುಸ್ಮಿತಾಪಾಂಗವೀಕ್ಷಣೈಃ ॥೨೮॥**

**ರಾಜನ್** ಪರೀಕ್ಷಿತನೇ **ಭಾವಜ್ಞಾ** ಪತಿಯ ಇಂಗಿತವನ್ನರಿತವಳು **ಪರಮಯಾ ಭಕ್ತ್ಯಾ** ಅತಿಶಯವಾದ ಭಕ್ತಿಯಿಂದ **ಮನೋಜ್ಞೈಃ** ಮನೋಹರಗಳಾದ **ವಲ್ಗುಭಾಷಿತೈಃ** ಇಂಪಾದ ಮಾತುಗಳಿಂದ **ಸುಸ್ಮಿತಾಪಾಂಗವೀಕ್ಷಣೈಃ ಚ** ಒಳ್ಳೆಯ ಮಂದಹಾಸದಿಂದ ಕೂಡಿದ ಕುಡಿಗಣ್ಣಿನ ನೋಟದಿಂದ **ಮನಃ ಚ** ಕಶ್ಯಪರ ಮನಸ್ಸನ್ನು **ಜಗ್ರಾಹ** ತನ್ನ ವಶ ಮಾಡಿಕೊಂಡಳು. ॥೨೮॥

ಕಣ್ಣಿನ ಕುಡಿನೋಟ ಸಾಮಾನ್ಯವಲ್ಲವೆಂದು ಅಪಾಂಗವೀಕ್ಷಣೈಃ ಎಂಬ ಪದದಿಂದ ಹೇಳುವರು. ಮನ್ಮಥೋದ್ರೇಕಸಾಧನಗಳಾದವುಗಳಿಂದ ಎಂದರ್ಥ. ಮನ್ಮಥನ ನೋಟ ಸದೃಶವಾದ ನೋಟದಿಂದ ಎಂದೂ ಅರ್ಥ. ಇದರಿಂದ ಮನೋಭವನ (ಕಾಮ) ಪ್ರಾದುರ್ಭಾವಕ್ಕೆ ತಡವಿಲ್ಲವೆಂದು ಸೂಚಿತವಾಗುವದು. ॥೨೮॥

**ಏವಂ ಸ್ತ್ರಿಯಾ ಜಡೀಭೂತೋ ವಿದ್ವಾನಪಿ ವಿದಗ್ಧಯಾ ।**
**ಬಾಢಮಿತ್ಯಾಹ ವಿವಶೋ ನ ತಚ್ಚಿತ್ರಂ ಹಿ ಯೋಷಿತಿ ॥೨೯॥**

**ವಿದ್ವಾನ್ ಅಪಿ** ಜ್ಞಾನಿಗಳಾಗಿದ್ದರೂ ಕಶ್ಯಪರು **ವಿದಗ್ಧಯಾ** ಪ್ರೌಢೆಯಾದ ಚತುರೆಯಾದ **ಸ್ತ್ರಿಯಾ** ಸ್ತ್ರೀಯಾದ ಆ ದಿತಿಯಿಂದ **ಏವಂ** ಮೇಲೆ ಹೇಳಿದಂತೆ **ಜಡೀಭೂತಃ ಸನ್** ವಿಚಾರ ಮಾಡುವ ಸಾಮರ್ಥ್ಯವಿಲ್ಲದವನಂತೆ ಮಾಡಲ್ಪಟ್ಟವರಾಗಿ **ವಿವಶಃ ಸನ್** ಸ್ತ್ರೀಪರವಶರಾಗಿ **ಬಾಢಂ ಇತಿ** ಹಾಗೆಯೇ ಆಗಲಿ ನಿನ್ನ ಇಷ್ಟವನ್ನು

ನೆರವೇರಿಸುವೆನು ಎಂದು **ಆಹ** ಹೇಳಿದರು. **ತತ್** ಹೀಗೆ ಪತಿಯನ್ನು ವಶಪಡಿಸಿಕೊಳ್ಳುವದು **ಯೋಷಿತಿ** ಸ್ತ್ರೀಯಲ್ಲಿ **ಚಿತ್ರಂ ನ ಹಿ** ಆಶ್ಚರ್ಯವೇನೂ ಅಲ್ಲ. ಹಿ ಶಬ್ದದಿಂದ 'ಅಂಗಾರಸದೃಶೀ ನಾರೀ ಘೃತಕುಂಭಸಮಃ ಪುಮಾನ್' ಎಂಬ ಪ್ರಸಿದ್ಧಿ ತಿಳಿಸುವರು.

ಇಷ್ಟು ಶಕ್ತಿ ಏಕೆ ಸ್ತ್ರೀಯಲ್ಲಿ ಎಂದರೆ ಅವರ ಉತ್ಪತ್ತಿ ಹೇಗೆಂದು ಹೇಳುವರು-

**ವಿಲೋಕ್ಯೈಕಾಂತಭೂತಾನಿ ಭೂತಾನ್ಯಾದೌ ಪ್ರಜಾಪತಿಃ ।**
**ಸ್ತ್ರಿಯಂ ಚಕ್ರೇ ಸ್ವದೇಹಾರ್ಧಾಂ ಯಯಾ ಪುಂಸಾಂ ಮತಿರ್ಹೃತಾ ।।೩೦।।**

**ಆದೌ** ಜಗತ್ತಿನ ಸೃಷ್ಟಿಯ ಪ್ರಾರಂಭದಲ್ಲಿ **ಪ್ರಜಾಪತಿಃ** ಬ್ರಹ್ಮದೇವರು **ಏಕಾಂತಭೂತಾನಿ** ಪರಸ್ಪರ ಯಾರಲ್ಲಿಯೂ ಯಾರಿಗೂ ಸ್ನೇಹವಿಲ್ಲದಿರುವ ಕೇವಲ ಒಂದಕ್ಕೊಂದು ಮೃತ್ಯುಗಳಾಗಿರುವ **ಭೂತಾನಿ** ಪ್ರಾಣಿಗಳನ್ನು **ವಿಲೋಕ್ಯ** ನೋಡಿ ಅವುಗಳಲ್ಲಿ ಪರಸ್ಪರ ಸ್ನೇಹ ಹುಟ್ಟಿಸುವದಕ್ಕಾಗಿ ಮೈಥುನದಿಂದ ಸೃಷ್ಟಿಯ ವೃದ್ಧಿಗಾಗಿ **ಸ್ವದೇಹಾರ್ಧಾಂ** ತನ್ನ ದೇಹದ ಅರ್ಧ ಭಾಗವಾದ **ಸ್ತ್ರಿಯಂ** ಹೆಣ್ಣನ್ನು **ಚಕ್ರೇ** ಸೃಷ್ಟಿಸಿದನು. **ಸ್ವದೇಹಾರ್ಧಾತ್** ಎಂಬ ಪಾಠದಲ್ಲಿ ತನ್ನ ದೇಹಾರ್ಧದಿಂದ ಎಂದರ್ಥ. **ಯಯಾ** ಯಾವ ಸ್ತ್ರೀಯಿಂದ **ಪುಂಸಾಂ** ಪುರುಷರ **ಮತಿಃ** ಬುದ್ಧಿಯು **ಹೃತಾ** ಅಪಹರಿಸಲ್ಪಟ್ಟಿತು. **ಹತಾ** ಎಂದಿದ್ದಾಗ ನಷ್ಟಪ್ರಾಯವೆಂದರ್ಥ. ಇದರಿಂದ ಪುರುಷವಶೀಕರಣ ಸ್ತ್ರೀಯರಿಗೆ ನಿಸರ್ಗಸಿದ್ಧವೆಂದಾಯಿತು. **ಚಕ್ರೇ** ಎಂದು ಆತ್ಮನೇ ಪದ ಪ್ರಯೋಗದಿಂದ ಅದರ ಫಲ ಪುತ್ರಿಕಾಕಾಮನ ರೂಪವಾದುದು ಲೋಕದೃಷ್ಟಿಯಿಂದ ತನ್ನಲ್ಲಿಯೂ ಇದೆ ಎಂದು ಸೂಚಿಸಿರುವರು. (ಅತ ಏವ ಪರ ಪ್ರಯೋಜನಮಪಿ ಆತ್ಮಗಾಮೀವ ಮನ್ಯಮಾನಸ್ಯ ಭಗವತಃ ಶಾಸ್ತ್ರಪ್ರಣಯನಂ ಇತಿ ಜ್ಞಾಪಯಿತುಂ ಆತ್ಮನೇ ಪದಪ್ರಯೋಗಃ ಎಂದು ಸುಧೆಯಲ್ಲಿ ಹೇಳಿದೆ.) ಯಯಾ ಮತಿಃ ಹತಾ ಭವತಿ ಎಂಬುದು ಗ್ರಂಥಕಾರರ ಮಾತೆಂದಾಗಲಿ ತಾತ ಎಂದು ಮುಂದಿನ ಸಂಭೋಧನದಿಂದ ಶುಕೋಕ್ತಿ ಎಂದಾಗಲಿ ತಿಳಿಯಬಹುದು ಕಾರಣ ಅಸಂಗತವಲ್ಲ. ।।೩೦।।

**ಏವಂ ಶುಶ್ರೂಷಿತಸ್ತಾತ ಭಗವಾನ್ ಕಶ್ಯಪಃ ಸ್ತ್ರಿಯಾ ।**
**ಪ್ರಹಸ್ಯ ಪರಮಪ್ರೀತೋ ದಿತಿಮಾಹಾಭಿನಂದ್ಯ ಚ ।।೩೧।।**

**ತಾತ** ಮಗು ಪರೀಕ್ಷಿತನೇ **ಸ್ತ್ರಿಯಾ** ಹೆಂಗಸಾದ ದಿತಿಯಿಂದ **ಏವಂ** ಮೇಲೆ ಹೇಳಿದಂತೆ **ಶುಶ್ರೂಷಿತಃ** ಸೇವಿತರಾದ **ಭಗವಾನ್** ಪೂಜ್ಯರಾದ **ಕಶ್ಯಪಃ** ಕಶ್ಯಪರು




**ಪರಮಪ್ರೀತಃ** ಬಹಳ ಸಂತುಷ್ಟರಾಗಿ **ಪ್ರಹಸ್ಯ** ನಕ್ಕು **ಚ** ಮತ್ತು **ಅಭಿನಂದ್ಯ** ಅವಳನ್ನು ಮೆಚ್ಚುಗೆಯ ಮಾತುಗಳಿಂದ ಪ್ರಶಂಸಿಸಿ **ದಿತಿಂ ಆಹ** ದಿತಿಯನ್ನು ಕುರಿತು ಹೇಳಿದರು ॥೩೦॥

**ಕಶ್ಯಪ ಉವಾಚ -**

**ವರಂ ವರಯ ವಾಮೋರು ಪ್ರೀತಸ್ತೇಽಹಮನಿಂದಿತೇ ।**
**ಸ್ತ್ರೀಣಾಂ ಭರ್ತರಿ ಸುಪ್ರೀತೇ ಕಃ ಕಾಮ ಇಹ ಚಾಗಮಃ ॥೩೨॥**

**ಹೇ ವಾಮೋರು** ಸುಂದರ ತೊಡೆಯವಳೇ **ವರಂ** ವರವನ್ನು **ವರಯ** ಕೇಳಿಕೋ **ಹೇ ಅನಿಂದಿತೇ** ನಿಂದೆಯಿಲ್ಲದವಳೇ **ತೇ** ನಿನ್ನ ವಿಷಯದಲ್ಲಿ **ಅಹಂ** ನಾನು **ಪ್ರೀತಃ** ಪ್ರೀತನಾಗಿದ್ದೇನೆ **ಭರ್ತರಿ** ಗಂಡನು **ಸ್ತ್ರೀಣಾಂ** ಹೆಂಡತಿಯರಿಗೆ **ಸುಪ್ರೀತೇ** ಸುಪ್ರೀತನಾಗಿರುವಾಗ **ಇಹ** ಈ ಲೋಕದಲ್ಲಿಯೂ **ಚ** ಪರಲೋಕದಲ್ಲಿಯೂ **ಕಃ ಕಾಮಃ** ಯಾವ ಆಸೆಯು ಯಾವ ಪುರುಷಾರ್ಥವೂ **ಅಗಮಃ** ಹೊಂದಲಾಗದು. ಎಲ್ಲವೂ ಹೊಂದಲಾಗುವದು ಎಂದು ಭಾವ.

ಭರ್ತರಿ ಸುಪ್ರೀತೇ ಕಾಮಃ ಇಚ್ಛಾವಿಷಯ ಯಾವುದೂ ಇಲ್ಲ. ಬೇಕೆನಿಸಿದ ಕ್ಷಣದಲ್ಲಿಯೇ ಎಲ್ಲ ದೊರೆಯುವದು. ಆದ್ದರಿಂದ ಕಾಮನಾ ವಿಷಯಗಳೇ ಉಳಿಯುವದಿಲ್ಲವೆಂದು ಭಾವ. ಏಕೆಂದರೆ ಹೇಳುವರು 'ಚಾಗಮ ಇವ' ಎಂದು ಭರ್ತಾ ಚಾಯ್ಯತೇ ಇತಿ ಚಃ ಗಂಡನು ಸಂಪಾದಿತವಾದ **ಅಗಮಃ** ಕಲ್ಪವೃಕ್ಷವಿದ್ದಂತೆ. ಐತರೇಯಭಾಷ್ಯದಲ್ಲಿ 'ಪರಬ್ರಹ್ಮಣೋ ವರಣಾದೇವ ಸಮ್ಯಕ್ ಚಾಯಿತಂ ಸ್ವರೂಪಮಿತೀತಿ । ವಿಷ್ಣುವಿನ ಪ್ರಸಾದದಿಂದ ಸ್ವರೂಪವು ಸಂಪಾದಿತವಾಯಿತು ಎಂದು. ಅದರಂತೆ ಛಾಂದೋಗ್ಯಭಾಷ್ಯದಲ್ಲಿ ಬ್ರಹ್ಮವರ್ಚಸ ಪದ ವ್ಯಾಖ್ಯಾನ ಮಾಡುವಾಗ 'ಬ್ರಹ್ಮ ಸಂಪ್ರಾಪ್ತ್ಯಾ ವರತಾಂ ಮುಕ್ತಿಗಾಮಪಿ' ಎಂದಿದ್ದಾರೆ. ವೇದೇಶತೀರ್ಥರು ಚಾಯಿತಂ ಸಂಪಾದಿತಂ ಎಂದು ವ್ಯಾಖ್ಯಾನಿಸಿದ್ದಾರೆ. ಆದ್ದರಿಂದ ಚಾಯ್ಯತೇ ಇತಿ ಚಃ ಚಾಸೌ ಅಗಮಶ್ಚ ಚಾಗಮಃ ಸಮೀಚನದ್ರುಮಃ ಆಸಾಧಾರಣ್ಯ ನ್ಯಾಯೇನ ಸುರತರುಃ ॥೩೨॥

ಪರಮದೈವತವು ಪ್ರಸನ್ನನಾದರೆ ಸರ್ವಪುರುಷಾರ್ಥ ದೊರೆಯುವದು ಎಂದು ಪ್ರಸಿದ್ಧಿಯುಂಟು. ಗಂಡನು ಸುಪ್ರೀತನಾದರೆ ಸರ್ವಪುರುಷಾರ್ಥಲಾಭ ಹೇಗೆ ಎಂದರೆ ಹೇಳುತ್ತಾರೆ-

**ಪತಿರೇವ ಹಿ ನಾರೀಣಾಂ ದೈವತಂ ಪರಮಂ ಸ್ಮೃತಮ್ ।**
**ಮಾನಸಃ ಸರ್ವಭೂತಾನಾಂ ವಾಸುದೇವಃ ಶ್ರಿಯಃಪತಿಃ ।।೩೩।।**

**ಹಿ** ಏಕೆಂದರೆ **ನಾರೀಣಾಂ** ಸ್ತ್ರೀಯರಿಗೆ ಪತಿಃ **ಏವ** ಗಂಡನೇ **ಪರಮಂ ದೈವತಂ ಸ್ಮೃತಂ** ಪರಮದೈವತವೆಂದು ಶಾಸ್ತ್ರದಲ್ಲಿ ಹೇಳಲ್ಪಟ್ಟಿರುವದು. 'ದೈವತಂ ದೇವತಾನಾಂ ಚ' 'ತದೇತತ್ ಪ್ರೇಯಃ' ಸ್ಮೃತಿ-ಶ್ರುತಿಗಳಂತೆ ಶ್ರೀಹರಿಯೇ ಪರಮ ದೈವತನೆಂದು ಪ್ರಸಿದ್ಧವಿರುವಾಗ ನಾರಿಯರಿಗೆ ಪತಿಯು ಹೇಗೆ ಪರ ದೈವತವಾಗುವನು? ಆದರಲ್ಲಿಯೂ ಸ್ಮೃತಂ ಎಂದು ಯಾಕೆ ಹೇಳಿದರು ಎಂಬ ಪ್ರಶ್ನೆಗೆ ಮಾನಸಃ ಎಂಬುದರಿಂದ ಉತ್ತರವನ್ನು ಹೇಳುತ್ತಿದ್ದಾರೆ. **ಶ್ರಿಯಃ** ಲಕ್ಷ್ಮೀಗೆ **ಪತಿಃ** ಪಾಲಕನಾದ **ವಾಸುದೇವಃ** ಸರ್ವತ್ರ ವ್ಯಾಪ್ತನಾದ ಶ್ರೀಹರಿಯು **ಸರ್ವಭೂತಾನಾಂ** ಎಲ್ಲ ಪ್ರಾಣಿಗಳ **ಮಾನಸಃ** ಮನಸ್ಸಿನಲ್ಲಿ ಇರುವವನಾಗಿ ಮನಸ್ಸಿನಿಂದ ಪೂಜ್ಯನು. ಇದರಿಂದ ಪತಿಯ ಮನಸ್ಸಿನಲ್ಲಿ ಸನ್ನಿಹಿತನಾದ ಶ್ರೀಹರಿಯೇ ಪರಮದೈವತವೆಂದು ಹೇಳಿದಂತಾಯಿತು.

ಈ ವಾಸುದೇವ ಯಾರೋ ಬೇರೆಯವನಲ್ಲ ಎಂದು ತಿಳಿಸಲು **ಶ್ರಿಯಃಪತಿಃ** ಎಂದಿದ್ದಾರೆ. ಶ್ರೀಪತಿ ಎಂದು ಸಮಸ್ತವಾಗಿ ಹೇಳಲು ಬರುತ್ತಿರಲು ವ್ಯಾಸರು ವ್ಯಾಸೇನ ಪ್ರತ್ಯೇಕಿಸಿ ಹೇಳಿರುವರು. ಆದರಿಂದ ಶ್ರಿಯಃ ಪತಿರೇವ ಪತಿಃ ಲಕ್ಷ್ಮಿಯ ಪತಿಯೇ ನಿಜವಾಗಿ ಪತಿಯಾಗಿದ್ದಾನೆ. ಅವನ ಸನ್ನಿಧಾನದಿಂದ ನಾವೆಲ್ಲ ಪತಿ ಶಬ್ದದಿಂದ ಕರೆಸಿಕೊಳ್ಳುವವರು ಎಂದು ಕಶ್ಯಪರ ಅಭಿಪ್ರಾಯವೆಂದು ಧ್ವನಿತ ಪಡಿಸುವರು. ಸ್ಮೃತಂ ಎಂದು ಹೇಳಿದುದರ ಭಾವವು ಇದೇ ಎಂದು ಭಾವ. ।।೩೩।।

**ಸ ಏವ ದೇವತಾಲಿಂಗೈರ್ನಾಮರೂಪವಿಕಲ್ಪಿತೈಃ ।**
**ಇಜ್ಯತೇ ಭಗವಾನ್ ಪುಂಭಿಃ ಸ್ತ್ರೀಭಿಶ್ಚ ಪತಿರೂಪಧೃಕ್ ।।೩೪।।**

**ಭಗವಾನ್** ಸಮಗ್ರ ಐಶ್ವರ್ಯವಂತನಾದ **ಸ ಏವ** ಆ ವಾಸುದೇವನೇ **ಪುಂಭಿಃ** ಪುರುಷರಿಂದ **ದೇವತಾಲಿಂಗೈಃ** ವಜ್ರಧರತ್ವ ಮುಂತಾದ ಅಸಾಧಾರಣ ಧರ್ಮಗಳಿಂದ **ನಾಮ** ಇಂದ್ರಾದಿನಾಮುಗಳಿಂದ, **ರೂಪ** ಆಕಾರಗಳಿಂದ, **ವಿಕಲ್ಪಿತೈಃ** ಪರಮಮುಖ್ಯವೃತ್ತಿವಿಷಯಗಳಾದ ಅಥವಾ **ವಿಕಲ್ಪಿತೈಃ** ಅಕಲ್ಪಿತವಾದ ಸಹಜಸಿದ್ಧವಾದ ಮತ್ತು ಮೂರ್ತಿವಿಶೇಷಗಳಿಂದಲೂ **ಇಜ್ಯತೇ** ಪೂಜಿಸಲ್ಪಡುವನು. **ಸ್ತ್ರೀಭಿಃ** ಹೆಣ್ಣು ಮಕ್ಕಳಿಂದ **ಪತಿರೂಪಧೃಕ್** ಪತಿಯಲ್ಲಿ ಸನ್ನಿಹಿತವಾದ ರೂಪವಿಶೇಷ ಧಾರಿಯಾದವನು **ಇಜ್ಯತೇ** ಪೂಜಿಸಲ್ಪಡುವನು. ಬೇರೆಯಾಗಿ ಪೂಜಿಸಲ್ಪಡುವದಿಲ್ಲ. ಇದರಿಂದ

ಭಗವತ್ಪ್ರೀತಿ ಪುರುಷಾರ್ಥಸಾಧನವಾಗಿದ್ದಲ್ಲಿ ಭಗವಂತನನ್ನೇ ಬೇರೆಯಾಗಿ ಹೆಂಗಸರು ಪೂಜಿಸಬೇಕಿತ್ತು. ಪತಿಯನ್ನೇಕೆ? ಎಂಬ ಶಂಕೆಗೆ ಉತ್ತರಿಸಿದಂತಾಯಿತು. ।।೩೪।।

ಈ ರೀತಿ ಪೂಜಿಸುವವಳು ನಿನೊಬ್ಬಳೇ ಅಲ್ಲ. ಅನೇಕಸ್ತ್ರೀಯರು ಹೀಗೆ ಪೂಜಿಸುವರು ಎಂದು ಹೇಳುತ್ತ ಮುಗಿಸುವರು-

**ತಸ್ಮಾತ್ಪತಿವ್ರತಾ ನಾರ್ಯಃ ಶ್ರೇಯಃಕಾಮಾಃ ಸುಮಧ್ಯಮೇ ।**
**ಯಜಂತೇಽನನ್ಯಭಾವೇನ ಪತಿಮಾತ್ಮಾನಮೀಶ್ವರಮ್ ।।೩೫।।**

**ತಸ್ಮಾತ್** ಪತಿಯಲ್ಲಿಯೇ ಶ್ರೀಹರಿಯನ್ನು ಸೇವಿಸಬೇಕಾದ್ದರಿಂದ **ಸುಮಧ್ಯಮೇ** ಸಣ್ಣ ನಡುವಿನ ಸುಂದರಿಯೇ **ಶ್ರೇಯಃಕಾಮಾಃ** ಶ್ರೇಯಸ್ಸನ್ನು ಹೊಂದಲಪೇಕ್ಷಿಸುವ **ಪತಿವ್ರತಾಃ** ಪತಿವ್ರತೆಯರಾದ **ನಾರ್ಯಃ** ಸ್ತ್ರೀಯರು **ಪತಿಂ** ಗಂಡನಲ್ಲಿ ಸನ್ನಿಹಿತನಾಗಿರುವ ಮುಖ್ಯಪತಿಯಾದ **ಈಶ್ವರಂ** ಸರ್ವಾಭೀಷ್ಟ ಕೊಡಲು ಸಮರ್ಥನಾದ **ಆತ್ಮಾನಂ** ಪರಮಾತ್ಮನನ್ನೇ **ಅನನ್ಯಭಾವೇನ** ಮತ್ತೊಂದನ್ನು ಯಾಚಿಸದೇ **ಯಜಂತೇ** ಪೂಜಿಸುವರು. ಈ ರೀತಿ ಅನುಸಂಧಾನ ಉಳ್ಳವರಿಗೆ ಸಂಸಾರವು ಬಂಧಕವಾಗಲಾರದು. ।।೩೫।।

ಅನ್ಯವಿಷಯಕವಾಗದ ಭಕ್ತಿಯಿಂದ ಎಂದರ್ಥ. ಇದನ್ನೇ 'ಯಾದೃಶೀ ಮಯಿ ಭಕ್ತಿಃ ಸ್ಯಾತ್ ತಾದೃಶ್ಯನ್ಯತ್ರ ನೈವ ಚೇತ್ । ಅನನ್ಯಭಕ್ತೇರುದ್ರೇಕಾತ್ ಸಾ ಯಯೈವ ತರೇತ್ ಸ್ಮೃತಿಮ್ । ಎಂದು ಹೇಳಿದ್ದಾರೆ. 'ಭಾವೋ ಭಕ್ತಿಃ ಸಮುದ್ದಿಷ್ಟಃ' ಎಂದೂ ಇದೆ. ।।೩೫।।

**ಯೋಽಹಂ ತ್ವಯಾರ್ಚಿತೋ ಭದ್ರೇ ಈದೃಗ್ಭಾವೇನ ಭಕ್ತಿತಃ ।**
**ಕಿಂ ತೇ ಸಂಪಾದಯೇ ಕಾಮಮಸತೀನಾಂ ಸುದುರ್ಲಭಮ್ ।।೩೬।।**

**ಭದ್ರೇ** ಮಂಗಳಕರಳೇ **ಯಃ ಅಹಂ** ಯಾವ ನಾನು **ತ್ವಯಾ** ಪತಿವ್ರತೆಯಾದ ನಿನ್ನಿಂದ **ಈದೃಗ್ಭಾವೇನ** ಪತಿಯಲ್ಲಿ ಸನ್ನಿಹಿತನಾದ ಶ್ರೀಹರಿಯು ಪ್ರೀತನಾಗಲಿ ಎಂಬ ಭಾವನೆಯಿಂದ **ಭಕ್ತಿತಃ** ಭಕ್ತಿಯಿಂದ **ಅರ್ಚಿತಃ** ಪೂಜಿತನಾಗಿರುವೆನೋ **ಸಃ ಅಹಂ** ಆ ನಾನು **ಅಸತೀನಾಂ** ಪತಿವ್ರತೆಯಲ್ಲದವರಿಗೆ **ಸುದುರ್ಲಭಂ** ಅತ್ಯಂತ ದುರ್ಲಭವಾದ **ತೇ** ನಿನ್ನ **ಕಾಮಂ** ಇಷ್ಟವನ್ನು **ಕಿಂ ಸಂಪಾದಯೇ** ಏನನ್ನು ಒದಗಿಸಲಿ? ಮುಂದಿನ ಸ್ಕಂಧದಲ್ಲಿ 'ಯಾ ಪತಿಂ ಹರಿಭಾವೇನ ಭಜೇತ್ ಶ್ರೀರಿವ ತತ್ಪರಾ । ಹರ್ಯಾತ್ಮನಾ ಹರೇರ್ಲೋಕೇ ಪತ್ಯಾ ಶ್ರೀರಿವ ಮೋದತೇ' ಎಂದೂ ಮೂಲದಲ್ಲಿಯೂ

'ಹರಿರಸ್ಮಿನ್ ಸ್ಥಿತ ಇತಿ ಸ್ತ್ರೀಣಾಂ ಭರ್ತರಿ ಭಾವನಾ । ಶಿಷ್ಯಾಣಾಂ ಚ ಗುರೌ ನಿತ್ಯಂ ಶೂದ್ರಾಣಾಂ ಬ್ರಾಹ್ಮಣಾದಿಷು । ಭೃತ್ಯಾನಾಂ ಸ್ವಾಮಿನಿ ತಥಾ ಹರಿಭಾವ ಇತೀರಿತಃ' ಎಂದು ತಾತ್ಪರ್ಯದಲ್ಲಿಯೂ ಹೇಳಿರುವದನ್ನು ಇಲ್ಲಿ ತಿಳಿಯಬಹುದು. 'ಸತೀ ಸಾಧ್ವೀ ಪತಿವ್ರತಾ' ಎಂದು ಅಭಿಧಾನವಿದೆ. ।।೩೬।।

**ದಿತಿರುವಾಚ -**

**ವರದೋಽಸಿ ಯದಿ ಬ್ರಹ್ಮನ್ ಪುತ್ರಮಿಂದ್ರಹಣಂ ವೃಣೇ ।**
**ಅಮೃತ್ಯುಂ ಮೃತಪುತ್ರಾಹಂ ಯೇನ ಮೇ ಘಾತಿತೌ ಸುತೌ ।।೩೭।।**

**ಬ್ರಹ್ಮನ್** ಬ್ರಹ್ಮಜ್ಞಾನಿಗಳೇ **ಯದಿ ವರದಃ ಅಸಿ** ವರವನ್ನು ಕೊಡುವಿರಾದರೆ **ಮೃತಪುತ್ರಾ** ಮಕ್ಕಳನ್ನು ಕಳೆದುಕೊಂಡ **ಅಹಂ** ನಾನು **ಯೇನ** ವಿಷ್ಣುವಿನ ಸಹಾಯ ಪಡೆದ ಯಾವ ಇಂದ್ರನಿಂದ **ಮೇ ಸುತೌ** ನನ್ನ ಇಬ್ಬರು ಮಕ್ಕಳು **ಘಾತಿತೌ** ಸಾಯಿಸಲ್ಪಟ್ಟರೋ ಆ **ಇಂದ್ರಹಣಂ** ಇಂದ್ರನನ್ನು ಸಂಹರಿಸುವ **ಅಮೃತ್ಯುಂ** ಮರಣವಿಲ್ಲದ **ಪುತ್ರಂ** ಮಗನನ್ನು **ವೃಣೇ** ಬೇಡುವೆನು.

ಇಂದ್ರಹಣಂ ಎಂಬಲ್ಲಿ 'ಅನ್ಯೇಭ್ಯೋಽಪಿ ದೃಶ್ಯತೇ' ಎಂಬುದರಿಂದ ಕ್ವಿಪ್‌ಪ್ರತ್ಯಯವು ಬಂದಿದೆ. 'ಏಕಾಜುತ್ತರಪದೇ...' ಎಂಬುದರಿಂದ ಣತ್ವವು ಬಂದಿದೆ. ಬ್ರಹ್ಮನ್ ಎಂದದ್ದರಿಂದ 'ತಸ್ಮಾದ್ದೀಕ್ಷಿತೇನ ಸತ್ಯಮೇವ ವದಿತವ್ಯಂ' ಮುಂತಾಗಿ ತಿಳಿಸಿದ ಸುಳ್ಳು ಹೇಳುವದು ದೋಷವೆಂಬ ಜ್ಞಾನ ನಿಮಗಿರುವದರಿಂದ ಹಾಗೆ ಮಾಡಲಾರಿರಿ ಎಂದು ಸೂಚಿಸುವಳು. ಕಾಲತಃ ಮೃತ್ಯುವು ಪ್ರಾಪ್ತವಾಗಿದೆ. ಅದಕ್ಕೆ ಅಮರ್ತ್ಯನಾದ ಇಂದ್ರ ಏನು ಮಾಡಿಯಾನು ಎಂದರೆ ಯೇನ ಮೇ ಘಾತಿತೌ ಎಂದು ಹೇಳುವಳು. ಇದು ಕಾಲ ಮೃತ್ಯುವಲ್ಲ. ಇಂದ್ರನು ಮಾಡಿದ ಕೊಲೆ. ಆದ್ದರಿಂದ ವರ ಕೊಡಲೇಬೇಕು ಎಂದರ್ಥ.

ಹೇಗೆ ಒಬ್ಬ ಕುರುಡನಿಗೆ ಪ್ರಸನ್ನನಾದ ದೇವರು ಒಂದೇ ವರ ಬೇಡೆಂದರೆ 'ನಾನು ಸುವರ್ಣ ಪಾತ್ರದಲ್ಲಿರುವ ಮೊಮ್ಮಗನನ್ನು ಕಣ್ಣಿಂದ ನೋಡಬೇಕು ಎಂದು ಕೇಳಿದನಂತೆ. ಹಾಗೆಯೇ ಇವಳು ಇಂದ್ರನನ್ನು ಕೊಲ್ಲುವ, ಮರಣರಹಿತನಾದ ಮಗ ಬೇಕೆಂದು ಕೇಳಿದಳು. ।।೩೭।।

**ನಿಶಮ್ಯ ತದ್ವಚೋ ವಿಪ್ರೋ ವಿಮನಾಃ ಪರ್ಯತಪ್ಯತ ।**
**ಅಹೋ ಅಧರ್ಮಃ ಸುಮಹಾನದ್ಯ ಮೇ ಸಮುಪಸ್ಥಿತಃ ।।೩೮।।**

**ತದ್ವಚಃ** ದಿತಿಯ ಮಾತನ್ನು **ನಿಶಮ್ಯ** ಕೇಳಿ **ವಿಪ್ರಃ** ಕಶ್ಯಪರು **ವಿಮನಾಃ** ಮನ ನೊಂದವರಾಗಿ **ಪರ್ಯತಪ್ಯತ** ಪರಿತಪಿಸಿದರು **ಅಹೋ** ಅಯ್ಯೋ **ಅದ್ಯ** ಈಗ **ಸುಮಹಾನ್** ಅತಿ ದೊಡ್ಡದಾದ **ಅಧರ್ಮಃ** ಅಧರ್ಮವು **ಮೇ** ನನಗೆ **ಸಮುಪಸ್ಥಿತಃ** ಬಂದೊದಗಿತು ಎಂದು ಪರಿತಪಿಸಿದರು. ।।೩೮।।

**ಅಹೋ ಅದ್ಯೇಂದ್ರಿಯಾರಾಮೋ ಯೋಷಿನ್ಮಯ್ಯೇಶಮಾಯಯಾ ।**
**ಗೃಹೀತಚೇತಾಃ ಕೃಪಣಃ ಪತಿಷ್ಯೇ ನರಕೇ ಧ್ರುವಮ್ ।।೩೯।।**

**ಅಹೋ** ಅಯ್ಯೋ **ಅದ್ಯ** ಇಂದು **ಇಂದ್ರಿಯಾರಾಮಃ** ಇಂದ್ರಿಯಗಳನ್ನು ತೃಪ್ತಿ ಪಡಿಸುವದರಲ್ಲಿಯೇ ಆನಂದಿಸುವ ಆದ್ದರಿಂದಲೇ **ಯೋಷಿನ್ಮಯ್ಯಾ** ಹೆಂಗಸೆಂಬ **ಈಶಮಾಯಯಾ** ಶ್ರೀಹರಿಯ ಬಂಧಕಶಕ್ತಿಯಿಂದ **ಗೃಹೀತಚೇತಾಃ** ಅಪಹೃತ ಮನಸ್ಸುಳ್ಳ ಆದ್ದರಿಂದಲೇ **ಕೃಪಣಃ** ಕ್ಷುದ್ರನಾದ ನಾನು **ಧ್ರುವಂ ನರಕೇ ಪತಿಷ್ಯೇ** ನಿಶ್ಚಿತವಾಗಿ ನರಕದಲ್ಲಿ ಬೀಳುವೆನು. ।।೩೯।।

ಯದ್ಯಪಿ ಇಂದ್ರನು, ಹಿರಣ್ಯಕಶಿಪು-ಹಿರಣ್ಯಾಕ್ಷರು ಕಶ್ಯಪರ ಮಕ್ಕಳೇ ಆಗಿದ್ದಾರೆ. ಆದರೆ ಹಿರಣ್ಯಕಶಿಪು-ಹಿರಣ್ಯಾಕ್ಷರು ದುಷ್ಟರು. ಇಂದ್ರ ಸಜ್ಜನ. ಅವರು ಪಟ್ಟಾಭಿಷಿಕ್ತರಲ್ಲ. ಇಂದ್ರ ಪಟ್ಟಾಭಿಷಿಕ್ತ. ತಾವು ಮಾಡಿದ ದುಷ್ಟತನದಿಂದ ಅವರು ಮೃತರಾಗಿದ್ದಾರೆ. ಈಗ ಈ ದಿತಿದೇವಿಗೆ ಮನಃ ಪೂರ್ವಕವಾಗಿ ವರವನ್ನಿತ್ತು ನಾನು ನರಕಕ್ಕೆ ಹೋಗುತ್ತೇನೆ. ತಂದೆಯಿಂದಲೇ ಮಗನಿಗೆ ಮರಣವಾಗುವುದರಿಂದ ವಿಶೇಷವಾದ ನರಕದಲ್ಲಿ ನಾನು ಬಿಳುವೆನಲ್ಲ ಎಂದು ಕಶ್ಯಪರು ಪರಿತಪಿಸಿದರು ಎಂದಿರುವರು.

ಇವಳ ಮೇಲೆ ದೋಷ ಹಾಕಬೇಕಿಲ್ಲ. ಹೆಣ್ಣುಮಕ್ಕಳ ಸಾಮಾನ್ಯ ಸ್ವಭಾವವಿದು ಎಂದು ಹೇಳುವರು-

**ಕೋಽತಿಕ್ರಮೋಽನುವರ್ತಂತ್ಯಾಃ ಸ್ವಭಾವಮಿಹ ಯೋಷಿತಃ ।**
**ಧಿಙ್ಮಾಂ ಬತಾಬುಧಂ ಸ್ವಾರ್ಥೇ ಯದಹಂ ತ್ವಜಿತೇಂದ್ರಿಯಃ ।।೪೦।।**

**ಇಹ** ಈ ವಿಷಯದಲ್ಲಿ **ಯೋಷಿತಃ ಸ್ವಭಾವಂ** ಹೆಣ್ಣುಮಕ್ಕಳ ಸ್ವಭಾವವನ್ನು **ಅನುವರ್ತಂತ್ಯಾ** ಅನುಸರಿಸುವ ಇವಳ **ಅತಿಕ್ರಮಃ ಕಃ** ಅಪರಾಧವೇನೂ ಇಲ್ಲ. **ಅಬುಧಂ ಮಾಂ ಧಿಕ್** ಮೂರ್ಖನಾದ ನನಗೆ ಧಿಕ್ಕಾರವು. **ಬತ** ಖೇದವು **ಯತ್** ಏಕೆಂದರೆ **ಸ್ವಾರ್ಥೇ** ಸ್ವಪ್ರಯೋಜನದಲ್ಲಿ **ಅಹಂ ತು** ನಾನಾದರೂ **ಅಜಿತೇಂದ್ರಿಯಃ**

ಜಿತೇಂದ್ರಿಯನಲ್ಲ. ಅದೇ ನನ್ನ ತಪ್ಪು ಎಂದೂ ಭಾವ. 'ಸ್ವಭಾವಸ್ತು ಪ್ರವರ್ತತೇ' ಎಂದಿದೆಯಷ್ಟೇ. ಅಧ್ಯಯನವನ್ನು ಮಾಡಿರುವ ನನ್ನ ದಶಾ ಅವಸ್ಥಾ ಇಂಥದ್ದಾಗಿದೆ ಎಂದು ತನ್ನನು ಧಿಕ್ಕರಿಸಿಕೊಂಡಿರುವನು. ನಾನು ಇಂದ್ರಿಯ ಜಯರಹಿತನು ಎಂದು 'ಅಹಂ ತ್ವಜಿತೇಂದ್ರಿಯಃ' ಎಂಬ ಮಾತಿನಿಂದ ಇಂದ್ರಿಯಗಳು ನನ್ನ ವಶವಾಗಿಲ್ಲ, ನಾನು ಅವುಗಳ ವಶನಾಗಿರುವೆ ಎಂದು ಹೇಳುವರು. ಅಹಮೋ ಭಾವಃ ಅಹಂತ್ವಂ ಅಭಿಮಾನ ಇತಿ ಯಾವತ್ ತೇನೈವ ಜಿತಾನಿ ಇಂದ್ರಿಯಾಣಿ ಯಸ್ಯ ಸಃ ಅಹಂತ್ವಜಿತೇಂದ್ರಿಯಃ ಎಂಬುದಾಗಿ ವಿಗ್ರಹ ಮಾಡಿಕೊಂಡು ಅರ್ಥವನ್ನು ಹೇಳಬೇಕು. ಅಭಿಮಾನದಿಂದ ಪರಾಜಿತವಾದ ಇಂದ್ರಿಯವುಳ್ಳ ಎಂದರ್ಥ. ಅಥವಾ **ಅಹಂ** ನಾನು ತ್ವೇನ ಅನ್ಯೇನ ಭಿನ್ನವಾದ ಸ್ತ್ರೀಕಟಾಕ್ಷದಿಂದ ಪರಾಜಿತವಾದ ಇಂದ್ರಿಯ ಉಳ್ಳವನು. ಹೀಗೂ ಅರ್ಥ. ತ್ವ ಎಂಬ ಶಬ್ದಕ್ಕೆ ಅನ್ಯ ಎಂಬ ಅರ್ಥವನ್ನು ಹಿಂದಿನ ಅಧ್ಯಾಯದ ೬ಳನೇ ಶ್ಲೋಕದಲ್ಲಿ ವ್ಯಾಖ್ಯಾನ ಮಾಡುವಾಗ ತ್ವತ್ವಾವನ್ಯಪರ್ಯಾಯೌ ಎಂದು 'ಬ್ರಹ್ಮಾ ತ್ವೋ ವದತಿ ಜಾತವಿದ್ಯಾಂ' ಎಂದು ಉದಾಹರಣ ಕೊಟ್ಟು ಹೇಳಿದ್ದಾರೆ.

ಪ್ರಸಂಗಸಂಗತಿಯಿಂದ ಅಂಗನೆಯ ಸ್ವಭಾವವನ್ನು ತಿಳಿಸುವರು-

**ಶರಚ್ಚಂದ್ರೋಪಮಂ ವಕ್ತ್ರಂ ವಚಶ್ಚ ಶ್ರವಣಾಮೃತಮ್ ।**
**ಹೃದಯಂ ಕ್ಷುರಧಾರಾಭಂ ಸ್ತ್ರೀಣಾಂ ಕೋ ವೇದ ಚೇಷ್ಟಿತಮ್ ॥೪೦॥**

**ವಕ್ತ್ರಂ** ಸ್ತ್ರೀಯರ ಮುಖವು **ಶರಚ್ಚಂದ್ರೋಪಮಂ** ಶರತ್ಕಾಲದ ಚಂದ್ರನಂತೆ **ವಚಃ ತು** ಮಾತಾದರೂ **ಶ್ರವಣಾಮೃತಂ** ಕಿವಿಗೆ ಅಮೃತದಂತಿರುವದು ಆದರೆ **ಹೃದಯಂ** ಮನಸ್ಸು **ಕ್ಷುರಧಾರಾಭಂ** ಕತ್ತಿಯ ಅಲಗಿನಂತೆ ಕ್ರೂರವಾದುದು. **ಸ್ತ್ರೀಣಾಂ** ಸ್ತ್ರೀಯರ **ಚೇಷ್ಟಿತಂ** ಇಂಗಿತವನ್ನು **ಕಃ ವೇದ** ಯಾವನು ತಿಳಿದಾನು. ಯಾರೂ ತಿಳಿಯಲಾರರು ಎಂದರ್ಥ. ಹೀಗೆ ಮಾಡುವ ಅವರು ಬಹಳ ಜನ. ಅವರನ್ನು ಯಾವನೊಬ್ಬನೂ ಮೀರಿಸಿದವನಿಲ್ಲವೆಂದು ತಿಳಿಸಲು **ಸ್ತ್ರೀಣಾಂ** ಎಂದು ಬಹುವಚನ ಮತ್ತು **ಕಃ** ಎಂದು ಏಕವಚನವನ್ನು ಪ್ರಯೋಗ ಮಾಡುವ ಮೂಲಕ ಸೂಚಿಸುವರು. ॥೪೦॥

**ನ ಹಿ ಕಶ್ಚಿತ್ ಪ್ರಿಯಃ ಸ್ತ್ರೀಣಾಮಂಜಸಾ ಸ್ವಾಶಿಷಾತ್ಮನಾಮ್ ।**
**ಪತಿಂ ಪುತ್ರಂ ಭ್ರಾತರಂ ವಾ ಘ್ನಂತ್ಯರ್ಥೇ ಘಾತಯಂತಿ ಹಿ ॥೪೨॥**

**ಅಂಜಸಾ** ಮುಖ್ಯವಾಗಿ **ಸ್ವಾಶಿಷಾತ್ಮನಾಂ** ತಮ್ಮ ಅಪೇಕ್ಷೆಗಳಲ್ಲಿಯೇ ಮನಸ್ಸುಳ್ಳ **ಸ್ತ್ರೀಣಾಂ** ಸ್ತ್ರೀಯರಿಗೆ **ಕಶ್ಚಿತ್** ಯಾವನೂ **ಪ್ರಿಯಃ** ಪ್ರೀತಿಪಾತ್ರನು **ನ ಹಿ** ಇಲ್ಲ **ಅರ್ಥೇ** ತಮ್ಮ ಪ್ರಯೋಜನಕ್ಕಾಗಿ **ಪತಿಂ** ಗಂಡನನ್ನು **ಪುತ್ರಂ** ಮಗನನ್ನು **ಭ್ರಾತರಂ ವಾ** ಸಹೋದರನನ್ನೂ **ಘ್ನಂತಿ** ಕೊಲ್ಲುವರು **ಘಾತಯಂತಿ** ಕೊಲ್ಲಿಸುವರು. **ಹಿ** ಇದು ಅನುಭವಸಿದ್ಧ. ಮಾಘ ಮಾಹಾತ್ಮ್ಯದಲ್ಲಿ ಪ್ರಸಿದ್ಧ.

**ಆಶಿಷಾ** ಎಂಬುದು ಟಾಬಂತ. ಆತ್ಮನಾಂ ಮಧ್ಯೇ ಜೀವರ ಮಧ್ಯದಲ್ಲಿ ಯಾರನ್ನಾದರೂ ಎಂದೂ ಅರ್ಥ. ಆತ್ಮನಾಂ ಎಂಬುದು ಕರ್ಮಣಿ ಷಷ್ಠೀ ತಮ್ಮನ್ನೇ ಘ್ನಂತಿ ನಾಶಪಡಿಸಿಕೊಳ್ಳುವರು ಆಂದ ಮೇಲೆ ಗಂಡ ಮಕ್ಕಳನ್ನು ನಾಶ ಮಾಡುವರೆಂದೇನು ಹೇಳುವದು ಹೀಗೂ ಅರ್ಥ. ।।೪೨।।

ನನ್ನ ಮಾತು ಸುಳ್ಳಾಗಬಾರದು. ಇಂದ್ರನು ಸಾಯಬಾರದು. ಒಂದು ಕ್ಷಣ ವಿಚಾರ ಮಾಡಿ ಹೀಗೆ ಮಾಡಿದರು. ತಮ್ಮಿಂದ ಯಾವುದೇ ರೀತಿಯಾದ ಅಪರಾಧವಾಗದೇ ಇರುವ ಹಾಗೆ ತಮ್ಮ ಹಗ್ಗ ತಮಗೇ ಉರುಲಾಗದೇ ಇದ್ದಂತೆ ಒಂದು ಉಪಾಯ ಕಂಡು ಕೊಂಡು ಹೇಳುವರು-

**ಪ್ರತಿಶ್ರುತಂ ದದಾಮೀತಿ ವಚಸ್ತನ್ನ ಮೃಷಾ ಭವೇತ್ ।**
**ವಧಂ ನಾರ್ಹತಿ ಚೇಂದ್ರೋಽಪಿ ತತ್ರೇದಮುಪಕಲ್ಪಯೇ ।।೪೩।।**

**ದದಾಮಿ ಇತಿ** ಕೇಳಿದ್ದನ್ನು ಕೊಡುವೆನು ಎಂದು **ವಚಃ** ಮಾತು **ಪ್ರತಿಶ್ರುತಂ** ಪ್ರತಿಜ್ಞೆ ಮಾಡಲ್ಪಟ್ಟಿತು. **ತತ್** ಆ ನನ್ನ ಮಾತು **ಮೃಷಾ** ಸುಳ್ಳು **ನ ಭವೇತ್** ಆಗಬಾರದು. **ಇಂದ್ರಃ ಅಪಿ** ಇಂದ್ರನೂ **ವಧಂ ನ ಅರ್ಹತಿ** ಸಂಹಾರ ಹೊಂದಲರ್ಹನಲ್ಲ. **ತತ್ರ** ವರ ಕೊಟ್ಟಿರಬೇಕು ಇಂದ್ರನು ಸಾಯಬಾರದು ಇದಕ್ಕಾಗಿ **ಇದಂ** ಮುಂದೆ ಹೇಳುವ ಉಪಾಯವನ್ನು **ಉಪಕಲ್ಪಯೇ** ಮಾಡುತ್ತೇನೆ. ।।೪೩।।

**ಇತಿ ಸಂಚಿಂತ್ಯ ಭಗವಾನ್ ಮಾರೀಚಃ ಕುರುನಂದನ ।**
**ಉವಾಚ ಕಿಂಚಿತ್ಕುಪಿತ ಆತ್ಮಾನಂ ಚ ವಿಗರ್ಹಯನ್ ।।೪೪।।**

**ಕುರುನಂದನ** ಕುರುವಂಶಕ್ಕೆ ಸಂತೋಷಕರನಾದ ಪರೀಕ್ಷಿತನೇ **ಭಗವಾನ್** ಪೂಜ್ಯರಾದ **ಮಾರೀಚಃ** ಮರೀಚಿಪುತ್ರರಾದ ಕಶ್ಯಪರು **ಇತಿ** ಮೇಲೆ ಹೇಳಿದಂತೆ **ಸಂಚಿಂತ್ಯ** ವಿಚಾರ ಮಾಡಿ **ಆತ್ಮಾನಂ** ತಮ್ಮನ್ನು **ವಿಗರ್ಹಯನ್** ನಿಂದಿಸಿಕೊಳ್ಳುತ್ತ **ಕಿಂಚಿತ್ ಕುಪಿತಃ** ಸ್ವಲ್ಪ ಸಿಟ್ಟಾಗಿ **ಉವಾಚ** ಮಾತನಾಡಿದರು. **ಕಿಂಚಿತ್ ಕುಪಿತಃ** ತನ್ನ

ಧಿಕ್ಕಾರ ಮಾತ್ರೋಪಯೋಗಿಯಾದ ಎಂದರ್ಥ. ಎರಡು ಕಾರ್ಯಗಳಿಗೆ ಅನುಕೂಲವಾಗುವಂತೆ ಸ್ವಲ್ಪ ಕಪಟ ಮೂಲಕವಾದ ಆಲೋಚನೆ ಮಾರೀಚರದು. ಆದ್ದರಿಂದ ಅಂದಿನಿಂದ ಕಪಟಿಗೆ ಜನರು ಮಾರೀಚನೆಂದು ಕರೆಯಲಾರಂಭಿಸಿದರು ಎಂದು ತಿಳಿಯಬೇಕು. ||೪೪||

**ಕಶ್ಯಪ ಉವಾಚ -**

**ಪುತ್ರಸ್ತೇ ಭವಿತಾ ಭದ್ರೇ ಇಂದ್ರಹಾ ದೇವಬಾಂಧವಃ ।**
**ಸಂವತ್ಸರಂ ವ್ರತಮಿದಂ ಯದ್ಯಂಜೋ ಧಾರಯಿಷ್ಯಸಿ ||೪೫||**

**ಹೇ ಭದ್ರೇ** ಮಂಗಳಕರಳೇ **ಇದಂ** ನಾನು ಹೇಳಲಿರುವ **ವ್ರತಂ** ನಿಯಮವನ್ನು **ಸಂವತ್ಸರಂ** ಒಂದು ವರ್ಷ ಪೂರ್ತಿ ಒಂದೂ ದಿನ ಬಿಡದೇ **ಅಂಜಃ** ಶ್ರದ್ಧೆಯಿಂದ ಯಥಾವತ್ತಾಗಿ **ಯದಿ ಧಾರಯಿಷ್ಯಸಿ** ಮಾಡುವಿಯಾದರೆ **ತೇ** ನಿನಗೆ **ದೇವಬಾಂಧವಃ** ದೇವತೆಗಳಿಗೆ ಬಂಧುವಾದ **ಇಂದ್ರಹಾ** ಇಂದ್ರನನ್ನು ಕೊಲ್ಲುವ **ಪುತ್ರಃ** ಮಗನು **ಭವಿತಾ** ಆಗುವನು. ಸಾಂಗವಾದರೆ ಇಂದ್ರಸಂಹಾರಕನು ಪುತ್ರನಾಗುವನು. ವಿಗುಣವಾದರೆ ವೈಷ್ಣವವ್ರತವು ನಿಷ್ಫಲವಲ್ಲವಾದ್ದರಿಂದ ದೇವಬಂಧುವು ಜನಿಸುವನು. ವೈಷ್ಣವವ್ರತವನ್ನು ಉಪದೇಶಿಸುತ್ತೇನೆ. ಆದರಿಂದ ಇವಳ ಮನಸ್ಸು ಶುದ್ಧವಾಗಿ ಇಂದ್ರನ ಮೇಲಿನ ಕೋಪವು ತಾನಾಗಿಯೇ ಹೋಗುವದು. ವ್ರತವು ಸಾಂಗವಾಗದೇ ಹೋಗಿ ಇಂದ್ರನಿಗೆ ತೊಂದರೆಯೂ ಆಗುವದಿಲ್ಲವೆಂದು ಭಾವ.

ಮತ್ತು ಇಂದ್ರನನ್ನು ಕೊಲ್ಲುವುದು ದೇವಬಂಧುವಾಗುವದು ಎಂದು ವಿರುದ್ಧವಾದುದನ್ನು ಹೇಳುತ್ತ ಮುಂದೆ ಗರ್ಭಸ್ಥನು ಹಾಗಾಗಲಾರನು ಎಂದು ಅಭಿಪ್ರಾಯ. 'ನ ಹಿ ವ್ಯಾಹತಂ ಶತೇನಾಽಪಿ ಸಿದ್ಧ್ಯತಿ' ಎಂದಂತೆ ಇಂದ್ರಹಾ ಅದೇವಬಾಂಧವಃ ಎಂಬ ಜ್ಞಾನದಿಂದ ಅವಳಿಗೆ ಸಮಾಧಾನವೂ ಆಯಿತು ಎಂದು ತಿಳಿಯಬೇಕು. ಇಲ್ಲವಾದರೆ 'ಅಹಂ ಆದಿತ್ಯಾನಾಂ ಭಯಾವಹಂ' ಎಂದು ಮುಂದೆ ಹೇಳುವದು ಭಯಾವಹವಾಗುವದು. ಅಲ್ಲಿ ಅದಿತಿಪುತ್ರರಿಗೆ ಸುದುಷ್ಕರನಾದ ಎಂದೂ ಹೇಳಿದೆ ಅದು ವಿರುದ್ಧವಾಗುವದು ಎಂದು ಭಾವ. (೬೯ ನೇ ಶ್ಲೋಕವಿದು.) ||೪೫||

**ದಿತಿರುವಾಚ -**

**ಧಾರಯಿಷ್ಯೇ ವ್ರತಂ ಬ್ರಹ್ಮನ್ ಬ್ರೂಹಿ ಕಾರ್ಯಾಣಿ ಯಾನಿ ಮೇ ।**
**ಯಾನಿ ಚೇಹ ನಿಷಿದ್ಧಾನಿ ನ ವ್ರತಂ ಘ್ನಂತಿ ಯಾನ್ಯುತ ||೪೬||**




**ಬ್ರಹ್ಮನ್** ಬ್ರಹ್ಮಜ್ಞಾನಿಗಳೇ **ವ್ರತಂ ಧಾರಯಿಷ್ಯೇ** ವ್ರತವನ್ನು ಆಚರಿಸುವೆನು **ಯಾನಿ** ಆವಶ್ಯಕವಾದ ಯಾವ ಕೆಲಸಗಳನ್ನು **ಮೇ** ನಾನು **ಕಾರ್ಯಾಣಿ** ಮಾಡಬೇಕು **ಇಹ** ಈ ವ್ರತದಲ್ಲಿ **ಯಾನಿ** ಯಾವ ಕೆಲಸಗಳನ್ನು **ನಿಷಿದ್ಧಾನಿ** ನಾನು ಮಾಡಬಾರದು **ಉತ** ಮತ್ತು **ಯಾನಿ** ಯಾವುದು **ವ್ರತಂ ನ ಘ್ನಂತಿ** ವ್ರತವನ್ನು ಕೆಡಿಸುವದಿಲ್ಲ ಇವುಗಳನ್ನು **ಬ್ರೂಹಿ** ಹೇಳಿರಿ.

ನಿಷಿದ್ಧವಾದ್ದರಿಂದಲೇ ಯಾವ ಕೆಲಸಗಳು ವ್ರತವನ್ನು ಕೆಡಿಸುವವೋ ಅವುಗಳನ್ನು ಹೇಳಿರಿ ಎಂದು ಅಭಿಪ್ರಾಯವೆಂದು ಶ್ರೀಗಳವರು ಹೇಳುತ್ತಾರೆ. ಇದು ಅವರ ವ್ಯಾಖ್ಯಾನ. 'ನಿಷಿದ್ಧಾನಿ । ತತ್ಫಲಮಾಲಪತಿ- **ವ್ರತಂ ಘ್ನಂತಿ ಇತಿ** ।।೪೬।।

ಮುಂದಿನ ಐದು ಶ್ಲೋಕಗಳಿಂದ ಮೂವತ್ತೊಂದು ನಿಷೇಧಗಳನ್ನು ಹೇಳುತ್ತಾರೆ.

**ಕಶ್ಯಪ ಉವಾಚ**

**ನ ಹಿಂಸ್ಯಾತ್ಸರ್ವಭೂತಾನಿ ನ ಶಪೇನ್ನಾನೃತಂ ವದೇತ್ ।**
**ನ ಛಿಂದ್ಯಾನ್ನಖರೋಮಾಣಿ ನ ಸ್ಪೃಶೇದ್ಯದಮಂಗಲಮ್ ।।೪೭।।**

೧. **ಸರ್ವಭೂತಾನಿ** ಯಾವ ಪ್ರಾಣಿಗಳನ್ನೂ **ನ ಹಿಂಸ್ಯಾತ್** ಹಿಂಸಿಸಬಾರದು ೨. **ನ ಶಪೇತ್** ಯಾರ ಮೇಲೂ ಆಕ್ರೋಶ ಮಾಡಬಾರದು. ೩. **ಅನೃತಂ ನ ವದೇತ್** ಸುಳ್ಳನ್ನು ಹೇಳಬಾರದು ೪. **ನಖರೋಮಾಣಿ ನ ಛಿಂದ್ಯಾತ್** ಉಗುರು ಕೂದಲನ್ನು ಕತ್ತರಿಸಬಾರದು **ಯತ್** ಯಾವದು **ಅಮಂಗಲಂ** ಶುಭವಲ್ಲವೋ ಅಂತಹ ತಲೆಬುರುಡೆ-ಮೂಳೆ ಮೊದಲಾದವನ್ನು **ನ ಸ್ಪೃಶೇತ್** ಮುಟ್ಟಬಾರದು. **ಅಪ್ಯಮಂಗಲಂ** ಎಂಬ ಪಾಠದಲ್ಲಿ **ಅಪಿ** ಎಂಬುದು ನಿಷೇಧಸಮುಚ್ಚಯವನ್ನು ತಿಳಿಸುವದು. **ಅಮಂಗಲಂ** ಎಣ್ಣೆ ಮೊದಲಾದವನ್ನು ಎಂದೂ ಅರ್ಥ ಮಾಡಿರುವರು.

**ನಾಪ್ಸು ಸ್ನಾಯಾನ್ನ ಕುಪ್ಯೇತ ನ ಸಂಭಾಷೇತ ದುರ್ಜನೈಃ ।**
**ನ ವಸೀತಾಧೌತವಾಸಃ ಸ್ರಜಂ ವಾ ವಿಧೃತಾಂ ಕ್ವಚಿತ್ ।।೪೮।।**

೬. **ಅಪ್ಸು ನ ಸ್ನಾಯಾತ್** ನೀರಿನಲ್ಲಿಳಿದು ಸ್ನಾನ ಮಾಡಬಾರದು. ೭. **ನ ಕುಪ್ಯೇತ** ಯಾರ ಮೇಲೂ ಸಿಟ್ಟಾಗಬಾರದು. ೮ **ದುರ್ಜನೈಃ ನ ಸಂಭಾಷೇತ** ವಿಷ್ಣುದ್ವೇಷಿಗಳಾದ ದುಷ್ಟರೊಡನೆ ಮಾತನಾಡಬಾರದು. ೯. **ಕ್ವಚಿತ್** ಯಾವ ಕಾಲದಲ್ಲಿಯೂ **ಅಧೌತವಾಸಃ ನ ವಸೀತ** ಒಗೆಯದಿರುವ ಬಟ್ಟೆಯನ್ನು ಉಡಬಾರದು. ೧೦ **ವಿಧೃತಾಂ**

**ಸ್ರಜಂ ನ ವಸೀತ** ಮತ್ತೊಬ್ಬರು ಹಾಕಿಕೊಂಡ ಅಥವಾ ಒಂದು ಸಲ ತಾನೇ ಧರಿಸಿದ ಮಾಲೆಯನ್ನು ಧರಿಸಬಾರದು. ।।೪೮।।

**ನೋಚ್ಛಿಷ್ಟಂ ಚಂಡಿಕಾನ್ನಂ ಚ ಸಾಮಿಷಂ ವೃಷಲಾಹೃತಮ್ ।**
**ಭುಂಜೀತೋದಕ್ಯಯಾ ದೃಷ್ಟಂ ಪಿಬೇನ್ನಾಂಜಲಿನಾ ತ್ವಪಃ ।।೪೯।।**

ತಿನ್ನುವದರಲ್ಲಿ ೫ ನಿಷೇಧ ಹೇಳುವರು. ೧೧ **ಉಚ್ಛಿಷ್ಟಂ** ಪತಿವ್ಯತಿರಿಕ್ತರ ಎಂಜಲನ್ನು **ನ ಭುಂಜೀತ** ಉಣ್ಣಬಾರದು. ೧೨ **ಚ** ಮತ್ತು **ಚಂಡಿಕಾನ್ನಂ** ಭದ್ರಕಾಳಿ ಮುಂತಾದ ಶಕ್ತಿದೇವತೆಗಳಿಗೆ ಅಥವಾ ಸಪ್ತಮಾತೃಗಳಿಗೆ ನಿವೇದಿತವಾದುದನ್ನು ತಿನ್ನಬಾರದು. ೧೩ **ಸಾಮಿಷಂ** ಮಾಂಸ ಸಹಿತವಾದ ಇರುವೆಯಿಂದ ಕೂಡಿದ ಪದಾರ್ಥವನ್ನು, ಇಲಿಯು ತಿಂದಿರುವ ಪದಾರ್ಥವನ್ನು, ನಿಂಬೆಹಣ್ಣಿನಿಂದ ಕೂಡಿದ್ದನ್ನು ತಿನ್ನಬಾರದು. ೧೪ **ವೃಷಲಾಹೃತಂ** ಶೂದ್ರರು ತಂದದ್ದನ್ನು ಅವರು ನೋಡಿದ್ದನ್ನು, ಧರ್ಮಕರ್ಮಭ್ರಷ್ಟರು ತಂದುದನ್ನು ತಿನ್ನಬಾರದು. ೧೫ **ಉದಕ್ಯಯಾ ದೃಷ್ಟಂ** ರಜಸ್ವಲೆಯು ನೋಡಿದ ಆಹಾರವನ್ನು ತಿನ್ನಬಾರದು **ಅಪಃ** ನೀರನ್ನು **ಅಂಜಲಿನಾ** ಬೊಗಸೆಯಿಂದ **ನ ಪಿಬೇತ್ತು** ಕುಡಿಯಲೇ ಬಾರದು. 'ವೃಷೋ ಧರ್ಮಃ ಸಮುದ್ದಿಷ್ಟಃ ತಸ್ಯ ಯಃ ಕುರುತೇ ಲಯಮ್ । ವೃಷಲಂ ತಂ ವಿಜಾನೀಯಾತ್ ಸರ್ವಕರ್ಮಸು ಗರ್ಹಿತಮ್' ಎಂಬ ಪ್ರಮಾಣಾನುಸಾರ ಕರ್ಮಭ್ರಷ್ಟನೂ ವೃಷಲನೇ ಎನಿಸುತ್ತಾನೆ. ನಾಲ್ಕನೇ ದಿನ ನೀರನ್ನು ಹೊಂದುವದರಿಂದ ಉದಕ್ಯಾ ಎಂದರೆ ರಜಸ್ವಲೆ ಎಂದು ಅರ್ಥ. 'ಋತುಮತ್ಯುದಕ್ಯಾಽಪಿ' ಎಂದು ಅಮರವೂ ಇದೆ. ।।೪೯।।

ಮನೆಯಿಂದ ಹೊರಗೆ ಹೋಗುವಾಗ ಏಳು ನಿಷೇಧಗಳನ್ನು ಹೇಳುವರು-

**ನೋಚ್ಛಿಷ್ಟಾಽಸ್ಪೃಷ್ಟಸಲಿಲಾ ಸಂಧ್ಯಯೋರ್ಮುಕ್ತಮೂರ್ಧಜಾ ।**
**ಅನರ್ಚಿತಾ ಸಂಯತವಾಕ್ ನಾಸಂವೀತಾ ಬಹಿಶ್ಚರೇತ್ ।।೫೦।।**

೧೬ **ಉಚ್ಛಿಷ್ಟಾ** ಎಂಜಲು ಕೈಯಲ್ಲಿ **ನ ಬಹಿಃ ಚರೇತ್** ಹೊರಗೆ ಹೋಗಬಾರದು. ೧೭ **ಅಸ್ಪೃಷ್ಟಸಲಿಲಾ** ನೀರಿನಿಂದ ಶುದ್ಧಿ ಮಾಡಿಕೊಳ್ಳದೇ ಹೊರಗೆ ಹೋಗಬಾರದು. ೧೮ **ಸಂಧ್ಯಯೋಃ** ಬೆಳಗಿನ, ಸಾಯಂಕಾಲದ ಸಂಧ್ಯಾಕಾಲಗಳಲ್ಲಿ ಹೊರಗೆ ಹೋಗಬಾರದು. ೧೯ **ಮುಕ್ತಮೂರ್ಧಜಾ** ತಲೆಗೂದಲು ಹರವಿಕೊಂಡು ಹೊರಗೆ ಹೋಗಬಾರದು. ೨೦ **ಅನರ್ಚಿತಾ** ಅಲಂಕಾರ ಮಾಡಿಕೊಳ್ಳದೇ ಹೊರಗೆ ಹೋಗಬಾರದು. ೨೧. **ಅಸಂಯತ್‌ವಾಕ್** ಮಾತು ಹಿಡಿತದಲ್ಲಿಲ್ಲದೇ




ಹೋಗಬಾರದು. ಕೇಳಿದ್ದಕ್ಕೆ ಮಾತ್ರ ಉತ್ತರ ಕೊಡುವದು **ಸಂಯತವಾಕ್ತ್ವ** ಅದಿಲ್ಲದೇ ಎಂದೂ ಅರ್ಥ. ೨೨ **ಅಸಂವೀತಾ** ಮೇಲೆ ಹೊದ್ದು ಕೊಳ್ಳದೇ **ಬಹಿಃ ನ ಚರೇತ್** ಹೊರಗೆ ಹೋಗಬಾರದು ।।೫೦।।

ಮಲಗುವಾಗ ೮ ನಿಷೇಧ ಹೇಳುವರು-

**ನಾಧೌತಪಾದಾ ಪ್ರಯತಾ ನಾರ್ದ್ರಪಾನ್ನಾಪ್ಯುದಕ್ಶಿರಾಃ ।**
**ಶಯೀತ ನಾಪರಾಜ್ ನಾನ್ಯೈರ್ನ ನಗ್ನಾ ನ ಚ ಸಂಧ್ಯಯೋಃ ।।೫೧।।**

**ಅಧೌತಪಾದಾ** ಕಾಲು ತೊಳೆಯದೇ ೨೩ **ಅಪ್ರಯತಾ** ವಿನಯವಿಲ್ಲದೇ ೨೪ **ಆರ್ದ್ರಪಾತ್** ಒದ್ದೆ ಕಾಲಿನಲ್ಲಿ ೨೫ **ಉದಕ್ಶಿರಾಃ** ಉತ್ತರಕ್ಕೆ ತಲೆಯಿಟ್ಟು ೨೬ **ಅಪರಾಕ್ಶಿರಃ** ಪಶ್ಚಿಮಕ್ಕೆ ತಲೆಯಿಟ್ಟು **ಅನ್ಯೈಃ ಸಹ** ಗಂಡನ ಹೊರತು ಮತ್ತೊಬ್ಬರ ಜೊತೆಗೆ ೨೭ **ನಗ್ನಾ** ಬೆತ್ತಲೆಯಾಗಿ **ಸಂಧ್ಯಯೋಃ** ಸಂಧ್ಯಾಕಾಲಗಳಲ್ಲಿ **ನ ಶಯೀತ** ಮಲಗಬಾರದು. ಊಟದಲ್ಲಿ ೫, ಹೊರಗೆ ಹೋಗುವಾಗ ೭, ಮಲಗುವಾಗ ೮ ಸಾರ್ವಕಾಲಿಕವಾದ ಭೂತಹಿಂಸಾದಿಗಳು ೧೧ ಹೀಗೆ ಒಟ್ಟು ೩೧ ನಿಷಿದ್ಧವಾದವುಗಳು. ಇವುಗಳನ್ನು ಮಾಡಬಾರದು.

ಮಾಡಬೇಕಾದುದನ್ನು ಹೇಳುತ್ತಾರೆ-

**ಧೌತವಾಸಾಃ ಶುಚಿರ್ನಿತ್ಯಂ ಸರ್ವಮಂಗಲಸಂಯುತಾ ।**
**ಪೂಜಯೇತ್ ಪ್ರಾತರಾಶಾತ್ಪ್ರಾಕ್ ಗೋವಿಪ್ರಾನ್ ಶ್ರಿಯಮಚ್ಯುತಮ್ ।।**

ನಿತ್ಯಂ ಪ್ರತಿದಿನವೂ **ಧೌತವಾಸಾಃ** ಒಗೆದ ಬಟ್ಟೆ ಉಟ್ಟು **ಶುಚಿಃ** ಶುದ್ಧಳಾಗಿ **ಸರ್ವಮಂಗಲಸಂಯುತಾ** ಅರಿಶಿನ ಕುಂಕುಮ ಮುಂತಾದ ಎಲ್ಲ ಮಂಗಲದ್ರವ್ಯಗಳಿಂದ ಕೂಡಿಕೊಂಡು ವಾದ್ಯಗಳಿಂದ ಕೂಡಿ **ಪ್ರಾತರಾಶಾತ್ ಪ್ರಾಕ್** ಬೆಳಗಿನ ಊಟಕ್ಕೆ ಮೊದಲು **ಗೋವಿಪ್ರಾನ್** ಆಕಳನ್ನು ಮತ್ತು ಬ್ರಾಹ್ಮಣರನ್ನು **ಶ್ರಿಯಂ** ಲಕ್ಷ್ಮಿಯನ್ನು **ಅಚ್ಯುತಂ** ಶ್ರೀಹರಿಯನ್ನು **ಪೂಜಯೇತ್** ಪೂಜಿಸಬೇಕು. ।।೫೨।।

**ಸ್ತ್ರಿಯೋ ವರವತೀಶ್ಚಾರ್ಚೇತ್ ಸ್ರಗ್ಗಂಧಬಲಿಮಂಡನೈಃ ।**
**ಪತಿಂ ಚಾರ್ಚ್ಯೋಪತಿಷ್ಠೇತ ಧ್ಯಾಯೇತ್ಕೋಷ್ಠಗತಂ ಚ ತಮ್ ।।೫೩।।**

**ವರವತೀಃ** ಗಂಡಂದಿರಿರುವ ಅಂದರೆ ಮುತ್ತೈದೆಯರಾದ **ಸ್ತ್ರಿಯಃ** ಸ್ತ್ರೀಯರನ್ನು **ಸ್ರಗ್ಗಂಧಬಲಿಮಂಡನೈಃ** ಹೂವಿನ ಹಾರ, ಗಂಧ, ಉಪಹಾರ ಮತ್ತು ಆಭರಣಗಳಿಂದ

**ವಲಯ** ಎಂಬ ಪಾಠದಲ್ಲಿ ಬಳೆಗಳಿಂದ ಎಂದು ಅರ್ಥವನ್ನು ತಿಳಿಯಬೇಕು. **ಅರ್ಚಯೇತ್** ಪೂಜಿಸಬೇಕು. **ಪತಿಂ ಚ** ಗಂಡನನ್ನು **ಅರ್ಚ್ಯ** ಪೂಜಿಸಿ **ಉಪತಿಷ್ಠೇತ್** ಸ್ತುತಿಸಬೇಕು **ತಂ** ಪ್ರಸಿದ್ಧನಾದ ಪತಿಯಲ್ಲಿ ಸನ್ನಿಹಿತನಾದ ತನ್ನ ಒಳಗೂ ಹೊರಗೂ ಇರುವ ಶ್ರೀಹರಿಯನ್ನು **ಕೋಷ್ಠಗತಂ** ತನ್ನ ಹೃದ್ಗುಹಾವಾಸಿಯನ್ನಾಗಿ **ಧ್ಯಾಯೇತ್** ಧ್ಯಾನ ಮಾಡಬೇಕು. ಅಥವಾ **ತಂ** ಆ ಪತಿಯನ್ನೇ **ಕೋಷ್ಠಗತಂ** ಗರ್ಭದಲ್ಲಿ ಇರುವನೆಂದು **ಧ್ಯಾಯೇತ್** ಯೋಚಿಸಬೇಕು. 'ಆತ್ಮಾ ವೈ ಪುತ್ರನಾಮಾಸಿ' ಎಂದು ಶ್ರುತಿಯಿದೆಯಷ್ಟೇ. ।।೫೩।।

**ಸಂವತ್ಸರಂ ಪುಂಸವನಂ ವ್ರತಮೇತದವಿಪ್ಲುತಮ್ ।**
**ಧಾರಯಿಷ್ಯಸಿ ಚೇತ್ತುಭ್ಯಂ ಶಕ್ರಹಾ ಭವಿತಾ ಸುತಃ ।।೫೪।।**

**ಪುಂಸವನಂ** ಗಂಡುಮಗುವನ್ನು ಕೊಡುವ **ಪುಂಸವನಂ** ಪುಂಸವನವೆಂಬ **ಏತತ್ ವ್ರತಂ** ಈ ವ್ರತವನ್ನು **ಅವಿಪ್ಲುತಂ** ಸ್ವಲ್ಪವೂ ನ್ಯೂನತೆ ಇಲ್ಲದಂತೆ **ಧಾರಯಿಷ್ಯಸಿ ಚೇತ್** ಮಾಡಿದ್ದಾದರೆ **ತುಭ್ಯಂ** ನಿನಗೆ **ಶಕ್ರಹಾ** ಇಂದ್ರನನ್ನು ಸಂಹರಿಸುವ **ಸುತಃ** ಮಗನು **ಭವಿತಾ** ಆಗುವನು ನ್ಯೂನವಾದಲ್ಲಿ ದೇವಬಾಂಧವನು ಆಗುವನು ಎಂದು ಭಾವ.

**ಶ್ರೀಶುಕ ಉವಾಚ –**

**ಬಾಢಮಿತ್ಯಭ್ಯುಪೇತ್ಯಾಥ ದಿತೀ ರಾಜನ್ ಮಹಾಮನಾಃ ।**
**ಕಶ್ಯಪಾದ್ಗರ್ಭಮಾಧತ್ತ ವ್ರತಂ ಚಾಽಂಜೋ ದಧಾರ ಸಾ ।।೫೫।।**

**ರಾಜನ್** ಪರೀಕ್ಷಿತನೇ **ಮಹಾಮನಾಃ ಚ** ಶ್ರೀಹರಿಯನ್ನು ಮನನ ಮಾಡುವ **ದಿತಿಃ** ದಿತಿದೇವಿಯು **ಅಥ** ಅನಂತರ **ಬಾಢಂ** ಹಾಗೆ ಆಗಲಿ **ಇತಿ** ಎಂದು **ಅಭ್ಯುಪೇತ್ಯ** ಕಶ್ಯಪರ ಮಾತನ್ನು ಒಪ್ಪಿಕೊಂಡು **ಕಶ್ಯಪಾತ್** ಕಶ್ಯಪರಿಂದ **ಗರ್ಭಂ ಆಧತ್ತ** ಗರ್ಭಧಾರಣೆ ಮಾಡಿದಳು. **ಸಾ** ಅವಳು **ವ್ರತಂ ಚ ಅಂಜಃ ದಧಾರ** ಪುಂಸವನ ವ್ರತವನ್ನೂ ವಿಧಿವತ್ತಾಗಿ ಧರಿಸಿದಳು. ।।೫೫।।

**ಮಾತೃಷ್ವಸುರಭಿಪ್ರಾಯಮಿಂದ್ರ ಆಜ್ಞಾಯ ಮಾನದ ।**
**ಶುಶ್ರೂಷಣೇನಾಶ್ರಮಸ್ಥಾಂ ದಿತಿಂ ಪರ್ಯಚರತ್ಕವಿಃ ।।೫೬।।**

**ಹೇ ಮಾನದ** ಶತ್ರುಗಳ ಅಭಿಮಾನವನ್ನು ಖಂಡಿಸುವ ಪರೀಕ್ಷಿದ್ರಾಜನೇ **ಕವಿಃ** ಜ್ಞಾನಿಯಾದ **ಇಂದ್ರಃ** ಇಂದ್ರನು **ಮಾತೃಷ್ವಸುಃ** ತಾಯಿಯಾದ ಅದಿತಿಯ ತಂಗಿಯಾದ

 

ದಿತಿಯ **ಅಭಿಪ್ರಾಯಂ** ಅಭಿಪ್ರಾಯವನ್ನು **ಆಜ್ಞಾಯ** ತಿಳಿದು **ಆಶ್ರಮಸ್ಥಾಂ** ಪುಂಸವನ ವ್ರತಕ್ಕಾಗಿ ಆಶ್ರಮದಲ್ಲಿ ವಾಸಿಸುವ **ದಿತಿಂ** ದಿತಿದೇವಿಯನ್ನು **ಶುಶ್ರೂಷಣೇನ ಪರ್ಯಚರತ್** ಸೇವೆಯಿಂದ ಸುತ್ತಲೂ ಸಂಚರಿಸಿದನು.

**ಶ್ರೀ ಸತ್ಯಧರ್ಮರ ಪ್ರಕಾರ**

**ಶುಶ್ರೂಷಣೇ** ಸೇವಿಸುವದರಲ್ಲಿ **ಕವಿಃ** ಕುಶಲನಾದ ಇಂದ್ರನು **ಅನಾಶ್ರಮಸ್ಥಾಂ** ಆಶ್ರಮಸ್ಥಾ ನ ಇತಿ ನಾಶ್ರಮಸ್ಥಾ ಸಾ ನ ಭವತಿ ಇತ್ಯನಾಶ್ರಮಸ್ಥಾ ಅಂದರೆ ಎಲ್ಲಿಯೂ ಹೋಗಲು ಇಚ್ಛೆ ಇಲ್ಲದಿರುವದೆಂಬ ಅತಿಶಯವನ್ನು ನಞ ದ್ವಯ ಲಭ್ಯವೆಂದು ತಿಳಿಯಬೇಕು. ಇಂತಹ ದಿತಿಯನ್ನು **ಪರ್ಯಚರತ್** ಸೇವಿಸಿದನು. ಹೀಗೆ ಅನ್ವಯ ಮಾಡದಿದ್ದರೆ ಶುಶ್ರೂಷಣೇನ ಪರ್ಯಚರತ್ ಎಂಬುದಕ್ಕೆ ಅರ್ಥ ಚೆನ್ನಾಗಿ ಹೇಳಲಾಗುವದಿಲ್ಲವೆಂದು ಮನಸ್ಸು ಕೂಡಬೇಕು. ಶುಶ್ರೂಷ್ಯತೇ ಅನೇನ ಶುಶ್ರೂಷಣಂ ಮುಂದೆ ಹೇಳುವ ಸೇವಾಸಾಧನಗಳು ಅವುಗಳಿಂದ ಎಂದಾದರೂ ಅರ್ಥ. ।।೫೬।।

ಸೇವಿಸುವ ಬಗೆಯನ್ನು ವರ್ಣಿಸುವರು-

**ನಿತ್ಯಂ ವನಾತ್ಸುಮನಸಃ ಫಲಮೂಲಸಮಿತ್ಕುಶಾನ್ ।**
**ಪತ್ರಾಂಕುರಮೃದಾಪಶ್ಚ ಕಾಲೇ ಕಾಲ ಉಪಾಹರತ್** ।।೫೭।।

**ನಿತ್ಯಂ** ಪ್ರತಿದಿನವೂ **ವನಾತ್** ಕಾಡಿನಿಂದ **ಸುಮನಸಃ ಚ** ಹೂಗಳನ್ನು **ಫಲ** ಹಣ್ಣುಗಳನ್ನು **ಮೂಲ** ಗಡ್ಡೆ-ಗೆಣಸುಗಳನ್ನು **ಸಮಿತ್** ಸಮಿತ್ತುಗಳನ್ನು **ಕುಶಾನ್** ದರ್ಭೆಗಳನ್ನು **ಪತ್ರ** ಎಲೆಗಳನ್ನು **ಅಂಕುರ** ಎಳೆ ಮೊಳಕೆಗಳನ್ನು **ಮೃದಂ** ಮಣ್ಣನ್ನು **ಆಪಃ ಚ** ನೀರನ್ನೂ **ಕಾಲೇ ಕಾಲೇ** ಆಯಾ ಕಾಲದಲ್ಲಿ **ಉಪಾಹರತ್** ತಂದು ಕೊಡುತ್ತಿದ್ದನು.

ಮೃದಂ, ಆ , ಆಪಃ ಎಂದು ಛೇದ. ಸ್ಥಂಡಿಲಕ್ಕೆ ಉಪಯುಕ್ತವಾದ ಮಣ್ಣನ್ನು ಒಳ್ಳೆ ನೀರನ್ನು ಎಂದರ್ಥ. ಮೃದಾ ಎಂದಾದರೂ ಛೇದ ಮಾಡಬಹುದು. ಟಾಬಂತ ಅಥವಾ ತೃತಿಯಾಂತ. ಪತ್ರಾಂಕುರೈಃ ಸಹಿತಾ ಚ ಸಾ ಮೃಚ್ಚ ತಯಾ ಸಹ ಆಪಃ ಉಪಾಹರತ್ ಎಂದು ಅನ್ವಯ ಮಾಡಬಹುದು. ।।೫೭।।

**ಏವಂ ತಸ್ಯಾಂ ವ್ರತಸ್ಥಾಯಾಂ ವ್ರತಚ್ಛಿದ್ರಂ ಹರಿರ್ನೃಪ ।**
**ಪ್ರೇಪ್ಸುಃ ಪರ್ಯಚರಜ್ಜಿಹ್ಮೋ ಮೃಗಹೇವ ಮೃಗಾಕೃತಿಃ** ।।೫೮।।

**ನೃಪ** ರಾಜನೇ **ತಸ್ಯಾಂ** ದಿತಿಯು **ವ್ರತಸ್ಥಾಯಾಂ** ಪುಂಸವನ ವ್ರತಾಚಾರಣೆಯಲ್ಲಿರಲು **ವ್ರತಛಿದ್ರಂ** ನಿಯಮದ ವ್ಯತ್ಯಾಸವನ್ನು **ಪ್ರೇಪ್ಸುಃ** ಹೊಂದಲು ಇಚ್ಛಿಸುವ **ಹರಿಃ** ಇಂದ್ರನು **ಮೃಗಹಾ** ಬೇಟೆಗಾರನು **ಮೃಗಾಕೃತಿಃ** ಇವ ಮೃಗವಂಚನೆಗಾಗಿ ಮೃಗದಂತೆ ಆಕಾರ ಉಳ್ಳವನಾಗಿರುವಂತೆ **ಜಿಹ್ಮಃ** ಮೋಸಗಾರನಾಗಿ ಸಾಧುವಿನಂತೆ (ತನ್ನ ಮನಸ್ಸಿನಲ್ಲಿದ್ದುದನ್ನು ಹೊರಗೆಡವದೇ) **ಏವಂ** ಮೇಲೆ ಹೇಳಿದಂತೆ **ಪರ್ಯಚರತ್** ಸೇವಿಸಿದನು. ವ್ರತಲೋಪವನ್ನೇ ಕಾಯುತ್ತಿದ್ದನು ಎಂದರ್ಥ. ।।೫೮।।

**ನಾಧ್ಯಗಚ್ಛದ್ ವ್ರತಚ್ಛಿದ್ರಂ ತತ್ಪರೋಽಥ ಮಹೀಪತೇ ।**
**ಚಿಂತಾಂ ತೀವ್ರಾಂ ಗತಃ ಶಕ್ರಃ ಕೇನ ಮೇ ಸ್ಯಾಚ್ಛಿವಂ ತ್ವಿಹ ।।೫೯।।**

**ಮಹೀಪತೇ** ರಾಜನೇ **ತತ್ಪರಃ** ವ್ರತಲೋಪವನ್ನೇ ಹುಡುಕುತ್ತಿದ್ದ **ಶಕ್ರಃ** ಇಂದ್ರನು **ವ್ರತಚ್ಛಿದ್ರಂ** ವ್ರತಲೋಪವನ್ನು **ನ ಅಧ್ಯಗಚ್ಛತ್** ಕಾಣಲಿಲ್ಲ. **ಅಥ** ಅನಂತರ **ಇಹ** ಈ ವ್ರತಾಚಾರಣೆಯಲ್ಲಿ **ಕೇನ** ಯಾವ ಲೋಪದಿಂದ **ಮೇ** ನನಗೆ **ಶಿವಂ** ಮಂಗಲವು **ಸ್ಯಾತ್** ಆದೀತು **ಇತಿ** ಎಂದು **ತೀವ್ರಾಂ** ಅತಿಶಯವಾದ **ಚಿಂತಾಂ ಗತಃ ಚ** ಚಿಂತೆಗೊಳಗಾದನು. ವ್ರತಲೋಪವಾಗುತ್ತಿಲ್ಲ ನನ್ನ ಹಂತಕನೇ ಜನಿಸುವನು ಎಂದು ಆತಂಕಗೊಂಡನೆಂದರ್ಥ.

**ಏಕದಾ ಸಾ ತು ಸಂಧ್ಯಾಯಾಮುಚ್ಛಿಷ್ಟಾ ವ್ರತಕರ್ಶಿತಾ ।**
**ಅಸ್ಪೃಷ್ಟವಾರ್ಯಧೌತಾಂಘ್ರಿಃ ಸುಷ್ವಾಪ ವಿಧಿಮೋಹಿತಾ ।।೬೦।।**

**ಏಕದಾ** ಒಂದು ದಿನ **ವಿಧಿಮೋಹಿತಾ** ಅದೃಷ್ಟನಿಯಾಮಕ ಶ್ರೀಹರಿಯಿಂದ ಮಂಕು ಕವಿದ **ಸಾ ತು** ದಿತಿಯಾದರೂ **ವ್ರತಕರ್ಶಿತಾ** ವ್ರತಾಚಾರಣೆಯಿಂದ ಕುಗ್ಗಿದವಳಾಗಿ **ಸಂಧ್ಯಾಯಾಂ** ಸಂಜೆಯಲ್ಲಿ **ಉಚ್ಛಿಷ್ಟಾ** ಎಂಜಲನ್ನು ಶುದ್ಧಿ ಮಾಡಿಕೊಳ್ಳದೇ **ಅಸ್ಪೃಷ್ಟವಾರ್ಯಧೌತಾಂಘ್ರಿಃ** ಜಲಸ್ಪರ್ಶವಿಲ್ಲದೇ ಕಾಲು ತೊಳಿಯದೇ **ಸುಷ್ವಾಪ** ಮಲಗಿದಳು. ।।೬೦।।

**ಲಬ್ಧ್ವಾ ತದಂತರಂ ಶಕ್ರೋ ನಿದ್ರೋಪಹೃತಚೇತಸಃ ।**
**ದಿತೇಃ ಪ್ರವಿಷ್ಟ ಉದರಂ ಯೋಗೇಶೋ ಯೋಗಮಾಯಯಾ ।।೬೧।।**

**ಯೋಗೇಶಃ** ಯೋಗ ಸಿದ್ಧಿಯುಳ್ಳ **ಶಕ್ರಃ** ಇಂದ್ರನು **ತದಂತರಂ** ಆ ಅವಕಾಶವನ್ನು **ಲಬ್ಧ್ವಾ** ಹೊಂದಿದವನಾಗಿ **ಯೋಗಮಾಯಯಾ** ಯೋಗಸಾಮರ್ಥ್ಯದಿಂದ

 

**ನಿದ್ರೋಪಹತಚೇತಸಃ** ನಿದ್ರೆಯಿಂದ ಉಪರತವಾದ ಮನಸ್ಸುಳ್ಳ **ದಿತೇಃ** ದಿತಿದೇವಿಯ **ಉದರಂ ಪ್ರವಿಷ್ಟಃ** ಗರ್ಭಕೋಶವನ್ನು ಪ್ರವೇಶಿಸಿದನು. ।।೬೧।।

**ಚಕರ್ತ ಸಪ್ತಧಾ ಗರ್ಭಂ ವಜ್ರೇಣ ಕನಕಪ್ರಭಮ್ ।**
**ರುದಂತಂ ಸಪ್ತಧೈಕೈಕಂ ಮಾ ರೋದೀರಿತಿ ತಾನ್ ಪುನಃ ।।೬೨।।**

**ಕನಕಪ್ರಭಂ** ಬಂಗಾರದಂತೆ ಪ್ರಕಾಶಿಸುತ್ತಿದ್ದ **ಗರ್ಭಂ** ದಿತಿಯ ಗರ್ಭದಲ್ಲಿಯ ಪಿಂಡವನ್ನು **ವಜ್ರೇಣ** ವಜ್ರಾಯುಧದಿಂದ **ಸಪ್ತಧಾ** ಏಳು ಭಾಗವಾಗಿ **ಚಕರ್ತ** ಕತ್ತರಿಸಿದನು. **ರುದಂತಂ** ಅಳುತ್ತಿರುವ **ಏಕೈಕಂ** ಒಂದೊಂದು ಭಾಗವನ್ನೂ **ಮಾ ರೋದೀಃ ಇತಿ** ಅಳಬೇಡಿರೆಂದು ಸಮಾಧಾನ ಹೇಳುತ್ತಾ **ಪುನಃ** ಮತ್ತೆ **ಸಪ್ತಧಾ** ಏಳು ಭಾಗವಾಗಿ **ಚಕರ್ತ** ಕತ್ತರಿಸಿದನು. ೪೯ ಭಾಗ ಮಾಡಿದನೆಂದರ್ಥ. ।।೬೨।।

**ತೇ ತಮೂಚುಃ ಪಾಟ್ಯಮಾನಾಃ ಸರ್ವೇ ಪ್ರಾಂಜಲಯೋ ನೃಪ ।**
**ನೋ ಜಿಘಾಂಸಸಿ ಕಿಂ ತ್ವಿಂದ್ರ ಭ್ರಾತರೋ ಮರುತಸ್ತವ ।।೬೩।।**

**ನೃಪ** ರಾಜನೇ **ಪೀಡ್ಯಮಾನಾಃ** (ಪಾಟ್ಯಮಾನಾಃ) ಕತ್ತರಿಸುವದರಿಂದ ಪೀಡಿಸಲ್ಪಡುತ್ತಿದ್ದ **ತೇ ಸರ್ವೇ** ಆ ನಲವತ್ತೊಂಭತ್ತು ಭಾಗಗಳೂ **ಪ್ರಾಂಜಲಯಃ ಸಂತಃ** ಕೈ ಮುಗಿದವರಾಗಿ **ತಂ** ಇಂದ್ರನನ್ನು ಕುರಿತು **ಹೇ ಇಂದ್ರ** ಇಂದ್ರನೇ **ನಃ** ನಮ್ಮನ್ನು **ಜಿಘಾಂಸಸಿ** ಕೊಲ್ಲಲಿಚ್ಛಿಸುವಿ **ಕಿಂತು** ಆದರೆ **ತವ ಭ್ರಾತರಃ** ನಿನ್ನ ತಮ್ಮಂದಿರಾದ **ಮರುತಃ** ಮರುತ್ತುಗಳು ನಾವು **ಇತಿ** ಎಂದು **ಊಚುಃ** ಹೇಳಿದರು. ನಮ್ಮನ್ನು ಕೊಲ್ಲುವದು ಸೂಕ್ತವಲ್ಲವೆಂದು ಅಭಿಪ್ರಾಯ. ಕಿಲ ಎಂಬ ಅರ್ಥದಲ್ಲಿ ಕಿಂ ನು ಎಂಬ ಪಾಠವೂ ಸರಲವಾಗಿದೆ. ।।೬೩।।

**ಮಾ ಭೈಷ್ಟ ಭ್ರಾತರೋ ಮಹ್ಯಂ ಯೂಯಮಿತ್ಯಾಹ ಕೌಶಿಕಃ ।**
**ಅನನ್ಯಭಾವಾನ್ ಪಾರ್ಷದಾನಾತ್ಮನೋ ಮರುತಾಂ ಗಣಾನ್ ।।೬೪।।**

**ಕೌಶಿಕಃ** ಇಂದ್ರನು **ಅನನ್ಯಭಾವಾನ್** ತನ್ನಲ್ಲಿ ಭಕ್ತಿ ಮಾಡುತ್ತಿದ್ದ **ಆತ್ಮನಃ** ತನ್ನ **ಪಾರ್ಷದಾನ್** ಪರಿವಾರದವರಾದ **ಮರುತಾಂ ಗಣಾನ್** ಮರುತ್ತುಗಳ ಏಳರ ಏಳು ಗಣಗಳನ್ನು **ಮಾ ಭೈಷ್ಟ** ಹೆದರಬೇಡಿರಿ **ಯೂಯಂ** ನೀವು **ಮಹ್ಯಂ** ನನಗೆ **ಭ್ರಾತರಃ** ತಮ್ಮಂದಿರು **ಇತಿ** ಎಂದು **ಆಹ** ಹೇಳಿದನು. **ಮಹ್ಯಂ ಮತ್ ಮಾ ಭೈಷ್ಟ** ನನ್ನಿಂದ ಹೆದರಬೇಡಿ ಎಂದೂ ಅರ್ಥ ಮಾಡಿರುವರು.

ಕುಲಿಶಶಕಲಿತವಾದ ಇಂದ್ರನ ವಜ್ರಾಯುಧದಿಂದ ಕತ್ತರಿಸಲ್ಪಟ್ಟ ಗರ್ಭವು ಉದರದಲ್ಲಿಯೇ ಹೇಗೆ ಸಾಯಲಿಲ್ಲ ಎಂಬ ಪರೀಕ್ಷಿತನ ಶಂಕೆಗೆ ಶುಕಾಚಾರ್ಯರು ಅದ್ಭುತ ಚರಿತ್ರೆಯುಳ್ಳ ಭಗವಂತನಲ್ಲಿ ಇದೇನಾಶ್ಚರ್ಯವಲ್ಲ. ಎಲೋ ಪರೀಕ್ಷಿತನೇ ಬೇರೆ ಸಾಕ್ಷಿಯನ್ನು ಪರೀಕ್ಷಿಸಬೇಕಿಲ್ಲ. ನಿನ್ನನ್ನೇ ನೀನು ನೋಡಿಕೋ ಎಂದು ಹೇಳುವರು-

**ನ ಮಮಾರ ದಿತೇರ್ಗರ್ಭಃ ಶ್ರೀನಿವಾಸಾನುಕಂಪಯಾ ।**
**ಬಹುಧಾ ಕುಲಿಶಕ್ಷುಣ್ಣೋ ದ್ರೌಣ್ಯಸ್ತ್ರೇಣ ಯಥಾ ಭವಾನ್ ॥೬೫॥**

**ಶ್ರೀನಿವಾಸಾನುಕಂಪಯಾ** ಶ್ರೀನಿವಾಸನಾದ ಶ್ರೀಹರಿಯ ಅನುಗ್ರಹದಿಂದ **ದ್ರೌಣ್ಯಸ್ತ್ರೇಣ** ಅಶ್ವತ್ಥಾಮನು ಪ್ರಯೋಗಿಸಿದ ಬ್ರಹ್ಮಾಸ್ತ್ರದಿಂದ **ಭವಾನ್ ಯಥಾ** ನೀನು ಹೇಗೆ **ನ ಮಮಾರ** ಸಾಯಲಿಲ್ಲವೋ **ತಥಾ** ಹಾಗೆ ಶ್ರೀಹರಿಯ ಅನುಗ್ರಹದಿಂದ **ಬಹುಧಾ** ಅನೇಕ ಭಾಗವಾಗಿ **ಕುಲಿಶಕ್ಷುಣ್ಣಃ** ವಜ್ರಾಯುಧದಿಂದ ಕತ್ತರಿಸಲ್ಪಟ್ಟ **ದಿತೇಃ ಗರ್ಭಃ** ದಿತಿಯ ಗರ್ಭವು **ನ ಮಮಾರ** ಸಾಯಲಿಲ್ಲ. ॥೬೫॥

'ದ್ರೌಣ್ಯಸ್ತ್ರವಿಪ್ಲುಷ್ಟಮಿದಂ ಮದಂಗಂ ಸಂತಾನಬೀಜಂ ಕುರುಪಾಂಡವಾನಾಂ ಜುಗೋಪ ಕುಕ್ಷಿಂ ಗತ ಆತ್ತಚಕ್ರಃ' ಎಂದಿದೆ.

ದಿತಿಯಗರ್ಭವು ಸಾಯಲಿಲ್ಲವೆಂಬುದು ಆಶ್ಚರ್ಯವೇನಲ್ಲ ಎಂದು ಹೇಳುವರು-

**ಸಕೃದಿಷ್ಟ್ವಾದಿಪುರುಷಂ ಪುರುಷೋ ಯಾತಿ ಸಾಮ್ಯತಾಮ್ ।**
**ಸಂವತ್ಸರಂ ಕಿಂಚಿದೂನಂ ದಿತ್ಯಾ ಯದ್ಧರಿರರ್ಚಿತಃ ॥೬೬॥**

**ಪುರುಷಃ** ಅಧಿಕಾರಿಯು **ಆದಿಪುರುಷಂ** ಶ್ರೀಮನ್ನಾರಾಯಣನನ್ನು **ಸಕೃತ್** ಒಂದು ಸಲ **ಇಷ್ಟ್ವಾ** ಭಕ್ತಿಯಿಂದ ಸೇವಿಸಿ **ಸಾಮ್ಯತಾಂ** ಸಾರೂಪ್ಯವನ್ನು **ಯಾತಿ** ಹೊಂದುವನು **ಯತಃ ಚ** ಯಾವ ಕಾರಣ **ಹರಿಃ** ಶ್ರೀಮನ್ನಾರಾಯಣನು **ದಿತ್ಯಾ** ದಿತಿದೇವಿಯಿಂದ **ಕಿಂಚಿದೂನಂ** ಸ್ವಲ್ಪ ಕಡಿಮೆಯಾಗಿ **ಸಂವತ್ಸರಂ** ಒಂದು ವರ್ಷಕಾಲ **ಅರ್ಚಿತಃ** ಪೂಜಿಸಲ್ಪಟ್ಟನೋ ಆ ಕಾರಣದಿಂದ ಸಾರೂಪ್ಯವನ್ನೇ ಕೊಡುವನೆಂದ ಮೇಲೆ ಜೀವನನ್ನು ಉಳಿಸಿದ್ದೇನು ಆಶ್ಚರ್ಯ ಎಷ್ಟು ಮಾತ್ರದ್ದು. ಸೇವೆ ಮಾಡಿದ ಕಾಲ ಬಹಳ. ಫಲ ಅಲ್ಪವೆಂದು ಭಾವ. ಆದ್ದರಿಂದ ಆಶ್ಚರ್ಯವಲ್ಲ. ॥೬೬॥




**ಸಜೂರಿಂದ್ರೇಣ ಪಂಚಾಶದ್ದೇವಾಸ್ತೇ ಮರುತೋಽಭವನ್ ।**
**ವ್ಯಪೋಹ್ಯ ಮಾತೃದೋಷಂ ತೇ ಹರಿಣಾ ಸೋಮಪಾಃ ಕೃತಾಃ ।।೬೭।।**

**ಇಂದ್ರೇಣ ಸಜೂಃ** ಇಂದ್ರನ ಜೊತೆಗೆ ಸೇರಿ **ತೇ** ಅವರು **ಪಂಚಾಶತ್** ಐವತ್ತು **ಮರುತಃ** ಮರುತ್ತುಗಳೆಂದು **ಅಭವನ್** ಪ್ರಸಿದ್ಧರಾದರು. **ತೇ** ಅವರು **ಮಾತೃದೋಷಂ** ತಾಯಿಯ ದೋಷವನ್ನು ಅಂದರೆ ಹರಿಹಯಹನನ ಸಂಕಲ್ಪರೂಪವಾದುದನ್ನು **ವ್ಯಪೋಹ್ಯ** ಹೋಗಲಾಡಿಸಿಕೊಂಡು **ಹರಿಣಾ** ಇಂದ್ರನಿಂದ **ಸೋಮಪಾಃ ಕೃತಾಃ** ಸೋಮಪಾನಾರ್ಹರಾಗಿ ಮಾಡಲ್ಪಟ್ಟರು.

**ಮಾತುಃ ದೋಷಂ** ತನ್ನನ್ನು ಕೊಲ್ಲಲು ಕಾರಣನಾದ ಕುಮಾರನಿಗಾಗಿ ಮಾಧವನ ಆರಾಧನೆಯಿಂದ ಉಂಟಾದ ತಮ್ಮ ತಮ್ಮ ತಾಯಿಯ **ದೋಷಂ** ಕೈಯನ್ನು **ಅಪೋಹ್ಯ** ತಿರಸ್ಕರಿಸಿ **ಇಂದ್ರೇಣ ಸಜೂಃ** ಸಹ **ಮರುತಃ ಅಭವನ್** 'ಭುಜಬಾಹೂ ಪ್ರವಿಷ್ಟೋ ದೋಃ' ಇತ್ಯಮರಃ ।

'ಸಜೂರ್ಗಣೇನ ತೃಂಪತು' 'ಅಶ್ವಿಭ್ಯಾಮುಷಸಾ ಸಜೂಃ' ಎಂಬಲ್ಲಿ ಸಹ ಎಂದು ವ್ಯಾಖ್ಯಾನಿಸಿದ್ದಾರೆ. ಗ್ರಂಥಕಾರರೇ ಸಜೂಃ ಎಂಬುದರ ಅರ್ಥವನ್ನು ಮುಂದಿನ ಶ್ಲೋಕದಲ್ಲಿ 'ಇಂದ್ರೇಣ ಸಹಿತಾನ್ ದೇವಿ' ಎಂದು 'ಜುಷೀ ಪ್ರೀತಿಸೇವನಯೋಃ' ಎಂಬ ಧಾತುವಿಗೆ ಸಂಪದಾದಿ ಕ್ವಿಪ್ ಪ್ರತ್ಯಯ ಮಾಡಿದಾಗ ಸಮಾನಾ ಪ್ರೀತಿಃ ಸೇವಾ ಯಸ್ಯ ಎಂದು ಮಾಡಿ ಸಮಾನ ಶಬ್ದಕ್ಕೆ ಛಂದಸ್ಸಿನಲ್ಲಿ ಸ್ವಭಾವವಾದರೆ ಸಹ ಶಬ್ದಕ್ಕೆ ವಾ ಉಪಸರ್ಜನಸ್ಯ ಎಂಬುದರಿಂದಾಗಲಿ ಸಭಾವವಾದಾಗ 'ಸಸಜುಷೋ ರುಃ' ಎಂಬುದರಿಂದ ರುತ್ವವಾದಾಗ 'ರ್ವೋರುಪಧಾಯಾ ದೀರ್ಘಃ...' ಎಂದು ದೀರ್ಘವಾಗಿ ನಿಷ್ಪನ್ನವಾದ ಸಜೂಃ ಶಬ್ದ ಹೇಗೆ ಸಹ ಎಂಬಷ್ಟೇ ಅರ್ಥ ತಿಳಿಸುವದು ಎಂದರೆ ಹಾಗಲ್ಲ.

'ಊರ್ಯಾದಿಚ್ವಿಡಾಚಶ್ಚ' ಎಂಬುದರ ವ್ಯಾಖ್ಯಾನ ಕಾಶಿಕಾದಲ್ಲಿ ಸಜೂಃ ಶಬ್ದಃ ಸಹಾರ್ಥೇ ವರ್ತತೇ ಎಂದು ಹೇಳಿರುವದರಿಂದ ಇಲ್ಲಿ ರೂಢಿಯಿಂದ ಸಹ ಶಬ್ದಾರ್ಥಕ ಅವ್ಯಯವಿದು ಎಂದು ತಿಳಿಯಬೇಕು. ।।೬೭।।

**ದಿತಿರುತ್ಥಾಯ ದದೃಶೇ ಕುಮಾರಾನನಲಪ್ರಭಾನ್ ।**
**ಇಂದ್ರೇಣ ಸಹಿತಾನ್ ದೇವೀ ಪರ್ಯತುಷ್ಯದನಿಂದಿತಾ ।।೬೮।।**

**ದೇವೀ ದಿತಿಃ** ದಿತಿದೇವಿಯು **ಉತ್ಥಾಯ** ನಿದ್ರೆಯಿಂದ ಎದ್ದು **ಇಂದ್ರೇಣ ಸಹಿತಾನ್** ಇಂದ್ರನಿಂದ ಕೂಡಿದ **ಅನಲಪ್ರಭಾನ್** ಅಗ್ನಿಯಂತೆ ಪ್ರಜ್ವಲಿಸುತ್ತಿದ್ದ **ಕುಮಾರಾನ್** ಮಕ್ಕಳನ್ನು **ದದೃಶೇ** ನೋಡಿದಳು **ಅನಿಂದಿತಾ** ವಸ್ತುತಃ ಸಾಧ್ವಿಯಾದ ಅವಳು **ಪರ್ಯತುಷ್ಯತ್** ಗರ್ಭವನ್ನು ಕತ್ತರಿಸಿದರೂ ಮಕ್ಕಳು ಬದುಕಿದ್ದುದನ್ನು ಕಂಡು ಸಂತೋಷಪಟ್ಟಳು. ।।೬೮।।

**ಅಥೇಂದ್ರಮಾಹ ತಾತಾಹಮಾದಿತ್ಯಾನಾಂ ಭಯಾವಹಮ್ ।**
**ಅಪತ್ಯಮಿಚ್ಛಂತ್ಯಚರಂ ವ್ರತಮೇತತ್ಸುದುಷ್ಕರಮ್ ।।೬೯।।**

**ಅಥ** ಅನಂತರ **ತಾತ** ಮಗೂ **ಅಹಂ** ನಾನು **ಆದಿತ್ಯಾನಾಂ** ಅದಿತಿಯ ಮಕ್ಕಳಿಗೆ **ಭಯಾವಹಂ ಚ** ಭಯವನ್ನುಂಟು ಮಾಡುವ **ಅಪತ್ಯಂ** ಮಗನನ್ನು **ಇಚ್ಛಂತೀ** ಇಚ್ಛಿಸುವವಳಾಗಿ **ಸುದುಷ್ಕರಂ** ಕಠಿಣವಾದ **ಏತತ್ ವ್ರತಂ** ಈ ವ್ರತವನ್ನು **ಅಚರಂ** ಮಾಡಿದೆನು ಎಂದು **ಇಂದ್ರಂ ಆಹ** ಇಂದ್ರನಿಗೆ ಹೇಳಿದಳು. ।।೬೯।।

**ಏಕಃ ಸಂಕಲ್ಪಿತಃ ಪುತ್ರಃ ಸಪ್ತ ಸಪ್ತಾಭವನ್ ಕಥಮ್ ।**
**ಯದಿ ತೇ ವಿದಿತಂ ಪುತ್ರ ಸತ್ಯಂ ಕಥಯ ಮಾ ಮೃಷಾ ।।೭೦।।**

**ಏಕಃ ಪುತ್ರಃ ಸಂಕಲ್ಪಿತಃ** ಒಬ್ಬ ಮಗನಾಗಬೇಕೆಂದು ನನ್ನಿಂದ ಅಪೇಕ್ಷಿಸಲ್ಪಟ್ಟಿತ್ತು **ಸಪ್ತ ಸಪ್ತ** ನಲವತ್ತೊಂಬತ್ತು ಮಕ್ಕಳು **ಕಥಂ ಅಭವನ್** ಹೇಗೆ ಆದರು **ಪುತ್ರ** ಮಗನೇ **ತೇ** ನಿನಗೆ **ವಿದಿತಂ ಯದಿ** ತಿಳಿದಿದ್ದರೆ **ಸತ್ಯಂ ಕಥಯ** ನಿಜ ಹೇಳು **ಮಾ ಮೃಷಾ ಕಥಯ** ಸುಳ್ಳು ಹೇಳಬೇಡ ಎಂದಳು. ।।೭೦।।

**ಇಂದ್ರ ಉವಾಚ -**

**ಅಂಬ ತೇಽಹಂ ವ್ಯವಸಿತಮುಪಧಾರ್ಯಾಗತೋಽಂತಿಕಮ್ ।**
**ಲಬ್ಧಾಂತರೋಽಚ್ಛಿದಂ ಗರ್ಭಮರ್ಥಂ ಬುದ್ಧಿರ್ನ ಧರ್ಮವಿತ್ ।।೭೧।।**

**ಅಂಬ** ತಾಯಿಯೇ **ತೇ** ನಿನ್ನ **ವ್ಯವಸಿತಂ** ನನ್ನನ್ನು ಕೊಲ್ಲುವ ಮಗನನ್ನು ಪಡೆಯಬೇಕೆಂಬ ನಿನ್ನ ಪ್ರಯತ್ನವನ್ನು ನಿನ್ನ ಈ ನಿಶ್ಚಯವನ್ನು **ಉಪಧಾರ್ಯ** ತಿಳಿದು **ಅಂತಿಕಂ ಆಗತಃ** ನಿನ್ನ ಸಮೀಪಕ್ಕೆ ಬಂದೆನು. **ಅರ್ಥಬುದ್ಧಿಃ ಚ** ನನ್ನ ಪ್ರಯೋಜನವನ್ನು ಮಾತ್ರ ತಿಳಿದ **ನ ಧರ್ಮವಿತ್** ಧರ್ಮದಲ್ಲಿ ದೃಷ್ಟಿಯಿಲ್ಲದವನಾಗಿ **ಲಬ್ಧಾಂತರಃ ಚ** ಅವಕಾಶವನ್ನು ಪಡೆದು **ಗರ್ಭಂ ಅಚ್ಛಿದಂ** ನಿನ್ನ ಉದರವನ್ನು ಪ್ರವೇಶಿಸಿ ಗರ್ಭವನ್ನು ಕತ್ತರಿಸಿದೆನು.

'ಅಂಬಾರ್ಥನದ್ಯೋಃ' ಎಂಬುದರಿಂದ ಅಂಬ ಎಂಬಲ್ಲಿ ಹ್ರಸ್ವವಾಗಿದೆ. ನೀನು ಉಂಡು ಕಾಲು ತೊಳೆಯದೇ ಮಲಗಿದ್ದರಿಂದ ಅವಕಾಶ ಪಡೆದವನಾಗಿ ಎಂದರ್ಥ. ದಿತಿಯು ನಿಷ್ಕಪಟವಾಗಿ ಕೇಳಿದಾಗ ಇಂದ್ರನು ನಿಷ್ಕಪಟವಾಗಿ ಹೇಳಿದನು. ।।೭೦।।

**ಕೃತೋ ಮೇ ಸಪ್ತಧಾ ಗರ್ಭ ಆಸನ್ ಸಪ್ತ ಕುಮಾರಕಾಃ ।**
**ತೇಽಪಿ ಚೈಕೈಕಶೋ ವೃಕ್ಣಾಃ ಸಪ್ತಧಾ ನಾಽಪಿ ಮಮ್ರಿರೇ ।।೭೨।।**

**ಮೇ** ನನ್ನಿಂದ **ಗರ್ಭಃ** ಗರ್ಭವು **ಸಪ್ತಧಾ** ಏಳು ಭಾಗವಾಗಿ **ಕೃತಃ** ಮಾಡಲ್ಪಟ್ಟಿತು. **ಸಪ್ತ ಕುಮಾರಕಾಃ ಆಸನ್** ಏಳು ಮಕ್ಕಳು ಆದರು. **ತೇ ಅಪಿ** ಆ ಏಳು ಮಕ್ಕಳು **ಏಕೈಕಶಃ** ಒಬ್ಬಬ್ಬರೂ **ಸಪ್ತಧಾ** ಏಳು ಭಾಗವಾಗಿ **ವೃಕ್ಣಾಃ** ಕತ್ತರಿಸಲ್ಪಟ್ಟರು **ಅಪಿ** ಆದರೂ **ನ ಮಮ್ರಿರೇ** ಸಾಯಲಿಲ್ಲ. ।।೭೨।।

**ತತಸ್ತತ್ಪರಮಾಶ್ಚರ್ಯಂ ವೀಕ್ಷ್ಯಾಧ್ಯವಸಿತಂ ಮಯಾ ।**
**ಮಹಾಪುರುಷಪೂಜಾಯಾಃ ಸಿದ್ಧಿಃ ಕಾರ್ಯಾನುಷಂಗಿಣೀ ।।೭೩।।**

**ತತಃ** ಅನಂತರ **ಪರಮಾಶ್ಚರ್ಯಂ ತತ್** ಅತ್ಯಂತ ಆಶ್ಚರ್ಯಕರವಾದ ಆ ವಿಷಯವನ್ನು **ವೀಕ್ಷ್ಯ** ನೋಡಿ **ಮಯಾ** ನನ್ನಿಂದ **ಮಹಾಪುರುಷಪೂಜಾಯಾಃ** ಸರ್ವೋತ್ತಮನಾದ ಶ್ರೀಹರಿಯ ಪೂಜೆಯಿಂದಾಗುವ **ಸಿದ್ಧಿಃ** ಫಲವು ಪ್ರಸಾದವೂ **ಕಾರ್ಯಾನುಷಂಗಿಣೀ** ಅಭೀಷ್ಟ ಕಾರ್ಯದೊಂದಿಗೆ ಸೇರಿಕೊಂಡೇ ಇರುವದು ಎಂದು **ಅಧ್ಯವಸಿತಂ** ನಿಶ್ಚಯಿಸಲ್ಪಟ್ಟಿತು. ।।೭೩।।

ಕರ್ತನಂ ಪ್ರಾಣವರ್ತನಂ ಚೇತಿ ಪರಮಾಶ್ಚರ್ಯಂ ವೀಕ್ಷ್ಯ ಎಂದು ಸತ್ಯಧರ್ಮರು. ।।೭೩।।

ಕಾಮುಕರ ವಿಷಯದಲ್ಲೇ ಶ್ರೀಹರಿಸೇವೆಯ ಫಲ ಹೀಗಿರುವಾಗ ಅಕಾಮುಕರ ವಿಷಯದಲ್ಲಿ ಏನು ಹೇಳುವದು ಎಂದು ಹೇಳಲು ಅವರನ್ನು ಇಲ್ಲಿ ಸ್ತುತಿಸುತ್ತಿದ್ದಾರೆ-

**ಆರಾಧನಂ ಭಗವತ ಈಹಮಾನಾ ನಿರಾಶಿಷಃ ।**
**ಯೇ ತು ನೇಚ್ಛಂತ್ಯಪಿ ವರಂ ತೇ ಸ್ವಾರ್ಥಕುಶಲಾಃ ಸ್ಮೃತಾಃ ।।೭೪।।**

**ಯೇ ತು** ಯಾರು **ನಿರಾಶಿಷಃ ಚ** ಯಾವ ಫಲಾಪೇಕ್ಷೆಯಿಲ್ಲದೇ **ಭಗವತಃ** ಶ್ರೀಹರಿಯ **ಆರಾಧನಂ** ಆರಾಧನೆಯನ್ನು **ಈಹಮಾನಾಃ** ಇಚ್ಛಿಸುವವರಾಗಿ **ಪರಂ (ವರಂ) ಅಪಿ** ಶ್ರೇಷ್ಠವಾದ ಮೋಕ್ಷವನ್ನು **ನ ಇಚ್ಛಂತಿ** ಇಚ್ಛಿಸುವದಿಲ್ಲವೋ **ತೇ** ಅವರು

**ಸ್ವಾರ್ಥಕುಶಲಾಃ** ಅಪ್ರತಿಹತವಾದ ಇಷ್ಟಪಟ್ಟಿರುವುದಕ್ಕಿಂತಲೂ ಹೆಚ್ಚಿನ ಫಲ ಸಂಪಾದಿಸುವ ಸಮರ್ಥರು, ಸ್ವಾರ್ಥಸಾಧನ ನಿಪುಣರು ಎಂದು **ಸ್ಮೃತಾಃ** ಶಾಸ್ತ್ರದಲ್ಲಿ ಉಕ್ತರಾಗಿರುವರು. ಅವರ ಮೇಲೆ ಶ್ರೀಹರಿಯು ಪರಮಾನುಗ್ರಹ ಮಾಡುವನೆಂದರ್ಥ. ಇದರಿಂದ ಸರ್ವೇಷ್ಟವನ್ನು ಕೊಡುವನಾದರೂ ನಾವು ಸೇವಿಸುವದು ನಿಷ್ಕಾಮನೆಯಿಂದ ಎಂದು ದಿತಿಗೆ ತಿಳಿಸಿರುವರು ಎಂದು ತಿಳಿಯಬೇಕು. ।।೭೪।।

**ಆರಾಧ್ಯಾತ್ಮಪ್ರದಂ ದೇವಮಾತ್ಮಾನಂ ಜಗದೀಶ್ವರಮ್ ।**
**ಕೋ ವೃಣೀತ ಗುಣಸ್ಪರ್ಶಂ ಬುಧಃ ಸ್ಯಾನ್ನರಕೇಽಪಿ ಯತ್ ।।೭೫।।**

**ದೇವಂ** ಸೃಷ್ಟ್ಯಾದಿಕ್ರೀಡಾವಿಶಿಷ್ಟನಾದ **ಜಗದೀಶ್ವರಂ** ಜಗನ್ನಿಯಾಮಕನಾದ **ಆತ್ಮಪ್ರದಂ** ಆರಾಧಿಸುವವರಿಗೆ ತನ್ನನ್ನೇ ಕೊಡುವ **ಆತ್ಮಾನಂ** ಪರಮಾತ್ಮನನ್ನು **ಆರಾಧ್ಯ** ಆರಾಧಿಸಿ **ಗುಣಸ್ಪರ್ಶಂ** ವಿಷಯಸುಖವನ್ನು **ಬುಧಃ** ಜ್ಞಾನಿಯಾದ **ಕಃ** ಯಾವನು ತಾನೇ **ವೃಣೀತ** ಕೇಳುವನು? ಎಂದೂ ಕೇಳುವದಿಲ್ಲ **ಯತ್** ಯಾವ ಕಾರಣ **ನರಕೇಽಪಿ** ನರಕದಲ್ಲಿಯೂ **ಸ್ಯಾತ್** ವಿಷಯಸುಖವು ಆಗಿಯೇ ಆಗುವದು. **ಯದಿ ವೃಣೀತ** ಒಂದು ವೇಳೆ ಕೇಳಿದ್ದೇ ಆದರೆ **ಸಃ ಕಃ** ಅವನು ಕುತ್ಸಿತನು ಎಂದು ಆವೃತ್ತಿ ಮಾಡಿ ಅನ್ವಯಿಸಬೇಕು. ಪುತ್ರಕಾಮನೆಯಿಂದ ನೀನು ಹರಿಯನ್ನು ಆರಾಧಿಸಿದ್ದರಿಂದ ಜ್ಞಾನಿಯಲ್ಲವೆಂದು ಭಾವ. ।।೭೫।।

**ತದಿದಂ ಮಮ ದೌರ್ಜನ್ಯಂ ಬಾಲಿಶಸ್ಯ ಮಹೀಯಸಿ ।**
**ಕ್ಷಂತುಮರ್ಹಸಿ ಮಾತಸ್ತ್ವಂ ದಿಷ್ಟ್ಯಾ ಗರ್ಭೋಽಮೃತೋತ್ಥಿತಃ ।।೭೬।।**

**ಹೇ ಮಹೀಯಸಿ** ಅತಿ ಶ್ರೇಷ್ಠಳಾದ **ಮಾತಃ** ತಾಯಿಯೇ **ತ್ವಂ** ನೀನು **ಬಾಲಿಶಸ್ಯ** ಮೂರ್ಖನಾದ ಹುಡುಗತನದ ಚಾಪಲ್ಯ ಉಳ್ಳ **ಮಮ** ನನ್ನ **ತತ್ ಇದಂ ದೌರ್ಜನ್ಯಂ** ಈ ಗರ್ಭಚ್ಛೇದನ ರೂಪವಾದ ದುಷ್ಟ ಜನರ ಕಾರ್ಯವನ್ನು **ಕ್ಷಂತುಂ ಅರ್ಹಸಿ** ಕ್ಷಮಿಸಲು ಯೋಗ್ಯಳಾಗಿರುವಿ **ಗರ್ಭಃ** ಗರ್ಭವು **ದಿಷ್ಟ್ಯಾ** ದೈವವಶಾತ್ **ಮೃತೋತ್ಥಿತಃ** ಸತ್ತು ಬದುಕಿತು. ಅಥವಾ **ಅಮೃತೋತ್ಥಿತಃ** ಸಾಯದೇ ಹೊರಗೆ ಬಂದಿತು. **ದಿಷ್ಟ್ಯಾ** ದೇವರಿಂದಲೇ **ಗರ್ಭಃ** ಗರ್ಭಸದೃಶನಾದ **ಅಹಮಪಿ** ನಾನೂ ಸಹ **ಮೃತೋತ್ಥಿತಃ** ನಿನ್ನ ಸಂಕಲ್ಪದಿಂದ ಮೃತಪ್ರಾಯನಾಗಿ ಹರಿಕರುಣೆಯಿಂದ ಬದುಕಿದೆನು ಎಂದೂ ಅರ್ಥ.




ಇಲ್ಲಿ ಮೂರ್ಖಸ್ಯ ಎನ್ನದೇ ಬಾಲಿಶಸ್ಯ ಎಂದು ಹೇಳಿದ್ದರಿಂದ ಬಾಲೋ ಅಸ್ತಿ ಅಸ್ಮಿನ್ ಇತಿ ಬಾಲೀ ತವ ಗರ್ಭಃ ತಸ್ಯ ಶಂ ಸುಖಂ ಮತ್ತು ಬಾಲಿನ್ಯಾಃ ತವ ಶಂ ಕ್ಷೇಮ ಪ್ರಸವಸುಖಂ ಚ ಯೇನ ತಸ್ಯ ಎಂದು ವಿಗ್ರಹಮಾಡಿ ಯಾವ ನಿನ್ನ ಉದರದಲ್ಲಿ ಬಾಲಕನಿದ್ದನೋ ಅಂಥ ಗರ್ಭಕ್ಕೆ ಸುಖವು, ಗರ್ಭವತಿಯಾದ ನಿನಗೆ ಸುಖಪ್ರಸವವು ಯಾವನಿಂದ ಆಯಿತೋ ಅಂತಹ ನಿರಪರಾಧಿಯಾದ ನನ್ನ ಎಂದೂ ಸೂಚಿಸಿರುವನು. ।।೭೬।।

**ಶ್ರೀಶುಕ ಉವಾಚ -**

**ಇಂದ್ರಸ್ತಯಾಭ್ಯನುಜ್ಞಾತಃ ಶುಕ್ಲಭಾವೇನ ತುಷ್ಟಯಾ ।**
**ಮರುದ್ಭಿಃ ಸಹ ತಾಂ ನತ್ವಾ ಜಗಾಮ ತ್ರಿದಿವಂ ಪ್ರಭುಃ ।।೭೭।।**

**ಶುಕ್ಲಭಾವೇನ** ದ್ವೇಷ ಭಾವನೆಯಿಲ್ಲದೇ ಶುದ್ಧಭಾವದಿಂದ **ತುಷ್ಟಯಾ** ಇಂದ್ರನ ವಿಷಯದಲ್ಲಿ ಸಂತುಷ್ಟಳಾದ **ತಯಾ** ಆ ದಿತಿಯಿಂದ **ಅಭ್ಯನುಜ್ಞಾತಃ** ಅಪ್ಪಣೆ ಪಡೆದ **ಪ್ರಭುಃ** ಸಮರ್ಥನಾದ **ಇಂದ್ರಃ** ಇಂದ್ರನು **ನತ್ವಾ** ಅವಳಿಗೆ ನಮಸ್ಕರಿಸಿ **ಮರುದ್ಭಿಃ ಸಹ** ಮರುದ್ಗಣಗಳೊಂದಿಗೆ **ತ್ರಿದಿವಂ ಜಗಾಮ** ಸ್ವರ್ಗಕ್ಕೆ ತೆರಳಿದನು. ।।೭೭।।

**ಏವಂ ತೇ ಸರ್ವಮಾಖ್ಯಾತಂ ಯನ್ಮಾಂ ತ್ವಂ ಪರಿಪೃಚ್ಛಸಿ ।**
**ಮಂಗಲಂ ಮರುತಾಂ ಜನ್ಮ ಕಿಂ ಭೂಯಃ ಶ್ರೋತುಮಿಚ್ಛಸಿ ।।**

।। ಇತಿ ಶ್ರೀಮದ್ಭಾಗವತೇ ಷಷ್ಠಸ್ಕಂಧೇ ಅಷ್ಟಾದಶೋಽಧ್ಯಾಯಃ ।।

ರಾಜನೇ **ತ್ವಂ** ನೀನು **ಮಾಂ** ನನ್ನನ್ನು **ಯತ್ ಪರಿಪೃಚ್ಛಸಿ** ಏನು ಕೇಳಿದ್ದೆಯೋ (ದಿತಿಯ ಮಕ್ಕಳು ಅಸುರಭಾವ ಬಿಟ್ಟು ದೇವತೆಗಳು ಹೇಗಾದರೆಂದು) **ತತ್ ಸರ್ವಂ** ಅದೆಲ್ಲವನ್ನೂ **ಏವಂ** ಮೇಲೆ ಹೇಳಿದಂತೆ **ಆಖ್ಯಾತಂ** ವಿಸ್ತಾರವಾಗಿ ಹೇಳಲ್ಪಟ್ಟಿದೆ **ಮರುತಾಂ ಜನ್ಮ ಮಂಗಲಂ** ಮರುತ್ತರ ಹುಟ್ಟು ಶ್ರೀಹರಿಯ ಮಹಿಮೆ ವರ್ಣನವಾದ್ದರಿಂದ ಮಂಗಳಕರವಾದುದು. **ಕಿಂ ಭೂಯಃ ಶ್ರೋತುಮಿಚ್ಛಸಿ** ಮತ್ತೆ ಏನನ್ನು ಕೇಳಲಿಚ್ಛಿಸುವಿ. ।।೭೮।।

ಇಲ್ಲಿಗೆ ಹದಿನೆಂಟನೇ ಅಧ್ಯಾಯ ಮುಗಿಯಿತು

★★★★★

# ಅಥ ಶ್ರೀಮದ್ಭಾಗವತೇ - ಷಷ್ಠಸ್ಕಂಧೇ

# ಏಕೋನವಿಂಶೋऽಧ್ಯಾಯಃ

**ಅಧ್ಯಾಯ ಸಾರ**

ಬ್ರಹ್ಮಜ್ಞಾನಿಗಳಾದ ಶುಕಾಚಾರ್ಯರೇ ! ಪರಮಾತ್ಮನ ಪ್ರಸಾದಕ್ಕೆ ಸಾಧನವಾದ ಪುಂಸವನವ್ರತದ ವಿಧಾನವನ್ನು ತಿಳಿಯಲು ನಮಗೆ ಇಲ್ಲಿ ಸನ್ನಿಹಿತರಾದ ಮುನಿಗಳಿಗೆ ಅಪೇಕ್ಷೆಯಾಗಿದೆ. ಆದ್ದರಿಂದ ಆ ವ್ರತದ ವಿಧಾನವನ್ನು ನಮಗೆ ಉಪದೇಶ ಮಾಡಬೇಕು.

ಶ್ರೀಶುಕಾಚಾರ್ಯರು ಹೇಳಿದರು. ಮಾರ್ಗಶೀರ್ಷಶುಕ್ಲ ಪ್ರತಿಪತ್ ತಿಥಿಯಲ್ಲಿ ಮುತ್ತೈದೆಯು ಈ ವ್ರತವನ್ನು ಪರಿಗ್ರಹಿಸಬೇಕು. ಮೋಕ್ಷಾದಿ ಎಲ್ಲ ಇಷ್ಟಾರ್ಥಗಳನ್ನು ಪಡೆಯಲು ಈ ವ್ರತವು ಸಾಧನವಾಗಿದೆ. ಪ್ರಾರಂಭಿಸುವುದಕ್ಕೂ ಮೊದಲು ಪತಿಯಿಂದ ವ್ರತಕ್ಕಾಗಿ ಅನುಮತಿಯನ್ನು ಪಡೆಯಬೇಕು. ಮರುಜ್ಜನ್ಮಪ್ರತಿಪಾದಕವಾದ ಕಥೆಯನ್ನು ಆಮೂಲಾಗ್ರವಾಗಿ ಬ್ರಾಹ್ಮಣರಿಂದ ಶ್ರವಣ ಮಾಡಬೇಕು. ವ್ರತಕ್ಕಾಗಿ ಬ್ರಾಹ್ಮಣರ ಆಜ್ಞೆಯನ್ನು ಪಡೆಯಬೇಕು. ದಂತಗಳನ್ನು ಶೋಧಿಸಿಕೊಳ್ಳಬೇಕು. ಸ್ನಾನ ಮಾಡಬೇಕು. ಪರಿಶುಭ್ರವಾದ ವಸ್ತ್ರಗಳನ್ನು ಧರಿಸಬೇಕು. ಅಲಂಕಾರ ಮಾಡಿಕೊಳ್ಳಬೇಕು.

ಭೋಜನಕ್ಕೂ ಪೂರ್ವದಲ್ಲಿಯೇ ಲಕ್ಷ್ಮೀನಾರಾಯಣರ ಪೂಜೆಯನ್ನು ಮಾಡಬೇಕು.

ಆವಾಹನಾದಿ ಷೋಡಶೋಪಚಾರಗಳಿಂದ ಲಕ್ಷ್ಮೀನಾರಾಯಣರನ್ನು ಪೂಜಿಸಬೇಕು. ಭಾಗವತೋಕ್ತವಾದ ಸ್ತುತಿಯಿಂದ ಶ್ರೀಹರಿಯನ್ನು ಸ್ತುತಿಸಬೇಕು. ನೈವೇದ್ಯವನ್ನು ಶ್ರೀಹರಿಗೆ ಸಮರ್ಪಿಸಬೇಕು. ಪೂಜೆಯಾದ ನಂತರ ನೈವೇದ್ಯವನ್ನು




ಆಘ್ರಾಣ ಮಾಡಬೇಕು. ಮತ್ತೆ ಶ್ರೀಹರಿಯನ್ನು ಪೂಜಿಸಬೇಕು. ಈ ಶ್ರೀಹರಿಯೇ ಪತಿಯಲ್ಲಿ ಸನ್ನಿಹಿತನಾಗಿರುವನೆಂದು ಅನುಸಂಧಾನ ಮಾಡಿ ಪತಿಯನ್ನೂ ಪೂಜಿಸಬೇಕು.

ಪತಿಗೆ ಪ್ರಿಯವಾದ ಪದಾರ್ಥಗಳನ್ನು ಒದಗಿಸುತ್ತಾ ಪತಿಯನ್ನು ಉಪಚರಿಸಬೇಕು. ಪತಿಯು ಕೂಡಾ ಪತ್ನಿಗೆ ಬೇಕಾಗಿರುವ ಪದಾರ್ಥಗಳನ್ನು ಒದಗಿಸಿಕೊಡಬೇಕು. ಈ ಸಂದರ್ಭದಲ್ಲಿ ಪತಿಯ ಸಹಕಾರವನ್ನು ಪಡೆಯುವುದರಿಂದ ಪತ್ನಿಗೆ ಯಾವುದೇ ವಿಧವಾದ ದೋಷವು ಬರುವುದಿಲ್ಲ.

ರಜಸ್ವಲೆಯಾಗಿ ಹೆಂಡತಿ ವ್ರತಕ್ಕೆ ಅನರ್ಹಳಾದಾಗ ವ್ರತವನ್ನು ಪರಿತ್ಯಜಿಸಬಾರದು. ವ್ರತವನ್ನು ಸ್ವೀಕರಿಸಿದ ಮೇಲೆ ಪತ್ನಿಯು ರಜಸ್ವಲೆಯಾದರೆ ಪತ್ನಿಯ ಉದ್ದೇಶದಿಂದ ಆ ವ್ರತವನ್ನು ಪತಿಯೇ ಆಚರಿಸಬೇಕು. ಇದು ವಿಷ್ಣುದೇವತಾಕವಾದ ವ್ರತ. ಹೀಗಾಗಿ ಈ ವ್ರತಕ್ಕೆ ಯಾವುದೇ ರೀತಿಯಾದ ವಿಘ್ನಗಳು ಬಾರದಂತೆ ನಡೆದುಕೊಳ್ಳಬೇಕು. ಗಂಡನು ಈ ವ್ರತವನ್ನು ಮಾಡಿದರೂ ಹೆಂಡತಿ ಮಾಡಿದಂತೆಯೇ ಆಗುತ್ತದೆ. ವ್ರತಹಾನಿಯಾಗುವುದಿಲ್ಲ.

ಪ್ರತಿನಿತ್ಯವೂ ಯಥೋಕ್ತವಾದ ಸಾಮಗ್ರಿಗಳಿಂದ ಬ್ರಾಹ್ಮಣರನ್ನು ಭಕ್ತಿಯಿಂದ ಪೂಜಿಸಬೇಕು. ಮುತ್ತೈದೆಯರನ್ನೂ ಪೂಜಿಸಬೇಕು. ಇವರಲ್ಲಿ ಲಕ್ಷ್ಮೀನಾರಾಯಣರು ಸನ್ನಿಹಿತರಾಗಿದ್ದಾರೆ ಎಂಬ ಭಾವನೆಯಿಂದ ಪೂಜಿಸಬೇಕು.

ಈ ರೀತಿಯಾಗಿ ಪರಮಾತ್ಮನನ್ನು ಷೋಡಶೋಪಚಾರಗಳಿಂದ ಪೂಜಿಸಬೇಕು. ಶ್ರೀಹರಿಗೆ ನಿವೇದಿತವಾದ ಪದಾರ್ಥವನ್ನೇ ತಾನು ಸ್ವೀಕರಿಸಬೇಕು. ಈ ರೀತಿಯಾಗಿ ಹನ್ನೆರಡು ತಿಂಗಳು ಶ್ರೀಹರಿಯನ್ನು ಪೂಜಿಸಬೇಕು. ಕಾರ್ತಿಕ ಮಾಸದ ಅಮಾವಾಸ್ಯಾದಲ್ಲಿ ವ್ರತದ ಉದ್ಯಾಪನೆಯನ್ನು ಮಾಡಬೇಕು. ಅಲ್ಲಿಗೆ ವ್ರತ-ನಿಯಮಗಳಿಂದ ವಿಶ್ರಾಂತಳಾಗಬೇಕು.

ಮಾರನೆಯ ದಿನ ಪತಿಯಾದವನು ಸ್ನಾನ ಮಾಡಿ ಶ್ರೀಹರಿಯನ್ನು ಭಕ್ತಿಯಿಂದ ಪೂಜಿಸಬೇಕು. ಹಾಲಿನಲ್ಲಿ ಬೇಯಿಸಿದ ಚರುವಿನಿಂದ ತುಪ್ಪದ ಜೊತೆ ಗೃಹ್ಯಸೂತ್ರದಲ್ಲಿ ಹೇಳಿದಂತೆ ಹೋಮವನ್ನು ಮಾಡಬೇಕು. ಯಾವ ಕಾರಣಕ್ಕಾಗಿಯೂ ಸ್ತ್ರೀಯಾದವಳು ಹೋಮವನ್ನು ಮಾಡಬಾರದು.

ಪರಮಾತ್ಮನು ಬ್ರಾಹ್ಮಣರಲ್ಲಿ ಸನ್ನಿಹಿತನಾಗಿದ್ದಾನೆ ಎಂದು ಚಿಂತಿಸುತ್ತಾ ಹನ್ನೆರಡು ಜನ ಬ್ರಾಹ್ಮಣರಿಗೆ ಸುಗ್ರಾಸ ಭೋಜನವನ್ನು ಮಾಡಿಸಬೇಕು. ಭೋಜನವಾದ ಮೇಲೆ

ಬೆಲ್ಲ ಸಹಿತವಾದ ತಿಲವನ್ನು, ಉದಕುಂಭವನ್ನೂ ಬ್ರಾಹ್ಮಣರಿಗೆ ದಾನವಾಗಿ ಕೊಡಬೇಕು. ಭಕ್ತಿಯಿಂಧ ವಿನಮ್ರನಾಗಿ ಬ್ರಾಹ್ಮಣರಿಗೆ ನಮಸ್ಕರಿಸಬೇಕು. ಭೋಜನ-ದಾನಾದಿಗಳಿಂದ ಅವರು ಸಂತುಷ್ಟರಾಗುವಂತೆ ನೋಡಿಕೊಳ್ಳಬೇಕು. ಅವರಿಂದ ವೇದೋಕ್ತವಾದ ಆಶೀರ್ವಾದಗಳನ್ನು ಪಡೆಯಬೇಕು.

ನಂತರ ಅವರ ಅನುಜ್ಞೆಯನ್ನು ಪಡೆದು ತಾನು ಭೋಜನವನ್ನು ಮಾಡಬೇಕು. ಸತ್ಸಂತಾನಕ್ಕೆ ಕಾರಣವಾದ ಚರುವನ್ನು ಸ್ವಯಂ ತಾನು ಸ್ವೀಕರಿಸಬೇಕು. ಶಿಷ್ಟವಾದ ಚರುವನ್ನು ಪತ್ನಿಗೆ ನೀಡಬೇಕು.

ಸ್ತ್ರೀಯರಾಗಲೀ, ಪುರುಷರಾಗಲೀ ಈ ವ್ರತವನ್ನು ಮಾಡಬೇಕು. ಈ ವ್ರತದ ಆಚರಣೆಯಿಂದ ಇಷ್ಟಾರ್ಥಗಳೆಲ್ಲ ಪರಿಪೂರ್ಣವಾಗುತ್ತವೆ. ಕನ್ಯೆಯು ಈ ವ್ರತವನ್ನು ಆಚರಿಸುವುದರಿಂದ ಯೋಗ್ಯನಾದ ಪತಿಯನ್ನು ಪಡೆಯುತ್ತಾಳೆ. ಮಕ್ಕಳಿಲ್ಲದವರು ಈ ವ್ರತದ ಪ್ರಭಾವದಿಂದ ಮಕ್ಕಳನ್ನು ಪಡೆಯುತ್ತಾರೆ.

ವಿಧವೆಯಾದವಳು ಕೂಡಾ ಈ ವ್ರತವನ್ನು ಮಾಡಬಹುದು. ಈ ವ್ರತದ ಪ್ರಭಾವದಿಂದ ವಿಧವೆಯರು ತನ್ನ ಪಾಪವನ್ನೆಲ್ಲ ಕಳೆದುಕೊಳ್ಳುತ್ತಾಳೆ. ಭಗವಂತನ ಲೋಕವನ್ನು ಪಡೆಯುತ್ತಾಳೆ.

ಹುಟ್ಟಿದ ಮಕ್ಕಳೆಲ್ಲ ಸಾಯುತ್ತಿದ್ದರೇ ಈ ವ್ರತದ ಪ್ರಭಾವದಿಂದ ದೀರ್ಘಾಯುಷಿಯಾದ ಮಕ್ಕಳನ್ನು ಪಡೆಯುತ್ತಾಳೆ. ದರಿದ್ರಳಾದವಳು ಧನಿಕಳಾಗುತ್ತಾಳೆ. ಜ್ಞಾನಾದಿಗುಣಗಳು ಈ ವ್ರತದಿಂದ ಸಂಪನ್ನವಾಗುತ್ತವೆ. ಕುರೂಪಿಯಾದವಳು ಶ್ರೇಷ್ಠವಾದ ರೂಪವನ್ನು ಪಡೆಯುತ್ತಾಳೆ. ರೋಗ ಉಳ್ಳವರು ರೋಗದಿಂದ ಮುಕ್ತರಾಗುತ್ತಾರೆ.

ವಿವಾಹಾದಿ ಶುಭಕರ್ಮಗಳಲ್ಲಿ ಮರುಜನ್ಮಪ್ರತಿಪಾದಕವಾದ ಈ ಪ್ರಕರಣವನ್ನು ಪಠಿಸಬೇಕು. ಇದರ ಪಠನದಿಂದ ಪಿತೃದೇವತೆಗಳು ತೃಪ್ತರಾಗತ್ತಾರೆ. ಹೋಮದಿಂದ ಸಂತುಷ್ಟನಾದ ಅಗ್ನಿ, ವ್ರತದಿಂದ ಸಂತುಷ್ಟನಾದ ಶ್ರೀಲಕ್ಷ್ಮೀನಾರಾಯಣ ಎಲ್ಲ ಅಭೀಷ್ಟಗಳನ್ನು ಪೂರ್ಣಮಾಡುತ್ತಾರೆ.

ಹೇ ರಾಜನ್ ! ಮರುಜನ್ಮಪ್ರತಿಪಾದಕವಾದ ಈ ಪ್ರಕರಣವು ಪರಮಪಾವನ-ವಾಗಿದೆ. ದಿತಿಯು ಆಚರಿಸಿದ ಈ ಪುಂಸವನವ್ರತವು ಪರಮಪವಿತ್ರವಾಗಿದೆ. ಈ ಎರಡೂ ವಿಷಯಗಳನ್ನು ನಾನು ನಿನಗೆ ಉಪದೇಶ ಮಾಡಿದ್ದೇನೆ.

★ ★ ★ ★ ★

ನಿಷ್ಕಾಮದಿಂದ ಆಚರಿಸಿದ ಪುಂಸವನವು ಪೂರ್ಣಫಲಪ್ರದವಾಗುವದೆಂದು ವಿನೇಯ (ಶಿಷ್ಯ) ನಾದ ರಾಜ, ವಿನೇತೃ (ಗುರು) ಶುಕಾಚಾರ್ಯರ ಪ್ರಶ್ನೋತ್ತರರೂಪವಾಗಿ ಈ ಅಧ್ಯಾಯದಲ್ಲಿ ನಿರೂಪಿಸುತ್ತಿದ್ದಾರೆ. ಮೊದಲಿಗೆ ಪರೀಕ್ಷಿತ ಶುಕಾಚಾರ್ಯರಿಗೆ ಪ್ರಶ್ನಿಸುತ್ತಿದ್ದಾನೆ-

**ರಾಜೋವಾಚ -**

**ವ್ರತಂ ಪುಂಸವನಂ ಬ್ರಹ್ಮನ್ ಭವತಾ ಯದುದೀರಿತಮ್ ।**
**ತಸ್ಯ ವೇದಿತುಮಿಚ್ಛಾಮಿ ಯೇನ ವಿಷ್ಣುಃ ಪ್ರಸೀದತಿ ॥೧॥**

**ಹೇ ಬ್ರಹ್ಮನ್** ಬ್ರಹ್ಮಜ್ಞಾನಿಯೇ **ಭವತಾ** ತಮ್ಮಿಂದ **ಯತ್** ಯಾವ **ಪುಂಸವನಂ** ಪುಂಸವನ ವ್ರತವು **ಉದೀರಿತಂ** ಹೇಳಲ್ಪಟ್ಟಿತೋ **ಯೇನ** ಯಾವುದರಿಂದ **ವಿಷ್ಣುಃ** ಪರಮಾತ್ಮನು **ಪ್ರಸೀದತಿ** ಪ್ರಸನ್ನನಾಗುವನೋ **ತಸ್ಯ** ಆ ಪುಂಸವನವ್ರತದ ವಿಧಾನವನ್ನು **ವೇದಿತುಂ** ತಿಳಿಯಲು **ಇಚ್ಛಾಮಃ** ಮುನಿಗಳು ನಾನೂ ಸಹ ಇಚ್ಛಿಸುವೆವು. ॥೧॥

**ಶ್ರೀಶುಕ ಉವಾಚ -**

**ಶುಕ್ಲೇ ಮಾರ್ಗಶಿರೇ ಪಕ್ಷೇ ಯೋಷಿದ್ಭರ್ತುರನುಜ್ಞಯಾ ।**
**ಆರಭೇತ ವ್ರತಮಿದಂ ಸಾರ್ವಕಾಮಿಕಮಾದಿತಃ ॥೨॥**

**ಯೋಷಿತ್** ಮುತ್ತೈದೆಯಾದವಳು **ಭರ್ತುಃ ಚ** ಗಂಡನ **ಅನುಜ್ಞಯಾ** ಅಪ್ಪಣೆ ಪಡೆದು **ಮಾರ್ಗಶಿರೇ** ಮಾರ್ಗಶೀರ್ಷ ಮಾಸದಲ್ಲಿ ಸೌರಮಾನದ ಧನುರ್ಮಾಸದಲ್ಲಿ **ಶುಕ್ಲಪಕ್ಷೇ** ಶುಕ್ಲಪಕ್ಷದಲ್ಲಿ **ಆದಿತಃ** ಪ್ರತಿಪತ್ ತಿಥಿಯಿಂದ **ಸಾರ್ವಕಾಮಿಕಂ** ಮೋಕ್ಷಾದಿ ಎಲ್ಲ ಇಷ್ಟಾರ್ಥ ಕೊಡುವ **ಇದಂ ವ್ರತಂ** ಈ ಪುಂಸವನವ್ರತವನ್ನು **ಆರಭೇತ** ಪ್ರಾರಂಭಿಸಬೇಕು. ॥೨॥

**ನಿಶಮ್ಯ ಮರುತಾಂ ಜನ್ಮ ಬ್ರಾಹ್ಮಣಾನನುಮಂತ್ರ್ಯ ಚ ।**
**ಸ್ನಾತ್ವಾ ಶುಕ್ಲದತೀ ಶುಕ್ಲಾ ವಸೀತಾಲಂಕೃತಾಂಬರೇ ॥೩॥**

ಆದಿತಃ ಎನ್ನುವದನ್ನು ಇಲ್ಲಿಯೂ ಅನ್ವಯಿಸಿಕೊಳ್ಳಬೇಕು. **ಮರುತಾಂ ಜನ್ಮ** ಮರುತ್ತುಗಳ ಜನ್ಮವೃತ್ತಾಂತವನ್ನು **ಆದಿತಃ ಚ** ಪ್ರಾರಂಭದಿಂದ **ನಿಶಮ್ಯ** ಆಚಾರ್ಯರ ಮುಖದಿಂದ ಕೇಳಿ **ಬ್ರಾಹ್ಮಣಾನ್ ಅನುಮಂತ್ರ್ಯ** ಬ್ರಾಹ್ಮಣರ ಆಜ್ಞೆಯನ್ನು ಪಡೆದು **ಶುಕ್ಲದತೀ** ಶುಭ್ರವಾದ ಹಲ್ಲುಗಳುಳ್ಳವಳಾಗಿ **ಸ್ನಾತ್ವಾ** ಸ್ನಾನ ಮಾಡಿ **ಶುಕ್ಲೇ** ಶುದ್ಧವಾದ

**ಅಂಬರೇ** ಬಟ್ಟೆಗಳನ್ನು **ವಸೀತ** ಉಟ್ಟುಕೊಳ್ಳಬೇಕು. **ಅಲಂಕೃತಾ** ಅಲಂಕಾರ ಮಾಡಿಕೊಂಡು **ಪೂಜಯೀತ್** ಎಂದನ್ವಯ. 'ಅಗ್ರಾಂತಶುದ್ಧಶುಭ್ರವರಾಹೇಭ್ಯಶ್ಚ' ಎಂಬ ಸೂತ್ರವನ್ನು ವ್ಯಾಖ್ಯಾನ ಮಾಡುವಾಗ ಇಹ ಅನುಕ್ತಸಮುಚ್ಚಾಯಾರ್ಥಶ್ಚಕಾರಃ ತೇನ ಮೂಷಿಕಾದನ್ ಇತಿ ಸಿದ್ಧ್ಯತಿ ಇತ್ಯಾಹುಃ ಇತಿ । ಹೀಗೆ ತತ್ತ್ವಬೋಧಿನಿಯಲ್ಲಿ ಹೇಳಿದ್ದರಿಂದ ಚಕಾರದಿಂದ ಗ್ರಾಹ್ಯವಾದವುಗಳಿಗೆ ಮುದ್ರಣ ಇಷ್ಟೇ ಎಂದು ಇಲ್ಲದ್ದರಿಂದ ಶುಕ್ಲದತೀ ಎಂದಾಗುವದು. ಶುಕ್ಲಾಃ ದಂತಾಃ ಯಸ್ಯಾಃ ಸಾ । ಉಗಿತಶ್ಚೇತಿ ಙೀಪ್. ।।೩।।

**ಪೂಜಯೀತ್ಪ್ರಾತರಾಶಾತ್ಪ್ರಾಕ್ ಭಗವಂತಂ ಶ್ರಿಯಾ ಸಹ ।**
**ನಮಸ್ತೇ ನಿರಪೇಕ್ಷಾಯ ಪೂರ್ಣಕಾಮ ನಮೋಽಸ್ತು ತೇ ।।೪।।**

**ಪ್ರಾತರಾಶಾತ್** ಬೆಳಗಿನ ಭೋಜನಕ್ಕೆ **ಪ್ರಾಕ್** ಮೊದಲು **ಶ್ರಿಯಾ ಸಹ** ಲಕ್ಷ್ಮೀದೇವಿಯೊಂದಿಗೆ **ಭಗವಂತಂ** ನಾರಾಯಣನನ್ನು **ಪೂಜಯೀತ್** ಪೂಜಿಸಬೇಕು. ಷೋಡಶೋಪಚಾರಗಳಿಂದ ಮುಂದೆ ಹೇಳುವ ಮಂತ್ರದಿಂದಲೂ ಪೂಜಿಸಬೇಕು. **ನಿರಪೇಕ್ಷಾಯ** ಯಾರ ಅಪೇಕ್ಷೆಯೂ ಇಲ್ಲದ ಯಾವ ಅಪೇಕ್ಷೆಯೂ ಇಲ್ಲದ **ತೇ** ನಿನಗೆ **ನಮಃ** ನಮಸ್ಕಾರವು. **ಹೇ ಪೂರ್ಣಕಾಮ** ಪೂರ್ಣಕಾಮನೇ **ತೇ ನಮಃ ಅಸ್ತು** ನಿನಗೆ ನಮಸ್ಕಾರವಿರಲಿ. **ಮಹಾವಿಭೂತಿಪತಯೇ** ಮಹಾಲಕ್ಷ್ಮಿಯ ಪತಿಗೆ **ಸಕಲಸಿದ್ಧಯೇ** ಸಕಲ ಸಿದ್ಧಿಸ್ವರೂಪನಾದ ನಿನಗೆ **ನಮಃ** ನಮಸ್ಕಾರವು. ।।೪।।

**ಯತಸ್ತ್ವಂ ಕೃಪಯಾ ಭೂತ್ಯಾ ತೇಜಸಾ ಮಹತೌಜಸಾ ।**
**ತುಷ್ಟ ಈಶಗುಣೈಃ ಸರ್ವೈಃ ಸ್ತುತೋಽಸಿ ಭಗವಾನ್ ವಿಭುಃ ।।೫।।**

**ಭೋ ಈಶ** ನಿಯಾಮಕನೇ **ಯತಃ ಚ** ಯಾವ ಕಾರಣ **ತ್ವಂ** ನೀನು **ಕೃಪಯಾ** ದಯೆಯಿಂದಲೂ **ಭೂತ್ಯಾ** ಐಶ್ವರ್ಯದಿಂದಲೂ **ಮಹತಾ** ಅತಿಶಯವಾದ **ಓಜಸಾ** ಪರಾಕ್ರಮದಿಂದ ಅವಷ್ಟಂಭನ ಶಕ್ತಿಯಿಂದಲೂ **ಮಹತಾ ತೇಜಸಾ** ಮಹಾಕಾಂತಿಯಿಂದಲೂ **ಸರ್ವೈಃ ಗುಣೈಃ** ಸತ್ಯಸಂಕಲ್ಪತ್ವಾದಿ ಎಲ್ಲ ಗುಣಗಳಿಂದಲೂ **(ಜುಷ್ಟಃ** ಯುಕ್ತನು) **ತುಷ್ಟಃ** ಸಂತೃಪ್ತನು **ಭಗವಾನ್** ಐಶ್ವರ್ಯವಂತನು **ವಿಭುಃ** ವ್ಯಾಪ್ತನು ಆದ್ದರಿಂದ ಸ್ತುತನಾಗಿರುವಿ ಅಂದರೆ ಇದು ಅವಿದ್ಯಮಾನಸ್ತುತಿಯಲ್ಲ ಎಂದು ಅಭಿಪ್ರಾಯ. ।।೫।।

 

**ವಿಷ್ಣುಪತ್ನಿ ಮಹಾಮಾಯೇ ಮಹಾಪುರುಷಲಕ್ಷಣೇ ।**
**ಪ್ರೀಯೇಥಾ ಮೇ ಮಹಾಭಾಗೇ ಲೋಕಮಾತರ್ನಮೋಽಸ್ತು ತೇ ॥೬॥**

**ವಿಷ್ಣುಪತ್ನಿ** ವಿಷ್ಣುವಿನ ಹೆಂಡತಿಯೇ **ಮಹಾಮಾಯೇ** ಮಹಾಸಮರ್ಥಳೇ **ಮಹಾಪುರುಷಲಕ್ಷಣೇ** ಶ್ರೀಹರಿಯ ನಿರಪೇಕ್ಷತ್ವಾದಿ ಲಕ್ಷಣ ಉಳ್ಳವಳೇ ಅಥವಾ ಮಹಾಪುರುಷನ ಲಕ್ಷಣ ಅಂದರೆ ಚಿಹ್ನ ಶ್ರೀವತ್ಸವೆಂಬುದು ಯಾವಳಿಗಿದೆಯೋ ಅವಳೇ, ಶ್ರೀಹರಿಯ ಚಿಹ್ನವಾದವಳೇ **ಹೇ ಲೋಕಮಾತಃ** ಜಗಜ್ಜನನಿಯೇ **ತೇ** ನಿನಗೆ **ನಮಃ ಚ ಅಸ್ತು** ನಮಸ್ಕಾರವಿರಲಿ. **ಮೇ** ನನ್ನಲ್ಲಿ **ಪ್ರೀಯೇಥಾಃ** ಪ್ರೀತಳಾಗು. ॥೬॥

ಪೂಜಾ ಮಂತ್ರವನ್ನು ಹೇಳುತ್ತಾರೆ-

**ಓಂ ನಮೋ ಭಗವತೇ ಮಹಾಪುರುಷಾಯ ಮಹಾನುಭಾವಾಯ ಮಹಾವಿಭೂತಿಪತಯೇ ಸಹ ಮಹಾವಿಭೂತಿಭಿರ್ಬಲಿಮುಪಾಹರಾಮೀತಿ । ಅನೇನಾಹರಹರ್ಮಂತ್ರೇಣ ವಿಷ್ಣೋರಾಸನಾರ್ಘ್ಯಪಾದ್ಯೋಪಸ್ಪರ್ಶನಸ್ನಾನ-ವಾಸಉಪವೀತವಿಭೂಷಣಗಂಧಪುಷ್ಪಧೂಪದೀಪೋಪಹಾರಾದ್ಯುಪಚಾರಾಂಶ್ಚ ಸಮಾಹಿತ ಉಪಾಹರೇತ್ ॥೭॥**

**ಓಂ** ಗುಣಪೂರ್ಣನಾದ **ಭಗವತೇ** ಐಶ್ವರ್ಯಶಾಲಿಯಾದ **ಮಹಾಪುರುಷಾಯ** ಪುರುಷೋತ್ತಮನಾದ **ಮಹಾನುಭಾವಾಯ** ಮಹಾ ಸಮರ್ಥನಾದ **ಮಹಾವಿಭೂತಿಪತಯೇ** ಮಹಾಲಕ್ಷ್ಮೀಪತಿಯಾದ **ಮಹಾವಿಭೂತಿಭಿಃ** ಪರಿವಾರರಾದ ರಮಾದಿ ಮಹಾವಿಭೂತಿಗಳಿಂದ ಕೂಡಿರುವ ಯೋಗ್ಯತಾನುಸಾರ ಮಹಾವಿಭವಗಳಿಂದ **ಬಲಿಂ ಉಪಾಹರಾಮಿ** ಪೂಜೆಯನ್ನು ಮಾಡುತ್ತೇನೆ **ಇತಿ** ಈ ರೀತಿಯಾದ **ಅನೇನ ಮಂತ್ರೇಣ** ಈ ಮಂತ್ರದಿಂದ ಪ್ರತಿಮಾದಿಗಳಲ್ಲಿ ಆವಾಹನೆ ಮಾಡಬೇಕು. **ಅಹರಹಃ** ಪ್ರತಿನಿತ್ಯವೂ **ವಿಷ್ಣೋಃ** ವಿಷ್ಣುವಿಗೆ **ಆಸನ ಅರ್ಘ್ಯ, ಪಾದ್ಯ, ಉಪಸ್ಪರ್ಶನ, ಆಚಮನ, ಸ್ನಾನ, ವಾಸ** ವಸ್ತ್ರ **ಉಪವೀತ** ಯಜ್ಞೋಪವೀತ **ವಿಭೂಷಣ** ಆಭರಣ **ಗಂಧ ಪುಷ್ಪ, ಧೂಪ, ದೀಪ, ಉಪಹಾರ** ನೈವೇದ್ಯ **ಆದಿ** ಮೊದಲಾದ **ಉಪಚಾರಾನ್** ಉಪಚಾರಗಳನ್ನು **ಸಮಾಹಿತಾ** ಸಮಾಧಾನ ಮನಸ್ಕಳಾಗಿ **ಉಪಾಹರೇತ್** ಮಾಡಬೇಕು. ॥೭॥

ಪಾದಾರ್ಘ್ಯಮಿತಿ ಯಾವತ್ ಪಾದ್ಯಂ ಅರ್ಘ್ಯಂ ಇತ್ಯನ್ವಯಃ । ಉಪಸ್ಪರ್ಶನಂ ತಯೋಃ ದಾನಮ್ । 'ತದಾಗಾಃ ಅಸ್ಪೃಶತ್' ಮುಂತಾಗಿ ಪ್ರಯೋಗವಿದೆ.

ಪಾದಸ್ಪರ್ಶಮಾತ್ರಂ ಆಚಮನಂ ವಾ । 'ಉಪಸ್ಪರ್ಶಃ ಸ್ಪರ್ಶಮಾತ್ರೇ ಸ್ನಾನಾಚಮನ ಯೋರಪಿ' ಎಂದು ವಿಶ್ವನಿದೆ. ।।೭।।

**ಹವಿಃಶೇಷಂ ತು ಜುಹುಯಾದನಲೇ ದ್ವಾದಶಾಹುತೀಃ ।**
**ಓಂ ನಮೋ ಭಗವತೇ ಮಹಾಪುರುಷಾಯ ಮಹಾವಿಭೂತಿಪತಯೇ ಸ್ವಾಹೇತಿ ।।**

**ಶ್ರಿಯಂ ವಿಷ್ಣುಂ ಚ ವರದಾವಾಶಿಷಾಂ ಪ್ರಭವಾವುಭೌ ।**
**ಭಕ್ತ್ಯಾ ಸಂಪೂಜಯೇನ್ನಿತ್ಯಂ ಯದೀಚ್ಛೇತ್ಸರ್ವಸಂಪದಃ ।।೮।।**

**ಸರ್ವಸಂಪದಃ** ಎಲ್ಲ ಸಂಪತ್ತನ್ನು **ಯದಿ ಇಚ್ಛೇತ್** ಇಚ್ಛಿಸಿದಲ್ಲಿ **ವರದೌ** ವರಗಳನ್ನು ಕೊಡುವ **ಆಶಿಷಾಂ** ಅಭೀಷ್ಟಗಳನ್ನು **ಪ್ರಭವೌ** ಕೊಡಲು ಸಮರ್ಥರಾದ **ಶ್ರಿಯಂ** ಲಕ್ಷ್ಮೀದೇವಿಯನ್ನು **ವಿಷ್ಣುಂ ಚ** ವಿಷ್ಣುವನ್ನು **ಉಭೌ** ಇಬ್ಬರನ್ನೂ **ಭಕ್ತ್ಯಾ** ಭಕ್ತಿಯಿಂದ **ನಿತ್ಯಂ** ಯಾವಾಗಲೂ **ಸಂಪೂಜಯೇತ್** ವಿಧಿಪೂರ್ವಕವಾಗಿ ಪೂಜಿಸಬೇಕು. **ಹವಿಃಶೇಷಂ ತು** ನೈವೇದ್ಯಶೇಷವನ್ನು **ಓಂ ನಮೋ ಭಗವತೇ ಮಹಾಪುರುಷಾಯ ಮಹಾವಿಭೂತಿಪತಯೇ ಸ್ವಾಹಾ** ಎಂದು ಮಂತ್ರದಿಂದ **ಅನಲೇ** ಅಗ್ನಿಯಲ್ಲಿ **ದ್ವಾದಶಾಹುತೀಃ** ಹನ್ನೆರಡು ಆಹುತಿಗಳನ್ನು **ಜುಹುಯಾತ್** ಹೋಮ ಮಾಡಬೇಕು. ಹಿಂದೆ ಮಂತ್ರವನ್ನು ಉದಾಹರಣ ಮಾಡಿದ್ದರೂ **ಸ್ವಾಹಾ** ಎಂದು ಹೇಳಿರಲಿಲ್ಲ. 'ಸ್ವಾಹಾಂತೋ ಹೋಮಕರ್ಮಣಿ' ಎಂದಿರುವದರಿಂದ ಅಷ್ಟನ್ನು ಮಾತ್ರ ಸೇರಿಸಿಕೊಳ್ಳಬೇಕು. ಅಲ್ಲಿ ಹೇಳುವಾಗ 'ಜಪೇ ನ್ಯಾಸೇ ನಮೋಽಂತಸ್ತು' ಎಂದಿರುವದರಿಂದ ನಮೋಽಸ್ತು ತೇ ಎಂದು ಹೇಳಿದ್ದು ಎಂದು ತಿಳಿಯಬೇಕು. ।।೮।।

**ಪ್ರಣಮೇದ್ ದಂಡವದ್ಭೂಮೌ ಭಕ್ತಿಪ್ರಹ್ವೇಣ ಚೇತಸಾ ।**
**ದಶವಾರಂ ಜಪೇನ್ಮಂತ್ರಂ ತತಃ ಸ್ತೋತ್ರಮುದೀರಯೇತ್ ।।೯।।**

**ದಂಡವತ್** ಕಟ್ಟಿಗೆಯಂತೆ ಉದ್ದವಾಗಿ **ಭೂಮೌ** ಭೂಮಿಯಲ್ಲಿ **ಪ್ರಣಮೇತ್** ನಮಸ್ಕರಿಸಬೇಕು. **ಭಕ್ತಿಪ್ರಹ್ವೇಣ** ಭಕ್ತಿಯಿಂದ ನಮ್ರವಾದ **ಚೇತಸಾ** ಮನಸ್ಸಿನಿಂದ **ಮಂತ್ರಂ** ಮಂತ್ರವನ್ನು **ದಶವಾರಂ** ಕನಿಷ್ಠ ಪಕ್ಷ ಹತ್ತು ಸಲವಾದರೂ, ಹೆಚ್ಚು ಎಷ್ಟು ಬೇಕಾದರೂ ಮಾಡಬಹುದು. **ಜಪೇತ್** ಜಪಿಸಬೇಕು. **ತತಃ** ಅನಂತರ **ಸ್ತೋತ್ರಂ ಉದೀರಯೇತ್** ಮುಂದೆ ಹೇಳುವ ಸ್ತೋತ್ರವನ್ನು ಉಚ್ಚರಿಸಬೇಕು. ।।೯।।




**ಯುವಾಂ ತು ವಿಶ್ವಸ್ಯ ವಿಭೂ ಜಗತಃ ಕಾರಣಂ ಪರಮ್ ।**
**ಇಯಂ ಹಿ ಪ್ರಕೃತಿಃ ಸೂಕ್ಷ್ಮಾ ಮಾಯಾಶಕ್ತಿರ್ದುರತ್ಯಯಾ ॥೧೦॥**

**ಯುವಾಂ ತು** ನೀವಿಬ್ಬರಾದರೂ (ಲಕ್ಷ್ಮೀನಾರಾಯಣರು) **ವಿಶ್ವಸ್ಯ** ಸಮಸ್ತ ಜಗತ್ತಿಗೂ **ವಿಭೂ** ಸ್ವಾಮಿಗಳು **ಜಗತಃ** ಜಗತ್ತಿಗೆ **ಪರಂ ಕಾರಣಂ** ಮುಖ್ಯಕಾರಣರು. ಕೆಲವು ಶಾಸ್ತ್ರಗಳಲ್ಲಿ ಪ್ರಕೃತಿ-ಪುರುಷರು ಕಾರಣರೆಂದು ಮತ್ತು ಕೆಲವು ಶಾಸ್ತ್ರಗಳಲ್ಲಿ ಅವ್ಯಕ್ತ ಮೊದಲಾದವು ಕಾರಣವೆಂದೂ ಹೇಳುತ್ತದೆಯಲ್ಲ ಎಂದರೆ ಹೇಳುತ್ತಾರೆ. **ಇಯಂ ಹಿ** ಈ ಲಕ್ಷ್ಮಿಯೇ **ಪ್ರಕೃತಿಃ** ಪ್ರಕೃತಿ ಎಂದು ಕರೆಸಿಕೊಳ್ಳುವಳು (ಜಡ ಪ್ರಕೃತಿಗೆ ಅಭಿಮಾನಿನಿ ಚೇತನ ಪ್ರಕೃತಿ) **ಸೂಕ್ಷ್ಮಾ** ತಿಳಿಯಲಾಗದವಳು. ಇದರಿಂದ ಅವ್ಯಕ್ತಪದವಾಚ್ಯಳೂ ಇವಳೇ ಎಂದು ತಿಳಿಸಿರುವರು **ಮಾಯಾಶಕ್ತಿಃ ಚ** ಅಜ್ಞಾನಾದಿಗಳಿಂದ ಜಗತ್ತನ್ನು ಬದ್ಧವನ್ನಾಗಿ ಮಾಡುವಳಾದ್ದರಿಂದ ಮಾಯಾಶಬ್ದ ವಾಚ್ಯಳು **ಶಕ್ತಿಃ** ಶ್ರೀಹರಿಯ ಸ್ವರೂಪಶಕ್ತಿಗೆ ಶಕ್ಯಳಾದ್ದರಿಂದ ಶಕ್ತಿ ಎನಿಸುವಳು **ದುರತ್ಯಯಾ** ಶ್ರೀಹರಿಯ ಅನುಗ್ರಹವಿಲ್ಲದವರಿಂದ ತಪ್ಪಿಸಿಕೊಳ್ಳಲಾಗದವಳು. ॥೧೦॥

**ತ್ವಮೇವ ಪುರುಷಃ** ನೀನೇ ಪುರುಷ ನಾಮಕನು ಎಂದು ಇಟ್ಟುಕೊಳ್ಳಬೇಕು. ಅದನ್ನೇ ಹೀಗೆ ಹೇಳಿದೆ.

ಕಾಲೋಽಂತಕಃ ಪ್ರಧಾನಂ ಚ ಮೃತ್ಯುರವ್ಯಕ್ತಮಿತ್ಯಪಿ ।
ಉಚ್ಯತೇ ಪ್ರಕೃತಿಃ ಸೂಕ್ಷ್ಮಾ ಶ್ರೀಶ್ಚ ದುರ್ಗೇತಿ ನಾಮಭಿಃ ।

ಶ್ರೀಭೂದುರ್ಗೇತಿ ಯಾ ಭಿನ್ನಾ ಪ್ರಕೃತಿಃ ಶಕ್ತಿರುಚ್ಯತೇ ।
ವಿಷ್ಣುಸ್ವರೂಪಶಕ್ತೇಃ ಸಾ ಶಕ್ಯತ್ವಾಚ್ಛಕ್ತಿರೇವ ತು ॥

ಎಂದು ವಚನವಿದೆ. ಮತ್ತು

'ಮಾಯೇತಿ ಪ್ರಕೃತಿಶ್ಚೈವ ಮಾಯಾ ಜೀವಶ್ಚ ಕಥ್ಯತೇ ।
ಮೂಲಕಾರಣಭೂತಾ ತು ಮಾಯೇತ್ಯಾಹುರ್ಮನೀಷಿಣಃ ॥

ಎಂದೂ ಪ್ರಮಾಣವಿದೆ. ॥೧೦॥

**ತಸ್ಯಾ ಅಧೀಶ್ವರಃ ಸಾಕ್ಷಾತ್ತ್ವಮೇಕಃ ಪುರುಷಃ ಪರಃ ।**
**ತ್ವಂ ಸರ್ವಯಜ್ಞ ಇಜ್ಯೇಯಂ ಕ್ರಿಯೇಯಂ ಫಲಭುಗ್ಭವಾನ್ ॥೧೧॥**

**ತಸ್ಯಾಃ** ಇಂತಹ ಲಕ್ಷ್ಮೀದೇವಿಗೆ **ಏಕಃ** ಮುಖ್ಯನಾದ **ಪರಃ** ಸರ್ವೋತ್ತಮನಾದ **ಪುರುಷಃ** ಪುರುಷನಾಮಕನಾದ **ತ್ವಂ** ನೀನು **ಸಾಕ್ಷಾತ್ ಅಧೀಶ್ವರಃ ಚ** ಅವ್ಯವಹಿತ ನಿಯಾಮಕನು. ಇದರಿಂದ ಶ್ರೀಹರಿಯು ಜಗತ್ತಿಗೆ ಮುಖ್ಯಕಾರಣನೆಂದೂ ಲಕ್ಷ್ಮೀದೇವಿಯು ಅವನ ಅಧೀನವಾಗಿ ಕಾರಣಳೆಂದೂ ತಿಳಿಸಿ ಇಬ್ಬರೂ ಕಾರಣರೆಂಬ ಮಾತಿನಿಂದ ತೋರಿ ಬರುವ ಸಾಮ್ಯವನ್ನು ಪರಿಹರಿಸುವರು. **ತ್ವಂ** ಸರ್ವೋತ್ತಮ ಕಾರಣನಾದ ನೀನು ಅಧೀನಕಾರಣಳಾದ ಲಕ್ಷ್ಮಿಯು **ಇಜ್ಯಾ** ಇಜ್ಯಾಂತರ್ಯಾಮಿಣಿಯು **ಕ್ರಿಯಾ** ಕ್ರಿಯಾಂತರ್ಯಾಮಿಣಿಯು **ಭವಾನ್** ನೀನು **ಫಲಭುಕ್** ಯಜ್ಞಗಳ ಫಲವನ್ನು ಅನುಭವಿಸುವ ಯಜಮಾನರಲ್ಲಿ ಇದ್ದು ಫಲಾನುಭವ ಮಾಡಿಸುವವನು. ।।೧೧।।

'ತ್ವಂ ಸರ್ವಯಜ್ಞ ಇಜ್ಯೇಯಂ...' ಎಂದು ಮುಂದಿನ ಶ್ಲೋಕದಲ್ಲಿಯೂ 'ಗುಣವ್ಯಕ್ತಿರಿಯಂ ದೇವೀ...' ಎಂಬಲ್ಲಿ ಕ್ರಿಯಾ ಎಂಬುದಕ್ಕೆ ಅನ್ವಯ ತಿಳಿಯದಿರುವದರಿಂದ ರಮಾ-ನಾರಾಯಣರಿಗೆ ಯಜ್ಞಾದಿರೂಪತ್ವ ಹೇಳುವಂತೆ ವಿರುದ್ಧ ತೋರುವದರಿಂದ ತಮ್ಮ ಮಾತಿನಿಂದ ಅನ್ವಯ ತೋರಿಸಿ ಆ ವಿಷಯದಲ್ಲಿ ಇತರ ವಿಷಯದಲ್ಲಿ ಶ್ರೀಮದಾಚಾರ್ಯರು ಪ್ರಮಾಣ ಹೇಳುವರು-

ತಾತ್ಪರ್ಯ

ಇಜ್ಯಾ ಕ್ರಿಯಾ ।<br>
ಅಂತರ್ಯಾಮೀ ತು ಯಜ್ಞಾದೇರ್ವಿಷ್ಣುರಿಜ್ಯಾದಿನಾಂ ರಮಾ ।<br>
ತತ್ತಚ್ಛಬ್ದೈಃ ಸ್ವತೋ ವಾಚ್ಯೌ ನ ತು ಸರ್ವಸ್ವರೂಪತಃ ।

ಅಂತರ್ಯಾಮೀ ಶ್ರಿಯಶ್ಚಾಪಿ ವಿಷ್ಣುರೇವ ನ ಸಂಶಯಃ ।<br>
ನಾಂತರ್ಯಾಮೀ ಕಶ್ಚಿದಸ್ತಿ ವಿಷ್ಣೋಃ ಕ್ವಾಪಿ ಕುತಶ್ಚನ ।। ಇತಿ ಬ್ರಹ್ಮತರ್ಕೇ

ಶ್ರೀಹರಿಯು ಯಜ್ಞ ಮೊದಲಾದವುಗಳಿಗೆ ಅಂತರ್ಯಾಮಿಯು ಲಕ್ಷ್ಮೀದೇವಿಯು ಇಜ್ಯಾಕ್ರಿಯಾ ಎಂದರೆ ಅಖಂಡವಾದ ಯಜ್ಞದ ಮಧ್ಯಮಧ್ಯದಲ್ಲಿ ಮಾಡುವ ಖಂಡಗಳಾದ(ಅವಾಂತರ)ಇಜ್ಯಾದಿ ಕ್ರಿಯಾಗಳಿಗೆ(ಪೂಜಾದಿ) ಅಂತರ್ಯಾಮಿಣಿಯು. ಈ ಕಾರಣದಿಂದಲೇ ಇವರಿಬ್ಬರೂ ಸ್ವತಂತ್ರವಾಗಿ ಆಯಾ ಶಬ್ದಗಳಿಂದ ವಾಚ್ಯರು. ಹೊರತು ಸಾಮಾನಾಧಿಕರಣ್ಯದಿಂದ ತೋರುವ ಎಲ್ಲದರ ಸ್ವರೂಪರಾದ್ದರಿಂದ ಅಲ್ಲ. ಲಕ್ಷ್ಮೀದೇವಿಗೂ ಅಂತರ್ಯಾಮಿಯು ಶ್ರೀವಿಷ್ಣುವು ಇದರಲ್ಲಿ ಸಂಶಯವಿಲ್ಲ. ವಿಷ್ಣುವಿಗೆ ಮಾತ್ರ ಯಾವ ದೇಶ-ಕಾಲಗಳಲ್ಲಿಯೂ ಯಾವ ಕಾರಣದಿಂದಲೂ ಯಾವನೂ ಅಂತರ್ಯಾಮಿಯು ಇರುವದಿಲ್ಲವೆಂದು ಬ್ರಹ್ಮತರ್ಕದಲ್ಲಿ ಹೇಳಿದೆ.




**ಗುಣವ್ಯಕ್ತಿರಿಯಂ ದೇವೀ ವ್ಯಂಜಕೋ ಗುಣಭುಗ್ಭವಾನ್ ।**
**ತ್ವಂ ಹಿ ಸರ್ವಶರೀರಾತ್ಮಾ ಶ್ರೀಃ ಶರೀರೇಂದ್ರಿಯಾಶಯಾ ॥೧೨॥**

**ಇಯಂ ದೇವೀ** ಈ ಲಕ್ಷ್ಮೀದೇವಿಯು **ಗುಣವ್ಯಕ್ತಿಃ** ಜಡಪ್ರಕೃತಿಯ ದ್ವಾರಾ ಸತ್ತ್ವ ಮೊದಲಾದ ಗುಣಗಳಿಗೆ ಅಭಿವ್ಯಕ್ತಿ ಕಾರಣಳು. ಹಾಗಾದರೆ ಇವಳಿಗೆ ಗುಣಗಳ ಸಂಗ ಅಂಗೀಕೃತವೇ ಎಂದರೆ ಇಲ್ಲವೆಂದೂ ಹೇಳುವರು. ಗುಣಾನಾಂ ವಿಗತಾ ಅಕ್ತಿಃ ಸಂಬಂಧೋ ಯಸ್ಯಾಃ ಸಾ **ಗುಣವ್ಯಕ್ತಿಃ** ಗುಣಗಳ ಸಂಗವಿಲ್ಲದವಳು ಎಂದೂ ಅರ್ಥ. ಅದರಲ್ಲಿಯೂ ನಿನ್ನ ಪತ್ನಿಯು ಸ್ವತಂತ್ರಳಲ್ಲವೆಂದು ಹೇಳುವರು. (ತತ್ರಾಪಿ ಸ್ವತಂತ್ರಂ ನ ತ್ವತ್ಕಲತ್ರಂ) **ಭವಾನ್** ನೀನು **ವ್ಯಂಜಕಃ ಸನ್** ಫಲ ವ್ಯಕ್ತಿಯನ್ನುಂಟುಮಾಡುವವನಾಗಿ (ಗುಣವ್ಯಕ್ತಿಯನ್ನು) **ಗುಣಭುಕ್** ಪ್ರಾಕೃತ ಗುಣಭೋಕ್ತೃವಾದ ಜೀವನಲ್ಲಿ ಇದ್ದು ಸುಖ-ದುಃಖಾದಿಗಳನ್ನು ಅನುಭವಿಸುವಂತೆ ಮಾಡುವವನು **ತ್ವಂ ಹಿ** ನೀನೇ **ಸರ್ವಶರೀರಾತ್ಮಾ** ಎಲ್ಲ ಜೀವರ ಶರೀರದಲ್ಲಿ ಆದಾನಾದಿ ಕರ್ತೃವು **ಶ್ರೀಃ** ಲಕ್ಷ್ಮೀದೇವಿಯು **ಶರೀರೇಂದ್ರಿಯಾಶಯಾ** ಶರೀರೇಂದ್ರಿಯಗಳ ಅಭಿಮಾನಿ ದೇವತೆಯು, ಶರೀರೇಂದ್ರಿಯಗಳಲ್ಲಿ ಆಶಯ ಅಂತಃಕರಣ ಅಭಿಮಾನಃ ಅನಭಿಮಾನಪ್ರಾಯವಾದ ಅಭಿಮಾನ ಉಳ್ಳವಳು ಅಥವಾ ಅವುಗಳಿಗೆ ನಿಯಾಮಕಳಾಗಿ ಆ ಶಬ್ದವಾಚ್ಯಳಾಗಿ ಅವುಗಳಲ್ಲಿ ಇರುವವಳು ಎಂದರ್ಥ. ಅಥವಾ ಆ ಶೇತೇ ಇತ್ಯಾಶಯಃ ಎಂದಾಗಲೀ ಮಾಡಿಕೊಳ್ಳಬಹುದು. 'ಅಧಿಕರಣೇ ಶೇತೇಃ' ಎಂಬುದರಿಂದ ಅಚ್ ಪ್ರತ್ಯಯವು ಬಂದು ಆಶಯ ಎಂದಾಗಿದೆ. ॥೧೨॥

**ನಾಮರೂಪೇ ಭಗವತೀ ಪ್ರತ್ಯಯಸ್ತ್ವಮಪಾಶ್ರಯಃ ।**
**ಯಥಾ ಯುವಾಂ ತ್ರಿಲೋಕಸ್ಯ ವರದೌ ಪರಮೇಷ್ಠಿನೌ ॥**
**ತಥೇಮಾ ಉತ್ತಮಶ್ಲೋಕ ಸಂತು ಸತ್ಯಾ ಮಹಾಶಿಷಃ ॥೧೩॥**

**ಭಗವತೀ** ಲಕ್ಷ್ಮೀದೇವಿಯು **ನಾಮರೂಪೇ** ಗುಣಕಾರ್ಯಗಳಾದ ಹೆಸರು ಆಕಾರಗಳಿಗೆ ಅಭಿಮಾನಿನಿಯಾದುದರಿಂದ ನಾಮರೂಪವೆಂದು ಕರೆಯಲ್ಪಡುವಳು. **ಅಪಾಶ್ರಯಃ** ಇತರಾಶ್ರಯರಹಿತನಾದ **ಉಪಾಶ್ರಯಃ** ಎಂಬ ಪಾಠದಲ್ಲಿ ಎಲ್ಲರಿಗಿಂತ ಅಧಿಕಳಾದ ಎಂದು ಅರ್ಥ. ಲಕ್ಷ್ಮಿಗೆ ಆಶ್ರಯನಾದ **ತ್ವಂ** ನೀನು **ಪ್ರತ್ಯಯಃ** ನಿನ್ನ ಪ್ರಸಾದಸಾಧನವಾದ ತತ್ತ್ವಜ್ಞಾನಕ್ಕೆ ಸಾಧನನಾದುದರಿಂದ ಪ್ರತ್ಯಯನೆನಿಸುವ **ಹೇ ಉತ್ತಮಶ್ಲೋಕ** ಪವಿತ್ರಕೀರ್ತಿವಂತನಾದ ಶ್ರೀಹರಿಯೇ **ಪರಮೇಷ್ಠಿನಾ** ಅತ್ಯುತ್ತಮಸ್ಥಾನದಲ್ಲಿರುವ **ತ್ರಿಲೋಕಸ್ಯ** (ವಿಶೇಷಣ ಸಮಾಸ) ಮೂರು ಲೋಕಗಳಿಗೆ

**ವರದೌ** ವರಪ್ರದರು ಆದ **ಯುವಾಂ** ನೀವು **ಯಥಾ ಸತ್ಯೌ** ಹೇಗೆ ಸತ್ಯರೋ ಅಥವಾ ನೀವು ವರದರು ಎಂಬುದು ಹೇಗೆ ತತ್ತ್ವವೋ **ತಥಾ** ಹಾಗೆ **ಇಮಾಃ** ನನ್ನ ಮನಸ್ಸಿನಲ್ಲಿರುವ **ಮಮ** ನನ್ನ **ಆಶಿಷಃ** ಅಪೇಕ್ಷೆಗಳು **ಮಹಾಶಿಷಃ ಚ** ಎಂಬ ಪಾಠದಲ್ಲಿ ಇತರದಿಂದ ಪೂರ್ಣ ಮಾಡಲಾಗದ ಅಪೇಕ್ಷೆಗಳು **ಸತ್ಯಾಃ ಸಂತು** ನಿಜವಾಗಲಿ ಸಫಲವಾಗಲಿ. ।।೧೩।।

**ಇತ್ಯಭಿಷ್ಟೂಯ ವರದಂ ಶ್ರೀನಿವಾಸಂ ಶ್ರಿಯಾ ಸಹ ।**
**ತನ್ನಿಸ್ಸಾರ್ಯೋಪಹರಣಂ ದತ್ವಾಚಮನಮರ್ಚಯೇತ್ ।।೧೪।।**

**ವರದಂ** ವರ ಕೊಡುವ **ಶ್ರಿಯಾ ಸಹ** ಲಕ್ಷ್ಮೀದೇವಿಯೊಡನೆ ಇರುವ **ಶ್ರೀನಿವಾಸಂ** ಶ್ರೀಹರಿಯನ್ನು **ಇತಿ** ಮೇಲೆ ಹೇಳಿದಂತೆ **ಅಭಿಷ್ಟೂಯ** ಭಕ್ತಿಯಿಂದ ಸ್ತುತಿಸಿ **ತತ್ ಉಪಹರಣಂ** ಆ ನೈವೇದ್ಯವನ್ನು, ದರ್ಭಾಸ್ತರಣಗಳನ್ನು ಎಂದಾದರೂ ಅರ್ಥ. **ನಿಸ್ಸಾರ್ಯ** ಆ ಸ್ಥಳದಿಂದ ತೆಗೆದು **ಆಚಮನಂ** ಭೋಜನಾನಂತರದ ಆಚಮನವನ್ನು **ದತ್ವಾ** ಕೊಟ್ಟು **ಅರ್ಚಯೇತ್** ಉಪಸಂಹಾರ ಸೇವೆಯನ್ನು ಮಾಡಬೇಕು. ।।೧೪।।

**ತತಃ ಸ್ತುವಾನಾ ಸ್ತೋತ್ರೇಣ ಭಕ್ತಿಪ್ರಹ್ವೇಣ ಚೇತಸಾ ।**
**ಯಜ್ಞೋಚ್ಛಿಷ್ಟಮವಘ್ರಾಯ ಪುನರಭ್ಯರ್ಚಯೇದ್ಧರಿಮ್ ।।**
**ಪತಿಂ ಚ ಪರಯಾ ಭಕ್ತ್ಯಾ ಮಹಾಪುರುಷಚೇತಸಾ ।।೧೫।।**

**ತತಃ** ಅನಂತರ **ಸ್ತೋತ್ರೇಣ** ಅವರವರ ಮಂತ್ರದಿಂದ **ಭಕ್ತಿಪ್ರಹ್ವೇಣ** ಭಕ್ತಿಯಿಂದ ನಮ್ರವಾದ **ಚೇತಸಾ** ಮನಸ್ಸಿನಿಂದ **ಸ್ತುವಾನಾ** ಸ್ತೋತ್ರ ಮಾಡುವವಳಾಗಿ **ಯಜ್ಞೋಚ್ಛಿಷ್ಟಂ** ಪೂಜಾಶೇಷವನ್ನು (ನಿರ್ಮಾಲ್ಯವನ್ನು) **ಅವಘ್ರಾಯ** ಆಘ್ರಾಣ (ವಾಸನೆ ನೋಡಿ) **ಪುನಃ** ಮತ್ತೆ **ಹರಿಂ** ನಾರಾಯಣನನ್ನು **ಅಭ್ಯರ್ಚಯೇತ್** ಪೂಜಿಸಬೇಕು. **ಪರಯಾ ಭಕ್ತ್ಯಾ** ಉಚಿತವಾದ ಅತಿಶಯವಾದ ಭಕ್ತಿಯಿಂದ **ಮಹಾಪುರುಷಚೇತಸಾ** ಸರ್ವೋತ್ತಮನಾದ ಶ್ರೀಹರಿಯು ಪತಿಯಲ್ಲಿ ಸನ್ನಿಹಿತನಾಗಿರುವನೆಂಬ ಮನಸ್ಸಿನಿಂದ ಅನುಸಂಧಾನದಿಂದ **ಪತಿಂ ಚ** ಗಂಡನನ್ನೂ ಪೂಜಿಸಬೇಕು. ।।೧೫।।

ಪತಿಯ ಪೂಜೆಯ ಲಾಲಸೆಯುಳ್ಳ ಸ್ತ್ರೀ ಯಾವ ಸಾಧನೆಗಳಿಂದ ಪೂಜಿಸಬೇಕೆಂದು ಹೇಳುವರು-

**ಪ್ರಿಯೈಸ್ತೈಸ್ತೈರುಪನಮೇತ್ ಪ್ರೇಮಶೀಲಃ ಸ್ವಯಂ ಪತಿಃ ।**
**ಬಿಭೃಯಾತ್ಸರ್ವಕರ್ಮಾಣಿ ಪತ್ನ್ಯಾ ಉಚ್ಚಾವಚಾನಿ ಚ ।**
**ಕೃತಮೇಕತರೇಣಾಽಪಿ ದಂಪತ್ಯೋರುಭಯೋರಪಿ ॥೧೬॥**

**ತೈಃ ತೈಃ** ಆಯಾ **ಪ್ರಿಯೈಃ** ಸಂತೋಷಕರಗಳಾದ ವಿಷಯಗಳಿಂದ **ಉಪನಮೇತ್** ನಮಿಸಬೇಕು **ಉಪಚರೇತ್** ಉಪಚರಿಸಬೇಕು. **ಪ್ರೇಮಶೀಲಃ ಪತಿಃ** ಹೆಂಡತಿಯಲ್ಲಿ ಪ್ರೀತಿಯನ್ನು ಮಾಡುವ ಸ್ವಭಾವದ ಗಂಡನೂ ಸಹ **ಸ್ವಯಂ** ತಾನಾಗಿಯೇ **ತೈಃ ತೈಃ ಪ್ರಿಯೈಃ** ಹೆಂಡತಿಯು ಅಪೇಕ್ಷಿಸಿದ್ದನ್ನು **ಉಪನಮೇತ್** ಉಪಯುಕ್ತವಾದುದನ್ನು ಸ್ವೀಕರಿಸಬೇಕೆಂದು ಹೇಳಬೇಕು. **ಪತ್ನ್ಯೈ** ಹೆಂಡತಿಗಾಗಿ **ಉಚ್ಚಾವಚಾನಿ** ದೊಡ್ಡ ಸಣ್ಣ ಅನೇಕ ರೀತಿಯ **ಸರ್ವಕರ್ಮಾಣಿ** ಎಲ್ಲ ಕೆಲಸಗಳನ್ನು **ಬಿಭೃಯಾತ್** ಮಾಡಬೇಕು. ಈ ಸಂದರ್ಭದಲ್ಲಿ ಪತ್ನಿಗೆ ಸಹಾಯ ಮಾಡಿದರೆ ಪತಿಯ ಸಹಾಯವನ್ನು ಪಡೆದದ್ದಕ್ಕಾಗಿ ಅವಳಿಗೆ ಪಾಪ ಬರುವದಿಲ್ಲ ಎಂದು ಭಾವ.

'ಉಚ್ಚಾವಚಂ ನೈಕಭೇದಂ' ಎಂದು ಅಮರವಿದೆ. **ಪತ್ನ್ಯಾಃ** ಹೆಡಂತಿಯ ಎಂದೂ ಪದಚ್ಛೇದ ಮಾಡಿರುವರು. ಹೆಂಡತಿಗೆ ಅನುಕೂಲನಾಗಿರಬೇಕೆಂದು ತಾತ್ಪರ್ಯ. ಗಂಡನು ಮಾಡಿದಲ್ಲಿ ಹೆಂಡತಿ ಮಾಡಿದಂತಾಗುವದಿಲ್ಲವಲ್ಲ ಎಂದರೆ ಹೇಳುವರು. **ಯತಃ** ಏಕೆಂದರೆ **ದಂಪತ್ಯೋಃ** ಗಂಡ-ಹೆಂಡಂದಿರಲ್ಲಿ **ಏಕತರೇಣ** ಯಾರೊಬ್ಬರಿಂದ **ಕೃತಂ ಅಪಿ** ಮಾಡಲ್ಪಟ್ಟ ಕರ್ಮವು **ಉಭಯೋಃ ಅಪಿ** ಇಬ್ಬರಿಗೂ ಸೇರುವದು. ಅದರಿಂದ ಫಲ ಬರುವದು ಎಂದು ಭಾವ.

ರಜಸ್ವಲೆಯಾಗಿ ಹೆಂಡತಿ ವ್ರತಕ್ಕೆ ಅನರ್ಹಳಾದಾಗ ವ್ರತವನ್ನು ಮಾಡಬಹುದೇ ಎಂದರೆ ಹೇಳುವರು-

**ಪತ್ನ್ಯಾಂ ಕುರ್ಯಾದನರ್ಹಾಯಾಂ ಪತಿರೇವ ಸಮಾಹಿತಃ ।**
**ವಿಷ್ಣೋರ್ವ್ರತಮಿದಂ ಬಿಭ್ರನ್ನ ವಿಹನ್ಯಾತ್ಕಥಂಚನ ॥೧೭॥**

**ಪತ್ನ್ಯಾಂ** ಹೆಂಡತಿಯು **ಅನರ್ಹಾಯಾಂ ಸತ್ಯಾಂ** ವ್ರತ ಹಿಡಿದ ನಂತರ ಮಧ್ಯದಲ್ಲಿ ರಜೋದರ್ಶನಾದಿ ದೋಷಗಳಿಂದ ವ್ರತಾಚರಣೆಗೆ ಯೋಗ್ಯಳಲ್ಲವೆಂದಾದಾಗ **ಪತಿಃ ಏವ** ಗಂಡನೇ **ಸಮಾಹಿತಃ ಸನ್** ಏಕಾಗ್ರಮನಸ್ಕನಾಗಿ **ಬಿಭ್ರನ್** ಅನುಷ್ಠಾನ ಮಾಡುತ್ತ **ಇದಂ ವಿಷ್ಣೋಃ ವ್ರತಂ** ಈ ವಿಷ್ಣುದೇವತಾಕವಾದ ವಿಷ್ಣುಪ್ರೀತಿಕರವಾದ ವ್ರತವನ್ನು **ಕುರ್ಯಾತ್** ಮಾಡಬೇಕು. **ಕಥಂಚನ** ಯಾವ ಕಾರಣಕ್ಕೂ **ನ ವಿಹನ್ಯಾತ್**

ವಿಚ್ಛಿನ್ನಗೊಳಿಸಬಾರದು. ಗಂಡ ಮಾಡಿದರೂ ಹೆಂಡತಿ ಮಾಡಿದಂತೆಯೇ ವ್ರತಹಾನಿ ಆಗುವದಿಲ್ಲ. ||೧೭||

**ವಿಪ್ರಾನ್ ಸ್ತ್ರಿಯೋ ವರವತೀಃ ಸ್ರಗ್ಗಂಧಬಲಿಮಂಡನೈಃ ।**
**ಅರ್ಚೇದಹರಹರ್ಭಕ್ತ್ಯಾ ದೇವಂ ನಿಯಮಮಾಸ್ಥಿತಾ ||೧೮||**

**ನಿಯಮಂ ಆಸ್ಥಿತಾ** ನಿಯಮ ಹೂಡಿದವಳಾಗಿ **ಸ್ರಕ್** ಹಾರ **ಗಂಧ**, **ಬಲಿ** ಪೂಜೆ **ಮಂಡನೈಃ** ಅಲಂಕಾರಗಳಿಂದ **ಅಹರಹಃ** ಪ್ರತಿನಿತ್ಯವೂ **ಭಕ್ತ್ಯಾ** ಭಕ್ತಿಯಿಂದ **ವಿಪ್ರಾನ್** ಬ್ರಾಹ್ಮಣರನ್ನು **ವರವತೀಃ** ಗಂಡನಿರುವ **ಸ್ತ್ರಿಯಃ** ಮುತ್ತೈದೆಯರನ್ನು **ದೇವಂ** ಅಲ್ಲಿರುವ ಶ್ರೀಹರಿಯನ್ನು **ಅರ್ಚಯೇತ್** ಪೂಜಿಸಬೇಕು. ||೧೮||

**ಉದ್ವಾಸ್ಯ ದೇವಂ ಸ್ವೇ ಧಾಮ್ನಿ ತನ್ನಿವೇದಿತಮಗ್ರತಃ ।**
**ಅದ್ಯಾದಾತ್ಮವಿಶುದ್ಧ್ಯರ್ಥಂ ಸರ್ವಕಾಮಾಪ್ತಯೇ ತಥಾ ||೧೯||**

**ದೇವಂ** ಪ್ರತಿಮೆಯಲ್ಲಿ ಆವಾಹನೆ ಮಾಡಿದ ಲಕ್ಷ್ಮೀಸಹಿತ ನಾರಾಯಣನನ್ನು **ಉದ್ವಾಸ್ಯ** ವಿಸರ್ಜನೆ ಮಾಡಿ **ಅಗ್ರತಃ** ಪ್ರತಿಮೆಯ ಮುಂದೆ **ತನ್ನಿವೇದಿತಂ** ಶ್ರೀಹರಿಗೆ ನೈವೇದ್ಯ ಮಾಡಿದ್ದನ್ನು **ಸ್ವೇ ಧಾಮ್ನಿ** ತನ್ನ ಮನೆಯಲ್ಲಿ **ಆತ್ಮವಿಶುದ್ಧ್ಯರ್ಥಂ** ಮನಃಶುದ್ಧಿಗಾಗಿ **ತಥಾ** ಅದೇ ರೀತಿಯಾಗಿ **ಸರ್ವಕಾಮಾಪ್ತಯೇ** ತನ್ನ ಎಲ್ಲ ಅಪೇಕ್ಷೆಗಳ ಸಿದ್ಧಿಗಾಗಿ **ಅದ್ಯಾತ್** ಊಟ ಮಾಡಬೇಕು. **ಸ್ವಧಾಮ್ನಿ** ತನ್ನ ಹೃದಯ ಗುಹೆಯಲ್ಲಿ **ಉದ್ವಾಸ್ಯ** ಸಮಾರೋಪ ಮಾಡಿಕೊಂಡು ಎಂದರ್ಥ. ಮನೆಯಲ್ಲಿ ಒಳಗಿಟ್ಟು ಎಂದಾದರೂ ಅರ್ಥ. ||೧೯||

**ಏತೇನ ಪೂಜಾವಿಧಿನಾ ಮಾಸಾನ್ ದ್ವಾದಶ ಹಾಯನಮ್ ।**
**ನೀತ್ವಾ ಚೋಪರಮೇತ್ಸಾಧ್ವೀ ಕಾರ್ತಿಕೇ ಚರಮೇಽಹನಿ ||೨೦||**

**ಏತೇನ** ಮೇಲೆ ಹೇಳಿದ ಪೂಜಾವಿಧಾನದಿಂದ **ದ್ವಾದಶ ಮಾಸಾನ್ ಹಾಯನಂ** ಹನ್ನೆರಡು ತಿಂಗಳು ಆಗುವ ವರ್ಷವನ್ನು **ನೀತ್ವಾ** ವ್ರತವನ್ನಾಚರಿಸಿ **ಸಾಧ್ವೀ** ಪತಿವ್ರತೆಯಾದ ಆ ಸ್ತ್ರೀ **ಕಾರ್ತಿಕೇ** ಕಾರ್ತೀಕ ಮಾಸದಲ್ಲಿ **ಚರಮೇಽಹನಿ** ಕೊನೆಯ ದಿನ ಅಮಾವಾಸ್ಯಾದಲ್ಲಿ **ಉಪರಮೇತ್** ವ್ರತ-ನಿಯಮಗಳಿಂದ ವಿರಮಿಸಬೇಕು.

ಮಾಸಾನ್ ದ್ವಾದಶ ಎಂದು ಹೇಳಿದಲ್ಲಿ ಒಂದು ವೇಳೆ ಮಧ್ಯದಲ್ಲಿ ಅಧಿಕ ಮಾಸ ಬಂದರೆ ಹದಿಮೂರು ತಿಂಗಳಾದಾಗ ಹನ್ನೆರಡಕ್ಕೆ ನಿಲ್ಲಿಸಿ ಶುದ್ಧವಾದ ಒಂದು ತಿಂಗಳು

ಬಿಡಬೇಕಾದೀತು. ಕ್ಷಯ ಮಾಸಬಂದಾಗ ಹನ್ನೊಂದೇ ತಿಂಗಳಾಗಿ ನ್ಯೂನತೆ ಆಗುವದು ಹಾಯನ ಎಂದಿಷ್ಟೇ ಹೇಳಿದರೆ ಮಲ ಮಾಸ ಸೇರಿ ಹದಿಮೂರು ತಿಂಗಳ ವ್ರತವೆಂದೂ ಆದೀತು ಕಾರಣ ಎರಡೂ ಹೇಳಿರುವರು. ಅಂತೂ ಹದಿಮೂರಾಗಲಿ ಹನ್ನೊಂದೇ ಆಗಲಿ ಅಥವಾ ಕ್ಷಯಾದಿಗಳಿಲ್ಲದೇ ಹನ್ನೆರಡೇ ಆಗಲಿ ಒಂದು ವರ್ಷದ ವ್ರತವಿದು ವರ್ಷ ಹೇಗಿದ್ದರೂ ವ್ರತಪೂರ್ತಿಯಾಗುವದು ಎಂದು ತಿಳಿಸಿರುವರು. ।।೨೦-೨೧।।

**ಶ್ವೋಭೂತೇಽಪ ಉಪಸ್ಪೃಶ್ಯ ಕೃಷ್ಣಮಭ್ಯರ್ಚ್ಯ ಪೂರ್ವವತ್ ।**
**ಪಯಃಶೃತೇನ ಜುಹುಯಾಚ್ಚರುಣಾ ಸಹ ಸರ್ಪಿಷಾ ।।೨೧।।**

**ಪಾಕಯಜ್ಞವಿಧಾನೇನ ದ್ವಾದಶೈವಾಹುತೀಃ ಪತಿಃ ।।೨೨।।**

**ಪತಿಃ** ಗಂಡನು **ಶ್ವೋಭೂತೇ** ಮಾರನೇ ದಿನ **ಅಪ ಉಪಸ್ಪೃಶ್ಯ** ಸ್ನಾನ ಮಾಡಿ **ಪೂರ್ವವತ್** ಹಿಂದಿನಂತೆಯೇ **ಕೃಷ್ಣಂ** ಶ್ರೀಹರಿಯನ್ನು **ಅಭ್ಯರ್ಚ್ಯ** ಪೂಜಿಸಿ **ಪಯಃಶೃತೇನ** ಹಾಲಿನಲ್ಲಿ ಬೇಯಿಸಿದ **ಚರುಣಾ** ಚರುವಿನಿಂದ **ಸರ್ಪಿಷಾ ಸಹ** ತುಪ್ಪದೊಂದಿಗೆ **ಪಾಕಯಜ್ಞವಿಧಾನೇನ** ಗೃಹ್ಯಸೂತ್ರದಲ್ಲಿ ಹೇಳಿದ ಪ್ರಕಾರ ಅಥರ್ವದಲ್ಲಿ ಹೇಳಿದ ಸ್ಥಾಲೀಪಾಕ ವಿಧಾನದಿಂದ ಅಥವಾ ಯಾವ ಕಟ್ಟೆಗೆಯಿಂದ ಯಾವ ಮಂತ್ರದಿಂದ ಯಾವ ಕಾಲದಲ್ಲಿ ಪಾಕ ಮಾಡಬೇಕೆಂದು ಹೇಳಿದೆಯೋ ಆ ಪ್ರಕಾರ **ದ್ವಾದಶೈವ** ಹನ್ನೆರಡೇ **ಆಹುತೀಃ** ಆಹುತಿಗಳನ್ನು **ಜುಹುಯಾತ್** ಅಗ್ನಿಯಲ್ಲಿ ಹೋಮಿಸಬೇಕು. ಮಂತ್ರ ಹಿಂದೆ ಹೇಳಿದೆ. ಹೋಮ ಮಾಡಲು ಸ್ತ್ರೀಯಳಿಗೆ ಅಧಿಕಾರವಿಲ್ಲವೆಂದು ತಿಳಿಸಲು **ಪತಿಃ** ಎಂದು ಹೇಳಿದ್ದಾರೆ. ।।೨೨।।

**ಬ್ರಾಹ್ಮಣಾನ್ ಭೋಜಯೇದ್ಭಕ್ತ್ಯಾ ಸ್ವನ್ನಾದ್ಯೈರ್ದ್ವಾದಶಾತ್ಮವಿತ್ ।**
**ತೇಭ್ಯೋ ದದ್ಯಾತ್ತಿಲಾನ್ ರಾಜನ್ ಸೋದಪಾತ್ರಾನ್ ಗುಡಾನ್ವಿತಾನ್ ।।**

**ರಾಜನ್** ಪರೀಕ್ಷಿತನೇ **ಆತ್ಮವಿತ್** ಪರಮಾತ್ಮನು ಬ್ರಾಹ್ಮಣರಲ್ಲಿ ಸನ್ನಿಹಿತನಾಗಿರು-ವನೆಂದು ತಿಳಿದವನು **ಭಕ್ತ್ಯಾ** ಭಕ್ತಿಯಿಂದ **ದ್ವಾದಶ ಬ್ರಾಹ್ಮಣಾನ್** ಹನ್ನೆರಡು ಜನ ಬ್ರಾಹ್ಮಣರನ್ನು **ಅನ್ನಾದ್ಯೈಃ** ಅನ್ನ-ಭಕ್ಷ್ಯ-ಭೋಜ್ಯಗಳಿಂದ **ಭೋಜಯೇತ್** ಊಟ ಮಾಡಿಸಬೇಕು. **ದ್ವಾದಶಾತ್ಮವಿತ್** ಕೇಶವಾದಿ ದಾಮೋದರಾಂತ ಹನ್ನೆರಡು ಮೂರ್ತಿಗಳ ಲಕ್ಷಣವನ್ನು ಬಲ್ಲವನು ಎಂದು ಅರ್ಥ ಮಾಡಿರುವರು. **ತೇಭ್ಯಃ** ಊಟ ಮಾಡಿದ ಆ ಆಮಂತ್ರಿತ ಬ್ರಾಹ್ಮಣರಿಗೆ **ಗುಡಾನ್ವಿತಾನ್ ತಿಲಾನ್** ಬೆಲ್ಲ ಸಹಿತ ಎಳ್ಳನ್ನು

**ಸೋದಪಾತ್ರಾನ್** ನೀರಿನ ಪಾತ್ರೆಯ ಸಹಿತವಾದುದನ್ನು **ದದ್ಯಾತ್** ಕೊಡಬೇಕು. **ಇಲಾನ್ವಿತಾನ್** ಎಂಬ ಪಾಠದಲ್ಲಿ ಭೂಮಿಸಹಿತವಾದ ಎಂದರ್ಥ 'ಗೌರಿಲಾ ಕುಂಭಿನೀ ಕ್ಷಮಾ' ಎಂದು ಅಭಿಧಾನವಿದೆ. 'ಗುಡಃ ಸ್ಯಾತ್ ಗೋಲಕೇ ಹಸ್ತಿಸನ್ನಾಹೇಕ್ಷುವಿಕಾರಯೋಃ' ಎಂದು ವಿಶ್ವವಿದೆ. ಏಕಹಲಾದೌ ಪೂರಯಿತವ್ಯೇ ಅನ್ಯತರಸ್ಯಾಂ ಎಂದು ಉಪಾದೇಶ । ಸ್ವತಂತ್ರ ಉದಶಬ್ದೋ ವಾ । ಈ ವಿಷಯದಲ್ಲಿ ಹಿಂದೆಯೇ ಅಭಿಧಾನ ಹೇಳಿದೆ. ಆಹುತಿಗಳು ಹನ್ನೆರಡೇ ಹೆಚ್ಚಾಗಬಾರದು ಎಂದು ತಿಳಿಸಲು ಸಾವಧಾರಣವಾಗಿ 'ದ್ವಾದಶೈವ' ಎಂದು ಹೇಳಿದ್ದಾರೆ. ಬ್ರಾಹ್ಮಣರು ಹೆಚ್ಚಾದರೆ ಹೆಚ್ಚು ಪುಣ್ಯವೆಂದು ತಿಳಿಸಲು ನಿರವಧಾರಣವಾಗಿ ದ್ವಾದಶ ಎಂದಿಷ್ಟೇ ಹೇಳಿರುವರು ಎಂದು ತಿಳಿಯಬೇಕು. ।।೨೩।।

**ಆಶಿಷಃ ಶಿರಸಾದಾಯ ದ್ವಿಜೈಃ ಪ್ರೀತೈಃ ಸಮೀರಿತಾಃ ।**
**ಪ್ರಣಮ್ಯ ಶಿರಸಾ ಭಕ್ತ್ಯಾ ಭುಂಜೀತ ತದನುಜ್ಞಯಾ ।।೨೪।।**

**ತಾನ್** ಆ ಬ್ರಾಹ್ಮಣರನ್ನು **ಭಕ್ತ್ಯಾ** ಭಕ್ತಿಯಿಂದ **ಶಿರಸಾ ಪ್ರಣಮ್ಯ** ತಲೆಬಾಗಿ ನಮಸ್ಕರಿಸಿ **ಪ್ರೀತೈಃ** ಭೋಜನ ದಾನಾದಿಗಳಿಂದ ಸಂತುಷ್ಟರಾದ **ದ್ವಿಜೈಃ** ಬ್ರಾಹ್ಮಣರಿಂದ **ಸಮೀರಿತಾಃ** ವೇದಮಂತ್ರ ಪುರಃಸರ ಮಾಡಲ್ಪಟ್ಟ **ಆಶಿಷಃ** ಭಗವಂತನ ಪ್ರೀತಿ ಪಾತ್ರನಾಗು ಎಂಬ ಆಶೀರ್ವಾದಗಳನ್ನು **ಶಿರಸಾ ಆದಾಯ** ತಲೆ ಬಾಗಿ ನಮ್ರತೆಯಿಂದ ಸ್ವೀಕರಿಸಿ **ತದನುಜ್ಞಯಾ** ಬ್ರಾಹ್ಮಣರ ಅಪ್ಪಣೆ ಪಡೆದು **ಭುಂಜೀತ** ಊಟ ಮಾಡಬೇಕು. ಆಕಂಠ ಪೂರ್ತಿ ಉಪಲ ಕಟ್ಟುವಂತೆ ಉಣ್ಣಬಾರದು ಎಂದೂ ಹೇಳುವರು. **ಆ ಭುಂಜೀತ** ಆಙ್ ಈಷದರ್ಥೇ ಸ್ವಲ್ಪ ಉಣ್ಣಬೇಕೆಂದರ್ಥ. ।।೨೪।।

**ಆಚಾರ್ಯಮಗ್ರತಃ ಕೃತ್ವಾ ವಾಗ್ಯತಃ ಸುಸಮಾಹಿತಃ ।**
**ದದ್ಯಾತ್ಪತ್ನ್ಯೈ ಚರೋಃ ಶೇಷಂ ಸುಪ್ರಜಾಸ್ತ್ವಂ ಸುಸೌಭಗಮ್ ।।೨೫।।**

**ಆಚಾರ್ಯಂ** ಪುರೋಹಿತನನ್ನು **ಅಗ್ರತಃ ಕೃತ್ವಾ** ಮುಂದಿಟ್ಟುಕೊಂಡು **ವಾಗ್ಯತಃ** ಮೌನವಾಗಿ **ಸುಸಮಾಹಿತಃ** ಪರಮಾತ್ಮನಲ್ಲಿ ಮನಸಿಟ್ಟು **ಭುಂಜೀತ** ಭೋಜನ ಮಾಡಬೇಕು ಎಂದು ಹಿಂದೆ ಅನ್ವಯ. **ಸುಪ್ರಜಾಸ್ತ್ವಂ** ಒಳ್ಳೆಯ ಮಗನನ್ನು ಹೊಂದಲು ಕಾರಣವಾದ **ಚರೋಃ ಶೇಷಂ** ಹೋಮ ಮಾಡಿ ತಾನುಂಡು ಉಳಿದ ಚರುವನ್ನು **ಪತ್ನ್ಯೈ** ಹೆಂಡತಿಗೆ **ದದ್ಯಾತ್** ಕೊಡಬೇಕು. ।।೨೫।।

**ಏತಚ್ಚರಿತ್ವಾ ವಿಧಿವದ್ವ್ರತಂ ವಿಭೋಃ**
**ಅಭೀಪ್ಸಿತಾರ್ಥಂ ಲಭತೇ ಪುಮಾನಿಹ ।**
**ಸ್ತ್ರೀರ್ವಾ ತದಾಸ್ಥಾಯ ಲಭೇತ ಸೌಭಗಂ**
**ಶ್ರಿಯಂ ಪ್ರಜಾಂ ಜೀವಪತಿಂ ಯಶೋ ಗೃಹಾನ್ ॥೨೬॥**

**ಪುಮಾನ್** ಪುರುಷನು **ವಿಭೋಃ** ಶ್ರೀಹರಿಯ **ಏತತ್ ವ್ರತಂ** ಈ ವ್ರತವನ್ನು **ವಿಧಿವತ್** ವಿಧಿಗನುಸಾರವಾಗಿ **ಚರಿತ್ವಾ** ಆಚರಿಸಿ **ಇಹ** ಈ ಲೋಕದಲ್ಲಿ **ಅಭೀಪ್ಸಿತಾರ್ಥಂ** ಇಷ್ಟಾರ್ಥವನ್ನು **ಲಭತೇ** ಪಡೆಯುವನು. **ಸ್ತ್ರೀಃ ವಾ** ಹೆಂಗಸಾದರೂ **ತತ್** ಈ ವ್ರತವನ್ನು **ಆಸ್ಥಾಯ** ಮಾಡಿ **ಸೌಭಗಂ** ಸೌಂದರ್ಯವನ್ನು ಸೌಭಾಗ್ಯವನ್ನು (ಪತಿಯ ಪ್ರೇಮವನ್ನು) **ಶ್ರಿಯಂ** ಸಂಪತ್ತನ್ನು **ಪ್ರಜಾಂ** ಮಕ್ಕಳನ್ನು **ಜೀವಪತಿಂ** ದೀರ್ಘಾಯುಷಿಯಾದ ಪತಿಯನ್ನು **ಯಶಃ** ಕೀರ್ತಿಯನ್ನು **ಗೃಹಾನ್** ಮನೆಯನ್ನು **ಲಭೇತ** ಹೊಂದುವಳು 'ಗೃಹಾಃ ಪುಂಸಿ ಚ ಭೂಮ್ನ್ಯೇವ' ಎಂದು ಅಮರವಿದೆ.

**ಕನ್ಯಾऽಪಿ ವಿಂದೇತ ಸಮಗ್ರಲಕ್ಷಣಂ**
**ಪತಿಂ ತ್ವವೀರಾಹತಕಿಲ್ಬಿಷಾಗತಿಮ್ ।**
**ಮೃತಪ್ರಜಾ ಜೀವಸುತಾನ್ ಧನೇಶ್ವರೀ**
**ಸುದುರ್ಭಗಾ ಸುಭಗಾ ರೂಪಮಗ್ರ್ಯಮ್ ॥೨೭॥**

**ಕನ್ಯಾ ಅಪಿ** ಕನ್ಯೆಯೂ ಕೂಡ ಈ ವ್ರತವನ್ನಾಚರಿಸಿ **ಸಮಗ್ರಲಕ್ಷಣಂ** ಎಲ್ಲ ಲಕ್ಷಣಗಳುಳ್ಳ **ಪತಿಂ** ಗಂಡನನ್ನು **ವಿಂದೇತ ಚ** ಹೊಂದುವಳು. **ಅವೀರಾ ತು** ವಿಧವೆಯಾದರೂ **ಹತಕಿಲ್ಬಿಷಾ ಸತೀ** ಪಾಪವನ್ನು ಕಳೆದುಕೊಂಡವಳಾಗಿ ಜನ್ಮಾಂತರದಲ್ಲಿ ಸಮಗ್ರಲಕ್ಷಣ ಉಳ್ಳ ಪತಿಯನ್ನು ಪಡೆಯುವಳು ನಂತರ **ಗತಿಂ** ಭಗವಲ್ಲೋಕವನ್ನು ಹೊಂದುವಳು. **ಗತಿಂ** ಸದ್ಗತಿಯನ್ನು **ವಿಂದೇತ** ಹೊಂದುವಳು. **ಮೃತಪ್ರಜಾ** ಮಕ್ಕಳು ಸತ್ತಿರುವವಳು **ಜೀವಸುತಾನ್** ಬದುಕುವ ಮಕ್ಕಳನ್ನು **ವಿಂದೇತ** ಹೊಂದುವಳು. **ಸುದುರ್ಭಗಾ** ದರಿದ್ರಳು **ಧನೇಶ್ವರೀ ಭವತಿ** ಧನಾಢ್ಯಳಾಗುವಳು **ಸುಭಗಾ** ಜ್ಞಾನಾದಿಗಳಿಂದ ಸಂಪನ್ನಳಾಗುವಳು **ವಿರೂಪಾ** ಕುರೂಪಿಯಾದವಳು **ಅಗ್ರ್ಯಂ ರೂಪಂ** ಶ್ರೇಷ್ಠರೂಪವನ್ನು ಹೊಂದುವಳು. ॥೨೭॥

**ವಿಂದೇದ್ವಿರೂಪಾ ವಿರುಜೋ ವಿಮುಚ್ಯತೇ**
**ಯ ಆಮಯಾವೀಂದ್ರಿಯದೇಹಕಲ್ಪಾ ।**

**ಏತತ್ಪಠನ್ನಭ್ಯುದಯೇ ಚ ಕರ್ಮಣ್ಯ-**
**ನಂತತೃಪ್ತಿಂ ಪಿತೃದೇವತಾನಾಮ್ ॥೨೮॥**

**ಯಃ** ಯಾವನು **ಆಮಯಾವೀ** ರೋಗವುಳ್ಳವನೋ **ಸಃ** ಅವನು **ವಿರುಜಃ** ವಿವಿಧರೋಗಗಳಿಂದ **ವಿಮುಚ್ಯತೇ** ಮುಕ್ತನಾಗುವನು. **ಇಂದ್ರಿಯದೇಹಕಲ್ಯಾಃ** ಇಂದ್ರಿಯಗಳಿಂದಲೂ ಒಂದೊಂದು ಅಂಗದಿಂದಲೂ ಸಮರ್ಥನಾಗುವನು. **ಅಭ್ಯುದಯೇ ಕರ್ಮಣಿ** ವಿವಾಹಾದಿ ಶುಭಕರ್ಮಗಳಲ್ಲಿ **ಏತತ್ ಪಠನ್** ಮರುತರ ಜನ್ಮಪ್ರತಿಪಾದಕ ಪದ್ಯಗಳನ್ನು ಪಠಿಸಿ **ಪಿತೃದೇವತಾನಾಂ** ಪಿತೃಗಳ- ದೇವತೆಗಳ **ಅನಂತತೃಪ್ತಿಂ** ಸಂಪೂರ್ಣ ತೃಪ್ತಿಯನ್ನು ಹೊಂದುವನು. ಪಿತೃದೇವತೆಗಳು ತೃಪ್ತರಾಗುವರು ಅನ್ಯತ್ರ ಅಲಂಬುದ್ಧಿಯನ್ನು ಹೊಂದುವನು ಎಂದು ಅರ್ಥ. 'ತೃಪ್ತಿಃ ಅನ್ಯತ್ರ ಅಲಂಬುದ್ಧಿಃ' ಎಂದು ಗೀತಾಭಾಷ್ಯದಲ್ಲಿ ಇದೆ.

**ತುಷ್ಟಾಃ ಪ್ರಯಚ್ಛಂತಿ ಸಮಸ್ತಕಾಮಾನ್**
**ಹೋಮಾವಸಾನೇ ಹುತಭುಕ್ ಶ್ರೀರ್ಹರಿಶ್ಚ ।**
**ರಾಜನ್ ಮಹನ್ಮರುತಾಂ ಜನ್ಮ ಪುಣ್ಯಂ**
**ದಿತೇರ್ವ್ರತಂ ಚಾಽಭಿಹಿತಂ ಮಹತ್ತೇ ॥೨೯॥**

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಅಷ್ಟಾದಶಸಾಹಸ್ರ್ಯಾಂ ಸಂಹಿತಾಯಾಂ ಷಷ್ಠಸ್ಕಂಧೇ ಪುಂಸವನವ್ರತವರ್ಣನಂ ನಾಮ ಏಕೋನವಿಂಶೋಽಧ್ಯಾಯಃ ॥

**॥ ಇತಿ ಷಷ್ಠಸ್ಕಂಧಃ ಸಂಪೂರ್ಣಃ ॥**

**ತುಷ್ಟಾಃ** ಸಂತುಷ್ಟರಾದ **ಹುತಭುಕ್** ಅಗ್ನಿಯೂ **ಶ್ರೀಹರಿಃ** ಲಕ್ಷ್ಮೀಸಹಿತನಾದ ಶ್ರೀಹರಿಯು **ಚ** ದೇವತೆಗಳು **ಹೋಮಾವಸಾನೇ** ಹೋಮದ ಕೊನೆಯಲ್ಲಿ **ಸಮಸ್ತಕಾಮಾನ್** ವ್ರತಮಾಡಿದವರಿಗೆ ಎಲ್ಲ ಅಭೀಷ್ಟಗಳನ್ನು **ಪ್ರಯಚ್ಛಂತಿ** ಅನುಗ್ರಹಿಸುವರು. ರಾಜನ್ ಪರೀಕ್ಷಿತನೇ **ಮಹತ್ ಪುಣ್ಯಂ** ಮಹಾಪುಣ್ಯಕರವಾದ **ಮರುತಾಂ ಜನ್ಮ** ಮರುತ್ತುಗಳ ಜನ್ಮವು **ದಿತೇಃ ಮಹತ್ ವ್ರತಂ** ದಿತಿಯ ಹರಿಪ್ರೀತಿಕರವಾದ ಮಹಾವ್ರತವು **ತೇ** ನಿನಗೆ **ಮಯಾ ಅಭಿಹಿತಂ** ನನ್ನಿಂದ ಹೇಳಲ್ಪಟ್ಟಿತು. ॥೨೯॥

ಇಲ್ಲಿಗೆ ಹತ್ತೊಂಭತ್ತನೇ ಅಧ್ಯಾಯವು ಮುಗಿಯಿತು

★★★ ಶ್ರೀಕೃಷ್ಣಾರ್ಪಣಮಸ್ತು ★★★

# ಶ್ಲೋಕಾರ್ಧಾನುಕ್ರಮಣಿಕಾ

ಐ



ಓ

ಬ

## ಯ

### ಶ

★★★★★



ಜೀವಕೋಟಿಯ ಸೌಭಾಗ್ಯ ಶ್ರೀಮದ್ಭಾಗವತ.
ಶ್ರೀಹರಿಯಲ್ಲಿ ನಿರ್ವ್ಯಾಜವಾದ ಭಕ್ತಿಯನ್ನು ಅಭಿವೃದ್ಧಗೊಳಿಸುವುದು ಶ್ರೀಮದ್ಭಾಗವತ.
ಅವ್ಯಾಹತವಾದ ಐಶ್ವರ್ಯ, ಅಳಿಯಲಾಗದ ಜ್ಞಾನ ತುಂಬಿದ ಗಣಿ ಶ್ರೀಮದ್ಭಾಗವತ.
ಸಂಪದ್ಭರಿತವಾದ ಪದಗಳಿಂದ ಕಂಗೊಳಿಸುವ ಕೋಶಾಗಾರ ಶ್ರೀಮದ್ಭಾಗವತ.
ಭಾಗವತದಲ್ಲಿಯ ವಾಕ್ಯ, ಪದ, ಅಕ್ಷರವೂ ವ್ಯರ್ಥವಲ್ಲ. ಅನೇಕಾರ್ಥಗಳಿಂದ ತುಂಬಿದೆ
ಸಾವಿರಾರು ಜನ ಇದಕ್ಕೆ ವ್ಯಾಖ್ಯಾನ ಮಾಡಿದರೂ ಇದರ ಸವಿ
ಇನ್ನೂ ಮುಗಿಯದಿರುವುದು ಅತ್ಯಾಶ್ಚರ್ಯವೆನಿಸುತ್ತದೆ.